# ಕಲಿಯುಗ ಕಲ್ಪತರು



ರಾಜಾ. ಶ್ರೀ ಗುರುರಾಜಾಚಾರ್ಯ

ಶ್ರೀ ಗುರುರಾಜೋವಿಜಯತೇ


ಶ್ರೀಪರಿಮಳ ಪ್ರಕಾಶನ
ಸಂಖ್ಯೆ : ೯೬

ಶ್ರೀಸುಯಮೀಂದ್ರ ಮಾಲಾ
ಸಂಖ್ಯೆ : ೭೨




# ಕಲಿಯುಗ ಕಲ್ಪತರು

## ಶ್ರೀ ರಾಘವೇಂದ್ರಸ್ವಾಮಿಗಳವರ ಮೂಲ ರೂಪ ಮತ್ತು ಹಿಂದಿನ ಎಲ್ಲ ಅವತಾರಗಳ ಚರಿತಾಮೃತ

## ಭಾಗ–೧


ಬರೆದವರು
ಶ್ರೀ ರಾಘವೇಂದ್ರ ಗುರುವಂಶಭೂಷಣ, ವಿದ್ಯಾಧಿರಾಜ
ಸರಸ್ವತೀಕಂಠಾಭರಣ, ವಿದ್ಯಾರತ್ನಂ
**ರಾಜಾ. ಶ್ರೀ ಗುರುರಾಜಾಚಾರ್ಯರು**
ನಂಜನಗೂಡು



ಪ್ರಕಾಶಕರು
ಶ್ರೀ ಪರಿಮಳ ಸಂಶೋಧನ ಮತ್ತು ಪ್ರಕಾಶನ ಮಂದಿರ
ನಂಜನಗೂಡು
ಶಾಖೆ : ಬೆಂಗಳೂರು

ಶ್ರೀ ಗುರುರಾಜೋವಿಜಯತೇ

# ಕಲಿಯುಗ ಕಲ್ಪತರು

## ವಿಷಯಾನುಕ್ರಮಣಿಕೆ

**ಐದನೆಯ ಉಲ್ಲಾಸ :**

***೧೩. ಶ್ರೀರಾಘವೇಂದ್ರ ಗುರುಸಾರ್ವಭೌಮರು : (೫೭೧–೧೧೮೧)***

ಶುಭಂ ಭೂಯಾತ್

ಶ್ರೀ

# ಗ್ರಂಥ ಸಮರ್ಪಣೆ

ಶ್ರೀ ಹಂಸನಾಮಕ ಪರಮಾತ್ಮ ಪ್ರವರ್ತಿತ ಜ್ಞಾನಪೀಠವಲ್ಲಿ ವಿರಾಜಿಸಿದ ಜಗದ್ಗುರು ಶ್ರೀಮನ್ಮಧ್ವಾಚಾರ್ಯರವರ ವೇದಾಂತ ಸಾಮ್ರಾಜ್ಯ ದಿಗ್ವಿಜಯ ವಿದ್ಯಾಸಿಂಹಾಸನಾಧೀಶ್ವರರಾದ ಶ್ರೀಪ್ರಹ್ಲಾದ-ವ್ಯಾಸರಾಜಾವತಾರಿಗಳೂ, ಕಲಿಯುಗ ಕಲ್ಪತರುಗಳೂ ಆದ ಶ್ರೀಮದ್ರಾಘವೇಂದ್ರತೀರ್ಥ ಗುರುಸಾರ್ವಭೌಮರವರ ಮಠಾಧೀಶ್ವರರಾದ ಶ್ರೀ ಪರಿಮಳ ವಿದ್ಯಾ ಮಂದಿರದ ಸ್ಥಾಪಕರೂ ಸಾಮ್ರಾಟ್ ಪೋಷಕರೂ ಆದ ೧೦೦೮ ಪರಮಪೂಜ್ಯ ಕೀರ್ತಿಶೇಷರಾದ ಶ್ರೀಮತ್ಸುಯಮೀಂದ್ರತೀರ್ಥ ಶ್ರೀಪಾದಂಗಳವರ ೭೦ನೆಯ ವೇದಾಂತ ಸಾಮ್ರಾಜ್ಯಾಭಿಷೇಕದ ಸ್ಮರಣೆಗಾಗಿ ಮತ್ತು ಶ್ರೀಪಾದರವರ ಕುಮಾರರಾದ ಪರಮಪೂಜ್ಯ ಕೀರ್ತಿಶೇಷ ೧೦೦೮ ಶ್ರೀ ಮತ್ಸುಜಯೀಂದ್ರತೀರ್ಥ ಶ್ರೀಪಾದಂಗಳವರ ಒಂಭತ್ತನೆಯ ಮಹಾಸಮಾರಾಧನೆಯ ಸ್ಮರಣೆಗಾಗಿ ಈ ಕಲಿಯುಗ ಕಲ್ಪತರು ಗ್ರಂಥವನ್ನು ಉಭಯ ಶ್ರೀಪಾದಂಗಳವರ ಚರಣಕಮಲಗಳಿಗೆ ಭಕ್ತಿಶ್ರದ್ಧಾದರ ಪೂರ್ವಕವಾಗಿ ಸಮರ್ಪಿಸಲಾಗಿದೆ.

ಭಾವಸಂ। ಚೈತ್ರ। ಶುದ್ಧ
ಶ್ರೀರಾಮನವಮೀ
ತಾ. ೨೦-೪-೧೯೯೪

ಶ್ರೀ ಗುರುರಾಜರ ಚರಣಕಿಂಕರರು,
ರಾಜಾ. ಶ್ರೀ ಗುರುರಾಜಾಚಾರ್ಯ
ಮತ್ತು
ರಾಜಾ. ಶ್ರೀ ಲಕ್ಷ್ಮೀನಾರಾಯಣಾಚಾರ್ಯರು

# ನೆನಹು

ಸದಾಚಾರ, ಶೀಲ, ಸಚ್ಚಾರಿತ್ರ್ಯ, ಹರಿಗುರುಭಕ್ತಿ, ವಾತ್ಸಲ್ಯ, ಸಾತ್ತ್ವಿಕ ಸ್ವಭಾವ, ಪರೋಪಕಾರಗಳಿಂದ ಸರ್ವಜನರ ಗೌರವಾದರಗಳಿಗೆ ಪಾತ್ರರಾದ, ನನ್ನನ್ನು ಹೆತ್ತು, ಸಾಕಿ, ಸಲಹಿ, ವಾತ್ಸಲ್ಯದಿಂದ ದೊಡ್ಡವನನ್ನಾಗಿ ಮಾಡಿ, ವಿದ್ಯಾವಂತನಾಗಿ ಸನ್ಮಾರ್ಗದಲ್ಲಿ ನಡೆಯುವಂತೆ ಮಾಡಿ, ಸತ್ಕಾರ್ಯಗಳಿಗೆ ಪ್ರೋತ್ಸಾಹವಿತ್ತು ಆಶೀರ್ವದಿಸುತ್ತಿದ್ದವರು ನನ್ನ ಮಾತೃಶ್ರೀಯವರಾದ ಧರ್ಮಶ್ರೀ ಬೃಂದಾವನಮ್ಮನವರು. ಇದರಂತೆ ನಾನು ಕೈಕೊಂಡ ತತ್ತ್ವ-ಧರ್ಮ-ಸಂಸ್ಕೃತಿ-ಶ್ರೀಗುರುರಾಜರ ಮಹಿಮಾ ಪ್ರಸಾರಾದಿ ಕಾರ್ಯಗಳಿಗೆ- ಗ್ರಂಥರಚನೆ-ಪ್ರಕಾಶನಗಳಿಗೆ ಪ್ರೋತ್ಸಾಹವಿತ್ತು. ಮನೆತನದ ಆಡಳಿತ ಜವಾಬ್ದಾರಿಯನ್ನು ತಾವೇ ಹೊತ್ತು, ಸರ್ವವಿಧದಿಂದ ನನಗೆ ಸಹಾಯಕರಾಗಿದ್ದವರು ನನ್ನ ಪೂಜ್ಯ ಅಣ್ಣಂದಿರಾದ ರಾಜಾ. ಶ್ರೀ. ವೇಣುಗೋಪಾಲಾಚಾರ್ಯರು. ಇನ್ನು ತನ್ನ ಸಾತ್ತ್ವಿಕ ನಡೆ, ನುಡಿ ಆಚಾರ, ಪತಿಭಕ್ತಿಗಳಿಂದ ಸಕಲರ ಪ್ರೀತಿ-ವಿಶ್ವಾಸ ಆದರಗಳಿಗೆ ಪಾತ್ರಳಾಗಿ ನನ್ನ ಸಾಧನಮಾರ್ಗದ ಸಹಚಾರಿಣಿಯಾಗಿ ನನ್ನ ಸತ್ಕಾರ್ಯಗಳನ್ನು ಕಂಡು ಆನಂದಿಸುತ್ತಿದ್ದವಳು ನನ್ನ ಧರ್ಮಪತ್ನಿ ಶ್ರೀಮತಿ ಸೌ|| ಕಮಲಾಬಾಯಿ.

ನನ್ನ ಜೀವನದಲ್ಲಿ ಪ್ರಮುಖ ಪಾತ್ರವಹಿಸುತ್ತಿದ್ದ ಈ ಮೂವರನ್ನು ನಾನು ಎಂದಿಗೂ ಮರೆಯುವಂತಿಲ್ಲ. ಹೀಗೆ ನನ್ನ ಅಭ್ಯುದಯಕ್ಕೆ ಕಾರಣರಾದ ದಿವಂಗತ ಬೃಂದಾವನಮ್ಮ, ರಾಜಾ ವೇಣುಗೋಪಾಲಾಚಾರ್ಯ, ಸೌ|| ಕಮಲಾಬಾಯಿ- ಇವರನ್ನು ನೆನೆಯುವುದು ನನ್ನ ಕರ್ತವ್ಯವೆಂದು ಭಾವಿಸುತ್ತೇನೆ.

ರಾಜಾ. ಶ್ರೀ. ಗುರುರಾಜಾಚಾರ್ಯ.

# ಪ್ರಕಾಶಕರ ನುಡಿ

ಪರಮ ಪೂಜ್ಯ ಶ್ರೀಮತ್ಸುಯಮೀಂದ್ರ ತೀರ್ಥ ಶ್ರೀಪಾದಂಗಳವರ ಅಪ್ಪಣೆ, ಆಶೀರ್ವಾದ ಮತ್ತು ಸಾಮ್ರಾಟ್ ಪೋಷಕತ್ವದಲ್ಲಿ ಸ್ಥಾಪಿತವಾದ ಶ್ರೀಪರಿಮಳ ಸಂಶೋಧನ ಮತ್ತು ಪ್ರಕಾಶನ ಮಂದಿರವು ಪ್ರಾಚೀನ ಗ್ರಂಥ ಸಂಶೋಧನ ಮತ್ತು ಪ್ರಕಾಶನ ಕಾರ್ಯಾಸಕ್ತವಾಗಿ ಕಳೆದ ನಲವತ್ತೊಂಭತ್ತು ವರ್ಷಗಳಿಂದ ಸೇವೆ ಸಲ್ಲಿಸುತ್ತಿರುವುದೂ, ಈವರೆಗೆ ಸುಮಾರು ೯೫ ಗ್ರಂಥಗಳನ್ನು ಪ್ರಕಟಿಸಿ ಶ್ರೀಗುರುಭಕ್ತರಿಗೆ ನೀಡುತ್ತಾ ಬಂದಿರುವುದೂ ಸಜ್ಜನರಿಗೆ ತಿಳಿದ ವಿಷಯವೇ ಆಗಿರುತ್ತದೆ.

ಪ್ರಕೃತ "ಶ್ರೀ ರಾಘವೇಂದ್ರ ಗುರುವಂಶಭೂಷಣ, ವಿದ್ಯಾಧಿರಾಜ" ಇತ್ಯಾದಿ ಬಿರುದಾಂಕಿತರಾದ ನಮ್ಮ ಪೂಜ್ಯ ಅಣ್ಣಂದಿರಾದ ಶ್ರೀ ರಾಜಾ ಎಸ್. ಗುರುರಾಜಾಚಾರ್ಯರು ರಚಿಸಿರುವ "ಕಲಿಯುಗ ಕಲ್ಪತರು" ಎಂಬ ಮಹಾಗ್ರಂಥದ ಈ ಮೂರನೆಯ ಆವೃತ್ತಿಯುನ್ನು ಬೆಂಗಳೂರಿನ ಶ್ರೀಗುರುರಾಜರ ಭಕ್ತರಾದ ದಿ।। ಶ್ರೀ ಎಚ್.ರಾಜ್ಯೆಂಗಾರ್‌ರವರ ಸತ್ಪುತ್ರರಾದ ಡಾ।। ಎಚ್.ಆರ್. ಶ್ರೀನಿವಾಸ ರಾಘವನ್, ಡಾ।। ಎಚ್.ಆರ್. ಕೇಶವನ್‌ರವರ ಧನಸಹಾಯದಿಂದ ಪ್ರಕಟಿಸಿ ಶ್ರೀಗುರುರಾಜರ ಭಕ್ತರಿಗೆ ನೀಡಲು ಹರ್ಷಿಸುತ್ತೇವೆ.

ಈ ಗ್ರಂಥ ಪ್ರಕಾಶನಕ್ಕೆ ಉದಾರವಾಗಿ ಧನಸಹಾಯ ಮಾಡಿದ ಡಾ।। ಶ್ರೀನಿವಾಸ್ ರಾಘವನ್, ಡಾ।।ಕೇಶವನ್ ಶ್ರೀರಂಗನಾಥ್ ಮತ್ತು ಶ್ರೀಮಂಜುನಾಥ್ ಸಹೋದರರಿಗೆ ನಾವು ಆಭಾರಿಗಳಾಗಿದ್ದೇವೆ. ಶ್ರೀವೆಂಕಟೇಶ್ವರ, ಶ್ರೀವಾಯುದೇವರು ಮತ್ತು ಶ್ರೀಗುರುಸಾರ್ವಭೌಮರು ಈ ಸಹೋದರರು, ಅವರ ಮಾತೃಶ್ರೀಯವರು, ತಂಗಿಯರು ಮತ್ತು ಬಂಧು ಬಾಂಧವರಿಗೂ ಸಕಲಸನ್ಮಂಗಳಗಳನ್ನು ಕರುಣಿಸಲೆಂದು ಪ್ರಾರ್ಥಿಸುತ್ತೇವೆ.

ಇತಿ ಸಜ್ಜನವಿಧೇಯರು,
ರಾಜಾ ಶ್ರೀಲಕ್ಷ್ಮೀನಾರಾಯಣಾಚಾರ್ಯರು
ಉಪಸಂಚಾಲಕರು
ಶ್ರೀಪರಿಮಳ ವಿದ್ಯಾಮಂದಿರ
ನಂಜನಗೂಡು

(ಭಾವ।ಸಂ।ಚೈತ್ರ।ಶು।)
ಶ್ರೀರಾಮನವಮೀ
ತಾ. ೨೦—೪—೯೪
ಬೆಂಗಳೂರು

# ಸ್ಮರಣೆ ಮತ್ತು ಕೃತಜ್ಞತಾರ್ಪಣೆ

ಕಲಿಯುಗ ಕಲ್ಪತರು ಗ್ರಂಥದ ಮೂರನೆಯ ಆವೃತ್ತಿಯ ಪ್ರಕಾಶನದ ಈ ಶುಭಸಂದರ್ಭದಲ್ಲಿ ಈ ಗ್ರಂಥ ಪ್ರಕಾಶನಕ್ಕೆ ಮುಖ್ಯ ಕಾರಣರಾಗಿ ಉದಾರವಾಗಿ ಧನ ಸಹಾಯ ಮಾಡಿ ಉಪಕರಿಸಿರುವ ಶ್ರೀ ಗುರುರಾಜರ ಪರಮ ಭಕ್ತರಾದ ಡಾ|| ಹೆಚ್.ಆರ್. ಕೇಶವನ್ ಮತ್ತು ಅವರ ಸಹೋದರರಾದ ಸರ್ವಶ್ರೀ ಹೆಚ್.ಆರ್. ರಂಗನಾಥ್, ಡಾ|| ಹೆಚ್.ಆರ್. ಶ್ರೀನಿವಾಸ ರಾಘವನ್, ಶ್ರೀ ಹೆಚ್.ಆರ್. ಮಂಜುನಾಥ ಸಹೋದರರವರ ತಂದೆಗಳಾದ ಶ್ರೀ ರಾಘವೇಂದ್ರಗುರುಗಳ ಏಕಾಂತಭಕ್ತರೂ, ಧರ್ಮಕಾರ್ಯ ಪ್ರವರ್ತಕರೂ, ಜ್ಞಾನಪ್ರಕಾಶ-ಪ್ರಸರಣಕೋವಿದರೂ, ಸಜ್ಜನೋಪಕಾರಿಗಳೂ ಆದ ದಿ|| ಶ್ರೀ ಹೆಚ್. ರಾಜೈಂಗಾರ್‌ರವರ ವಿಚಾರವಾಗಿ ನಾಲ್ಕು ಮಾತುಗಳನ್ನು ಬರೆಯುವುದು ಕರ್ತವ್ಯವೆಂದು ಭಾವಿಸುತ್ತೇವೆ.

ದಿ|| ಶ್ರೀ ರಾಜೈಂಗಾರ್‌ರವರು ತಿರುಪತಿಯ ಶ್ರೀನಿವಾಸ ಮತ್ತು ಶ್ರೀ ರಾಘವೇಂದ್ರಸ್ವಾಮಿಗಳವರ ಪರಮಭಕ್ತರು ಅವರ ಭಕ್ತಿ ಎಂತಹದೆಂದರೆ ಶ್ರೀ ಹರಿ-ಗುರುರಾಜರು ಅವರ ಮನೆಯಲ್ಲಿ ಮನದಲ್ಲಿ ನೆಲೆನಿಂತು ಅಪಾರ ಮಹಿಮೆಯನ್ನು ಪ್ರಕಟಿಸಿ ಶ್ರೀ ರಾಜೈಂಗಾರ್‌ರವರಿಗೆ ಕೀರ್ತಿಗೌರವಗಳನ್ನು ಕರುಣಿಸಿ ಸುಜನರ ಮನೋಭೀಷ್ಟವನ್ನು ಪೂರೈಸುತ್ತಿದ್ದರೆಂದಮೇಲೆ ಶ್ರೀ ರಾಜೈಂಗಾರ್‌ರವರಲ್ಲಿ ಶ್ರೀ ಹರಿ-ಗುರುರಾಜರ ಅನುಗ್ರಹವೆಂತಹುದೆಂಬುದು ಸ್ಪಷ್ಟವಾಗುವುದು.

ಶ್ರೀ ರಾಜನ್‌ರವರ ಮನೆಯಲ್ಲಿ ಶ್ರೀ ರಾಯರ ಒಂದು ಭವ್ಯ ಭಾವಚಿತ್ರವಿತ್ತು. ಶ್ರೀರಾಯರು ಇವರಲ್ಲಿ ಸುಪ್ರಸನ್ನರಾಗಿ ಆ ಚಿತ್ರದಿಂದ ನೀರು ಹರಿಯಲಾರಂಭಿಸಿತು! ಕುಂಕುಮ ಉದುರಲಾರಂಭವಾಯಿತು. ಅನೇಕ ಜನರಿಗೆ ಸೂಚನೆಯಾಗಿ ಬಹುಜನ ಶ್ರೀರಾಜನ್‌ರವರ (ಮಲ್ಲೇಶ್ವರ) ಮನೆಗೆ ಬಂದು ಶ್ರೀರಾಯರನ್ನು ಸೇವಿಸಿ ಚಿತ್ರದಿಂದ ಹರಿಯುವ ಜಲವನ್ನು ಪಾದೋದಕವೆಂದೂ, ಕುಂಕುಮವನ್ನು ಪ್ರಸಾದವೆಂದೂ ಸ್ವೀಕರಿಸಿ ಶ್ರೀರಾಯರನ್ನು ಸೇವಿಸಿ ತಮ್ಮ ತಮ್ಮ ಇಷ್ಟಾರ್ಥಗಳನ್ನು ಪಡೆದು ಉದ್ಧೃತರಾಗಲಾರಂಭಿಸಿದರು. ನೂರಾರು ಜನಕ್ಕೆ ಸೂಚನೆಯಾಗಿ ಶ್ರೀರಾಜನ್‌ರವರ ಮನೆಗೆ ಬಂದು ಶ್ರೀರಾಯರ ಚಿತ್ರವನ್ನು ಸೇವಿಸಿ ಮನೋಭಿಷ್ಟಗಳನ್ನು ಪಡೆದು ಕೃತಕೃತ್ಯರಾದ ದೃಷ್ಟಾಂತ ಹೇರಳವಾಗಿವೆ. ಅನೇಕರ ರೋಗಪರಿಹಾರವೂ ಆಗಿವೆ. ಮುಖ್ಯವಾಗಿ ಶ್ರೀರಾಜನ್‌ರವರಿಗೆ ಶ್ರೀರಾಯರು ಮಾಡಿದ ಅನುಗ್ರಹ ಅತ್ಯಪೂರ್ವವಾಗಿದೆ

ಶ್ರೀರಾಜನ್‌ರವರು ಬೆಂಗಳೂರಲ್ಲಿ ಮಂಡಿ ರಾಜಣ್ಣ ಎಂದು ವಿಖ್ಯಾತರಾಗಿ ದೊಡ್ಡ ಶ್ರೀಮಂತರಾಗಿದ್ದರು. ಶ್ರೀಯುತರು ಸೀತಾಪತಿ ಅಗ್ರಹಾರದ ಶ್ರೀರಾಯರ

ಮಠದಲ್ಲಿ ಶ್ರೀಗುರುರಾಜರನ್ನು ವಿವಿಧ ಸೇವೆಗಳಿಂದ ಆರಾಧಿಸುತ್ತಿದ್ದುದಲ್ಲದೆ ಮನೆಯಲ್ಲಿಯೂ ಪ್ರತಿನಿತ್ಯ ಶ್ರೀರಾಯರ ಚಿತ್ರವನ್ನಿಟ್ಟುಕೊಂಡು ಬಹುಶ್ರದ್ಧೆಗಳಿಂದ ಸೇವಿಸುತ್ತಿದ್ದರು. ಶ್ರೀರಾಯರ ದಯದಿಂದ ಬಹುಕೀರ್ತಿ ಪ್ರತಿಷ್ಠೆಗಳಿಗೆ ಭಾಗಿಗಳಾದರು, ಆದರೆ ಇಂಥ ಶ್ರೀಮಂತ ಗುರುಭಕ್ತರಿಗೆ ಪೂರ್ವಾರ್ಜಿತ ದುಷ್ಕರ್ಮದ ಫಲವಾಗಿ ಕಷ್ಟಗಳು ಪ್ರಾರಂಭವಾದವು. ಸಾಲಭಾರಗಳಾಗಿ ಬಹುಬಡತನಕ್ಕೆ ಸಿಲುಕಿದರು. ಆದರೂ ಶ್ರೀರಾಯರನ್ನು ಬಿಡದೇ ಸೇವಿಸುತ್ತಿದ್ದರು. ಶ್ರೀರಾಯರಿಗೆ ತಮ್ಮ ಪ್ರಿಯ ಭಕ್ತರಾದ ಶ್ರೀರಾಜನ್‌ರವರ ಮೇಲೆ ಕಾರುಣ್ಯ ಉಕ್ಕೇರಿತು. ಸರಿ, ಗುರುಕೃಪೆಯಾದ ಮೇಲೆ ಕೇಳುವುದೇನು? ಶ್ರೀಗುರುರಾಜರು ಇವರ ಕೈಹಿಡಿದು ಸಮಸ್ತ ಕಷ್ಟನಷ್ಟಗಳನ್ನೂ ಪರಿಹರಿಸಿ ರಾಜನ್‌ರನ್ನು ಮುಂದಕ್ಕೆ ತಂದರು.

ಇದಾದ ಮೇಲೆ ಶ್ರೀರಾಯರು ಇನ್ನೊಂದು ಪವಾಡತೋರಿದರು. ಶ್ರೀರಾಜನ್‌ರವರ ಎರಡು ಕೈಗಳಲ್ಲೂ ವಿಚಿತ್ರ ಹುಣ್ಣುಗಳಾಗಿ ಅಂಗೈ ತೂತಾಗಿ ರಾಜನ್‌ರವರು ಬಹಳ ಯಾತನೆ ಕಷ್ಟಗಳಿಗೆ ಗುರಿಯಾದರು. ಆದರೂ ಶ್ರೀರಾಯರ ಸೇವೆಯನ್ನು ಕೈಬಿಡದೆ ಹೆಚ್ಚು ಹೆಚ್ಚಾಗಿ ಸೇವಿಸಿ ತಮ್ಮೆಲ್ಲ ಭಾರವನ್ನೂ ಶ್ರೀರಾಯರ ಮೇಲೆ ಹಾಕಿ ನಿಶ್ಚಿಂತರಾಗಿರಲಾರಂಭಿಸಿದರು. ಒಂದು ದಿನ ರಾತ್ರಿ ಅವರಿಗೊಂದು ಸ್ವಪ್ನವಾಯಿತು. ಸ್ವಪ್ನದಲ್ಲಿ ಶ್ರೀಗುರುರಾಜರು ಮೈದೋರಿ ಮಂದಹಾಸ ಬೀರುತ್ತಾ "ಮಗು, ರಾಜ! ಚಿಂತಿಸಬೇಡ. ನನ್ನನ್ನು ಸ್ಮರಿಸಿ ಕೈವರೆಸಿಕೋ! ಶುಭವಾಗುವುದು" ಎಂದು ಹೇಳಿ ಅಭಯಹಸ್ತವನ್ನು ಪ್ರದರ್ಶಿಸಿ ಅದೃಶ್ಯರಾದರು! ಶ್ರೀರಾಜನ್‌ರಿಗೆ ಶ್ರೀಗುರುರಾಜರು ಹೇಳಿದ ಮಾತು ಕೇಳಿಸಿತು. ಆಶ್ಚರ್ಯ ಆನಂದಗಳಿಂದ ರೋಮಾಂಚಿತರಾಗಿ ಶ್ರೀರಾಯರ ಅಪ್ಪಣೆಯಂತೆ ಕೈವರೆಸಿಕೊಂಡರು. ಅದೇನಾಶ್ಚರ್ಯ! ಎರಡು ಅಂಗೈಗಳಲ್ಲಿದ್ದ ತೂತುಗಳು, ಹುಣ್ಣುಗಳೆಲ್ಲ ಮಾಯವಾಗಿ ಕೈಗಳು ಮೊದಲಿನಂತೆ ಸ್ವಚ್ಛವಾಗಿವೆ! ರಾಜನ್‌ರವರು ಆ ಗುರುಮಹಿಮೆಯನ್ನು ಕಂಡು ಮೂಕವಿಸ್ಮಿತರಾದರು. ತಮ್ಮ ಕಣ್ಣುಗಳನ್ನೇ ನಂಬದಾದರು. ಇದೇನು ಭ್ರಾಂತಿಯೇ? ಸ್ವಪ್ನವೇ ಎಂದು ಮೈ ಚಿವುಟಿಕೊಂಡರು. ಇಲ್ಲ ಎಲ್ಲವು ಸತ್ಯ! ಗುರುಗಳು ತಮ್ಮ ರೋಗವನ್ನು ಪರಿಹರಿಸಿದ್ದಾರೆ ಎಂಬ ಅನುಭವ ಸ್ಪಷ್ಟವಾಯಿತು. ಗುರುರಾಜರಲ್ಲಿ ಭಕ್ತಿ ಉಕ್ಕಿಹರಿಯಿತು. "ಗುರುರಾಜ! ಸ್ವಾಮಿ ನೀವೇ ಈ ಕಲಿಕಲ್ಮಶ ಕಲುಷಿತ ಜಗತ್ತಿನ ಉದ್ಧಾರಕ ಗುರುಗಳು. ನಿಮ್ಮ ಭಕ್ತವಾತ್ಸಲ್ಯ ಅನುಪಮ" ಎಂದು ಉದ್ಗರಿಸಿದರು. ಕಣ್ಣಿಂದ ಆನಂದಬಾಷ್ಪ ಉದುರಿದವು. ಮೈರೋಮಾಂಚನಗೊಂಡಿತು. ಭಕ್ತಿಪರವಶರಾಗಿ ರಾಜನ್‌ರವರು ಗುರುಗಳ ಚಿತ್ರಕ್ಕೆ ಸಾಷ್ಟಾಂಗವೆರಗಿ ನಮಸ್ಕರಿಸಿದರು. ಮರುದಿನ ಬೆಳಗ್ಗೆ ಪತ್ನಿ ಪುತ್ರರಿಗೆ ಶ್ರೀರಾಯರು ತೋರಿದ ಪವಾಡವನ್ನು ವಿವರಿಸಿ ಎರಡೂ ಕೈಗಳನ್ನು ತೋರಿಸಿದರು. ಪತ್ನೀ ಪುತ್ರರಿಗಾದ ಆನಂದ ವರ್ಣಿಸಲಸದಳ. ಶ್ರೀರಾಜನ್‌ರ ಮನೆಗೆ ಬಂದು ಶ್ರೀರಾಯರ ಚಿತ್ರಕ್ಕೆ ನಮಿಸಿ ಸೇವೆಸಲ್ಲಿಸಿ ಶ್ರೀರಾಯರ ಕಾರುಣ್ಯಕ್ಕೆ ಪಾತ್ರರಾಗಿ ರೋಗಪರಿಹಾರ, ಇಷ್ಟಾರ್ಥ

ಸಿದ್ಧಿಗಳನ್ನು ಪಡೆದವರು ನೂರಾರು ಜನರು. ಇಂದಿಗೂ ಜನರು ಅದನ್ನು ನೆನೆಸುತ್ತಾರೆ. ಇದರಿಂದಾಗಿ ರಾಜನ್ ಅವರು ಶ್ರೀರಾಯರ ಪರಮಭಕ್ತರೆಂದು ಹೆಸರು ಪಡೆದು ಸರ್ವರ ಗೌರವಕ್ಕೆ ಕೀರ್ತಿಗೆ ಪಾತ್ರರಾದರು.

ಶ್ರೀರಾಯರ ಅಪ್ಪಣೆಯಂತೆ ಕೆಲ ತಿಂಗಳಕಾಲ ನೂರಾರು ಜನ ಅವರ ಮನೆಗೆ ಬಂದು ಭೋಜನ ಮಾಡುತ್ತಿದ್ದರು. ಶ್ರೀರಾಜನ್‌ರವರ ಧರ್ಮಪತ್ನಿ ಶ್ರೀಮತಿ ರತ್ನಮ್ಮ ಇವರ ಪುತ್ರೀ ಶ್ರೀಮತಿ ಸೌ|| ನಾಗಮಣಿ ಇವರಿಬ್ಬರೇ ಶ್ರೀರಾಯರ ಅಪ್ಪಣೆಯಂತೆ ಸ್ವತಃ ಭಕ್ತಿಯಿಂದ ಅಡಿಗೆ ಮಾಡಿ ತಿಂಗಳುಗಳಗಟ್ಟಳೆ ನೂರಾರು ಜನರಿಗೆ ಬಡಿಸಿ ಭೋಜನ ಮಾಡಿಸುತ್ತಿದ್ದರು. ಇವರ ಕುಟುಂಬದ ಎಲ್ಲ ಸದಸ್ಯರಲ್ಲೂ ಶ್ರೀರಾಯರು ವಿಶೇಷಾನುಗ್ರಹ ಮಾಡುತ್ತಿದ್ದರು.

ಶ್ರೀರಾಜನ್‌ರವರಿಗೆ ತಕ್ಕ ಧರ್ಮಪತ್ನಿ ಶ್ರೀಮತಿ ರತ್ನಮ್ಮನವರು. ಪತಿಯ ಅಪ್ಪಣೆಯಂತೆ ಸ್ವತಃ ಭಕ್ತಿಯಿಂದ ಅಡಿಗೆ ಮಾಡಿ ತಿಂಗಳುಗಳಗಟ್ಟಳೆ ನೂರಾರು ಜನರಿಗೆ ಬಡಿಸಿ ಭೋಜನ ಮಾಡಿಸುತ್ತಿದ್ದರು. ಇವರ ಕುಟುಂಬದ ಎಲ್ಲ ಸದಸ್ಯರಲ್ಲೂ ಶ್ರೀರಾಯರು ವಿಶೇಷಾನುಗ್ರಹ ಮಾಡುತ್ತಿದ್ದರು.

ಶ್ರೀರಾಜನ್ರವರಿಗೆ ತಕ್ಕ ಧರ್ಮಪತ್ನಿ ಶ್ರೀಮತಿ ರತ್ನಮ್ಮವನರು. ಪತಿಯ ಅಪ್ಪಣೆಯಂತೆ ಇವರು ಶ್ರೀಗುರುರಾಜರನ್ನು ಅಪಾರಭಕ್ತಿಯಿಂದ ಸೇವಿಸಿ ಆನಂದಿಸುತ್ತಿದ್ದರು. ಶ್ರೀರಾಜನ್ ದಂಪತಿಗಳಿಗೆ ೧) ಶ್ರೀ ರಂಗನಾಥ್, ೨) ಶ್ರೀನಿವಾಸರಾಘವನ್, ೩) ಶ್ರೀಕೇಶವನ್, ೪) ಶ್ರೀಮಂಜುನಾಥ್ ಎಂಬ ನಾಲ್ವರು ಪುತ್ರರೂ ೫) ಶ್ರೀಮತಿ ಸೌ|| ಸಣ್ಣನಾಗಮಣಿ, ೬) ಶ್ರೀಮತಿ ಸೌ|| ರಾಧಾರಮಣಿ, ೭) ಶ್ರೀಮತಿ ಸೌ|| ರಂಗನಾಯಕಿ ಮತ್ತು ೮) ಶ್ರೀಮತಿ ಸೌ|| ಇಂದಿರಾ ಎಂಬ ನಾಲ್ವರು ಪುತ್ರಿಯರು ಜನಿಸಿ ತಂದೆತಾಯಿಗಳ ಮಾರ್ಗದರ್ಶನದಲ್ಲಿ ಧರ್ಮಿಷ್ಠರಾಗಿ, ಗುರುಭಕ್ತರಾಗಿ ಅಭಿವೃದ್ಧಿಸುತ್ತಿದ್ದಾರೆ.

ಶ್ರೀರಾಜನ್‌ರವರು ಶ್ರೀ ಶ್ರೀನಿವಾಸದೇವರು ಮತ್ತು ಶ್ರೀರಾಘವೇಂದ್ರಸ್ವಾಮಿಗಳಿಗೆ ಅನೇಕ ವಿಧವಾಗಿ ಸೇವಾ ಮಾಡಿದ್ದಾರೆ. ರಾಜನ್‌ರವರ ಮನೆ ದೇವರು ಮಾವಿನ ಕೆರೆಯ ಶ್ರೀರಂಗನಾಥದೇವರು. ಶ್ರೀಯುತರು ಮಾಡಿರುವ ಧರ್ಮಕಾರ್ಯಗಳು ಬಹುವಿಧವಾಗಿವೆ.

೧) ಮಂತ್ರಾಲಯದಲ್ಲಿ ಅಧಿಕಧನವನ್ನು ವೆಚ್ಚಮಾಡಿ ಒಂದು ಭವ್ಯ ಕಾಟೇಜನ್ನು ಕಟ್ಟಿಸಿದ್ದಾರೆ. ೨) ಶ್ರೀರಾಯರ ಆರಾಧನಾಸೇವೆ, ೩) ಮಂತ್ರಾಲಯದ ವಿದ್ಯಾಪೀಠಕ್ಕೆ ಧನಸಹಾಯ, ೪) ಅಲ್ಲಿ ಆಲಯದ ಪ್ರಾಕಾರಾಭಿವೃದ್ಧಿ ಕೈಂಕರ್ಯ, ೬) ಪ್ರತಿವರ್ಷ ಶ್ರೀರಾಯರ ಆರಾಧನೆಗೆ ಭಕ್ತಿ ಪೂರ್ವಕ ಸೇವಾರ್ಪಣೆ, ೭) ಮಂತ್ರಾಲಯದಲ್ಲಿ

ನವರಾತ್ರಿ ಕಾಲದಲ್ಲಿ ಪ್ರತಿವರ್ಷ ರಜತ ರಥೋತ್ಸವ ಸೇವೆ, ೮) ತಿರುಪತಿಯಲ್ಲಿ ಶ್ರೀನಿವಾಸದೇವರಿಗೆ ಜರುಗುವ ಬಗೆ ಬಗೆಯ ಸೇವೆಗಳನ್ನು ಮಾಡಿಸುವುದು, ೯) ಜಯನಗರ ಶ್ರೀರಾಯರ ಮಠದಲ್ಲಿ ಸೇವೆ ನಡೆಯಲು ಪುದುವಟ್ಟು ಇಟ್ಟಿದ್ದಾರೆ, ೧೦) ವಿದ್ಯಾರ್ಥಿಗಳ ವ್ಯಾಸಂಗಕ್ಕೆ ಧನಸಹಾಯ, ೧೧) ವೇದಾಧ್ಯಯನ ಮಾಡುವ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ ವ್ಯವಸ್ಥೆ, ೧೨) ಬೆಂಗಳೂರಿನಲ್ಲಿ ಕೆ.ಸಿ. ಜನರಲ್ ಆಸ್ಪತ್ರೆಯ (ಅಬ್ಬಯ್ಯನಾಯ್ಡು ಆಸ್ಪತ್ರೆ) ಪ್ರಾರಂಭಕ್ಕೆ ರಾಜನ್‌ರವರು ಕಾರಣರಾಗಿದ್ದಲ್ಲದೆ ಒಂದು ವಾರ್ಡನ್ನು ಕಟ್ಟಿಸಿಕೊಟ್ಟಿದ್ದಾರೆ. ೧೩) ಬ್ರಾಹ್ಮಣರ ಅಪರ ಕರ್ಮಗಳು ಸರಿಯಾಗಿ ನಡೆಯಲು ಧನಸಹಾಯ, ಇಂದಿಗೂ ಇವೆಲ್ಲವನ್ನೂ ಶ್ರೀರಾಜನ್‌ರವರ ಪುತ್ರರಾದ ಶ್ರೀಮಂಜುನಾಥ್ ಸಹೋದರರು ತಂದೆಯವರ ಅಪ್ಪಣೆಯಂತೆ ಅವರು ಮಾಡುತ್ತಿದ್ದಂತೆಯೇ ವಿವಿಧ ಧರ್ಮಕಾರ್ಯಗಳನ್ನು ಶ್ರೀಹರಿಗುರು ಸೇವೆಗಳನ್ನು ಮಾಡುತ್ತಾ ಬಂದಿದ್ದಾರೆ.

ಶ್ರೀರಾಜನ್‌ರವರ ಜ್ಞಾನ-ಭಕ್ತಿ, ಶ್ರೀಹರಿಗುರುಸೇವೆ ಪರೋಪಕಾರ, ಧರ್ಮಕಾರ್ಯಗಳನ್ನು ಕಂಡು ಅನೇಕ ಸಂಘ, ಸಂಸ್ಥೆಗಳವರು ಶ್ರೀಯುತರನ್ನು ಸನ್ಮಾನಿಸಿದ್ದಾರೆ. ಶ್ರೀ ಶೃಂಗೇರಿ ಪೀಠದವರು "ವೇದಧರ್ಮಾಭಿಮಾನಿ" ಎಂಬ ಪ್ರಶಸ್ತಿಯನ್ನೂ, ರಾಮಭಜನ ಸಭೆಯವರು ಇವರಿಗೆ "ಶ್ರೀರಾಮಸೇವಾ ತಿಲಕ" ಎಂಬ ಪ್ರಶಸ್ತಿಯನ್ನೂ ಕೊಟ್ಟು ಗೌರವಿಸಿದ್ದಾರೆ.

ಶ್ರೀರಾಜನ್‌ರವರು ಮಂತ್ರಾಲಯದಲ್ಲಿ ಕಟ್ಟಿಸುತ್ತಿದ್ದ ಕಾಟೇಜು ಸಿದ್ಧವಾಗಿದೆ ಎಂಬ ವಾರ್ತೆ ಬಂದ ದಿನವೇ ಶ್ರೀರಾಜನ್‌ರವರು ಆನಂದ ತುಂದಿಲರಾಗಿ ಶ್ರೀನಿವಾಸನ, ಶ್ರೀಗುರುರಾಜರ ಸ್ಮರಣೆ ಮಾಡುತ್ತಾ ಆನಂದಪ್ರದನಾದ ಶ್ರೀಹರಿಯ ಮಂದಿರಕ್ಕೆ ಆನಂದದಿಂದ ಪ್ರಯಾಣ ಬೆಳೆಸಿ ಶ್ರೀವಿಷ್ಣುಪದವನ್ನು ಸೇರಿದರು! ಇದೊಂದು ಅಪೂರ್ವ ಘಟನೆ ಮತ್ತು ಶ್ರೀಹರಿ-ಗುರುಗಳಿಗೆ ಅವರಲ್ಲಿದ್ದ ಅನುಗ್ರಹಕ್ಕೆ ಉದಾಹರಣೆಯಾಗಿದೆ.

ಪತಿಗಳಂತೆಯೇ ರಾಜನ್‌ರವರ ಧರ್ಮಪತ್ನಿಯವರಾದ ಶ್ರೀಮತಿ ರತ್ನಮ್ಮನವರೂ ಪುಣ್ಯಜೀವಿಗಳು. ದೇವರು-ಗುರುರಾಜರ ಅನುಗ್ರಹಕ್ಕೆ ಪಾತ್ರರಾಗಿದ್ದರೆನ್ನಲು ಒಂದು ಘಟನೆ ಸಾಕ್ಷಿಯಾಗಿದೆ. ಒಂದು ದಿನ ಶ್ರೀಮತಿ ರತ್ನಮ್ಮನವರು ದೇವರ ಮನೆಗೆ ಹೋದಾಗ ಅಲ್ಲಿ ಅತಿತೇಜಸ್ವಿಗಳಾದ ಸನ್ಯಾಸಿಗಳೊಬ್ಬರು ಕುಳಿತಿರುವುದನ್ನು ಕಂಡು ಆಶ್ಚರ್ಯಚಕಿತರಾದರು. ಆ ದಿವ್ಯಸ್ವರೂಪವನ್ನು ಕಂಡು ಭಯವೂ ಆಯಿತು. ಆಗ ಆ ಸನ್ಯಾಸಿಗಳು (ಶ್ರೀರಾಯರು) ಮಂದಸ್ಮಿತವದನರಾಗಿ ಅಭಯಹಸ್ತ ಪ್ರದರ್ಶಿಸಿ ಆಶೀರ್ವದಿಸಿ ಅದೃಶ್ಯರಾದರು! ಶ್ರೀರಾಯರ ಪ್ರತ್ಯಕ್ಷದರ್ಶನ ಪಡೆದ ಶ್ರೀಮತಿ ರತ್ನಮ್ಮನವರು ಮಹಾಭಾಗ್ಯಶಾಲಿಗಳು.

ಶ್ರೀರಾಜನ್‌ರವರ ಪುತ್ರರೆಲ್ಲರೂ ಧರ್ಮಿಷ್ಠರಾಗಿ ಶ್ರೀಹರಿಗುರುಸೇವಾ ನಿರತರಾಗಿ ತಂದೆಯವರ ಆದರ್ಶದಲ್ಲಿ ಮುಂದುವರೆದು ಕೀರ್ತಿಗಳಿಸುತ್ತಿದ್ದಾರೆ. ಶ್ರೀರಾಜನ್‌ರ ಪುತ್ರರುಗಳು ವಿದ್ಯಾವಂತರಾಗಿ ವಿದೇಶಗಳಲ್ಲಿ ವಿವಿಧ ಹುದ್ದೆಗಳಲ್ಲಿದ್ದು ಹೆಸರು ಗಳಿಸುತ್ತಿದ್ದಾರೆ. ವಿದೇಶದಲ್ಲಿಯೂ ಪ್ರತಿದಿನ ಶ್ರೀರಾಯರನ್ನು ಪೂಜಿಸುತ್ತಾ ಶ್ರೀರಾಯರ ಅನುಗ್ರಹಕ್ಕೆ ಪಾತ್ರರಾಗುತ್ತಿದ್ದಾರೆ.

ಶ್ರೀ ಎಚ್. ಆರ್. ಮಂಜುನಾಥ್‌ರವರಂತೂ ಸರ್ವದಾ ಶ್ರೀರಾಯರ ಸೇವೆಯಲ್ಲಿ ನಿರತರಾಗಿ ತಂದೆಗೆ ತಕ್ಕ ಮಗನೆಂದು ಕೀರ್ತಿಗಳಿಸಿದ್ದಾರೆ. ಇವರು ಬೆಂಗಳೂರಿನಲ್ಲಿ ಮೂವೀಲ್ಯಾಂಡ್ ಎಂಬ ಚಲನಚಿತ್ರ ಮಂದಿರವನ್ನು ನೆಡೆಸುತ್ತಿದ್ದಾರೆ. ತುಮಕೂರಿನಲ್ಲಿ ತಂದೆಯ ಹೆಸರಿನಲ್ಲಿ ಶ್ರೀರಾಜನ್ ಥಿಯೇಟರನ್ನು ನಡೆಸುತ್ತಿದ್ದಾರೆ. ಶ್ರೀಮಂಜುನಾಥ್ ಸಹೋದರರು ೧೯೮೨ ರಲ್ಲಿ ಮಂತ್ರಾಲಯದಲ್ಲಿ ಶ್ರೀರಾಯರ ಮುಖ್ಯಾರಾಧನೆಯ ಸಂಪೂರ್ಣ ಖರ್ಚನ್ನು ಕೊಟ್ಟು ತಂದೆಯವರ ಹೆಸರಿನಲ್ಲಿ ದೊಡ್ಡ ಸೇವೆಯನ್ನು ನೆರವೇರಿಸಿದ್ದು ಶ್ರೀಯುತರ ಪಿತೃಭಕ್ತಿಗೆ ಉದಾಹರಣೆಯಾಗಿದೆ.

ಶ್ರೀರಾಜೈಂಗಾರ್‌ರವರ ಪುತ್ರರೆಲ್ಲರೂ ಶ್ರೀಹರಿಗುರುಭಕ್ತರೂ, ವಿದ್ಯಾವಂತರೂ, ಧರ್ಮಕಾರ್ಯನಿರತರೂ, ಸದಾಚಾರ ಸಂಪನ್ನರೂ, ಜ್ಞಾನಕಾರ್ಯಸಹಾಯಕರೂ ಆಗಿ ಎಲ್ಲರ ಗೌರವಾದರಗಳಿಗೆ ಪಾತ್ರರಾಗಿದ್ದಾರೆ. ಡಾ|| ಕೇಶವನ್‌ರವರ ಜ್ಞಾನಪ್ರಸಾರದೀಕ್ಷೆ, ಔದಾರ್ಯಗಳಿಗೆ ಈ ಕಲಿಯುಗ ಕಲ್ಪತರು ಗ್ರಂಥಪ್ರಕಾಶನವು ಪ್ರತ್ಯಕ್ಷ ಸಾಕ್ಷಿಯಾಗಿದೆ.

ವಿದೇಶದಲ್ಲಿರುವ ಡಾ|| ಎಚ್.ಆರ್. ಶ್ರೀನಿವಾಸ ರಾಘವನ್, ಡಾ|| ಎಚ್. ಆರ್. ಕೇಶವನ್‌ರವರು ತಮ್ಮ ತಮ್ಮಂದಿರಾದ ಶ್ರೀ ಎಚ್.ಆರ್. ಮಂಜುನಾಧ್‌ರು ಕಳುಹಿಸಿಕೊಟ್ಟ ನಮ್ಮ "ಕಲಿಯುಗ ಕಲ್ಪತರು"ವನ್ನು ಓದಿ ಪರಮಾನಂದಭರಿತರಾಗಿ ನಮಗೆ ಪತ್ರ ಬರೆದು ಬಹುವಿಧವಾಗಿ ನಮ್ಮನ್ನು ಶ್ಲಾಘಿಸಿ ಪ್ರೋತ್ಸಾಹಿಸಿದರಲ್ಲದೆ ಬೆಂಗಳೂರಿಗೆ ಬಂದಾಗ ನಮ್ಮನ್ನು ಮನೆಗೆ ಕರೆಸಿಕೊಂಡು ಗೌರವಿಸಿದರು. ಆ ಸಂದರ್ಭದಲ್ಲಿ ಶ್ರೀ ಮಂಜುನಾಥರು ಕಲಿಯುಗ ಕಲ್ಪತರು ಗ್ರಂಥದ ಪ್ರತಿಗಳು ತೀರಿರುವುದರಿಂದ ಅದನ್ನು ಮತ್ತೆ ಪ್ರಕಟಿಸಲಿರುವ ನಮ್ಮ ಆಶಯವನ್ನು ಡಾ|| ರಾಘವನ್ ಮತ್ತು ಡಾ|| ಕೇಶವನ್‌ರವರಿಗೆ ತಿಳಿಸಿ ಅದರ ಪ್ರಕಾಶನಕ್ಕೆ ಸಹಾಯಮಾಡಬೇಕೆಂದು ತಿಳಿಸಿದರು. ಆಗ ಶ್ರೀ ಕೇಶವನ್ ಸಹೋದರರ ಮಾತೃಶ್ರೀಯವರಾದ ಶ್ರೀಮತಿ ರತ್ನಮ್ಮನವರು ಗ್ರಂಥ ಪ್ರಕಟನೆಗೆ ಧನಸಹಾಯ ಮಾಡಬೇಕೆಂದು ಆಜ್ಞಾಪಿಸಿದರು. ಮಾತೃವಚನವೇ ಭಗವಂತನ ಆಜ್ಞೆಯೆಂದು ತಿಳಿದ ಡಾ|| ಶ್ರೀನಿವಾಸರಾಘವನ್ ಮತ್ತು ಡಾ|| ಕೇಶವನ್‌ರವರು ತಾಯಿಯವರ ವಚನವನ್ನು ಸಂತೋಷದಿಂದ ಪೂರ್ಣ ಮಾಡಲು ಒಪ್ಪಿ ಕೂಡಲೇ ನಮಗೆ ಈ ಗ್ರಂಥ ಮುದ್ರಣಕ್ಕೆ ಧನ ಸಹಾಯಮಾಡುವುದಾಗಿ ವಾಗ್ದಾನ ಮಾಡಿ, ಈ ಗ್ರಂಥವನ್ನು ತಮ್ಮ ತಂದೆಯವರ

ಸವಿನೆನಪಿಗಾಗಿಯೂ, ಡಾ|| ರಾಘವನ್‌ರವರ ಐವತ್ತನೆಯ ವರ್ಷವರ್ಧಂತಿಯ ಜ್ಞಾಪಕವಾಗಿ ಪ್ರಕಟಿಸಬೇಕೆಂದು ಕೋರಿ ಗ್ರಂಥ ಪ್ರಕಾಶನಕ್ಕೆ ಉದಾರವಾಗಿ ಧನಸಹಾಯ ಮಾಡಿ ಉಪಕರಿಸಿದರು. ಹೀಗೆ ಗ್ರಂಥಪ್ರಕಟನೆಗೆ ಸಹಾಯ ಮಾಡಿದ ಡಾ|| ಎಚ್.ಆರ್. ಶ್ರೀನಿವಾಸರಾಘವನ್, ಡಾ|| ಎಚ್.ಆರ್.ಕೇಶವನ್ ಸಹೋದರರಿಗೂ, ಶ್ರೀ ರಂಗನಾಥನ್, ಶ್ರೀ ಮಂಜುನಾಥ್ ಮತ್ತು ಈ ಸಹೋದರರ ತಾಯಿಯವರಾದ, ಶ್ರೀಮತಿ ರತ್ನಮ್ಮ ಇವರಿಗೆ ನಾವು ಬಹಳ ಕೃತಜ್ಞರಾಗಿದ್ದೇವೆ. ಶ್ರೀನಿವಾಸದೇವರು ಮತ್ತು ಶ್ರೀರಾಘವೇಂದ್ರಸ್ವಾಮಿಗಳು ಈ ಎಲ್ಲ ಸಹೋದರರಿಗೂ, ತಾಯಿ, ಅಕ್ಕ ತಂಗಿಯರಿಗೂ, ಅವರ ಕುಟುಂಬ ವರ್ಗಕ್ಕೂ ಸಕಲಸನ್ಮಂಗಳಗಳನ್ನು ಕರುಣಿಸಲೆಂದು ಹೃತ್ಪೂರ್ವಕವಾಗಿ ಪ್ರಾರ್ಥಿಸಿ ನಮ್ಮ ಧನ್ಯವಾದಗಳನ್ನು ಸಮರ್ಪಿಸುತ್ತೇವೆ.

ಈ ಗ್ರಂಥವನ್ನು ದಿ|| ಎಚ್.ರಾಜ್ಯೆಂಗಾರ್‌ರವರ ಮಧುರಸ್ಮೃತಿ ಹಾಗು ಡಾ||ರಾಘವನ್‌ರವರ ಐವತ್ತನೆಯ ವರ್ಷದ ವರ್ಧಂತಿಯ ಕಾಣಿಕೆಯಾಗಿ ಪ್ರಕಟಿಸಿ ಗುರಭಕ್ತರಿಗೆ ನೀಡಲು ಹರ್ಷಿಸುತ್ತೇವೆ.

ಶ್ರೀರಾಮನವಮೀ
ತಾ.೨೦-೪-೯೪
ಬೆಂಗಳೂರು.

ಇತಿ ಶ್ರೀಹರಿಗುರುಪಾದಕಿಂಕರರು
**ರಾಜಾ. ಎಸ್. ಗುರುರಾಜಚಾರ್ಯರು**
**ರಾಜಾ. ಶ್ರೀ ಲಕ್ಷ್ಮೀನಾರಾಯಣಾಚಾರ್ಯರು**
ಶ್ರೀ ಪರಿಮಳವಿದ್ಯಾಮಂದಿರ
ನಂಜನಗೂಡು.



# ನೆನಪಿನ ಕಾಣಿಕೆ

ತಿರುಪತಿಯ ಶ್ರೀನಿವಾಸದೇವರು ಮತ್ತು ಮಂತ್ರಾಲಯದ ಶ್ರೀರಾಘವೇಂದ್ರಗುರುಸಾರ್ವಭೌಮರವರ ಪರಮ ಭಕ್ತರಾದ ಡಾ।। ಶ್ರೀನಿವಾಸ ರಾಘವನ್‌ರವರು ವಿದ್ಯಾವಂತರು, ತತ್ವ, ಧರ್ಮ ಸಂಸ್ಕೃತಿಯ ಉಪಾಸಕರು, ಸದಾಚಾರ ಸಂಪನ್ನರು, ವೇದೋಪನಿಷತ್, ಪುರಾಣಗಳ ಉಪದೇಶದಂತೆ ಜೀವನವನ್ನು ನೆಡೆಸುತ್ತಿರುವ ಭಾಗ್ಯಶಾಲಿಗಳು. ಶ್ರೀಯುತರಿಗೆ ಜ್ಞಾನ ಪ್ರಸಾರದಲ್ಲಿ ಬಹುಶ್ರದ್ಧೆ, ವಿದ್ಯಾಪಕ್ಷಪಾತಿಗಳಾದ ಇವರು ವಿದ್ವಜ್ಜನಾಶ್ರಯರು, ದಾನಶೀಲರೂ ಪರೋಪಕಾರಿಗಳೂ, ಆಗಿ ಅಮೇರಿಕೆ (U.S.A.)ಯಲ್ಲಿ ಶ್ರೇಷ್ಠ ಉದ್ಯಮದಲ್ಲಿದ್ದು ಕೀರ್ತಿಗಳಿಸಿದ್ದಾರೆ. ಈ "ಕಲಿಯುಗ ಕಲ್ಪತರು" ಗ್ರಂಥ ಪ್ರಕಾಶನಕ್ಕೆ ಮುಖ್ಯ ಕಾರಣರಾದ ಡಾ।।ಎಚ್.ಆರ್. ಕೇಶವನ್‌ರವರು ಈ ಗ್ರಂಥವನ್ನು ತಮ್ಮ ಅಣ್ಣಂದಿರಾದ ಡಾ।। ಶ್ರೀನಿವಾಸ ರಾಘವನ್‌ರವರ ಐವತ್ತನೆಯ ಹುಟ್ಟುಹಬ್ಬದ ಸಮಾರಂಭದ ಸವಿನೆನಪಿಗಾಗಿ ಪ್ರಕಟಿಸಬೇಕೆಂದು ಅಪೇಕ್ಷಿಸಿದರು. ಅದರಂತೆ ನಾವು ಈ ಕಲಿಯುಗ ಕಲ್ಪತರು ಗ್ರಂಥದ ಮೂರನೆಯ ಆವೃತ್ತಿಯನ್ನು ಡಾ।। ಶ್ರೀನಿವಾಸ ರಾಘವರ್‌ರವರ ಐವತ್ತನೆಯ ವರ್ಷವರ್ಧಂತಿಯ 'ನೆನಪಿನ ಕಾಣಿಕೆ'ಯಾಗಿ ಶ್ರೀಹರಿ ಗುರುರಾಜರ ಭಕ್ತರಿಗೆ, ಧಾರ್ಮಿಕರಿಗೆ ನೀಡಲು ಹರ್ಷಿಸುತ್ತೇವೆ.

ಶ್ರೀ ಹರಿ–ಗುರುರಾಜರು ಡಾ।ಶ್ರೀನಿವಾಸ ರಾಘವನ್‌ರವರಿಗೆ ಇತ್ಯೋಪತಿಶಯ ಆಯುರಾರೋಗ್ಯ ಸನ್ಮಂಗಳಗಳನ್ನು ಕರುಣಿಸಲೆಂದು ಪ್ರಾರ್ಥಿಸುತ್ತೇವೆ. ಇದರಂತೆ ಡಾ।। ಕೇಶವನ್‌ರವರಿಗೂ ಅವರ ಸಹೋದರ ಸಹೋದರಿಯರು ಮತ್ತು ತಾಯಿಯವರಿಗೂ ಸಕಲಸನ್ಮಂಗಳಗಳನ್ನು ದಯಪಾಲಿಸುವಂತೆ ಪ್ರಾರ್ಥಿಸುತ್ತೇವೆ.

ಬೆಂಗಳೂರು
ಶ್ರೀರಾಮನವಮಿ
ತಾ।। 20-4-94

ರಾಜಾ ಶ್ರೀ ಗುರುರಾಜಾಚಾರ್ಯರು
ಗ್ರಂಥಕರ್ತರು

# ಗ್ರಂಥಕರ್ತನ ಮನವಿ

ಬಹುವರ್ಷಗಳ ನನ್ನ ಹಿರಿಯಾಶೆ ಇಂದು ಸಫಲವಾಗಿದೆ. ಅದಕ್ಕೆ ಕಾರಣ ಶ್ರೀ ಗುರುರಾಜರ ಪರಾನುಗ್ರಹ. ಶ್ರೀರಾಯರ ಮಹಿಮೆ ಅಗಮ್ಯ, ಅವರ ಶಿಷ್ಯ ಭಕ್ತಕಾರುಣ್ಯ ಅಪಾರ, ಅನುಗ್ರಹ ಅನುಪಮ, ಇವುಗಳಿಗೆ ಸಹಸ್ರಾರು ಭಕ್ತ ಜನರಂತೆ ನಾನೂ ಸಾಕ್ಷಿಯಾಗಿದ್ದೇನೆ. ತಮ್ಮ ಶಿಷ್ಯ ಕೋಟಿಯಲ್ಲಿ ಒಬ್ಬನಾದ ನನ್ನಲ್ಲಿ ಹಿಂದೆ ಅನೇಕ ಬಾರಿ ವಿಶೇಷಾನುಗ್ರಹಬೀರಿ, ಜ್ಞಾನ, ಭಕ್ತಿ, ವೈರಾಗ್ಯಶೂನ್ಯನಾದ ಮಂದಮತಿಯೂ ಆದ ನನ್ನಲ್ಲಿ ನಿಂತು, ಪ್ರೇರಣೆ ಮಾಡಿ, ಅನೇಕ ಗ್ರಂಥರಚನಾದಿ ಸತ್ಕಾರ್ಯಗಳನ್ನು ಮಾಡಿಸಿ ಕೀರ್ತಿಕೊಡಿಸಿ ತಮ್ಮ ಅಪ್ರತಿಹತಮಹಿಮೆ, ಕಾರುಣ್ಯ ಅನುಗ್ರಹಗಳು ಅಲ್ಪರಿಂದಲೂ ಎಂಥ ಮಹತ್ಕಾರ್ಯ ಮಾಡಿಸಬಲ್ಲುದೆಂಬುದನ್ನು ತೋರಿಸಿಕೊಟ್ಟಿದ್ದಾರೆ. ಅದರಂತೆ ಈಗಲೂ ಕಲಿಯುಗ-ಕಲ್ಪತರುವಿನಂತಹ ಉದ್ ಗ್ರಂಥರಚನೆಗೆ ಕಾರಣರಾಗಿ ಅನುಗ್ರಹಸಿದ್ದಾರೆ. ಕಲಿಯುಗ ಕಲ್ಪತರುವನ್ನು ನಾನು ಬರೆದೆ ಎನ್ನುವುದು ತಪ್ಪಾದೀತು. ಆ ಮಹಾನುಭಾವರೇ ನನ್ನಲ್ಲಿ ನಿಂತು ಪ್ರೇರಣೆ ಮಾಡಿ ಬರೆಯಿಸಿದ್ದಾರೆಂದು ಹೇಳಿದರೆ ಅತ್ಯಂತ ಸಮಂಜಸವಾಗುವುದು. ಈ ಗ್ರಂಥವನ್ನು ಬರೆಯಿಸಿದ ಶ್ರೀ ರಾಯರ; ಗ್ರಂಥರಚನೆಗೆ ಪ್ರೇರಕ ಶಕ್ತಿಗಳಾದ ಕೀರ್ತಿಶೇಷ ಶ್ರೀಸುಯಮೀಂದ್ರತೀರ್ಥರ ಅನುಗ್ರಹಾಶೀರ್ವಾದ ಬಲದಿಂದಲೇ ಬಹುವರ್ಷಗಳ ನನ್ನಾಶೆಯು ಸಫಲವಾಗಿ ಇಂದು ಕಲಿಯುಗ ಕಲ್ಪತರು ಗ್ರಂಥವು ಧರ್ಮಾಭಿಮಾನಿಗಳೂ, ಶ್ರೀ ಗುರುರಾಜರ ಭಕ್ತರೂ ಆದ ಸಜ್ಜನರ ಕೈಯ್ಯಲ್ಲಿ ರಾಜಿಸುತ್ತಿದೆ ಎಂದು ವಿಜ್ಞಾಪಿಸಲು ಹರ್ಷಿಸುತ್ತೇನೆ.

ಈ ಗ್ರಂಥರಚನೆಯ ಹಿನ್ನೆಲೆಯನ್ನಿಲ್ಲಿ ನಿವೇದಿಸುವುದು ಯುಕ್ತವಾಗಿದೆ. ಶ್ರೀಮನ್ಮಧ್ವಾಚಾರ್ಯರ ಮುಖ್ಯಮಹಾಸಂಸ್ಥಾನಾಧೀಶ್ವರರೂ ಜಗದ್ಗುರು ರಾಘವೇಂದ್ರ ಸ್ವಾಮಿಗಳವರ ಮಠೀಯ ದಿಗ್ವಿಜಯ ವಿದ್ಯಾಸಿಂಹಾಸನಾಧೀಶ್ವರರೂ, ಆಧುನಿಕ ಮಂತ್ರಾಲಯದ ಮಹಾಶಿಲ್ಪಿಗಳೂ, ಗುರುರಾಜರ ಕರುಣೆಯ ಕಂದರೂ ಆದ ಶ್ರೀ ಸುಯಮೀಂದ್ರ ತೀರ್ಥರು ಶ್ರೀಮಂತ್ರಾಲಯ ಕ್ಷೇತ್ರದಲ್ಲಿದ್ದಾಗ (೧೯೪೭ರಿಂದ ೧೯೫೬ರ ವರೆಗೆ) ಅವರು ವಿಶೇಷದಿನಗಳಲ್ಲಿ ಮುಖ್ಯವಾಗಿ ಶ್ರೀರಾಯರ ಆರಾಧನಾಕಾಲಗಳಲ್ಲಿ ಭಕ್ತಿಪರವಶರಾಗಿ ನಾಲ್ಕಾರು ಘಂಟೆಗಳಕಾಲ ಶ್ರೀ ಗುರುರಾಜರ ಅಮರಚರಿತೆ, ಮೂಲರೂಪ ಮತ್ತು ಹಿಂದಿನ ಎಲ್ಲ ಅವತಾರಗಳ ವೈಶಿಷ್ಟ್ಯಪೂರ್ಣ ಚರಿತಾಮೃತವನ್ನು ಸಹಸ್ರಾರು ಜನ ಶಿಷ್ಯ-ಭಕ್ತ ಜನರಿಗೆ ಉಪದೇಶಮಾಡಿ ಪರಮಾನಂದಗೊಳಿಸುತ್ತಿದ್ದರು. ಶ್ರೀಗಳವರ ಮುಖದಿಂದ ಹೊರಹೊಮ್ಮುತ್ತಿದ್ದ ಆ ಉಪನ್ಯಾಸವನ್ನು ಯಾರೂ ಮರೆಯುವಂತಿಲ್ಲ, ಶ್ರೀಗಳವರ ಆ ಉಪದೇಶಗಳು ನನ್ನ ಮೇಲೆ ಬಹಳ ಪ್ರಭಾವವನ್ನು ಬೀರುತ್ತಿತ್ತು. ಶ್ರೀಗಳವರು ಉಪದೇಶಿಸಿದ ಶ್ರೀರಾಯರ

ಅಮರಚರಿತೆಯನ್ನೇ ವಿಸ್ತಾರವಾಗಿ ಬರೆದು ಭಕ್ತರಿಗೆ ನೀಡಬೇಕೆಂಬ ಆಕಾಂಕ್ಷೆ ನನ್ನಲ್ಲುಂಟಾಯಿತು. ಗುರುಗಳಲ್ಲಿ ನನ್ನ ಮನೀಷೆಯನ್ನು ವಿಜ್ಞಾಪಿಸಿದಾಗ ಶ್ರೀಗಳವರು ಪರಮಸಂತುಷ್ಟರಾಗಿ "ಶ್ರೀಗುರುರಾಜರ ಮಹಿಮಾತಿಶಯವನ್ನು ಪ್ರಸಾರ ಮಾಡುವದು ಅತ್ಯಂತ ಯುಕ್ತವಾಗಿದೆ. ನಿನ್ನ ಆಶೆ ಸಾಧುವಾಗಿದೆ, ಶ್ರೀಗುರುರಾಜರಲ್ಲಿ ಶ್ರದ್ಧಾಭಕ್ತಿಗಳನ್ನಿಟ್ಟು ಪ್ರಯತ್ನಿಸು. ಅವರೇ ನಿನ್ನಾಶೆಯನ್ನು ಸಫಲಗೊಳಿಸಿ ಅನುಗ್ರಹಿಸುತ್ತಾರೆ" ಎಂದು ಹೇಳಿ ಆಶೀರ್ವದಿಸಿ ಫಲಮಂತ್ರಾಕ್ಷತೆ ದಯಪಾಲಿಸಿದರು.

ಶ್ರೀ ಗುರುರಾಜರ ಪ್ರತಿಮಾಸ್ಥಾನೀಯರೆಂದು ಸರ್ವಮಾನ್ಯರಾಗಿದ್ದ ಸುಯಮೀಂದ್ರರ ಒಪ್ಪಿಗೆ–ಆಶೀರ್ವಾದ ದೊರೆಕಿದ್ದು ಶ್ರೀರಾಯರ ಅನುಗ್ರಹವೇ ದೊರೆತಂತಾಯಿತೆಂದು ಭಾವಿಸಿ ಆಗಿನಿಂದಲೇ ಗ್ರಂಥರಚನೆಗೆ ಬೇಕಾದ ಪ್ರಾಚೀನ ಗ್ರಂಥಾದಿ ಪ್ರಮಾಣಗಳನ್ನು ಸಂಗ್ರಹಿಸಲಾರಂಭಿಸಿದೆ. ೧೯೭೦ರ ಸುಮಾರಿಗೆ 'ಕಲಿಯುಗ ಕಲ್ಪತರು'ವಿನ ಕಥಾಮುಮುಖ, ಶ್ರೀಶಂಕುಕರ್ಣ, ಶ್ರೀಪ್ರಹ್ಲಾದರಾಜರು, ಶ್ರೀ ಬಾಹ್ಲೀಕರಾಜರು ಮತ್ತು ಶ್ರೀವ್ಯಾಸರಾಜಗುರು ಸಾರ್ವಭೌಮರ ಕಥಾಭಾಗಗಳನ್ನ ಬರೆದು ಮುಗಿಸಿದೆ. ಆದರೆ ಶ್ರೀರಾಯರ ಕಥಾಮೃತಭಾಗವನ್ನು ಬರೆಯಲು ಅನೇಕತೊಂದರೆಗಳಿಂದ ಸಾಧ್ಯವಾಗಲಿಲ್ಲ. ಮುಂದೆ ಶ್ರೀ ಗುರುರಾಜರ ತ್ರಿಶತ ಮಾನೋತ್ಸವ ಸಮಾರಂಭವನ್ನು ಭಾರತಾದ್ಯಂತ ವೈಭವದಿಂದ ನೆರವೇರಿಸಬೇಕೆಂಬ ಪ್ರೇರಣೆಯಾದಾಗ ಅದೇ ಕಾಲದಲ್ಲಿ ಕಲಿಯುಗ ಕಲ್ಪತರುವನ್ನು ಮುದ್ರಿಸಿ ಪ್ರಕಟಿಸುವ ಹಂಬಲದಿಂದ ಮತ್ತೆ ೧೯೭೦ರಲ್ಲಿ ಗ್ರಂಥರಚನೆಯಲ್ಲಿ ಆಸಕ್ತನಾಗಿ ಶ್ರೀರಾಯರಿಗೆ ವೇದಾಂತ ಸಮ್ರಾಜ್ಯ ಪಟ್ಟಾಭಿಷೇಕವಾದ ಭಾಗದವರೆಗೆ ಬರೆದು ಮುಗಿಸಿದೆ. ಶ್ರೀರಾಯರ ತ್ರಿಶತಮಾನೋತ್ಸವ ಪ್ರಚಾರ ಕಾರ್ಯಕ್ಕಾಗಿ ನಾನು ಬೆಂಗಳೂರು, ಬೊಂಬಾಯಿ, ಮದರಾಸು, ಹೈದರಾಬಾದು ಮತ್ತು ಕನ್ನಡನಾಡಿನಲ್ಲೆಲ್ಲಾ ಪ್ರಚಾರ ಸಂಚಾರ ಕೈಕೊಂಡಿದ್ದು, ಉತ್ಸವ ನಿರ್ವಹಣೆಯಲ್ಲಿ ಮಗ್ನನಾದ್ದರಿಂದ ಕಲಿಯುಗ ಕಲ್ಪತರುವನ್ನು ಪೂರ್ಣಗೊಳಿಸಲಾಗಲಿಲ್ಲ. ಶ್ರೀರಾಯರು ಯಾವಾಗ ಬರೆಸುವರೋ ಆಗ ಬರೆಯೋಣವೆಂದು ಅವರ ಮೇಲೆ ಭಾರಹಾಕಿ ಕುಳಿತೆ.

೧೯೮೧ರಲ್ಲಿ ನನಗೆ ಒಂದು ದೊಡ್ಡವಿಪತ್ತು ಬಂದೊದಗಿ ಶಸ್ತ್ರಚಿಕಿತ್ಸೆಗೊಳಗಾಗಬೇಕಾಯಿತು. ದಯಾಳುಗಳಾದ ಶ್ರೀರಾಯರನ್ನೇ ನಂಬಿ ಸಿದ್ಧನಾದೆ. ಶ್ರೀಗುರುರಾಜರು ಶಸ್ತ್ರಚಿಕಿತ್ಸೆಯು ಯಶಸ್ವಿಯಾಗುವಂತೆ ಮಾಡಿ ವಿಪತ್ತನ್ನು ಪರಿಹರಿಸಿ ಪ್ರಾಣದಾನಮಾಡಿ ತಮ್ಮ ಆಶ್ರಿತಜನ ವಾತ್ಸಲ್ಯವನ್ನು ಪ್ರಕಟಿಸಿದರು. ೩–೪ ತಿಂಗಳು ವಿಶ್ರಾಂತಿಪಡೆದಮೇಲೆ ಒಂದುದಿನ ನನ್ನ ಮಾತೃಶ್ರೀಯವರಾದ ಬೃಂದಾವನಮ್ಮನವರು "ಗುರು, ನಿನಗೆ ಬಂದ ವಿಪತ್ತನ್ನು ರಾಯರು ಪರಿಹರಿಸಿ ಕಾಪಾಡಿದ್ದಾರಪ್ಪ. ಅವರ ಬಗ್ಗೆ ನೀನು ಬರೆಯುತ್ತಿದ್ದ ಗ್ರಂಥವನ್ನು ಈಗಲಾದರೂ ಬರೆದು ಮುಗಿಸಿ ಅವರ ಅನುಗ್ರಹಕ್ಕೆ ಪಾತ್ರನಾಗು" ಎಂದು ಆಜ್ಞಾಪಿಸಿದರು. ಶ್ರೀಗುರುರಾಜರೇ ನನ್ನ ತಾಯಿಯವರ

ಬಾಯಿಂದ ಹೇಳಿಸಿ ಗ್ರಂಥರಚನೆ ಮಾಡಲು ಆಜ್ಞಾಪಿಸಿದ್ವಾರೆಂದು ನನಗೆ ಅಪಾರ ಸಂತೋಷವಾಯಿತು. ಕೂಡಲೇ ಹಗಲು-ರಾತ್ರಿ ಕುಳಿತು ಗ್ರಂಥರಚನೆ ಮುಗಿಸಿ ೧೯೮೬ ಹೊತ್ತಿಗೆ ಶುದ್ಧ ಪ್ರತಿ ತಯಾರುಮಾಡಲಾರಂಭಿಸಿದೆ.

ಇನ್ನು ಗ್ರಂಥರಚನೆಯ ವಿಚಾರವಾಗಿ ನಾಲ್ಕು ಮಾತು. ಈ ಗ್ರಂಥರಚನೆಗೆ ಭಾಗವತ ನರಸಿಂಹಪುರಾಣ, ಭಾರತಾದಿಗ್ರಂಥಗಳೂ, ಶ್ರೀವ್ಯಾಸಯೋಗಿಚರಿತಂ, ಶ್ರೀ ವಿದ್ಯಾರತ್ನಾಕರತೀರ್ಥರ ಶ್ರೀ ವ್ಯಾಸರಾಜಚರಿತಮ್, ರಾಘವೇಂದ್ರಪ್ಪ ಕವಿಯ ಸಾರಸ್ವತ ಪರಿಣಯ, ಬೆಟ್ಟದ ಶ್ರೀ ಅನಂತಕೃಷ್ಣಾಚಾರ್ಯರ "ಪಾಷ್ಟಿಕ ಮಹಾಪುರುಷರು, ಷಾಷ್ಟಿಕ ನಾಮಾವಳಿ" ಪಂಡಿತರತ್ನಂ ಶ್ರೀ ದೊ. ವಾಸುದೇವಾಚಾರ್ಯರ ಶ್ರೀವ್ಯಾಸರಾಜಗುರು ಸಾರ್ವಭೌಮರು, ವ್ಯಾಸಯೋಗಚರಿತೆಗೆ ಶ್ರೀ ಬಿ. ವೆಂಕೋಬರಾಯರು ಬರೆದಿರುವ ಆಂಗ್ಲ ಮುನ್ನುಡಿ, ಶಿಲಾಶಾಸನ, ತಾಮ್ರಶಾಸನಗಳು, ರಾಜಕೀಯ ಇತಿಹಾಸದ ಮೇಲೆ ಬೆಳಕು ಚೆಲ್ಲುವ ಅನೇಕ ಪ್ರಮಾಣಗ್ರಂಥಗಳು, ಶ್ರೀವಿಜಯೀಂದ್ರವಿಜಯ, ಶ್ರೀರಾಘವೇಂದ್ರ ವಿಜಯ ಮತ್ತು ಎರಡು ವ್ಯಾಖ್ಯಾನಗಳು, ಶ್ರೀ ಗುರುಗುಣಸ್ತವನ ಗುರುಸ್ತೋತ್ರ, ಆರ್ಚಾಗತಿಕ್ರಮ, ಅಪರೋಕ್ಷಜ್ಞಾನಿಗಳ ಕೃತಿಗಳು, ಶ್ರೀರಾಘವೇಂದ್ರ ಸ್ವಾಮಿಗಳ ಮಠದ 'ಷಹಾ-ಅಮಲ್' ಬರಹಗಳು, ಶ್ರೀಮಠದ ಅಧಿಕೃತ ಚರಿತೆಯಾದ ದಿ. ಡಾ|| ಹುಲಿ.ಕೃ. ವೇದವ್ಯಾಸಾಚಾರ್ಯರ "ಗುರುಚರಿತೆ" "ಕರ್ನಾಟಕದ ಹರಿದಾಸರು" ದಿ|| ರಾ.ಸ್ವಾ. ಪಂಚಮುಖಿಯವರ "ಭಾರತದೇಶದ ಸಂಸ್ಕೃತಿ ಪರಿಚಯ, ಹರಿದಾಸ ಸಾಹಿತ್ಯ" ಮತ್ತು ಶ್ರೀರಾಯರ ಪೂರ್ವಾಶ್ರಮ ವಂಶೀಕರಲ್ಲಿ ಪರಂಪರೆಯಿಂದ ತಿಳಿದುಬಂದಿರುವ ಶ್ರೀರಾಯರ ಕಥಾನಕಗಳು - ಮುಂತಾದವು ಬಹಳ ಸಹಾಯಕವಾಗಿದೆ. ಮುಖ್ಯವಾಗಿ ಡಾ|| ಹುಲಿ.ಕೃ. ವೇದವ್ಯಾಸಾಚಾರ್ಯರ "ಗುರುಚರಿತೆ, ಕರ್ನಾಟಕದ ಹರಿದಾಸರು" ಗ್ರಂಥಗಳು ತುಂಬಾ ಸಹಾಯಕವಾಗಿದ್ದು ಅವುಗಳಿಗೆ ಅವಿರುದ್ಧವಾಗಿ ಅವರ ವಿವೇಚನೆ, ಅನಿಸಿಕೆಗಳನ್ನು ಉಪಯೋಗಿಸಿಕೊಂಡು, ಆಯಾಕಾಲದ ರಾಜರು, ಸಾಮ್ರಾಟರು, ಪಂಡಿತರು ಶ್ರೀವ್ಯಾಸರಾಜ-ರಾಘವೇಂದ್ರರ ವಂಶೀಕರಾದ ಆತ್ಮೀಯರಾದ ವ್ಯಕ್ತಿಗಳನ್ನು ಬಳಸಿಕೊಂಡು, ಅನೇಕ ಅಪೂರ್ವ ವಿಚಾರಗಳನ್ನೂ, ಈವರೆಗೆ ಪ್ರಕಟವಾಗದಿರುವ ಶ್ರೀರಾಯರ ಬಾಲ್ಯ, ವಿದ್ಯಾಭ್ಯಾಸ, ಸಂಸಾರ, ಶಾಸ್ತ್ರ-ಸಂಗೀತಗಳಲ್ಲಿ ತೋರಿದ ಪ್ರತಿಭೆ, ತಾರುಣ್ಯದಲ್ಲೇ ಗಳಿಸಿದ ರಾಜಸನ್ಮಾನಾದಿ ಸ್ವಾರಸ್ಯ ಘಟನೆಗಳನ್ನು, ಅವರ ವ್ಯಕ್ತಿತ್ವಕ್ಕೆ ಪುಷ್ಟಿಕೊಡುವಂತೆ, ಓದುಗರಿಗೆ ಶ್ರೀರಾಯರಲ್ಲಿ ಅಧಿಕ ಭಕ್ತಶ್ರದ್ಧಾದಿಗಳುಂಟಾಗುವಂತೆ, ನನ್ನ ಯೋಗ್ಯತಾನುಸಾರವಾಗಿ ಶ್ರೀರಾಯರ ಪ್ರೇರಣೆಯಂತೆ ಗ್ರಂಥವನ್ನು ರಚಿಸಿದ್ದೇನೆ ಎಂದು ಪ್ರಾಂಜಲ ಮನಸ್ಸಿನಿಂದ ಸಜ್ಜನರಲ್ಲಿ ನಿವೇದಿಸಲು ಆನಂದಿಸುತ್ತೇನೆ.

"ಈ ಗ್ರಂಥವು ಕೇವಲ ಶ್ರೀ ಪ್ರಹ್ಲಾದ-ಬಾಹ್ಲೀಕ-ವ್ಯಾಸರಾಜ-ರಾಘವೇಂದ್ರರ

ಜೀವನಚರಿತ್ರೆ ಮಾತ್ರವಾಗಿರದೆ, ಸಮಗ್ರ ಭಾರತ ದೇಶದ ತತ್ವ, ಧರ್ಮ ಸಂಸ್ಕೃತಿಗಳ ಭವ್ಯ ಇತಿಹಾಸವೇ ಆಗಿದೆ! ಇಲ್ಲಿ ವೇದೋಪನಿಷತ್, ಪುರಾಣಾದಿಗಳ ಉಪದೇಶವಿದೆ ಹಂಸವಂಶದ, ದ್ವೈತಸಿದ್ಧಾಂತದ, ಮಧ್ವಾಚಾರ್ಯರ ಪ್ರಮುಖ ಮಹಾಸಂಸ್ಥಾನವೆರಡರ, ಆ ಕಾಲದ ದಕ್ಷಿಣಭಾರತದ ರಾಜಮಹಾರಾಜರ, ಮುಖ್ಯವಾಗಿ ಕರ್ನಾಟಕ ಸಾಮ್ರಾಜ್ಯದ ಚಕ್ರವರ್ತಿಗಳ ಭವ್ಯ ಚರಿತೆಯಿದೆ. ಆ ಕಾಲದ ಸಾಮಾಜಿಕ, ಸಾಂಸ್ಕೃತಿಕ ಧಾರ್ಮಿಕ ಜನಜೀವನ, ಆಚಾರ ವ್ಯವಹಾರ, ಅಂದಿನ ರಾಜರ ಶೌರ್ಯ, ಪರಾಕ್ರಮ, ವಿದ್ಯಾ-ಸಂಗೀತ-ಕಲಾಪ್ರೇಮ, ಗುರುಭಕ್ತಿ, ಆಡಳಿತಕ್ರಮ, ಪ್ರಜಾಪ್ರೇಮ ಶ್ರೀವ್ಯಾಸರಾಜ ರಾಘವೇಂದ್ರರನ್ನು ಗುರುಗಳಾಗಿ ಮಾಡಿಕೊಂಡು ಅವರ ಉಪದೇಶ ಸಲಹೆಗಳಂತೆ ರಾಜ್ಯಭಾರಮಾಡಿ, ನಾಡು, ನುಡಿ, ವಿದ್ಯೆ, ಕಲೆಗಳ ಸರ್ವಾಂಗೀಣ ಔನ್ನತ್ಯವನ್ನು ಸಾಧಿಸಿದವಿಚಾರ, ವ್ಯಾಸರಾಜ-ಗುರುರಾಜರ ಬಹುಮುಖ ವ್ಯಕ್ತಿತ್ವವನ್ನು ತೋರುವ ಘಟನೆಗಳು, ಅವರ ಜ್ಞಾನ-ಭಕ್ತಿ-ವೈರಾಗ್ಯ-ತಪಸ್ಸು, ಗ್ರಂಥರಚನೆ ಉಪದೇಶ. ದನದಲಿತಜನರ ಉದ್ಧಾರ, ಲೋಕಕಲ್ಯಾಣ ಮಹಿಮಾ ಪ್ರದರ್ಶನಾದಿ ವಿವಿಧ ವಿಚಾರೋಪಬೃಂಹಿತವಾಗಿ ಅದ್ಭುತರಮ್ಯ ನಿರೂಪಣೆಗಳಿಂದ ಸಕಲ ಓದುಗರ ಹೃದಯಾನಂದಕಾರಕವಾಗಿ ನಿರೂಪಿತವಾಗಿದೆ. ಈ ಗ್ರಂಥದಲ್ಲಿ ವೇದಾಂತ ತತ್ವ ವಿಚಾರ, ವಿವಿಧಶಾಸ್ತ್ರಗಳಲ್ಲಿ ವಾದವಿವಾದ, ಕಾವ್ಯ ನಾಟಕಾಲಂಕಾರ ಸಂಗೀತ-ಸಾಗಿತ್ಯಕಲೆ, ನಾಡು ನುಡಿ, ಹರಿದಾಸ ಸಾಹಿತ್ಯ, ಸಂಸ್ಕೃತಿ ಕನ್ನಡ ವಾಙ್ಮಯಗಳು ಅಗಾಧವಾಗಿ ಬೆಳೆದುಬಂದ ಕ್ರಮ-ಮುಂತಾಗಿ ಅನೇಕ ವಿಚಾರಗಳು ಚೆನ್ನಾಗಿ ನಿರೂಪಿಸಲ್ಪಟ್ಟಿವೆ. ಒಂದೇ ಮಾತಿನಲ್ಲಿ ಹೇಳುವುದಾದರೆ ಈ ಗ್ರಂಥವು ಭಾರತ ದೇಶದ ಸಂಸ್ಕೃತಿಯ ಕೈಗನ್ನಡಿಯಾಗಿದೆ ಎಂದು ಧೈರ್ಯವಾಗಿ ಹೇಳಬಹುದು." ಎಂದು ನನ್ನ ಅಭಿಮಾನಿಗಳೂ ವಿದ್ಯಾಪಕ್ಷಪಾತಿಗಳೂ, ಶ್ರೇಷ್ಠವಿಮರ್ಶಕ ಪಂಡಿತರೂ ಆದ ಧಾರವಾಡದ ಕನ್ನಡ ಸಂಶೋಧನ ಸಂಸ್ಥೆಯಲ್ಲಿ ಡೈರೆಕ್ಟರ್‌ರಾಗಿದ್ದ ದಿ|| ವಿದ್ಯಾರತ್ನ ಶ್ರೀ ಆರ್. ಎಸ್ ಪಂಚಮುಖಿ ಮತ್ತು ಬೊಂಬಾಯಿನ ರೂಪರಲ್ ಕಾಲೇಜಿನ ಸಂಸ್ಕೃತ ಪ್ರೊ||ರಾದ ವಿದ್ಯಾಭೂಷಣಂ ಡಾ ಬಿ.ಎನ್.ಕೆ ಶರ್ಮ, ಎಂ.ಎ ಪಿಹೆಚ್.ಡಿ,ಡಿ.ಲಿಟ್ ಮುಂತಾದ ಪಂಡಿತರು ಹೇಳಿ ನನ್ನನ್ನು ಪ್ರೋತ್ಸಾಹಿಸಿದ್ದಾರೆ. ಅವರಿಗೆ ನನ್ನ ಧನ್ಯವಾದಗಳು

ಶ್ರೀ ಗುರುಮಹಿಮಾ ನಿರೂಪಕವಾದ ಈ ಗ್ರಂಥವನ್ನು ಮುದ್ರಿಸಿ ಭಕ್ತಜನರಿಗೆ ನೀಡಲು ಹರ್ಷಿಸುತ್ತೇನೆ. ಶ್ರೀ ಗುರುರಾಜರ ಭಕ್ತರು ಈ ಗ್ರಂಥವನ್ನು ಓದಿ ಸಂತೋಷಿಸಿ

ಶ್ರೀಶ್ರೀ ರಾಯರಲ್ಲಿ ಭಕ್ತಿಮಾಡಿ ಶ್ರೇಯೋಭಾಗಿಗಳಾಗಬೇಃಕೆಂದು ಆಶಿಸುತ್ತಾ ಸಮಸ್ತ ಸಜ್ಜನರಿಗೂ ಮಂಗಳವಾಗಲೆಂದು ಹಾರೈಸುತ್ತಾ ವಿರಮಿಸುತ್ತೇನೆ.

ಶ್ರೀ ರಕ್ತಾಕ್ಷಿ ಸಂ॥ ಫಾಲ್ಗುಣ ಶು॥ ೧೩॥
ತಾ॥ ೫-೩-೧೯೮೫
ದೊಡ್ಡಮನೆ, ನಂಜನಗೂಡು.

ಇತಿ ಶ್ರೀ ಗುರುರಾಜರ ಚರಣಕಿಂಕರ,
ಸಜ್ಜನ ವಿಧೇಯ,
ಶ್ರೀ ರಾಜಾ. ಎಸ್. ಗುರುರಾಜಾಚಾರ್ಯ

# ಪ್ರಸ್ತಾವನೆ



ವಿಶ್ವದ ಇತಿಹಾಸದಲ್ಲಿ ಭಾರತದೇಶವು ವೈಶಿಷ್ಟಪೂರ್ಣ ಸ್ಥಾನಪಡೆದ ಅಗ್ರಮಾನ್ಯ ದೇಶವಾಗಿದೆ. ಭಾರತದ ಇತಿಹಾಸದ ಪುಟಪುಟಗಳಲ್ಲೂ ಸಾಧುಸಂತರ, ತತ್ವಜ್ಞಾನಿಗಳ, ಮಹಾತ್ಮರ ಕವಿ–ಸಾಹಿತಿಗಳ, ವೀರಪುರುಷರ ಚರಿತ್ರೆಗಳು ಸುವರ್ಣಾಕ್ಷರಗಳಿಂದ ಬರೆಯಲ್ಪಟ್ಟಿದ್ದು, ತನ್ನದೇ ಆದ ವೈಶಿಷ್ಟ್ಯದಿಂದ ಕಂಗೊಳಿಸುತ್ತಿವೆ. ಇತರ ದೇಶಗಳ ಸಾಧುಸಂತರು, ತತ್ವಜ್ಞಾನಿಗಳು, ಅನುಭಾವಿಗಳಿಗೂ ಭಾರತ ದೇಶೀಯರಿಗೂ ಮಹದಂತರವಿದೆ. ನಮ್ಮಲ್ಲಿ ಸಂತರು. ತತ್ವಜ್ಞಾನಿಗಳು, ದೈವಭಕ್ತರು, ಧಾರ್ಮಿಕ ಶ್ರದ್ಧೆಯುಳ್ಳವರು–ಇವರುಗಳಲ್ಲಿ ಬಹಳ ಅಂತರವಿಲ್ಲ. ಅವು ಪರಸ್ಪರ ಅವಲಂಬಿಸಿರುವುದರ ಜೊತೆಗೆ ಒಂದಕ್ಕೊಂದು ಪೂರಕವಾಗಿವೆ. ಒಂದಿಲ್ಲದೆ ಮತ್ತೊಂದು ಅರ್ಥಹೀನವಾಗುವುದು. "ವೇದೋಖಿಲೋ ಧರ್ಮಮೂಲಂ" "ಧರ್ಮೋ ವಿಶ್ವಸ್ಯ ಜಗತಃಪ್ರತಿಷ್ಠಾ", "ಯತೋಭ್ಯುದಯ ನಿಶ್ರೇಯಸಸ್ಸಿದ್ಧಿಃ ಸ ಧರ್ಮಃ" "ಧಾರಣಾದ್ಧರ್ಮ ಇತ್ಯಾಹುಃ" ಮುಂತಾದ ಪ್ರಮಾಣಗಳಂತೆ ವೇದ ಮೂಲಕವಾದ ಜಗತ್ತಿನ ಸರ್ವವಿಧ ಉನ್ನತಿಗೆ ಕಾರಣವಾದ, ಧರ್ಮವೇ ಎಲ್ಲವನ್ನೂ ಧರಿಸಿರುವುದರಿಂದ. ಎಲ್ಲಕ್ಕೂ ಆಧಾರವಾದುದರಿಂದ ಧರ್ಮವೇ ಸಮಾಜದ ಜೀವಾಳ

ವಾಗಿದೆ, ಆದುದರಿಂದ, ನಮ್ಮಲ್ಲಿ ಜೀವನ. ವಾಙ್ಮಯಗಳೆಲ್ಲವೂ ಧರ್ಮಮಯವಾಗಿ ಬೆಳೆದುಬಂದಿದೆ. ಧರ್ಮವಿಲ್ಲದ ಜೀವನ, ವಾಙ್ಮಯಗಳು ನಮ್ಮಲ್ಲಿಲ್ಲ. ಧರ್ಮ ಮತ್ತು ಧಾರ್ಮಿಕರ ಇತಿಹಾಸಗಳನ್ನು ಅರ್ಥಮಾಡಿಕೊಳ್ಳದಿದ್ದರೆ, ಭಾರತೀಯ ಸಂಸ್ಕೃತಿಯ ತಿರುಳೇ ಅರಿವಾಗುವುದಿಲ್ಲ ಅಂತೆಯೇ ನಮ್ಮಲ್ಲಿ ಇತರ ಇತಿಹಾಸಗಳಕಿಂತ ಧಾರ್ಮಿಕ ಇತಿಹಾಸವೇ ಅಗಾಧವಾಗಿ ಬೆಳೆದು ಪರಿಪುಷ್ಟವಾಯಿತು. ಈ ಧಾರ್ಮಿಕ ಇತಿಹಾಸ ದಲ್ಲಿ ಮುಖ್ಯವಾಗಿ ಒಂದೆರಡು ಗಮನೀಯವಾಗಿದೆ. ನಮ್ಮಲ್ಲಿ ಧರ್ಮ ಜೀವಂತವಾಗಿ ಬೆಳೆದುಬಂದ ಸಂಸ್ಥೆ, ಇದನ್ನು ಆಗಾಗ್ಗೆ ಪುನರುಜ್ಜೀವಿಸಿ ಸಂಸ್ಕೃತಿಯನ್ನು ಬೆಳಗಿದ ವರು ಧರ್ಮಪುರುಷರು. ಪಕ್ಷ ಪ್ರಾಬಲ್ಯದ-ಭೌತಿಕ ವಿಜ್ಞಾನಯುಗದಲ್ಲಿರುವ ಆಧುನಿ ಕರಿಗೆ ಧರ್ಮಪುರುಷರ ವೈಯಕ್ತಿಕ ತೇಜಸ್ಸಿನ ಅರಿವು ಸರಿಯಾಗಿ ಆಗಲಾರದು. ನಮ್ಮಲ್ಲಿ ಹಿಂದೆ ಆಗಿಹೋದ ಪ್ರತಿಯೊಬ್ಬ ಮಹನೀಯರೂ ನಾಡಿಗೆ, ನುಡಿಗೆ ಜನತೆಗೆ ಉತ್ಸಾಹ, ಓಜಸ್ಸುಗಳನ್ನು ತುಂಬಿ ಉನ್ನತಿಯ ತುಟ್ಟತುದಿಗೆ ಮುಟ್ಟಿಸು ತ್ತಿದ್ದರು. ಅವರ ಜೀವನ ಆದರ್ಶವಾಗಿರುತ್ತಿತ್ತು. ವಾಣಿ ಅಮೃತತುಲ್ಯವಾಗಿರು ತ್ತಿತ್ತು, ಉಪದೇಶಗಳು ತಾರಕವಾಗಿರುತ್ತಿದ್ದವು. ಅಂಥವರ ಸ್ಮರಣೆಯೇ ನಮ್ಮಲ್ಲಿ ನವಚೈತನ್ಯವನ್ನು ತುಂಬುವುದು, ಅವರು ಸಾಮ್ರಾಜ್ಯಗಳನ್ನು ಕಟ್ಟಿ, ಆಳಿ,ಅಜೇಯ ಎದುರಾಳಿಗಳನ್ನು ಪರಾಭವಗೊಳಿಸಿ, ತಮ್ಮ ತಪಃ ಪ್ರಭಾವದಿಂದ ಜಗತ್ತನ್ನೇ ತಲ್ಲಣಿಸುತ್ತಿದ್ದರು. ಜಗತ್ತಿನ ರಕ್ಷಕರಾಗಿ, ಪೋಷಕರಾಗಿ ಪೊರೆಯುತ್ತಿದ್ದರು. ಗುರು ಗಳಾಗಿ ಸದುಪದೇಶಗಳಿಂದ ಜನತೆಯನ್ನು ಪಾವನಗೊಳಿಸುತ್ತಿದ್ದರು. ಮಾರ್ಗ ದರ್ಶಕರಾಗಿ ಸನ್ಮಾರ್ಗದತ್ತ ಕರೆದೊಯ್ಯುತ್ತಿದ್ದರು, ತಮ್ಮ ಜೀವನವನ್ನೇ ಭಗ ವಂತನಿಗೆ ಸಮರ್ಪಿಸಿ, ನಿರ್ವಿಕಾರ ಚಿತ್ತರಾಗಿ, ರಾಗದ್ವೇಷಗಳಿಂದ ದೂರಾಗಿ. ಯಾವ ಪರಿಸ್ಥಿತಿಗೂ ಅಂಜದೆ, ಅಳುಕದೆ, ಸತ್ಯವನ್ನು ಎತ್ತಿಹಿಡಿದು, ಸದಾಚಾರ, ಧರ್ಮ ಗಳನ್ನು ಜನತೆಗೆ ಬೋಧಿಸುತ್ತಾ, ತಮ್ಮೆಲ್ಲ ತಪಸ್ಸನ್ನೂ ಧಾರೆಯೆರೆದು ಜಗತ್ತಿಗೆ ಮಂಗಳದ ಮಳೆಗರೆಯುತ್ತಿದ್ದರು. ಯೋಗಶಕ್ತಿಯಿಂದ ಜಗತ್ತಿನಲ್ಲಿ ನಾಕವನ್ನು ನಿರ್ಮಿಸುತ್ತಿದ್ದರು, ನಾಡಿನ ಭವಿಷ್ಯವನ್ನು ನಿರ್ಧರಿಸಿ, ನುಡಿಗೆ ಸಿರಿತಂದೊಡ್ಡಿ, ಭಕ್ತಿಯ ಒಲಿಮೆಯಿಂದ ಭಗವಂತನನ್ನು ಸಾಕ್ಷಾತ್ಕರಿಸಿಕೊಂಡು ಆನಂದೋದ್ರೇಕ ದಿಂದ ಹಾಡಿ ಪಾಡಿ, ಅತ್ತು, ಅಳಿಸಿ, ನಕ್ಕು, ನಗಿಸಿ, ಕುಣಿದು-ಕುಣಿಸುತ್ತಿದ್ದರು ! ಅವರು ವಿಶಿಷ್ಟ ಶಾಸ್ತ್ರಸಂಪತ್ತನ್ನು ಜಗತ್ತಿಗೆ ಕರುಣಿಸಿದರು. ಉಪದೇಶಾಮೃತ ವನ್ನು ಉಸಿಣಿ ತಣಿಸುತ್ತಿದ್ದರು.

ಹೀಗೆ ನಮ್ಮ ಪ್ರಾಚೀನ ಸಾಧುಸಂತರ, ಅನುಭಾವಿಗಳ, ತತ್ವಜ್ಞಾನಿಗಳ,ದೈವ ಭಕ್ತರ ನಡೆನುಡಿ, ಜೀವನದ ಉಸಿರು-ಎಲ್ಲವೂ ಪರಮಪವಿತ್ರವಾಯಿತು. ಪರೋಪ ಕಾರಕವಾಯಿತು. ಸಂಜೀವಿನೀಸದೃಶವಾಯಿತು. ಅವರಲ್ಲಿ ಅಧಿಕಾರಲಾಲಸೆ, ದರ್ಪ ಕೀರ್ತಿಕಾಮನೆಗಳಿರಲಿಲ್ಲ, ಅಹಂಕಾರ ಮಮಕಾರಗಳು ಅವರತ್ತಲೂ ಸುಳಿಯುತ್ತಿರ ಲಿಲ್ಲ. ಸ್ವಾರ್ಥದ ಸುಳಿವೇ ಇರಲಿಲ್ಲ. ಮಾನವ ಸರಿಯಾದ ಸಂಸ್ಕೃತಿಯಲ್ಲಿ ನುರಿತರೆ,

ಧರ್ಮಶೀಲನಾದರೆ ಯಾವ ಒಂದು ಉಚ್ಚಮಟ್ಟವನ್ನು ಮುಟ್ಟಬಹುದೆಂಬುದನ್ನವರು ತಮ್ಮ ಜೀವನದಿಂದ ತೋರಿಕೊಟ್ಟರು. ಅವರ ಬಾಳು ಪ್ರೀತಿಯ ತವರಾಗಿತ್ತು, ಕಾರುಣ್ಯ ಮನೆಮಾಡಿತ್ತು, ಭಕ್ತಿ ಅವರ ಚೈತನ್ಯದಂತಿತ್ತು. ಆದ್ದರಿಂದಲೇ ಅವರು ಭಗವಂತನನ್ನು ಅಂಗೈಯಲ್ಲಿ ಆಡಿಸಿದರು. ಎಂತಹ ಆಪತ್ಸಮಯದಲ್ಲೂ ಅವರು ಮೋಹಜಾಲದಲ್ಲಿ ಸಿಲುಕುತ್ತಿರಲಿಲ್ಲ. ಅಂತೆಯೇ ಅವರು ಧಾರ್ಮಿಕ ಇತಿಹಾಸದಲ್ಲಿ ಮಹತ್ವ ಸ್ಥಾನಗಳಿಸಿ ಅಮರರಾದರು. ಇಂಥ ವಿಭೂತಿ ಪುರುಷರು ಜಗತ್ತಿಗೆ ಮಹದೈಶ್ವರ್ಯವನ್ನು ಕೊಡಲು ಶಕ್ತರಾಗಿದ್ದರೂ ತಾವು ಮಾತ್ರ ಕಡುಬಡವರಾಗಿರುತ್ತಿದ್ದರು. ಅಸ್ಖಲಿತ ಪಾಂಡಿತ್ಯವಿದ್ದರೂ ಅತಿಮಹಾಳಿಗಳಾಗಿರಲಿಲ್ಲ. ಸ್ವತಃ ಒಂದೊಂದು ಮತವನ್ನು ರಚಿಸಲು ಶಕ್ತರಾಗಿದ್ದರೂ ವೈದಿಕ ಮತದ ಎಲ್ಲೆಯನ್ನು ದಾಟದೆ, ಸನಾತನ ವೈದಿಕ ತತ್ತ್ವಗಳು, ಧರ್ಮಗಳಿಗೆ ತಲೆಬಾಗಿ ನಡೆಯುತ್ತಿದ್ದರು. ರಾಜಾಧಿರಾಜರು ಆಡಿಯಾಳುಗಳಾಗಿದ್ದರೂ ಅವರಿಗೆನಾಯಕತ್ವ ಬೇಕಿರಲಿಲ್ಲ. ಜಗತ್ತೇ ಎದುರಿಸಿದರೂ ಧರ್ಮಮಾರ್ಗ, ಸತ್ಸಂಪ್ರದಾಯ, ಪದ್ಧತಿ, ಭಗವನ್ನಿಷ್ಠೆಗಳಿಂದ ವಿಚಲಿತರಾಗುತ್ತಿರಲಿಲ್ಲ, ಜಗತ್ತಿನ ಒಡೆತನವೇ ಒಲಿದು, ತಮ್ಮ ಕಾಲಡಿಯಲ್ಲಿ ಬಿದ್ದಿದ್ದರೂ ಆ ಮಹನೀಯರು ಅದರತ್ತ ಕಣ್ಣುಹಾಯಿಸುತ್ತಿರಲಿಲ್ಲ. ಇದಕ್ಕೆ ಕಾರಣ ಇಷ್ಟೇ; ಅವರ ದೃಷ್ಟಿ ಸದಾ ಪರದ ಕಡೆಗಿರುತ್ತಿತ್ತು, ಶಾಶ್ವತ ಮೋಕ್ಷ ಸಾಮ್ರಾಜ್ಯವನ್ನು ಸಾಧಿಸಬೇಕೆಂದೇ ಸಾಧನಮಾರ್ಗದ ವ್ರತವನ್ನು ಹಿಡಿದು ಮಹಾತ್ಮರಿಗೆ ಅಶಾಶ್ವತವಾದ ಐಹಿಕ ಸಿರಿ-ಸಂಪತ್ತು ಪ್ರತಿಷ್ಠೆಗಳಲ್ಲಿ ಹಂಬಲವಿದ್ದೀತೇ? ಇಂತು ಉದಾತ್ತ ಚರಿತರಾದ್ದರಿಂದಲೇ ಇಂದಿಗೂ ಅವರು ಪ್ರಾತಃಸ್ಮರಣೀಯ ಪುಣ್ಯಶ್ಲೋಕರಾಗಿ, ಸರ್ವಮಾನ್ಯರಾಗಿ ಭಾರತೀಯ ಜನತೆಯ ಹೃದಯಸಿಂಹಾಸನದಲ್ಲಿ ಶಾಶ್ವತವಾಗಿ ನೆಲೆನಿಂತು ಕಂಗೊಳಿಸುತ್ತಿದ್ದಾರೆ! ಇಂಥವರು ನಮ್ಮ ಸಂಸ್ಕೃತಿಗೆ ಹಿರಿಮೆಯನ್ನು ತಂದುಕೊಟ್ಟ ಪುಣ್ಯಪುರುಷರು. ಭಾರತವು ಪ್ರಪಂಚಕ್ಕೆ ಆದರ್ಶವಾಗಿ, ಆದರ ಭಾರಹೊರುವಂತಾದುದು ಇಂಥ ವಿಭೂತಿಪುರುಷರಿಂದ, ಇಂಥ ಮಹನೀಯರನ್ನು ಪಡೆದ ಭಾರತೀಯರೇ ಭಾಗ್ಯಶಾಲಿಗಳು.

ಆದರೆ ಇಂದು ಅಂತಹ ಪುಣ್ಯಜೀವಿಗಳ ನಾಯಕತ್ವ ನಮ್ಮ ನಾಡಿಗೆ, ಜನತೆಗೆ ಇಲ್ಲದಿರುವುದೇ ಇಂದಿನ ವಿಪ್ಲವಗಳಿಗೆ ಕಾರಣವಾಗಿದೆ. ಈ ಎಲ್ಲ ಕಷ್ಟಪರಿಸ್ಥಿತಿ-ಗೊಂದಲಗಳಿಂದ ಪಾರಾಗಿ ಭಾರತದೇಶ ಹಿಂದಿನಂತೆ ಸರ್ವಾಂಗೀಣ ಉನ್ನತಿಗಳಿಸಿ ಮತ್ತೆ ಕಂಗೊಳಿಸಬೇಕಾದರೆ ನಮ್ಮ ಪ್ರಾಚೀನ ಪುಣ್ಯಪುರುಷರು ತೋರಿಕೊಟ್ಟ ಸನಾತನ ಧರ್ಮಮಾರ್ಗದಲ್ಲಿ ನಡೆಯುವುದೊಂದೇ ಉಪಾಯವಾಗಿದೆ. ಸನಾತನ ಧರ್ಮವೆಂದಕೂಡಲೇ ಒಂದು ವೇಷಧರಿಸಿದ ಚಿತ್ರ ಇಂದು ಎಲ್ಲರ ಮುಂದೆ ಬಂದು ನಿಲ್ಲುವುದು, ಆಧುನಿಕರ ಅಪಹಾಸ್ಯಕ್ಕೆ ಪಾತ್ರವಾದ ಚಿತ್ರವದು, ಧರ್ಮಭೂಮಿಯಾಗಿದ್ದ ನಮ್ಮ ಭಾರತ ದೇಶದಲ್ಲಿ ಧರ್ಮವೆಂದರೆ ಇಂದು ಸಮಾಜಕ್ಕೆ ಜಿಹಾಸೆಯಾಗಿದೆ. ಇದಕ್ಕೆ ಧರ್ಮದ ಹೆಸರಿನಲ್ಲಿ ನಡೆದಿರುವ ಸ್ಥಿತಿ ಬಹುಮಟ್ಟಿಗೆ ಕಾರಣ

ವಾಗಿದೆ. ಸ್ವಾರ್ಥಸಾಧನೆಗೆ ಇದೊಂದು ಮುಖವಾಡವೆಂಬ ಭಾವನೆ ಆಧುನಿಕರಲ್ಲಿ ಬೇರೂರಿದೆ, ಮೇಲುನೋಟಕ್ಕೆ ಇದು ನಿಜವೆನಿಸಿದರೂ, ನಿಜತತ್ವ ಹಾಗಿಲ್ಲ ಧರ್ಮದ ನಿಜವಾದ ಸ್ವರೂಪ ಪುಸ್ತಕಗಳ ಅಧ್ಯಯನ ಮಾತ್ರದಿಂದ ಅರಿಯಲು ಸಾಧ್ಯವಿಲ್ಲ, ಇತಿಹಾಸ ಸಂಶೋಧಕನಾದ ಮಾತ್ರಕ್ಕೆ ಅದರ ಅರಿವಾಗದು. ಅದು ಅನುಭವದಿಂದ ಮಾತ್ರ ಸಾಧ್ಯ. ಆಗ ವ್ಯಕ್ತವಾಗುವುದು ಅದರ ಅಗಾಧ ಮಹಿಮೆ. ಧರ್ಮವೆಂದರೆ ಡಂಬಾಚಾರವಲ್ಲ. ನಾಮಧಾರಣಮಾಡಿ, ಸ್ವಾರ್ಥಕ್ಕಾಗಿ ಶಾಸ್ತ್ರವಚನಗಳನ್ನು ಬಳಸಿ ಕೊಳ್ಳುವ ಪಾಂಡಿತ್ಯವಲ್ಲ-ಮುಸುಕಿನಲ್ಲಿ ಮಾಡುವ ಅನ್ಯಾಯವಲ್ಲ. ಇದು ಬಿಚ್ಚು ಹೃದಯದ ಹಚ್ಚ ಹಸನಾದ ಬಾಳು. ಕಲಿತಿದ್ದನ್ನು ಜೀವನದಲ್ಲಿ ಅಳವಡಿಸಿಕೊಳ್ಳುವ ವೈಖರಿ. ಅಸ್ಥಿರವನ್ನು ಅಮರವನ್ನಾಗಿಸುವ ಯೋಗ. ಅನಂತ ಸುಖವನ್ನು ಅನುಭವಕ್ಕೆ ತಂದುಕೊಡುವ ತಪಸ್ಸು. ಅದಕ್ಕೆ ಜನರ, ಸ್ಥಾನಮಾನಗಳ, ಐಹಿಕ ಪ್ರಲೋಭನಗಳ ದಾಕ್ಷಿಣ್ಯವಿಲ್ಲ, ಧರ್ಮದ ದೃಷ್ಟಿಯಲ್ಲಿ ಮನುಷ್ಯನ ನಿತ್ಯಪ್ರಶ್ನೆಗಳು ಕ್ಷುಲ್ಲಕ, ಅನಂತಕಾಲದ, ಅನಂತವಿಶ್ವದ, ಅನಂತವಿಧ ಸಮಸ್ಯೆಗಳಿಗೆ ಪರಿಹಾರರೂಪ ವಾದುದು ಸನಾತನ ಧರ್ಮ ! ಇದನ್ನು ಅಲ್ಪದೃಷ್ಟಿಯಿಂದ, ಸಂಕುಚಿತಕೋಣದಿಂದ ವಿಶಿಷ್ಟ ಕಾಲದೇಶಗಳ ನಿಲುವಿನಿಂದ ನೋಡಿ ಅಳೆಯುವುದು ತಪ್ಪಾದೀತು! ಅದರಿಂದ ನಮ್ಮ ಸಮಸ್ಯೆಗಳು ಬಗೆಹರಿಯಲಾರವು. ತ್ರಿಕಾಲಜ್ಞಾನಿಗಳಿಗೆ ಮಾತ್ರ ಧರ್ಮದ ನಿಜ ವಾದ ಅರಿವಾಗುವುದು. ಇತರರು ಅದನ್ನು ಚರ್ಚಿಸುವುದಕ್ಕಿಂತ ಅನುಸರಿಸುವುದೇ ಶ್ರೇಯಸ್ಕರ, ನಮ್ಮ ನಿತ್ಯದ ತೊಡರುಗಳಿಗೆ ಹುಡುಕುವ ಪರಿಹಾರವು, ಆ ಮಹಾ ಪರಿಹಾರರೂಪವಾದ ಧರ್ಮಕ್ಕೆ ಅವಿರುದ್ಧವಾಗಿದ್ದರೆ ಮಾತ್ರ ಕ್ಷೇಮವಾದೀತು.

ಜಗತ್ತಿನಲ್ಲಿ ನಾನಾವಿಧ ಸಮಸ್ಯೆಗಳು ಹಿಂದಿನಿಂದಲೂ ಎದ್ದು ನಿಲ್ಲುತ್ತಲೇ ಇವೆ. ಅದಕ್ಕೂ ಪರಿಹಾರವನ್ನು ಸನಾತನಧರ್ಮ ನೀಡುತ್ತಲೇ ಇದೆ. ಹೀಗೆ ಸರ್ವಾ ಲಿಂಗಿತವಾದ ಸಮಸ್ಯೆಗಳಿಗೆ ಸನಾತನಧರ್ಮರೂಪ ಪರಿಹಾರವನ್ನು ಕಂಡುಕೊಂಡವರು ನಮ್ಮ ಭಾರತೀಯರು. ಅವರು ಅದರ ತಳಹದಿಯ ಮೇಲೆ ನಮ್ಮ ಸಂಸ್ಕೃತಿಯೆಂಬ ಸುಂದರ ಮಂದಿರವನ್ನು ಕಟ್ಟಿ ಬೆಳಗಿಸಿದರು. ಆದ್ದರಿಂದ ಅದು ಅನಾದಿಯಾಗಿ ಅನಂತವಾಯಿತು. ಸಾಮೂಹಿಕ ಚಳುವಳಿಯಲ್ಲಿ ವೈಯಕ್ತಿಕ ಭಿನ್ನಾಭಿಪ್ರಾಯಕ್ಕೆ ಹೇಗೆ ಮನ್ನಣೆಯಿಲ್ಲವೋ, ಹಾಗೆ ಧರ್ಮದ ಮುಂದೆ ನಮ್ಮ ತಾತ್ಕಾಲಿಕ ಚಿತ್ರ. ದೊಡ್ಡವರ ಕ್ಷೇಮಕ್ಕಾಗಿ ಚಿಕ್ಕ ಸುಖ ತ್ಯಾಜ್ಯ ಮತ್ತು ಹೇಯ. ಈ ವಿಶಾಲದೃಷ್ಟಿ ಯಿಂದ ಸಭ್ಯತೆಯನ್ನು ನಮ್ಮವರು ಬೆಳೆಸಿದರು. ಅದರಲ್ಲಿ ಅಭಿಪ್ರಾಯ ಭೇದಕ್ಕೆ ಅವಕಾಶವಿದ್ದರೂ ಅದರಿಂದ ದೊಡ್ಡ ಹಾದಿಗೆ ಅಡ್ಡಿಯಿಲ್ಲ, ಆ ಭೇದಗಳೆಲ್ಲ ದೊಡ್ಡ ಮಾರ್ಗದಲ್ಲಿ ಲೀನವಾಗಿ ಬಿಡುತ್ತವೆ. ಇದೇ ಸಮನ್ವಯದೃಷ್ಟಿ. ಇಂಥ ಉದಾತ್ತ ಸಂಪತ್ತಿಗೆ ಉತ್ತರಾಧಿಕಾರಿಗಳಾಗುವುದೊಂದು ಭಾಗ್ಯವಿಶೇಷ. ಆದರೆ ಅದನ್ನು ಉಳಿಸಿಕೊಳ್ಳುವುದರಲ್ಲಿದೆ ನಮ್ಮ ಜಾಣತನ.

ವೈಯಕ್ತಿಕ ಸಾಧನೆಗೆ ಪೂ[illegible]ರಿಯಾಗಿ, ಸಮಸ್ತರ ಸೌಭಾಗ್ಯವನ್ನು ಒಟ್ಟುಗೂಡಿಸುವುದು ಧರ್ಮ, ಧಾರಣ ಧರ್ಮದ ಮೊದಲನೆಯ ಗುಣ. ಅದೇ ಅದರ ಜೀವನಾಡಿ.ಧರ್ಮ ಹಾರದಲ್ಲಿರುವ ದಾರವಿದ್ದಂತೆ.ಇದು ಧರ್ಮದ ಮುಖ್ಯ ತಿರುಳು. ಇದು ಜನಾಂಗದ ಅಭ್ಯುದಯಕ್ಕೆ ಜೀವಸ್ವರವಿದ್ದಂತೆ. ಇಂದು ದೇಶದಲ್ಲಿ ಉಂಟಾಗಿರುವ ಕ್ಷೋಭೆ ಧರ್ಮಗ್ಲಾನಿಯ ಫಲ. ಮಾನವರ ಐಕ್ಯತೆಗೆ ಮುಖ್ಯವಾಗಿ ಬೇಕಾಗುವ ಅಂಟಿಲ್ಲದೆ ಇಂದು ಒಬ್ಬರಮೇಲೊಬ್ಬರು ಕತ್ತಿಮಸೆಯುವಕಾಲ ಪ್ರಾಪ್ತ ವಾಗಿದೆ. ಸಹಾನುಭೂತಿ, ಸಹಕಾರ, ಸಹಾಯ ಸಮೂಲ ನಾಶವಾಗಿದೆ. ಧರ್ಮದ ಮೂಲಮಂತ್ರವೇ ಮರೆತುಹೋಗಿದೆ. ಇದು ಬಲಿತರೆ ವಿನಾಶವೇ ಫಲ. ಧರ್ಮದ ಪುನರುಜ್ಜೀವನವೇ ಇದಕ್ಕೆ ಮದ್ದು. ಪ್ರಪಂಚ ಸಂಸ್ಥೆಗಳು, ಬುದ್ಧಿವಂತಿಕೆಯ ಕಾಯಿದೆ, ಕಾನೂನು, ಕರಾರುಗಳು ಮಾನವರಲ್ಲಿನ ದಾನವತೆಯನ್ನು ಅಳಿಸಲಾರವು. ಅವು ಅದನ್ನು ಕೆರಳಿಸುತ್ತವೆ. ಪ್ರಪಂಚದಲ್ಲಿ ಧರ್ಮ ಸೌಹಾರ್ದ್ರ ನೀಡುತ್ತದೆ, ಈ ಪ್ರಥಮ ಪಾಠವನ್ನಿಂದು ಎಲ್ಲರೂ ಕಲಿಯಬೇಕಾಗಿದೆ. ಮತ, ಕಾನೂನು, ದಾಕ್ಷಿಣ್ಯ ಇದರ ಅರ್ಥವು ಒಟ್ಟುಗೂಡಿಸುವುದೇ ಆಗಿದೆ, ಧರ್ಮದ ಅರ್ಥವೂ ಅದೇ. ಒಟ್ಟು ಗೂಡಿಸುವುದೆಂದರೆ ಸಾಮಾಜಿಕ ಕಟ್ಟುಪಾಡು,ವರ್ಣವ್ಯವಸ್ಥೆಯನ್ನು ಕಿತ್ತು ಬಿಸುಟು ಹಾಕುವುದೆಂದಲ್ಲ ! ಐಕ್ಯತೆಯೆಂದರೆ ಜಾತ್ಯೈಕ್ಯತೆಯಲ್ಲ : ಮತ್ಯೈಕ್ಯತೆ! ಅದನ್ನು ನೀಡುವುದು ಸನಾತನ ಧರ್ಮ, ಸೌಹಾರ್ದವಿಲ್ಲದೆ ಶಾಂತಿಯಿಲ್ಲ, ಅದಿಲ್ಲದೆ ಪರಸ್ಪರ ದ್ವೇಷತಪ್ಪದು. ಆದ್ದರಿಂದ ಧರ್ಮವೇಸೌಹಾರ್ದ್ರಮೂರ್ತಿ, ದೇವರು,ಈಧರ್ಮಕ್ಕೆ ವೇದಾದಿ ಸಚ್ಛಾಸ್ತ್ರಗಳೇ ಮೂಲ. ಈ ತಳಹದಿಯ ಮೇಲಿನ ಧರ್ಮಮಂದಿರಕ್ಕೆ ಅನೇಕ ಭಾಗಗಳುಂಟು. ಅವೊಂದೊಂದೂ ಬಣ್ಣ ಬಣ್ಣವಾಗಿ ಕಂಗೊಳಿಸುವುದು. ಮನುಷ್ಯನ ಜೀವನ ಕರ್ತವ್ಯದಲ್ಲಿ ಇದು ಆಶ್ರಮಧರ್ಮವೆನಿಸುವುದು, ಬದುಕಿಗೆ ಬೇಕಾದ ಸಾಧನೆಗೆ ವರ್ಣಧರ್ಮವೆನ್ನಬಹುದು.ಕರ್ತವ್ಯಕುಶಲತೆಯೇಕರ್ಮಯೋಗ ಬದುಕಿನ ಗುರಿಯೇ ಮೋಕ್ಷ. ಮೋಕ್ಷದ ಸಾಧನೆ ಜ್ಞಾನ ಮತ್ತು ಭಕ್ತಿ. ಇದಕ್ಕೆ ಬೇಕಾದುದು ಮತ ಮತ್ತು ಇತರ ಸಾಧನೆಗಳು, ಹೀಗೆ ಭಗವಂತನಲ್ಲಿ ಭಕ್ತಿ(ಪ್ರೇಮ ವಿಶ್ವಾಸ) ಎಂಬ ತಾಯಿಬೇರಿನಿಂದ ಇದು ಶಾಖೋಪಶಾಖೆಗಳಾಗಿ ಒಡೆದು ನಮ್ಮ ಸನಾತನಧರ್ಮ ಇಂಥ ವ್ಯಾಪಕಸ್ವರೂಪವನ್ನು ಪಡೆದಿದೆ. ಇದರ ಮೂಲವರಿಯದೆ ಯಾವುದೋ ಒಂದು ಶಾಖೆಯನ್ನು ಎಲ್ಲಯೋ ದೃಷ್ಟಿಯಿಟ್ಟು ನೋಡುತ್ತಾ ಮರ ವನ್ನು ನಿಂದಿಸುವುದು ನಮ್ಮ ಅಲ್ಪತೆಯನ್ನು ತೋರುವುದೇ ವಿನಃ ಮರದ ಸೊಬಗು ಅದರಿಂದ ಕಡಿಮೆಯಾಗದು.

ನಮಗೆ ಈ ವಿಷಯದಲ್ಲಿ ಮಾರ್ಗದರ್ಶಕರೆಂದರೆ ಪ್ರಾಚೀನರಾದ ಪುಣ್ಯ ಶ್ಲೋಕರು. ಅವರು ಹಾಕಿಕೊಟ್ಟಿರುವ ಮಾರ್ಗದಲ್ಲಿ ಮುನ್ನಡೆಯುಲ್ಲಿ ನಮ್ಮ ಅಭ್ಯು ದಯ ನಿಶ್ಚಿತ. ಆದ್ದರಿಂದ ಉದ್ಧಾರಕ ಗುರುಗಳಾದ ಅವರಿಗೇ ನಾವು ಶರಣು ಹೋಗಬೇಕು.

ಎಲ್ಲ ದೇಶ ಕಾಲಗಳಲ್ಲಿಯೂ, ಎಲ್ಲಾ ಜನಾಂಗಗಳಲ್ಲೂ, ಎದ್ದು ಕಾಣುವ ಒಂದು ಮೂಲಭೂತಗುಣವಿದೆ. ಅದೇ ಗುರುಭಾವನೆ, ಭಕ್ತಿ! ಮಾನವನನ್ನು ರಾಕ್ಷಸೀಮಹತ್ವಾಕಾಂಕ್ಷೆಯಿಂದ, ಆಸುರೀಶಕ್ತಿಯ ಕಪಿಮುಷ್ಟಿಯಿಂದ ಬಿಡಿಸಿ ಅವನಲ್ಲಿ ಮಾನವೀಯತೆಯ ಪರಾಕಾಷ್ಠತೆಯನ್ನು ಮೈದುಂಬಿಸಿ, ಸಾತ್ವಿಕತೆಯ ಪೀಯೂಷದೊರತೆಯನ್ನು ಮಾನವನ ಹೃದಯ ಸರೋವರದಲ್ಲಿ ಪುಟಿದೇಳುವಂತೆ ಮಾಡಿ. ಕಾರುಣ್ಯಾಮೃತಸೇಚನದಿಂದ ಸದ್ಭಾವನೆ,ಆಸ್ತಿಕತೆ, ಶಾಂತಿ,ಲೋಕಕಲ್ಯಾಣ ದೀಕ್ಷೆ, ಧರ್ಮಮಾರ್ಗ ಪ್ರವೃತ್ತಿ, ತಾತ್ವಿಕ ಪ್ರಜ್ಞೆಗಳನ್ನು ಅವನಲ್ಲಿ ಉಜ್ವಲಗೊಳಿಸುವ ಒಂದು ಮಹಾಶಕ್ತಿಯೇ ಗುರುಭಕ್ತಿ! ಅದು ಸುಜೀವಿಗಳಿಗೆ ದಾರಿತೋರುವ ದಿವ್ಯದೀಪ. ಸಂಸಾರದ ಕಷ್ಟಕೋಟಲೆಗಳಿಂದ ಬಳಲಿ ಬೆಂಡಾಗಿ ಬೇಸತ್ತಾಗ ಬಳಲಿದ ಜೀವ ಒಂದು ಆಧಾರವನ್ನು ಅರಸುತ್ತಿರುತ್ತದೆ. ಅದೃಶ್ಯರೂಪಿಯಾದ ಪರಮಾತ್ಮನ ಚಿಂತನಕ್ಕೆ ಬೇಕಾದಸಹನೆ,ಸಂಸ್ಕಾರಗಳ ತಿಳುವುಮೂಡದ ಆ ಜೀವಕ್ಕೆ ಪ್ರತ್ಯಕ್ಷವಾಗಿ ಮಾರ್ಗದರ್ಶನಮಾಡುವ ಒಂದು ಸಮರ್ಥವಾದ ದಿವ್ಯಶಕ್ತಿ ಬೇಕಾಗುತ್ತದೆ.ಅಂತಹ ಜೀವ, ತನ್ನ ಸ್ವರೂಪೋದ್ಧಾರಕನನ್ನು ಅರಸುವುದು ಸ್ವಾಭಾವಿಕ.

ಇಂಥ ಉಪದೇಶ-ಮಾರ್ಗದರ್ಶನಗಳಿಂದ ಉದ್ದೀಪಿತವಾದ, ಪ್ರೇರಿತವಾದ ಸಮಾಜವು, ತನ್ನ ನೈತಿಕ ಮಟ್ಟವನ್ನು ಉಳಿಸಿಕೊಂಡು, ಶಾಂತಿ ಸಮಾಧಾನಗಳ ಭೂಮಿಕೆಯಮೇಲೆ ಪಾರಮಾರ್ಥಿಕ-ಧಾರ್ಮಿಕ ಮಹಲನ್ನೇ ನಿರ್ಮಿಸಿತ್ತು! ಮಾತ್ರವಲ್ಲ; ಸಮಸ್ತವಿಶ್ವಕ್ಕೇ ಇಂತಹ ನಮ್ಮ ಸಮಾಜವು ಶಾಂತಿ, ಧರ್ಮ, ನೀತಿ, ತತ್ವ, ಮಾನವೀಯತೆಗಳ ಮಹಾಮಂತ್ರವನ್ನು ಉಪದೇಶಿಸುವ ಮಹತ್ವಪೂರ್ಣ ಆದರ್ಶ ಸ್ಥಾನವನ್ನು ಪಡೆದಿತ್ತು! ಇಂಥಾ ಧಾರ್ಮಿಕಸಮಾಜವನ್ನು ಪಾರಮಾರ್ಥಿಕಪಥದಲ್ಲಿ ಮುನ್ನಡೆಯಿಸಿದವರು ನಮ್ಮ ಪ್ರಾಚೀನ ಋಷಿಮುನಿಗಳು.ವೇದ,ಉಪನಿಷತ್ತು ಪುರಾಣ, ಇತಿಹಾಸಗಳ, ಕೊನೆಗೆ ಇತ್ತೀಚಿನ ಚಾರಿತ್ರಿಕ ಹಿನ್ನೆಲೆಯಲ್ಲಿ ಕೂಡ ವಿವೇಚಿಸಿದಾಗ ಎದ್ದುಕಾಣುವ ಪೂಜ್ಯಹಿರಿಯ ವ್ಯಕ್ತಿ ಗುರುಗಳು! ಗುರು ಕೇವಲ ಒಂದು ವ್ಯಕ್ತಿಯಲ್ಲ,ದಿವ್ಯಶಕ್ತಿ! ಆ ಶಕ್ತಿಯು ಸಜೀವವಾಗಿ ಮಾನವರ ಮನಶ್ಶಕ್ತಿಯನ್ನೇ ನಿಯಂತ್ರಿಸುತ್ತಿತ್ತು! ಪ್ರತಿವ್ಯಕ್ತಿಯ ಗುಣ-ಧರ್ಮಗಳನ್ನು ವಿಶ್ಲೇಷಿಸಿ, ಅವರವರ ಸ್ಥಾನಗಳನ್ನು ನಿರ್ಧರಿಸಿ,ಸಮಾಜದಲ್ಲಿ ಅದಕ್ಕೆ ತಕ್ಕಂತೆ ಸ್ಥಾನಮಾನಗಳು ದೊರಕುವಂತೆಮಾಡಿ, ಧರ್ಮದ ಅಚ್ಚುಕಟ್ಟಿಗೆ ಅಳವಡಿಸಿ ಪೋಷಿಸುತ್ತಿತ್ತು. ಅಲ್ಲಿ ಕನಿಷ್ಠ-ಗರಿಷ್ಠಗಳ ಕಲ್ಪನೆ-ತಪ್ಪುಭಾವನೆಗಳಿಗೆ ಸ್ವಲ್ಪವೂ ಅವಕಾಶವಿರಲಿಲ್ಲ, ಅಂತೆಯೇ ದೈವೀಭಾವನೆಯ ಜೊತೆಗೆ; ಗುರುಭಾವನೆಯೂ ಬೆರೆತು ನಡೆದು ಬಂದಿತು, ನಮ್ಮ ಸನಾತನಧರ್ಮದ ಮಹಾಪಥದಲ್ಲಿ !

"ಶ್ರೀಗುರುಭ್ಯೋನಮಃ" ಎಂಬ ಮಂತ್ರ, ಆಬ್ರಹ್ಮಸ್ತಂಭಪರ್ಯಂತವಾಗಿ ಓತಪ್ರೋತವಾಗಿ ಮಾನವರ ಮನೋಭೂಮಿಯಲ್ಲಿ ಹರಿದುಬಂದಿತು. ಭಾರತೀಯತೆಯ

ಅಚ್ಚುಕಟ್ಟಿನಲ್ಲಿ ಈ ಮಂತ್ರವಿಲ್ಲದೆ ಯಾವ ಕಾರ್ಯವೂ ನಡೆಯಲಾರದು. ಅಂದು ಈ ಭಾವನೆ ಹೃತ್ಪೂರ್ವಕವಾಗಿ ಆಚರಣೆಯಲ್ಲಿ ಕಂಡುಬರುತ್ತಿತ್ತು. ಇಂದಿನಂತೆ ಅದು ಕೇವಲ ಪ್ರದರ್ಶನಕ್ಕಾಗಿ, ಢಾಂಭಿಕತನದಿಂದ, ಮತ್ತೊಬ್ಬರನ್ನು ವಂಚಿಸುವ ಸಂಚಾಗಿರಲಿಲ್ಲ! ಮಾಧ್ವರ ಮಟ್ಟಿಗೆ ಹೇಳುವುದಾದರೆ; ಇದನ್ನು ಎತ್ತಿಹಿಡಿದವರೆಂದರೆ ಶ್ರೀಮಧ್ವಾಚಾರ್ಯ ಪೀಠಾಧಿಪತಿಗಳು. "ತದಲಂ ಬಹುಲೋಕವಿಚಿಂತನಯಾ ಪ್ರವಣಂ ಕುರು ಮಾನಸವಿಾಶಪದೇ !" ಎಂಬ ಆಚಾರ್ಯ ಮಧ್ವರ ಆದೇಶವನ್ನು ಶಿರಸಾವಹಿಸಿ, ಲೌಕಿಕವಾದ ಆರ್ಥಿಕಾದಿ ದೃಷ್ಟಿಯನ್ನು ದೂರವಮಾಡಿ, ಕೇವಲ ಪಾರಮಾರ್ಥಿಕಚಿಂತನೆ-ಸಾಧನಗಳಲ್ಲಿಯೇ ತಲ್ಲೀನರಾಗಿ ಗುರುಭಕ್ತಿಪರಾಯಣರಾದ್ದರಿಂದಲೇ ನಮ್ಮ ಶ್ರೀಮಧ್ವಪೀಠಾಧಿಪತಿಗಳು ಇಂದಿಗೂ ಜಗನ್ಮಾನ್ಯರಾಗಿ ಲೋಕಕಲ್ಯಾಣಶಕ್ತರೆಂದು ಕೀರ್ತಿಗಳಿಸಿ ಸರ್ವಸಜ್ಜನರ ಹೃತ್ಪೀಠದಲ್ಲಿ ಶಾಶ್ವತವಾದ ಸ್ಥಾನವನ್ನು ಗಳಿಸಿದ್ದಾರೆ.

ಭಾರತದಲ್ಲಿ ಪ್ರವೃತ್ತವಾದ, ಬೆಳೆದುಬಂದು ಎಲ್ಲ ಮತ, ಧರ್ಮ-ಪಂಥಗಳು ಗುರುಶಬ್ದೋಚ್ಚಾರಣೆಯಿಲ್ಲದೆ ಮುಂದೆ ಹೆಜ್ಜೆಯಿಟ್ಟಿಲ್ಲ.ವೇದ-ಉಪನಿಷತ್ತು ಪುರಾಣಗಳಲ್ಲಿ ಗುರು-ಶಿಷ್ಯರ ಬಗೆಗಿನ ಅನೇಕ ಕಥೆ, ಉಪಾಖ್ಯಾನಗಳನ್ನು ನಾವು ಕಾಣಬಹುದು. ಅಲ್ಲಿ ತೋರುವ ಗುರುಶಿಷ್ಯಬಾಂಧವ್ಯ ಅನುಪಮವಾದುದು. ಆ ಕಥಾನಕಗಳಲ್ಲಿ ಗುರುಭಕ್ತಿ-ಶಿಷ್ಯವಾತ್ಸಲ್ಯಗಳೇ ತುಂಬಿತುಳುಕುತ್ತಿವೆ. ಅಜ್ಞನಾಗಲಿ ಪ್ರಾಜ್ಞನಾಗಲಿ, ಗುರ್ವನುಗ್ರಹ-ನಿರ್ದೇಶನ-ಉಪದೇಶಗಳಿಲ್ಲದೆ ಮುಂದುವರೆಯಲು ಸಾಧ್ಯವೇ ಇಲ್ಲ. ತಮ್ಮ ಬುದ್ಧಿಚಾತುರ್ಯದಿಂದ ಐಹಿಕವಾಗಿ, ಆರ್ಥಿಕವಾಗಿ ಕೆಲವರು ಮುಂದೆ ಬಂದಿರಬಹುದು, ಮತ್ತು ಸರ್ವಸ್ವವನ್ನೂ ಕಳೆದುಕೊಂಡೂ ಇರಬಹುದು. ಆದರೆ ಜೀವರ ಉದ್ಧಾರಕ್ಕೆ ಕಾರಣವಾದ, ಅಲೌಕಿಕವಾದ, ಆತ್ಮೋದ್ಧಾರಕವಾದ ಪಾರಮಾರ್ಥಿಕ ಸಾಧನಮಾರ್ಗದಲ್ಲಂತೂ ಗುರುವಿಲ್ಲದೇ, ಗುರ್ವನುಗ್ರಹವಿಲ್ಲದೆ, ನಮ್ಮಲ್ಲಿ ಮಾತ್ರವಲ್ಲ; ಜಗತ್ತಿನ ಎಲ್ಲ ಧರ್ಮ-ಮತ-ಪಂಥಗಳಲ್ಲಿಯೂ ಮುನ್ನಡೆಯಲು ಸಾಧ್ಯವೇಇಲ್ಲ. ಅಂತೆಯೇ ಹರಿದಾಸಶಿರೋಮಣಿಗಳಾದ ಶ್ರೀಪುರಂದರದಾಸರು "ಗುರುವಿನ ಗುಲಾಮನಾಗುವತನಕ ! ದೊರೆಯದಣ್ಣ ಮುಕುತಿ !" ಎಂದು ಸಾರಿದ್ದಾರೆ !

ಇತರ ಎಲ್ಲ ಮತಗಳಕಿಂತ ಶ್ರೀಮಧ್ವಮತದಲ್ಲಿ ಗುರುವಿನ ಸ್ಥಾನ ಅತ್ಯಂತ ಹಿರಿದಾದುದು, ವೈಶಿಷ್ಟ್ಯಪೂರ್ಣವಾದುದು. ಇತರ ಮತಗಳಲ್ಲಿ ಅದ್ವೈತಮತದಲ್ಲಂತೂ ಈ ಭಾವನೆಗೆ ಅವಕಾಶವೇ ಇಲ್ಲ. ಏಕೆಂದರೆ ಆ ಮತವು ಜೀವೇಶ್ವರರಿಗೆ ಐಕ್ಯವನ್ನು ಪ್ರತಿಪಾದಿಸುತ್ತದೆ. ಅಲ್ಲಿ ಜೀವರೆಲ್ಲರೂ ಬ್ರಹ್ಮರೇ ಆಗುತ್ತಾರೆ !, ಅಲ್ಲಿ ಸರ್ವಜ್ಞನೂ, ಸರ್ವೋತ್ತಮನೂ, ಸರ್ವಶಕ್ತನೂ,ಸ್ವತಂತ್ರನೂ, ಪೂರ್ಣನೂ

ಆದ ಪರಮಾತ್ಮ, ಅಲ್ಪಜ್ಞನೂ, ಅಲ್ಪಶಕ್ತನೂ, ಅಸ್ವತಂತ್ರನೂ ಅಪೂರ್ಣನೂ, ದೋಷವಿಶಿಷ್ಟನೂ ಆದ ಜೀವ, ಇಂಥ ಜೀವಕೋಟಿ ಪ್ರವಿಷ್ಟನಾದ ಗುರುವು.ಹೀಗೆ ಎಲ್ಲರೂ ಒಂದೇಆಗಿ "ಸೋಽಹಂ" ಎಂಬ ಉಪಾಸನೆಯೇ ಆ ಮತದಲ್ಲಿ ಉಪದಿಷ್ಟವಾಗಿರುವುದರಿಂದ, ನಿಜವಾಗಿ ವಿಚಾರಮಾಡಿದರೆ ಅಲ್ಲಿ ಗುರು-ಶಿಷ್ಯಭಾವನೆಗೆ ಅವಕಾಶವೆಲ್ಲಿಂದ ಬಂದೀತು !

ಭಗವಂತನನ್ನು ಒಲಿಸಿಕೊಳ್ಳಲು ಭಕ್ತಿ (ಪ್ರೇಮ) ಅತಿ ಮುಖ್ಯ. ಅದ ಭಗವನ್ಮಾಹಾತ್ಮ್ಯಜ್ಞಾನಪೂರ್ವಕವಾಗಿರಬೇಕು.[1] ಅಂಥ ಪರಮಾತ್ಮನ ಮಹಾತ್ಮ್ಯಜ್ಞಾನವು ಅವನ ಅನಂತಗುಣಗಳಿಂದ ಪೂರ್ಣವಾದ,ಅವನ ಸತ್ವತತ್ತ್ವ-ಲೀಲಾವಿಲಾಸಗಳ ಶ್ರವಣ, ಅಧ್ಯಯನಾದಿಗಳಿಂದ ಉಂಟಾಗುವುದು. ಅದನ್ನು ವೇದಾದಿಶಾಸ್ತ್ರಗಳು ನಿರೂಪಿಸುವವು. ಅಂಥ ವೇದಾದಿಶಾಸ್ತ್ರಗಳಲ್ಲಡಗಿರುವ ಪರಮಾತ್ವತತ್ತ್ವ, ಪ್ರಮೇಯ, ಮಾಹಾತ್ಮ್ಯಾದಿಗಳನ್ನು ಬೋಧಿಸುವವರು ಗುರುಗಳಾದ್ದರಿಂದ, ಅಂಥ ಭಗವಂತನಲ್ಲಿ ಭಕ್ತಿಯನ್ನುಂಟುಮಾಡುವುದು ಗುರುಭಕ್ತಿಯಾದುದರಿಂದ[2] ಶ್ರೀಹರಿಭಕ್ತಿಗೆ ಗುರುಭಕ್ತಿಯು ಮುಖ್ಯವಾದ್ದರಿಂದ, ಮಹಾಪ್ರಭುವಾದ ಶ್ರೀಹರಿಯಲ್ಲಿ ಶ್ರೇಷ್ಠವಾದ ಭಕ್ತಿಯು ಎಂತು ಆವಶ್ಯಕವೋ, ಅದರಂತೆಯೇ ಗುರುಗಳಲ್ಲಿಯೂ, ಉತ್ತಮ ಭಕ್ತಿ ಮಾಡಬೇಕು. ಹಾಗೆ ಮಾಡುವುದರಿಂದ ಗುರುಗಳು ಬೋಧಿಸದೇ ಇರುವ ಅನೇಕ ವಿಚಾರಗಳು, ಅರ್ಥಗಳೂ ಶಿಷ್ಯರಿಗೆ ತಿಳಿಯುತ್ತವಾದ್ದರಿಂದ ಗುರುಭಕ್ತಿ ಆವಶ್ಯವೆಂದು ವೇದಗಳೇ ಸಾರುತ್ತಿವೆ.[3] ಒಂದುವೇಳೆ ಹರಿಯು ಕುಪಿತನಾದರೆ ಗುರುಗಳು ಕಾಪಾಡಬಲ್ಲರು. ಗುರುಗಳು ಕುಪಿತರಾದರೆ, ಯಾರೂ ಅಂಥವರನ್ನು ರಕ್ಷಿಸಲಾರರು.[4] ಗುರುಗಳು ಸುಪ್ರೀತರಾದರೆ ಸಾಧಿಸಲಾಗದ್ದಾವುದೂ ಇಲ್ಲ !

ಇಂತಹ ಗುರುಶಿಷ್ಯ ಪರಂಪರೆಯು ಅವ್ಯಾಹತವಾಗಿ ನಡೆದುಬಂದಿತ್ತು, ನಮ್ಮ ಭಾರತದಲ್ಲಿ; ಮುಖ್ಯವಾಗಿ ಮಾಧ್ವಸಮಾಜದಲ್ಲಿ. ವೇದಾದಿಗಳಲ್ಲಿ ಉಕ್ತವಾಗಿರುವ ಈ ಗುರು-ಶಿಷ್ಯರ ಮಧುರ-ಅಮರ ಬಾಂಧವ್ಯದ ಅಮೃತಬೀಜವನ್ನು ಸಜ್ಜನರ ಹೃದಯಭೂಮಿಯಲ್ಲಿ ಬಿತ್ತಿದ ಮಹಾನುಭಾವರು ದ್ವೈತಸಿದ್ಧಾಂತ ಪ್ರತಿಷ್ಠಾಪಕರೂ ಜೀವೋತ್ತಮರೂ, ಶ್ರೀವಾಯುದೇವರ ಮೂರನೆಯ ಅವತಾರರೂ;

---

1. ಮಾಹಾತ್ಮ್ಯಜ್ಞಾನಪೂರ್ವಸ್ತು ಸುದೃಢಸ್ಸರ್ವತೋಽಧಿಕಃ। ಸ್ನೇಹೋಭಕ್ತಿರಿತಿ ಪ್ರೋಕ್ತಾ ತಯಾ ಮುಕ್ತಿರ್ನಚಾನ್ಯಥಾ॥" —ಶ್ರೀಮದಾನಂದತೀರ್ಥಭಗವತ್ಪಾದರು
2. "ಮುಕುಂದಭಕ್ತ್ಯೈ ಗುರುಭಕ್ತಿಜಾಯೈ" —ಶ್ರೀಸುಮಧ್ವವಿಜಯ
3. "ಯಸ್ಯ ದೇವೇ ಪರಾ ಭಕ್ತಿಃ । ಯಥಾದೇವೇ ತಥಾ ಗುರೌ ॥"
ತಸ್ಯೈತೇಕಥಿತಾಹ್ಯರ್ಥಾಃ । ಪ್ರಕಾಶಂತೇ ಮಹಾತ್ಮನಃ ॥"
—ಶ್ವೇತಾಶ್ವತರೋಪನಿಷತ್
4. "ಹರೌ ರುಷ್ಟೇ ಗುರುಸ್ತ್ರಾತಾ । ಗುರೌ ರುಷ್ಟೇ ನ ಕಶ್ಚನ ॥"

ವೇದಪ್ರತಿಪಾದ್ಯಮಹಿಮರೂ ಆದ ಶ್ರೀಮಧ್ವಾಚಾರ್ಯರು,ಸರ್ವರ ಉದ್ಧಾರ-ಕಲ್ಯಾಣಗಳಿಗಾಗಿ ಅವರು ಬಿತ್ತಿದ ಭಕ್ತಿ ಬೀಜವು ಅಂಕುರಿಸಿ, ಚಿಗುರೊಡೆದು, ಶಾಖೋಪಶಾಖೆಗಳಾಗಿ ಕುಸುಮಿತವಾಗಿ ಫಲಭರಿತವಾಯಿತು.-ಶ್ರೀ ಪದ್ಮನಾಭ-ನರಹರಿ-ಮಾಧವ-ಅಕ್ಷೋಭ್ಯತೀರ್ಥ ರಾಜೇಂದ್ರ-ಕವೀಂದ್ರ-ಮಿಬಧೇಂದ್ರ-ಲಕ್ಷ್ಮೀನಾರಾಯಣಮುನಿ (ಶ್ರೀಪಾದರಾಜರು.) ವ್ಯಾಸರಾಜ-ವಿಜಯೀಂದ್ರ- ವಾದಿರಾಜ-ಸುಧೀಂದ್ರ-ಶ್ರೀರಾಘವೇಂದ್ರಸ್ವಾಮಿಗಳವರಿಂದ !

ಶಾಸ್ತ್ರಗಳಲ್ಲಿ ಗುರುಗಳೆಂದರೆ ಯಾರು? ಅವರ ಲಕ್ಷಣಗಳೇನು? ಎಂಬುದನ್ನು ಅತಿಸುಂದರವಾಗಿ ನಿರೂಪಿಸಿದ್ದಾರೆ. ಗು-ಅಂಧಕಾರ,ರು-ಅದನ್ನು ಪರಿಹರಿಸುವವರು[1] ಅಂದರೆ, ಶಿಷ್ಯರ ಮನದಲ್ಲಿ ಮನೆಮಾಡಿರುವ ಅಜ್ಞಾನವೆಂಬ ಕತ್ತಲೆಯನ್ನು ಹೊಡೆದೋಡಿಸಿ,ಜ್ಞಾನಜ್ಯೋತಿಯ ಪ್ರಕಾಶವನ್ನು ಕರುಣಿಸುವವರೇ ನಿಜವಾದ ಗುರುಗಳು!ಗುರುಗಳಾದವರಿಗೆ ತತ್ತ್ವವಿಷಯದಲ್ಲಿ ಅಜ್ಞಾನ,ವಿಪರೀತಜ್ಞಾನ,ಸಂಶಯಾದಿಗಳಿರಬಾರದು, ಮತ್ತು ಶಿಷ್ಯರ ಎಲ್ಲ ಸಂಶಯಗಳನ್ನು ಪರಿಹರಿಸುವವರೇ ಗುರುಗಳೆಂದು ಜ್ಞಾನಿಗಳು ಹೇಳುವರು.[2] ಗುರುಗಳು ಶಿಷ್ಯರ ಚಿತ್ತಾಪಹಾರಕರಾಗಿರಬೇಕೇ ಹೊರತು, ಶಿಷ್ಯರ ವಿತ್ತಾಪಹಾರಕರಾಗಿರಬಾರದು ! ಹೀಗೆ ಶಾಸ್ತ್ರಾದಿಗಳಲ್ಲಿ ಉಕ್ತವಾದ "ಸದ್ಗುರುಲಕ್ಷಣ" ಯುಕ್ತರಾಗಿದ್ದರು. ಶ್ರೀಮಧ್ವಾಚಾರ್ಯರ ಶಿಷ್ಯಪರಂಪರೆಯಲ್ಲಿ ಬಂದ ಮೇಲ್ಕಂಡ ಮಹನೀಯರುಗಳು. ಇಂಥ ಜ್ಞಾನ-ಭಕ್ತಿ-ವೈರಾಗ್ಯ, ತಪಸ್ಸು, ಕಾರುಣ್ಯಾದಿ ಸಕಲಸದ್ಗುಣಭರಿತರೂ "ಸದ್ಗುರುಲಕ್ಷಣ"ಗಳಿಂದದೇದೀಪ್ಯಮಾನರಾಗಿದ್ದವರು ನಮ್ಮ ಜಗದ್ಗುರುಗಳಾದ ರಾಘವೇಂದ್ರ ಗುರುಸಾರ್ವಭೌಮರು!

ಮೇಲೆ ನಿರೂಪಿಸಿದ ಈ ಲಕ್ಷಣಯುಕ್ತರಾದ ಶ್ರೀಮದಾಚಾರ್ಯ ಪರಂಪರೆಯ ಜ್ಞಾನಿವರ್ಯರು ಇತರ ಮತೀಯ ಸಾಧುಸಂತ-ಗುರುಗಳು ಮುಖ್ಯವಾಗಿ ವಿಶ್ವಗುರುಗಳಾದ ಶ್ರೀರಾಘವೇಂದ್ರಸ್ವಾಮಿಯವರ ಉಪದೇಶದಂತೆ ಮುನ್ನಡೆದು ಎಲ್ಲ ವಿಧ ಅಭ್ಯುದಯಗಳನ್ನು ಸಾಧಿಸಿಕೊಂಡು ಕೀರ್ತಿಗಳಿಸಿದ ಭಾರತದೇಶದಲ್ಲಿಂದು ಕಲಿ-ಪ್ರಾಬಲ್ಯದಿಂದ, ಪರಕೀಯ ವಿದ್ಯೆ, ಭಾಷೆ, ಸಂಸ್ಕೃತಿ, ಸಭ್ಯತೆಯ ಮೋಹಗಳಿಂದ ಪವಿತ್ರ ದೈವಿಭಾವನೆ, ಗುರುಭಾವನೆ,ತಾತ್ವಿಕ-ಧಾರ್ಮಿಕ-ಸಾಂಸ್ಕೃತಿಕ-ಆಚಾರ-ವ್ಯವಹಾರ-ಭಕ್ತಿ ಮುಂತಾದುವು ನಶಿಸುತ್ತಾ ಬಂದಿರುವುದು ದೇಶದ ದೌರ್ಭಾಗ್ಯವೆಂದರೆ ತಪ್ಪಾಗದು. ಇಂಥ ಕಠಿಣ ಪರಿಸ್ಥಿತಿಯಲ್ಲಿಯೂ ಜನಮನದಲ್ಲಿ ಭಕ್ತಿ-ಶ್ರದ್ಧೆಗಳನ್ನು ಹುಟ್ಟಿಸಿ, ಅತೀಂದ್ರಿಯ ವಸ್ತುಗಳಲ್ಲಿ ನಂಬಿಕೆ, ದೈವೀಭಾವನೆಗಳನ್ನು ಪ್ರಚೋದಿಸಿ ಮಾನಸಿಕ ಶಾಂತಿ-ಸೌಖ್ಯಗಳನ್ನು ಕರುಣಿಸುತ್ತಾ, ಇನ್ನೂ ಆ ಸತ್ಪರಂಪರೆಯನ್ನು

---

1. ಗುಶಬ್ದಸ್ತ್ವಂಧಕಾರಸ್ಯಾದ್ರುಶಬ್ದಸ್ತನ್ನಿವರ್ತಕಃ ॥"
2. "ಅಸಂಶಯಃ ಸಂಶಯಚ್ಛಿತ್ ಗುರುರುಕ್ತೋ ಮನೀಷಿಭಿಃ ॥"

ರಕ್ಷಿಸಿಕೊಂಡು ಬರುತ್ತಿದೆ, ಶ್ರೀರಾಘವೇಂದ್ರಗುರುವರರ ದೇದೀಪ್ಯಮಾನವಾದ ದಿವ್ಯತೇಜಸ್ಸು ಮತ್ತು ಆ ಪರಮಮಂಗಳಕರ ನಾಮ !

ಶ್ರೀಗುರುರಾಜರು ನಮಗಿಂದು ದೊರಕಿರದಿದ್ದರೆ, ಅವತರಿಸದಿದ್ದರೆ....? ಈ ಹೊತ್ತಿಗೆ ವೈದಿಕತತ್ವ ಧರ್ಮ,ಸಂಸ್ಕೃತಿ, ಸದಾಚಾರ-ಭಾಗವತಧರ್ಮ,ಹರಿವಾಯು ಗುರುಭಕ್ತಿಯುಕ್ತವಾದ ಸತ್ಪರಂಪರೆಗಳು ಹೇಳಹೆಸರಿಲ್ಲದಂತಾಗುತ್ತಿತ್ತೋ ಏನೋ! ಆ ಮಹಾಮಹಿಮರು ನಮಗೆ ದೊರಕಿರುವುದು ಭಾರತದ ಸೌಭಾಗ್ಯ. ದೇವರನ್ನೂ, ಪರಲೋಕಾದಿ ಅತೀಂದ್ರಿಯ ವಸ್ತುಗಳನ್ನೂ ನಂಬದ ನಾಸ್ತಿಕರಲ್ಲೂ ದೈವೀಭಾವನೆ ಗುರುಭಾವನೆಗಳನ್ನು ಜಾಗೃತಗೊಳಿಸಿ, ಭೌತಿಕವಿಜ್ಞಾನ ಶಕ್ತಿಯಿಂದಲೂ ಪೂರ್ಣ ಗೊಳಿಸಲು,ಅಸಾಧ್ಯವಾದುದನ್ನು ತಮ್ಮ ಜ್ಞಾನ-ಭಕ್ತಿ-ತಪಸ್ಸು,ಯೋಗಶಕ್ತಿಗಳಿಂದ ಪ್ರತ್ಯಕ್ಷವಾಗಿ ಸಾಧಿಸಿತೋರುತ್ತಾ ಪರಮಾತ್ಮನ, ತತ್ವ, ಧರ್ಮಗಳ ಅಸ್ತಿತ್ವವನ್ನು ಎತ್ತಿ ಹಿಡಿದು ಲೋಕಕಲ್ಯಾಣ ಮಾಡುತ್ತಿದ್ದಾರೆ ! ಅಂತೆಯೇ ನಾಸ್ತಿಕಮಯವಾದ ಭೌತಿಕವಿಜ್ಞಾನಯುಗವೆನಿಸಿದ ಇಂದು ಶ್ರೀಗುರುರಾಯರು ಕೇವಲ ಭಾರತದಲ್ಲಿ ಮಾತ್ರವಲ್ಲದೆ, ಅಖಂಡ ವಿಶ್ವದಲ್ಲೆಲ್ಲಾ "ಮಹಾವಿಭೂತಿ ಪುರುಷರು, ಮಾನವ ಜನಾಂಗದ ಹಿತೈಷಿಗಳಾದ ಉದ್ಧಾರಕ ಗುರುಗಳು"ಎಂದು ವಿಖ್ಯಾತರಾಗಿ ಜಗನ್ಮಾನ್ಯ ರಾಗಿದ್ದಾರೆ. ಇಂಥ ಮಹನೀಯರು ಯಾವ ಸತ್ತತ್ವಗಳ ಧರ್ಮಗಳ ಉಪದೇಶ ಗಳನ್ನು ಜೀವನದಲ್ಲಿ ಅಳವಡಿಸಿಕೊಂಡು, ಉಪಾಸನೆ ಮಾಡಿ, ಜಗತ್ತಿಗೆ ಉಪದೇಶಿಸಿ ದರು ? ಅವರ ಸತ್ಪರಂಪರೆ ಯಾವುದು ? ಎಂಬುದನ್ನೀಗ ಸ್ವಲ್ಪ ವಿವೇಚಿಸುವುದು ಅವಶ್ಯವಾಗಿದೆ.

ಶ್ರೀಹರಿಯ ಅನೇಕ ಅವತಾರಗಳಲ್ಲಿ ಶ್ರೀಹಂಸರೂಪವು ಪ್ರಧಾನವಾದುದು. ಶ್ರೀಹರಿಯು ಜ್ಞಾನಪ್ರಸಾರಕ್ಕಾಗಿ ಕೈಗೊಂಡ ಅವತಾರವಿದು. ಜ್ಞಾನಸಾಧನೆ-ಪ್ರಸಾರಗಳಿಗೆ ಯತ್ಯಾಶ್ರಮವೇ ಶ್ರೇಷ್ಠವೆಂದು ಶಾಸ್ತ್ರಗಳುಸಾರುವುವು, ಅಂತೆಯೇ ವೇದಾದಿಸಚ್ಛಾಸ್ತ್ರಗಳ ಪ್ರಸಾರಕ್ಕಾಗಿ ಶ್ರೀಹರಿಯು ಹಂಸರೂಪದಿಂದವತರಿಸಿ ಬ್ರಹ್ಮದೇವರಿಗೆ ಉಪದೇಶ ಮಾಡಿದನು.ಶ್ರೀಬ್ರಹ್ಮದೇವರಿಂದ ಸನಕಾದಿಗಳು ಉಪ ದೇಶ ಪಡೆದರು. ಅಂದಿನಿಂದಲೇ ಈ ಹಂಸವಂಶದ ಜ್ಞಾನಿಗಳು ಜಗತ್ತಿನ ಜನತೆಗೆ ಜ್ಞಾನಬೋಧನೆಮಾಡಿಸುಜನರ ಸರ್ವಾಂಗೀಣಾಭ್ಯುದಯ,ಸನ್ಮಂಗಳಗಳನ್ನು ನೆರವೇರಿ ಸುತ್ತಾ ಬಂದರು. ಈ ಹಂಸವಂಶದಲ್ಲಿ ಬಂದ ಮಹನೀಯರೇ ಶ್ರೀಮಧ್ವಾಚಾರ್ಯರು.

ಜ್ಞಾನಪ್ರಾಧಾನ್ಯವಾದ ಹಂಸವಂಶದಲ್ಲಿ ಶ್ರೀಹಂಸನಾಮಕ ಹರಿಯಿಂದಮೊಟ್ಟ ಮೊದಲು ಉಪದೇಶಪಡೆದ ಭಾಗ್ಯಶಾಲಿಗಳು ಶ್ರೀಚತುರ್ಮುಖ ಬ್ರಹ್ಮದೇವರು. ಬ್ರಹ್ಮದೇವರಿಂದ ಅನಂತರ ಅವರ ಪುತ್ರರಾದ ಸನಕಾದಿ ನಾಲ್ವರು ಜ್ಞಾನಿಗಳು ಉಪದೇಶವನ್ನು ಪಡೆದು ಹಂಸವಂಶವನ್ನು ಮುಂದುವರೆಸಿಕೊಂಡುಬಂದರು.ಅವರಲ್ಲಿ

1) 'ಹಂಸವಂಶವೃಕ್ಷವನ್ನು' ಪರಿಶೀಲಿಸಿರಿ,

ಉಪದೇಶಪಡೆದವರು ದೂರ್ವಾಸರು, ಆದರೆ ದ್ವಾಪರದಲ್ಲಿ ಗೌತಮರ ಶಾಪದಿಂದ ಜ್ಞಾನವು ನಷ್ಟವಾಗಿ ಉದ್ಧಾರದ ದಾರಿಕಾಣದೆ ಸುಜೀವಿಗಳು ಬಳಲುತ್ತಿರಲು ಮುಮುಕ್ಷುಗಳಲ್ಲಿ ಅನುಗ್ರಹಬುದ್ಧಿಯಿಂದ ಕೃಪಾಳುಗಳಾದ ಬ್ರಹ್ಮರುದ್ರೇಂದ್ರಾದಿ ದೇವತೆಗಳು ಶ್ರೀಮನ್ನಾರಾಯಣನಲ್ಲಿ ಮೊರೆಯಿಟ್ಟರು. ಆಗ ಹಂಸಾವತಾರಿಯಾಗಿದ್ದ ಶ್ರೀಮನ್ನಾರಾಯಣನು ಮತ್ತೆ ಶ್ರೀವೇದವ್ಯಾಸರೂಪದಿಂದ ಅವತರಿಸಿ, ವೇದವಿ. ಭಾಗಪೂರ್ವಕವಾಗಿ, ವೇದಾರ್ಥನಿರ್ಣಾಯಕ ಬ್ರಹ್ಮಮೀಮಾಂಸಾಶಾಸ್ತ್ರ [ಬ್ರಹ್ಮಸೂತ್ರ]ವನ್ನು ರಚಿಸಿ ಜ್ಞಾನಪ್ರತಿಷ್ಠಾಪನಮಾಡಿ, ಬ್ರಹ್ಮರುದ್ರೇಂದ್ರಾದಿ ಸಮಸ್ತಮುಕ್ತಿಯೋಗ್ಯರಿಗೆ ಜ್ಞಾನೋಪದೇಶಮಾಡಿ ಸಕಲರನ್ನೂ ಅನುಗ್ರಹಿಸಿದನು. ಇದಾದಮೇಲೆ ಶ್ರೀದೂರ್ವಾಸರ ಶಿಷ್ಯತ್ವ ವಹಿಸಿದವರು ಜ್ಞಾನನಿಧಿಗಳು, ಗರುಡ ವಾಹನತೀರ್ಥರು ಅವರ ಶಿಷ್ಯರಾದರು. ಅವರಿಂದ ಉಪದೇಶ ಹೊಂದಿ ಶಿಷ್ಯರಾಗಿ ಹಂಸವಂಶವನ್ನು ಭೂಷಿಸಿದವರು ಕೈವಲ್ಯತೀರ್ಥರು.ಅವರ ತರುವಾಯ ಈ ಜ್ಞಾನ ಪರಂಪರೆಯಲ್ಲಿ ಕ್ರಮವಾಗಿ ಶ್ರೀಜ್ಞಾನೇಶತೀರ್ಥರು, ಶ್ರೀಪರತೀರ್ಥರು, ಶ್ರೀಸತ್ಯ ಪ್ರಜ್ಞತೀರ್ಥರು ಮತ್ತು ಪ್ರಾಜ್ಞತೀರ್ಥರು ವಿರಾಜಿಸಿ ಜ್ಞಾನಪ್ರಸಾರಮಾಡಿದರು.

ಅನಂತರ ಕಲಿಯುಗದಲ್ಲಿ ಕ್ರಿ. ಶ. ಹನ್ನೆರಡನೆಯುಶತಮಾನದಲ್ಲಿ ಶ್ರೀಅಚ್ಯುತ ಪ್ರೇಕ್ಷಾಚಾರ್ಯರೆಂಬ ಜ್ಞಾನಿಗಳು ಹಂಸಪರಂಪರೆಯ ಜ್ಞಾನಪೀಠದಲ್ಲಿ ಕಂಗೊಳಿಸುತ್ತಿದ್ದರು.ಆವೇಳೆಗಾಗಲೇ ಶ್ರೀವೇದವ್ಯಾಸರ ಬ್ರಹ್ಮಸೂತ್ರಗಳಮೇಲೆ ಇಪ್ಪತ್ತೊಂದು ಜನ ಭಾಷ್ಯಕಾರರು ತಮತಮಗೆ ತೋರಿದಂತೆ ವ್ಯಾಖ್ಯಾನಮಾಡಿ ತಂತಮ್ಮ ಮತ ಗಳನ್ನು ಪ್ರಚಾರಮಾಡುತ್ತಿದ್ದರು. ಅದರ ಪರಿಣಾಮವಾಗಿ ಮತ್ತೆ ಸುಜನರಲ್ಲಿ ಸಂಶಯ, ಅನ್ಯಥಾಜ್ಞಾನ ಭ್ರಾಂತಿಗಳುಂಟಾಗಿ ಯಾವ ತತ್ತ್ವೋಪಾಸನೆಯಿಂದ ತಮ್ಮ ಕಲ್ಯಾಣವಾಗುವುದೆಂದರಿಯಲಾಗದೆ ಸುಜೀವಿಗಳು ಬಳಲಹತ್ತಿದರು. ಆ ಹೊತ್ತಿಗಾ ಗಲೇ ಚಾರ್ವಾಕ, ಬೌದ್ಧ, ಜೈನಾದಿ ಅವೈದಿಕ ಮತಗಳು ಪ್ರಬಲಿಸಿ ವೈದಿಕಮತದ ಮೇಲೆ ಧಾಳಿಮಾಡಿ ಗಂಡಾಂತರ ತಂದೊಡ್ಡಿದುದೂ ಸಜ್ಜನರಿಗೆ ಬಹಳ ತೊಂದರೆ ಯುಂಟಾಗಿತ್ತು. ಆ ಸಂಕ್ರಾಂತಿಕಾಲದಲ್ಲಿ ಶ್ರೀಶಂಕರಾಚಾರ್ಯ-ಶ್ರೀರಾಮಾನುಜಾ ಚಾರ್ಯರುಗಳು ಅವತರಿಸಿ ವೇದಪ್ರಾಮಾಣ್ಯವನ್ನು ಎತ್ತಿ ಹಿಡಿದು ತಮ್ಮ ವಾದ ಚಾತುರ್ಯದಿಂದ ನಾಸ್ತಿಕವಾದಿಗಳನ್ನು ಖಂಡಿಸಿ, ಅದ್ವೈತ, ವಿಶಿಷ್ಟಾದ್ವೈತಮತಗ ಗನ್ನು ರಚಿಸಿ ಭರದಿಂದ ಪ್ರಚಾರಮಾಡಿ ವೈದಿಕಮತವನ್ನು ರಕ್ಷಿಸಿ ಉಪಕರಿಸಿದರು, ಆದರೆ ಜೀವಬ್ರಹ್ಮೈಕ್ಯಪ್ರತಿಪಾದಕವಾದ ಅದ್ವೈತಮತವು ವೇದೋಪನಿಷತ್ತು ಬ್ರಹ್ಮಸೂತ್ರಗಳಿಗೆ ವಿರುದ್ಧವಾಗಿದ್ದುದರಿಂದಲೂ,ಮೋಕ್ಷದಲ್ಲಿ ಶ್ರೀಹರಿಗೂ ಜೀವ ರಿಗೂ ಆನಂದತಾರತಮ್ಯವಿಲ್ಲವೆಂದು ಹೇಳುವ ವಿಶಿಷ್ಟಾದ್ವೈತಮತವೂ ಸಹ ಸುಜನರ ಮನಸ್ಸಿಗೆ · ಹಿಡಿಸುತ್ತಿರಲಿಲ್ಲ. ಆದ್ದರಿಂದ ನಿಶ್ಚಿತ ತತ್ವಜ್ಞಾನವಾಗದೆ ಜನರು ಬಳಲಹತ್ತಿದ್ದರು.

ಆಗ ಬ್ರಹ್ಮರುದ್ರೇಂದ್ರಾದಿದೇವತೆಗಳ ಪ್ರಾರ್ಥನೆಯಂತೆ, ತ್ರಿಯುಗಹೊತಿಯಾದ ಶ್ರೀಮನ್ನಾರಾಯಣನು ತನಗೆ ಅತ್ಯಂತ ಪ್ರಿಯರೂ, ಜೀವೋತ್ತಮರೂ, ಜಗತ್ಪ್ರಾಣರೂ ಆದ ಶ್ರೀವಾಯುದೇವರಿಗೆ ಅತತ್ತ್ವಾವೇದಕಗಳಾದ ಮತಗಳ ನಿರಸನ ಪೂರ್ವಕವಾಗಿ ಅನಾದ್ಯವಚ್ಛಿನ್ನ ಪರಂಪರಾಪ್ರಾಪ್ತ ವೈದಿಕಸದ್ವೈಷ್ಣವ ಮತವನ್ನು ಪ್ರತಿಷ್ಠಾಪಿಸಿ ಮುಕ್ತಿಯೋಗ್ಯರನ್ನು ಉದ್ಧರಿಸಬೇಕೆಂದು ಆಜ್ಞಾಪಿಸಿದನು. ಇಂಥ ಸಂಕ್ರಾಂತಿಕಾಲದಲ್ಲೇ ಹಂಸನಾಮಕಪರಮಾತ್ಮನ ಜ್ಞಾನಪರಂಪರೆಯಲ್ಲಿ ರಾಜಿಸಿದ್ದ ಶ್ರೀಅಚ್ಯುತಪ್ರೇಕ್ಷಾಚಾರ್ಯರು ಉಡುಪಿಯಲ್ಲಿ ಶ್ರೀಅನಂತೇಶ್ವರನಸನ್ನಿಧಿಯಲ್ಲಿ ಅನಾದಿಸಿದ್ಧ ವೈಷ್ಣವಸಿದ್ಧಾಂತ ಪ್ರತಿಷ್ಠಾಪನೆಮಾಡಿ ಲೋಕಕಲ್ಯಾಣಮಾಡಬಲ್ಲ ಶ್ರೇಷ್ಠ ಶಿಷ್ಯನಿಗಾಗಿ ಪ್ರಾರ್ಥಿಸುತ್ತಿದ್ದರು. ಅವರ ತಪಸ್ಸು ಫಲಿಸಿತು. ಶ್ರೀಅನಂತೇಶ್ವರನು ಅವರಿಗೆ ಕನಸ್ಸಿನಲ್ಲಿ ದರ್ಶನವಿತ್ತು "ವೈಷ್ಣವಸಿದ್ಧಾಂತ" ಪ್ರತಿಷ್ಠಾಪನೆಮಾಡಿ ಸಮಸ್ತ ಸಜ್ಜನರನ್ನು ಉದ್ಧರಿಸಲು ಶಕ್ತನಾದ ಶ್ರೀಮುಖ್ಯಪ್ರಾಣದೇವನೇ ನಿನಗೆ ಶಿಷ್ಯನಾಗಿ ದೊರೆತು ನಿನ್ನಿಚ್ಛೆಯನ್ನು ಪೂರ್ಣ ಮಾಡುವನು" ಎಂದಾಜ್ಞಾಪಿಸಿದನು. ಅಚ್ಯುತಪ್ರೇಕ್ಷರು ಹರ್ಷನಿರ್ಭರರಾಗಿ ಆ ಶಿಷ್ಯನವತಾರವನ್ನು ನಿರೀಕ್ಷಿಸಹತ್ತಿದರು.

ಶ್ರೀಹರಿಯ ಆಜ್ಞೆಯಂತೆ ಶ್ರೀವಾಯುದೇವರು ರಜತಪೀಠಪುರದಲ್ಲಿ ಜ್ಞಾನಿಗಳಾದ ಮಧ್ಯಗೇಹಭಟ್ಟದಂಪತಿಗಳಿಗೆ ವಾಸುದೇವಾಭಿಧಾನದಿಂದ ಶಾಲಿವಾಹನಶಕೆ ೧೧೬೦ನೆಯ ವಿಳಂಬಿನಾಮ ಸಂವತ್ಸರದಲ್ಲಿ (ಕ್ರಿ. ಶ. 1238) ಅವತರಿಸಿದರು. ಜಗದುದ್ಧಾರಕ ಜಗದ್ಗುರು, ಜ್ಞಾನಸೂರ್ಯನುದಯಿಸಿದ! ಬಾಲಕ ವಾಸುದೇವ ತನ್ನ ಅಸದೃಶ್ಯಜ್ಞಾನ- ಅನಿತರಸಾಧಾರಣಶಕ್ತಿ, ಪ್ರತಿಭಾದಿಗಳಿಂದ ಸರ್ವಜನರನ್ನೂ, ವಿಸ್ಮಯಗೊಳಿಸಲಾರಂಭಿಸಿದ, ಶ್ರೀಅಚ್ಯುತಪ್ರೇಕ್ಷಾಚಾರ್ಯರು ಶ್ರೀಅನಂತೇಶ್ವರನು ಅಪ್ಪಣೆಮಾಡಿದ ಶಿಷ್ಯೋತ್ತಮನೇ ವಾಸುದೇವನೆಂದು ಗುರುತಿಸಿ, ವಾಸುದೇವನಿಗೆ ಪರಮಹಂಸಾಶ್ರಮವಿತ್ತು "ಶ್ರೀಪೂರ್ಣಪ್ರಜ್ಞಾಚಾರ್ಯ" ಎಂಬ ಹೆಸರಿನಿಂದ ಹಂಸವಂಶದ ಜ್ಞಾನಪೀಠದಲ್ಲಿ ಮಂಡಿಸಿ ಸಾಮ್ರಾಜ್ಯಾಭಿಷೇಕ ಮಾಡಿದರು.

ಶ್ರೀಪೂರ್ಣಪ್ರಜ್ಞರು ತಮ್ಮ ವಾದವೈಖರಿ, ಜ್ಞಾನ, ಸಿದ್ಧಾಂತಪ್ರತಿಪಾದನಾದಿ ಚಾತುರ್ಯಗಳಿಂದ ಪರವಾದಿಗಳಿಂದಲೇ "ಅನುಮಾನತೀರ್ಥ"ರೆಂದೂ ವೇದಪ್ರತಿಪಾದ್ಯ ಮಹಿಮರಾದ್ದರಿಂದ "ಶ್ರೀಮಧ್ವಾಚಾರ್ಯ"ರೆಂದೂ, ಆನಂದಪ್ರದಶಾಸ್ತ್ರಪ್ರವರ್ತಕರಾದ್ದರಿಂದ "ಶ್ರೀಆನಂದತೀರ್ಥ"ರೆಂದೂ ವಿವಿಧನಾಮಗಳಿಂದ ಪ್ರಖ್ಯಾತರಾದರು. ಶ್ರೀಮಧ್ವಾಚಾರ್ಯರು ಗುರುಗಳ ಆದೇಶದಂತೆ ಭಗವದ್ಗೀತೆಗೆ ಭಾಷ್ಯವನ್ನು ರಚಿಸಿ ಗುರುಗಳನ್ನು ಸಂತೋಷಗೊಳಿಸಿದರು. ಅನಂತರ ಕ್ರಿ. ಶ. 1256ರಲ್ಲಿ ಆಚಾರ್ಯರು ಭಾರತದಾದ್ಯಂತ ತೀರ್ಥಯಾತ್ರೆ ಕೈಕೊಂಡು ಹೊರಟು ಎಲ್ಲ ಕಡೆ ಪರವಾದಿಗಳನ್ನು ಜಯಿಸಿದರು. ಮೊದಲು ಅವರು ಜಯಿಸಿದ ಪರವಾದಿಗಳಲ್ಲಿ ಶ್ರೀವಿದ್ಯಾಶಂಕರರು ಅವರ ಶಿಷ್ಯರಾದ ಪದ್ಮತೀರ್ಥರು, ಪುಂಡರೀಕಪುರಿಗಳು ಮತ್ತು ವಾದಿಸಿಂಹ, ಬುದ್ಧಿ

ಸಾಗರರೆಂಬ ಬೌದ್ಧವಾದಿಗಳು ಮುಖ್ಯರು. ಮತ್ತೆ ಶ್ರೀಮದಾಚಾರ್ಯರು ಕ್ರಿ.ಶ. 1262ರಲ್ಲಿ ಸಂಚಾರಹೊರಟು ಬದರಿಗೆ ತೆರಳಿ ಶ್ರೀವೇದವ್ಯಾಸದೇವರ ದರ್ಶನಮಾಡಿ ತಾವು ಬರೆದ 'ಗೀತಾಭಾಷ್ಯ'ವನ್ನು ಸಮರ್ಪಿಸಿದರು. ಮತ್ತು ಬಹುಕಾಲ ವೇದವ್ಯಾಸರ ಸೇವೆಮಾಡಿಕೊಂಡಿದ್ದು ಅವರಲ್ಲಿಯೇ ಬ್ರಹ್ಮಮೀಮಾಂಸಾ ಶಾಸ್ತ್ರವನ್ನು ಅಧ್ಯಯನಮಾಡಿ ಸೂತ್ರಕಾರರ ಹೃದಯವನ್ನು ಚೆನ್ನಾಗಿ ಅರಿತರು. ಶ್ರೀವೇದವ್ಯಾಸದೇವರು ಸೂತ್ರಭಾಷ್ಯಾದಿ ಸದ್ಗ್ರಂಥಗಳನ್ನು ರಚಿಸಿ ವೈದಿಕಸದ್ವೈಷ್ಣವಸಿದ್ಧಾಂತವನ್ನು ಪ್ರತಿಷ್ಠಾಪಿಸಿ ಸುಜನರಲ್ಲಿ ಅನುಗ್ರಹಮಾಡಬೇಕೆಂದು ಆಜ್ಞಾಪಿಸಿ ಆಶೀರ್ವದಿಸಿದರು. ದೇವರ ಅಪ್ಪಣೆಯಂತೆ ಆಚಾರ್ಯರು ಬ್ರಹ್ಮಸೂತ್ರಗಳಮೇಲೆ ಅವರೆಗೆ ರಚಿತವಾಗಿದ್ದ ಇಪ್ಪತ್ತೊಂದು ಕುಭಾಷ್ಯಗಳನ್ನು ಸಪ್ರಮಾಣವಾಗಿ ಖಂಡಿಸಿ ಭಾಷ್ಯವನ್ನು ರಚಿಸಿ ದ್ವೈತಸಿದ್ಧಾಂತವನ್ನು ಪ್ರತಿಷ್ಠಾಪಿಸಿದರು.

ಆಚಾರ್ಯರು ತಮ್ಮ ಸಿದ್ಧಾಂತ ಪ್ರತಿಪಾದನೆಗಾಗಿ ಋಕ್, ಉಪನಿಷತ್, ಗೀತಾ ಮತ್ತು ಸೂತ್ರಪ್ರಸ್ಥಾನಗಳಮೇಲೆ ಮತ್ತು ಸ್ವತಂತ್ರವಾಗಿಯೂ ಮೂವತ್ತೇಳು ಗ್ರಂಥಗಳನ್ನು ರಚಿಸಿ ಶಿಷ್ಯರಿಗೆ ಪಾಠಹೇಳಿ ಜ್ಞಾನಪ್ರಸಾರಮಾಡಿದರು.

ಅಪೌರುಷೇಯವಾದ, ವೇದಗಳನ್ನೇ ಮೂಲವಾಗುಳ್ಳ ಭಾರತದೇಶದ ತತ್ವಶಾಸ್ತ್ರದ ಸಾರವೇ ಶ್ರೀಮದಾಚಾರ್ಯರ ಗ್ರಂಥಗಳೆಂದರೆ ಅತಿಶಯವಲ್ಲ. ಅವರು ಹೇಳುವ ತತ್ವಗಳನ್ನು ಸಾರಭೂತವಾಗಿ ಹೀಗೆ ಹೇಳಬಹುದು :- ನಾರಾಯಣ ಸರ್ವೋತ್ತಮ, ಜಗದೊಡೆಯ. ಅವನು ಸದ್ಗುಣಗಳನಿಧಿ. ಅವನಲ್ಲಿ ಯಾವದೋಷವೂ ಇಲ್ಲ. ಅವನು ಸೃಷ್ಟಿಸಿದ ಈ ಜಗತ್ತು ಸತ್ಯವಾದುದು. ಜೀವ ಪರಮಾತ್ಮರಲ್ಲಿ ಭೇದವಿರುವಂತೆ, ಜೀವಜೀವರೂ ಭಿನ್ನರು. ಎಲ್ಲ ಜೀವರೂ ಅವನ ದಾಸರು. ಅವನು ಎಲ್ಲ ಜೀವರಲ್ಲಿಯೂ ನಿಂತು ಅವರ ಕರ್ಮಾನುಸಾರ ವ್ಯಾಪಾರಮಾಡಿಸಿ ಅದಕ್ಕೆ ತಕ್ಕ ಫಲವನ್ನುಕೊಡುವನು. ಆದ್ದರಿಂದ ಪ್ರತಿಜೀವಿಯೂ ಪ್ರಾಪಂಚಿಕಹವ್ಯಾಸಕ್ಕೆಹೆಚ್ಚಿನ ಗಮನಕೊಡದೆ ಸರ್ವಸ್ವಾಮಿಯಾದ ಆ ಭಗವಂತನನ್ನು ಭಜಿಸಿ ಅವನ ಅನುಗ್ರಹ ಪಡೆಯಬೇಕು. ಇತ್ಯಾದಿಗಳೇ ಮಧ್ವಾಚಾರ್ಯರ ಉಪದೇಶದ ಮುಖ್ಯಾಂಶ. ಇದನ್ನು ಅಲ್ಲಗೆಳೆದ ಸಮಸ್ತಪಂಡಿತರನ್ನೂ ಸಯುಕ್ತಿಕವಾಗಿ, ಶಾಸ್ತ್ರಾಧಾರಗಳಿಂದ ಅವರು ಖಂಡಿಸಿದರು. ಹೀಗೆ ಆಚಾರ್ಯರ ಜೊತೆಗೆ ವಾದಮಾಡಿ ಸೋತಪಂಡಿತರಲ್ಲಿ ಪಾಷ್ಟಿಕ ಕುಲಭೂಷಣರಾದ ಶ್ರೀಶೋಭನಭಟ್ಟ, ಶ್ಯಾಮಾಶಾಸ್ತ್ರಿ, ತ್ರಿವಿಕ್ರಮಪಂಡಿತಾಚಾರ್ಯರು ಗೋವಿಂದಶಾಸ್ತ್ರಿ. ಗೋವಿಂದಭಟ್ಟರುಗಳು ಆಚಾರ್ಯರ ಶಿಷ್ಯತ್ವ ವಹಿಸಿದರು, ಶ್ರೀಪಂಡಿತಾಚಾರ್ಯರನ್ನು ಬಿಟ್ಟು ಉಳಿದ ನಾಲ್ವರಿಗೆ ಶ್ರೀಮದಾಚಾರ್ಯರು ಪರಮಹಂಸಾಶ್ರಮವಿತ್ತು ಶ್ರೀಪದ್ಮನಾಭತೀರ್ಥರು, ಶ್ರೀನರಹರಿತೀರ್ಥರು, ಶ್ರೀಮಾಧವತೀರ್ಥರು, ಶ್ರೀಅಕ್ಷೋಭ್ಯತೀರ್ಥರು—ಎಂಬ ಹೆಸರಿನಿಂದ ತಮ್ಮ ವೇದಾಂತ ಸಾಮ್ರಾಜ್ಯದಲ್ಲಿ ಅಭಿಷೇಕಮಾಡಿ ಅನುಗ್ರಹಿಸಿದರು.

ಆಚಾರ್ಯರು ಗೋಪೀಚಂದನ ಗಡ್ಡೆಯಲ್ಲಿ ಒಲಿದುಬಂದ ಶ್ರೀಕೃಷ್ಣನನ್ನು
ಉಡುಪಿಯಲ್ಲಿ ಪ್ರತಿಷ್ಠಾಪಿಸಿ ದ್ವೈತಸಿದ್ಧಾಂತ ಪ್ರತಿಪಾದ್ಯನಾದ ಶ್ರೀಕೃಷ್ಣಪರ
ಮಾತ್ಮನು ತಮ್ಮ ಮತದ ಆರಾಧ್ಯದೇವನೆಂದು ಸಾರಿದರು. ಮತ್ತು ತಮ್ಮ ಪೂರ್ವಾ
ಶ್ರಮ ತಮ್ಮನೂ ಸೇರಿದಂತೆ ಎಂಟುಜನ ವಟುಗಳಿಗೆ ಸನ್ಯಾಸವಿತ್ತು ಶ್ರೀಕೃಷ್ಣನ
ಪೂಜಾರಾಧನೆ, ತತ್ವಧರ್ಮ ಪ್ರಸಾರ ಮಾಡಿಕೊಂಡುಬರಲು ಆಜ್ಞಾಪಿಸಿದವರು
ನಮ್ಮಲ್ಲಿ ಮೊಟ್ಟಮೊದಲಿಗೆ ಮಠಗಳನ್ನು ಏರ್ಪಡಿಸಿ ಅವುಗಳಿಗೆ ಒಂದುಸ್ವರೂಪ
ಕರ್ತವ್ಯಗಳನ್ನು ನಿಯಮಿಸಿದವರು ಶ್ರೀಮಧ್ವಾಚಾರ್ಯರು. ಅವರಿಂದ ಆಶ್ರಮ
ಪಡೆದ ಶ್ರೀಕೃಷ್ಣಾರಾಧಕ ಮಠಾಧಿಪತಿಗಳಾದ ಎಂಟುಜನ ಯತಿಗಳ, ಅವರ ಮಠ
ಗಳ ವಿವರ ಹೀಗಿದೆ. ೧. ಶ್ರೀವಿಷ್ಣುತೀರ್ಥರು, ಶ್ರೀಸೋದೇಮಠ. ೨. ಶ್ರೀರಾಮ
ತೀರ್ಥರು. ಶ್ರೀಶೀರೂರುಮಠ, ೩. ಶ್ರೀಹೃಷೀಕೇಶತೀರ್ಥರು, ಶ್ರೀಫಲಿಮಾರು
ಮಠ, ೪. ಶ್ರೀವಾಮನತೀರ್ಥರು, ಶ್ರೀಕಾಣೂರುಮಠ, ೫. ಶ್ರೀಅಧೋಕ್ಷಜ
ತೀರ್ಥರು, ಶ್ರೀಪೇಜಾವರಮಠ, ೬. ಶ್ರೀನರಸಿಂಹತೀರ್ಥರು, ಶ್ರೀಅಧಮಾರುಮಠ
೭. ಶ್ರೀಜನಾರ್ದನತೀರ್ಥರು, ಶ್ರೀಕೃಷ್ಣಾಪುರಮಠ, ೮. ಶ್ರೀಉಪೇಂದ್ರತೀರ್ಥರು,
ಶ್ರೀಪುತ್ತಿಗೆಮಠ. ಈ ಮಠಗಳಲ್ಲದೆ ಶ್ರೀ ಆಚಾರ್ಯರು ತಮ್ಮ ಗುರುಗಳ ಒಂದು
ಪರಂಪರೆಯ ಮಠವನ್ನು ಸ್ಥಾಪಿಸಿ ಅದಕ್ಕೆ ತಮ್ಮ ಶಿಷ್ಯರಾದ ಶ್ರೀಸತ್ಯತೀರ್ಥರನ್ನು
ನೇಮಿಸಿದರು. ಈ ಮಠವು ಮುಂದೆ ಎರಡಾಗಿ ಶ್ರೀಭಂಡಾರಕೇರಿಮಠ ಮತ್ತು ಶ್ರೀ
ಭೀಮನಕಟ್ಟೆ ಮಠಗಳೆಂದು ಹೆಸರುಪಡೆದವು. ಇದರಂತೆ ಮುಂದೆ ಶ್ರೀಸೋದೇಮಠದ
ಶ್ರೀವಿಷ್ಣುತೀರ್ಥರು ಶ್ರೀಅನಿರುದ್ಧತೀರ್ಥರಿಗೆ ಆಶ್ರಮವಿತ್ತು ತಮ್ಮದೇ ಆದ ಒಂದು
ಮಠವನ್ನು ಸ್ಥಾಪಿಸಿದರು. ಅದು ಶ್ರೀಸುಬ್ರಹ್ಮಣ್ಯ ಮಠವೆಂದು ಹೆಸರುಪಡೆಯಿತು.
ಇದರಂತೆ ಶ್ರೀಪೇಜಾವರ ಮಠದ ಪರಂಪರೆಯಲ್ಲಿ ಮುಂದೆ ಶ್ರೀಮಹೇಂದ್ರತೀರ್ಥರ
ಶಿಷ್ಯರಾದ ಶ್ರೀವಿಜಯಧ್ವಜತೀರ್ಥರಿಂದ ಸ್ಥಾಪಿತವಾದ ಒಂದು ಮಠವು ಶ್ರೀಚಿತ್ರಾ
ಪುರಮಠವೆಂದು ಹೆಸರುಪಡೆದು ನಡೆದುಬಂದಿತು.

ಗೋಪಿಚಂದನಗಡ್ಡೆಯಲ್ಲಿ ಶ್ರೀಕೃಷ್ಣನೊಡನೆ ದೊರಕಿದ್ದ ರಜತಮಯ ದಶಾ
ವತಾರಪೀಠದ ಮೇಲೆ ಆಚಾರ್ಯರು ಸ್ವಹಸ್ತದಿಂದ ಸುಂದರವಾದ ರಜತಮಯ
ಶ್ರೀರಾಮಚಂದ್ರನನ್ನು ನಿರ್ಮಿಸಿ "ಶ್ರೀದಿಗ್ವಿಜಯರಾಮ" ಎಂಬ ಹೆಸರಿನಿಂದ ಪೂಜಿ
ಸಿದರು. ಇದರಂತೆ ಬದರಿಯಲ್ಲಿ ಶ್ರೀವೇದವ್ಯಾಸದೇವರು ದಯಪಾಲಿಸಿದ ವ್ಯಾಸ
ಮುಷ್ಟಿಗಳು, ಶ್ರೀಮೂಲಗೋಪಾಲಕೃಷ್ಣ-ಪಟ್ಟಾಭಿರಾಮ ದೇವರು, ಮತ್ತಿತರ
ಭಗವತ್ಪ್ರತಿಮೆಗಳನ್ನೂ ಪ್ರತಿದಿನ ಪೂಜಿಸುತ್ತಿದ್ದರು. ಹಿಂದೆ ಶ್ರೀಹನುಮ-ಭೀಮಾವ
ತಾರಗಳಲ್ಲಿ ಶ್ರೀಬ್ರಹ್ಮಕರಾರ್ಚಿತ, ಚತುರ್ಯುಗಮೂರ್ತಿ ಶ್ರೀಮೂಲರಾಮ-ಸೀತಾ
ಪ್ರತಿಮೆಗಳನ್ನು ತಾವು ಪೂಜಿಸುತ್ತಿದ್ದಂತೆ,ಈ ಮಧ್ವಾವತಾರದಲ್ಲೂ ಪೂಜಿಸಿ ತಮ್ಮ
ಮಹಾಸಂಸ್ಥಾನದ ಆರಾಧ್ಯಪ್ರತಿಮೆಯನ್ನಾಗಿ ಮಾಡಲಾಶಿಸಿ,ಆ ಪ್ರತಿಮೆಗಳು ವಡ್ಡೇ

ಜಗನ್ನಾಥದಲ್ಲಿ ಗಜಪತಿ ಭಂಡಾರದಲ್ಲಿರುವುದನ್ನು ಜ್ಞಾನದೃಷ್ಟಿಯಿಂದರಿತು ಅವನ್ನು ಪ್ರಿಯಶಿಷ್ಯರಾದ ನರಹರಿತೀರ್ಥರಿಂದ ತರಿಸಿಕೊಂಡರು. [1] ಶ್ರೀನರಹರಿತೀರ್ಥರ ಪಿಂಗಳ ಸಂ॥ ಅಶ್ವಿನಮಾಸದಲ್ಲಿ (ಸುಮಾರು-ತಾ॥29-10-1317) ಶ್ರೀಮದಾಚಾರ್ಯರಿಗೆ ಶ್ರೀಮೂಲರಾಮ ಸೀತಾವಿಗ್ರಹಗಳನ್ನು ತಂದು ಅರ್ಪಿಸಿದರು. ಆಚಾರ್ಯರು ಆ ಪ್ರತಿಮೆಗಳನ್ನು ಅಂದಿನಿಂದ ಎಂಭತ್ತುದಿನಗಳ ಕಾಲ ಭಕ್ತಿಯಿಂದ ಪೂಜಿಸಿ. ಅನಂತರ ಶ್ರೀಮೂಲರಾಮ-ದಿಗ್ವಿಜಯರಾಮ—ಮೂಲಗೋಪಾಲಕೃಷ್ಣ—ಪಟ್ಟಾಭಿರಾಮ—ವ್ಯಾಸಮುಷ್ಟಿಗಳು—ಬಲಮುರಿಶಂಖಗಳು— ರತ್ನಗರ್ಭಶಾಲಿಗ್ರಾಮ—ರಾಮಟಂಕಿ ವರಹಗಳು ಇನ್ನಿತರ ಶಾಲಿಗ್ರಾಮಗಳು-ಭಗವತ್ಪ್ರತಿಮೆಗಳಿಂದ ಯುಕ್ತವಾದ ತಮ್ಮ ವೇದಾಂತ ಸಾಮ್ರಾಜ್ಯ ಮಹಾಸಂಸ್ಥಾನವನ್ನು ತಮ್ಮ ಪಟ್ಟದ ಪ್ರಿಯಶಿಷ ರಾದ ಶ್ರೀಪದ್ಮನಾಭತೀರ್ಥರಿಗೆ ಅನುಗ್ರಹಿಸಿ, ಮುಂದೆ ಶ್ರೀನರಹರಿತೀರ್ಥರು, ಶ್ರೀಮಾಧವತೀರ್ಥರು, ಶ್ರೀಅಕ್ಷೋಭ್ಯತೀರ್ಥರುಗಳು ಒಬ್ಬರಾದ ಮೇಲೊಬ್ಬರಂತೆ ಮಹಾಸಂಸ್ಥಾನವನ್ನಾಳುತ್ತಾ, ತತ್ವಧರ್ಮಪ್ರಸಾರ, ಪರವಾದಿ ದಿಗ್ವಿಜಯ. ಸಿದ್ಧಾಂತ ಸ್ಥಾಪನ, ತಮ್ಮ ಗ್ರಂಥಗಳ ಪಾಠಪ್ರವಚನ, ಗ್ರಂಥರಚನೆ, ಮಹಾಸಂಸ್ಥಾನದ ಆರಾಧ್ಯಮೂರ್ತಿಗಳ ಪೂಜಾ, ಮಂತ್ರಮುದ್ರಾಧಾರಣ, ಗುರೂಪದೇಶದ್ವಾರಾ ಶಿಷ್ಯ ಭಕ್ತಜನೋದ್ಧಾರ-ಲೋಕಕಲ್ಯಾಣಾದಿ ಸತ್ಕಾರ್ಯಗಳನ್ನೆಸಗುತ್ತಾ ಭಾರತದ ಸಜ್ಜನರನ್ನು ಉಪದೇಶಾದಿಗಳ ಮೂಲಕ ಸನ್ಮಾರ್ಗಗಾಮಿಗಳನ್ನಾಗಿಸುತ್ತಾ ಶ್ರೀ ಹಂಸ ವಂಶವನ್ನು ಮುಂದುವರೆಸಿಕೊಂಡು ಹೋಗಬೇಕೆಂದು ಆಜ್ಞಾಪಿಸಿ ಶ್ರೀಪದ್ಮನಾಭತೀರ್ಥರಿಗೆ ತಮ್ಮ ವೇದಾಂತಸಾಮ್ರಾಜ್ಯವನ್ನು ಒಪ್ಪಿಸಿಕೊಟ್ಟು ಆಶೀರ್ವದಿಸಿದರು.

ಅನಂತರ ಆಚಾರ್ಯರು ತಮ್ಮ ಅವತಾರಕಾರ್ಯವು ಯಶಸ್ವಿಯಾಯಿತೆಂದುಭಾವಿಸಿ ಪಿಂಗಳ ಸಂವತ್ಸರದ ಮಾಘ ಶುಕ್ಲ ನವಮೀ ದಿವಸದಂದು ಶ್ರೀಅನಂತೇಶ್ವರನ ಸನ್ನಿಧಿಯಲ್ಲಿ ಶಿಷ್ಯ-ಭಕ್ತ ಜನರಿಗೆ ಐತರೇಯಭಾಷ್ಯಾನುವಾದ ಪೂರ್ವಕ ಉಪದೇಶ ಮಾಡುತ್ತಿರುವಾಗ ಜಗಜ್ಜೀವನರಾದ ಶ್ರೀವಾಯುದೇವರ ಉಪದೇಶಾಮೃತದಿಂದ ಹರ್ಷಿತರಾದ ದೇವತೆಗಳು ಶ್ರೀಮದಾಚಾರ್ಯರಮೇಲೆ ಪುಷ್ಪವೃಷ್ಟಿ ಮಾಡಿದಾಗ ಆಚಾರ್ಯರು ಜನರ ಕಣ್ಣಿಗೆ ಅದೃಶ್ಯರಾಗಿ ಬದರಿಗೆ ದಿಗ್ವಿಜಯ ಮಾಡಿದರು. ಆಚಾರ್ಯರ ಅಪ್ಪಣೆಯಂತೆ ಶ್ರೀಪದ್ಮನಾಭತೀರ್ಥರು ಅಂದೇ ಗುರುಗಳ ಮಹಾಸಮಾರಾಧನೆಯನ್ನಾಚರಿಸಿ—

"ಅಭ್ರಮಂ ಭಂಗರಹಿತಂ ಅಜಡಂ ವಿಮಲಂ ಸದಾ ।
ಆನಂದತೀರ್ಥಮತುಲಂ ಭಜೇ ತಾಪತ್ರಯಾಪಹಮ್ ॥"

ಎಂಬ ಚರಮಶ್ಲೋಕವನ್ನು ರಚಿಸಿ ಭಕ್ತಿಯಿಂದ ಪಠಿಸಿ ಸಮರ್ಪಿಸಿದರು. ಅಂದಿ

---

1. ಐದನೇ ಉಲ್ಲಾಸದಲ್ಲಿರುವ "ಶ್ರೀಮೂಲರಾಮ" ಎಂಬ ಅಧ್ಯಾಯವನ್ನು ವಿವರಗಳಿಗಾಗಿ ಪರಿಶೀಲಿಸಿರಿ. —ಗ್ರಂಥಕರ್ತ.

ನಿಂದಲೂ ಶ್ರೀಮದಾಚಾರ್ಯರು ಅದೃಶ್ಯರಾದ ಮಾಘಶುಕ್ಲ ನವಮಿಯಂದು ಆಚಾರ್ಯರ ಮಹಾಸಮಾರಾಧನೆಯು "ಶ್ರೀಮಧ್ವನವಮೀ" ಎಂಬ ಹೆಸರಿನಿಂದ ಭಕ್ತಿಶ್ರದ್ಧೆಗಳಿಂದ ಆಚರಿಸಲ್ಪಡುತ್ತಿದೆ.

ಹೀಗೆ ಹಂಸನಾಮಕ ಪರಮಾತ್ಮನಿಂದ ಪ್ರವೃತ್ತವಾದ ಜ್ಞಾನಪರಂಪರೆಯು ಶ್ರೀಮನ್ಮಧ್ವಾಚಾರ್ಯರಿಂದ ವಿಶಿಷ್ಟಸ್ವರೂಪತಾಳಿ, ಶ್ರೀಮಧ್ವಾಚಾರ್ಯರ ವೇದಾಂತಸಾಮ್ರಾಜ್ಯ ಅಥವಾ ಮುಖ್ಯ ಸಂಸ್ಥಾನವೆಂದು ಜಗದ್ವಿಖ್ಯಾತವಾಯಿತು. ಈ ಮಹಾ ಸಂಸ್ಥಾನವನ್ನು ಶ್ರೀಮದಾಚಾರ್ಯರ ತರುವಾಯ ಶ್ರೀಪದ್ಮನಾಭತೀರ್ಥರು (ಕ್ರಿ.ಶ. 1317–1324), ಶ್ರೀನರಹರಿತೀರ್ಥರು (1324–1333), ಶ್ರೀಮಾಧವತೀರ್ಥರು(1333-1350) ಶ್ರೀಅಕ್ಷೋಭ್ಯತೀರ್ಥರು (1350-1365) ಸುಮಾರು ನಲವತ್ತೆಂಟು ವರ್ಷಗಳ ಕಾಲ ಯಶಸ್ವಿಯಾಗಿ ಪರಿಪಾಲಿಸಿದರು.

ಶ್ರೀಪದ್ಮನಾಭತೀರ್ಥರು ಶ್ರೀನರಹರಿತೀರ್ಥರಿಗೆ ಮಹಾಸಂಸ್ಥಾನವನ್ನೊಪ್ಪಿಸಿ ಕೊಟ್ಟಮೇಲೆ ತಮ್ಮ ವಂಶೀಯರಾದ ಪಾಷ್ಟಿಕಪಂಡಿತರೊಬ್ಬರಿಗೆ ಸನ್ಯಾಸವಿತ್ತು "ಶ್ರೀಲಕ್ಷ್ಮೀಧರತೀರ್ಥ"ರೆಂದು ನಾಮಕರಣಮಾಡಿ, ಶ್ರೀಮದಾಚಾರ್ಯರು ತಮಗೆ ಅನುಗ್ರಹಿಸಿದ್ದ ಶ್ರೀಗೋಪೀನಾಥ ದೇವರನ್ನು ಕರುಣಿಸಿ ತಮ್ಮದೇ ಆದ ಒಂದು ಸತ್ ಪರಂಪರೆಯನ್ನು ಮುಂದುವರೆಸಿಕೊಂಡು ಬರಲು ಆಜ್ಞಾಪಿಸಿದರು. ಈ ಸತ್ಪರಂಪರೆಯಲ್ಲಿ ಮುಂದೆ ಜ್ಞಾನಿನಾಯಕರಾದ ಶ್ರೀಲಕ್ಷ್ಮೀನಾರಾಯಣಮುನಿಗಳು (ಶ್ರೀಪಾದರಾಜರು) ವಿಖ್ಯಾತರಾಗಿದ್ದರಿಂದ ಈ ಪರಂಪರೆಯು ಶ್ರೀಪಾದರಾಜ ಮಠವೆಂದು ಹೆಸರು ಪಡೆಯಿತು.

ಶ್ರೀಮಾಧವತೀರ್ಥರೂ, ಶ್ರೀಅಕ್ಷೋಭ್ಯತೀರ್ಥರೂ ಸಹ ತಮ್ಮ ತಮ್ಮ ಪರಂಪರೆಯನ್ನು ಮುಂದುವರಿಸಲಾಶಿಸಿ ಪಾಷ್ಟಿಕಕುಲಭೂಷಣರಾದ ಪಂಡಿತರುಗಳಿಗೆ ಆಶ್ರಮವಿತ್ತು ಮಠಗಳನ್ನು ಸ್ಥಾಪಿಸಿದರು. ಶ್ರೀಮಾಧವತೀರ್ಥರ ಪರಂಪರೆಯು ಶ್ರೀಮಾಧವತೀರ್ಥರ ಮಠವೆಂದು ಖ್ಯಾತವಾಯಿತು. ಶ್ರೀಅಕ್ಷೋಭ್ಯತೀರ್ಥರ ಪರಂಪರೆಯಲ್ಲಿ ಮುಂದೆ ಬಂದ ಶ್ರೀಲೋಕಪೂಜ್ಯತೀರ್ಥರು, ಶ್ರೀಪುಣ್ಯಕೀರ್ತಿಗಳು ಮತ್ತು ಶ್ರೀರಘುಪುಂಗವರೆಂಬ ಶಿಷ್ಯರಿಗೆ ಆಶ್ರಮವಿತ್ತರು. ಶ್ರೀಪುಣ್ಯಕೀರ್ತಿಗಳ ಮಠವು ಶ್ರೀಬಾಳಗಾರು ಅಕ್ಷೋಭ್ಯತೀರ್ಥ ಸಂಸ್ಥಾನವೆಂದೂ ಶ್ರೀರಘುಪುಂಗವರ ಮಠವು ಕೂಡ್ಲಿ ಶ್ರೀಆರ್ಯ ಅಕ್ಷೋಭ್ಯಮಠವೆಂದೂ ಹೆಸರುಪಡೆದವು.

ಶ್ರೀಅಕ್ಷೋಭ್ಯತೀರ್ಥರು ದ್ವೈತಸಿದ್ಧಾಂತವನ್ನು ಚೆನ್ನಾಗಿ ಪ್ರಸಾರಮಾಡಿ ಅನೇಕ ವಾದಿಗಳನ್ನು ಜಯಿಸಿ ಕೀರ್ತಿಗಳಿಸಿದರು. ಅವರಲ್ಲಿ ಶ್ರೀವಿದ್ಯಾರಣ್ಯತೀರ್ಥರು ಮುಖ್ಯರಾಗಿದ್ದಾರೆ. ಹೀಗೆ ಶ್ರೀಅಕ್ಷೋಭ್ಯತೀರ್ಥರು ಬಹುಕಾಲ ಶ್ರೀಮದಾಚಾರ್ಯರ ವೇದಾಂತ ಸಾಮ್ರಾಜ್ಯವನ್ನಾಳಿ ಪಾಷ್ಟಿಕವಂಶಭೂಷಣರೂ "ಸ್ವರ್ಣಭಂಡಾರಿ(ಚಿನ್ನ ಭಂಡಾರಿ)"ಮನೆತನದ ತಮ್ಮ ಪೂರ್ವಾಶ್ರಮ ಬಂಧುಗಳಾದ ಶ್ರೀರಘುನಾಥನಾಯಕ

ರಿಗೆ ಆಚಾರ್ಯರ ಅಪ್ಪಣೆ-ಪ್ರೇರಣೆಯಂತೆ ಪರಮಹಂಸಾಶ್ರಮವಿತ್ತು "ಶ್ರೀಜಯತೀರ್ಥರು" ಎಂಬ ಅಭಿಧಾನದಿಂದ ಶ್ರೀಮದಾಚಾರ್ಯರ ವೇದಾಂತ ಸಾಮ್ರಾಜ್ಯದಲ್ಲಿ ಪಟ್ಟಾಭಿಷೇಕಮಾಡಿ , ಅವರಿಗೆ ಸಕಲಶಾಸ್ತ್ರಗಳ ಪಾಠಹೇಳಿ ಮಹಾಪಂಡಿತರನ್ನಾಗಿ ಮಾಡಿ ಶ್ರೀಮದಾಚಾರ್ಯರ ವೇದಾಂತಸಾಮ್ರಾಜ್ಯ ಮಹಾಸಂಸ್ಥಾನವನ್ನು ಒಪ್ಪಿಸಿ ಕೊಟ್ಟು ಎರಗೊಳದಲ್ಲಿ ಬೃಂದಾವನಸ್ಥರಾದರು.

ಶ್ರೀಇಂದ್ರಾವತರರೂ ಶೇಷಾಂಶರೂ ಆದ ಶ್ರೀಜಯತೀರ್ಥ ಗುರುಸಾರ್ವಭೌಮರು ಆಚಾರ್ಯರ ಸರ್ವಮೂಲ ಗ್ರಂಥಗಳಿಗೆ ಟೀಕೆಗಳನ್ನು ರಚಿಸಿ ಶ್ರೀಮದಾಚಾರ್ಯರ ಸಿದ್ಧಾಂತವೇ ಸೂತ್ರಕಾರರಿಗೆ ಅಭಿಮತವಾದ ವೈದಿಕ ತತ್ವವಾದ ಮತವೆಂದು ಸಾಧಿಸಿ ಆಚಾರ್ಯರ ಸಿದ್ಧಾಂತಗ್ರಂಥಗಳ ಪಾಠಪ್ರವಚನವು ಅವ್ಯಾಹತವಾಗಿ ನಡೆದು ಬಂದು ಸಜ್ಜನರ ಉದ್ಧಾರವಾಗುವಂತೆ ಮಹೋಪಕಾರ ಮಾಡಿದರು. ಭಾಷ್ಯಗಳಿಗೆ ಟೀಕೆಗಳನ್ನು ರಚಿಸಿದ ಅವರು "ಟೀಕಾಚಾರ್ಯ"ರೆಂದೇ ಜಗನ್ಮಾನ್ಯರಾದರು. ಶ್ರೀಜಯತೀರ್ಥರು ಅನೇಕ ದುರ್ವಾದಿಗಳನ್ನು ಜಯಿಸಿ ಸಿದ್ಧಾಂತಕ್ಕೆ ಬಂದಿದ್ದ ಕಂಟಕವನ್ನು ಪರಿಹರಿಸಿ ದ್ವೈತಸಿದ್ಧಾಂತದ ವಿಜಯಪತಾಕೆಯನ್ನು ಜಗತ್ತಿನಲ್ಲೆಲ್ಲಾ ಮೆರೆಸಿದರು. ಇವರ ಕೃತಿಗಳನ್ನು ನೋಡಿ ಆಶ್ಚರ್ಯಗೊಂಡು ಗುರುಗಳಗ್ರಂಥ ಶೈಲಿಯಿಂದ ಪ್ರಭಾವಿತರಾದ ಶ್ರೀವಿದ್ಯಾರಣ್ಯಮುನಿಗಳು ಶ್ರೀಟೀಕಾಕಾರರ ಗ್ರಂಥಗಳನ್ನು ಕರ್ನಾಟಕ ರಾಜಧಾನಿಯಲ್ಲಿ ಆನೆಯಮೇಲೆ ಮೆರೆಸಿದರು.

ಶ್ರೀಜಯತೀರ್ಥ ಗುರುಚರಣರು ಮಹಾಸಂಸ್ಥಾನವನ್ನು ಕ್ರಿ.ಶ. 1365ರಿಂದ 1388ರ ವರೆಗೆ ಪರಿಪಾಲಿಸಿ ಪಾಷ್ಟಿಕ ವಂಶಾವತಂಸರೂ ಪೂರ್ವಾಶ್ರಮ ಬಂಧುಗಳೂ ತಮ್ಮಲ್ಲೇ ಅಧ್ಯಯನಮಾಡಿ ಮಹಾಪಂಡಿತರಾಗಿದ್ದ ಶ್ರೀಕೃಷ್ಣಭಟ್ಟರಿಗೆ ಪರಮಹಂಸಾಶ್ರಮವಿತ್ತು "ವಿದ್ಯಾಧಿರಾಜರು" ಎಂಬ ಹೆಸರಿನಿಂದ ಸಾಮ್ರಾಜ್ಯಾಭಿಷೇಕಮಾಡಿ ಆಚಾರ್ಯರ ವೇದಾಂತಸಾಮ್ರಾಜ್ಯವನ್ನುಒಪ್ಪಿಸಿಕೊಟ್ಟು ಕ್ರಿ.ಶ.1389ನೇ ವಿಭವ ಸಂ|| ಆಷಾಢ ಬಹುಳ ಪಂಚಮಿಯಂದು ಬೃಂದಾವನಸ್ಥರಾದರು.

"ಯಸ್ಯ ವಾಕ್ಕಾಮಧೇನುರ್ನಃ ಕಾಮಿತಾರ್ಥಾನ್ ಪ್ರಯಚ್ಛತಿ ||
ಸೇವೇ ತಂ ಜಯಯೋಗೀಂದ್ರಂ ಕಾಮಬಾಣಚ್ಛಿದಂ ಸದಾ||"

ಶ್ರೀವಿದ್ಯಾಧಿರಾಜತೀರ್ಥರು ಕ್ರಿ.ಶ. 1388ರಿಂದ 1392ರ ವರೆಗೆ ವೇದಾಂತ ಸಾಮ್ರಾಜ್ಯವನ್ನು ಪರಿಪಾಲಿಸಿ ಶ್ರೀಮದಾಚಾರ್ಯರ ಸಿದ್ಧಾಂತವು ವ್ಯಾಪಕ ರೀತಿಯಿಂದ ಬಹುಮುಖವಾಗಿ ಪ್ರಸಾರವಾಗಿ ಸಜ್ಜನರ ಉದ್ಧಾರವಾಗಬೇಕೆಂಬ ಮಹೋದ್ದೇಶದಿಂದ ಶ್ರೀಸರ್ವಜ್ಞರ, ಶ್ರೀಟೀಕಾರಾಯರ ಪ್ರೇರಣೆಯಂತೆ ಪಾಷ್ಟಿಕ ಕುಲದೀಪಕರಾದ ತಮ್ಮ ಪೂರ್ವಾಶ್ರಮಬಂಧುಗಳೂ ಷಡ್ದರ್ಶನಾಚಾರ್ಯರೂ ವಾದವಿದ್ಯಾಕೋವಿದರೂ ಆದ ಶ್ರೀರಾಜದೇವ ಮತ್ತು ಶ್ರೀವಾಸುದೇವಶಾಸ್ತ್ರಿಗಳೆಂಬ ಈರ್ವರಿಗೆ ಪರಮಹಂಸಾಶ್ರಮವಿತ್ತು ದ್ವೈತಸಿದ್ಧಾಂತ ಸಾಮ್ರಾಜ್ಯ ಸಿಂಹಾಸನ

ದಲ್ಲಿ ಮುಂಡಿಸಿ "ಶ್ರೀರಾಜೇಂದ್ರತೀರ್ಥರು" ಮತ್ತು "ಶ್ರೀಕವೀಂದ್ರತೀರ್ಥರು" ಎಂಬ ಅಭಿಧಾನಗಳಿಂದ ಸಾಮ್ರಾಜ್ಯ ಪಟ್ಟಾಭಿಷೇಕ ಮಾಡಿ ಶ್ರೀಮದಾಚಾರ್ಯರ ಮಹಾ ಸಂಸ್ಥಾನಾಧಿಪತಿಗಳೆಂದು ಘೋಷಿಸಿ ಅನುಗ್ರಹಿಸಿದರು. ಮತ್ತು ರಾಜೇಂದ್ರ ತೀರ್ಥರಿಗೆ ಶ್ರೀಮದಾಚಾರ್ಯರ ಮಹಾಸಂಸ್ಥಾನದ ಆರಾಧ್ಯಪ್ರತಿಮೆಗಳಾದ ಶ್ರೀ ಮೂಲಗೋಪಾಲಕೃಷ್ಣ ಶ್ರೀ ಪಟ್ಟಾಭಿರಾಮ ವ್ಯಾಸಮುಷ್ಟಿಗಳು ಬಲಮುರಿಶಂಖ ರತ್ನಗರ್ಭಶಾಲಿಗ್ರಾಮ ರಾಮಟಂಕಿವರಹಗಳನ್ನೂ: ಕವೀಂದ್ರತೀರ್ಥರಿಗೆ ಶ್ರೀಮದಾ ಚಾರ್ಯರ ಮಹಾಸಂಸ್ಥಾನದ ಪ್ರಧಾನಪ್ರತಿಮೆಗಳಾದ ಶ್ರೀಬ್ರಹ್ಮಕರಾರ್ಚಿತ ಶ್ರೀ ಮೂಲರಾಮದೇವರು ಶ್ರೀಸರ್ವಜಜ್ಞಕರಾರ್ಚಿತ ಶ್ರೀ ದಿಗ್ವಿಜಯ ರಾಮದೇವರು ಶ್ರೀಜಯತೀರ್ಥಕರಾರ್ಚಿತ ಶ್ರೀಜಯರಾಮದೇವರು ಶ್ರೀವಿಠಲಾದಿ ಇತರ ಪ್ರತಿಮೆ ಗಳು ವ್ಯಾಸ ಮುಷ್ಟಿಗಳು ರತ್ನಗರ್ಭಶಾಲಿಗ್ರಾಮ ಬಲಮುರಿಶಂಖ ರಾಮಟಂಕಿ ವರಹಗಳನ್ನೂ ಅನುಗ್ರಹಿಸಿ ಶ್ರೀಮದಾಚಾರ್ಯರ ವೇದಾಂತ ಸಾಮ್ರಾಜ್ಯವನ್ನು ವಂಶಪರಂಪರೆಯಾಗಿ ಪರಿಪಾಲಿಸುತ್ತಾ ಸಿದ್ಧಾಂತವನ್ನು ವ್ಯಾಪಕವಾಗಿ ಪ್ರಸಾರ ಮಾಡುತ್ತಾ ಬರಬೇಕೆಂದು ಆಜ್ಞಾಪಿಸಿ ಶ್ರೀಹರಿಧ್ಯಾನಪರರಾದರು.

ಹೀಗೆ ಶ್ರೀ ವಿದ್ಯಾಧಿರಾಜತೀರ್ಥರವರೆಗೆ ಅವಿಚ್ಛಿನ್ನವಾಗಿ ಯಶಸ್ವಿಯಾಗಿ ನಡೆದುಬಂದ ಹಂಸನಾಮಕ ಪರಮಾತ್ಮನ ಜ್ಞಾನಪರಂಪರೆಯು ಮಧ್ವಾಚಾರ್ಯರ ವೇದಾಂತ ಸಾಮ್ರಾಜ್ಯವು ಶ್ರೀವಿದ್ಯಾಧಿರಾಜರ ಕಾಲದಲ್ಲಿ ಇಬ್ಭಾಗವಾಗಿ ಶ್ರೀ ರಾಜೇಂದ್ರತೀರ್ಥರು ವಿರಾಜಿಸಿದ ಮಹಾಸಂಸ್ಥಾನವು 'ಪೂರ್ವಾದಿಮಠ' 'ಶ್ರೀ ರಾಜೇಂದ್ರಮಠ'ವೆಂದೂ; ಶ್ರೀ ಕವೀಂದ್ರತೀರ್ಥರು ವಿರಾಜಿಸಿದ ಮಹಾಸಂಸ್ಥಾನವು "ದಕ್ಷಿಣಾದಿಮಠ" "ಶ್ರೀಕವೀಂದ್ರತೀರ್ಥರಮಠ" "ಶ್ರೀವಿದ್ಯಾಮಠ"ವೆಂದೂ ವಿಖ್ಯಾತವಾಗಿ ಜಗನ್ಮಾನ್ಯವಾದವು. ಮುಂದೆ ಶ್ರೀರಾಜೇಂದ್ರತೀರ್ಥರು ಮುಂಡಿಸಿದ ಶ್ರೀಮದಾಚಾರ್ಯರ ಮಹಾಸಂಸ್ಥಾನದಲ್ಲಿ ಶ್ರೀವ್ಯಾಸರಾಜಗುರುಸಾರ್ವಭೌಮರು ವಿರಾಜಿಸಿ ಜಗದ್ವಿಖ್ಯಾತರಾದ್ದರಿಂದ, ಆ ಮಹಾಸಂಸ್ಥಾನವು "ಶ್ರೀವ್ಯಾಸರಾಜರಮಠ" ವೆಂದು ವಿಖ್ಯಾತವಾಯಿತು. ಇದರಂತೆ ಶ್ರೀಕವೀಂದ್ರತೀರ್ಥರು ಮುಂಡಿಸಿದ ಶ್ರೀ ಮಧ್ವಾಚಾರ್ಯರ ಮಹಾಸಂಸ್ಥಾನದಲ್ಲಿ ಶ್ರೀಕವೀಂದ್ರರ ತರುವಾಯ ಶ್ರೀವಾಗೀಶ ತೀರ್ಥರು (1398-1406) ಶ್ರೀರಾಮಚಂದ್ರತೀರ್ಥರು (1406-1435) ಶ್ರೀವಿಬುಧೇಂದ್ರತೀರ್ಥರು (1435-1490) ಶ್ರೀಜಿತಾಮಿತ್ರತೀರ್ಥರು(1490-1992) ಶ್ರೀರಘುನಂದತೀರ್ಥರು (1492-1504) ಶ್ರೀಸುರೇಂದ್ರತೀರ್ಥರು (1504-1575) ಶ್ರೀವಿಜಯೀಂದ್ರತೀರ್ಥರು (1575-1614) ಶ್ರೀಸುಧೀಂದ್ರ ತೀರ್ಥರುಗಳು (1614-1623) ವಿರಾಜಿಸಿ ಶ್ರೀಸುಧೀಂದ್ರತೀರ್ಥರ ತರುವಾಯ ಶ್ರೀರಾಘವೇಂದ್ರಸ್ವಾಮಿಗಳವರು ಕ್ರಿ.ಶ. 1623 ರಿಂದ 1671ರ ವರೆಗೆ ವೇದಾಂತ

ಸಾಮ್ರಾಜ್ಯವನ್ನಾಳಿ ಜಗನ್ಮಾನ್ಯರಾದ್ದರಿಂದ ಆ ಮಹಾಸಂಸ್ಥಾನವು "ಶ್ರೀರಾಘವೇಂದ್ರಸ್ವಾಮಿಗಳವರ ಮಠ"ವೆಂದೇ ವಿಖ್ಯಾತವಾಗಿ ಲೋಕವಂದ್ಯವಾಗಿದೆ.

ಇಂತಹ ಜಗನ್ಮಾನ್ಯವಾದ ಶ್ರೀಮದಾಚಾರ್ಯರ ಮಹಾಸಂಸ್ಥಾನಗಳಾದ ರಾಜೇಂದ್ರತೀರ್ಥರ ಪೂರ್ವಾದಿಮಠ, ಶ್ರೀಕವೀಂದ್ರತೀರ್ಥರ ದಕ್ಷಿಣಾದಿಮಠಗಳಲ್ಲಿ ಶ್ರೀಹರಿಯ ವಿಶೇಷಸನ್ನಿಧಾನಯುಕ್ತರೂ, ಶ್ರೀವಾಯುದೇವರ ಸತತಸನ್ನಿಧಾನ ವಿರಾಜಿತರೂ ಆದ ಶ್ರೀಪ್ರಹ್ಲಾದರಾಜರು ಕ್ರಮವಾಗಿ ಶ್ರೀವ್ಯಾಸರಾಜಗುರುಸಾರ್ವಭೌಮರು ಮತ್ತು ಶ್ರೀರಾಘವೇಂದ್ರಗುರುಸಾರ್ವಭೌಮರಾಗಿ ಅವತರಿಸಿ ಶ್ರೀಹಂಸನಾಮಕಪರಮಾತ್ಮನ ಜ್ಞಾನಪೀಠದ ಕೀರ್ತಿಯನ್ನು ಉಜ್ವಲಗೊಳಿಸಿ, ಅನಿತರ ಸಾಧಾರಣ ಗ್ರಂಥರಚನೆಮಾಡಿ ಆಚಾರ್ಯ ಪರಂಪರಾಗತ ಸತ್ಸಂಪ್ರದಾಯ ಪಾಠ ಪ್ರವಚನ ಪರಂಪರೆಯಯನ್ನು ರಕ್ಷಿಸಿಕೊಂಡುಬಂದು, ಪರವಾದಿದಿಗ್ವಿಜಯ, ಸಿದ್ಧಾಂತ ಸ್ಥಾಪನೆ, ಶಿಷ್ಯಭಕ್ತಜನೋದ್ಧಾರ, ರಾಜಾಧಿರಾಜರಿಗೆ ಗುರುಗಳಾಗಿದ್ದು ಸಲಹೆ-ಉಪದೇಶಗಳಿಂದ ನಾಡು, ನುಡಿ, ಸಂಸ್ಕೃತಿ, ಧರ್ಮ, ವಿವಿಧ ವಿದ್ಯೆಗಳು, ಕಲೆಗಳು ಅಭಿವೃದ್ಧಿಸಿ ರಾಷ್ಟ್ರದ ಸರ್ವಾಂಗೀಣಉನ್ನತಿಯಾಗುವಂತೆಮಾಡಿ, ಅಪಂಡಿತಪಾಮರರ, ಸಕಲಜನರ ಹಿತಸಾಧನೆಮಾಡಿ, ತಮ್ಮ ಅಗಾಧ ತಪಸ್ಸನ್ನು ಜಗತ್ತಿನಕಲ್ಯಾಣಕ್ಕಾಗಿ ಧಾರೆಯೆರೆದು, ಅಸದೃಶಮಹಿಮಾಪ್ರದರ್ಶನಗಳಿಂದ ಲೋಕಮಾನ್ಯರಾದರು.

ಇಂದು ಜನತೆಯ ಆಶೋತ್ತರಗಳನ್ನು ಈಡೇರಿಸಿ ಅವರಲ್ಲಿ ಧಾರ್ಮಿಕವಿಶ್ವಾಸ ಬೆಳಸುವುದರಲ್ಲಿ ಶ್ರೀಪ್ರಹ್ಲಾದ-ಬಾಹ್ಲೀಕ-ವ್ಯಾಸರಾಜಾವತಾರಿಗಳಾದ ಶ್ರೀರಾಘವೇಂದ್ರಸಾಮಿಗಳವರು ಅದ್ವಿತೀಯರಾಗಿದ್ದಾರೆ. ಈ ಮಹಾಮಹಿಮರು ಜನರ ಕಣ್ಣಿಗೆ ಕಾಣದಂತಾಗಿ 314 ವರ್ಷಗಳು ಸಂದಿದ್ದರೂ ಅವರ ದಿವ್ಯತೇಜಸ್ಸು ಇಂದಿಗೂ ಎಲ್ಲೆಡೆಯಲ್ಲಿಯೂ ಪಸರಿಸಿದೆ; ಮತ, ಕೋಮುಗಳ ಭೇದವೆಣಿಸದೆ ಎಲ್ಲ ಸಜ್ಜನಸೂ ಇವರ ಸೇವೆಗೈದು ಪುನೀತರಾಗಿದ್ದಾರೆ, ಪುನೀತರಾಗುತ್ತಿದ್ದಾರೆ, ಹಿಂದೆ ಅಸುರೀಶಕ್ತಿ, ನಾಸ್ತಿಕತನ ಮತ್ತು ಸ್ವಾರ್ಥವೇ ಮೂರ್ತಿವೆತ್ತಂತಿದ್ದ ಹಿರಣ್ಯಕಶಿಪುವಿನಪುತ್ರರಾಗಿ, ಕುಪಥಗಾಮಿಯಾಗಿದ್ದ ತಂದೆಗೇ ವಿರುದ್ಧವಾಗಿ, ದೇವರಮಹಿಮೆಯನ್ನು ಅವನಿಗೆ ಬೋಧಿಸಿ, ಅದರ ಪರಿಣಾಮವಾಗಿ ತಂದೆಯಿಂದ ಚಿತ್ರಹಿಂಸೆಗೆ ಗುರಿಯಾಗಿ, ನಿರ್ಮಲಭಕ್ತಿಯ ಪ್ರಭಾವದಿಂದ ಶ್ರೀನರಸಿಂಹದೇವರನ್ನು ಕಂಬದಿಂದ ಹೊರತರೆಸಿದ ಶ್ರೀಪ್ರಹ್ಲಾದರಾಜರೇ ಶ್ರೀರಾಘವೇಂದ್ರಸ್ವಾಮಿಗಳವರು. ಅಂತೆಯೇ ಅವರು ಇಂಥ ಕಲಿಯುಗದಲ್ಲೂ ಇಷ್ಟುವಿರೋಧಶಕ್ತಿಗಳು ತಲೆಯೆತ್ತಿನಿಂತು ಭಗವದ್ಭಕ್ತರು, ಆಸ್ತಿಕರು, ಸಜ್ಜನರುಗಳ ಹಾದಿಗೆ ಮುಳ್ಳಾಗಿದ್ದರೂ ಶ್ರೀಭಗವನ್ಮಹಿಮೆಯನ್ನು ತಮ್ಮ ಅಗಾಧಮಹಿಮೆಯ ಮೂಲಕ ಜನತೆಗೆ ತೋರಿಸಿ ಭಾಗವತಧರ್ಮ ಪ್ರಸಾರಮಾಡುತ್ತಾ "ಕಲಿಯುಗ ಕಲ್ಪತರು"ಗಳೆನಿಸಿ ಪ್ರಖ್ಯಾತರಾಗಿದ್ದಾರೆ.

ಜೀವನದಲ್ಲಿ ದುಃಖಮಯ ಸಂಸಾರದಲ್ಲಿ ರೋಸಿ ಯೋಗಮಾರ್ಗವನ್ನು ಹಿಡಿದು ಹಿಮಾಲಯ ತಪ್ಪಲಿನಂತಹ ಏಕಾಂತಪ್ರದೇಶಗಳಿಗೆ ಹೋಗಿ ಶಾಂತಿ ಪಡೆಯಲಿಚ್ಛಿಸುವ ಸಾಧಕರು ಇಂದಿಗೂ ಇದ್ದಾರೆ. ಅಂಥವರು ತಮ್ಮನ್ನಾಶ್ರಯಿಸಿಬಂದ ಇತರ ಸಾಧಕರಿಗೂ ಪ್ರಪಂಚದಿಂದ ದೂರವಾಗಿರಬೇಕೆಂದೇ ಬೋಧನೆಮಾಡುವುದು ಅನಿವಾರ್ಯ. ಇದಕ್ಕೆವಿರುದ್ಧವಾಗಿ ಕ್ಷುದ್ರದೇವತೋಪಾಸನೆಯಿಂದ ಅಲ್ಪಸಿದ್ಧಿಗಳನ್ನು ಪಡೆದು, ಅದರಿಂದ ಮತ್ತು ಇಂದ್ರಜಾಲಾದಿಗಳಿಂದ ಜಗತ್ತನ್ನು ಮರುಳು ಮಾಡಿ ತಮ್ಮಲ್ಲಿ ಬರುವ 'ಸಂಸಾರಿ'ಗಳಿಗೆ ಧನ-ಕನಕ-ಗೃಹ ಉದ್ಯೋಗಗಳನ್ನು ಕೊಡಿಸುತ್ತೇವೆಂದು ಹೇಳಿಕೊಳ್ಳುವ ಸಿದ್ಧರಿಗೂ ಈ ಕಾಲದಲ್ಲಿ ಕೊರತೆಯೇನಿಲ್ಲ ! ಆದರೆ ಈ ಎರಡು ಅತ್ಯಂತ ವಿರುದ್ಧಮಾರ್ಗಗಳೂ ಈ ಕಾಲದಲ್ಲಿ ಕ್ಷೇಮಕರವಲ್ಲವೆಂದು ಹೇಳಬಹುದು.

ಈ ಜಗತ್ತಿನ ನಿಯಮಗಳಿಗೆ ಕಟ್ಟುಬಿದ್ದು ಇರುವಷ್ಟು ಕಾಲ ಇದನ್ನು ಬಿಟ್ಟು ಹೋಗಲಾರದೆ, ಇಲ್ಲಿ ತನ್ನ ಅಲ್ಪತೆಯನ್ನು ತಿಳಿದು,ದೈವಕ್ಕೆ ಶರಣುಹೋಗಿ ಸಾಧನ ಮಾಡಿಕೊಳ್ಳಬಯಸುವ ಸಜ್ಜನರಿಗೆ ಶ್ರೀರಾಘವೇಂದ್ರಸ್ವಾಮಿಗಳಗಿಂತ ಬೇರೆ ಮಾರ್ಗದರ್ಶಿ ಗುರುಗಳಿಲ್ಲ! ಆ ಮಹನೀಯರು ತಮ್ಮಲ್ಲಿ ಅನನ್ಯಗತಿಕನಾಗಿ ಶರಣು ಬರುವ ಭಕ್ತನ ಪ್ರಾಪಂಚಿಕ ದುಃಖಗಳನ್ನು ನಿವಾರಿಸಿ, ಅವನ ಇಷ್ಟಾರ್ಥಗಳನ್ನು ಕಲ್ಪತರುವಿನಂತೆ ಪೂರ್ಣಮಾಡಿ, ಕ್ರಮೇಣ ಈ ಜಗತ್ತಿನ ಅಲ್ಪತೆ-ಅಪೂರ್ಣತೆ ಹಾಗೂ ಅಸ್ಥಿರತೆಗಳನ್ನು ಮನದಟ್ಟು ಮಾಡಿಕೊಟ್ಟು,ದೈವದ ಕಡೆಗೆ ಅವನಮನಸ್ಸಿನ ಪ್ರಾವಣ್ಯವನ್ನು ಸ್ಥಿರಗೊಳಿಗೆ, ಅವನಿಂದ ತಕ್ಕ ಸಾಧನಮಾಡಿಸಿ ಅವನ ಗುರಿ ಮುಟ್ಟಿಸುವರು. ಇಂಥ ಲೋಕಗುರುಗಳು ಮತ್ತೊಬ್ಬರಿಲ್ಲ, ಈ ಮಹಾಮಹಿಮರಿಂದ ಕಲಿಯುಗದಲ್ಲಿ ನಮ್ಮ ಧರ್ಮ ಮತ್ತು ಸಂಸ್ಕೃತಿಯ ರಕ್ಷಣೆಯಾಗಬೇಕೆಂಬುದು ಭಗವಂತನ ಇಚ್ಛೆ! ಆದ್ದರಿಂದಲೇ ಅನೇಕ ಸ್ಥಳಗಳಲ್ಲಿ ಈ ಗುರುಗಳ ಬೃಂದಾವನಗಳು ಸ್ಥಾಪಿತವಾಗಿ ಭಕ್ತರು ಸೇವೆಸಲ್ಲಿಸಿ ಕೃತಾರ್ಥರಾಗಿ ಜೀವನಸಾಫಲ್ಯವನ್ನು ಪಡೆಯುತ್ತಿರುವರು. ಇದು ಭಾರತದಾದ್ಯಂತ, ಅಷ್ಟೇ ಏಕೆ, ಪರದೇಶಗಳಲ್ಲೆಲ್ಲಾ ವ್ಯಾಪಿಸುತ್ತಿದೆ! ವ್ಯಾಪಿಸುವುದು ಅನಿವಾರ್ಯವೂ ಕೂಡ! ಇಂಥ ಸಮಯದಲ್ಲಿ ಪ್ರತಿಯೊಬ್ಬ ಸಜ್ಜನನೂ ಎಲ್ಲಾ ತೊಡಕುಗಳನ್ನು ಹರಿದೊಗೆದು ಆಜೀವಪರ್ಯಂತ ಇವರ ಪಾದಾಶ್ರಯ ಮಾಡಿ ಉದ್ಧೃತನಾಗಬೇಕು.

ಭಗವತ್ಪ್ರಸಾದದಿಂದಲೇ ಸಕಲಜೀವರ ಉದ್ಧಾರವಾಗುವುದೆಂದು ಶಾಸ್ತ್ರಗಳು ಸಾರುವುವು. ಭಗವತ್ಪ್ರಸಾದವಾಗಬೇಕಾದರೆ ಹಿಂದೆ ನಿರೂಪಿಸಿದಂತೆ ಅವನಲ್ಲಿ ಮಹಾತ್ಮ್ಯಜ್ಞಾನಪೂರ್ವಕ ಭಕ್ತಿಮಾಡಬೇಕು. ಇಂಥ ಹರಿಭಕ್ತಿಗೆ ಗುರುಭಕ್ತಿಯು ಸಾಧಕವಾದ್ದರಿಂದ ಗುರುಗಳಲ್ಲಿಯೂ ತಾರತಮ್ಯಾನುಸಾರವಾಗಿ ಭಕ್ತಿಮಾಡಬೇಕು. ಹಿಂದೆಯೇ ವಿವರಿಸಿದಂತೆ ಸಮಗ್ರ ಗುರುಲಕ್ಷಣೋಪೇತರಾಗಿ "ನಿರುಪಪದ" ಗುರುಶಬ್ದವಾಚ್ಯರಾಗಿ, ಶ್ರೀಹರಿಯಪಂಚರೂಪಗಳು, ಮತ್ತು ಶ್ರೀವಾಯುದೇವರ ಸತತ

ಮಹಾ ಸನ್ನಿಧಾನದಿಂದ ಶೋಭಿತರಾಗಿ ಜಗತ್ತನ್ನು ಪೊರೆಯುತ್ತಿರುವ ಶ್ರೀ ಪ್ರಹ್ಲಾದ... ಬಾಹ್ಲೀಕ–ವ್ಯಾಸರಾಜಾವತಾರಿಗಳಾದ ಶ್ರೀ ರಾಘವೇಂದ್ರ ಸ್ವಾಮಿಗಳವರೇ ಭಾರತ ದೇಶದ ಜನತೆಯ ಸ್ವರೂಪೋದ್ಧಾರಕ ಗುರುಗಳಾದ್ದರಿಂದ ಇವರಲ್ಲಿ ಭಕ್ತಿಮಾಡಬೇಕೆಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಇಂತಹ ಮಹಿಮೋಪೇತರಾದ ಶ್ರೀರಾಘವೇಂದ್ರಸ್ವಾಮಿಗಳವರಲ್ಲಿ ಭಕ್ತಿಯುಂಟಾಗಬೇಕಾದರೆ ಅವರ ಮತ್ತು ಅವರ ಹಿಂದಿನ ಅವತಾರಗಳ, ಮೂಲರೂಪದ ಚರಿತ್ರೆ, ಅವರ ಜ್ಞಾನ, ಭಕ್ತಿ, ವೈರಾಗ್ಯ, ತಪಸ್ಸು, ಅವರಲ್ಲಿ ಶ್ರೀಹರಿಯು ಮಾಡಿದ ವಿಶೇಷಾನುಗ್ರಹ, ಅವರೆಸಗಿದ ಲೋಕಕಲ್ಯಾಣ ಮಾಡಿದ ಉಪದೇಶಗಳು, ತೋರಿದ ಮಹಿಮೆಗಳನ್ನು ಅವರ ಭಕ್ತರು, ಭಕ್ತರಾಗಬಯಸುವವರು ಚೆನ್ನಾಗಿ ತಿಳಿಯುವದು ಅತ್ಯಾವಶ್ಯವಾಗಿದೆ. ಅಂತೆಯೇ ನಾವು ಅನೇಕ ಪ್ರಮಾಣಗಳನ್ನು ಪರಿಶೀಲಿಸಿ, ವಿವೇಚಿಸಿ ಆ ಮಹನೀಯರ ಚರಿತಾಮೃತವನ್ನು "ಕಲಿಯುಗ ಕಲ್ಪತರು" ಎಂಬ ಹೆಸರಿನಿಂದ ಶ್ರೀಗುರುರಾಜರ ಪ್ರೇರಣೆಯಂತೆ ರಚಿಸಿ ಶ್ರೀಗುರುರಾಜರ ಭಕ್ತರಿಗೆ ನೀಡುತ್ತಿದ್ದೇವೆ. ಇಹಲೋಕದಲ್ಲಿ ದುಃಖಪರಿಹಾರ, ಸುಖಶಾಂತಿ–ಸಂತೋಷಗಳನ್ನೂ, ಆತ್ಮೋದ್ಧಾರವನ್ನೂ, ಆಮುಷ್ಮಿಕದಲ್ಲಿ ಶಾಶ್ವತ ಸುಖವನ್ನೂ ಬಯಸುವ ಪ್ರತಿಯೊಬ್ಬ ಭಕ್ತನೂ ಈ ಕೃತಿಯನ್ನು ಓದಿ ಅವರಲ್ಲಿ ಭಕ್ತಿಮಾಡಿ ಆ ಗುರುಸಾರ್ವಭೌಮರ ಪರಮಾನುಗ್ರಹಕ್ಕೆ ಪಾತ್ರರಾದಲ್ಲಿ ನಮ್ಮ ಶ್ರಮವು ಸಾರ್ಥಕವಾಗುವುದು, ಶ್ರೀಗುರುರಾಜರು ಸಕಲರಿಗೂ ಸನ್ಮಂಗಳಗಳನ್ನು ಕರುಣಿಸಲಿ ಎಂದು ಪ್ರಾರ್ಥಿಸುತ್ತೇವೆ.

ಈಗ ಓದಿ "ಕಲಿಯುಗ ಕಲ್ಪತರು"ವಿನ ಅಮರ ಚರಿತಾಮೃತವನ್ನು.

ಭಾವ ಸಂ॥ಚೈತ್ರ॥ಶುಕ್ಲ
ಶ್ರೀರಾಮನವಮೀ
ತಾ॥ ೨೦–೪–೧೯೭೪
ಬೆಂಗಳೂರು

ಶ್ರೀ ಗುರುರಾಜರ ಚರಣಕಿಂಕರ
ಸಜ್ಜನ ವಿಧೇಯ,
ಶ್ರೀ ರಾಜಾ ಎಸ್. ಗುರುರಾಜಾಚಾರ್ಯ

ಕಲ್ಯಾಣಾದ್ಭುತಗಾತ್ರಾಯ ಕಾಮಿತಾರ್ಥಪ್ರದಾಯಿನೇ।
ಶ್ರೀಮದ್ವೇಂಕಟನಾಥಾಯ ಶ್ರೀನಿವಾಸಾಯ ತೇ ನಮಃ





ಶ್ರೀ ಪದ್ಮಾವತೀ ಶ್ರೀ ವೇಂಕಟೇಶ್ವರ ದೇವರು, ತಿರುಪತಿ



ಶ್ರೀಹನುಮ–ಭೀಮ–ಮಧ್ವಾವತಾರಿಗಳಾದ ಶ್ರೀವಾಯುದೇವರು




ದ್ವೈತ ಟೀಕಾಕಾರರಾದ

ಶ್ರೀಮಜ್ಜಯತೀರ್ಥಗುರುಸಾರ್ವಭೌಮರು



ಶ್ರೀವಿಜಯೀಂದ್ರತೀರ್ಥರ ಬೃಂದಾವನ, ಕುಂಭಕೋಣ.



ಶ್ರೀಸುಧೀಂದ್ರತೀರ್ಥರ ಬೃಂದಾವನ, ನವಬೃಂದಾವನ.



ಶ್ರೀಗುರುರಾಜರ ಮೂಲಬೃಂದಾವನ, ಮಂತ್ರಾಲಯ.



ಶ್ರೀರಾಘವೇಂದ್ರತೀರ್ಥಗುರುಸಾರ್ವಭೌಮರು




ಶ್ರೀವಾದೀಂದ್ರತೀರ್ಥರ ಬೃಂದಾವನ, ಮಂತ್ರಾಲಯ.

ಶ್ರೀ ಧೀರೇಂದ್ರ ತೀರ್ಥ ಶ್ರೀಪಾದಂಗಳವರು



ಧರಣೀಮಂಡಲೇ ಖ್ಯಾತಂ ಧೈರ್ಯಾದಿ ಗುಣಬೃಂಹಿತಮ್ ।
ಧಿಕ್ಕೃತಾಶೇಷವಾದೀಭಂ ಧೀರಸಿಂಹಗುರುಂ ಭಜೇ ॥

ಶ್ರೀಧೀರೇಂದ್ರತೀರ್ಥರ ಬೃಂದಾವನ, ಹೊಸರಿತ್ತಿ.



ಶ್ರೀಸುಜ್ಞಾನೇಂದ್ರತೀರ್ಥರು




ಶ್ರೀಸುಧರ್ಮೇಂದ್ರತೀರ್ಥರ ಬೃಂದಾವನ, ಮಂತ್ರಾಲಯ.



ಶ್ರೀಸುಕೃತೀಂದ್ರತೀರ್ಥರು



ಶ್ರೀಸುಶೀಲೇಂದ್ರತೀರ್ಥರು



ಶ್ರೀಸುಜಯೀಂದ್ರತೀರ್ಥರು



ಶ್ರೀಸುಶಮೀಂದ್ರತೀರ್ಥರು

ಗ್ರಂಥಪ್ರಕಾಶನ ಸಹಾಯಕರ ತಾಂದೆತಾಯಿಗಳು





ದಿ||ಶ್ರೀ||ಹೆಚ್. ರಾಜೈಂಗಾರ್ ಮತ್ತು ಶ್ರೀಮತಿ ರತ್ನಮ್ಮ



ಕಲಿಯುಗ ಕಲ್ಪತರು ಗ್ರಂಥಕಾರರು
ಶ್ರೀರಾಘವೇಂದ್ರ ಗುರುವಂಶಭೂಷಣ.
ರಾಜಾ ಶ್ರೀಗುರುರಾಜಾಚಾರ್ಯರು

ಸಾಮ್ರಾಟ್ ಕೃಷ್ಣದೇವರಾಯ ಶ್ರೀವ್ಯಾಸರಾಜರಿಗೆ ಮಾಡಿದ ರತ್ನಾಭಿಷೇಕ



ಶ್ರೀಪ್ರಹ್ಲಾದರಾಜರು ಶ್ರೀಹರಿಭಜನೆ ಮಾಡುತ್ತಿರುವುದು





ಶ್ರೀಪ್ರಹ್ಲಾದರಿಗೆ ಶ್ರೀನೃಸಿಂಹದೇವರ ವರ ಪ್ರದಾನ



ಶ್ರೀರಾಘವೇಂದ್ರ ಸ್ವಾಮಿಗಳವರ ಮಠದಲ್ಲಿ ಪೂಜೆಗೊಳ್ಳುವ ಚತುರ್ಯುಗ
ಮೂರ್ತಿ ಶ್ರೀಬ್ರಹ್ಮಕರಾರ್ಚಿತ ಶ್ರೀಮೂಲರಾಮಚಂದ್ರದೇವರು

ಸತ್ಯಲೋಕದಲ್ಲಿ ಬ್ರಹ್ಮದೇವರು ಶಂಕುಕರ್ಣನಿಗೆ
ಶ್ರೀಹರಿಯಪ್ರೇರಣೆಯಂತೆ ಶಾಪಕೊಡುತ್ತಿರುವುದು





ಶ್ರೀಬಾಹ್ಲೀಕರಾಜರು ಶ್ರೀಕೃಷ್ಣ ಸಮಕ್ಷ ಶ್ರೀಭೀಮಸೇನದೇವರಿಂದ ವರ ಪಡೆಯುತ್ತಿರುವುದು

ಶ್ರೀವ್ಯಾಸರಾಜರಿಗೆ ಶ್ರೀಕೃಷ್ಣ ಒಲಿದು ನರ್ತಿಸುತ್ತಿರುವುದು  ಶ್ರೀಪಾದರಾಜರು ಆಚ್ಚರಿಯಿಂದ ನೋಡುತ್ತಿರುವುದು





ಶ್ರೀವೆಂಕಟನಾಥರಿಗೆ ಶ್ರೀಸರಸ್ವತಿಯ ಉಪದೇಶ

ಶ್ರೀಸುಧೀಂದ್ರರು ಶ್ರೀರಾಯರಿಗೆ ವೇದಾಂತ ಸಾಮ್ರಾಜ್ಯಾಭಿಷೇಕ ಮಾಡುತ್ತಿರುವುದು





ಶ್ರೀ ಶ್ರೀಪಾದರಾಜರ ಬೃಂದಾವನ, ಮುಳಬಾಗಿಲು



ಶ್ರೀರಾಯರು ಶಿಲಾಫಲಕದಲ್ಲಿ ಒಡಮೂಡಿರುವುದು (ನಂಜನಗೂಡು)



ರಾಜಾ. ಎಸ್. ಗುರುರಾಜಾಚಾರ್ಯರು

# ಶ್ರೀಹಂಸನಾಮಕ ಪರಮಾತ್ಮನ ವಂಶವೃಕ್ಷ

1 ಶ್ರೀ ಹಂಸರೂಪಿ ಶ್ರೀಮನ್ನಾರಾಯಣ
2 ಶ್ರೀ ಚತುರ್ಮುಖ ಬ್ರಹ್ಮದೇವರು
3. ಶ್ರೀ ಸನಕ ತೀರ್ಥರು
4. ಶ್ರೀ ಸನಂದನ ತೀರ್ಥರು
5. ಶ್ರೀ ಸನತ್ಕುಮಾರ ತೀರ್ಥರು
6. ಶ್ರೀ ಸನಾತನ ತೀರ್ಥರು
7. ಶ್ರೀ ದೂರ್ವಾಸ ತೀರ್ಥರು
8. ಶ್ರೀ ಜ್ಞಾನನಿಧಿ ತೀರ್ಥರು
9 ಶ್ರೀ ಗರುಡವಾಹನ ತೀರ್ಥರು
10. ಶ್ರೀ ಕೈವಲ್ಯ ತೀರ್ಥರು
11 ಶ್ರೀ ಜ್ಞಾನೇಶ ತೀರ್ಥರು
12. ಶ್ರೀ ಪರ ತೀರ್ಥರು
13 ಶ್ರೀ ಸತ್ಯಪ್ರಜ್ಞ ತೀರ್ಥರು
14. ಶ್ರೀ ಪ್ರಾಜ್ಞ ತೀರ್ಥರು
15. ಶ್ರೀ ಅಚ್ಯುತಪ್ರೇಕ್ಷಾಚಾರ್ಯರು
16. ಶ್ರೀ ಮನ್ಮಧ್ವಾಚಾರ್ಯರು
17 ಶ್ರೀ ಪದ್ಮನಾಭ ತೀರ್ಥರು
18. ಶ್ರೀ ನರಹರಿ ತೀರ್ಥರು
19. ಶ್ರೀ ಮಾಧವ ತೀರ್ಥರು
20. ಶ್ರೀ ಅಕ್ಷೋಭ್ಯ ತೀರ್ಥರು
21 ಶ್ರೀ ಜಯ ತೀರ್ಥರು
22. ಶ್ರೀ ವಿದ್ಯಾಧಿರಾಜರು

**ಶ್ರೀ ಮನ್ಮಧ್ವಾಚಾರ್ಯರು →**

1. ಶ್ರೀ ವಿಷ್ಣು ತೀರ್ಥರು – ಶ್ರೀ ಸೋದೇ ಮಠ
2. ಶ್ರೀ ರಾಮ ತೀರ್ಥರು – ಶ್ರೀ ಶೀರೂರು ಮಠ
3. ಶ್ರೀ ಹೃಷೀಕೇಶ ತೀರ್ಥರು – ಶ್ರೀ ಫಲಿಮಾರು ಮಠ
4. ಶ್ರೀ ವಾಮನ ತೀರ್ಥರು – ಶ್ರೀ ಕಾಣಿಯೂರು ಮಠ
5. ಶ್ರೀ ಅಧೋಕ್ಷಜ ತೀರ್ಥರು – ಶ್ರೀ ಪೇಜಾವರ ಮಠ
6. ಶ್ರೀ ನರಸಿಂಹ ತೀರ್ಥರು – ಶ್ರೀ ಅದಮಾರು ಮಠ
7. ಶ್ರೀ ಜನಾರ್ಧನ ತೀರ್ಥರು – ಶ್ರೀ ಕೃಷ್ಣಾಪುರ ಮಠ
8. ಶ್ರೀ ಉಪೇಂದ್ರ ತೀರ್ಥರು – ಶ್ರೀ ಪುತ್ತಿಗೆ ಮಠ
9. ಶ್ರೀ ಅನಿರುದ್ಧ ತೀರ್ಥರು – ಶ್ರೀ ಸುಬ್ರಹ್ಮಣ್ಯ ಮಠ (ಅದಮಾರು ಮಠದ ಶಾಖೆ)
10. ಶ್ರೀ ಮಹೇಂದ್ರ ತೀರ್ಥರು – ಶ್ರೀ ಚಿತ್ರಾಪುರ ಮಠ (ಶ್ರೀ ಪೇಜಾವರ ಮಠದ ಶ್ರೀ ವಿಜಯಧ್ವಜ ತೀರ್ಥರ ಶಾಖಾ ಮಠ)
11. ಶ್ರೀ ಸತ್ಯ ತೀರ್ಥರು ಶ್ರೀ ಭಂಡಾರಕೇರಿ ಮಠ
12. ಶ್ರೀ ಭೀಮಸೇತು ಮುನಿವೃಂದ ಮಠ (ಭೀಮನಕಟ್ಟೆ)

**ಶ್ರೀ ಪದ್ಮನಾಭ ತೀರ್ಥರು →** ಶ್ರೀ ಲಕ್ಷ್ಮೀಧರ ತೀರ್ಥರು (ಶ್ರೀ ಪದ್ಮನಾಭ ತೀರ್ಥರ ಪರಂಪರೆ) ಈ ಪರಂಪರೆಯಲ್ಲಿ ಬಂದವರು ಶ್ರೀ ಲಕ್ಷ್ಮೀನಾರಾಯಣ ಮುನಿಗಳು (ಶ್ರೀಪಾದರಾಜರು) ಶ್ರೀ ಪಾದರಾಜ ಮಠ, ಮುಳಬಾಗಿಲು ಶ್ರೀ ವಿಜಯನಿಧಿ ತೀರ್ಥರು (ಅಧುನಾ ಪೀಠ ವಿರಾಜಿತರು)

**ಶ್ರೀ ಮಾಧವ ತೀರ್ಥರು →** ಶ್ರೀ ಮಧುಹರಿ ತೀರ್ಥರು (ಶ್ರೀ ಮಾಧವತೀರ್ಥರ ಮಠ) ಮಜ್ಜಿಗೆಹಳ್ಳಿ.

**ಶ್ರೀ ಅಕ್ಷೋಭ್ಯ ತೀರ್ಥರು →**

1. ಶ್ರೀ ಬಾಳಗಾರು ಶ್ರೀ ಅಕ್ಷೋಭ್ಯತೀರ್ಥರ ಸಂಸ್ಥಾನ
2. ಶ್ರೀ ಕೂಡ್ಲಿ ಆರ್ಯ ಅಕ್ಷೋಭ್ಯತೀರ್ಥರ ಮಠ

**ಶ್ರೀ ವಿದ್ಯಾಧಿರಾಜರು →**

23. ಶ್ರೀ ರಾಜೇಂದ್ರ ತೀರ್ಥರು (ಪೂರ್ವಾದಿ ಮಠ) ಇದು ಶ್ರೀ ವ್ಯಾಸರಾಜ ಮಠವೆಂದು ಖ್ಯಾತವಾಗಿದೆ.
24 ಶ್ರೀ ಜಯಧ್ವಜ ತೀರ್ಥರು
25 ಶ್ರೀ ಪುರುಷೋತ್ತಮ ತೀರ್ಥರು
26. ಶ್ರೀ ಬ್ರಹ್ಮಣ್ಯ ತೀರ್ಥರು → ಶ್ರೀಧರ ತೀರ್ಥರು (ಶ್ರೀ ಕುಂದಾಪುರ ಮಠ)
27. ಶ್ರೀ ವ್ಯಾಸರಾಜ ಗುರುಸಾರ್ವಭೌಮರು
28. ಶ್ರೀ ಶ್ರೀನಿವಾಸ ತೀರ್ಥರು
29. ಶ್ರೀ ರಾಮ ತೀರ್ಥರು
30. ಶ್ರೀ ಲಕ್ಷ್ಮೀಕಾಂತ ತೀರ್ಥರು
31. ಶ್ರೀಪತಿ ತೀರ್ಥರು
32. ಶ್ರೀ ರಾಮಚಂದ್ರ ತೀರ್ಥರು
33. ಶ್ರೀ ಲಕ್ಷ್ಮೀವಲ್ಲಭ ತೀರ್ಥರು
34. ಶ್ರೀ ಲಕ್ಷ್ಮೀನಾಥ ತೀರ್ಥರು
35. ಶ್ರೀ ಲಕ್ಷ್ಮೀಪತಿ ತೀರ್ಥರು
36. ಶ್ರೀ ಲಕ್ಷ್ಮೀನಾರಾಯಣ ತೀರ್ಥರು
37. ಶ್ರೀ ರಘುನಾಥ ತೀರ್ಥರು (ಶೇಷಚಂದ್ರಿಕಾಚಾರ್ಯರು)
38. ಶ್ರೀ ಜಗನ್ನಾಥ ತೀರ್ಥರು
39. ಶ್ರೀನಾಥ ತೀರ್ಥರು
40. ಶ್ರೀ ವಿದ್ಯಾನಾಥ ತೀರ್ಥರು
41. ಶ್ರೀ ವಿದ್ಯಾಪತಿ ತೀರ್ಥರು
42. ಶ್ರೀ ವಿದ್ಯಾವಲ್ಲಭ ತೀರ್ಥರು
43. ಶ್ರೀ ವಿದ್ಯಾಕಾಂತ ತೀರ್ಥರು
44. ಶ್ರೀ ವಿದ್ಯಾನಿಧಿ ತೀರ್ಥರು
45. ಶ್ರೀ ವಿದ್ಯಾಪೂರ್ಣ ತೀರ್ಥರು
46 ಶ್ರೀ ವಿದ್ಯಾಸಿಂಧು ತೀರ್ಥರು
47. ಶ್ರೀ ವಿದ್ಯಾಶ್ರೀಧರ ತೀರ್ಥರು
48. ಶ್ರೀ ವಿದ್ಯಾಶ್ರೀನಿವಾಸ ತೀರ್ಥರು
49. ಶ್ರೀ ವಿದ್ಯಾಸಮುದ್ರ ತೀರ್ಥರು
50. ಶ್ರೀ ವಿದ್ಯಾರತ್ನಾಕರ ತೀರ್ಥರು
51. ಶ್ರೀ ವಿದ್ಯಾವಾರಿಧಿ ತೀರ್ಥರು
52. ಶ್ರೀ ವಿದ್ಯಾಪ್ರಸನ್ನ ತೀರ್ಥರು
53. ಶ್ರೀ ವಿದ್ಯಾಪಯೋನಿಧಿ ತೀರ್ಥರು (ಅಧುನಾ ಪೀಠ ವಿರಾಜಿತರು)

23 ಶ್ರೀ ಕವೀಂದ್ರ ತೀರ್ಥರು (ದಕ್ಷಿಣಾದಿ ಮಠ, ವಿದ್ಯಾಮಠ) ಇದು ಶ್ರೀ ರಾಘವೇಂದ್ರಸ್ವಾಮಿಗಳ ಮಠವೆಂದು ಖ್ಯಾತವಾಗಿದೆ
24 ಶ್ರೀ ವಾಗೀಶ ತೀರ್ಥರು
25 ಶ್ರೀ ರಾಮಚಂದ್ರ ತೀರ್ಥರು
26 ಶ್ರೀ ವಿಬುಧೇಂದ್ರ ತೀರ್ಥರು → ಶ್ರೀ ವಿದ್ಯಾನಿಧಿ ತೀರ್ಥರು (ಇವರು ಶ್ರೀ ಉತ್ತರಾದಿ ಮಠವೆಂದು ಹೆಸರು ಪಡೆದ ಮಠದ ಮೂಲ ಪುರುಷರು)
27. ಶ್ರೀ ಜಿತಾಮಿತ್ರ ತೀರ್ಥರು
28 ಶ್ರೀ ರಘುನಂದನ ತೀರ್ಥರು
29 ಶ್ರೀ ಸುರೇಂದ್ರ ತೀರ್ಥರು
30. ಶ್ರೀ ವಿಜಯೀಂದ್ರ ತೀರ್ಥರು → ಶ್ರೀ ಯಾದವೇಂದ್ರರು (ಗೌಡ ಸಾರಸ್ವತ ಶ್ರೀ ಕಾಶೀಮಠ)
31 ಶ್ರೀ ಸುಧೀಂದ್ರ ತೀರ್ಥರು → ಶ್ರೀ ಯಾದವೇಂದ್ರ ತೀರ್ಥರು
32. ಶ್ರೀ ರಾಘವೇಂದ್ರ ಗುರುಸಾರ್ವಭೌಮರು
33 ಶ್ರೀ ಯೋಗೀಂದ್ರ ತೀರ್ಥರು
34. ಶ್ರೀ ಸೂರೀಂದ್ರ ತೀರ್ಥರು
35. ಶ್ರೀ ಸುಮತೀಂದ್ರ ತೀರ್ಥರು → ಶ್ರೀ ಮುನೀಂದ್ರ ತೀರ್ಥರು
36. ಶ್ರೀ ಉಪೇಂದ್ರ ತೀರ್ಥರು
37. ಶ್ರೀ ವಾದೀಂದ್ರ ತೀರ್ಥರು
38. ಶ್ರೀ ವಸುಧೇಂದ್ರ ತೀರ್ಥರು
39. ಶ್ರೀ ವರದೇಂದ್ರ ತೀರ್ಥರು
40. ಶ್ರೀ ಧೀರೇಂದ್ರ ತೀರ್ಥರು
41 ಶ್ರೀ ಭುವನೇಂದ್ರ ತೀರ್ಥರು → ಶ್ರೀ ವ್ಯಾಸತತ್ತ್ವಜ್ಞ ತೀರ್ಥರು
42. ಶ್ರೀ ಸುಬೋಧೇಂದ್ರ ತೀರ್ಥರು
43 ಶ್ರೀ ಸುಜನೇಂದ್ರ ತೀರ್ಥರು
44. ಶ್ರೀ ಸುಜ್ಞಾನೇಂದ್ರ ತೀರ್ಥರು
45. ಶ್ರೀ ಸುಧರ್ಮೇಂದ್ರ ತೀರ್ಥರು
46. ಶ್ರೀ ಸುಗುಣೇಂದ್ರ ತೀರ್ಥರು
47. ಶ್ರೀ ಸುಪ್ರಜ್ಞೇಂದ್ರ ತೀರ್ಥರು
48. ಶ್ರೀ ಸುಕೃತೀಂದ್ರ ತೀರ್ಥರು
49. ಶ್ರೀ ಸುಶೀಲೇಂದ್ರ ತೀರ್ಥರು
50. ಶ್ರೀ ಸುವ್ರತೀಂದ್ರ ತೀರ್ಥರು
51. ಶ್ರೀ ಸುಯಮೀಂದ್ರ ತೀರ್ಥರು
52. ಶ್ರೀ ಸುಜಯೀಂದ್ರ ತೀರ್ಥರು (ಅಧುನಾ ಪೀಠ ವಿರಾಜಿತರು)

ಶ್ರೀ ಗುರುರಾಜೋ ವಿಜಯತೇ

ಓಂ

# ಕಲಿಯುಗ - ಕಲ್ಪತರು

## ಮೊದಲನೆಯ ಉಲ್ಲಾಸ

### ೧. ಕಥಾಮುಖ

ರಚಿಸಿದವರು :

ರಾಜಾ ಎಸ್. ಗುರುರಾಜಾಚಾರ್ಯರು



# ಕಲಿಯುಗ ಕಲ್ಪತರು

## ಮೊದಲನೆಯ ಉಲ್ಲಾಸ

### ೧. ಕಥಾಮುಖ.

"ಶ್ರೀ ರಾಘವೇಂದ್ರೋ ಹರಿಪಾದಕಂಜ ನಿಷೇವಣಾಲ್ಲಬ್ಧ ಸಮಸ್ತ ಸಂಪತ್|
ದೇವಸ್ವಭಾವೋ ದಿವಿಜದ್ರುಮೋಽಯಮಿಷ್ಟಪ್ರದೋ ಮೇ
ಸತತಂ ಸ ಭೂಯಾತ್||"

ಪರಮಾತ್ಮನ ಪ್ರಸಾದದಿಂದಲೇ ಸಕಲ ಜೀವರ ಉದ್ಧಾರವಾಗುವುದೆಂದು ವೇದಾದಿ ಸಕಲ ಶಾಸ್ತ್ರಗಳು ಸಾರುವವು. ಭಗವಂತನ ಪ್ರಸಾದವಾಗಬೇಕಾದರೆ ಭಗವಂತನನ್ನು ಒಲಿಸಿಕೊಳ್ಳಬೇಕು. ಅವನೊಲಿಯಬೇಕಾದರೆ ಅವನಲ್ಲಿ ಪ್ರೇಮ ಅಂದರೆ ಭಕ್ತಿಯನ್ನು ಮಾಡಬೇಕು, ಭಕ್ತಿಯೆಂದರೆ "ಮಾಹಾತ್ಮ್ಯಜ್ಞಾನಪೂರ್ವಸ್ತು ಸುದೃಢಸ್ಸರ್ವತೋಽಧಿಕಃ| ಸ್ನೇಹೋ ಭಕ್ತಿರಿತಿ ಪ್ರೋಕ್ತೋ ತಯಾ ಮುಕ್ತಿರ್ನ ಚಾನ್ಯಥಾ||" ಎಂಬ ಪ್ರಮಾಣಾನುಸಾರವಾಗಿ ಪರಮಾತ್ಮನು ಸರ್ವೋತ್ತಮ, ಜಗತ್ತಿನ ಸೃಷ್ಟಿ–ಸ್ಥಿತಿ–ಸಂಹಾರಾದಿ ಅಷ್ಟಕ್ರಿಯೆಗಳಿಗೆ ಅವನೇ ಕಾರಣ., ರಮಾ–ಬ್ರಹ್ಮ–ರುದ್ರೇಂದ್ರಾದಿ ವೃಂದಾರಕವೃಂದವಂದ್ಯ ಪಾದಾಬ್ಜನವನು, ಸರ್ವಜೀವರ ಮುಖ್ಯ ಗುರಿಯಾದ ಸ್ವರೂಪಾನಂದಾವಿರ್ಭಾವರೂಪ ಶಾಶ್ವತ ಸುಖವನ್ನು ಕರುಣಿಸುವ ಮಹಾಪ್ರಭು ಅವನು, ಶ್ರೀಹರಿಯು ದೋಷದೂರನು, ಅನಂತಕಲ್ಯಾಣಗುಣಮಂದಿರನು, ಅಪ್ರತಿಹತಶಕ್ತನವನು, ಮಹಾಮಹಿಮನು ಮುಂತಾದ ಅವನ ಲೀಲಾವಿಲಾಸ ಚರಿತ್ರೆಗಳನ್ನು ಅರಿತು, ಹೆಂಡತಿ, ಮಕ್ಕಳು, ಬಂಧು–ಮಿತ್ರರೇ ಮೊದಲಾದವರಲ್ಲಿ ಮಾಡುವುದಕ್ಕಿಂತಲೂ ಸಹಸ್ರಪಟ್ಟುಅಧಿಕವಾದ, ಅಚಲವಾದ ಪ್ರೇಮವನ್ನು ಅಂದರೆ ಭಕ್ತಿಯನ್ನು ಆ ದಯಾಮಯನಾದ ಭಗವಂತನಲ್ಲಿ ಮಾಡಿ ಅವನನ್ನು ಒಲಿಸಿಕೊಂಡು ಪರಮಾತ್ಮನ ಅತ್ಯರ್ಥಪ್ರಸಾದಕ್ಕೆ ಪಾತ್ರರಾಗಿ, ದುಃಖಕ್ಕೆ ಕಾರಣವಾದ ಜನನ–ಮರಣ ರಹಿತವಾದ ಶಾಶ್ವತ ಸುಖವನ್ನು ಪಡೆಯಬೇಕು. ಇದೇ ವೇದ–ಉಪನಿಷತ್ತು ಮೊದಲಾದ ಶಾಸ್ತ್ರಗಳ ಉಪದೇಶದ ಸಾರವಾಗಿದೆ.

ಶ್ರೀಹರಿಯ ಜ್ಞಾನವನ್ನು ಬೋಧಿಸುವ ಗುರುಗಳಲ್ಲಿಯೂ ಶ್ರೀಹರಿಯಲ್ಲಿ ಮಾಡುವಂತೆಯೇ, ಶ್ರೀಭಗವದ್ಭಕ್ತಿಗೆ ಸಾಧಕವಾದ್ದರಿಂದ ಗುರುಭಕ್ತಿಯೂ ಅವಶ್ಯಕರ್ತವ್ಯವೆಂದು "ಯಸ್ಯ ದೇವೇ ಪರಾ ಭಕ್ತಿಃ ಯಥಾ ದೇವೇ ತಥಾ ಗುರೌ||" ಎಂಬ ಶ್ರುತಿಯು ಉಪದೇಶಿಸುವುದರಿಂದ ಗುರುಗಳಲ್ಲಿ ಪರಮಾತ್ಮನಲ್ಲಿ ಮಾಡುವಂತೆ

ಭಕ್ತಿಯನ್ನು ಮಾಡಬೇಕು. ಗುರುಗಳೆಂದರೆ ಯಾರು? "ಗುಶಬ್ದಸ್ತ್ವಂಧಕಾರಸ್ಯಾತ್ ರುಶಬ್ದಸ್ತನ್ನಿವರ್ತಕಃ" ಗು-ಎಂದರೆ ಶಿಷ್ಯರ ಅಜ್ಞಾನವೆಂಬ ಅಂಧಕಾರ, ರು-ಎಂದರೆ ಅದನ್ನು ಪರಿಹರಿಸುವವರು. ಅಂದರೆ ಶಿಷ್ಯರ ಅಜ್ಞಾನವನ್ನು ಪರಿಹರಿಸಿ, ಜ್ಞಾನೋಪದೇಶ ಮಾಡುವವರೇ ಗುರುಗಳು. ತಾರತಮ್ಯಾನುಸಾರವಾಗಿ ಇಂತಹ ಎಲ್ಲ ಗುರುಗಳಲ್ಲಿಯೂ ಭಕ್ತಿಯನ್ನು ಮಾಡಲೇಬೇಕು.

ಇಂತು ನಿರೂಪಿತವಾದ 'ಗುರು' ಶಬ್ದ ವಾಚ್ಯರಾಗಿ ಜಗತ್ತನ್ನು ಉದ್ಧರಿಸುತ್ತಿರುವ ಶ್ರೀ ರಾಘವೇಂದ್ರಸ್ವಾಮಿಗಳವರು ಭಾರತ ದೇಶದ ಜನತೆಯ ಸ್ವರೂಪೋದ್ಧಾರಕ ಗುರುಗಳಾಗಿರುವುದರಿಂದ ಅವರಲ್ಲಿ ಭಕ್ತಿಮಾಡಬೇಕೆಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಇಂತಹ ಮಹಿಮೋಪೇತರಾದ ಶ್ರೀ ರಾಘವೇಂದ್ರ ಗುರುಸಾರ್ವಭೌಮರಲ್ಲಿ ಭಕ್ತಿಯುಂಟಾಗಬೇಕಾದರೆ ಅವರು ಯಾರು? ಅವರ ಮೂಲರೂಪವಾವುದು? ಅವರು ಮಾಡಿದ ಮಹತ್ಕಾರ್ಯಗಳು, ಅವರ ಚರಿತ್ರೆ, ಭಗವಂತನನ್ನು ಅವರು ಒಲಿಸಿಕೊಂಡ ಬಗೆ, ಅವರಲ್ಲಿ ಪರಮಾತ್ಮನು ಮಾಡಿದ [illegible] ಅನುಗ್ರಹ. ಅವರು ತೋರಿದ ಮಹಿಮೆಗಳು, ಮಾಡಿದ [illegible]ಗಳನ್ನು, ಅವರ ಭಕ್ತ[illegible] ಯಥಾರ್ಥವಾಗಿ [illegible]. ಹೀಗೆಯೇ ಅ[illegible] ಅಂತರಂಗ ಭಕ್ತನಾದ [illegible] ಸಂತ ಸಾರ್ವಭೌಮರ [illegible], ಅವತಾರಗಳು, [illegible], ಮಹಿಮಾತಿಶಯಗಳನ್ನು [illegible] ಸಂತೋಷವಾಗಿ ನಿರೂಪಿಸಲು ಉದ್ಯುಕ್ತ[illegible]

[illegible] ಗಳಿಂದ [illegible]
ಇತ್ತೀಚೆಗೆ ಅಂದರೆ [illegible] ಪ್ರಕಟ[illegible] ನಿರೂಪಣೆ, ರಜತ ರಥದಲ್ಲಿ ಮಂಡಿಸಿ ಭಕ್ತಕೋಟಿಯ ಮನೋರಥಗಳನ್ನು ಪೂರ್ಣಮಾಡಲು ತಮ್ಮ ಪವಿತ್ರ ಆರಾಧನೆಯ ದಿನದಂದು ರಜತ ರಥೋತ್ಸವವನ್ನು ನೆರವೇರಿಸಿಕೊಂಡ ಪರಮ ಮಂಗಳಕರ ಹಿನ್ನೆಲೆಯಿಂದಲೇ ಅವರ ಲೋಕಕಲ್ಯಾಣ [illegible]

ಶ್ರಾವಣ ಕೃಷ್ಣ ದ್ವಿತೀಯಾ ಸಾಯಂಕಾಲ. ಮಂತ್ರಸಿದ್ಧಿ ಕ್ಷೇತ್ರವೆಂದು ಪ್ರಖ್ಯಾತವಾದ ಮಂತ್ರಾಲಯದಲ್ಲಿ ಅಪಾರ ಸಂಭ್ರಮ. ಅಂದು ಶ್ರೀ ಗುರು[illegible] ರಜತರಥ ಸಮರ್ಪಣೆ ಮತ್ತು ರಥೋತ್ಸವವು ನೆರವೇರುವುದೆಂಬ ವದಂತಿಯು ಹಬ್ಬಿದ್ದರಿಂದ ಯಾವ ವರ್ಷವೂ ಇಲ್ಲದಷ್ಟು ಜನಸಂದಣಿ. ದೇಶ ದೇಶಗಳಿಂದ ಇಪ್ಪತ್ತು ಮೂವತ್ತು ಸಹಸ್ರಕ್ಕೂ ಮೀರಿ ಭಕ್ತಜನರು ಮಂತ್ರಾಲಯದಲ್ಲಿ ನೆರೆದಿದ್ದಾರೆ. ಕ್ಷಣಕ್ಷಣಕ್ಕೂ ತಂಡೋಪತಂಡವಾಗಿ ಭಕ್ತರು ಆಗಮಿಸುತ್ತಲೇ ಇದ್ದಾರೆ.

ತಳಿರು ತೋರಣ ವಿವಿಧ ವರ್ಣಗಳ ಧ್ವಜ-ಪತಾಕೆಗಳು ವಿದ್ಯುದ್ದೀಪಗಳಿಂದ ರಂಜಿಸುತ್ತಿರುವ ಶ್ರೀಗುರುರಾಜರ ಭವ್ಯಾಲಯದ ಮಹಾದ್ವಾರದ ಮೇಲ್ಭಾಗದ ಧ್ವಜಸ್ತಂಭದಲ್ಲಿ ಮೆಲ್ಲಮೆಲ್ಲನೆ ಹಾರಾಡುತ್ತಿರುವ "ಪ್ರಣವ ಧ್ವಜವು" ಮಂತ್ರಾಲಯಕ್ಕೆ ಧಾವಿಸುತ್ತಿರುವ ಭಕ್ತವೃಂದವನ್ನು ಕಂಡು "ಸ್ವಾಗತವಿದೋ ನಿಮಗೆ ಭಕ್ತ ಬಂಧುಗಳೇ! ಕಲಿಮಲ ಕಲುಷಿತರಾಗಿ ಮುಂದಿನ ದಾರಿಗಾಣದೆ ನೊಂದು, ಬೆಂದು ಕಂಗೆಟ್ಟು ಗುರುವರರ ಪರಮಚರಣಕಮಲಗಳಿಗೆ ಶರಣಾಗಿ ಬರುತ್ತಿರುವ ಗುರುಭಕ್ತರೇ, ಬನ್ನಿ, ಬನ್ನಿ, ನನ್ನ ಪ್ರಿಯಕರ "ಕಲಿಯುಗ ಕಲ್ಪತರು" ವಿನ ಪಾದಾಶ್ರಯ ಮಾಡಿ ನಿಮ್ಮ ಮನೋರಥಗಳನ್ನು ಹೊಂದಿ ಪುನೀತರಾಗಿರಿ! ಬನ್ನಿ, ನಿಮ್ಮ ಮನದಾಸೆ ಪೂರೈಸಲು ರಥವೇರಿ ಬರುತಿಹನು ಯತಿಸಾರ್ವಭೌಮ" ಎಂದು ಸ್ವಾಗತಿಸುತ್ತಿರುವಂತೆ ಭಾಸವಾಗುತ್ತಿದೆ. ನಿರ್ಭಯವಾಗಿ, ಸ್ವಚ್ಛಂದವಾಗಿ ಪಟ ಪಟನೆ ಹಾರಾಡುತ್ತಿರುವ ಆ ಹೆಮ್ಮೆಯ 'ಪ್ರಣವ ಧ್ವಜ'ವನ್ನು ನೋಡಿದರೆ "ನನ್ನಲ್ಲಿ (ಪತಾಕೆಯಲ್ಲಿ) ಅಂಕಿತವಾಗಿರುವ ಓಂಕಾರವು ಸಮಸ್ತ ಲೋಕಗಳಲ್ಲಿ ವ್ಯಾಪಿಸಿರುವಂತೆ, ಓಂಕಾರೋಪಾಸನೆಯಿಂಪ ಅಜಯ್ಯರೂ, ಮಹಾಮಹಿ ಮರೂ ಆದ ಶ್ರೀ ಪರಿಮಳಾಚಾರ್ಯರ ಅದಮ್ಯ ಕೀರ್ತಿಯೊಡನೆ ನಾನು ಇಲ್ಲಿ ಮಾತ್ರವಲ್ಲ; ಮೂರು ಲೋಕಗಳಲ್ಲಿಯೂ ವ್ಯಾಪಿಸಿದ್ದೇನೆ. ಆ ಮಹನೀಯರ ವಿಜಯ ವೈಜಯಂತಿಯಾದ ನನ್ನನ್ನು ಸರಿಗಟ್ಟುವವರು ಈ ಧರಾತಲದಲ್ಲಿ ಬೇರಾರಿದ್ದಾರೆ?" ಎಂದು ತನ್ನ ವೈಶಿಷ್ಟ್ಯವನ್ನು ಪ್ರದ ರ್ಶಿಸುತ್ತಿರುವಂತೆ ಕಂಡುಬರುತ್ತಿದೆ.

"ಹಾರುತಿದೆ ಮೂಜಗದಿ ವಿಜಯದ ಪತಾಕೆ |
ಪರಿಮಳಾಚಾರ್ಯರಾ ಕೀರುತಿಯ ಸಾರುತಲಿ ||"

ಎಂದು ಭಾಗವತರೊಬ್ಬರು ಹಾಡುತ್ತಿರುವ ಸುಮಧುರ ಗಾನವಾಹಿನಿಯು ಧ್ವನಿವರ್ಧಕ ಯಂತ್ರದಿಂದ ಹೊರಹೊಮ್ಮಿ ಸರ್ವಜನರನ್ನೂ ಪರವಶ ಗೊಳಿಸುತ್ತಿದೆ. ಗುರುಮಹಿಮಾ ವರ್ಣನಪರ ಸಂಗೀತ, ಅಲ್ಲಿನ ಸುಂದರ ದೃಶ್ಯಗಳನ್ನು ಕಂಡು ಸುಜನರು ಮೈಮರೆತು ಭಕ್ತಿಪಾರವಶ್ಯದಿಂದ ಶ್ರೀ ಗುರುಸಾರ್ವಭೌಮರ ದರ್ಶನಕ್ಕಾಗಿ ಹಾತೊರೆಯುತ್ತಿದ್ದಾರೆ. ಜನರ ಸಡಗರ, ಸಂಭ್ರಮ ಹೇಳತೀರದು. ಎಲ್ಲಿ ನೋಡಿದರಲ್ಲಿ ಭಕ್ತಿಭಾವದಿಂದ ಜಗದಾರಾಧ್ಯ ಗುರುರಾಜರನ್ನು ಭಾವುಕರು ಹಾಡಿ-ಹೊಗಳಿ-ಕುಣಿದಾಡುತ್ತಿರುವ ಮನೋಹರ ದೃಶ್ಯಗಳು ಕಣ್ಣುಗಳಿಗೆ ಅಪಾರ ಆನಂದವನ್ನು ತಂದೀಯುತ್ತಿವೆ.

ಅಕೋ ನೋಡಿ, ಯತಿಕುಲತಿಲಕರಾದ ಗುರುಸಾರ್ವಭೌಮರ ಉತ್ಸವ ಹೊರಟಿದೆ! ಸುಶ್ರಾವ್ಯವಾದ ನಾದಸ್ವರ, ಸುಸ್ವರವೇದಘೋಷ, ಸುಮಧುರ ಗಾನ ಭಜನೆಗಳ ಮಧ್ಯದಲ್ಲಿ ಗುರುವರರಿಗೆ ಚಾಮರ ಬೀಸುತ್ತಾ ಶ್ರೀಗುರುರಾಜರನ್ನು ಜನತೆಗೆ ಪರಿಚಯ ಮಾಡಿಕೊಡುತ್ತಿರುವರೋ ಎಂಬಂತೆ ಪರಮಪೂಜ್ಯ ಪೀಠಾ

ಧೀಶ್ವರರಾದ ಶ್ರೀಸುಯಮೀಂದ್ರತೀರ್ಥ ಗುರುಚರಣರು ತಮ್ಮ ಸ್ವಾಭಾವಿಕ ನಗು ಮುಖದಿಂದ ಭಕ್ತಜನರ ಕಣ್ಮನಗಳಿಗೆ ಆನಂದವೀಯುತ್ತಾ ಪಂಡಿತ ಮಂಡಲೀಲಾಲ್ಯ ಮಾನರಾಗಿ ದಯಮಾಡಿಸುತ್ತಿದ್ದಾರೆ! ಉತ್ಸವ ಮುಂದುವರೆದು ರಜತರಥದೆಡೆಗೆ ಬಿಜಯಮಾಡಿಸುತ್ತಿರುವಂತೆ ಜನರ ಉತ್ಸಾಹ, ಸಂತೋಷ ಮೇರೆ ಮೀರುತ್ತಿದೆ.

ಆ ರಮಣೀಯ ದೃಶ್ಯವನ್ನು ಭಕ್ತಜನರು ರೆಪ್ಪೆ ಹಾಕದೆ ನಿಟ್ಟಿಸಿ ನೋಡುತ್ತಿರುವಂತೆಯೇ ಜಗದ್ವಂದ್ಯ ಜಗದ್ಗುರುಗಳು ರಜತ ರಥವನ್ನಲಂಕರಿಸಿದರು. ಅಹಹ ! ಅದೆಂತಹ ರಮಣೀಯ ನೋಟ, ಅಕೋ, ಸಹಸ್ರಾರು ವಿದ್ಯುದ್ದೀಪಗಳು ಮಿನುಗಿದವು. ವಿವಿಧ ವರ್ಣರಂಜಿತ ವಿದ್ಯುದ್ದೀಪಗಳು ನಕ್ಷತ್ರಗಳಂತೆ ಬೆಳಗುತ್ತಿರಲು ನೂತನ ರಜತರಥವೆಂಬ ಅಂಬರದಲ್ಲಿ ಭಕ್ತತಾರಾಮಂಡಲದಿಂದೊಡಗೂಡಿ ಪ್ರಕಾಶಿಸುವ ಚಂದ್ರನಂತೆ ದೇದೀಪ್ಯಮಾನರಾಗಿ, ವರಾಭಯ ಹಸ್ತಗಳಿಂದ ಕಲಿಯುಗದ ಜನತೆಯನ್ನುದ್ಧರಿಸಿ, ಅವರ ಮನೋರಥವನ್ನೀಡೇರಿಸಲು ಬದ್ಧಕಂಕಣರಾಗಿ ಶೋಭಿಸುತ್ತಿರುವ ಶ್ರೀಯತಿಚಂದ್ರಮರನ್ನು ಅವಲೋಕಿಸಿ ಭಕ್ತವೃಂದವು ಆನಂದೋದ್ರೇಕದಿಂದ "ಜಯ ಜಯ ಪ್ರಹ್ಲಾದರಾಜ, ಜಯ ಜಯ ವ್ಯಾಸಮುನೀಂದ್ರ, ಜಯ ಜಯ ರಾಘವೇಂದ್ರ ಯತೀಂದ್ರ! ಜಯ ಜಯ ಕಲಿಯುಗ ಕಲ್ಪತರೋ!!" ಎಂದು ಗಗನವೇ ಭೇದಿಸುವಂತೆ ಜಯ ಜಯಧ್ವನಿಗೈಯುತ್ತಿದೆ! ಆ ಅಭೂತಪೂರ್ವ, ಸುಂದರ, ಮನೋಹರ, ಮಂಗಳಕರ ದೃಶ್ಯವನ್ನು ಕಣ್ಣಾರೆ ಕಂಡ ಮಾನವನೇ ಧನ್ಯ! ಅವನ್ನು ನಮ್ಮ ತೊದಲು ನುಡಿಯಿಂದ ವರ್ಣಿಸಲು ನಾವು ಅಸಮರ್ಥರು.

ಸಕಲ ವೈಭವದೊಡನೆ ರಥೋತ್ಸವವು ನಾಲ್ಕು ಪ್ರಾಕಾರಗಳಲ್ಲೂ ಪ್ರದಕ್ಷಿಣಾಕಾರವಾಗಿ ಬಂದು ನೆಲೆನಿಂತಿತು. ಜನರ ಹರ್ಷೋದ್ಗಾರಗಳು ನಿಂತಮೇಲೆ ಧೀರ ಗಂಭೀರ ಧ್ವನಿಯಿಂದ, ಭಕ್ತಿಪಾರವಶ್ಯದಿಂದ ಗದ್ಗದವಾದ ಕಂಠದಿಂದ ಆನಂದಭಾಷ್ಪಸಿಕ್ತನಯನರಾಗಿ "ಶ್ರೀ ರಾಘವೇಂದ್ರರ ಕರುಣೆಯಕಂದ"ರಾದ ಶ್ರೀ ಸುಯಮೀಂದ್ರತೀರ್ಥಶ್ರೀಪಾದಂಗಳವರು ಭಕ್ತಜನತೆಯನ್ನುದ್ದೇಶಿಸಿ ಇಂತು ಅಪ್ಪಣೆ ಕೊಡಿಸಿದರು.

"ನಮಗೆ ಅತ್ಯಂತ ಪ್ರೀತ್ಯಾಸ್ಪದರಾದ ಶ್ರೀ ಗುರುರಾಜರ ಭಕ್ತರೇ! ಇಂದಿನ ದಿನವೇ ಸುದಿನ! ನಮ್ಮ ಜೀವನದಲ್ಲಿ ಅತ್ಯಂತ ಪುಣ್ಯತಮವಾದ ದಿನವಿದು, ಅಜನ ಅರಮನೆಯಲ್ಲಿ ರಾಜಿಸುತ್ತಿದ್ದ ದೇವೋತ್ತಮರಾದ ಇವರನ್ನು, ನಿಜಭಕ್ತಿಪಾಶದಿಂದ ತ್ರಿಜಗದೊಡೆಯನನ್ನು ಸ್ತಂಭದಲ್ಲಿ ತರಿಸಿದ ಇವರನ್ನು, ವಿಜಯನಗರದ 'ರಾಜಗುರು'ವಾಗಿ ವಿಜಯದುಂದುಭಿಯನ್ನು ಮೊಳಗಿಸಿದ ಇವರನ್ನು, ಅಂತಿಮಾವತಾರವೆತ್ತಿ ದ್ವಿಜಗುರುಗಳಾಗಿ ಭಜಕ ಜನರ ಮನೋರಥಗಳನ್ನು ಈಡಾಡುತ್ತಿರುವ ಈ ಗುರುಸಾರ್ವಭೌಮರನ್ನು ರಜತರಥದಲ್ಲಿ ಮೆರೆಸಬೇಕೆಂಬ ನಮ್ಮ ಮನದಾಶೆಯು ಇಂದು ಫಲಿಸಿತು! ನೋಡಿ, ಇಲ್ಲಿ ನಿಂತಿರುವ ಶ್ರೀಗುರು

ರಾಜರ ಭಕ್ತರಾದ ರಾಮನಾಥ ಚೆಟ್ಟಿಯಾರರ ಮೂಲಕವಾಗಿ ಶ್ರೀಗುರುರಾಜರು ನಮ್ಮ ಬಯಕೆಯನ್ನು ಈಡೇರಿಸಿಕೊಟ್ಟರು. ಶ್ರೀಗುರುರಾಜರು ಇವರಲ್ಲಿ ಮಾಡಿದ ಅಸಾಧಾರಣ ಅನುಗ್ರಹ, ತೋರಿದ ಮಹಾಮಹಿಮೆ ವರ್ಣಿಸಲಸದಳ. ಗುರು ವರರು ತಮ್ಮಲ್ಲಿ ಮಾಡಿದ ಅನುಗ್ರಹಕ್ಕೆ ಕೃತಜ್ಞತಾಪೂರ್ವಕ ಭಕ್ತಿಯನ್ನು ಸಮರ್ಪಿಸುವ ಬಗೆಯಂತು? ಎಂದು ನಮ್ಮನ್ನಿವರು ಪ್ರಾರ್ಥಿಸಿದಾಗ ಶ್ರೀರಾ ಯರಿಗೆ ರಜತರಥ ನಿರ್ಮಾಣ ಮಾಡಬೇಕೆಂಬ ನಮ್ಮ ಸಂಕಲ್ಪವನ್ನಿವರಿಗೆ ತಿಳಿಸಿದೆವು. ಶ್ರೀಮಂತರೂ, ಉದಾರಿಗಳೂ, ಗುರುಗಳ ಅಂತರಂಗ ಭಕ್ತರೂ ಆದ ಇವರು ಆ ಮಹಾಸೇವೆಯನ್ನು ತಮ್ಮ ಮೂಲಕ ನೆರವೇರಿಸಿಕೊಂಡು ಆಶೀರ್ವದಿಸಬೇಕೆಂದು ಪ್ರಾರ್ಥಿಸಿದರು. ನಾವು ಸಂತೋಷದಿಂದ ಸಮ್ಮತಿಸಿದೆವು. ಇಂದು ನೀವೆಲ್ಲರೂ ಈ ಮಂಗಳಮಹೋತ್ಸವವನ್ನು ಕಂಡಾನಂದಿಸಲು ಕಾರಣರು ಇವರು. ಆದುದರಿಂದ ನಿಮ್ಮೆಲ್ಲರ ಹರ್ಷಕ್ಕೆ ಕಾರಣರಾದ ರಾಮನಾಥಚೆಟ್ಟಿ ಯಾರರಿಗೆ ಶ್ರೀ ಗುರುರಾಜರು ಸಕಲವಿಧ ಶ್ರೇಯಸ್ಸು ಮಂಗಳಗಳನ್ನು ಕರುಣಿಸಿ ಇವರ ಮನೋರಥದ್ರುಮವು ಫಲಿಸುವಂತೆ ಅನುಗ್ರಹಿಸಿ ಕಾಪಾಡಲಿ ಎಂದು ಪ್ರಾರ್ಥಿಸಿ ಆಶೀರ್ವದಿಸುತ್ತೇವೆ".

ಜನರು ಹರ್ಷಧ್ವನಿಗೈದು ಕರತಾಡನದಿಂದ ತಮ್ಮ ಸಂತಸವನ್ನು ಸೂಚಿ ಸುತ್ತಿರಲು ಶ್ರೀ ಸುಯಮೀಂದ್ರ ಗುರುವರ್ಯರು ರಾಮನಾಥನ್ ಚೆಟ್ಟಿಯಾರರಿಗೆ ಫಲಮಂತ್ರಾಕ್ಷತೆ-ಶೇಷವಸ್ತ್ರಗಳನ್ನು ಅನುಗ್ರಹಿಸಿ, ಜನತೆಯನ್ನುದ್ದೇಶಿಸಿ ಮತ್ತೆ ಇಂತೆಂದರು.

"ಜಗತ್ತಿನ ಅತಿಶ್ರೇಷ್ಠರಥವನ್ನೇರಿ ಮೆರೆಯುವ ವೈಭವವುಳ್ಳ ಮಹಾ ನುಭಾವರು ಸಾಮಾನ್ಯವಾದ, ಆದರೆ ಭಕ್ತಿಯಿಂದ ಸಮರ್ಪಿಸಿದ ಈ ರಜತರಥವನ್ನೇರಿ ನಮ್ಮೆಲ್ಲರನ್ನೂ ಅನುಗ್ರಹಿಸುತ್ತಿರುವುದು, ಶ್ರೀ ಗುರುರಾಜರಿಗೆ ಭಕ್ತರಲ್ಲಿರುವ ಕರುಣೆಯ ದ್ಯೋತಕವೇ ವಿನಃ ಇದರಿಂದ ಅವರಿಗಾಗ ಬೇಕಾದುದೇನೂ ಇಲ್ಲ. ಅಸಾಧ್ಯಕಾರ್ಯವನ್ನೂ ಒಲುಮೆಯಿಂದ ಸಾಧಿಸ ಬಹುದೆನ್ನಲು, ಎಂತಹವರನ್ನೂ ಪ್ರೇಮ [ಭಕ್ತಿ] ಪಾಶದಿಂದ ಸ್ವಾಧೀನ ಪಡಿಸಿಕೊಳ್ಳಬಹುದೆನ್ನಲು ಇದೊಂದು ನಿದರ್ಶನ, ಏಕೆ ಗೊತ್ತೆ? ಇಂದು ಈ ರಥದಲ್ಲಿ ವಿರಾಜಿಸುವವರಾರು ಬಲ್ಲಿರಾ? ಅಖಿಲಾಂಡಕೋಟಿ ಬ್ರಹ್ಮಾಂಡನಾಯಕನಾದ ಶ್ರೀಹರಿಯೇ ಪ್ರಜಾರಂಜಕನಾಗಿ ಜಗತ್ಕಲ್ಯಾಣಕ್ಕಾಗಿ ಜಗದಭಿರಾಮನಾದ ಶ್ರೀರಾಮರೂಪದಿಂದ ಇಲ್ಲಿ ರಾರಾಜಿಸುತ್ತಿದ್ದಾನೆ. ಜನತೆಯ ಅಪಾರ ಪಾಪ ಮತ್ತು ಭಯ ಪರಿಹಾರ ಮಾಡಿ ಭಕ್ತರನ್ನು ರಕ್ಷಿಸಲು ಶ್ರೀನರಸಿಂಹದೇವನಿಲ್ಲಿ ಕಂಗೊಳಿಸುತ್ತಿದ್ದಾನೆ. ಸಂತಾನ-ಸುಖ-ಸಂತೋಷ ಗಳಿಗೆರವಾಗಿ ಬಳಲುತ್ತಿರುವವರಿಗೆ ವಂಶದೀಪಕರಾದ ಪುತ್ರನನ್ನು ಕರುಣಿಸಿ ಮನೆ-ಮನೆಗಳನ್ನು ಸುಖ-ಸಂತೋಷಗಳ ನೆಲೆವೀಡಾಗಿಸಿ

ಪೊರೆಯಲು ಯದುಕುಲಲಲಾಮನಾದ ಭಗವಾನ್ ಶ್ರೀಕೃಷ್ಣನಿಲ್ಲಿ ನಲಿಯುತ್ತಿರುವನು. ಘೋರತರ ಸಂಸಾರಸಾಗರದಲ್ಲಿ ಮುಳುಗಿ, ಅದರಿಂದ ನೊಂದು ಶಾಶ್ವತ ಸುಖಸಾಧನೆಗಾಗಿ, ಅದಕ್ಕೆ ಸಾಧಕವಾದ ತತ್ತ್ವ ಜ್ಞಾನಾಪೇಕ್ಷಿಗಳಾಗಿ ಮೊರೆ ಹೊಕ್ಕುವರನ್ನು ಪೊರೆದು ಅವರಿಗೆ ಜ್ಞಾನವನ್ನು ಕರುಣಿಸಲು ಶ್ರೀವೇದವ್ಯಾಸ ದೇವರು ಇಲ್ಲಿ ವಿರಾಜಿಸುತ್ತಿದ್ದಾರೆ. ಇನ್ನು ಈ ಜಗತ್ತು ಅಶಾಶ್ವತವೆಂದು ಮನಗಂಡು ಐಹಿಕಸುಖಾದಿಗಳಲ್ಲಿ ಜಿಹಾಸೆಯುಂಟಾಗಿ, ಸರ್ವಸ್ವವನ್ನೂ ತ್ಯಾಗಮಾಡಿ ಶಾಶ್ವತ- ಸುಖಪ್ರದವಾದ ಮೋಕ್ಷವನ್ನು ಬಯಸಿ ಬಂದು ಶರಣಾಗತರಾದವರನ್ನು ಉದ್ಧರಿಸಲು ಸಾಕ್ಷಾತ್ ಶ್ರೀಲಕ್ಷ್ಮೀನಾರಾಯಣನೇ ಇಲ್ಲಿ ಶೋಭಿಸುತ್ತಿರುವನು. ಹೀಗೆ ಕಲಿಯುಗದಲ್ಲಿ ಜನತೆಯ ಉದ್ಧಾರ, ಲೋಕಕಲ್ಯಾಣಾದಿ ಮಹಾತ್ಕಾರ್ಯಗಳನ್ನು ಮಹಾನುಭಾವರಾದ ಶ್ರೀಗುರುಸಾರ್ವಭೌಮರ ಮೂಲಕ ನೆರವೇರಿಸಿ ಅವರಿಗೆ ಅಪಾರ ಕೀರ್ತಿಪ್ರತಿಷ್ಠೆಗಳನ್ನು ತಂದುಕೊಡಲೆಂದು ಶ್ರೀಹರಿಯು ರಾಮ - ನರಹರಿ - ಕೃಷ್ಣ - ವೇದವ್ಯಾಸ - ನಾರಾಯಣಾದಿ ಪಂಚರೂಪಗಳಿಂದ ಶ್ರೀ ಗುರುಸಾರ್ವಭೌಮರಲ್ಲಿ ಸನ್ನಿಹಿತನಾಗಿದ್ದು ಸರ್ವದಾ ನಲಿಯುತ್ತಿರುವನೆಂದಮೇಲೆ ಇಷ್ಟೊಂದು ಮಹಾಸನ್ನಿಧಾನಗಳಿಂದ ವಿರಾಜಿಸುವ ಶ್ರೀಮಂತ್ರಾಲಯ ಸ್ವಾಮಿಗಳವರ ಮಹತ್ವ ವೆಂತಹುದೆಂಬುದನ್ನು ನೀವೇ ಊಹಿಸಿರಿ!

ಇಷ್ಟೇ ಅಲ್ಲ ಗುರುಭಕ್ತರೇ, ಇವರಲ್ಲಿ ಜಗತ್ಪ್ರಾಣರೂ, ಸರ್ವಜೀವ ನಿಯಾಮಕರೂ, ಜೀವೋತ್ತಮರೂ ಆದ ಶ್ರೀ ಭಾರತಿರಮಣ ಶ್ರೀ ಮುಖ್ಯಪ್ರಾಣ ದೇವರು [ವಾಯುದೇವರು ] ಶ್ರೀ ಹನುಮ-ಭೀಮ-ಮಧ್ವರೂಪಗಳಿಂದ ಸಹಿತರಾಗಿ ಸರ್ವದಾ ಇವರಲ್ಲಿ ವಿಶೇಷ ಸನ್ನಿಧಾನವಿಟ್ಟು ರಾರಾಜಿಸುತ್ತಿದ್ದಾರೆ. ಇನ್ನು ಶ್ರೀ ಟೀಕಾಕೃತ್ಪಾದರೇ ಮೊದಲಾದ ಜ್ಞಾನಿನಾಯಕರಂತೂ ಈ ಮಹನೀಯರಲ್ಲಿ ಸದಾ ಒಲಿದು ನಲಿದಾಡುತ್ತಿರುವರು. ಅಂದ ಮೇಲೆ ಇಂತಹ ಶ್ರೀ ಪ್ರಹ್ಲಾದ-ಬಾಹ್ಲೀಕ-ವ್ಯಾಸರಾಜಾವತಾರರಾದ ಶ್ರೀ ರಾಘ ವೇಂದ್ರಸ್ವಾಮಿಗಳನ್ನು ತಮ್ಮ ಭಕ್ತಿಯಿಂದ ಒಲಿಸಿಕೊಂಡು ಅವರಿಗೆ ರಜತರಥ ನಿರ್ಮಾಣ ಮಾಡಿಸಿ ಉತ್ಸವ ಮಾಡಿಸಿದ ರಾಮನಾಥನ್ ಚೆಟ್ಟಿಯವಾರರ ಪುಣ್ಯಕ್ಕೆ ಎಣೆಯುಂಟೆ? ಇಂಥ ಅಪೂರ್ವ ಸನ್ನಿವೇಶದಲ್ಲಿ ಕಲಿಯುಗ ಕಲ್ಪತರುಗಳ ರಥೋತ್ಸವ ಸೇವೆಯಲ್ಲಿ ಭಾಗವಹಿಸಿರುವ ನಿಮ್ಮಗಳ ಸುಕೃತವೆಂತಹದು ನಿಜವಾಗಿಯೂ, ನೀವು ಭಾಗ್ಯಶಾಲಿಗಳು. ಧನ್ಯರು! ಭಾರತ ಸಂಸ್ಕೃತಿಯ ಸಂಕೇ ತರಾದ ಶ್ರೀ ಮಂತ್ರಾಲಯ ಪ್ರಭುಗಳ ಪಾದಾಶ್ರಯ ಮಾಡಿದ ನಿಮ್ಮಗಳ ಭಾಗ್ಯೋದಯವಾಗುವುದರಲ್ಲಿ ಸಂದೇಹವಿಲ್ಲ| ಅನಿಮಿತ್ತ ಬಂಧುಗಳಾಗಿ ಅಲ್ಪರಾದ ನಮ್ಮನ್ನು ಹೀಗೆ ಅನುಗ್ರಹಿಸುತ್ತಿರುವ ಈ ಜಗದ್ಗುರುಗಳಿಗೆ ನಾವೇನು ತಾನೆ ಪ್ರತ್ಯುಪಕಾರವನ್ನು ಮಾಡಬಲೆವು? "ಭೂಯಿಷ್ಠಾಂತೇ ನಮ ಉಕ್ತಿಂ ವಿಧೇಮ" ಎಂಬ ಶ್ರುತಿವಚನದಂತೆ ನಮ್ಮ ಭಕ್ತಿಪೂರ್ವಕ ವಂದನೆಗಳನ್ನು

ಮಾತ್ರ ಸಮರ್ಪಿಸಲು ನಾವು ಸಮರ್ಥರು. ನಮ್ಮ ಭಕ್ತಿನಮನಗಳನ್ನು ಸ್ವೀಕರಿಸಿ ಲೋಕಕಲ್ಯಾಣವನ್ನು ಮಾಡಿ, ಭಕ್ತಜನರನ್ನು ಕಾಪಾಡಲೆಂದು ಗುರುರಾಜರನ್ನು ಪ್ರಾರ್ಥಿಸುವೆವು" ಎಂದು ಶ್ರೀ ಸುಯಮೀಂದ್ರತೀರ್ಥಶ್ರೀಪಾದಂಗ ಳವರು ಶ್ರೀ ಗುರುರಾಜರಿಗೆ ಸಾಷ್ಟಾಂಗ ನಮಸ್ಕಾರಗಳನ್ನು ಸಮರ್ಪಿಸಿದರು. ಭಕ್ತಾನೀಕವು ಆನಂದಸಂಭ್ರಮಗಳಿಂದ ಶ್ರೀ ಗುರುರಾಜರ ಜಯಜಯಕಾರಮಾಡಿತು.

ಶ್ರಾವಣಕೃಷ್ಣಪಂಚಮಿ ತುಂಗಭದ್ರಾನದೀತೀರ, ನೀಲವರ್ಣದ ವಿಶಾಲ ವಾದ ಬಂಡೆಗಳ ಇಕ್ಕೆಲಗಳನ್ನು ಅಪ್ಪಳಿಸುತ್ತಾ ಕಲಕಲ ಮಂಜುಳ ನಿನಾದ ಗೈಯುತ್ತಾ ತುಂಗ ಭದ್ರೆಯು ಭರದಿಂದ ಹರಿಯುತ್ತಿದ್ದಾಳೆ. ಮೆಲ್ಲಮೆಲ್ಲನೆ ಸೌರಭಯುತ ತಂಗಾಳಿಯಿಂದ ವಾಯುದೇವ ಭವರವಿಶ್ರಾಂತರಾದ ಜನ ತತಿಯನ್ನು ಮೋದಗೊಳಿಸುತ್ತಿದ್ದಾನೆ, ಅದಭ್ರಶುಭ್ರವಾದ ಅಂಬರದಲ್ಲಿ ಹಾಲು ಬೆಳದಿಂಗಳನ್ನು ಚೆಲ್ಲುತ್ತಾ ಚೆಲ್ವಿಕೆಯ ಪ್ರಶಾಂತ ವಾತಾವರಣದಲ್ಲಿ ಅನೇಕ ಜನರು ಗುಂಪುಗುಂಪಾಗಿ ಕುಳಿತು ಆನಂದಿಸುತ್ತಿದ್ದಾರೆ. ರಜತರಥೋತ್ಸವದ ವೈಭವ, ಶ್ರೀಗುರುರಾಜರ ಮಹಿಮೆ, ಭಕ್ತವಾತ್ಸಲ್ಯಾದಿಗಳನ್ನು ಮೆಲುಕುಹಾಕುತ್ತಾ ಜನರು ಮೈಮರೆತಿದ್ದಾರೆ. ಮಂತ್ರಾಲಯ ಪ್ರಭುಗಳು ತಮತಮಗೆ ಮಾಡಿರುವ ಅನುಗ್ರಹ ವಿಶೇಷಗಳನ್ನು ಒಬ್ಬರಿಗೊಬ್ಬರು ಹೇಳಿಕೊಳ್ಳುತ್ತಿದ್ದಾರೆ. ಅದೇ ಸಮಯದಲ್ಲಿ ಶ್ರೀಮಠದ ಆಚಾರ್ಯರೊಬ್ಬರು ತುಂಗೆಯಲ್ಲಿ ಮಿಂದು ಸಾಯಂ ಸಂಧ್ಯೆಯನ್ನು ಮುಗಿಸಿ ಸಮೀಪದ ಬಂಡೆಯೊಂದರ ಮೇಲೆ ಕುಳಿತರು. ವೃದ್ಧರೂ, ತೇಜಸ್ವಿಗಳೂ ಆದ ಆಚಾರ್ಯರನ್ನು ಕಂಡು ಸಮೀಪದಲ್ಲಿ ಕುಳಿತಿದ್ದ ಹತ್ತಾರು ಜನ ಭಕ್ತರು ಅವರೆಡೆಗೈತಂದು ಅಭಿವಂದಿಸಿದರು. ಅವರಲ್ಲಿ ಗೋವಿಂದರಾಯರೆಂಬುವರು ಆಚಾರ್ಯರಿಗೆ ಕರಮುಗಿದು ಕೋರಿದರು.

**ಗೋವಿಂದ** : ಪೂಜ್ಯರೇ, ಶ್ರೀ ಗುರುರಾಜರಿಗೆ ರಜತ ರಥೋತ್ಸವ ವಾಗುವುದೆಂಬ ವಾರ್ತೆಯನ್ನು ಕೇಳಿ ಇಲ್ಲಿಗೆ ಬಂದೆವು. ಆಹಾ, ಸ್ವಾಮಿ, ಅದೆಂತಹ ಸುಂದರ ನೋಟ; ಅಂದಿನ ಅಪೂರ್ವ ದೃಶ್ಯವನ್ನು ನಮ್ಮ ಜನ್ಮದಲ್ಲಿ ಮತ್ತೊಮ್ಮೆ ಕಾಣಲು ಸಾಧ್ಯವೇ? ಪೂಜ್ಯ ಪೀಠಾಧೀಶರು ಅನುಗ್ರಹಿಸಿದ ಭಾಷಣವೆಷ್ಟು ಹೃದಯಂಗಮವಾಗಿತ್ತು. ಆ ಮಹನೀಯರ ಮಧುರವಾಣಿ ಕೇಳಿದಷ್ಟೂ ಮತ್ತೆ ಮತ್ತೆ ಆಲಿಸಬೇಕೆಂಬ ಬಯಕೆಯಾಗುತ್ತಿದೆ. ಆ ರಾಮನಾಥನ್ ಚೆಟ್ಟಿಯಾರರಲ್ಲಿ ಶ್ರೀ ರಾಯರು ಅಪಾರ ಕಾರುಣ್ಯ ತೋರಿರುವರೆಂದು ಶ್ರೀಗಳವರು ಅಪ್ಪಣೆ ಕೊಡಿಸಿದರು. ಆದರೆ ಅದೇನೆಂಬುದು ನಮಗೆ ತಿಳಿಯಲಿಲ್ಲ. ನೀವು ಮಠದವರಾದ್ದರಿಂದ ನಿಮಗೆ ತಿಳಿದಿರಬಹುದು, ದಯಮಾಡಿ ಶ್ರೀ ರಾಯರು ಪ್ರಕಟಿಸಿದ ಮಹಿಮೆ, ಮಾಡಿದ ಅನುಗ್ರಹವೇನೆಂದು ನಮಗೆ ತಿಳಿಸುವಿರಾ?

**ಆಚಾರ್ಯರು** : (ನಸುನಕ್ಕು) ಇದಕ್ಕಿಂತ ಉತ್ತಮ ಕಾರ್ಯವು ಬೇರಾವುದಿದೆ? ಅವಶ್ಯ ಆಗಬಹುದು.

**ಓರ್ವ ಯುವಕ** : (ಮಧ್ಯೆ ಬಾಯಿಹಾಕಿ) ಸ್ವಾಮಿ, ಕ್ಷಮಿಸಿ, ನನಗೊಂದು ಅನುಮಾನ.

**ಆಚಾರ್ಯರು** : (ನಕ್ಕು) ಅದೇನಪ್ಪಾ ನಿನ್ನ ಅನುಮಾನ?

**ಯುವಕ** : ಇನ್ನೇನಿಲ್ಲ ಆಚಾರ್ಯರೇ, ಮದ್ರಾಸು ಪ್ರಾಂತ್ಯದ ಜನರೆಂದರೆ ಅದರಲ್ಲೂ ಚೆಟ್ಟಿನಾಡಿನವರು ಕಟ್ಟಾ ಶೈವರು, ಶಿವಭಕ್ತರು ಎಂದೂ, ವರ್ಣ ದ್ವೇಷಿಗಳೆಂದೂ ಕೇಳಿದ್ದೇನೆ. ಅಂದಮೇಲೆ ವರ್ಣಾಶ್ರಮದ್ವೇಷಿಗಳೂ, ಶೈವರೂ ಆದ ರಾಮನಾಥನ್ ಚೆಟ್ಟಿಯಾರರು ಬ್ರಾಹ್ಮಣರು, ಅದರಲ್ಲೂ ಮಾಧ್ವಯತಿಗಳಾದ ಶ್ರೀರಾಯರ ಭಕ್ತರೆಂತಾದರು?

**ಆಚಾರ್ಯರು** : ಅಯ್ಯಾ, ನಿನ್ನ ಅಭಿಪ್ರಾಯ ತಪ್ಪು. ಯಾರೋ ಒಬ್ಬಿಬ್ಬರು ವರ್ಣಾಶ್ರಮ ದ್ವೇಷಿಗಳಾಗಿದ್ದರೆ ಆ ಪ್ರಾಂತ್ಯದವರೆಲ್ಲರೂ ವರ್ಣಾಶ್ರಮ ದ್ವೇಷಿಗಳೆಂದು ಹೇಳುವುದು ಯುಕ್ತವಲ್ಲ, ಅಂಥವರು ನಮ್ಮ ಕರ್ನಾಟಕದಲ್ಲಿಲ್ಲವೇ? ಮೇಲಾಗಿ ನಮ್ಮ ಶ್ರೀರಾಯರು ಮಾಧ್ವರು, ಬ್ರಾಹ್ಮಣರು ಅಥವಾ ಹಿಂದೂ ಜನರಿಗೆ ಮಾತ್ರ ಗುರುಗಳಲ್ಲ. ಅವರು ಭಾರತದ ಅಷ್ಟೇ ಏಕೆ; ಸಮಸ್ತ ವಿಶ್ವದ ಎಲ್ಲ ಜಾತಿ, ಮತ, ಪಂಥ, ಭಾಷೆಗಳ ಎಲ್ಲೆಯನ್ನೂ ಮೀರಿ ಜಗತ್ತನ್ನೇ "ಕೃಣ್ವಂತೋ ವಿಶ್ವಮಾರ್ಯಂ" ಎಂಬಂತೆ ಆರ್ಯರನ್ನಾಗಿ ಅಂದರೆ ಆಸ್ತಿಕರನ್ನಾಗಿ ಮಾಡಿ ಸರ್ವರನ್ನೂ ಪೊರೆಯಲೆಂದೇ ಅವತರಿಸಿದ ದೇವತೆಗಳು. ಈ ಶೈವ-ವೈಷ್ಣವ ಭಾವನೆಗಳು ಇಂದು ನೆನ್ನೆಯದಲ್ಲ, ಯುಗಯುಗಗಳಿಂದಲೂ ಬಂದಿವೆ. ಅಂತೆಯೇ ಶ್ರೀಮಧ್ವಾಚಾರ್ಯರು "ಅನಾದಿಕಾಲತೋ ವೃತ್ತಾಃ ಸಮಯಾ ಹಿ ಪ್ರವಾಹತಃ" ಅಂದರೆ ವೈಷ್ಣವ-ಶೈವಾದಿ ಸಿದ್ಧಾಂತಗಳು ಅನಾದಿಕಾಲದಿಂದಲೂ ನಡೆದು ಬಂದಿವೆಯೆಂದು ಅಪ್ಪಣೆ ಕೊಡಿಸಿದ್ದಾರೆ. ಶೈವ-ವೈಷ್ಣವ ದೇವತೋ ಪಾಸನೆ-ಭಾವನೆಗಳು ಪರಸ್ಪರ ಸಾಮಾಜಿಕ-ಧಾರ್ಮಿಕ ಸಾಂಸ್ಕೃತಿಕ ರಂಗಗಳಲ್ಲಿ ದಿನನಿತ್ಯ ನಡವಳಿಕೆ, ವ್ಯವಹಾರ, ಸ್ನೇಹಸೌಹಾರ್ದಗಳಿಗೆ ಕೆಲ ಅಪವಾದಗಳನ್ನು ಬಿಟ್ಟು, ಎಂದೂ ಕುಂದು ತಂದಿಲ್ಲ. ಜ್ಞಾನ-ಭಕ್ತಿ-ವೈರಾಗ್ಯ ತಪಸ್ಸು, ಲೋಕ ಕಲ್ಯಾಣದೀಕ್ಷೆಗಳೇ ಒಂದು ವ್ಯಕ್ತಿಯ ಪೂಜ್ಯತೆಗೆ ಮಾನದಂಡವಾಗಿದೆ. ಅಂದಮೇಲೆ ಜ್ಞಾನಿಗಳನ್ನು ಶೈವರು ವೈಷ್ಣವರು ಪೂಜಿಸಿ, ಸೇವಿಸಿ ಅನುಗೃಹೀತರಾಗಲು ಅವರವರ ಭಾವನೆ, ತಾತ್ವಿಕನಂಬಿಕೆಗಳು ಅಡ್ಡಬರಲಾರದಲ್ಲವೇ? ಅಂದಮೇಲೆ ಶ್ರೀರಾಯರನ್ನು ನಂಬಿ ಸೇವಿಸಿ ಅನುಗೃಹಿತರಾದ ಚೆಟ್ಟಿಯಾರರಲ್ಲಿ ಅವರ ನಿರ್ಮಲ ಭಕ್ತಿಗೆ ಒಲಿದ ರಾಯರು ಅನುಗ್ರಹಿಸಿದ್ದು ಅಚ್ಚರಿಯೇನಲ್ಲ! ನಾಸ್ತಿಕರನ್ನೂ ಆಸ್ತಿಕರನ್ನಾಗಿ ಮಾಡಿ ಅನುಗ್ರಹಿಸುವ ರಾಯರ ಮಹಿಮೆಯೇ ಅಂತಹುದು. ಅದೇ ನಮ್ಮ ಶ್ರೀರಾಯರ ವೈಶಿಷ್ಟ್ಯ! ಸಾಮಾನ್ಯವಾಗಿ ಆಯಾ ಮತದ ಶಿಷ್ಯರು, ಇಲ್ಲವೇ

ಒಂದು ಸಮಾಜದವರು ಆಯಾ ಗುರುಗಳಿಗೆ ನಡೆದುಕೊಳ್ಳುತ್ತಾರೆ. ಆದರೆ ನಮ್ಮ ಶ್ರೀ ಗುರುರಾಜರ ವಿಚಾರ ಹಾಗಲ್ಲ. ಈ ಮಹಾನುಭಾವರನ್ನು ಮತೀಯ ಶಿಷ್ಯರು ಅಥವಾ ಬ್ರಾಹ್ಮಣ ಸಮಾಜ, ಇಲ್ಲವೇ ಹಿಂದೂ ಜನಾಂಗದವರು ಮಾತ್ರವಲ್ಲ; ಯವನ, ಪಾರಸಿ, ಸಿಕ್, ಕ್ರೈಸ್ತ-ಹೀಗೆ ಎಲ್ಲ ಜಾತಿ, ಧರ್ಮ, ಮತ, ಪಂಗಡ ಅಷ್ಟೇ ಏಕೆ; ಎಲ್ಲ ದೇಶದ ಜನರೂ ಪೂಜಿಸುತ್ತಿದ್ದಾರೆ. ಆದ್ದರಿಂದಲೇ ನಮ್ಮ ಮಂತ್ರಾಲಯ ಪ್ರಭುಗಳು "ಜಗದ್ಗುರು"ಗಳೆಂಬ ಅನ್ವರ್ಥಕ ನಾಮದಿಂದ ಶೋಭಿಸುತ್ತಿದ್ದಾರೆ, ಯಾರೇ ಆಗಲಿ, ನಿರ್ಮಲ 'ಭಕ್ತಿಯಿಂದ ತಮತಮಗೆ ವಿಹಿತವಾದ ಕರ್ಮಾಚರಣೆ, ಧರ್ಮರತರಾಗಿದ್ದೂ ಗುರುರಾಜರನ್ನು ಸೇವಿಸಿದರೆ ಇವರು ಇಂಥ ಜಾತಿ-ಮತ-ಪಂಥ ಅಥವಾ ಧರ್ಮದವರೆಂದು ನೋಡದೆ ನಮ್ಮ ಗುರುಗಳು ಆರಾಧಕರ ಇಷ್ಟಾರ್ಥಗಳನ್ನು ಪೂರೈಸಿ ಅನು ಗ್ರಹಿಸುವರು. ಇಂದಿನ ವಿಜ್ಞಾನ - ವೈದ್ಯಶಾಸ್ತ್ರಗಳಿಗೂ ನಿಲುಕದ, ಗುಣ ಪಡಿಸಲು ಸಾಧ್ಯವಾಗದ ಅದೆಷ್ಟೋ ರೋಗಾದ್ಯುಪದ್ರವಗಳನ್ನು ಕಟಾಕ್ಷವೀಕ್ಷಣ ಮಾತ್ರದಿಂದ ಲೀಲಾಜಾಲವಾಗಿ ಪರಿಹರಿಸುತ್ತಿದ್ದಾರೆ, ನಮ್ಮ ಯತಿರಾಜರು! ಅಂತೆಯೇ ಈ ಕಲಿಯುಗದಲ್ಲಿ ಎಷ್ಟೇ ಧರ್ಮಗ್ಲಾನಿಯಾಗಿದ್ದರೂ ಜನರು ಸ್ವರ್ಗ-ನರಕ, ಪಾಪ-ಪುಣ್ಯ, ದೇವರು-ಪರಲೋಕ ಮುಂತಾಗಿ ಅತೀಂದ್ರಿಯವಸ್ತು ಗಳನ್ನು ನಂಬದಿದ್ದರೂ, ದೇವರು ಕೇವಲ ಬ್ರಾಹ್ಮಣರ ಕಲ್ಪನಾವಿಲಾಸವೆಂದು ಕೂಗುತ್ತಿದ್ದರೂ, ಪ್ರತ್ಯಕ್ಷ ದೇವರಂತೆ ಗುರುರಾಜರನ್ನು ಸೇವಿಸುತ್ತಿರುವುದು ಇಂದು ಎಲ್ಲರ ಅನುಭವಕ್ಕೂ ಬರುತ್ತಿದೆ. ನಮ್ಮ ಪೂಜ್ಯ ಶ್ರೀ ಸುಯಮೀಂ ದ್ರತೀರ್ಥಗುರುಪಾದರು ಅಪ್ಪಣೆ ಕೊಡಿಸಿದಂತೆ ಈ ಕಲಿಯುಗದಲ್ಲಿ ಈ "ಕಲ್ಪತರುವಿನ"ವಿನ ಮೂಲಕವೇ ಜಗತ್ಕಲ್ಯಾಣ ವಾಗಬೇಕೆಂದು ಪರಮಾತ್ಮನ ಸಂಕಲ್ಪ! ಸತ್ಯಸಂಕಲ್ಪನಾದ ಭಗವಂತನೇ ಇವರಲ್ಲಿ ಸನ್ನಿಹಿತನಾಗಿ ನಿಂತು ಇವರಿಂದ ಲೋಕಕಲ್ಯಾಣ ಕಾರ್ಯವನ್ನು ಮಾಡಿಸುತ್ತಿದ್ದಾನೆ. ಅಂದಮೇಲೆ ಶೈವರಾದ ರಾಮನಾಥನ್ ಚೆಟ್ಟಿಯಾರರು ಶ್ರೀಗುರುರಾಜರ ಭಕ್ತರಾದುದು ಅಚ್ಚರಿಯೇನಲ್ಲ.

ಎಲ್ಲ **ಭಕ್ತರೂ** : ನಿಜ ಸ್ವಾಮಿ, ತಾವು ಹೇಳಿದ್ದು ಅಕ್ಷರಶಃ ಸತ್ಯ. ಹ್ಞಾ, ಗುರುರಾಜರು ಚೆಟ್ಟಿಯಾರರಲ್ಲಿ ಮಾಡಿದ ಅನುಗ್ರಹವನ್ನು ದಯಮಾಡಿ ತಿಳಿಸುವ ಕೃಪೆಮಾಡಿ.

**ಆಚಾರ್ಯರು** : ಮದರಾಸು ಪ್ರಾಂತ್ಯದ ರಾಮನಾಡು ಜಿಲ್ಲೆಯು ಶ್ರೀಮಂತ ಚೆಟ್ಟಿಯಾರುಗಳಿಗೆ ಪ್ರಖ್ಯಾತವಾದುದು. ಆ ಜಿಲ್ಲೆಯ "ಕೊಟ್ಟೆಯೂರು" ಎಂಬ ಗ್ರಾಮವೇ ಎ.ವಿ.ಎ.ಎಲ್.ಎಂ. ರಾಮನಾಥ ಚೆಟ್ಟಿಯಾರರ ಸ್ವಂತ ಗ್ರಾಮ. ಅಲ್ಲಿ ಇವರ ಮನೆತನ ಖ್ಯಾತವಾಗಿದೆ. ಆ ಪ್ರಾಂತ್ಯದಲ್ಲಿ ವಿಖ್ಯಾತರಾದ ಡಾ|| ಅಳಗಪ್ಪ ಚೆಟ್ಟಿಯಾರರ ಸಹೋದರರೇ ಈ ರಾಮನಾಥರು. ಕೋಟ್ಯಾಧೀಶರಾದ ಇವರ ವ್ಯಾಪಾರ ಮಲಯಾ ಮುಂತಾದ ಹೊರದೇಶಗಳಲ್ಲಿ ಹೆಸರುವಾಸಿಯಾಗಿದೆ. ಈಗ್ಗೆ

ಹತ್ತಾರು ವರ್ಷಗಳ ಹಿಂದೆ ಪ್ರಾರಬ್ಧ ಕರ್ಮವಶದಿಂದ ಚೆಟ್ಟಿಯಾರರಿಗೆ ಹೃದಯವ್ಯಾಧಿ ಪ್ರಾರಂಭವಾಯಿತು. ಸ್ವಲ್ಪ ದಿನಗಳಲ್ಲೇ ಅದು ಪ್ರಬಲಿಸಿ ಜೀವ ಉಳಿಯುವುದೇ ಅಸಾಧ್ಯವೆನಿಸುವಂತಾಯಿತು. ಶ್ರೀಮಂತರಾದ್ದರಿಂದ ಪರಿಣತರಾದ ದೊಡ್ಡ ವೈದ್ಯರನ್ನು ಕರೆಸಿಕೊಂಡು ಪರೀಕ್ಷೆ ಮಾಡಿಸಲಾಯಿತು. ವೈದ್ಯರು ಪರೀಕ್ಷಿಸಿ "ಇದು ಪ್ರಬಲವಾದ ವ್ಯಾಧಿ, ಶಸ್ತ್ರಚಿಕಿತ್ಸೆಯಿಂದ ಮಾತ್ರ ವಾಸಿಯಾಗಬಹುದು. ಆದರೆ ಶಸ್ತ್ರಚಿಕಿತ್ಸಾ ಕಾಲದಲ್ಲಿ ಪ್ರಾಣಾಪಾಯವಾಗಬಹುದೇ, ಹೇಳಲು ಸಾಧ್ಯವಿಲ್ಲ, ಯಾವುದಕ್ಕೂ ಶಸ್ತ್ರಚಿಕಿತ್ಸೆ ಮಾಡಿಸುವುದು ಒಳಿತು" ಎಂದು ಹೇಳಿದರು. ಚೆಟ್ಟಿಯಾರರು ಕಿಂಕರ್ತವ್ಯ ಮೂಢರಾದರು. ಇವರ ಪತ್ನಿಯವರು ಶಸ್ತ್ರಚಿಕಿತ್ಸೆಗೆ ಒಪ್ಪಲಿಲ್ಲ. ಬರೇ ಔಷಧೋಪಚಾರವಾಗಹತ್ತಿತು. ಅದರಿಂದೇನೂ ಪ್ರಯೋಜನವಾಗಲಿಲ್ಲ. ಹೃದಯಶೂಲೆಯಿಂದ ಇವರು ತುಂಬಾ ಶ್ರಮಪಡಹತ್ತಿದರು.

ಧರ್ಮಕರ್ಮ ಸಂಯೋಗದಿಂದ ಕೊಟ್ಟೆಯೂರಿಗೆ ಹೋಗಿದ್ದ ಕೃಷ್ಣಾಚಾರ್ಯರೆಂಬ ಶ್ರೀಗುರುರಾಜರ ಭಕ್ತರಿಗೆ ಈ ವಿಚಾರ ತಿಳಿದು ಚೆಟ್ಟಿಯಾರರನ್ನು ಕಂಡು ಅವರಿಗೆ ಶ್ರೀರಾಯರ ಮಹಿಮೆಗಳನ್ನು ತಿಳಿಸಿ ಅವರ ಸೇವೆಯಿಂದ ರೋಗಪರಿಹಾರವಾಗಬಹುದೆಂದು ಸೂಚಿಸಿದರು. ದೊಡ್ಡ ದೊಡ್ಡ ಪರಿಣಿತ ವೈದ್ಯರಿಂದಾಗದ ಕಾರ್ಯ ಎಂದೋ ವೃಂದಾವನಸ್ಥರಾದ ಓರ್ವ ಮಾಧ್ವಸನ್ಯಾಸಿಗಳಿಂದಾದೀತೆ? ಎಂದು ಚೆಟ್ಟಿಯಾರರಿಗೆ ಅನುಮಾನ. ಅವರು ಸ್ಪಷ್ಟವಾಗಿ ತಮ್ಮ ಅಭಿಪ್ರಾಯವನ್ನು ಹೇಳಿಬಿಟ್ಟರು. ಕೃಷ್ಣಾಚಾರ್ಯರು ಮತ್ತೆ ಶ್ರೀಗುರುರಾಜರ ಅಗಮ್ಯ ಮಹಿಮೆ, ವೈದ್ಯರಿಂದ ಗುಣಪಡಿಸಲಾಗದ ಎಷ್ಟೋ ವ್ಯಾಧಿಗಳನ್ನು ಶ್ರೀರಾಯರು ಗುಣಪಡಿಸಿದ ದೃಷ್ಟಾಂತಗಳನ್ನು ಹೇಳಿ "ಸೇವೆಮಾಡಿ ನೋಡಿರಿ, ಅನುಕೂಲವಾದರೆ ನಂಬಿ, ಇಲ್ಲದಿದ್ದರೆ ಬಿಡಿ. ಇದಕ್ಕೆ ನೀವೇನೂ ದ್ರವ್ಯವ್ಯಯ ಮಾಡಬೇಕಾಗಿಲ್ಲ! ನಿಷ್ಕಲ್ಮಷ ಭಕ್ತಿಯಿಂದ ಅವರನ್ನು ಭಜಿಸಿರಿ. ಅದರ ಫಲವನ್ನು ನೀವೇ ಮನಗಾಣುವಿರಿ. ಪರೀಕ್ಷಿಸಿ ನೋಡಲು ಅಡ್ಡಿಯೇನು?" ಎಂದು ಹೇಳಿದರು. ರಾಮನಾಥರಿಗೆ "ಏಕೆ ಪರೀಕ್ಷಿಸಿ ನೋಡಬಾರದು" ಎನಿಸಿತು. ಸರಿ, ಒಪ್ಪಿದರು. ಗುರುರಾಜರ ಕೃಪಾದೃಷ್ಟಿ ಚೆಟ್ಟಿಯಾರರ ಮೇಲೆ ಬಿತ್ತೆಂದು ತೋರುವುದು. ಅಂದು ರಾತ್ರಿಯೇ ಸ್ವಪ್ನದಲ್ಲಿ ದಂಡಕಮಂಡಲು ಧಾರಿಗಳಾಗಿ ಶ್ರೀರಾಯರು ಅವರಿಗೆ ದರ್ಶನವಿತ್ತು "ಅಯ್ಯಾ ನಮ್ಮನ್ನು ನಂಬಿ ಯಾರೂ ಕೆಟ್ಟಿಲ್ಲವಪ್ಪ, ನೀನು ನಮಗೆ ಹೊರಗಿನವನಲ್ಲ ರಾಮನಾಥ! ನಮ್ಮ ಭಕ್ತಕೋಟಿಯಲ್ಲಿ ನೀನೂ ಸೇರಿರುವೆ,. ಕೃಷ್ಣಚಾರ್ಯರು ಹೇಳಿದಂತೆ ವರ್ತಿಸು ನಿನಗೆ ಮಂಗಳವಾಗುವುದು" ಎಂದು ಅಪ್ಪಣೆ ಮಾಡಿ ಅದೃಶ್ಯರಾದರು. ಎಚ್ಚರವಾದ ಮೇಲೆ ಚೆಟ್ಟಿಯಾರರಿಗೆ ಸ್ವಪ್ನದ ನೆನಪಾಯಿತು. ಅವರ ವರ್ತನೆಯೇ ಬದಲಾಯಿಸಿತು. ನಮ್ಮ ಗುರುಗಳ ರೀತಿಯೇ ವಿಚಿತ್ರ. ಅವರ ಅನುಗ್ರಹವೂ ಅಷ್ಟೇ. ನಾವಾಗಿ ಪೂಜಿಸಿ, ಸೇವಿಸಿ, ಬೇಡಿದರೆ ಇತರ ದೇವತೆಗಳು ಪ್ರಸನ್ನರಾಗಿ ಅನುಗ್ರಹಿಸುತ್ತಾರೆ.

ನಮ್ಮ ಗುರುಗಳಾದರೋ ತಾವಾಗಿ ಇದ್ದಲ್ಲಿ ಬಂದು ಅನುಗ್ರಹಿಸುತ್ತಾರೆ! ಇದೇ ಅಲ್ಲವೇ ಮಹಾತ್ಮರ ಲಕ್ಷಣ! ಭಕ್ತಾನುಕಂಪ.

ರಾತ್ರಿ ಕನಸಿನಲ್ಲಿ ಕಂಡ ಶ್ರೀಗುರುರಾಜರ ತೇಜಃಪುಂಜ ಭವ್ಯಸ್ವರೂಪ ಚೆಟ್ಟಿಯಾರರ ಹೃದಯದಲ್ಲಿ ಭದ್ರವಾಗಿ ನೆಲೆನಿಂತುಬಿಟ್ಟಿತು. ಅವರ ಕಣ್ಣುಗಳಿಂದ ಆನಂದಾಶ್ರು ಮಿಡಿಯಿತು. ಕಣ್ಣುಮುಚ್ಚಿ ಕರಜೋಡಿಸಿ ಸ್ವಪ್ನದಲ್ಲಿ ಕಂಡ ದಿವ್ಯ ಸ್ವರೂಪವನ್ನೇ ಧ್ಯಾನಿಸುತ್ತಾ ಕುಳಿತುಬಿಟ್ಟರು. ಪತಿಯನ್ನು ಎಚ್ಚರಿಸಲು ಬಂಧ ಪತ್ನಿಯು ಪತಿಯ ತಲ್ಲೀನತೆಯನ್ನು ಕಂಡು ಬೆರಗಾದರು. ಪತಿಯನ್ನು ಮೆಲ್ಲನೆ ಅಲುಗಾಡಿಸಿ ಪ್ರಶ್ನಾರ್ಥಕವಾಗಿ ನೋಡಿದರು. ರಾಮನಾಥರು ನಗುತ್ತಾ ಸ್ವಪ್ನ ವೃತ್ತಾಂತವನ್ನು ಪತ್ನಿಗೆ ತಿಳಿಸುತ್ತಿರುವಂತೆಯೇ ಮನೆವಾರ್ತೆಯು ಬಂದು ಕೃಷ್ಣಾ ಚಾರ್ಯರು ಪುನಃ ಬಂದಿರುವುದಾಗಿ ತಿಳಿಸಲು ಆನಂದದಿಂದ ದಂಪತಿಗಳು ಅವರನ್ನು ಸ್ವಾಗತಿಸಿ ತಮ್ಮ ಅನುಭವವನ್ನು ನಿವೇದಿಸಿದರು. ಕೃಷ್ಣಾಚಾರ್ಯರಿಗೂ ಅಚ್ಚರಿಯಾಯಿತು. ಸಂತಸದಿಂದ "ಶ್ರೀಮಂತರೇ, ನೋಡಿದಿರಾ ನಮ್ಮ ಗುರುಗಳ ಮಹಿಮೆಯನ್ನು! - ಇನ್ನು ಚಿಂತೆ ಬಿಡಿರಿ. ನೀವೇ ಧನ್ಯರು. ಗುರ್ವನುಗ್ರಹಕ್ಕೆ ಪಾತ್ರರಾಗುವಿರಿ. ಇನ್ನು ಏನೂ ಯೋಚಿಸದೆ ಶ್ರೀ ರಾಯರನ್ನು ಸೇವಿಸಿರಿ" ಎಂದು ಹೇಳಿ ಸೇವಾಕ್ರಮವನ್ನು ವಿವರಿಸಿ, ಶ್ರೀ ಗುರುರಾಜರ ಭಾವಚಿತ್ರವನ್ನು ಕೊಟ್ಟು "ಪೂಜ್ಯಾಯ ರಾಘವೇಂದ್ರಾಯ" ಎಂಬ ಶ್ಲೋಕವನ್ನು ಬರೆದುಕೊಟ್ಟು ಜಪಿಸುತ್ತಾ ಸೇವಿಸುವಂತೆ ಹೇಳಿಹೋದರು.

ಮರುದಿನದಿಂದಲೇ ರಾಮನಾಥ ದಂಪತಿಗಳು ಶ್ರೀಗುರುರಾಜರ ಸೇವೆಯಲ್ಲಿ ತತ್ಪರರಾದರು. ಒಂದು ಕೊಠಡಿಯನ್ನು ಶುದ್ಧಪಡಿಸಿ ಅಲ್ಲಿ ಮಂಟಪದಲ್ಲಿ ರಜತಪೀಠದಲ್ಲಿ ಶ್ರೀರಾಯರ ಭಾವಚಿತ್ರವಿಟ್ಟು ಬೆಳ್ಳಿಯ ಸಮಯಗಳಲ್ಲಿ ತುಪ್ಪದ ನಂದಾದೀಪಗಳನ್ನು ಹಚ್ಚಿ, ಪುಷ್ಪಗಳಿಂದ ಭಾವಚಿತ್ರವನ್ನು ಅಲಂಕರಿಸಿ ಗುರುಗಳ ಪೂಜೆ ಮಾಡಿ ಸೇವೆಯನ್ನು ಪ್ರಾರಂಭಿಸಿದರು. ಆ ಕೊಠಡಿಗೆ ತಾವು ದಂಪತಿಗಳ ವಿನಃ ಮತ್ತಾರೂ ಪ್ರವೇಶಿಸದಂತೆ ಕಟ್ಟಪ್ಪಣೆ ಮಾಡಿದರು. ಏಕಾಂತದಲ್ಲಿ ಚೆಟ್ಟಿಯಾರರು ಶ್ರೀರಾಯರ ಉಪಾಸನೆ ಮಾಡಹತ್ತಿದರು. ಈ ವಿಚಾರ ಎಲ್ಲ ಕಡೆ ಹಬ್ಬಿತು. ಚೆಟ್ಟಿಯಾರರ ಮಿತ್ರರು ಬಂಧುಗಳು ರಾಮನಾಥರು ಯಾರೋ ಬ್ರಾಹ್ಮಣ ಸನ್ಯಾಸಿಗಳ ಸೇವೆ ಮಾಡುತ್ತ ಹಾಳಾಗುತ್ತಿದ್ದಾರೆಂದು ಆಡಿಕೊಳ್ಳಹತ್ತಿದರು. ಈ ವಿಚಾರ ಚೆಟ್ಟಿಯಾರರ ಕಿವಿಗೂ ಬಿದ್ದಿತು. ಆದರೆ ಇದರಿಂದ ಅವರ ಭಕ್ತಿ ಮತ್ತಷ್ಟು ದೃಢವಾಯಿತೇ ವಿನಃ ಕಡಿಮೆಯಾಗಲಿಲ್ಲ.

ಒಂದು ದಿನ ರಾತ್ರಿ ಸ್ವಪ್ನದಲ್ಲಿ ಗುರುರಾಜರು ಮಂದಸ್ಮಿತರಾಗಿ ದರ್ಶನವಿತ್ತು "ಏನಪ್ಪಾ! ಬ್ರಾಹ್ಮಣ ಸನ್ಯಾಸಿಯಾದ ನನ್ನನ್ನು ನಂಬಿ ಕೆಡುತ್ತಿರುವೆಯೆಂದು ಎಲ್ಲರೂ ಆಡಿಕೊಳ್ಳುತ್ತಿದ್ದಾರಲ್ಲಪ್ಪ, ನೋಡು, ರಾಮನಾಥ! ಈಗಲೂ ಕಾಲಮಿಂಚಿಲ್ಲ.

ನಿನಗಿಷ್ಟವಿಲ್ಲದಿದ್ದರೆ ಬಿಟ್ಟುಬಿಡು, ನಮ್ಮ ನಿರ್ಬಂಧವಿಲ್ಲ" ಎಂದು ನಗುತ್ತಾ ಹೇಳಿದರು. ಪಾಪ, ಚೆಟ್ಟಿಯಾರರಿಗೆ ತುಂಬಾ ವ್ಯಥೆಯಾಯಿತು. ಸ್ವಪ್ನದಲ್ಲಿಯೇ ಕಣ್ಣೀರು ಸುರಿಸುತ್ತಾ "ಗುರುದೇವ, ನಾನು ನಿಮ್ಮ ಚರಣಗಳಿಗೆ ಶರಣಾಗತನಾಗಿರುವ ಪಾದಸೇವಕ. ಜಗತ್ತು ಏನು ಬೇಕಾದರೂ ಹೇಳಲಿ. ಅದರಿಂದ ನನಗೆ ವ್ಯಥೆಯಿಲ್ಲ. ಆದರೆ ಸ್ವಾಮಿ, ನೀವು ಮಾತ್ರ ನನ್ನ ಕೈಬಿಡದೆ ಅನುಗ್ರಹಿಸಬೇಕು. ನನ್ನ ದೇಹ ಮನಸ್ಸು ಎಲ್ಲವನ್ನೂ ತಮಗೆ ಅರ್ಪಿಸಿದ್ದೇನೆ. ಅದನ್ನು ಉಳಿಸುವುದು, ಅಳಿಸುವುದೂ ತಮ್ಮ ಚಿತ್ತ. ಹೆಚ್ಚು ವಿಜ್ಞಾಪಿಸಲಾರೆ" ಎಂದು ಭಿನ್ನವಿಸಿ ನಮಸ್ಕರಿಸಿದರು. ಶ್ರೀ ಗುರುರಾಜರು ನಸುನಕ್ಕು "ಭಲೇ! ನಮ್ಮಲ್ಲಿ ಅಷ್ಟು ನಂಬಿಕೆಯಿದೆಯೇ ರಾಮನಾಥ? ಹಾಗಾದರೆ ಕೇಳು ಕೂಡಲೇ ಶಸ್ತ್ರಚಿಕಿತ್ಸೆಗೆ ಸಿದ್ಧನಾಗು. ನಿನ್ನನ್ನು ನಾವು ರಕ್ಷಿಸುವೆವು" ಎಂದು ಹೇಳಿ ಕಣ್ಮರೆಯಾದರು. ಚೆಟ್ಟಿಯಾರರ ಪತ್ನಿಗೂ ಸ್ವಪ್ನದಲ್ಲಿ "ಶಸ್ತ್ರಚಿಕಿತ್ಸೆ ಆಗಲಿ. ನೀನು ಭಯಪಡಬೇಡ. ನಿನ್ನ ಪತಿಯನ್ನು ರಕ್ಷಿಸುವ ಹೊಣೆ ನಮ್ಮದು" ಎಂದು ಅಪ್ಪಣೆ ಮಾಡಿದರು.

ಮರುದಿನ ಬೆಳಿಗ್ಗೆ ರಾಮನಾಥ ಚೆಟ್ಟಿಯಾರ್ ದಂಪತಿಗಳು ಪರಸ್ಪರ ಸ್ವಪ್ನ ವೃತ್ತಾಂತವನ್ನು ಹೇಳಿಕೊಂಡು ಗುರುಗಳ ಅಭಯ ವಚನದಿಂದ ಆನಂದಿಸಿದರು. ಹತ್ತಾರು ದಿನಗಳಲ್ಲಿ ಶಸ್ತ್ರಚಿಕಿತ್ಸೆಗೆ ಬೇಕಾದ ವ್ಯವಸ್ಥೆಗಳಾದವು. ಪರಿಣತರಾದ ನಾಲ್ಕಾರು ಜನ ವೈದ್ಯರು ಬಂದರು. ಶಸ್ತ್ರಚಿಕಿತ್ಸೆಯ ಕಾಲದಲ್ಲಿ ಚೆಟ್ಟಿಯಾರರು ಬದುಕುವರೋ ಇಲ್ಲವೋ ಹೇಳಲು ಸಾಧ್ಯವಿಲ್ಲವೆಂದು ಪುನಃ ವೈದ್ಯರು ಅಭಿಪ್ರಾಯ ಪಟ್ಟರು. ಚೆಟ್ಟಿಯಾರರೇ ವೈದ್ಯರಿಗೆ ಧೈರ್ಯಹೇಳಿ, "ನಿಮ್ಮ ಕರ್ತವ್ಯವನ್ನು ನೀವು ಮಾಡಿರಿ. ನನ್ನನ್ನು ರಕ್ಷಿಸಲು ಗುರುದೇವರು ಸಮರ್ಥರಾಗಿದ್ದಾರೆ" ಎಂದು ನಗು ನಗುತ್ತಲೇ ಶಸ್ತ್ರಚಿಕಿತ್ಸೆಗೆ ಸಿದ್ಧರಾದರು. ಶಸ್ತ್ರಚಿಕಿತ್ಸೆಯಾಯಿತು. ಶ್ರೀಮಂತರು ನಸುನಗುತ್ತಾ ಜ್ಞಾನದಿಂದಲೇ ಇದ್ದಾರೆ! ಅದನ್ನು ಕಂಡು ವೈದ್ಯರಿಗೂ ಆಶ್ಚರ್ಯ! ಶಸ್ತ್ರಚಿಕಿತ್ಸೆ ಯಶಸ್ವಿಯಾಗಿ ಮುಗಿಯಿತೆಂದು ದಂಪತಿಗಳಿಗೆ ಶ್ರೀರಾಯರಲ್ಲಿ ಇನ್ನೂ ಭಕ್ತಿಯು ಅಭಿವೃದ್ಧವಾಯಿತು. ಕೆಲವೇ ದಿನಗಳಲ್ಲಿ ಚೆಟ್ಟಿಯಾರರ ರೋಗ ವಾಸಿಯಾಯಿತು.

ಕೆಲ ದಿನಗಳುರುಳಿದವು. ಮತ್ತೆ ಹೃದಯಶೂಲೆ ಕಂಡು ಬಂದಿತು. ಚೆಟ್ಟಿಯಾರರು ಹೀಗೇಕಾಯಿತೆಂದು ನೊಂದು ಶ್ರೀಗುರು ರಾಜರನ್ನು ಪ್ರಾರ್ಥಿಸಿದರು. ಅಂದೇ ರಾತ್ರಿ ಸ್ವಪ್ನದಲ್ಲಿ ಗುರುಗಳು "ಭಯಪಡಬೇಡ, ಇನ್ನೂ ಕೆಲಬಾರಿ ಶಸ್ತ್ರಚಿಕಿತ್ಸೆಯಾಗಬೇಕು. ನಂತರ ನಿನ್ನ ರೋಗ ಪೂರ್ಣವಾಗಿ ವಾಸಿಯಾಗುವುದು" ಎಂದು ಅಪ್ಪಣೆ ಮಾಡಿದರು. ಮೂರು - ನಾಲ್ಕು ವರ್ಷಗಳಲ್ಲಿ ಕೆಲ ಬಾರಿ ಶಸ್ತ್ರ ಚಿಕಿತ್ಸೆಯಾಯಿತು. ಪ್ರತಿಸಲವೂ 'ಬದುಕುವುದಿಲ್ಲ' ಎಂದು ವೈದ್ಯರು ಹೇಳುತ್ತಲೇ ಇದ್ದರು, ಆದರೂ ಗುರುರಾಜರು ಅವರನ್ನು ಕಾಪಾಡುತ್ತಿದ್ದರು. ಕೊನೆಯಬಾರಿಯಂತೂ ಖಂಡಿತ ಬದುಕುವುದಿಲ್ಲವೆಂದು ಪ್ರಖ್ಯಾತ ಸರ್ಜನ್‌ರವರೇ ಹೇಳಿದ್ದರು. ಆದರೇನು, ಶ್ರೀಗುರುರಾಜರು ರಾಮನಾಥರನ್ನು ರಕ್ಷಿಸಲು ಬದ್ಧಕಂಕಣರಾಗಿರುವಾಗ ಏನಾದೀತು? ಶಸ್ತ್ರಚಿಕಿತ್ಸೆ

ಯಶಸ್ವಿಯಾಯಿತು! ಪರಿಣತ ವೈದ್ಯರೇ ಬೆರಗಾಗಿ "ನೀವು ಹೇಗೆ ಬದುಕಿದಿರಿ? ನಿಜವಾಗಿ ಇದೊಂದು ಪವಾಡವೇ ಸರಿ! ಇದು ನೀವು ನಂಬಿರುವ ಆ ಗುರುಗಳ ಮಹಿಮೆಯೇ ಇರಬೇಕು" ಎಂದು ಉದ್ಗಾರ ತೆಗೆದರು.

ಒಂದೆರಡು ತಿಂಗಳುಗಳಲ್ಲಿಯೇ ಚೆಟ್ಟಿಯಾರರಿಗೆ ಸಂಪೂರ್ಣ ಗುಣವಾಯಿತು. ಅನೇಕ ಬಾರಿ ಜೀವದಾನ ಮಾಡಿ ಸಲಹಿದ ಶ್ರೀಗುರುಸಾರ್ವಭೌಮರಲ್ಲಿ ಅವರಿಗೆಂಥ ಭಕ್ತಿಯುಂಟಾಗಿರಬೇಕು? ತಾವು ಯಾವುದೇ ಕಾರ್ಯ ಮಾಡಿದರೂ ಶ್ರೀ ಗುರುರಾಜರ ಸೂಚನೆಯಾಗದೆ ಮಾಡುತ್ತಿರಲಿಲ್ಲ. ಅವರ ಮನಸ್ಸು ಇಷ್ಟು ಪಕ್ವವಾಯಿತು. ಇದೇ ಸಮಯದಲ್ಲಿ ದ್ವಿತೀಯ ಮಹಾಯುದ್ಧ ಪ್ರಾರಂಭವಾಗಿ ಮಲಯಾ ದೇಶವನ್ನು ಜಪಾನರು ಆಕ್ರಮಿಸಿದರು. ಇದರಿಂದ ಚೆಟ್ಟಿಯಾರರ ಕೋಟ್ಯಂತರ ರೂಪಾಯಿಗಳ ಗತಿಯೇನಾಯಿತೆಂದು ತಿಳಿಯಲಿಲ್ಲ. ಶ್ರೀರಾಯರ ಭಕ್ತರಾದ್ದರಿಂದ ಚೆಟ್ಟಿಯಾರರನ್ನು ಆಡಿಕೊಳ್ಳುತ್ತಿದ್ದವರಿಗೆ ಕೇಳುವುದೇನು, ಸುವರ್ಣ ಸಂಧಿಯೇ ದೊರೆತಂತಾಯಿತು. "ತನ್ನ ಕುಲಪರಂಪರೆಯ ಕ್ರಮವನ್ನು ಬಿಟ್ಟು ಯಾರೋ ಮಾಧ್ವ ಸನ್ಯಾಸಿಗಳನ್ನು ಪೂಜಿಸಿದರೆ ಮತ್ತೇನಾಗುವುದು? ಅದರ ಫಲವಾಗಿ ಚೆಟ್ಟಿಯಾರರ ಸಂಪತ್ತೇ ನಾಶವಾಯಿತು! ಯಾವುದಕ್ಕೂ ಮಿತಿಯಿರಬೇಕು. ಈಗ ಆ ಸನ್ಯಾಸಿಗಳು ಇವರ ಸಂಪತ್ತನ್ನು ಮರಳಿ ಕೊಡಿಸಲಿ ನೋಡೋಣ!" ಇತ್ಯಾದಿಯಾಗಿ ಜನ ಆಡಿಕೊಳ್ಳಹತ್ತಿದರು. ಕರ್ಣಪರಂಪರೆಯಾಗಿ ಈ ವಿಚಾರ ಚೆಟ್ಟಿಯಾರ್ ದಂಪತಿಗಳೂ ತಿಳಿಯಿತು. "ಹೂಂ, ಮೂಢರು, ಗುರುರಾಜರ ಮಹಿಮೆಯರಿಯದೆ, ಅವರ ಯೋಗ್ಯತೆಯನ್ನು ತಿಳಿಯದೆ ನಿಂದಿಸುತ್ತಿದ್ದಾರೆ. ನಮ್ಮ ಪ್ರಾರಬ್ಧಕರ್ಮಕ್ಕೆ ಶ್ರೀರಾಯರೇನು ಮಾಡಲಾದೀತು. ಮೇಲಾಗಿ ನಮ್ಮ ಸಂಪತ್ತು ಹೋಯಿತೆಂದು ನಮಗೆ ಮಲಯಾದಿಂದ ಇನ್ನೂ ತಿಳಿದಿಲ್ಲವಲ್ಲ. ಯುದ್ಧಕಾಲವಾದ್ದರಿಂದ ಸಮಾಚಾರಗಳು ಸರಿಯಾಗಿ ತಿಳಿಯದಾಗಿದೆ ಅಷ್ಟೇ. ಜೀವದಾನ ಮಾಡಿದ ಗುರುಗಳು ಈ ಅಲ್ಪ ಧನವನ್ನು ನೀಡದಿರುವರೇ?" ಎಂದು ಆ ದಂಪತಿಗಳು ಸಮಾಧಾನ ತಾಳಿದರು.

ಒಂದು ದಿನ ಕನಸಿನಲ್ಲಿ "ರಾಮನಾಥ! ನಮ್ಮ ದರ್ಶನಕ್ಕೆ ಬರುವುದಿಲ್ಲವೇ?" ಎಂದು ಗುರುರಾಜರು ಹೇಳಿದಂತಾಯಿತು. ಪತ್ನಿಗೆ ಈ ವಿಷಯ ತಿಳಿಸಿದರು. ಆ ಸಾಧ್ವೀಮಣಿ ಹರುಷಗೊಂಡು "ಆ ಮಹಾತ್ಮರ ದರ್ಶನಕ್ಕೆ ಹೋಗಿಬರೋಣ ನಡೆಯಿರಿ ಎಂದು ಎಷ್ಟು ದಿನದಿಂದ ಹೇಳುತ್ತಿದ್ದೇನೆ, ನಿಮಗೇಕೋ ಉದಾಸೀನ; ಈಗ ಗುರುಗಳೇ ಹೇಳಿರುವಾಗ ಇನ್ನು ತಡಮಾಡಬಾರದು. ಜನರು ಅನ್ನುವರೆಂದು ನಿಮಗೆ ಚಿಂತೆಯೇ? ಜನರ ಬಾಯಿ ಮುಚ್ಚಿಸಲು ಸಾಧ್ಯವೇ? ನಮ್ಮ ಕರ್ತವ್ಯ ನಾವು ಮಾಡಬೇಕು. ಮಂತ್ರಾಲಯಕ್ಕೆ ಹೋಗೋಣ" ಎಂದು ಹೇಳಿದಳು. ಚೆಟ್ಟಿಯಾರರು ನಗುತ್ತಾ "ಆ ಮಹಾತ್ಮರಲ್ಲಿ ನನಗೆ ಉದಾಸೀನವೇ? ಎಂತಹ ಮಾತನಾಡುವೆ. ಅಲ್ಪ ಜನರ

ಮಾತಿಗೆ ನಾನು ಕಿವಿಗೊಡುವೆನೇ? ನಾಳೆಯೇ ಮಂತ್ರಾಲಯಕ್ಕೆ ಹೊರಡೋಣ" ಎಂದರು.

ರಾಮನಾಥ ದಂಪತಿಗಳು ಮಿತಪರಿವಾರದೊಡನೆ ಹೊರಟು ಇಲ್ಲಿಗೆ ಬಂದರು. ಶ್ರೀಗುರುರಾಜರ ದರ್ಶನದಿಂದ ಪುನೀತರಾದರು. ಅದೇ ಕಾಲದಲ್ಲಿ ಇಲ್ಲಿಯೇ ಇದ್ದ ಪೂಜ್ಯ ಶ್ರೀ ಸುಯಮೀಂದ್ರತೀರ್ಥ ಶ್ರೀಪಾದಂಗಳವರ ದರ್ಶನಮಾಡಿ, ಅವರ ಅಪ್ಪಣೆಯಂತೆ ಮೂರು ದಿನ ಸಂಕಲ್ಪಪೂರ್ವಕವಾಗಿ ದಂಪತಿಗಳು ಸೇವೆ ಮಾಡಿ ಶ್ರೀರಾಯರಿಗೆ ಕಾಣಿಕೆ ಸಲ್ಲಿಸಿ, ಸಹಸ್ರಾರುಜನ ಬ್ರಾಹ್ಮಣ-ಸುವಾಸಿನಿ ಯರಿಗೆ ಸಂತರ್ಪಣೆ ನೆರವೇರಿಸಿದರು. ಶ್ರೀಪಾದಂಗಳವರ ಮುಖದಿಂದ ಶ್ರೀರಾಯರ ಅಗಮ್ಯ ಮಹಿಮೆಗಳನ್ನು ತಿಳಿದು ಆನಂದಿಸಿದರು. ಚೆಟ್ಟಿಯಾರರಿಗೆ, ತಮಗೆ ಜೀವದಾನ ಮಾಡಿದ ಮಹಾನುಭಾವರಿಗೆ ಯಾವರೀತಿ ಶಾಶ್ವತಸೇವೆ ಮಾಡಿ ಉದ್ಧೃತರಾಗಬೇಕೆಂಬುದೇ ತಿಳಿಯಲಿಲ್ಲ. ಕೊನೆಗೆ ಆ ದಂಪತಿಗಳು ಶ್ರೀಪಾದಂಗಳವರಲ್ಲಿ ತಮ್ಮ ಮನದಳಲನ್ನು ತೋಡಿಕೊಂಡರು. ಆಗ ಶ್ರೀ ಸುಯಮೀಂದ್ರ ಗುರುವರ್ಯರು ಶ್ರೀ ಗುರುರಾಜರಿಗೆ ರಜತರಥವನ್ನು ಮಾಡಿಸಬೇಕೆಂದಿರುವ ತಮ್ಮ ಅಭಿಪ್ರಾಯವನ್ನು ತಿಳಿಸಿದರು. ಅದನ್ನು ಕೇಳಿ ಹರ್ಷ ನಿರ್ಭರರಾದ ಚೆಟ್ಟಿಯಾರರು ಶ್ರೀಗಳವರಿಗೆ ನಮಸ್ಕರಿಸಿ "ಮಹಾಸ್ವಾಮಿ, ಶ್ರೀಗುರುರಾಜರ ಅನುಗ್ರಹದಿಂದ ನನಗೆ ಎಲ್ಲ ಸೌಕರ್ಯಗಳಿವೆ. ಅವರು ನನಗೆ ಜೀವದಾನ ಮಾಡಿದ್ದಾರೆ. ಈ ರಜತರಥದ ನಿರ್ಮಾಣ ಸೇವೆಯನ್ನು ತಾವು ಕೃಪೆಮಾಡಿ ನನ್ನಿಂದಲೇ ಮಾಡಿಸಬೇಕು. ಆಚಂದ್ರಾರ್ಕವಾಗಿ ನನ್ನ ಸೇವೆ ನಡೆಯುತಿರಲು ತಾವು ಅವಕಾಶ ಮಾಡಿಕೊಡಬೇಕು", ಎಂದು ಪ್ರಾರ್ಥಿಸಿದರು. ಶ್ರೀಪಾದಂಗಳವರು ಸಂತೋಷದಿಂದ ಒಪ್ಪಿದರು. "ಶ್ರೀರಾಯರ ದಯದಿಂದ ಶೀಘ್ರವಾಗಿ ರಜತರಥವನ್ನು ತಯಾರುಮಾಡಿಸಿ ತಂದು ಅರ್ಪಿಸುವೆವು" ಎಂದು ಚೆಟ್ಟಿಯಾರ್ ದಂಪತಿಗಳು ವಾಗ್ದಾನಮಾಡಿ ತಮ್ಮೂರಿಗೆ ಮರಳಿದರು.

ಊರಿಗೆ ಹೋಗಿ ಒಂದೆರಡು ತಿಂಗಳಾದರೂ ಚೆಟ್ಟಿಯಾರರು ರಥದ ರಚನೆಯ ಬಗ್ಗೆ ಮಾತೆತ್ತದಿರಲು, ಅವರ ಪತ್ನಿ ಒಂದುದಿನ "ಮಂತ್ರಾಲಯದಲ್ಲಿ ಪೀಠಾಧೀಶರಾದ ಸಣ್ಣ ಗುರುಗಳಿಗೆ ರಜತರಥಮಾಡಿಸಿ ಅರ್ಪಿಸುವುದಾಗಿ ನೀವಾಗಿ ವಾಗ್ದಾನ ಮಾಡಿ ಬಂದು ಇಲ್ಲಿ ಸುಮ್ಮನೆ ಕುಳಿತಿರುವಿರಲ್ಲ! ಇದು ನ್ಯಾಯವೇ" ಎಂದು ಪ್ರಶ್ನಿಸಿದರು. ನಸುನಗುತ್ತಾ ರಾಮನಾಥ ಚೆಟ್ಟಿಯಾರರು ಪತ್ನಿಯನ್ನು ಪರೀಕ್ಷಿಸಲೆಂದು "ನಿಜ, ವಾಗ್ದಾನ ಮಾಡಿದ್ದೆ, ಆದರೆ ಮಲಯಾದ ನಮ್ಮ ವ್ಯಾಪಾರದ, ಆಸ್ತಿಯ ವಿಚಾರವೇ ತಿಳಿಯಲಿಲ್ಲವಲ್ಲ! ಶ್ರೀರಾಯರು ಅನುಗ್ರಹಿಸಲಿ ಮಾಡಿಸುತ್ತೇನೆ" ಎಂದರು. ಪತಿಯ ಮಾತುಕೇಳಿ ಆ ಸಾಧ್ವಿ ನೊಂದು "ಇದೇನು ಹುಡುಗಾಟ? ಗುರುಗಳನ್ನು ನಾವು ಪರೀಕ್ಷಿಸಬಾರದು. ಮಾತುಕೊಟ್ಟು ಮರೆಯಬಾರದು" ಎಂದೆನಲು ರಾಮನಾಥರು ನಕ್ಕು "ನಾನು ವಿನೋದಕ್ಕೆ ಹೇಳಿದರೆ ನೀನು ನಿಜವೆಂದು

ತಿಳಿದೆಯಾ ? ಎಲ್ಲ ವ್ಯವಸ್ಥೆ ಮಾಡುತ್ತೇನೆ. ಯೋಚಿಸಬೇಡ" ಎಂದು ಸಮಾಧಾನ ಪಡಿಸಿದರು. ಮರುದಿನವೇ ಉತ್ತಮ ಶಿಲ್ಪಿಗಳಿಂದ ರಥದಚಿತ್ರ ಬರೆಯಿಸಿ ಅದಕ್ಕೆ ಬೇಕಾದ ಮರ, ಬೆಳ್ಳಿ ಮುಂತಾಗಿ ಸಮಸ್ತವನ್ನು ವ್ಯವಸ್ಥೆ ಮಾಡಿದರು. ರಜತ ರಥದ ನಿರ್ಮಾಣ ಕಾರ್ಯ ಪ್ರಾರಂಭವಾಯಿತು. ಇತ್ತ ಮಹಾಯುದ್ಧವೂ ಮುಕ್ತಾಯವಾಯಿತು. ನಾಲ್ಕಾರು ತಿಂಗಳುಗಳಲ್ಲಿ ರಜತರಥ ತಯಾರಾಯಿತು!

ರಜತರಥವು ನಿರ್ಮಾಣವಾದ ದಿನವೇ ರಾತ್ರಿ ಸ್ವಪ್ನದಲ್ಲಿ "ರಾಮನಾಥ, ನೀನು ನನ್ನ ನಿಜವಾದ ಭಕ್ತ, ನನಗೆ ರಥವನ್ನು ಮಾಡಿಸಿದ ನಿನಗೇನು ಕೊಡಲಿ? ಹೂಂ. ನಿನ್ನ ಮನೋರಥವನ್ನು ಪೂರ್ಣ ಮಾಡಿದ್ದೇನೆ. ನಿನಗೆ ಮಂಗಳವಾಗಲಿ" ಎಂದು ಶ್ರೀಗುರುರಾಜರು ಅಪ್ಪಣೆ ಮಾಡಿದರು. ತಮಗಾದ ಸ್ವಪ್ನ ವಿಚಾರವನ್ನು ರಾಮನಾಥರು ಪತ್ನಿಗೆ ತಿಳಿಸಿದರು. ಆದರೆ ಅದರ ಅರ್ಥವೇನೆಂದು ಆಗ ಅವರಿಗೆ ಹೊಳೆಯಲಿಲ್ಲ. ಇದಾದ ಒಂದೆರಡು ದಿನಗಳಲ್ಲಿ ಮಲಯಾದಿಂದ ಸಮಾಚಾರ ಬಂದಿತು. "ಮಲಯಾ ದೇಶವನ್ನು ಜಪಾನರು ಆಕ್ರಮಿಸಿದಾಗ ಬ್ರಿಟಿಷ್ ನಾಣ್ಯಗಳಲ್ಲಿದ್ದ ಚೆಟ್ಟಿಯಾರರ ವ್ಯಾಪಾರಧನ ಜಪಾನ್ ನಾಣ್ಯಗಳಾಗಿ ಪರಿವರ್ತಿತವಾಗಿದ್ದು ಯುದ್ಧಾನಂತರ ಆ ನಾಣ್ಯಗಳಿಗೆ ಬೆಲೆಯಿಲ್ಲವೆಂದು ತಾವು ನಿರಾಶರಾಗಿದ್ದುದಾಗಿಯೂ, ಆದರೆ ಬ್ರಿಟಿಷರು ಪುನಃ ದೇಶವನ್ನು ವಶಪಡಿಸಿ ಕೊಂಡಮೇಲೆ ಬಹಳ ವ್ಯವಹಾರ ನಡೆದು ಆ ನಾಣ್ಯಗಳಿಗೆ ಬದಲಾಗಿ ಬ್ರಿಟಿಷ್ ನಾಣ್ಯಗಳನ್ನು ಕೊಡುವುದಾಗಿ ಆಂಗ್ಲ ಪ್ರಭುತ್ವವು ಒಪ್ಪಿರುವುದಾಗಿಯೂ" ಚೆಟ್ಟಿ ಯಾರರ ಮಲಯಾ ಅಧಿಕಾರಿ ಏಜೆಂಟರಿಂದ ಪತ್ರ ಬಂದಿತು! ಅಂದು ದಂಪತಿಗಳಿಗಾದ ಆನಂದ ಅವರ್ಣನೀಯ! ಶ್ರೀರಾಯರು ಮತ್ತೆ ಸ್ವಪ್ನದಲ್ಲಿ ದರ್ಶನವಿತ್ತು "ನಿನ್ನ ಮನೋರಥ ಪೂರ್ಣಮಾಡಿದ್ದೇವೆ-ರಾಮನಾಥ! ಈಗ ನಿನಗೆ ಸಂತೋಷವಾಯಿತಷ್ಟೇ?" ಎಂದು ಹೇಳಿದಂತಾಯಿತು. ಚೆಟ್ಟಿಯಾರರಿಗೆ ಈಗ ಸ್ಪಷ್ಟವಾಯಿತು. 'ಆಹಾ! ಎಂಥ ದಯಾಳುಗಳು ಗುರುಗಳು!' ಎಂದು ಚೆಟ್ಟಿಯಾರರು ಹಿಗ್ಗಿದರೆ "ಪ್ರಾಣ-ವಿತ್ತ ಹೀಗೆ ಎರಡನ್ನೂ ಕರುಣಿಸಿ ಕಾಪಾಡಿದ್ದಾರಲ್ಲ! ಈ ಗುರುಗಳು" ಎಂದು ಚೆಟ್ಟಿನಾಡಿನ ಜನ ಶ್ರೀ ಗುರುಗಳ ಮಹಿಮೆಯನ್ನು ಕಂಡು ಬೆರಗಾದರು. ಈ ಅನುಭವದಿಂದ ಅನೇಕರು ಗುರುಗಳ ಭಕ್ತರಾದರು!

ಶ್ರೀ ಗುರುಭಕ್ತರೇ! ನೋಡಿದಿರಾ ನಮ್ಮ ಗುರುಗಳ ಮಹಿಮೆ. ಸಜ್ಜನರು ಆಡಿಕೊಂಡರೂ ಲಕ್ಷಿಸದೆ ಚೆಟ್ಟಿಯಾರರು ಶ್ರೀರಾಯರನ್ನು ನಂಬಿ ತ್ರಿಕರಣಗಳಿಂದ ಸೇವಿಸಿದರು. ತಮ್ಮನ್ನು ನಂಬಿದ ಚೆಟ್ಟಿಯಾರರಲ್ಲಿ ಕರುಣಾಳುಗಳಾದ ಶ್ರೀರಾಯರೂ ಹಾಗೆಯೇ ಅನುಗ್ರಹಿಸಿದರು!ಇಂತು ತಮ್ಮಲ್ಲಿ ಅನುಗ್ರಹ ಮಾಡಿದ ಶ್ರೀ ಗುರು ಸಾರ್ವಭೌಮರಿಗೆ ಅವರ ಆಜ್ಞೆಯಂತೆ ರಾಮನಾಥಚೆಟ್ಟಿಯಾರ್ ದಂಪತಿಗಳು ರಜತರಥವನ್ನು ತಂದು ಸಮರ್ಪಿಸಿ ಉತ್ಸವ ಮಾಡಿಸಿದರು. ಅದನ್ನು ನೀವೆಲ್ಲರೂ ನೋಡಿ ಆನಂದಿಸಿದ್ದೀರಿ. ಇದೇ ಶ್ರೀಸುಯಮೀಂದ್ರರು ಅಪ್ಪಣೆಕೊಡಿಸಿದ ಶ್ರೀರಾಯರ

ಮಹಿಮೆ” ಎಂದು ಶ್ರೀಮಠದ ಆಚಾರ್ಯರು ಭಕ್ತಜನರಿಗೆ ಅದನ್ನು ವಿಸ್ತಾರವಾಗಿ ನಿರೂಪಿಸಿದರು.

ಶ್ರೀಮಠದ ಆಚಾರ್ಯರು ಹೇಳಿದ, ಶ್ರೀರಾಯರು ತೋರಿದ ಅದ್ಭುತ ಮಹಿಮೆಯನ್ನಾಲಿಸಿ ಸರ್ವರೂ ಆನಂದದ ಕಣ್ಣೀರು ಸುರಿಸಿ, ಶ್ರೀ ರಾಯರ ಕಾರುಣ್ಯವನ್ನು ಕೊಂಡಾಡಹತ್ತಿದರು. ಆಗ ರಾಮಾಶಾಸ್ತ್ರಿಗಳೆಂಬ ಒಬ್ಬರು “ಸ್ವಾಮಿ, ಆಚಾರ್ಯರೇ, ಅಮೃತಪಾನ ಮಾಡಿಸಿದಿರಿ” ಎಂದರು. ಆಗ ವರದರಾಜ ಐಯ್ಯಂಗಾರ್ ಎಂಬ ಮಧ್ಯಮ ವಯಸ್ಕರು ಮುಂದೆ ಬಂದು “ಆಚಾರ್ಯರೇ, ಶಾಸ್ತ್ರಿಗಳು ಸತ್ಯವನ್ನೇ ನುಡಿದಿದ್ದಾರೆ. ನೀವು ಮೊದಲು ಹೇಳಿದಂತೆ ಮಹಾತ್ಮರಿಗೆ ಮತ ಪಂಥಗಳ ಗಡಿ ಇಲ್ಲ. ಈಗ ನೋಡಿ, ನಾವು ಮೈಸೂರು ಪ್ರಾಂತ್ಯದವರು. ನಮ್ಮಲ್ಲಿ ದ್ವೈತಾದ್ವೈತ-ವಿಶಿಷ್ಟಾದ್ವೈತವಾದಿ ಮತೀಯರು ಬಹುಜನರಿದ್ದಾರೆ. ನೀವು ಹೇಳಿದಂತೆ ಭಾವನೆಗಳು ನಮಗೆ ಎಂದು ದೊಡ್ಡವರಲ್ಲಿ ಗೌರವ ತೋರುವುದರಲ್ಲಿ ಅಡ್ಡವಾಗಿಲ್ಲ. ಅಷ್ಟೇ ಅಲ್ಲ; ನಾವೆಲ್ಲರೂ ಶ್ರೀ ರಾಘವೇಂದ್ರ ಗುರುಸಾರ್ವಭೌಮರನ್ನು ಭಕ್ತಿಯಿಂದ ಸೇವಿಸಿ ನಮ್ಮ ವಾಂಛಿತಗಳನ್ನು ಪಡೆಯುತ್ತಿದ್ದೇವೆ. ನಮ್ಮ ಗುರು ಪೀಠಗಳೂ ಶ್ರೀರಾಯರಲ್ಲಿ ಅಪಾರ ಗೌರವವನ್ನು ತೋರುವುದನ್ನು ನಾವು ಬಲ್ಲೆವು. ಇಷ್ಟೇ ಅಲ್ಲ; ಶ್ರೀ ರಾಘವೇಂದ್ರ ಸ್ವಾಮಿಗಳ ಮಠದ ಮೂಲ ಸ್ಥಳ ನಮ್ಮ ಮೈಸೂರು ದೇಶದಲ್ಲಿ ಖ್ಯಾತವಾದ ನಂಜನಗೂಡೇ ಆಗಿದೆ, ನಂಜನಗೂಡಿನಲ್ಲಿರುವ ಸ್ಮಾರ್ತ, ಶ್ರೀವೈಷ್ಣವ ಮತ್ತು ಮಾಧ್ವರೆಲ್ಲರೂ, ಅಷ್ಟೇ ಏಕೆ, ಚಾತುರ್ವರ್ಣ್ಯದ ಎಲ್ಲ ಹಿಂದೂ ಜನಾಂಗದವರೂ ಶ್ರೀ ರಾಘವೇಂದ್ರ ಸ್ವಾಮಿಗಳಲ್ಲಿ ಭಕ್ತಿಯಿಂದ ನಡೆದುಕೊಳ್ಳುವುದಲ್ಲದೆ ಈ ಮಠವನ್ನು 'ನಮ್ಮ ಮಠ' ಎಂದೇ ತಿಳಿದು ವರ್ತಿಸುತ್ತಿರುವುದನ್ನು ನಾನು ಬಲ್ಲೆ. ಶ್ರೀರಾಯರು ನೀವು ಹೇಳಿದಂತೆ ಕೇವಲ ಶ್ರೀರಾಯರ ಮಠ, ಮಾಧ್ವರು, ಬ್ರಾಹ್ಮಣರು ಅಥವಾ ಹಿಂದೂ ಜನರಿಗೆ ಮಾತ್ರ ಗುರುಗಳಾಗಿರದೆ ಅವರು ವಿಶ್ವಗುರುಗಳೇ ಆಗಿದ್ದಾರೆ” ಎಂದರು. ಆಗ ಗೋವಿಂದರಾಯರೇ ಮುಂತಾದವರು 'ನಿಜ, ನಿಜ' ಎಂದು ತಲೆಯಾಡಿಸಿದರು.

ಆಗ ಸದಾಶಿವ ಎಂಬುವರು “ಆಚಾರ್ಯರೇ, ನೋಡಿ, ನಾವು ಬೇರೆಬೇರೆ ಊರುಗಳಿಂದ ಬಂದು ಸೇರಿದ್ದೇವೆ. ನಾವು ಶ್ರೀಗುರುರಾಜರು ಮಹಾತ್ಮರು, ದೊಡ್ಡವರು ಭಕ್ತವತ್ಸಲರು ಎಂದಿಷ್ಟು ಮಾತ್ರ ತಿಳಿದಿದ್ದೇವೆ, ಕೆಲವರಿಗೆ ಅವರ ಚರಿತೆಯೆಲ್ಲ ಗೊತ್ತಿರಬಹುದಾದರೂ ಅನೇಕರಿಗೆ ಆ ಮಹಾನುಭಾವರ ಸಂಪೂರ್ಣ ಚರಿತ್ರೆ, ಮಹಿಮಾತಿಶಯಗಳು ತಿಳಿಯದೆಂದು ಭಾವಿಸುತ್ತೇನೆ. ಅದನ್ನು ನೀವು ನಮಗೆ ತಿಳಿಸಿದರೆ ಬಹಳ ಉಪಕಾರವಾಗುವುದು” ಎಂದು ಹೇಳಿದರು.

ಅದೇ ಹೊತ್ತಿಗೆ ನಗಾರಿ, ಕಹಳೆ, ನಾದಸ್ವರಗಳ ಧ್ವನಿಕೇಳಿಸಿತು, ಸಹಸ್ರಾರು ವಿದ್ಯುದ್ದೀಪಗಳು ಶ್ರೀ ಗುರುರಾಜರ ಆಲಯ-ಸುತ್ತಮುತ್ತ ಬೆಳಗಿದವು. ಅದನ್ನು ಗಮನಿಸಿದ ಶ್ರೀಮಠದ ಆಚಾರ್ಯರು ನಸುನಗುತ್ತಾ ಹೇಳಿದರು.

**ಆಚಾರ್ಯರು** : "ಓಹೋ! ಶ್ರೀಗುರುರಾಜರ 'ಸರ್ವಸಮರ್ಪಣೋತ್ಸವ'ವು ಹೊರಟಂತೆ ತೋರುವುದು. ಶ್ರೀರಾಯರ ಭಕ್ತರೇ, ನೀವು ಶ್ರೀರಾಯರ ಚರಿತಾಮೃತವನ್ನು ಹೇಳಬೇಕೆಂದು ನನ್ನನ್ನು ಕೇಳಿದಿರಿ, ನಿಮ್ಮ ಸೌಭಾಗ್ಯ. ಇಂದು ಪ್ರತಿ ವರ್ಷದಂತೆ ಪರಮ ಪೂಜ್ಯರಾದ ಶ್ರೀ ಸುಯಮೀಂದ್ರತೀರ್ಥ ಶ್ರೀಪಾದಂಗಳವರು ಶ್ರೀ ಗುರುರಾಜರ ಅಮರ ಚರಿತೆ, ಮಹಿಮಾತಿಶಯಗಳನ್ನು ಭಕ್ತಜನರಿಗೆ ಉಪದೇಶಿಸುತ್ತಾರೆ. ಶ್ರೀ ಗುರುಸಾರ್ವಭೌಮರ ಮಹಿಮಾ ಪ್ರಸಾರಕರೂ, ಶ್ರೀರಾಯರ ಪೂರ್ವಾಶ್ರಮ ಸದ್ವಂಶ ಸಂಜಾತರೂ, ಗುರುವರರ ಪವಿತ್ರ ಪೀಠದಲ್ಲಿ ವಿರಾಜಿಸಿರುವವರೂ ಆದ ಆ ಜ್ಞಾನಿಗಳ ಉಪದೇಶವನ್ನೇ ಕೇಳಿ ಪುನೀತರಾಗಬಹುದು. ಬನ್ನಿ, ಎಲ್ಲರೂ ಶ್ರೀರಾಯರ ಉತ್ಸವವನ್ನು ನೋಡಿ, ಗುರುಗಳ ಉಪದೇಶ ಶ್ರವಣ ಮಾಡಿ ಪುನೀತರಾಗೋಣ" ಎಂದು ಹೇಳಿ ಸರ್ವರೊಡನೆ ಶ್ರೀರಾಯರ ಗುಡಿಗೆ ಹೊರಟರು.

ಪೂಜ್ಯ ಶ್ರೀಸುಯಮೀಂದ್ರತೀರ್ಥರ ನೇತೃತ್ವದಲ್ಲಿ, ಅಲಂಕೃತರಾದ ಶ್ರೀಗುರುರಾಜರು ರಜತರಥದಲ್ಲಿ ಮಂಡಿಸಿ ವಾದ್ಯವೈಭವ, ವೇದಘೋಷ, ಭಕ್ತರ ಜಯಜಯಕಾರ, ಹರಿದಾಸರ ಭಕ್ತಿಪೂರ್ಣ ನರ್ತನ, ಭಜನೆಗಳೊಡನೆ ಮೆರವಣಿಗೆ ಹೊರಟು ಆಲಯದಲ್ಲಿ ಸರ್ವಾಂಗ ಸುಂದರವಾಗಿ ಅಲಂಕೃತವಾದ "ಕಲ್ಯಾಣ ಮಂಟಪ"ದಲ್ಲಿ ವಿರಾಜಿಸಿದ ಉಂಜಲಿನಲ್ಲಿ ಮಂಡಿಸಿದರು. ಶ್ರೀಯವರ ಅಮೃತ ಹಸ್ತದಿಂದ ಡೋಲೋತ್ಸವವಾಯಿತು. ನಂತರ ಸ್ವಸ್ತಿವಾಚನವಾದ ಮೇಲೆ ಶ್ರೀಮದಾಚಾರ್ಯರ ದಿಗ್ವಿಜಯ ವಿದ್ಯಾಪೀಠದಲ್ಲಿ ಅಲಂಕೃತರಾದ ಶ್ರೀಸುಯಮೀಂದ್ರತೀರ್ಥ ಶ್ರೀಪಾದಂಗಳವರು ಭಕ್ತಿಪರವಶರಾಗಿ ಅಲ್ಲಿ ಸೇರಿದ್ದ ಸಹಸ್ರಾರು ಜನ ಭಕ್ತರನ್ನುದ್ದೇಶಿಸಿ ಉಪದೇಶ ಭಾಷಣವನ್ನು ಅಪ್ಪಣೆಕೊಡಿಸಲಾರಂಭಿಸಿದರು.

"ಇಂದು ಶ್ರೀ ಮಂತ್ರಾಲಯ ಶ್ರೀಪಾದಂಗಳವರು ವಿಶ್ವಗುರುಗಳೆಂದು ಜಗನ್ಮಾನ್ಯರಾಗಿದ್ದಾರೆ. ಭಾರತದ ಎಲ್ಲೆಯನ್ನೂ ಮೀರಿ ಅವರ ಮಹಿಮೆಯ ಕೀರ್ತಿಯು ಜಗತ್ತಿನ ದಿಕ್ತಟಗಳಲ್ಲೆಲ್ಲಾ ಬೆಳಗುತ್ತಿದೆ. ಜಾತಿ, ಮತ, ಪಂಥ, ವರ್ಣ, ದೇಶ, ಭಾಷೆ, ಬಡವ, ಬಲ್ಲಿದ, ಶ್ರೀಮಂತ - ಆಸ್ತಿಕ - ನಾಸ್ತಿಕ ಎಂಬ ಭೇದವಿಲ್ಲದೆ ಸರ್ವರೂ ಈ ಮಹನೀಯರನ್ನು ಸೇವಿಸಿ, ಆಶ್ರಯಿಸಿ, ತಮ್ಮ ಎಲ್ಲ ಬಗೆಯ ಕಷ್ಟಗಳನ್ನೂ ಕಳೆದುಕೊಂಡು, ತಮ್ಮ ತಮ್ಮ ಇಷ್ಟಾರ್ಥಗಳನ್ನು ಪಡೆದು ಸುಖಿಸುತ್ತಿದ್ದಾರೆ. ಶ್ರೀ ಗುರುರಾಜರು ತಮ್ಮನ್ನು ಆರಾಧಿಸಿದವರ ಪರಿಶುದ್ಧ ಹೃದಯ, ಭಕ್ತಿಗಳನ್ನು ಮಾತ್ರ ನೋಡಿ ಅವರಾರೇ ಆಗಿರಲಿ ಅಂಥವರ ಸಕಲ ಅನಿಷ್ಟಗಳನ್ನು ಪರಿಹರಿಸಿ ಬೇಡಿಬೇಡಿದ ಇಷ್ಟಾರ್ಥಗಳನ್ನೀಡಾಡುತ್ತಿದ್ದಾರೆ! ಹೀಗೆ ಕೋಟ್ಯಂತರ ಜನರ ಪಾಪ ಪರಿಹಾರ, ರೋಗಾದ್ಯುಪ ದ್ರವಗಳನ್ನು ಪರಿಹರಿಸಿ ಅವರೆಲ್ಲ ರಮನೋರಥಗಳನ್ನೂ ನೀಡುತ್ತಿದ್ದಾರೆ. ಇಲ್ಲಿ ಒಂದು ವಿಷಯವನ್ನು ನಾವು ಯೋಚಿಸಬೇಕು. ಶ್ರೀ ಗುರುರಾಜರಿಗೆ ಹೀಗೆ ಕೋಟ್ಯಂತರ ಭಕ್ತರ ಇಷ್ಟಾರ್ಥಗಳನ್ನು ಕೊಟ್ಟು,

ಸರ್ವರನ್ನೂ ಉದ್ಧಾರಮಾಡುವ ಶಕ್ತಿ ಹೇಗೆ ಬಂತು? ಅವರ ಅನುಗ್ರಹ ಭಂಡಾರ ಇಂತು ಅಕ್ಷಯವಾಗಿರುವುದರ ರಹಸ್ಯವೇನು? ಇದನ್ನು ನಾವು ವಿವೇಚಿಸಿದಂತೆಲ್ಲ ಅವರ ಅಗಾಧ ಶಕ್ತಿ, ಸಂಪತ್ತು, ಮಹಿಮಾದಿಗಳ ಅರಿವಾಗಿ ನಾವು ಮೂಕವಿಸ್ಮಿತರಾಗುತ್ತೇವೆ. ಶ್ರೀಗುರುರಾಜರ ಭಕ್ತರೇ, ಶ್ರೀ ಗುರುಸಾರ್ವಭೌಮರ ಅಮರ ಚರಿತೆಯನ್ನು ಅರಿಯುವ ಮೊದಲು ಈ ಮಹನೀಯರು ಯಾರು? ಇವರ ಮೂಲ ರೂಪವಾವುದು? ಇವರಿಗೆ ಇಂತಹ ಮಹಾ ಶಕ್ತಿಯುಂಟಾಗಲು ಕಾರಣವೇನು? ಜಗದೀಶ್ವರನು ಸರ್ವದಾ ಅವರಲ್ಲಿ ಏಕೆ ಸನ್ನಿಹಿತನಾಗಿ ನಲಿಯುತ್ತಿರುವನು? ಬೇಡಿದ ವರ, ಮನೋರಥ ಪೂರಣ ಮಾಡುವ ಅಗಾಧ ಸಂಪತ್ತು ಅವರಿಗೆ ಹೇಗೆ ಲಭ್ಯವಾಯಿತು?-ಇತ್ಯಾದಿ ವಿಚಾರಗಳನ್ನು ತಿಳಿಯಬೇಕು. ಅಂದರೆ ಆಗ ಮಾತ್ರ ಇವರ ವೈಶಿಷ್ಟ್ಯಪೂರ್ಣ ವ್ಯಕ್ತಿತ್ವ, ಮಹತ್ವ, ಮಹಿಮಾದಿಗಳು ಚೆನ್ನಾಗಿ ಗೊತ್ತಾಗಿ ಇವರ ಅಮರ ಚರಿತೆಯನ್ನರಿತು ಭಕ್ತಿ ಶ್ರದ್ಧೆಗಳಿಂದ ಇವರನ್ನು ಆರಾಧಿಸಿ ಉದ್ಧೃತರಾಗಲು ಹೆಚ್ಚು ಉತ್ಸಾಹವುಂಟಾಗುತ್ತದೆ.

ನಾವು ಪ್ರತಿವರ್ಷವೂ ಶ್ರೀಗುರುರಾಜರ ಅಮರಚರಿತೆ ಮಹಿಮೆಗಳನ್ನು ನಿಮಗೆ ಉಪದೇಶಿಸುತ್ತಿದ್ದೆವು. ಶ್ರೀ ಗುರುಸಾರ್ವಭೌಮರ ಪ್ರೇರಣೆಯಂತೆ ಈ ದಿವಸ ನಿಮಗೆ ಮೇಲೆ ಹೇಳಿದ ಎಲ್ಲ ವಿಚಾರಗಳ ವಿವೇಚನೆಯೊಡನೆ ಶ್ರೀಗುರುರಾಜರ ಮೂಲರೂಪ, ಅವತಾರಗಳ ವೈಶಿಷ್ಟ್ಯ ಮಹಿಮಾದಿಗಳನ್ನು ತಿಳಿಸಲು ಆಶಿಸಿದ್ದೇವೆ. ಇದು ಒಂದು ವಿಧದಿಂದ ಶ್ರೀಗುರುರಾಜರ ಆಜ್ಞೆ ಎಂದೇ ಭಾವಿಸಿದ್ದೇವೆ. ಅವರೇ ಪ್ರೇರಿಸಿ, ನಮ್ಮಲ್ಲಿ ನಿಂತು ಹೇಳಿಸಿದಷ್ಟು ನಮ್ಮ ಯೋಗ್ಯತಾನುಸಾರವಾಗಿ ನಿಮ್ಮೆಲ್ಲರಿಗೂ ತಿಳಿಸಬೇಕೆಂದು ಅಪೇಕ್ಷಿಸುತ್ತೇವೆ.

ಶ್ರೀ ಗುರುಸ್ತೋತ್ರದಲ್ಲಿ ಶ್ರೀ ಅಪ್ಪಣ್ಣಾಚಾರ್ಯರು "ಶ್ರೀ ರಾಘವೇಂದ್ರೋಹರಿಪಾದಕಂಜನಿಷೇವಣಾಲ್ಲಬ್ಧ ಸಮಸ್ತ ಸಂಪತ್" ಎಂದು ಹೇಳಿದ್ದಾರೆ-ಅಂದರೆ ಜಗಜ್ಜನ್ಮಾದಿಕಾರಣನೂ, ಸರ್ವೋತ್ತಮನೂ ಆದ ಶ್ರೀಮನ್ನಾರಾಯಣನ ಚರಣಕಮಲ ನಿಷೇವಣದಿಂದ ಶ್ರೀ ಗುರುರಾಜರು ಧರ್ಮಾರ್ಥ ಕಾಮ-ಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥ ಸಂಪತ್ತನ್ನು ಪಡೆದಿದ್ದಾರೆ ಎಂದು ಹೇಳಿರುವರು. ನಮ್ಮೆಲ್ಲ ಪ್ರಶ್ನೆಗಳಿಗೂ ಇದು ಉತ್ತರರೂಪವಾಗಿದೆ. ಸಕಲ ಸಂಪತ್ತುಗಳಿಗೂ ಅಭಿಮಾನಿನಿಯಾದ ಶ್ರೀ ಲಕ್ಷ್ಮೀದೇವಿಗೆ ಪ್ರಭುವಾದ ಶ್ರೀಹರಿಯು ಇವರಿಗೆ ಒಲಿದಿರುವುದರಿಂದಲೇ ಇವರದು ಇಂತು ಅಗಾಧ ಭಂಡಾರವಾಗಿದೆ. ಅದು ಕೇವಲ ಭಂಡಾರವಾಗಿರದೆ "ಅಕ್ಷಯ ಭಂಡಾರ" ವಾಗಿರುವುದರಿಂದಲೇ ಶ್ರೀ ಗುರುರಾಜರು ಕೋಟ್ಯಂತರ ಭಕ್ತಜನರು ಕೇಳಿ ಕೇಳಿದ ಇಷ್ಟಾರ್ಥ ಸಂಪತ್ತನ್ನು ಅನುಗ್ರಹಿಸಲು ಸಮರ್ಥರಾಗಿದ್ದಾರೆ. ಶ್ರೀ ಗುರುರಾಜರು ಶ್ರೀಹರಿಯನ್ನು ಶ್ರೀ ರಾಘವೇಂದ್ರ ರೂಪದಲ್ಲಿ ಸೇವಿಸಿ ಈ ಮಹಾ ಸಂಪತ್ತನ್ನು ಸಂಪಾದಿಸಿದ್ದಾರೆಂದು ಮಾತ್ರ ತಿಳಿಯ ಬಾರದು.

ಈ ಮಹಾನುಭಾವರು ಶ್ರೀಹರಿಯನ್ನು ಯುಗ ಯುಗಗಳಿಂದ ಆರಾಧಿಸಿ ಈ ಚತುರ್ವಿಧ ಪುರುಷಾರ್ಥ ಸಂಪತ್ತಿನ ಅಕ್ಷಯ ಭಂಡಾರವನ್ನು ಪಡೆದಿದ್ದಾರೆ. ಹಾಗಾದರೆ ಇವರು ಯಾರು? ಇವರ ಮೂಲರೂಪವಾವುದು? ಇವರು ಯುಗ ಯುಗಗಳಲ್ಲಿ ಶ್ರೀ ಹರಿಯನ್ನು ಸೇವಿಸಿದ ರೂಪ ಅವತಾರಗಳಾವುವು? ಇದನ್ನು ನಾವು ಮೊದಲು ತಿಳಿಯಬೇಕು.

ಇದಕ್ಕೆ ನಮಗೆ ಶ್ರೀ ನರಸಿಂಹಪುರಾಣ ಉತ್ತರ ನೀಡುತ್ತದೆ, ನರಸಿಂಹ ಪುರಾಣದಲ್ಲಿ:-

ಶಂಕುಕರ್ಣಾಖ್ಯ ದೇವಸ್ತು ಬ್ರಹ್ಮಶಾಪಾಚ್ಚ ಭೂತಲೇ |
ಪ್ರಹ್ಲಾದ ಇತಿ ವಿಖ್ಯಾತೋ ಭೂಭಾರಕ್ಷಪಣೇ ರತಃ ||
ಸ ಏವ ರಾಘವೇಂದ್ರಾಖ್ಯಯತಿರೂಪೇಣ ಸರ್ವದಾ |
ಕಲೌಯುಗೇ ರಾಮಸೇವಾಂ ಕುರ್ವನ್ ಮಂತ್ರಾಲಯೇಭವತ್ ||

ಎಂದು ಶ್ರೀ ಗುರುರಾಜರ ಮೂಲರೂಪ ಅವತಾರಗಳ ವಿಚಾರ ಹೇಳಿದ್ದಾರೆ. ಇದರಿಂದ ಶ್ರೀ ರಾಘವೇಂದ್ರ ಗುರುಸಾರ್ವಭೌಮರ ಮೂಲರೂಪ ಶಂಕುಕರ್ಣ ಎಂಬ ದೇವತೆ ಎಂದು ಸ್ಪಷ್ಟವಾಗುವುದು. ಅವರು ಬ್ರಹ್ಮದೇವರ ಶಾಪರೂಪ ವರದಿಂದ ಪ್ರಹ್ಲಾದರಾಜರಾಗಿ ಅವತರಿಸಿದರು. ಮತ್ತು ಭೂಭಾರ ನಿವಾರಣೆಗಾಗಿ ಅವತರಿಸಿದ ಶ್ರೀ ನೃಸಿಂಹ ದೇವರಲ್ಲಿ ರತರಾದರು, ಅವರು ಮುಂದೆ ಬಾಹ್ಲೀಕರಾಜ, ಮತ್ತು ವ್ಯಾಸರಾಜಗುರುಸಾರ್ವಭೌಮರಾಗಿ ಅವತರಿಸಿ ಭೂಭಾರಪರಿಹಾರಕ್ಕಾಗಿ ಅವತರಿಸಿದ ಶ್ರೀ ಕೃಷ್ಣಪರಮಾತ್ಮನಲ್ಲಿ ರತರಾದರು. ಹೀಗೆ ಬಾಹ್ಲೀಕ-ವ್ಯಾಸರಾಜರಾಗಿ ಅವತರಿಸಿದ ಆ ಶ್ರೀ ಪ್ರಹ್ಲಾದರೂಪದ ಶಂಕು ಕರ್ಣರೇ ಮತ್ತೆ ಕಲಿಯುಗದಲ್ಲಿ ಮಂತ್ರಾಲಯದಲ್ಲಿ ಶ್ರೀ ಮೂಲರಾಮಚಂದ್ರ ದೇವರ -ಸೇವೆ ಮಾಡುತ್ತಾ ಶ್ರೀ ರಾಘವೇಂದ್ರರಾದರು ಎಂದು ನಮಗೆ ಗೊತ್ತಾಗುವುದು. ಅಪರೋಕ್ಷಜ್ಞಾನಿಗಳಾದ ಹರಿದಾಸರ ಅಮರ ವಚನಗಳೂ ಇದನ್ನು ಸ್ಪಷ್ಟಪಡಿಸುವುವು.

"ಮಹಾತ್ಮ್ಯಜ್ಞಾನಪೂರ್ವಸ್ತು ಸುದೃಢಸ್ಸರ್ವತೋಧಿಕಃ |
ಸ್ನೇಹೋ ಭಕ್ತಿರಿತಿಪ್ರೋಕ್ತೋ ತಯಾ ಮುಕ್ತಿರ್ನಚಾನ್ಯಥಾ ||"

ಅಂದರೆ ನಾವು ಯಾರನ್ನು ಆರಾಧಿಸುತ್ತೇವೋ ಅವರ ಮಹಿಮಾತಿಶಯ ಗಳನ್ನು ಚೆನ್ನಾಗಿ ತಿಳಿದು ತಾನು, ತನ್ನದು, ತನ್ನವರೆಂಬ ಎಲ್ಲ ವಸ್ತುಗಳಲ್ಲಿ ಮಾಡುವ ಪ್ರೇಮ ಅಥವಾ ಭಕ್ತಿಯಕಿಂತ ಅತ್ಯಂತ ಅಧಿಕವಾಗಿ ಮಾಡುವ, ಎಂತಹ ಪರಿಸ್ಥಿತಿಯಲ್ಲಿಯೇ ಆಗಲಿ ಸ್ವಲ್ಪವೂ ಕುಂದದ ನಿಶ್ಚಲವಾದ ಶ್ರೇಷ್ಠವಾದ ಭಕ್ತಿಯಿಂದ ಸೇವಿಸುವುದರಿಂದಲೇ ಶಾಶ್ವತವಾದ ಸುಖವು ಲಭಿಸುತ್ತದೆ. ಅದನ್ನು ಬಿಟ್ಟರೆ ಖಂಡಿತ ಉದ್ಧಾರಕ್ಕೆ ಇಷ್ಟಾರ್ಥಸಾಧನೆಗೆ, ಶಾಶ್ವತಸುಖಪ್ರಾಪ್ತಿಗೆ ಬೇರೆ ಮಾರ್ಗವಿಲ್ಲ ಎಂದು ವ್ಯಕ್ತವಾಗುತ್ತದೆ. ಇದು ಭಗವಂತನಲ್ಲಿ ಮಾಡಬೇಕಾದ ಭಕ್ತಿಯ ಬಗೆಗೆ ಹೇಳಿರುವ ವಿಚಾರ. "ಯಸ್ಯ ದೇವೇ ಪರಾ ಭಕ್ತಿರ್ಯಥಾದೇವೇ ತಥಾಗುರೌ" ಎಂಬ ವೇದದ ವಚನವು ಶ್ರೀಹರಿಯಲ್ಲಿಮಾಡುವಂತೆಯೇ ಅವನ

ಅತ್ಯರ್ಥಪ್ರಸಾದವನ್ನು ದೊರಕಿಸಿಕೊಡುವ ಶಾಸ್ತ್ರಜ್ಞಾನವನ್ನು ಉಪದೇಶ ಮಾಡುವ ಗುರುಗಳಲ್ಲಿಯೂ ತಾರತಮ್ಯಾನುಸಾರವಾಗಿ ಭಗವಂತನಲ್ಲಿ ಮಾಡುವಂತೆಯೇ ನಿರ್ಮಲಭಕ್ತಿಯನ್ನು ಮಾಡಬೇಕೆಂದು ಉಪದೇಶಿಸುವುದರಿಂದ ಪ್ರಕೃತ ಇಂದು ಸ್ವರೂಪೋದ್ಧಾರಕ ಗುರುಗಳಾಗಿ ಜಗತ್ತಿನ ಎಲ್ಲ ಜನರಿಗೆ ಗುರುಗಳಾಗಿ ಕಂಗೊಳಿಸು ತ್ತಿರುವ ಶ್ರೀ ಗುರುಸಾರ್ವಭೌಮರ ಅನುಗ್ರಹವನ್ನು ಅಪೇಕ್ಷಿಸುವ ಪ್ರತಿಯೊಬ್ಬರೂ ಶ್ರೀ ರಾಯರಲ್ಲಿ ಅವರ ಮಹಾತ್ಮ್ಯಜ್ಞಾನಪೂರ್ವಕವಾಗಿ ಹೆಚ್ಚಾದ, ನಿಶ್ಚಲವಾದ ಭಕ್ತಿಯನ್ನು ಮಾಡಿ ಅವರ ಅನುಗ್ರಹದಿಂದ ಧರ್ಮಾರ್ಥ - ಕಾಮಮೋಕ್ಷಗಳೆಂಬ ಪುರುಷಾರ್ಥ ಸಂಪತ್ತುಗಳನ್ನು ಪಡೆದು ಸುಖಿಸಬೇಕೆಂದು ನಾವು ಅಪೇಕ್ಷಿಸಿದ್ದೇವೆ. ಶ್ರೀ ಗುರುರಾಜರ ಮಹಾತ್ಮ್ಯಜ್ಞಾನವೆಂದರೆ ಅವರು ಯಾರು? ಅವರ ಮೂಲ ರೂಪವಾವುದು, ಅವತಾರಗಳೇನು? ಅದರ ಮಹತ್ವವೇನು? ಎಂಬುದನ್ನು ಚೆನ್ನಾಗಿ ಅರಿಯುವುದೇ ಆಗಿದೆ. ಆದ್ದರಿಂದ ಈ ಮಹಾಮಹಿಮರ ಉಪಾಸಕ ರೆಲ್ಲರೂ ಇವರ ಮೂಲರೂಪ-ಅವತಾರ-ಅಮರಚರಿತಾದಿಗಳನ್ನು ಅರಿಯುವುದು ಅತ್ಯವಶ್ಯಕ ವಾಗಿದೆ. ಅಂತೆಯೇ ನಾವೀಗ ಆ ವಿಚಾರಗಳನ್ನು ಶ್ರೀ ಗುರುರಾಜರ ದಯದಿಂದ ನಮಗೆ ತಿಳಿದಿರುವಷ್ಟನ್ನು ನಿಮಗೆ ಉಪದೇಶ ಮಾಡಲಾಶಿಸಿದ್ದೇವೆ" ಎಂದು ಆಜ್ಞಾಪಿಸಿದರು. ನೆರೆದ ಸಹಸ್ರಾರು ಜನರು ಪರಮಾನಂದಭರಿತರಾಗಿ ಜಯ ಜಯಕಾರ ಕರತಾಡನಗಳಿಂದ ತಮ್ಮ ಸಂತೋಷವನ್ನು ಸೂಚಿಸಿದರು.

ಕರುಣಾಳುಗಳಾದ ಶ್ರೀ ಸುಯಮೀಂದ್ರ ಗುರುಚರಣರು ಭಕ್ತಿಪರವಶರಾಗಿ, ಧೀರಗಂಭೀರಧ್ವನಿಯಿಂದ ವಿದ್ವತ್ಪೂರ್ಣವಾಗಿ ಶ್ರೀ ಗುರುರಾಜರ ಮೂಲರೂಪದ ಶ್ರೀಶಂಕುಕರ್ಣದೇವತೆಯ ಚರಿತ್ರೆ, ಅವರಿಗೆ ಬಂದ ಶಾಪರೂಪವರ, ಶ್ರೀಪ್ರಹ್ಲಾದ ಬಾಹ್ಲಿಕ-ಶ್ರೀವ್ಯಾಸರಾಜಗುರುಸಾರ್ವಭೌಮಾವತಾರ ಚರಿತ್ರೆಗಳು, ಶಂಕುಕರ್ಣರ ಕೊನೆಯ ಅವತಾರರಾದ ಶ್ರೀ ರಾಘವೇಂದ್ರ ಗುರುಸಾರ್ವಭೌಮರ ಚರಿತ್ರೆ, ಆಯಾ ಅವತಾರಗಳ ವೈಶಿಷ್ಟ್ಯ, ಜ್ಞಾನ, ಭಗವದ್ಭಕ್ತಿ, ವೈರಾಗ್ಯ, ತಪಸ್ಸು, ಭಗವಂತ ಅವರಲ್ಲಿ ಮಾಡಿದ ಅನಿತರಸಾಧಾರಣವಾದ ಅನುಗ್ರಹ, ಮುಂತಾಗಿ ಗುರುವರರ ಚರಿತಾಮೃತವನ್ನು ಸುಮಾರು ನಾಲ್ಕೈದು ಘಂಟೆಗಳ ಕಾಲ ಉಪ ದೇಶಮಾಡಿದರು.

ಶ್ರೀಪಾದಂಗಳವರ ಮುಖಾರವಿಂದದಿಂದ ಪವಿತ್ರ ಗಂಗೆಯ ಉತ್ತುಂಗ ತರಂಗಗಳಂತೆ ಅವ್ಯಾಹತವಾಗಿ ಹೊರಹೊಮ್ಮಿದ ಶ್ರೀ ಗುರುಕಥಾಮೃತಪಾನ ಮಾಡಿ ಸಹಸ್ರಾರು ಜನ ಭಕ್ತರು ಪರಮಾನಂದ ತುಂದಿಲರಾದರು. ಮಂತ್ರಮುಗ್ಧರಾಗಿ ಕುಳಿತು ಭಕ್ತ್ಯತಿಶಯದಿಂದ ಆನಂದಬಾಷ್ಪ ಹರಿಸುತ್ತಾ ಶ್ರೀಪಾದಂಗಳವರ ಅಮೃತವಾಣಿಯನ್ನಾಲಿಸುತ್ತಾ ಪುಳಕಿತಗಾತ್ರರಾಗಿ ಇಹಲೋಕ ವ್ಯಾಪಾರವನ್ನೇ ಮರೆತು ಕುಳಿತ ಭಕ್ತಜನರ ಆ ಆನಂದದ ದೃಶ್ಯ ಅಭೂತಪೂರ್ವವಾಗಿತ್ತು.

ಆ ಪರಮ ಪವಿತ್ರ ದೃಶ್ಯ ಇಂದಿಗೂ ನಮ್ಮ ಚಿತ್ತಭಿತ್ತಿಯಲ್ಲಿ ಅಚ್ಚಳಿಯದೆ ಪ್ರಕಾಶಿಸುತ್ತಿದೆ. ಶ್ರೀಗಳವರ ಅಂದಿನ ಆ ಅಮೋಘ ಉಪನ್ಯಾಸ-ಅವರ ಅಮೃತವಾಣಿ ಈಗಲೂ ನಮ್ಮ ಕರ್ಣಕುಹರಗಳಲ್ಲಿ ಪ್ರತಿಧ್ವನಿಸುತ್ತಿದೆ!

ಶ್ರೀಪಾದಂಗಳವರು ಅಂದು ಮಾಡಿದ ಉಪನ್ಯಾಸ, ತಿಳಿಸಿದ ಅಶ್ರುತ ಪೂರ್ವ ವಿಷಯಗಳು, ಶ್ರೀಗುರುರಾಯರ ಬಹುಮುಖ ವ್ಯಕ್ತಿತ್ವಪೂರ್ಣ ಭವ್ಯಚಿತ್ರ, ಮಹಿಮಾತಿಶಯಗಳನ್ನು ನಾವೆಂದಿಗೂ ಮರೆಯಲು ಸಾಧ್ಯವೇ ಇಲ್ಲ!

ಅಂದು ಶ್ರೀಪಾದಂಗಳವರು ಮಾಡಿದ ಉಪನ್ಯಾಸ ನಮ್ಮ ಮನೋಭಿತ್ತಿಯಲ್ಲಿ ಅಚ್ಚಳಿಯದೇ ನಿಂತು ಅಪೂರ್ವ ಪರಿಣಾಮವನ್ನುಂಟುಮಾಡಿತು! ಶ್ರೀ ಸುಯಮೀಂದ್ರ ತೀರ್ಥ ಶ್ರೀಪಾದಂಗಳವರ ವದನಾರವಿಂದದಿಂದ ಹೊರಹೊಮ್ಮಿದ್ದ ಶ್ರೀಗುರುರಾಜರ ಮೂಲರೂಪ, ಅವತಾರಗಳ ಮಂಗಳಕರ ಚರಿತ್ರೆಯನ್ನು ಗ್ರಂಥರೂಪವಾಗೇಕೆ ಬರೆಯಬಾರದು? ಅದನ್ನು ಶ್ರೀಗಳವರ ಉಪದೇಶದಂತೆಯೇ ಬರೆದರೆ ಅದೊಂದು ದೊಡ್ಡ ಸೇವೆಯಾಗಿ ಲಕ್ಷಾಂತರ ಭಕ್ತಜನರಿಗೆ ಭಕ್ತ್ಯುದ್ರೇಕವನ್ನುಂಟು ಮಾಡಿ ಪರಮಾನಂದವೀಯುವುದಲ್ಲವೇ? ಎಂಬ ಭಾವನೆ ನಮ್ಮ ಮನಸ್ಸಿನಲ್ಲಿ ಒಡ ಮೂಡಿತು. ವಿಚಾರಮಾಡಿದಂತೆಲ್ಲ ಆ ಮಹತ್ಕಾರ್ಯವನ್ನು ಮಾಡಬೇಕೆಂಬ ಬಯಕೆ ಬಲವಾಯಿತು.

ನಮ್ಮ ಮನದಳಲನ್ನು ಶ್ರೀಪಾದಂಗಳವರಲ್ಲಿ ವಿಜ್ಞಾಪಿಸಿ ಆಶೀರ್ವಾದ ಬೇಡಿದಾಗ ಶ್ರೀಗಳವರು ಹರ್ಷನಿರ್ಭರರಾಗಿ ಭಕ್ತಿಪರವಶರಾಗಿ "ಆಹಾ ಅತ್ಯಂತ ಉತ್ತಮ ವಿಚಾರ. ಶ್ರೀ ಗುರುರಾಜರು ನಿನ್ನಿಂದ ಈ ಮಹತ್ಸೇವೆಯನ್ನು ಸ್ವೀಕರಿಸಿ ಅನುಗ್ರಹಿಸುವರು-ಪ್ರಯತ್ನಿಸು. ನಿನ್ನ ಮನೋರಥಪೂರ್ಣವಾಗಲಿ" ಎಂದು ತುಂಬಿದ ಹೃದಯದಿಂದ ಆಶೀರ್ವದಿಸಿ ಫಲಮಂತ್ರಾಕ್ಷತೆ ಅನುಗ್ರಹಿಸಿದರು. ಅಂದಿನಿಂದಲೇ ಗ್ರಂಥರಚನೆಗೆ ವಿಷಯ-ಪ್ರಮಾಣಸಂಗ್ರಹಕಾರ್ಯ ಆರಂಭಿಸಿದೆವು. ಅನೇಕ ವರ್ಷಗಳ ಚಿಂತನ ಮಂಥನ, ಪರಿಶ್ರಮದ ಫಲವೇ ಇಂದು ಶ್ರೀ ರಾಯರ ಭಕ್ತರಾದ ನೀವು ಓದುತ್ತಿರುವ ಈ "ಕಲಿಯುಗ ಕಲ್ಪತರು"!

ಶ್ರೀ ಗುರುರಾಜರ ಭಕ್ತರೇ! ಈಗ ಓದಿ ಆನಂದಿಸಿರಿ 'ಕಲಿಯುಗ ಕಲ್ಪತರು'ಗಳಾದ ಶ್ರೀಗುರುಸಾರ್ವಭೌಮರ ಮೂಲರೂಪ ಅವತಾರಗಳ ಅಮರ ಚರಿತೆಯನ್ನು!

---

ಶ್ರೀ ಗುರುರಾಜೋ ವಿಜಯತೇ



# ಕಲಿಯುಗ - ಕಲ್ಪತರು

## ಮೊದಲನೆಯ ಉಲ್ಲಾಸ

## ೨. ಶಂಕುಕರ್ಣರು

ರಚಿಸಿದವರು :

ರಾಜಾ ಎಸ್. ಗುರುರಾಜಾಚಾರ್ಯರು



# ಕಲಿಯುಗ ಕಲ್ಪತರು

## ಮೊದಲನೆಯ ಉಲ್ಲಾಸ

### ೨. ಶಂಕುಕರ್ಣರು

ಸಕಲಜಗಜ್ಜನ್ಮಾದಿಕಾರಣನೂ, ಸರ್ವಸ್ವತಂತ್ರನೂ, ಸರ್ವೋತ್ತಮನೂ ನಿಖಿಲ ಮುಮುಕ್ಷೂಪಾಸ್ಯನೂ, ಪರಬ್ರಹ್ಮಸ್ವರೂಪನೂ ಆದ ಶ್ರೀರಮಾನಾಯಕ ಶ್ರೀಪದ್ಮನಾಭರೂಪದ ಶ್ರೀಹರಿಯ ನಾಭಿಕಮಲದಲ್ಲಿ ಜನಿಸಿದ ಭಾಗ್ಯಶಾಲಿಗಳೂ, ದೇವದೇವನಾದ ಶ್ರೀಮನ್ನಾರಾಯಣನ ಆಜ್ಞಾನುಸಾರವಾಗಿ ಸಮಸ್ತ ಜಗತ್ತನ್ನು ಸೃಷ್ಟಿಸಿ ಪಿತಾಮಹರೆಂದು ಹದಿನಾಲ್ಕು ಲೋಕಗಳಲ್ಲಿಯೂ ಸರ್ವರಿಂದ ಗೇಗೀಯಮಾನರೂ ಆದ ಚತುರ್ಮುಖ ಬ್ರಹ್ಮದೇವರು ಈಶಕೋಟಿ ಪ್ರವಿಷ್ಟರಾದ ಸಕಲಲೋಕಜನನಿ ಶ್ರೀಲಕ್ಷ್ಮೀದೇವಿಯ ತರುವಾಯ ದೇವತೆಗಳಲ್ಲಿ ತಾರತಮ್ಯ ಕಕ್ಷೆಯಲ್ಲಿ ಅಗ್ರಗಣ್ಯರಾದ ಮಹಾನುಭಾವರು.

ಸರ್ವಲೋಕ ಪಿತಾಮಹರಾದ ಶ್ರೀಬ್ರಹ್ಮದೇವರ ಸತ್ಯಲೋಕದಲ್ಲಿ ಕಮಲಾಸನರ ಕಮನೀಯ ಮಂದಿರದಲ್ಲಿ ವಿಶೇಷ ಸಂಭ್ರಮ. ಚತುರವದನರ ಪೂಜಾಮಂದಿರವು ಸುರರು, ಅಪ್ಸರರು, ಗಂಧರ್ವರು ಮತ್ತು ಮುನಿನಿಕರರಿಂದ ತುಂಬಿ ಹೋಗಿದೆ. ಆಹಾ, ಆ ಮಂದಿರವೆಷ್ಟು ಸೊಗಸು! ಸುವರ್ಣಮಯ ಗೋಡೆಗಳಿಂದಲೂ, ವಜ್ರ ವೈಢೂರ್ಯಮಯವಾದ ಸ್ತಂಭಗಳಿಂದಲೂ, ಮುತ್ತು ಮಾಣಿಕ್ಯ ರತ್ನಗೋಮೇಧಿಕಗಳಿಂದ ರಚಿತವಾದ ಮಾಲೆ ತೋರಣಗಳಿಂದಲೂ ಝಗಝಗಿಸುತ್ತಿರುವ ನಿರುಪಮ ಸುಂದರವೂ ಚಿತ್ತಾಕರ್ಷವೂ ಆದ ಆ ಪೂಜಾ ಮಂದಿರದ ಮಧ್ಯಭಾಗದಲ್ಲಿ ನವರತ್ನಖಚಿತವಾದ ಭವ್ಯಮಂಟಪವು ಶೋಭಿಸುತ್ತಿದೆ. ಆ ಸುಂದರ ಮಂಟಪದ ಮುಂಭಾಗದಲ್ಲಿ ಸುವರ್ಣಮಯ ದೀಪಸ್ತಂಭಗಳಲ್ಲಿ ನಂದಾದೀಪಗಳು ಪ್ರಕಾಶಿಸುತ್ತಿವೆ. ಸುತ್ತಲೂ ಸುವರ್ಣ ತಾಂಬಾಣಗಳಲ್ಲಿ ಭಗವಂತನ ಪೂಜೆಗೆ ಬೇಕಾದ ಸಾಮಗ್ರಿಗಳು ಸಿದ್ಧವಾಗಿವೆ. ಮಂದಿರದಲ್ಲಿ ದೇವತೆಗಳು ತಾರತಮ್ಯಾನುಸಾರವಾಗಿ ಸಾಲುಗಟ್ಟಿ ಕುಳಿತು ವೇದಪಾರಾಯಣ ಮಾಡುತ್ತಿದ್ದಾರೆ. ಮತ್ತೊಂದು ಪಾರ್ಶ್ವದಲ್ಲಿ ಗಂಧರ್ವರು ಗಾನ ಮಾಡುತ್ತಿದ್ದಾರೆ. ಇನ್ನೊಂದು ಭಾಗದಲ್ಲಿ ಅಪ್ಸರ ಸ್ತ್ರೀಯರು ಭಗವಂತನ ದಶಾವತಾರ ಲೀಲಾವಿಲಾಸವನ್ನು ವಿವಿಧ ಭಾವ ಭಂಗಿ ಮುದ್ರೆಗಳಿಂದ ನಿರೂಪಿಸುತ್ತಾ ನರ್ತನ ಮಾಡುತ್ತಿದ್ದಾರೆ.

ಸುವರ್ಣಪೀಠದಲ್ಲಿ ಕುಳಿತು ಶ್ರೀಬ್ರಹ್ಮದೇವರು ಪರಮಾತ್ಮನಪೂಜೆಯಲ್ಲಿ ಆಸಕ್ತರಾಗಿದ್ದಾರೆ.ಬ್ರಹ್ಮದೇವರ ದರಹಾಸ ಮುಕುಳಿತವಾದ ನಾಲ್ಮೊಗಗಳಿಂದಲೂ

ಸುಸ್ವರವಾಗಿ ಮಂದ್ರಮಧ್ಯಮೋಚ್ಚ ಸ್ಥಾಯಿಗಳಲ್ಲಿ ವೇದ ಘೋಷವು ಹೊರ ಹೊಮ್ಮುತ್ತಿದೆ. ಆವೊಂದು ಪರಮ ಮಂಗಳಕರ ಪವಿತ್ರ ನೋಟ ಎಲ್ಲರ ಹೃದಯಭೂಮಿಯಲ್ಲಿಯೂ ಭಕ್ತಿಯ ಹೊನಲನ್ನು ಪುಟಿದೇಳಿಸುತ್ತಿದೆ.

ಸರ್ವಾಭರಣ ಭೂಷಿತಳಾದ, ಸರಸಿಜೋದ್ಭವನರಸಿಯಾದ, ಸರಸಿಜಮುಖಿ ಸರಸ್ವತಿಯು ಮುಗುಳುನಗೆಯ ಬೆಳದಿಂಗಳ ಕಾಂತಿಯಿಂದ ದೇವಮಂದಿರವನ್ನೆಲ್ಲಾ ಬೆಳಗಿಸುತ್ತಾ ಬೆಡಗಿನಿಂದ ವಿರಾಜಿಸಿದ್ದಾಳೆ. ಬ್ರಹ್ಮಾಣಿಯ ಮೃದುವಾದ ತೊಡೆಯ ಮೇಲೆ ಮನಮೋಹಕ ವೀಣೆಯು ಕಂಗೊಳಿಸಿದೆ. ವಾಗ್ದೇವಿಯ ಕೋಮಲ ಕರಾಂಗುಲಿಗಳು ವೀಣೆಯ ತಂತಿಗಳ ಮೇಲೆ ಮೆಲ್ಲಮೆಲ್ಲನೆ ಚಿತ್ರ-ವಿಚಿತ್ರ ರೀತಿಯಾಗಿ ಆಡುತ್ತಿವೆ. ಹೊರಹೊಮ್ಮಿ ಹರಿಯುತ್ತಿದೆ, ಮಂಜುಳ ನಿನಾದೋಪೇತ ವಾದ ಕಲ್ಯಾಣಿಯ ಸುಮಧುರ ರಾಗಾಲಾಪನೆಯ ಗಾನವಾಹಿನಿ! ಹೃದಯಂಗಮ ವಾಗಿದೆ ರಾಗಲಹರಿ! ಆ ಸುರುಚಿರ ನಿನಾದ ಸತ್ಯಲೋಕದಲ್ಲೆಲ್ಲಾ ವ್ಯಾಪಿಸಿ ಅದಾವುದೋ ಭಾವೀ ಜಗತ್ಕಲ್ಯಾಣವನ್ನು ಸೂಚಿಸುತ್ತಿದೆ! ಅನಿತರ ಸಾಧಾರಣವಾಗಿ ಗೀರ್ವಾಣಿಯ ವೀಣೆಯಿಂದ ಹೊರಹೊಮ್ಮಿದ ಕಲ್ಯಾಣಿರಾಗದ ನಾದ ತರಂಗ-ತರಂಗವಾಗಿ ತೇಲಿಬಂದು ಆಲಿಸುವವರ ಹೃದಯಕಮಲದಲ್ಲಿ ಭಾವುಕತನದ ಭಕ್ತಿಝರಿಯನ್ನು ಪುಟಿದೇಳಿಸುತ್ತಿದೆ. ಇಂದೇಕೋ ಇಂದಿರೇಶನ ಅಂದದ ಸೊಸೆಗೆ ಬಂಧುರವಾದ ಸುಂದರ ಕಲ್ಯಾಣಿಯು ತುಂಬಾ ಪ್ರಿಯವಾದಂತಿದೆ! ವಿಶ್ವವನ್ನೇ ವಿಸ್ಮಯಗೊಳಿಸುವ ವಲ್ಲಕಿಯ ವಾದನದಲ್ಲಿ ತನಗಿರುವ ವಿದಗ್ಧತೆಯನ್ನು ತೋರು ತ್ತಿದ್ದಾಳೆ ವೀಣಾಪಾಣಿಯಾಗಿ! ಗೀರ್ವಾಣಿ! ಎಷ್ಟು ಹೊತ್ತಾದರೂ ಆ ಮಂಜುಳ ದಿಂಚರದಾಲಾಪನೆ ಮುಗಿಯವಲ್ಲದು. ಭಗವಂತನ ಲೀಲಾವಿಲಾಸವನ್ನು ನವನವ ಸ್ಫೂರ್ತಿಯಿಂದ ಹಾಡುತ್ತಿರುವ ಗೀರ್ವಾಣಿಯು ಬಹುಶಃ ಜಗತ್ತಿನ ಮುಂದಿನ ಕಲ್ಯಾಣ ಸೂಚನೆಯ ನಾಂದೀ ಪದ್ಯವನ್ನೇ ಕಲ್ಯಾಣಿರಾಗರೂಪವಾಗಿ ನುಡಿಸು ತ್ತಿರಬಹುದೆ?

ಶ್ರೀ ಅಜನ ಪಟ್ಟದ ರಾಣಿಯಾದ ಶ್ರೀ ಸರಸ್ವತೀದೇವಿಯ ಮುಂಭಾಗದಲ್ಲಿ ಅತ್ಯಂತ ತೇಜಸ್ವಿಯಾದ ದೇವನೊಬ್ಬನು ನಿಂತು ವೀಣಾವಾದನದ **ಸುಮಧುರ ಗಾನರಸಾಸ್ವಾದ** ನ ತತ್ಪರನಾಗಿದ್ದಾನೆ. ಅಹಹ! ಎಂತಹ ಸೌಂದರ್ಯ! ತಪ್ತಕಾಂಚನ ಸಂಕಾಶವಾದ ದೇಹಛಾಯೆ, ಅದಕ್ಕೊಪ್ಪುವ ಮೈಮಾಟ, ವಿಶಾಲವಾದ ವಕ್ಷಃಸ್ಥಳ, ವಿಸ್ತಾರವೂ ಚಂಚಲವೂ, ಕಾರುಣ್ಯಪೂರ್ಣವೂ ಆದ ಆ ಕಣ್ಣುಗಳಲ್ಲಿ ಮಿಂಚಿನಕಾಂತಿ ಮಿನುಗುತ್ತಿದೆ! ಪೀತಾಂಬರಧಾರಿಯಾಗಿ ರತ್ನಖಚಿತವಾದ ಕಿರೀಟ, ಕರ್ಣ ಕುಂಡಲ, ಮೌಕ್ತಿಕ ರತ್ನಮಾಲಾಧಾರಿಯಾದ ಅವನ ಮುಖವೆಷ್ಟು ಮನೋಹರ. ಮಂದಹಾಸದ ಚಂದ್ರಿಕೆಯ ಪ್ರಕಾಶದಿಂದ ಎಲ್ಲರ ಚಿತ್ತವನ್ನೂ ತನ್ನತ್ತ ಆಕರ್ಷಿಸುತ್ತಿರುವ ದೇವ ಎಷ್ಟು ತೇಜಸ್ವಿಯಾಗಿದ್ದಾನೆ. ಅದೇನು ಗಾಂಭೀರ್ಯ! ಸಾತ್ವಿಕತೆಯೇ ಮೂರ್ತಿವೆತ್ತಂತಿರುವ ಆ ದೇವನು ಯಾರಾಗಿರಬಹುದು?

ಬ್ರಹ್ಮ ಬ್ರಹ್ಮಾಣಿಯರಿಗೆ ಅತಿ ಸಲುಗೆಯವನಂತೆ ಕಾಣುತ್ತಿರುವನಲ್ಲ! ಬಹುಶಃ ಚತುರಾನನ ಬ್ರಹ್ಮದೇವರು ತಮಗಾಗಿಯೇ ವಿಶ್ವದ ಸಮಸ್ತರೂಪ-ಲಾವಣ್ಯಸಾರವನ್ನೆಲ್ಲಾ ಸಂಗ್ರಹಿಸಿ ಈತನನ್ನು ನಿರ್ಮಿಸಿರಬಹುದೆ? ನಿಮೀಲಿತಾರ್ಧನಯನನಾಗಿ ಕಲತಲ್ಲಿ ಸ್ವರ್ಣಪುಷ್ಪಕರಂಡವನ್ನು ಹಿಡಿದು ನಿಂತಿರುವ ಆ ದೇವನೇ ಬ್ರಹ್ಮ-ಗೀರ್ವಾಣಿಯರಿಗೆ ಪ್ರೀತಿಪಾತ್ರನಾದ, ಪುತ್ರಸದೃಶನಾದ ನಮ್ಮ ಕಥಾನಾಯಕ! ಕಲಿಯುಗ ಕಲ್ಪತರುವಿನ ಮೂಲರೂಪದ ಕರ್ಮಜದೇವತೆ ಶಂಕುಕರ್ಣ! ಶಂಕುಕರ್ಣನು ಶ್ರೀಬ್ರಹ್ಮದೇವನು ನೆರವೇರಿಸುವ ಭಗತ್ಪೂಜೆಗೆ ತುಳಸೀ ಪುಷ್ಪಗಳನ್ನು ತಂದಿತ್ತು ಪೂಜಾಕಾರ್ಯದಲ್ಲಿ ಕೈಂಕರ್ಯಮಾಡುವುದು ಪದ್ಧತಿ. ಅದೇ ಅವನಿಗೆ ಪಿತಾಮಹರು ವಿಧಿಸಿರುವ ಸೇವಾಕಾರ್ಯ.

ಶ್ರೀ ಬ್ರಹ್ಮದೇವರು ಪ್ರತಿದಿನವೂ ಭಗವಂತನ ನಾನಾ ರೂಪಗಳನ್ನು ಪೂಜಿಸುವುದು ವಾಡಿಕೆ. ಅಂತೆಯೇ ಎಂದಿನಂತೆ ಅವರು ಪರಮಾತ್ಮನ ದಶಾವತಾರ ಪೂಜೆಯಲ್ಲಿ ಮಗ್ನರಾಗಿದ್ದಾರೆ. ಮತ್ಸ್ಯಕೂರ್ಮಾದಿ ಆರು ಅವತಾರಗಳ ಪೂಜೆ ಮುಗಿದಿದೆ. ಬ್ರಹ್ಮದೇವರು ಒಂದೊಂದು ಭಗವದ್ರೂಪಗಳನ್ನು ಧ್ಯಾನಿಸಿದಂತೆಲ್ಲಾ ಶ್ರೀಹರಿಯು ಸಾಕ್ಷಾತ್ತಾಗಿ ಆಯಾರೂಪಗಳಿಂದ ಪ್ರತ್ಯಕ್ಷನಾಗಿ ಪ್ರಿಯಕುವರನಿಂದ ಪೂಜೆಯನ್ನು ಸ್ವೀಕರಿಸುತ್ತಿದ್ದಾನೆ. ಎಂತಹ ಅಪೂರ್ವ ದೃಶ್ಯವದು! ಸತ್ಯಲೋಕ ನಿವಾಸಿಗಳೆಷ್ಟು ಸುಕೃತಶಾಲಿಗಳು! ಪರಮಾತ್ಮನ ಅಪೂರ್ವ ನಾನಾವತಾರ ರೂಪಗಳನ್ನು ಪ್ರತಿನಿತ್ಯ ಕಂಡು ಆನಂದಿಸುವ ಅವರ ಸೌಭಾಗ್ಯ - ಸುಕೃತಗಳಿಗೆ ಎಣೆಯುಂಟೆ?

ಶ್ರೀ ಭಾರ್ಗವರಾಮನ ಪೂಜೆ ಮುಗಿಯಿತು. ಬ್ರಹ್ಮದೇವರು ಶ್ರೀರಾಮಚಂದ್ರ ರೂಪವನ್ನು ಪೂಜಿಸಲು ಉತ್ಸುಕರಾಗಿದ್ದಾರೆ. ಅವರ ವದನಾರವಿಂದದಿಂದ ಶ್ರೀರಾಮನ ಸ್ತುತಿ ಹೊರಹೊಮ್ಮಿತು-

"ಶ್ರೀರಾಮಂ ದಶದಿಗ್ವ್ಯಾಪ್ತಂ ದಶೇಂದ್ರಿಯ ನಿಯಾಮಕಮ್ |
ದಶಾಸ್ಯಘ್ನಂ ದಾಶರಥಿಂ ಶ್ರೀನಿವಾಸಂ ಭಜೇ ನಿಶಮ್ ||"

ರತ್ನಮಂಟಪದಲ್ಲಿ ಕಾಮನಬಿಲ್ಲಿನಂತೆ ವಿವಿಧವರ್ಣಗಳ ಕಾಂತಿಮಿನುಗಿತು! ಕೋಟಿಸೂರ್ಯರು ಏಕಕಾಲದಲ್ಲಿ ಉದಯಿಸುವಂತೆ ಅದ್ಭುತ ಪ್ರಕಾಶ ಬೆಳಗಿತು! ನೀಲನೀರದಕಾಂತಿವಿರಾಜಿತನೂ, ಜಗನ್ಮೋಹನಾಕಾರನೂ, ಮನ್ಮಥ-ಮನ್ಮಥನೂ, ಪೀತಾಂಬರ-ಹಾರ-ಕೇಯೂರ-ಕಂಕಣ-ಮಕರಕುಂಡಲ-ವನಮಾಲಾ -ಕೌಸ್ತುಭಹಾರ ವಿಭೂಷಿತನೂ, ಕೋದಂಡಧಾರಿಯೂ ದೇವದೇವನೂ ಆದ ಪರಮಮಂಗಳ ಮೂರ್ತಿ ಶ್ರೀರಾಮಚಂದ್ರಪ್ರಭುವು ಲೋಕಮಾತೆ ಸೀತಾದೇವಿಯಿಂದೊಡಗೂಡಿ ಮಂದಹಾಸಚಂದ್ರಿಕಾಸಂದೀಪಿತ ವದನಾರವಿಂದನಾಗಿ ಮೈದೋರಿ ನಿಂತನು!

ಅಖಿಲಾಂಡಕೋಟಿ ಬ್ರಹ್ಮಾಂಡನಾಯಕನಾದ ಪರಮಪುರುಷ ಶ್ರೀರಾಮಚಂದ್ರ ದೇವರ ದರ್ಶನದಿಂದ ಹರ್ಷನಿರ್ಭರರಾದ ಕಮಲಾಸನರ ಮೈಪುಳಕಿಸಿತು.

ತದೇಕಚಿತ್ತರಾಗಿ ಜಾನಕೀಕಾಂತನ ಮುಖಾರವಿಂದವನ್ನು ಈಕ್ಷಿಸುತ್ತಿದ್ದಾರೆ. ಭಕ್ತ್ಯುದ್ರೇಕದಿಂದ ಬ್ರಹ್ಮದೇವರ ಹೃದಯ ಅರಳಿದೆ, ಕಂಠ ತುಂಬಿಬಂದಿದೆ. ಕಣ್ಣುಗಳಿಂದ ಆನಂದಾಶ್ರು ಹರಿಯುತ್ತಿವೆ. ಧ್ಯಾನ- ಆವಾಹನ ಅರ್ಘ್ಯ ಪಾದ್ಯಾದಿಗಳಿಂದ ಭಗವಂತನನ್ನು ಪೂಜಿಸಿ, ಗಂಧಾಕ್ಷತೆಗಳನ್ನರ್ಪಿಸಿ ಭಯ-ಭಕ್ತಿಗಳಿಂದ ಜಗನ್ಮಾತಾಪಿತೃಗಳನ್ನು ಅರ್ಚಿಸಲು ಸುವರ್ಣಮಯ ಪುಷ್ಪಕರಂಡಕ್ಕೆ ಕೈಹಾಕಿದರು. ಅವರ ಕರಾಂಗುಲಿಗಳು ಅಲ್ಲಿಯೇ ನಿಂತವು! ಏನಾಶ್ಚರ್ಯ! ಪುಷ್ಪಕರಂಡದಲ್ಲಿ ದೇವನ ಪೂಜೆಗೆ ಸಿದ್ಧವಾಗಿರಬೇಕಾದ ತುಳಸೀ ಪುಷ್ಪಗಳೇ ಇಲ್ಲ!! ಎಂತಹ ಅಪಚಾರ, ಪರಮಾತ್ಮನ ಪೂಜೆಗೆ ಪುಷ್ಪಗಳಿಲ್ಲ. ಅದೂ ಸತ್ಯಲೋಕದಲ್ಲಿ! ಬ್ರಹ್ಮದೇವರಿಗೆ ಮನಸ್ಸಿನಲ್ಲಿ ಬಹುಪರಿತಾಪವಾಯಿತು. ಹೃದಯ ತಳಮಳಿಸಿತು. ಪೂಜೆ ಕೈಗೊಳ್ಳಲು ಮಹಾಪ್ರಭು ಬಂದು ನಿಂತಿದ್ದಾನೆ. ಆದರೆ ಪೂಜಿಸಲು ತುಳಸೀಪುಷ್ಪಗಳಿಲ್ಲದೆ ಸೇವೆಗೆ ಅಡಚಣೆಯುಂಟಾಯಿತಲ್ಲ ಇದೆಂತಹ ತಾಮಸ ವ್ಯಾಪಾರ? ಎಂದು ಸ್ವಲ್ಪ ಕುಪಿತರಾಗಿ ತಿರುಗಿ ನೋಡಿದರು. ಪ್ರೀತಿಯ ಶಿಷ್ಯ ಸೇವಕ ಶಂಕುಕರ್ಣ ಚಿತ್ರಸ್ಥ ಪ್ರತಿಮೆಯಂತೆ ಮೈಮರೆತು ನಿಂತಿದ್ದಾನೆ. ಗರ್ಜಿಸಿದರು- "ಶಂಕುಕರ್ಣ" ಎಂದು.

ಉತ್ತರವಿಲ್ಲ! ಮತ್ತೆ ನೋಡಿದರು. ಇನ್ನೂ ಮೈಮರೆತೇ ನಿಂತಿದ್ದಾನೆ ಶಂಕುಕರ್ಣ! ನಾನು ಕೂಗಿದರೂ ಕೇಳಿಸಲಿಲ್ಲವೇ ಇವನಿಗೆ? ಮತ್ತೊಮ್ಮೆ ಕೋಪದಿಂದ ಗರ್ಜಿಸಿದರು "ಶಂಕುಕರ್ಣ!"

ಶಂಕುಕರ್ಣ ಬೆಚ್ಚಿಬಿದ್ದ. ವಾಣಿಯ ವೀಣಾವಾದನವೂ ನಿಂತುಹೋಯಿತು. ಯಾವುದೋ ಲೋಕದಿಂದ ಇಳಿದುಬಂದವನಂತೆ ಕಣ್ಣು ಕಣ್ಣು ಬಿಡುತ್ತಾ ಸ್ತಬ್ಧನಾಗಿ ನಿಂತಿರುವ ಶಂಕುಕರ್ಣನನ್ನು ನೋಡಿ "ದೇವನ ಪೂಜೆಗೆ ತುಳಸೀ ಪುಷ್ಪಗಳೆಲ್ಲಿ? ಕೂಗಿದರೂ ಕೇಳಿಸದವನಂತೆ ನಿಂತಿರುವೆಯಲ್ಲ ಶಂಕುಕರ್ಣ! ಸಾತ್ವಿಕವಾದ ಸತ್ಯಲೋಕದಲ್ಲಿಯೂ ಈ ಅಪಚಾರವೇ?" ಎಂದು ಚತುರಾನನರು ಗದ್ದರಿಸಿದರು.

ಆಗ ಶಂಕುಕರ್ಣ ಎಚ್ಚರಗೊಂಡ. ಒಮ್ಮೆ ಎಲ್ಲೆಡೆ ದೃಷ್ಟಿಹಾಯಿಸಿದ. ರತ್ನಮಂಟಪದಲ್ಲಿ ಮಂದಹಾಸ ಬೀರುತ್ತಾ ವೈದೇಹೀಸಹಿತನಾಗಿ ನಿಂತಿರುವ ಶ್ರೀರಾಮಚಂದ್ರ ಪ್ರಭುವನ್ನೂ, ಭಗವತ್ಪೂಜೆಗೆ ತೊಂದರೆಯಾಯಿತೆಂದು ಕುಪಿತರಾಗಿರುವ ಶ್ರೀಪದ್ಮಾಸನರನ್ನೂ, ವೀಣಾವಾದನವನ್ನು ನಿಲ್ಲಿಸಿ ಕುಳಿತಿರುವ ವಾಗ್ದೇವಿಯನ್ನೂ, ತನ್ನ ಕರದಲ್ಲಿರುವ ಪುಷ್ಪರಹಿತವಾದ ಸ್ವರ್ಣಪಾತ್ರೆಯನ್ನೂ ನೋಡಿ ಗಹಗಹಿಸಿ ನಕ್ಕುಬಿಟ್ಟ!!

ಶಂಕುಕರ್ಣನು ಗಹಗಹಿಸಿ ನಗುತಿರುವುದನ್ನು ಕಂಡು ಬ್ರಹ್ಮದೇವರಿಗೆ ಕೋಪ ಮಿತಿಮೀರಿತು. ಕ್ರುದ್ಧರಾಗಿ "ಶಂಕುಕರ್ಣ! ಜಗದೊಡೆಯನ ಆರಾಧನೆಗೆ ತುಳಸೀ

ಪುಷ್ಪಗಳನ್ನು ತಂದೀಯದೆ ಕರ್ತವ್ಯಭ್ರಷ್ಟನಾಗಿ, ಪರಮಾತ್ಮನ ಪೂಜೆಗೆ ತಡೆಯುಂಟು ಮಾಡಿ ಮಹಾಪರಾಧ ಮಾಡಿರುವುದೂ ಅಲ್ಲದೆ, ಕೇಳಿದ ಪ್ರಶ್ನೆಗೆ ಸದುತ್ತರವನ್ನು ಕೊಡದೆ ನಗುತ್ತಿರುವೆಯಾ? ಸತ್ಯಲೋಕದಲ್ಲಿ ಅದರಲ್ಲಿಯೂ ನನ್ನ ಸಮೀಪ ದಲ್ಲಿದ್ದೂ ಪ್ರತಿದಿನ ಮಾಧವನ ಮಂಗಳಕರ ಸ್ವರೂಪದರ್ಶನ ಮಾಡುತ್ತಿದ್ದರೂ ನಿನಗೆ ಈ ದೈತ್ಯರ ಸ್ವಭಾವ (ಆಸುರೀಭಾವ) ಎಲ್ಲಿಂದ ಬಂತು? ಹೂಂ, ಅದರ ಫಲವನ್ನು ಅನುಭವಿಸು!! ಕರ್ತವ್ಯ ಪರಾಙ್ಮುಖನಾಗಿ ದೈತ್ಯನಂತೆ ವರ್ತಿಸಿದ ನೀನು ದೈತ್ಯನಾಗಿಯೇ ಜನಿಸು!!" ಎಂದು ಕಮಂಡಲೋದಕವನ್ನು ತೆಗೆದುಕೊಂಡು ಅವನ ಮೇಲೆ ಪ್ರೋಕ್ಷಿಸಿಬಿಟ್ಟರು!

ಶಂಕುಕರ್ಣನಿಗೆ ಸಿಡಿಲೆರಗಿದಂತಾಗಿ ತತ್ತರಿಸಿದ. ಅಜನರಿಸಿ ಅಳುಕಿದಳು. ಸುಜನವೃಂದ, ಸುರಸ್ತೋಮ ಕಳಕಳಿಸಿತು. ಶ್ರೀರಾಮಚಂದ್ರನ ಮಂಗಳಕರ ಮುಖದಲ್ಲಿ ಮಂದಹಾಸ ಮಿನುಗಿತು.

ಭಯದಿಂದ ನಡುಗುತ್ತಾ ಶಂಕುಕರ್ಣ ಪಿತಾಮಹನ ಪಾದಕಮಲದಡಿಗುರುಳಿ ದುಃಖದಿಂದ ಕಣ್ಣೀರಿಡುತ್ತಾ "ಕ್ಷಮೆ, ಕ್ಷಮೆ" ಎಂದು ಬೇಡಿದ.

ಗೀರ್ವಾಣಿಯು ತಮ್ಮ ಪ್ರೀತಿಯ ಕುವರ ಶಂಕುಕರ್ಣನಿಗೊದಗಿದ ವಿಪತ್ತಿ ನಿಂದ ಮನಕರಗಿ, ಕಾರುಣ್ಯಪೂರ್ಣಳಾಗಿ "ಪ್ರಾಣವಲ್ಲಭ! ಶಂಕುಕರ್ಣ ನಾವು ಸಲಹಿದ ಮಗುವಲ್ಲವೇ? ಅವನಿಗೆ ಶಾಪವೆಂದರೇನು ಸ್ವಾಮಿ? ಕ್ಷಮಿಸಿ ಕಾಪಾಡಿ" ಎಂದು ಭಿನ್ನವಿಸಿದಳು.

ಚತುರ್ಮುಖ ಬ್ರಹ್ಮದೇವರು ವಾಣಿಯ ನುಡಿಯನ್ನಾಲಿಸಿ ಮುನಿಸಿನಿಂದಲೇ "ಗೀರ್ವಾಣಿ! ಅಹುದಹುದು, ಪಾಪ, ಶಂಕುಕರ್ಣ ನಿನ್ನ ಪ್ರೀತಿಯ ಮಗುವಲ್ಲವೇ? ಅಂತೆಯೇ ಅವನೆಸಗಿದ ಅಪರಾಧವನ್ನು ಕಂಡೂ ಕಾಣದವಳಂತೆ ಅವನ ಪಕ್ಷ ವಹಿಸಿ ಮಾತನಾಡುತ್ತಿರುವೆ! ಆದರೆ ದೇವಿ! ಅವನಿಂದು ಗೈದ ಮಹಾಪರಾಧಕ್ಕೆ ನಾನು ವಿಧಿಸಿದ ಈ ಶಿಕ್ಷೆಯು ಸರಿಯಾಗಿದೆ.

ಶಂಕುಕರ್ಣ ಧರೆಗಿಳಿದುಹೋದ, ಅವನ ಮೈಬೆವರಿತು, ಕಣ್ಣೀರು ಸುರಿಸುತ್ತಾ ಗದ್ಗದ ಕಂಠದಿಂದ "ತಂದೆಯೇ! ಅರಿಯದೇ ಆದ ಈ ಸಣ್ಣ ಅಪರಾಧಕ್ಕೆ ಇಂತಹ ಕಠಿಣ ದಂಡನೆಯೇ? ತಾತ! ನಿಮ್ಮ ಚರಣಸೇವಕನಿಗೆ ಶಾಪವೇ! ದೇವ, ಹಿಂದೆ ಎಂದಾದರೂ ನನ್ನಿಂದ ಇಂತಹ ಅನುಚಿತ ಕಾರ್ಯ ಘಟಿಸಿದೆಯೇ? ನಿಮ್ಮ ಸೇವೆಗಾಗಿಯೇ ನನ್ನೀ ದೇಹವನ್ನು ಮುಡುಪಾಗಿಟ್ಟಿರುವ, ನಿಮ್ಮ ಕೈಗೂಸಾದ ನನ್ನಲ್ಲಿ ಏಕಿಷ್ಟು ಕುಪಿತರಾಗಿರುವಿರಿ? ಸ್ವಾಮಿ, ಈ ದಾಸನ ಅಪರಾಧವನ್ನು ಕ್ಷಮಿಸಿ ಕಾಪಾಡಬೇಕು" ಎಂದು ಅತಿ ದೀನನಾಗಿ ಪ್ರಾರ್ಥಿಸಿದನು.

ಶಂಕುಕರ್ಣನ ದೀನವಚನವನ್ನಾಲಿಸಿ ಬ್ರಹ್ಮದೇವರ ಕೋಪ ಸ್ವಲ್ಪ ಕಡಿಮೆ ಯಾಯಿತು. ಶಾಂತರಾಗಿ ನುಡಿದರು- "ಶಂಕುಕರ್ಣ! ನನ್ನ ಮತ್ತು ಗೀರ್ವಾಣಿಯ

ಪ್ರೀತಿಯ ಶಿಷ್ಯನಾಗಿ, ಉತ್ತಮ ಗುಣಸಂಪನ್ನನಾಗಿರುವ ನಿನ್ನಿಂದ ಇಂಥ ಅನುಚಿತ ಅಪರಾಧ ಘಟಿಸಿತೆಂದೇ ನನಗಿಷ್ಟು ದುಃಖ, ಕೋಪವುಂಟಾಯಿತು! ವತ್ಸ! ನೀನು ಬೇರಾವ ತಪ್ಪುಮಾಡಿದ್ದರೂ ನನಗಿಂತು ತಾಪವಾಗುತ್ತಿರಲಿಲ್ಲ. ಮತ್ತಾವ ಅಪರಾಧ ಮಾಡಿದ್ದರೂ ನಾನು ಕ್ಷಮಿಸುತ್ತಿದ್ದೆ. ಆದರೆ ನೀನಿಂದು ಮಾಡಿರುವುದು ಅಕ್ಷಮ್ಯ ಅಪರಾಧ! ಅಖಿಲಾಂಡಕೋಟಿಬ್ರಹ್ಮಾಂಡನಾಯಕ, ನನ್ನ ತಂದೆ, ದೇವಾಧಿ ದೇವನಾದ ಶ್ರೀಮದ್ರಾಮಚಂದ್ರಪ್ರಭುವು ನನ್ನ ಪೂಜೆಯನ್ನು ಸ್ವೀಕರಿಸಲು ಪ್ರತ್ಯಕ್ಷನಾಗಿ ಬಂದು ನಿಂತಿರುವಾಗ, ನಾನು ಅವನನ್ನು ಸೇವಿಸಲು ಸಾಧ್ಯವಾಗದಂತೆ ಮಾಡಿಬಿಟ್ಟೆಯಲ್ಲ, ಆ ಪರಾತ್ಪರನ ಪೂಜಾವಿಷಯದಲ್ಲಿ ವಿಚಲಿತನಾದುದು ಕ್ಷಮಿಸಲಾಗ ದಂತಹುದು. ಮೇಲಾಗಿ ನಾನು ನಿನಗೆ ಕೊಟ್ಟ ಶಾಪವು ಎಂದಿಗೂ ವ್ಯರ್ಥವಾಗಲಾರದು.

ದುಃಖಾವೇಗದಿಂದ ಪಿತಾಮಹನ ವಾಕ್ಯವನ್ನಾಲಿಸಿ ಶಂಕುಕರ್ಣ ಅರಿಕೆ ಮಾಡಿದ-"ದೇವ, ಬಾಲಕನ ಬಿನ್ನಹವನಿಷ್ಟು ಲಾಲಿಸಬೇಕು. ಮಾತೆಯ ಕಲ್ಯಾಣಿ ರಾಗಲಹರಿಗೆ ಮನಸೋತು ನನ್ನನ್ನು ನಾನೇ ಮರೆತುಬಿಟ್ಟೆನು. ಅಂತೆಯೇ ಈ ಘಟನೆಯು ನಡೆದುಹೋಯಿತು. ತಮ್ಮ ಕರುಣೆಗೆ ಪಾತ್ರನಾದ ನಾನು ದೈತ್ಯನಾಗಬೇಕೆ? ಹೂಂ, ದೈತ್ಯಜನ್ಮ! ಅಬ್ಬಾ, ಅದನ್ನು ನೆನೆದರೂ ಮೈಕಂಪಿಸುವುದು. ಪಿತಾಮಹ, ಬಾಲಕನಲಿ ದಯೆತೋರಲಾರಿರಾ? ಪರಾತ್ಪರನಾದ ಪರಮ ಮಂಗಳಮೂರ್ತಿ ಪರಮಾತ್ಮನಲಿ ನಾನು ದ್ವೇಷಮಾಡಬೇಕೆ! ಸ್ವಾಮಿ, ಬೇಡ, ಬೇಡ. ಶ್ರೀಹರಿಯನ್ನು ದ್ವೇಷಮಾಡಬೇಕಾಗುವ ಆ ನಿಕೃಷ್ಟವಾದ ದೈತ್ಯಯೋನಿಗೆ ನನ್ನನ್ನು ನೂಕಬೇಡಿ! ಹರಿಭಕ್ತಿ ವಿಧುರನಾಗಿ ಬಾಳುವುದಕ್ಕಿಂತ ಘೋರವಾದ ನರಕವಾಸವೇ ಲೇಸು ಪ್ರಭು! ದೈತ್ಯಜನ್ಮ ಒಂದಲದೆ ಮತಾವ ನೀಚಯೋನಿಗಾದರೂ ತಳ್ಳಿ. ಸಂತೋಷದಿಂದ ಅಲ್ಲಿ ಜನಿಸೇನು.ಆದರೆ ಚತುರಾನನ! ದೈತ್ಯಜನ್ಮ ಒಂದು ಮಾತ್ರ ಬೇಡ! ಕರುಣಿಸು ತಂದೆ".

ಸತ್ಯಲೋಕದಲ್ಲಿ ನೆರೆದಿದ್ದ ಸಮಸ್ತ ಸುರಮುನಿ ಜನರು ಈ ಗುರುಶಿಷ್ಯರ, ಸ್ವಾಮಿ ಭೃತ್ಯರ, ತಂದೆ ಮಕ್ಕಳ ಸಂವಾದವನ್ನಾಲಿಸುತ್ತಾ ಮೂಕವಿಸ್ಮಿತರಾಗಿ ಕುಳಿತಿದ್ದಾರೆ. ಎಲ್ಲರ ಹೃದಯವೂ ಕರುಣಾರ್ದ್ರವಾಗಿದೆ. ಪಾಪ, ಶಂಕುಕರ್ಣನಿಗೆ ಬಂದೊಗಿದ ಗತಿಯನ್ನು ಕಂಡು ಅವನಿಗಾಗಿ ಎಲ್ಲರೂ ಪೇಚಾಡುತ್ತಿದ್ದಾರೆ.

**ಬ್ರಹ್ಮದೇವರು** : (ಕನಿಕರದಿಂದ) ಮಗು, ಶಂಕುಕರ್ಣ! ನೀನು ದೈತ್ಯನಾಗಿ ಜನಿಸಿದರೂ ನಿನಗೆ ದೈತ್ಯಸ್ವಭಾವ ಬರಲಾರದು. ನಿನ್ನ ಹರಿ ಭಕ್ತಿಗೆಂದಿಗೂ ಕುಂದುಂಟಾಗಲಾರದು, ಇದು ಸತ್ಯ!" ಎಂದು ಅಪ್ಪಣೆಮಾಡಿದರು.

ಅನಂತರ ಕಮಲಾಸನರಿಗೆ ಶಂಕುಕರ್ಣನಲ್ಲಿ ಮರುಕವುಂಟಾಯಿತು. ಮನ ದಲ್ಲಿಯೇ ಯೋಚಿಸತೊಡಗಿದರು- "ಪಾಪ, ಶಂಕುಕರ್ಣ ಹಿಂದೆಂದೂ ಹೀಗೆ ಮಾಡಿದವನಲ್ಲ. ಶ್ರೀಹರಿಪರಮಾತ್ಮನ ಪೂಜೆಯಲ್ಲಿ ಅವನಿಗೆ ಎಷ್ಟು ಶ್ರದ್ಧೆ

ತಮ್ಮ ಮತ್ತು ವೀಣಾಪಾಣಿಯ ಕೈಂಕರ್ಯ ಮಾಡುವುದರಲ್ಲಿ ಅವನಿಗೆಷ್ಟು ಆದರ. ಭಯಭಕ್ತಿಗಳಿಂದ ನಮ್ಮ ಭಗವತ್ಪೂಜಾಕಾರ್ಯದಲ್ಲಿ ಎಷ್ಟು ಉತ್ಸಾಹದಿಂದ ಸೇವೆ ಸಲ್ಲಿಸುತ್ತಿದ್ದಾನೆ. ಇಂದೇಕೆ ಹೀಗಾಯಿತು? ಎಂದು ಚಿಂತಿಸುತ್ತಿರಲು ರತ್ನಮಂಟಪದಲ್ಲಿ ಪ್ರಸನ್ನವದನನಾಗಿ ಸೀತಾಮಾತೆಯೊಡನೆ ನಿಂತಿದ್ದ ಶ್ರೀರಾಮಚಂದ್ರಪ್ರಭುವು ಕಿಲಕಿಲನೆ ನಕ್ಕು ಇದ್ದಕ್ಕಿದ್ದಂತೆ ಅಂತರ್ಧಾನ ಹೊಂದಿದನು!

ಜಗತ್ಪ್ರಭುವು ನಕ್ಕು ಮಾಯವಾದುದನ್ನು ಕಂಡು ಬ್ರಹ್ಮದೇವರು ಅಚ್ಚರಿಗೊಂಡರು. ಇದಕ್ಕೆ ಕಾರಣವೇನೆಂದು ಯೋಚಿಸತೊಡಗಿದರು. ಕಣ್ಣುಮುಚ್ಚಿ ಜ್ಞಾನದೃಷ್ಟಿಯಿಂದ ವಿಷಯವರಿತರು. *ಅವರ ಮುಖಕಮಲವರಳಿತು. ಮನದಲ್ಲಿ ಎದ್ದಿದ್ದ ಕಳವಳ ಚಿಂತೆ ದೂರವಾಯಿತು. ಬ್ರಹ್ಮದೇವರ ಶರೀರ ರೋಮಾಂಚನಗೊಂಡಿತು. ಪ್ರಸನ್ನಚಿತ್ತರಾಗಿ "ಆಹಾ ದೇವಾಧಿದೇವ! ಭಕ್ತಬಾಂಧವ, ಇದು ನಿನ್ನ ಲೀಲೆಯೇ? ಪ್ರಭು, ನೀನೆಂತಹ ಭಕ್ತವತ್ಸಲನು. ಇದು ನಿನ್ನ ಮಾಯೆಯಲ್ಲವೆ, ಸಾಕ್ಷಾತ್ ಲಕ್ಷ್ಮೀದೇವಿಯೇ ನಿನ್ನ ಮಾಯೆಗೆ ಮರಳಾಗುವಳೆಂದ ಮೇಲೆ ನಮ್ಮ ಪಾಡೇನು? ಪ್ರಭು, ನೀನೆಂತಹ ಕಪಟನಾಟಕಸೂತ್ರಧಾರಿ! ಸೂತ್ರದ ಗೊಂಬೆಯಂತೆ ನಮ್ಮನ್ನು ಕುಣಿಸುತ್ತಿರುವೆಯಲ್ಲ. ಕುಣಿಸು, ದೇವ, ಕುಣಿಸು! ನಿನ್ನಿಚ್ಛೆಗೆ ವಿರುದ್ಧವಾಗಿ ವರ್ತಿಸಲು ನಿನ್ನ ಕಿಂಕರರಾದ ನಾವು ಶಕ್ತರೇ?" ನೀನು 'ವೇದೈಕವೇದ್ಯ'ನೆಂದು ಶ್ರುತಿಗಳು ಸಾರಿದರೂ ಅನಾದಿಯೂ ಅಪೌರುಷಯಗಳೂ ಆದ ಆ ವೇದಗಳೇ "ಯತೋ ವಾಚೋ ನಿವರ್ತಂತೇ" ಎಂಬಂತೆ ನಿನ್ನನ್ನು ಅರಿಯಲು ಅಸಮರ್ಥವಾಗಿರುವಾಗ ಯಾರುತಾನೆ ನಿನ್ನನ್ನು, ನಿನ್ನ ಮಹಿಮೆಯನ್ನು ನಿನ್ನ ಲೀಲಾವಿಲಾಸಗಳನ್ನು ಮತ್ತು ನಿನ್ನ ಸಂಕಲ್ಪವನ್ನು ಅರಿತಾರು? ದೇವ! ಸುರಪಕ್ಷಪಾತಿಯಾದ ನೀನು ಅಮರರ ಹಿತಕ್ಕಾಗಿ, ಲೋಕಕಲ್ಯಾಣಕ್ಕಾಗಿ ಈ ರೀತಿ ಮಾಡಿಸಿದೆಯಾ? ನಿನ್ನ ಸ್ವಜನಪ್ರೇಮಕ್ಕೆ ಇಕೊ-ಅನಂತ ವಂದನೆಗಳು!" ಎಂದು ಶ್ರೀ ಹರಿಯನ್ನು ಕೊಂಡಾಡಿ ಕಣ್ತೆರೆದು ಶಂಕುಕರ್ಣನನ್ನು ಪ್ರೇಮದಿಂದ ಹಿಡಿದೆತ್ತಿ ಅವನ ಶಿರದ ಮೇಲೆ ತಮ್ಮ ಅಮೃತಹಸ್ತವನ್ನಿಟ್ಟು ಮಧುರಧ್ವನಿಯಿಂದ ಇಂತೆಂದರು-

**ಬ್ರಹ್ಮ:** ವತ್ಸ, ಶಂಕುಕರ್ಣ! ಇದು ಶ್ರೀಪರಮಾತ್ಮನ ಲೀಲೆಯಪ್ಪಾ, ಕುಮಾರ, ಶ್ರೀಮನ್ನಾರಾಯಣನು ನಿನ್ನಲ್ಲಿ ಎಂತಹ ಕರುಣೆ ಮಾಡಿರುವನು ಬಲ್ಲೆಯಾ? ದೇವತೆಗಳ ಹಿತಸಾಧನೆ, ಸಮಸ್ತ ಲೋಕಕಲ್ಯಾಣಕ್ಕಾಗಿ ವಾಣಿಗೆ ವೀಣೆಯಲ್ಲಿ ಕಲ್ಯಾಣಿಯನ್ನು ನುಡಿಸಲು ಪ್ರೇರಣೆಮಾಡಿ, ಕರ್ತವ್ಯದಕ್ಷನಾದ ನೀನು ಆ ರಾಗಸುಧಾಸ್ವಾದನದಲಿ ಮೈಮರೆಯುವಂತೆ ಮಾಡಿ, ಆನಂತರ ಸೀತಾ ಸಹಿತನಾಗಿ

---

* ಭಗವದಿತರತ್ರ ಅನಾಲೋಚನಯಾ ಸರ್ವವಿಷಯಕಜ್ಞಾನಂ ಋಜುಯೋಗಿ ಜ್ಞಾನಂ | ಆಲೋಚನಯಾ ರಮಾನಾರಾಯಣಜ್ಞಾನಂ || -ಪ್ರಮಾಣಪದ್ಧತಿ

ವೈದೋರಿದಾಗ ಅವನ ಪೂಜೆಗೆ ತುಳಸೀಪುಷ್ಪಗಳಿಲ್ಲದಂತೆ ಮಾಡಿ, ನನಗೆ ಕ್ರೋಧ ಬರುವಂತೆ ಮಾಡಿ, ಹಿಂದುಮುಂದಾಲೋಚಿಸದೆ ಕುಪಿತನಾದ ನನ್ನಿಂದ ನಿನಗೆ ಶಾಪಪ್ರದಾನ ಮಾಡಿಸಿ, ಅವನ ಅಗಾಧ ಮಾಯೆಗೆ ಶಿಲುಕಿ ನಾವೆಲ್ಲರೂ ಅವನ ಸಂಕಲ್ಪದಂತೆಯೇ ವರ್ತಿಸಿದ್ದನ್ನು ಕಂಡು ತೃಪ್ತನಾಗಿ ತನ್ನ ಲೀಲಾವಿಲಾಸವನ್ನು ತೋರಿ ಕಿಲಕಿಲನೆ ನಕ್ಕು ಏನೂ ಅರಿಯದವನಂತೆ ಕಣ್ಮರೆಯಾಗಿರುವನು! ಆಹಾ. ದೇವಾ, ನಿನ್ನ ಲೀಲೆ ವಿಚಿತ್ರವಾದುದು" ಎಂದು ಶ್ರೀಹರಿಯ ಮಹಿಮಾತಿಶಯವನ್ನು ಸ್ತುತಿಸಿದರು.

ಬ್ರಹ್ಮದೇವರ ವಚನವನ್ನಾಲಿಸಿ ದುಃಖದಿಂದ ಶಂಕುಕರ್ಣನು "ಪಿತಾಮಹ, ದೇವದೇವನೇ ನನ್ನ ಶಾಪಕ್ಕೆ ಪ್ರೇರಕನೆ? ಹಾಯ್ ಹಾಯ್, ನಾನೆಂಥ ನಿರ್ಭಾಗ್ಯ! ಶ್ರೀಹರಿಪರಮಾತ್ಮನ ನಿಗ್ರಹಕ್ಕೆ ಪಾತ್ರನಾಗುವಂತಹ ಅದೇನು ಪಾಪಾ ಚರಣೆಯು ನನ್ನಿಂದ ಘಟಿಸಿದೆಯೋ ಕಾಣೆನಲ್ಲ" ಎಂದು ವಿಜ್ಞಾಪಿಸಿದನು.

**ಬ್ರಹ್ಮ :** [ಸಂತೈಸುವ ಸ್ವರದಲ್ಲಿ], ಛೀ ಛೀ, ವತ್ಸ! ಆನಂದಿಸುವ ಸಮಯದಲ್ಲಿ ಹೀಗೇಕೆ ದುಃಖಿಸುವೆ.

**ಶಂಕು :** [ನಿಟ್ಟುಸಿರು ಬಿಡುತ್ತಾ], ದೇವ, ತಮ್ಮ ಮಾತು ಒಗಟಿನಂತಿದೆ. ನಿಮ್ಮ ಅಭಿಪ್ರಾಯ ನನಗಾಗಲಿಲ್ಲ. ಶಾಪವನ್ನು ಪಡೆದಿರುವ ನನಗೆ ಇದು ಸಂತೋಷದ ಸಮಯವೇ?

**ಬ್ರಹ್ಮ :** [ನಸುನಕ್ಕು], ನಿಜ, ಶಂಕುಕರ್ಣ. ಇದು ಸಂತೋಷದ ಸಮಯವೇ! ಶ್ರೀಹರಿಯ ಪೂರ್ಣಾನುಗ್ರಹಕ್ಕೆ ಪಾತ್ರನಾಗುವ ಸುಸಮಯ ಬಂದೊದ ಗಿರುವುದು ಸಂತೋಷಕರವಲ್ಲವೆ?

**ಶಂಕು :** [ಕರಮುಗಿದು],ಹಾಗೆಂದರೇನು ಪಿತಾಮಹ! ನನಗೊಂದೂ ಅರ್ಥವಾಗುತ್ತಿಲ್ಲ, ಕೃಪೆಮಾಡಿ ವಿಷಯವನ್ನು ಸ್ಪಷ್ಟವಾಗಿ ಹೇಳಬಾರದೆ?

**ಬ್ರಹ್ಮ :** ಶಂಕುಕರ್ಣ! ನೀನೆಂತಹ ಸುಕೃತಶಾಲಿ! ನಿನ್ನ ಭಾಗ್ಯವೆಷ್ಟು ದೊಡ್ಡದು! ಕೇಳು. ವತ್ಸ, ಹಿಂದೆ ಯಾವಾಗಲೂ, ಯಾರಲ್ಲೂ ಮಾಡದ ಪರಮಾನುಗ್ರಹವನ್ನು ಲಕ್ಷ್ಮೀಕಾಂತನು ನಿನ್ನಲ್ಲಿ ಮಾಡಲಿರುವನು! ಜಗತ್ತಿಗೆ ನಿನ್ನ ಮೂಲಕವಾಗಿ, ಕೇವಲ ನಿನ್ನ ದೆಸೆಯಿಂದಲೇ ಶ್ರೀಹರಿಯು ಅಭೂತಪೂರ್ವ ವಾದ, ವಿಚಿತ್ರವಾದ ನೂತನ ರೂಪದಿಂದ ಅವತರಿಸಲಿರುವನು, ಜಗತ್ತಿನಲ್ಲಿ ಭಾಗವತಧರ್ಮ ಪ್ರಸಾರವು ನಿನ್ನಿಂದ ವಿಶೇಷಾಕಾರವಾಗಿ ಆಗಲಿದೆ. ಶ್ರೀಮನ್ನಾರಾಯಣನ ಭಕ್ತಶ್ರೇಣಿಯಲ್ಲಿ ನಿನಗೆ ಅಗ್ರಸ್ಥಾನ ದೊರಕಲಿದೆ! ಇಷ್ಟೇ ಅಲ್ಲ; ಶ್ರೀಹರಿಯು ನಿನ್ನಲ್ಲಿ ಸರ್ವದಾ ಸನ್ನಿಹಿತನಾಗಿದ್ದು ನಿನ್ನಿಂದ ವಿವಿಧ ರೀತಿಯಲ್ಲಿ ಲೋಕಕಲ್ಯಾಣ ಮಾಡಿಸಿ ದಿಗಂತವಿಶ್ರಾಂತ ಕೀರ್ತಿಯನ್ನು ತಂದಿತ್ತು ಅನುಗ್ರಹಿಸಲಿರುವನು. ಈ ಮಹಾಭಾಗ್ಯ ಯಾರಿಗೆ ತಾನೆ ದೊರಕೀತು? ಶಂಕುಕರ್ಣ! ನೀನು ನಿಜವಾಗಿ ಪರಮಧನ್ಯ!

**ಶಂಕುಕರ್ಣ** : [ಆನಂದದಿಂದ], ತಂದೆಯೇ, ಈಗ ತಾನೆ ನೀವು ದೈತ್ಯನಾಗೆಂದು ನನಗೆ ಶಾಪನೀಡಿದಿರಿ. ಈಗ ನೋಡಿದರೆ- ಮಹಾಭಾಗವತೋತ್ತಮ ನಾಗಿ, ಶ್ರೀಹರಿಯ ವಿಶೇಷಾನುಗ್ರಹಕ್ಕೆ ಪಾತ್ರನಾಗಿ ಅಸಾಧಾರಣ ಕೀರ್ತಿಗಳಿಸುವಿ ಎನ್ನುವಿರಿ! ಇದರ ಅರ್ಥವೇನು ಸ್ವಾಮಿ?

**ಬ್ರಹ್ಮ** : ಕುಮಾರ! ದುಷ್ಟಶಿಕ್ಷಣ ಶಿಷ್ಟಪರಿಪಾಲನೆಗಾಗಿ ಶ್ರೀಹರಿಯು ಅವತರಿಸುವುದೀಗ ಅನಿವಾರ್ಯವಾಗಿದೆ. ಅವನ ಅವತಾರಕ್ಕೆ ಕಾರಣನು ನೀನಾಗ ಬೇಕೆಂಬುದು ಅವನ ಸಂಕಲ್ಪ! ಅಂತೆಯೇ ನನ್ನಿಂದ ನಿನಗೆ ಶಾಪಕೊಡಿಸಿರುವನು. ವತ್ಸ, ಸಾಮಾನ್ಯವಾಗಿ ಸುರ-ನರರಿಗೆ ಶಾಪ ಬಂದರೆ ಶಾಪಗ್ರಸ್ಥನಿಗೆ ಕೆಡಕೇ ಆಗುವುದು. ಶ್ರೀಹರಿಯ ಸಂಕಲ್ಪದಿಂದ ಶಾಪಬಂದರೆ ಅದು ವರವಾಗಿಯೇ ಪರಿಣಮಿಸುವುದು. ಅದರಿಂದ ಸಮಸ್ತ ಜಗತ್ತಿನ ಉದ್ಧಾರ, ಧರ್ಮಸಂಸ್ಥಾಪನೆ ಲೋಕ ಕಲ್ಯಾಣಗಳಿಗೆ ಕಾರಣವಾಗುವುದು, ಶಂಕುಕರ್ಣ! ಶ್ರೀಹರಿಯು ನಿನ್ನನ್ನೇ ಈ ಮಹತ್ಕಾರ್ಯಕ್ಕೆ ಆರಿಸಿಕೊಂಡಿರುವನು! ಅಂದ ಮೇಲೆ ನಿನ್ನ ಪುಣ್ಯ ಭಾಗ್ಯಗಳಿಗೆ ಎಣೆಯುಂಟೆ? ವತ್ಸ, ಕೇಳು, ನೀನು ದೈತ್ಯನಾಗಿ ಜನಿಸಿದರೂ ಅಸುರ ಸಂಬಂಧಿ ಯಾದ ಯಾವ ತಾಮಸಗುಣವೂ ನಿನ್ನ ಬಳಿ ಸಾರಲಾರವು. ದೇವಸ್ವಭಾವವೇ ನಿನ್ನಲ್ಲಿ ಸ್ಥಿರವಾಗಿ ನೆಲೆಗೊಳ್ಳುವುದು. ವಿಷ್ಣುಭಕ್ತಿಯು ಮೇರೆ ಮೀರಿ ಅಭಿವೃದ್ಧಿಸುವುದು, ನೀನು ಉದ್ಧೃತನಾಗುವುದರ ಜೊತೆಗೆ ಜಗತ್ತನ್ನೂ ಉದ್ಧಾರಮಾಡುವೆ. ಚಿಂತಿಸಬೇಡ, ನಿನ್ನ ಹೆಸರು ಅಜರಾಮರವಾಗುವುದು.

**ಶಂಕುಕರ್ಣ** : ಸ್ವಾಮಿ, ಹಾಗಾದರೆ ನಾನು ದೈತ್ಯನಾಗಿ ಹುಟ್ಟಲೇಬೇಕೆ?

**ಬ್ರಹ್ಮ** : ತಪ್ಪಿದ್ದಲ್ಲ, ವತ್ಸ! ಅದು ಶ್ರೀ ಲಕ್ಷ್ಮೀಕಾಂತನ ಸಂಕಲ್ಪ!

**ಶಂಕುಕರ್ಣ** : ಹಾಗಾದರೆ, ಪಿತಾಮಹ! ನನಗೆ ಶಾಪವಿಮೋಚನೆ ಯಾಗುವುದು ಯಾವಾಗ?

**ಬ್ರಹ್ಮ** : (ಮಂದಸ್ಮಿತರಾಗಿ) ಶಾಪವಲ್ಲ, ಶಂಕುಕರ್ಣ! ಇದು ಮಹತ್ತರ ವಾದ ಮಂಗಳಕರವಾದ ವರವೆಂದು ತಿಳಿ. (ಸ್ವಲ್ಪಕಾಲ ಧ್ಯಾನಸ್ಥರಾಗಿದ್ದು ನಂತರ)

ಹೂಂ, ಶಾಪವಿಮೋಚನೆ! ಅದಕ್ಕೆ ಅನೇಕ ಯುಗಗಳಾಗಬೇಕಪ್ಪಾ. ನೀನು ನಾಲ್ಕು ಅವತಾರಗಳನ್ನೆತ್ತಿ ಶ್ರೀಹರಿಯನ್ನು ಸೇವಿಸಿ ಭಾಗವತಾಗ್ರಣಿಯೆಂದು ವಿಖ್ಯಾತನಾಗಿ, ನಾಲ್ಕನೆಯ ಅಂತಿಮಾವತಾರದಲ್ಲಿ ಅಸದೃಶ ಲೋಕಕಲ್ಯಾಣವನ್ನೆಸಗಿ, ಶ್ರೀಹರಿ ಭಕ್ತಶಿಖಾಮಣಿಯೆನಿಸುವೆ. ನೀನೀಗ ಅದಾವ ವೀಣಾಪಾಣಿಯ ಕಲ್ಯಾಣಿಯ ನಾದ ಮಾಧುರ್ಯದಲ್ಲಿ ಮೈಮರೆತು ಯಾವ ಶ್ರೀರಾಮಚಂದ್ರ ದೇವರ ಪೂಜಾ ಕಾರ್ಯದಲ್ಲಿ ಪರಾಙ್ಮುಖನಾಗಿ ಶಾಪಗ್ರಸ್ಥನಾದೆಯೋ ಅದೇ ಶ್ರೀರಾಮಚಂದ್ರನನ್ನು ವಿಶೇಷಾಕಾರವಾಗಿ ಪೂಜಿಸಿ ಲೋಕಕಲ್ಯಾಣಾಸಕ್ತನಾಗಿ ವೀಣಾ ವಾದನಕೋವಿದನೆಂದು ಖ್ಯಾತಿಗಳಿಸಿ ಕೊನೆಗೆ ನನ್ನೀಧಾಮಕ್ಕೆ ಬರುತ್ತೀಯೆ.

ಅನಂತರ ಶ್ರೀಹರಿಯ ಚರಣಾರವಿಂದಗಳನ್ನು ಸೇರಿ ಜನನ-ಮರಣ ರಹಿತವಾದ, ಸ್ವರೂಪಾನಂದಾವಿರ್ಭಾವ ರೂಪವಾದ ಮೋಕ್ಷಸುಖವನ್ನು ಅಂದರೆ ಶಾಶ್ವತ ಸುಖವನ್ನು ಅನುಭವಿಸುತ್ತೀಯೆ!

**ಶಂಕುಕರ್ಣ :** (ಆನಂದ ಉತ್ಸಾಹಗಳಿಂದ) ತಂದೆಯೇ, ನಿನ್ನ ಆಣತಿಯನ್ನು ಶಿರಸಾಧರಿಸಿದ್ದೇನೆ. ಆದರೆ ದೇವ, ಯುಗಯುಗಗಳವರೆಗೆ ತಮ್ಮನ್ನೂ ಮಾತೆ ಸರಸ್ವತೀದೇವಿಯನ್ನೂ ಅಗಲಿರಬೇಕೆ?

**ಬ್ರಹ್ಮ :** (ನಗುಮುಖದಿಂದ) ಕುಮಾರ! ನೀನು ನನ್ನ ಲೋಕವನ್ನು ಬಿಟ್ಟುಹೋದರೂ, ನಾನು ನಿನ್ನನ್ನು ಬಿಡುವಂತಿಲ್ಲವಲ್ಲಪ್ಪಾ, ಒಂದು ರೂಪದಿಂದ ನಾನೂ, ವಾಯುದೇವನೂ ನಿನ್ನಲ್ಲಿ ಸನ್ನಿಹಿತರಾಗಿದ್ದು ನಿನ್ನಿಂದ ಲೋಕಕಲ್ಯಾಣ ಮಾಡಿಸಲೇಬೇಕಾಗಿದೆ.

**ಶಂಕುಕರ್ಣ :** (ಆನಂದದಿಂದ) ಅನುಗೃಹೀತೋಽಸ್ಮಿ! ನಾನು ಭೂಲೋಕ ದಲ್ಲಿ ಅವತರಿಸಿದಾಗ ಮಾನವ ಸ್ವಭಾವಾನುಸಾರವಾಗಿ ಕರ್ತವ್ಯವನ್ನು ಮರೆತು ಕುಳಿತಾಗ ನನ್ನನ್ನು ಎಚ್ಚರಿಸುವವರಾರು ಸ್ವಾಮಿ?

**ಸರಸ್ವತೀದೇವಿ :** (ಮುಗುಳುನಗೆಯಿಂದ ಮುಂದೆ ಬಂದು ಶಂಕುಕರ್ಣನ ಶಿರದ ಮೇಲೆ ಅಭಯ ಹಸ್ತವನ್ನಿರಿಸಿ) ವತ್ಸ! ಚಿಂತಿಸಬೇಡ, ನಾನು ಸರ್ವದಾ ನಿನ್ನಲ್ಲಿ ಸನ್ನಿಹಿತಳಾಗಿರುವೆನು. ಮಾತ್ರವಲ್ಲ; ನೀನು ಕಿಂಕರ್ತವ್ಯಮೂಢನಾಗಿ ಕುಳಿತಾಗ ನಿನ್ನನ್ನು ಎಚ್ಚರಿಸಲು ಪ್ರತ್ಯಕ್ಷಳಾಗಿ ನಿನಗೆ ಕರ್ತವ್ಯವನ್ನು ಬೋಧಿಸುವೆನು! ಕಂದ ಯೋಚಿಸಬೇಡ.

ಆಗ ಆನಂದಬಾಷ್ಪಸಿಕ್ತನೇತ್ರನಾಗಿ ಬ್ರಹ್ಮದೇವ ಸರಸ್ವತಿಯರಿಗೆ, ಸಾಷ್ಟಾಂಗ ನಮಸ್ಕಾರಮಾಡಿ "ತಂದೆಯೇ ಅಮ್ಮಾ ನಿಮ್ಮ ಈ ಕಿಂಕರನಲ್ಲಿ ಕೃಪೆಯಿರಲಿ. ಯಾವಾಗಲೂ ನಿಮ್ಮಲ್ಲಿಯೂ, ಸರ್ವೋತ್ತಮನಾದ ಶ್ರೀ ಲಕ್ಷ್ಮೀನಾರಾಯಣನಲ್ಲೂ ಭಕ್ತಿಯು ಅಭಿವೃದ್ಧಿಸುವಂತೆ ಆಶೀರ್ವದಿಸಿ ಅನುಗ್ರಹಿಸಿರಿ" ಎಂದು ಪ್ರಾರ್ಥಿಸಿದನು.

**ಬ್ರಹ್ಮ-ವಾಣಿ :** ತಥಾಸ್ತು. ಕುಮಾರ! ನಿನಗೆ ಮಂಗಳವಾಗಲಿ.

ಆಗ ಸಕಲ ಸುರಸ್ತೋಮ - ಮುನಿವೃಂದವು ಭಗವಂತನ ಲೀಲಾ ವಿಲಾಸವನ್ನು ಕಂಡು ಪರಮಾನಂದ ತುಂದಿಲವಾಗಿ ಶಂಕುಕರ್ಣನಿಗೆ ಶುಭಾ ಶಂಸನಮಾಡಿ, ನೋಡುತ್ತಿರುವಂತೆಯೇ ಮಹಾಭಾಗ್ಯಶಾಲಿಯಾದ ಶಂಕುಕರ್ಣನು ಬ್ರಹ್ಮದೇವರ ಶಾಪರೂಪ ವರವನ್ನು ಶಿರಸಾಧರಿಸಿ, ಶ್ರೀಹರಿಯ ಸಂಕಲ್ಪದಂತೆ ಸೇವೆ ಸಲ್ಲಿಸಲು, ತೇಜೋರೂಪದಿಂದ ಸತ್ಯಲೋಕದಿಂದ ಅದೃಶ್ಯನಾದನು!

|| ಇತಿಶಮ್ ||

ಶ್ರೀ ಗುರುರಾಜೋ ವಿಜಯತೇ



# ಕಲಿಯುಗ - ಕಲ್ಪತರು

## ಎರಡನೆಯ ಉಲ್ಲಾಸ

## ಶ್ರೀ ಹರಿಭಕ್ತಾಗ್ರಣಿ ಶ್ರೀ ಪ್ರಹ್ಲಾದರಾಜರು

ರಚಿಸಿದವರು :
ರಾಜಾ ಎಸ್. ಗುರುರಾಜಾಚಾರ್ಯರು



ಶ್ರೀ

## ಎರಡನೆಯ ಉಲ್ಲಾಸ

# ಕಲಿಯುಗ ಕಲ್ಪತರು
# ಶ್ರೀ ಪ್ರಹ್ಲಾದ ರಾಜರು

### ೧. ಹಿನ್ನಲೆ

ಮುಮುಕ್ಷುಗಳಿಂದ ಅಪೇಕ್ಷಣೀಯವಾದ, ಪರಮಮಂಗಳ ಮೂರ್ತಿಯಾದ ಶ್ರೀಮನ್ನಾರಾಯಣನ ಆನಂದಧಾಮವೆಂದು ಹದಿನಾಲ್ಕು ಲೋಕಗಳಲ್ಲಿ ಪ್ರಸಿದ್ಧವಾದ ಶ್ರೀವೈಕುಂಠವು ಮುಕ್ತ ಅಮುಕ್ತ ಎಂದು ಎರಡು ವಿಧ. ಅಮುಕ್ತಸ್ಥಾನದ ದ್ವಾರಪಾಲಕರಾದ ಜಯ—ವಿಜಯರು ಸತತ ಶ್ರೀ ಹರಿಯ ಸನ್ನಿಧಿಯಲ್ಲಿ ಭಗವಂತನ ಪ್ರೀತಿಪಾತ್ರರಾದ ತಮಗೆ ಸರಿಸಾಟಿ ಜಗತ್ತಿನಲ್ಲಿ ಮತ್ತಾರೂ ಇಲ್ಲ, ತಾವೇ ಶ್ರೇಷ್ಠರು ಎಂಬ ದುರಭಿಮಾನದಿಂದ ಗರ್ವಿಷ್ಠರಾಗಿರಲು ಶ್ರೀಹರಿಯ ಪ್ರೇರಣೆಯಂತೆ ದೇವದೇವನ ದರ್ಶನಾಕಾಂಕ್ಷಿಗಳಾದ ಶ್ರೀಬ್ರಹ್ಮಮಾನಸಪುತ್ರರೂ, ಜ್ಞಾನಿನಾಯಕರೂ ಆದ ಸನಕ – ಸನಂದನಾದಿಗಳು ಬಂದಾಗ ಗರ್ವದಿಂದ ಯುಕ್ತಾಯುಕ್ತ ಜ್ಞಾನಹೀನರಾದ ಜಯ—ವಿಜಯರು ಮಹನೀಯರಾದ ಆ ಜ್ಞಾನಿಗಳನ್ನು ದ್ವಾರದಲ್ಲಿ ನಿರೋಧಿಸಿ ಭಗವದ್ದರ್ಶನಕ್ಕೆ ಅಡ್ಡಿಪಡಿಸಲು ಅದರಿಂದ ಕುಪಿತರಾದ ಸನಕಾದಿಗಳ ನಿಗ್ರಹಕ್ಕೆ ಪಾತ್ರರಾಗಿ "ಪರಮಮಂಗಳಕರವಾದ ಸಾತ್ವಿಕವಾದ ವೈಕುಂಠದಲ್ಲಿರಲು ನೀವು ಅರ್ಹರಲ್ಲ. ವೈಕುಂಠದಿಂದ ಭ್ರಷ್ಟರಾಗಿರಿ", "ಆಸುರೀಂ ಯೋನಿಂ ಯಾತ — ದೈತ್ಯರಾಗಿರಿ" ಎಂಬ ಶಾಪಕ್ಕೆ ಗುರಿಯಾಗಿ ದೈತ್ಯರಾಗಿ ಜನಿಸಿದರು.[1]

ಭಗವಂತನ ಅಪ್ಪಣೆಯಂತೆ ಮೂರು ಜನ್ಮ ಶ್ರೀಹರಿದ್ವೇಷಿಗಳಾಗಿದ್ದು ಶಾಪವನ್ನು ಅನುಭವಿಸುವುದಾಗಿ ವಿನಂತಿಸಿದ ಜಯ —ವಿಜಯರು ಹಿರಣ್ಯಕಶ್ಯಪ —ಹಿರಣ್ಯಾಕ್ಷರೆಂಬ ಅಭಿಧಾನದಿಂದ ದೈತ್ಯಸಾಮ್ರಾಜ್ಯಕ್ಕೆ ಚಕ್ರವರ್ತಿ— ಯುವರಾಜರಾದರು. ದೈತ್ಯರಾಗಿ ಜನಿಸಿದ್ದರಿಂದ ಸ್ವಾಭಾವಿಕವಾಗಿ ಅವರು ಶ್ರೀಹರಿದ್ವೇಷಿಗಳೂ ಸುರದ್ವೇಷಿಗಳೂ ಆಗಿ ಲೋಕಕಂಟಕರಾಗಿ ಸಜ್ಜನರಿಗೆ ಹಿಂಸೆಕೊಡಲಾರಂಭಿಸಿದರು.[2]

ಹಿರಣ್ಯಕಶಿಪು—ಹಿರಣ್ಯಾಕ್ಷರು ಬಾಹುಬಲದ, ಅಪ್ರತಿಹತ ಪರಾಕ್ರಮದ ಗರ್ವದಿಂದ ಮೇರಿಮೀರಿ ವರ್ತಿಸತೊಡಗಿ ಭಗವದ್ಭಕ್ತರನ್ನು ಹಿಂಸಿಸಹತ್ತಿದರು ಶ್ರೀಹರಿಗೆ

---

1 "ಅಶಪರ್ ಕುಪಿತಾ ಏವಂ ಯುವಾಂ ವಾಸಂ ನ ಚಾರ್ಹತಃ| ರಜಸ್ತಮೋಭ್ಯಾಂ ರಹಿತೇ ಪಾದ-ಮೂಲೇ ಮಧುದ್ವಿಷಃ| ಪಾಪಿಷ್ಠಾ ಮಾಸುರೀಂ ಯೋನಿಂ ಬಾಲಿಶೌ ಯಾತ ಮಾಶ್ವತಃ||"

— ಭಾಗವತ—೭—೩೯—೪೦.

2 'ಹತೋ—ಹರಿಣಾ ಹಿರಣ್ಯಾಕ್ಷೋ ಧರೋದ್ಧಾರೇ ಬಿಭ್ರತಾ ಸೌಕರಂ ವಪುಃ|

— ಭಾಗವತ—೭—೧—೪೩.

ಮತ್ತು ದೇವತೆಗಳಿಗೆ ಪ್ರಿಯವಾದ ಕಾರ್ಯಗಳಿಗೆ ಅಡ್ಡಿಯೊಡ್ಡತೊಡಗಿದರು. ಶ್ರೀಹರಿ ಮತ್ತು ದೇವತೆಗಳು ಬಲಶಾಲಿಗಳಾಗಲು ಋಷಿ-ಮುನಿಗಳಾಚರಿಸುವ ಯಜ್ಞಯಾಗಾದಿಗಳೇ ಕಾರಣವೆಂದು ತರ್ಕಿಸಿದ ಆ ದೈತ್ಯರು ಋಷಿ-ಮುನಿಗಳಾಚರಿಸುವ ಯಜ್ಞಯಾಗಾದಿಗಳಿಗೆ ವಿಘ್ನಮಾಡಲಾರಂಭಿಸಿದರು. ದೈತ್ಯರ ಉಪಟಳದಿಂದ ಶ್ರಮವಾದರೂ ಋಷಿಮುನಿಗಳು ತಮ್ಮ ಕರ್ತವ್ಯವನ್ನು ಬಿಡದೆ ಯಜ್ಞಗಳನ್ನಾಚರಿಸುತ್ತಲೇ ಇದ್ದರು.

ದೈತ್ಯರಾಜನ ಸಹೋದರನಾದ ಹಿರಣ್ಯಾಕ್ಷನು ಇದರಿಂದ ಕ್ರುದ್ಧನಾದನು. "ಈ ಭೂಮಿಯು ಇದ್ದರೆ ತಾನೆ ಈ ಋಷಿಮುನಿಗಳು ಯಜ್ಞವನ್ನಾಚರಿಸುವರು? ಭೂಮಿಯೇ ಇಲ್ಲದಂತೆ ಮಾಡಿಬಿಟ್ಟರೆ ಹ್ಞಾ ಅದೇ ಸರಿ! ಭೂಮಿಯನ್ನೇ ಸ್ಥಳಪಲ್ಲಟ ಮಾಡಿಬಿಡುವೆನು! ಆಗ ಈ ಬಡ ಬೈರಾಗಿಗಳು ಅದೆಂತು ಯಾಗಗಳನ್ನೆಸಗುವರೋ ನೋಡುವೇನು!" ಎಂದು ಮನದಲ್ಲಿ ಯೋಚಿಸಿ ಮಹಾಬಲಶಾಲಿಯಾದ ಅವನು ಭೂಮಂಡಲವನ್ನೇ ತನ್ನ ಬಾಹುಗಳಲ್ಲಿ ಎತ್ತಿಕೊಂಡು ಅಗಾಧ ಜಲರಾಶಿಯಿಂದ ಬೆಡಗುಗೊಂಡ ಸಮುದ್ರತಳವನ್ನು ಸೇರಿ ಭೂಮಿಯನ್ನು ಅಲ್ಲಿ ಬಚ್ಚಿಟ್ಟು ಕುಳಿತನು!

ದೈತ್ಯರಾಜನ ಈ ವಿಪರೀತ ಕಾರ್ಯದಿಂದ ಕಳವಳಗೊಂಡ ಭೂಮಾತೆಯು ಆರ್ತಳಾಗಿ ತನ್ನನ್ನು ರಕ್ಷಿಸುವಂತೆ ಶ್ರೀಹರಿಯಲ್ಲಿಮೊರೆಯಿಟ್ಟಳು. ಕರುಣಾಸಾಗರನಾದ ಶ್ರೀಮನ್ನಾರಾಯಣನು ಶ್ರೀವರಾಹಾವತಾರವನ್ನು ತಾಳಿ ಸಮುದ್ರತಳವನ್ನು ಸೇರಿ ಖೂಳನಾದ ಹಿರಣ್ಯಾಕ್ಷನನ್ನು ಸಂಹರಿಸಿ ತನ್ನ ಕೋರೆಹಲ್ಲುಗಳಿಂದ ಭೂಮಿಯನ್ನು ಮೇಲಿತ್ತಿತಂದು ಮತ್ತೆ ಯಥಾ ಸ್ಥಾನದಲ್ಲಿ ಪ್ರತಿಷ್ಠಾಪಿಸಿದನು! ದೇವತೆಗಳು ಶ್ರೀ ವರಾಹರೂಪಿ ಶ್ರೀಹರಿಯ ಮೇಲೆ ಪುಷ್ಪವೃಷ್ಟಿಗೈದರು. ಋಷಿಮುನಿಗಳು ಪರಮಾತ್ಮನನ್ನು ಭಕ್ತಿಯಿಂದ ಸ್ತುತಿಸಿದರು.

ಶ್ರೀಹರಿಯು ವರಾಹರೂಪದಿಂದ ತನ್ನ ಪ್ರೀತಿಯ ಸಹೋದರನಾದ ಹಿರಣ್ಯಾಕ್ಷನನ್ನು ಸಂಹರಿಸಿದ ವಿಚಾರವರಿತು ಹಿರಣ್ಯಕಶ್ಯಪನು ತಳಮಳಗೊಂಡನು. ತಮ್ಮನ ಮರಣದಿಂದ ಅತ್ಯಂತ ದುಃಖಿತನಾದನು. ದುಃಖಸಮುದ್ರದಲ್ಲಿ ಮುಳುಗಿದ್ದ ತಾಯಿ, ಸಹೋದರನ ಪತ್ನಿ, ಪುತ್ರರುಗಳಿಗೆ ಅನೇಕ ಬಗೆಯಿಂದ ಸಮಾಧಾನ ಹೇಳಿ ಸಾಂತ್ವನಗೊಳಿಸಿ ತಮ್ಮನ ಅಂತ್ಯಕ್ರಿಯಾದಿಗಳನ್ನು ನೆರವೇರಿಸಿದನು. ಹಿರಣ್ಯಾಕ್ಷನ ಮರಣದಿಂದ ಕಡುನೊಂದ ಆ ದೈತ್ಯನು ತನ್ನ ಸಹೋದರನನ್ನು ಸಂಹರಿಸಿದ ಶ್ರೀಹರಿಯ ಮೇಲೆ ಸೇಡು ತೀರಿಸಿಕೊಳ್ಳಲು ಪ್ರತಿಜ್ಞಾಬದ್ಧನಾದನು. ಅದರ ಮೊದಲನೆಯ ಹೆಜ್ಜೆಯಾಗಿ ತನ್ನ ಅಸಹಾಯಶೂರರಾದ ನಮುಚಿ, ಇಲ್ವಲ, ಪಾಕ, ವಿಪ್ರಚಿತ್ತಿ, ಹಯಗ್ರೀವ ಮೊದಲಾದ ದೈತ್ಯವೀರರನ್ನು ಕರೆದು "ದೈತ್ಯವೀರರೇ! ಮಾಯಾವಿಯೂ, ಸುರಪಕ್ಷಪಾತಿಯೂ ಆದ ಹರಿಯು ನಮ್ಮ ಕುಲವೈರಿಯು,

ನನ್ನ ಪ್ರಿಯ ಸಹೋದರನನ್ನು ಸಂಹರಿಸಿದ ಪಾತಕಿಯು. ಇನ್ನು ಮುಂದೆ ಆ ಹರಿಯ ಅಸ್ತಿತ್ವವು ನಮ್ಮ ರಾಜ್ಯದಲ್ಲಿ ಯಾವುದೇ ರೂಪದಿಂದಲೂ ಇರಕೂಡದು. ಆ ಕಾರ್ಯವನ್ನು ನೀವು ಮಾಡಿರಿ" ಎಂದು ಆಜ್ಞಾಪಿಸಿದನು.

ದೈತ್ಯರಾಜನು ಮುಂದುವರೆದು ಕೋಪಸಂತಾಪಗಳಿಂದ ಕಿಡಿಕಿಡಿಯಾಗಿ ಗರ್ಜಿಸಿ "ದೈತ್ಯವೀರರೇ! ನಮ್ಮ ಪ್ರಮುಖ ಶತ್ರುವಾದ ವಿಷ್ಣುವು ನಾಮಾವಶೇಷವಾಗಬೇಕಾದರೆ, ಹತನಾಗಬೇಕಾದರೆ ಆ ಹರಿಯನ್ನು ಪೋಷಿಸುವ, ಅವನಿಗೆ ಬಲಪ್ರದರಾದ ಅಮರರು, ದೇವ-ಪಿತೃ-ಭೂತಗಳು ಮತ್ತು ವರ್ಣಾಶ್ರಮರಕ್ಷಕರೂ, ಯಜ್ಞಯಾಗ-ಸ್ವಾಧ್ಯಾಯ-ತಪಸ್ಸು-ನಿಯಮಗಳನ್ನು ಮಾಡಿಕೊಂಡಿರುವ ಭೂಸುರರು ಒಬ್ಬರೂ ಉಳಿಯದಂತಾಗಬೇಕು. ಆದುದರಿಂದ ನೀವು ಮೊದಲು ಗೋ-ಬ್ರಾಹ್ಮಣರು, ವೇದ, ವರ್ಣಾಶ್ರಮಧರ್ಮಗಳು ಪ್ರಚಾರದಲಿರುವ ಪ್ರದೇಶಗಳನ್ನೆಲ್ಲಾ ಧ್ವಂಸ ಮಾಡಿಬಿಡಿರಿ" ಎಂದು ಅಪ್ಪಣೆಮಾಡಿದನು.

ದೈತ್ಯರಾಜನಾದ ಹಿರಣ್ಯಕಶ್ಯಪನ ಆಣತಿಯಂತೆ ಕ್ರೂರಿಗಳಾದ ದೈತ್ಯರು ಗೋಶಾಲೆಗಳು, ಋಷ್ಯಾಶ್ರಮಗಳು, ಯಾಗಶಾಲೆಗಳು, ನಗರ-ಪಟ್ಟಣ-ಗ್ರಾಮಗಳು ಹಾಗೂ ನಾಟ್ಯಸ್ಥಾನಗಳು-ಹೀಗೆ ಎಲ್ಲವನ್ನೂ ನಾಶಪಡಿಸಿದರು.

ಹೀಗೆ ಸಮಸ್ತರಾಜ್ಯದಲ್ಲಿ ದೈತ್ಯವೀರರು ಹಾಹಾಕಾರವನ್ನುಂಟುಮಾಡಿ ಸಕಲ ಪ್ರಜರಿಗೆ ಪೀಡೆಯನ್ನಿತ್ತು ಸಂತೋಷಿಸಿದರು. ತನ್ನ ರಾಜ್ಯದಲ್ಲಿ ನಡೆದ ಹತ್ಯಾಕಾಂಡವನ್ನು ಕೇಳಿ ಹಿರಣ್ಯಕಶ್ಯಪನು ಪರಮಹರ್ಷಿತನಾದನು.

ಆನಂತರ ಅವನು ವಿಲಾಸಮುಗ್ನನಾಗಿ, ಕ್ರೌರ್ಯ, ಹಿಂಸೆ, ಅಹಂಕಾರಗಳ ಸಾಕಾರಮೂರ್ತಿಯೆನಿಸಿ ಋಷಿಮುನಿಗಳಿಗೆ ಹೆಚ್ಚು ಹೆಚ್ಚು ಸಂಕಟಗಳನ್ನು ತಂದೊಡ್ಡುತ್ತಾ, ದೇವತಾರಾಧನೆ ಮುಂತಾದ ಸತ್ಕಾರ್ಯಗಳಿಗೆ ವಿಘ್ನಮಾಡುತ್ತಾ ಲೋಕ ಕಂಟಕನಾಗಿ ಮೆರೆಯಹತ್ತಿದನು.

## ೨. ನಾರದರ ಪ್ರಚೋದನೆ

ಜ್ಞಾನ-ಭಕ್ತಿ-ವೈರಾಗ್ಯ ಸಂಪನ್ನರೂ, ತಪೋಧನರೂ, ಶ್ರೀಹರಿಯ ಪರಮ ಭಕ್ತರೂ ಆದ ಶ್ರೀನಾರದ ಮಹರ್ಷಿಗಳಿಗೆ ದೈತ್ಯರಾಜ ಹಿರಣ್ಯಕಶ್ಯಪನ ಈ ದಾಂಧಲೆಯನ್ನು ಕಂಡು ಮನಸ್ಸಿಗೆ ಅಪಾರ ವ್ಯಥೆಯಾಯಿತು. ದೇವತೆಗಳಿಗೆ ಬರಲಿರುವ ಕಷ್ಟ, ಋಷಿಮುನಿಗಳು, ಗೋಬ್ರಾಹ್ಮಣರು, ಧರ್ಮ, ಸ್ವಾಧ್ಯಾಯ, ಯಜ್ಞಯಾಗಾದಿ ಸತ್ಕಾರ್ಯಗಳಿಗೆ ಬಂದೊದಗಿದ ವಿಪತ್ತುಗಳನ್ನು ಊಹಿಸಿ ಕರುಣಾಮೂರ್ತಿಗಳಾದ ಆ ಮಹನೀಯರ ಹೃದಯದಲ್ಲಿ ಕಾರುಣ್ಯತರಂಗಿಣಿಯು ಪುಟಿದೆದ್ದಿತು. ಆಗ ನಾರದರು ಮನದಲ್ಲೇ ಚಿಂತಿಸಿದರು- "ದೈತ್ಯನ ಉಪಟಳ ನಿಲ್ಲಬೇಕಾದರೆ ಅವನ ಮೇಲೆ ಭಗವಂತನ ದೃಷ್ಟಿಬೀಳುವಂತೆ ಮಾಡಬೇಕು. ಅದಕ್ಕೆ

ಹಿರಣ್ಯಕಶ್ಯಪನು ಮದಿಸಿ, ಅವನ ಹಿಂಸಾಚಾರ ಮೇರೆ ಮೀರುವಂತಾಗಬೇಕು. ಭಗವನ್, ಶ್ರೀಹರಿ! ನಿನ್ನ ಪ್ರೇರಣೆಯಂತೆ ಲೋಕಕಲ್ಯಾಣಕ್ಕಾಗಿ ಈ ದೈತ್ಯನನ್ನು ಪ್ರಚೋದಿಸಲು ಉದ್ಯುಕ್ತನಾಗಿದ್ದೇನೆ. ದಯಾಘನ! ಸಜ್ಜನರ ಉದ್ಧಾರಕ್ಕಾಗಿ ಪ್ರಯತ್ನಿಸುವ ನನ್ನೀ ಪ್ರಯತ್ನಕ್ಕೆ ಯಶಸ್ಸನ್ನು ಕರುಣಿಸು" ಎಂದು ಪರಮಾತ್ಮನನ್ನು ಪ್ರಾರ್ಥಿಸಿ ದೈತ್ಯರಾಜನ ಅರಮನೆಗೆ ಆಗಮಿಸಿದರು.

ನಾರದ ಮಹರ್ಷಿಗಳನ್ನು ಕಂಡು ದೈತ್ಯೇಂದ್ರನು ನಮಸ್ಕರಿಸಿ ಸತ್ಕರಿಸಿದನು. ಕುಶಲ ಪ್ರಶ್ನೆಯಾದ ಮೇಲೆ ನಾರದರು ವಿವಿಧರೀತಿಯಿಂದ ಅವನನ್ನು ಕೆರಳಿಸಿ ಬ್ರಹ್ಮದೇವರಲ್ಲಿ ಅವಧ್ಯತ್ವವರವನ್ನು ಪಡೆಯುವಂತೆ ಪ್ರಚೋದಿಸಿ ತೆರಳಿದರು. ಹಿರಣ್ಯಕಶ್ಯಪನು ಪಿತಾಮಹ ಬ್ರಹ್ಮದೇವರನ್ನು ಕುರಿತು ತಪಸ್ಸುಮಾಡಿ ಅವರಿಂದ ಸಕಲ ಲೋಕಪಾಲಕರ ಆಧಿಪತ್ಯವನ್ನೂ, ಅಮರತ್ವವನ್ನೂ ಪಡೆಯಲು ಕಾತರಿಸಿ, ಆ ವಿಚಾರವನ್ನು ಪತ್ನಿಗೆ ಅರುಹಿ ಅವಳಿಂದ ಬೀಳ್ಕೊಳ್ಳಲು ದೈತ್ಯಸಾಮ್ರಾಜ್ಞಿಯ ಅಂತಪುರಕ್ಕೆ ತೆರಳಿದನು.

ಪತಿಯ ಆಗಮನದಿಂದ ಹರ್ಷಿತಳಾದ ಕಯಾಧುದೇವಿ ಹಿರಣ್ಯಕಶಿಪುವನ್ನು ಸ್ವಾಗತಿಸಿ, ಭಕ್ತಿಗೌರವದಿಂದ ಉಪಚರಿಸಿದಳು. ಹಿರಣ್ಯಕಶ್ಯಪನು ನಾರದರ ಉಪದೇಶ, ತನ್ನ ನಿಶ್ಚಯಗಳನ್ನು ಕಯಾಧುವಿಗೆ ತಿಳಿಸಿ ತಪಸ್ಸಿಗೆ ತನ್ನನ್ನು ಸಂತೋಷದಿಂದ ಕಳುಹಿಸಬೇಕೆಂದು ಹೇಳಿದನು.

ಕಯಾಧುವಿಗೆ ಪತಿಯವಾಕ್ಯವನ್ನಾಲಿಸಿ ಹರುಷವಾದರೂ ಪತಿಯ ವಿರಹ ವನ್ನು ಸಹಿಸಲಾಗದೆ, "ಪ್ರಾಣನಾಥ! ನೀವು ನೆರವೇರಿಸಲಿರುವ ಈ ತಪಸ್ಸು, ಎಷ್ಟು ವರ್ಷವಾಗುವುದು?" ಎಂದೆನಲು ಹಿರಣ್ಯಕಶ್ಯಪನು "ದೇವಿ! ಈ ತಪಸ್ಸು ಸುಮಾರು ಹತ್ತು ಸಹಸ್ರವರ್ಷಗಳ ಕಾಲ ನೆರವೇರುವುದು" ಎಂದನು.

ಆಗ ಕಯಾಧುವು "ಸ್ವಾಮಿ, ಹತ್ತು ಸಹಸ್ರವರ್ಷಗಳಷ್ಟು ದೀರ್ಘಕಾಲ ನೀವು ಹಸಿವು ತೃಷೆಗಳನ್ನೂ ಕಾಯಕ್ಲೇಶಾದಿಗಳನ್ನೂ ಸಹಿಸಬಲ್ಲಿರಾ? ಮೇಲಾಗಿ ಒಂದು ಕ್ಷಣವೂ ನನ್ನನ್ನು ಅಗಲಿರಲಾರದ ನೀವು ಹತ್ತು ಸಾವಿರ ವರ್ಷಗಳು ನನ್ನನ್ನು ಬಿಟ್ಟಿರಬಲ್ಲಿರಾ?" ಎಂದು ನಸುನಕ್ಕಳು.

ಹಿರಣ್ಯಕಶ್ಯಪನು "ಪ್ರಿಯೆ, ನಿನ್ನ ಮನದಿಂಗಿತವನ್ನರಿತೆನು. ನನ್ನ ವಿರಹವನ್ನು ಸಹಿಸಲಾಗದ ನೀನು ಹೀಗೆ ಹೇಳುತ್ತಿರುವೆ. ಕೇಳು, ದೇವಿ, ದೈತ್ಯರ ಅಭ್ಯುದಯ ಕ್ಷೇಮಗಳಿಗಾಗಿ ನಾನು ಎಷ್ಟೇ ಕಷ್ಟಗಳು ಬಂದೊದಗಿದರೂ ಎಲ್ಲವನ್ನೂ ಸಹಿಸುವೆನು. ನೀನು ಮಾತ್ರ ನನ್ನನ್ನು ಸಂತೋಷದಿಂದ ಕಳುಹಿಸಿ ಕೊಡಬೇಕು ಕಂಡೆಯಾ?" ಎಂದು ಹೇಳಿದನು.

ಪತಿಯ ವಿರಹವನ್ನುದೀರ್ಘಕಾಲ ಸಹಿಸಬೇಕಾಗುವುದೆಂದು ಚಿಂತೆಯಾದರೂ ಸಾಧ್ವೀಮಣಿಯಾದ ಕಯಾಧುವು ದೈತ್ಯರಾಜ್ಯದ ಹಿತ, ಪತಿಯ ಅಭ್ಯುದಯಗಳಿಗಾಗಿ ತನ್ನ ಸಂಕಟವನ್ನು ಸಂತೋಷದಿಂದ ಅನುಭವಿಸಲು ಸಿದ್ಧಳಾಗಿ ದಾಸಿಯರಿಂದ

ಆರತಿಯನ್ನು ತರಿಸಿ ಪತಿಗೆ ತಿಲಕವನ್ನು ಹಚ್ಚಿ ಆರತಿಯನ್ನು ಬೆಳಗಿ, ನಮಸ್ಕರಿಸಿ ಶುಭಕೋರಿ ಸಂತೋಷದಿಂದ ಹಿರಣ್ಯಕಶ್ಯಪನನ್ನು ತಪಸ್ಸಿಗೆ ಕಳುಹಿಸಿಕೊಟ್ಟಳು. ಹಿರಣ್ಯಕಶ್ಯಪನು ಪತ್ನಿಯಿಂದ ಬೀಳ್ಕೊಂಡು ತಪಸ್ಸಿಗಾಗಿ ಮಂದರ ಪರ್ವತಕ್ಕೆ ಪ್ರಯಾಣಬೆಳೆಸಿದನು.

## ೩. ಶಂಕುಕರ್ಣ ಮಾತೃಗರ್ಭ ಸೇರಿದ

ದೈತ್ಯಸಾಮ್ರಾಟನಾದ ಹಿರಣ್ಯಕಶ್ಯಪನು ತಪಸ್ಸಿಗಾಗಿ ಮಂದರಾಚಲಕ್ಕೆ ತೆರಳಿದ ವಿಚಾರವನ್ನು ಅರಿತ ದೇವತೆಗಳು ಕಳವಳಗೊಂಡು ಸತ್ಯಲೋಕಕ್ಕೆ ಆಗಮಿಸಿ ಬ್ರಹ್ಮದೇವರಲ್ಲಿ ಎಲ್ಲ ವಿಚಾರಗಳನ್ನು ವಿಜ್ಞಾಪಿಸಿ "ಪಿತಾಮಹ! ದೈತ್ಯರಾಜ ಹಿರಣ್ಯಕಶಿಪುವು ತಮ್ಮಿಂದ ಅವಧ್ಯತ್ವವರ ಪಡೆಯಲು ತಪಸ್ಸಿಗಾಗಿ ಮಂದರಾಚಲಕ್ಕೆ ತೆರಳಿದ್ದಾನೆ. ಏನಿಲ್ಲದೆ ಈಗ ನಮಗೆ ಅವನಿಂದ ಕಷ್ಟವಾಗುತ್ತಿದೆ. ಇನ್ನು ಅವಧ್ಯತ್ವವರವು ದೊರಕಿಬಿಟ್ಟರೆ, ಮುಂದೆ ನಮ್ಮ ಗತಿಯೇನು ಸ್ವಾಮಿ? ಸರ್ವಜ್ಞರಾದ ನಿಮಗೆ ತಿಳಿಯದ ವಿಷಯವೇನಿದೆ? ಮಹಾನುಭಾವರಾದ ನೀವು ಸುರರನ್ನು ರಕ್ಷಿಸಲು, ಸಜ್ಜನರಿಗೆ ಆ ದೈತ್ಯನಿಂದ ಆಗಬಹುದಾದ, ಇನ್ನೂ ಅಧಿಕವಾದ ಸಂಕಟಗಳನ್ನು ಪರಿಹರಿಸಿ ಕಾಪಾಡಲು ಏನಾದರೊಂದು ಉಪಾಯವನ್ನು ಚಿಂತಿಸ ಬೇಕು" ಎಂದು ವಿನಂತಿಸಿದರು.

ಬ್ರಹ್ಮದೇವರು ದೇವತೆಗಳನ್ನು ಸಮಯೋಚಿತ ವಾಕ್ಯಗಳಿಂದ ಸಮಾಧಾನ ಪಡಿಸಿ ಕಳುಹಿಸಿಕೊಟ್ಟರು.

೦ ೦ ೦ ೦

ಕಮಲಸಂಭವರಾದ ಶ್ರೀಬ್ರಹ್ಮದೇವರು ಚಿಂತಾಕ್ರಾಂತರಾದಂತೆ ಕುಳಿತಿರು ವಾಗ ಅಲ್ಲಿಗೆ ಬಂದ ಪರ್ವತ-ನಾರದರು ಬ್ರಹ್ಮದೇವರಿಗೆ ನಮಸ್ಕರಿಸಿ ಇಂತೆಂದರು.

**ಪರ್ವತ-ನಾರದ** : ಮಹಾಪ್ರಭು, ಬ್ರಹ್ಮದೇವ! ತಾವು ಗಾಢವಾದ ಚಿಂತೆಯಲ್ಲಿ ಮುಳುಗಿರುವಂತೆ ಭಾಸವಾಗುತ್ತಿದೆ. ಸಕಲಲೋಕಪಿತಮಹರಾದ ತಮಗೆ ಅದೆಂತಹ ಚಿಂತೆ ಸ್ವಾಮಿ? ತಮ್ಮ ಚಿಂತೆಗೆ ಕಾರಣವೇನೆಂದು ಈ ಕಿಂಕರರಿಗೆ ಅರುಹಿದಲ್ಲಿ ನಾವು ನಮ್ಮ ಯೋಗ್ಯತಾನುಸಾರ ಅದನ್ನು ಪರಿಹರಿಸಿ ಸೇವಿಸಲು ಆಶಿಸುತ್ತೇವೆ.

ಆಗ ಬ್ರಹ್ಮದೇವರು ಹಿರಣ್ಯಕಶ್ಯಪುವು ತಪಸ್ಸಿಗೆ ಯತ್ನಿಸುತ್ತಿರುವುದು, ಅವನು ಅಂತರ್ಯದಲ್ಲಿ ಸಕಲಲೋಕಾಧಿಪತ್ಯವನ್ನು ಬಯಸಿರುವುದು, ದೇವತೆಗಳ ಪ್ರಾರ್ಥನೆ ಮುಂತಾದ ಸಮಸ್ತ ವಿಚಾರವನ್ನೂ ಪರ್ವತ-ನಾರದರಿಗೆ ತಿಳಿಸಿ, ಹಿರಣ್ಯಕಶ್ಯಪನ ತಪಸ್ಸಿಗೆ ವಿಘ್ನತರಬೇಕೆಂದು ಆಜ್ಞಾಪಿಸಿದರು.

ಪರ್ವತ-ನಾರದರು "ಪಿತಾಮಹ! ಇದಾವ ದೊಡ್ಡ ಕಾರ್ಯ? ಆ ದೈತ್ಯನ ತಪಸ್ಸಿಗೆ ನಾವು ವಿಘ್ನವನ್ನುಂಟುಮಾಡುತ್ತೇವೆ. ತಾವು ಆಲೋಚಿಸಬಾರದು", ಎಂದು ವಿಜ್ಞಾಪಿಸಿ ಬ್ರಹ್ಮದೇವರ ಆಶೀರ್ವಾದ ಪಡೆದು ತೆರಳಿದರು. ಶ್ರೀಹರಿಯ ಸಂಕಲ್ಪ ನೆರವೇರುವುದೆಂದು ಬ್ರಹ್ಮದೇವರು ಸಂತೋಷಿಸಿದರು.

೦ ೦ ೦ ೦

ಅತಿ ರಮಣೀಯವಾದ ಮಂದರಪರ್ವತ ಪ್ರದೇಶ. ವಿವಿಧ ಗಿಡ ಮರ-ಲತೆಗಳಿಂದ ಆ ಪ್ರದೇಶವೆಲ್ಲ ಹಚ್ಚಹಸುರಾಗಿ ಶೋಭಿಸುತ್ತಿದೆ. ಪರ್ವತದ ಮೇಲ್ಭಾಗದಿಂದ ಮಂಗಳಕರ ತರಂಗಿಣಿಯು ಭೋರ್ಗರೆಯುತ್ತಾ ಹರಿಯುತ್ತಿದ್ದಾಳೆ. ಸೂರ್ಯೋದಯವಾಗಿ ಕೆಂಗಿರಣದ ಹೊಂಗಿರಣಗಳು ಆ ಪ್ರದೇಶವನ್ನೆಲ್ಲಾ ಮನೋಹರವಾಗಿ ಕಂಗೊಳಿಸುವಂತೆ ಮಾಡಿದೆ. ಪ್ರಕೃತಿಸೌಂದರ್ಯದಿಂದ ಎಲ್ಲರ ಮನಸ್ಸಿಗೂ ಆಹ್ಲಾದವನ್ನುಂಟುಮಾಡುತ್ತಿರುವ ಮಂದರಪರ್ವತಕ್ಕೆ ದೈತ್ಯೇಂದ್ರನಾದ ಹಿರಣ್ಯಕಶ್ಯಪನು ತಪಸ್ಸನ್ನೆಸಗಲು ಬಂದಿದ್ದಾನೆ. ರಾಜೋಚಿತ ಉಡುಪು, ಆಭರಣ ಗಳು, ಗದೆ, ಧನುರ್ಬಾಣಗಳನ್ನೆಲ್ಲಾ ಒಂದೆಡೆ ಇಟ್ಟು ದೈತ್ಯರಾಜ ನದಿಯಲ್ಲಿ ಮಿಂದು ಮಡಿಯುಟ್ಟು ತಪಸ್ಸಿಗೆ ಪ್ರಾರಂಭಿಸಲು ಸಂಕಲ್ಪಕ್ಕೆ ಸಿದ್ಧನಾಗಿ ಕುಳಿತಿದ್ದಾನೆ. ಸಂಕಲ್ಪ ಪ್ರಾರಂಭಿಸಿದ "......ಏವಂಗುಣ ವಿಶೇಷಣ ವಿಶಿಷ್ಟಾಯಾಂ ಶುಭತಿಥೌ ಮಮ ಅವಧ್ಯತ್ವ ಪ್ರಾಪ್ತ್ಯರ್ಥಂ ಸಕಲಲೋಕಾಧಿಪತ್ಯಸಿದ್ಧ್ಯರ್ಥಂ ಚ ತತ್ಫಲಸಿದ್ಧಿ ವರಪ್ರಾಪ್ತಿ ಪರ್ಯಂತಂ......." ಎಂದು ಹೇಳುತ್ತಿರುವಂತೆಯೇ, ಆ ಹೊತ್ತಿಗಾಗಲೆ ಅಲ್ಲಿಗೆ ಕಲವಂಕ (ಗುಬ್ಬಿ)ರೂಪದಿಂದ ಬಂದು ಆ ದೈತ್ಯನ ಸನ್ನಾಹವನ್ನು ಗಮನಿಸುತ್ತಿದ್ದ ಪರ್ವತ-ನಾರದರು ಹಾರಿಬಂದು ಆ ದೈತ್ಯನ ಮುಂಭಾಗದಲ್ಲಿದ್ದ ಮರದ ಟೊಂಗೆಯ ಮೇಲೆ ಕುಳಿತು ಗಟ್ಟಿಯಾಗಿ "ಓಂ ನಮೋ ನಾರಾಯಣಾಯ" ಎಂದು ಉಚ್ಚರಿಸಿದರು.

ನಾರಾಯಣನ ನಾಮಶ್ರವಣವಾದ ಕೂಡಲೇ ದೈತ್ಯನ ಕರಪುಟದಲ್ಲಿದ್ದ ಸಂಕಲ್ಪ ಜಲವು ಚೆಲ್ಲಿ ಹೋಯಿತು. ಅವನ ಹೃದಯದಲ್ಲಿ ಹರಿನಾಮ ವೆಂಬ ಶೂಲ ನೆಟ್ಟಂತಾಯಿತು. ದೈತ್ಯರಾಜ ಕೋಪ ತಾಪಗಳಿಂದ ತತ್ತರಿಸಿದ. ಕೂಡಲೇ ಕರಗಳಿಂದ ಕಿವಿ ಮುಚ್ಚಿಕೊಂಡು "ಶಾಂತಂ ಪಾಪಂ" ಎಂದುಚ್ಚರಿಸಿ ಪುನಃ ಆಚಮನ ಮಾಡಿ ಸಂಕಲ್ಪ ಪ್ರಾರಂಭಿಸಿದ. ಕಲವಂಕ ಪಕ್ಷಿಗಳು ಮತ್ತೆ "ಓಂ ನಮೋ ನಾರಾಯಣಾಯ" ಎಂದು ಹರಿನಾಮ ಸ್ಮರಣೆ ಮಾಡಿದವು. ಶತ್ರುನಾಮ ಶ್ರವಣದಿಂದ ಕ್ರೋಧಾಂಧನಾದ ಹಿರಣ್ಯಕಶಿಪುವು ಕರದಲ್ಲಿ ಹಿಡಿದಿದ್ದ ಸಂಕಲ್ಪ ಜಲವನ್ನು ಚೆಲ್ಲಿ "ಶಾಂತಂ ಪಾಪಂ, ಇದೇನೀ ವೈಪರೀತ್ಯ! ಕುಲವೈರಿಯ ಹೆಸರು ಕೇಳಿ ನಾನು ಅಪವಿತ್ರನಾದೆ. ಛೇ ಛೇ, ಹೀಗಾಗಬಾರದಿತ್ತು. ಹೂಂ, ಹೋಗಲಿ, ಈಗ ಸರಿಯಾಗಿ ಸಂಕಲ್ಪ ಮಾಡಿ ತಪಸ್ಸನ್ನು ಪ್ರಾರಂಭಿಸುತ್ತೇನೆ" ಎಂದು ಬಡಬಡಿಸಿ, ಪುನರಾಚಮನ ಪ್ರಾಣಾಯಾಮ ಪೂರ್ವಕ ದೃಢಚಿತ್ತನಾಗಿ ಸಂಕಲ್ಪ ಮಾಡತೊಡಗಿದನು. ಕೂಡಲೇ ಕಲವಂಕ ಪಕ್ಷಿರೂಪದ ಪರ್ವತ-ನಾರದರು ಉಚ್ಚ ಸ್ವರದಲ್ಲಿ "ಓಂ ನಮೋ ನಾರಾಯಣಾಯ" ಎಂದು ಉಚ್ಚರಿಸಿದರು.

ಆಜನ್ಮ ವೈರಿಯಾದ ಶ್ರೀಹರಿಯ ನಾಮವನ್ನು ಪುನಃ ಪುನಃ ಕೇಳಿದ ಹಿರಣ್ಯ ಕಶಿಪುವು ಕ್ರುದ್ಧನಾಗಿ ಮೇಲೆದ್ದು ನಿಂತನು. ಕೋಪ ತಾಪಗಳಿಂದ ಅವನ ಶರೀರ

ಕಂಪಿಸಹತ್ತಿತು. "ಹಾಯ್ ಹಾಯ್, ಇದೇನು ವಿಧಿಯ ವಿಡಂಬನೆ, ಪಾವನ ತಪಸ್ಸನ್ನೆಸಗಲು ಮಗ್ನನಾದ ನಾನು ಆ ಕಪಟಿ ಹರಿಯ ನಾಮಶ್ರವಣ ಮಾಡಬೇಕಾಯಿತಲ್ಲ! ಯಾರು ಹೀಗೆ ಉಚ್ಚರಿಸುತ್ತಿರುವವರು? ನನ್ನೆದುರು ನನ್ನ ವೈರಿಯ ಹೆಸರನ್ನು ಹೇಳಲು ಅದೆಷ್ಟು ಧೈರ್ಯ" ಎಂದು ಸುತ್ತಲೂ ದೃಷ್ಟಿಹರಿಸಿದನು. ಮುಂದೆ ಟೊಂಗೆಯ ಮೇಲೆ ಕುಳಿತಿರುವ ಆ ಗುಬ್ಬಿಗಳು ಅವನ ದೃಷ್ಟಿಗೆ ಗೋಚರಿಸಿದವು. ಕೂಡಲೇ "ಅಬ್ಬಾ! ಈ ಅಲ್ಪ ಪಕ್ಷಿಗಳಿಗೆ ಇಷ್ಟೊಂದು ಧೈರ್ಯವೇ?" ಎಂದು ಧನುಸ್ಸಿಗೆ ಶರಸಂಧಾನ ಮಾಡಿದನು. ಅದನ್ನು ಕಂಡ ಪರ್ವತ-ನಾರದರು ತಕ್ಷಣ ಅಲ್ಲಿಂದ ಹಾರಿ ಅದೃಶ್ಯರಾದರು.

ಪಕ್ಷಿಗಳು ಹಾರಿಹೋದುವನ್ನು ಕಂಡು ಧನುರ್ಬಾಣಗಳನ್ನು ಕೆಳಗಿರಿಸಿ ಆ ದೈತ್ಯ ಕುಳಿತ. ಆ ಹೊತ್ತಿಗೆ ಅವನ ಕೋಪ ಇಳಿಮುಖವಾಗಿತ್ತು. ಅವನಲ್ಲಿ ಜಯ ಆವಿಷ್ಟನಾದ! "ನಾರಾಯಣ, ಆಹಾ ನಾರಾಯಣ ಎಂದವಲ್ಲವೇ ಆ ಪಕ್ಷಿಗಳು" ಎಂದಚ್ಚರಿಯಿಂದ ಹಿರಣ್ಯಕಶ್ಯಪನು ಮೆಲ್ಲನೆ ತಾನೂ ಸಹ 'ನಾರಾಯಣ' ಎನ್ನುತ್ತಿರುವಾಗ ಅವನ ಮನಸ್ಸು ಅವನಿಗರಿವಾಗದಂತೆಯೇ ಪ್ರಶಾಂತವಾಗಿತ್ತು. ಇದೇ ಸಮಯವನ್ನು ನಿರೀಕ್ಷಿಸುತ್ತಿದ್ದ ಶಂಕುಕರ್ಣನು ಮುಖದ್ವಾರ ಹಿರಣ್ಯಕಶ್ಯಪನ ಶರೀರವನ್ನು ಪ್ರವೇಶಿಸಿಬಿಟ್ಟನು! ಮತ್ತೆ ಹಿರಣ್ಯಕಶಿಪುವಿನಲ್ಲಿ ಮೂಲ ದೈತ್ಯ ವಿಜೃಂಭಿಸಿದ.

ತನ್ನ ಪರಮ ವೈರಿಯಾದ ನಾರಾಯಣನ ನಾಮವನ್ನುಚ್ಚರಿಸಿ ಆ ಕಲವಂಕ ಪಕ್ಷಿಗಳು ಹಾರಿ ಮಾಯವಾದವಲ್ಲಾ ಎಂದು ಸಿಟ್ಟು, ತಾಪ, ಅಸಮಾಧಾನ ಗಳಿಂದ ದೈತ್ಯರಾಜ ಚಿಂತಾಕ್ರಾಂತನಾದ, ಮುಂದಿನ ಕರ್ತವ್ಯವೇನು? ಎಂದು ಯೋಚಿಸಲಾರಂಭಿಸಿದ, ಈಗ ತಾನು ಮಹೋದ್ದೇಶದಿಂದ ಕೈಗೊಳ್ಳಲಿದ್ದ ತಪಸ್ಸನ್ನು ಮಾಡುವುದೇ ಬಿಡುವುದೇ? ಎಂಬ ಗೊಂದಲದಲ್ಲಿ ಬಿದ್ದನು. ಶತ್ರುವಾದ ಹರಿಯ ನಾಮ ಶ್ರವಣ ಮಾಡಿರುವುದು ಅಪಶಕುನವೆಂದು ಭಾವಿಸಿದ ಅವನು ಕ್ರೋಧ ಸಂತಪ್ತನಾಗಿ ತಪಸ್ಸನ್ನು ಬಿಟ್ಟು "ಶತ್ರುನಾಮ ಶ್ರವಣದಿಂದ ತಪಸ್ಸಿಗೆ ವಿಘ್ನವಾಯಿತು. ಹೂಂ, ಮತ್ತೊಮ್ಮೆ ಸುಮುಹೂರ್ತದಲ್ಲಿ ತಪಸ್ಸನ್ನು ಪ್ರಾರಂಭಿಸುವೆನು. ಈಗ ಅಪಶಕುನವಾಗಿದೆ" ಎಂದು ನಿಶ್ಚಯಿಸಿ ರಾಜಧಾನಿಗೆ ಹಿಂದಿರುಗಿದನು.

o o o o

ರಾಜಧಾನಿಗೆ ಆಗಮಿಸಿದ ದೈತ್ಯರಾಜನು ಕಯಾಧುವಿನ ಅಂತಃಪುರಕ್ಕೆ ತೆರಳಿದನು. ಮರಳಿ ಬಂದ ಮನೋವಲ್ಲಭನನ್ನು ಕಂಡು ರಾಣಿಯ ಮುಖದಲ್ಲಿ ಮಂದಹಾಸ ಮಿನುಗಿತು. ಅಂದವಳು ಋತುಸ್ನಾತಳಾಗಿದ್ದಳು. ಪತಿಯ ಪಾದಗಳಿಗೆರಗಿ "ಪ್ರಾಣವಲ್ಲಭ! ಪಿತಾಮಹನನ್ನು ಒಲಿಸಿ ವರಪಡೆಯಲು ತೆರಳಿದ ನೀವು ಇದೇನು, ಮರಳಿ ಬಂದಿರುವಿರಲ್ಲ! ತಪವನ್ನಾಚರಿಸಲಿಲ್ಲವೇ? ಅಥವಾ ಅದಕ್ಕೇನಾದರೂ ಕುಂದುಂಟಾಯಿತೆ? ಇಲ್ಲವೇ ನಿಮಗೆ ಪ್ರಾಣಾಧಿಕಳಾದ ನನ್ನ ನೆನಪುಂಟಾಗಿ ತಪಸ್ಸನ್ನು ಬಿಟ್ಟು ಹಿಂದಿರುಗಿದಿರಾ"

ಎಂದು ಓರೆನೋಟ ಬೀರುತ್ತಾ ನಗುಮುಖದಿಂದ ಪ್ರಶ್ನಿಸಿದಳು. ದೈತ್ಯೇಂದ್ರನೂ ನಸುನಗುತ್ತಾ "ಪ್ರಿಯೇ, ಆ ವಿಚಾರವನ್ನು ಸಾವಾಕಾಶವಾಗಿ ಹೇಳುತ್ತೇನೆ" ಎಂದಿಷ್ಟೇ ಹೇಳಿ ಸ್ನಾನಾನ್ಹಿಕಾದಿಗಳಿಗಾಗಿ ತೆರಳಿ ಆ ಕಾರ್ಯಗಳಲ್ಲಿ ಮಗ್ನನಾದನು.

ಮಾಧ್ಯಾನ್ಹಿಕ ಕ್ರಿಯೆಗಳನ್ನು ಪೂರೈಸಿ, ಭೋಜನಮಾಡಿ, ಸಚಿವ ಸೇನಾನಿಗಳೊಡನೆ ಮಾತುಕತೆ ನಡೆಸಿ ಸ್ವಲ್ಪ ವಿಶ್ರಾಂತಿ ಪಡೆದ ಹಿರಣ್ಯಕಶ್ಯಪನು ರಾತ್ರಿ ಕಯಾಧುವಿನ ಅಂತಃಪುರಕ್ಕೆ ಆಗಮಿಸಿದನು.

ಸುಂದರವಾದ ರಾತ್ರಿ! ಅಂಬರದಲ್ಲಿ ಚಂದ್ರಮನು ನಸುನಗುತ್ತಿರುವನೋ ಎಂಬಂತೆ ಮನೋಹರವಾಗಿ ಹಾಲು ಬೆಳದಿಂಗಳನ್ನು ಚೆಲ್ಲುತ್ತಾ ನಲಿಯುತ್ತಿದ್ದಾನೆ. ವಿವಿಧ ಕುಸುಮ ಸುಗಂಧ ಸೌರಭವನ್ನು ಬೀರುತ್ತಾ ಮಂದಮಾರುತನು ಮನಸ್ಸಿಗೆ ಆಹ್ಲಾದವನ್ನುಂಟುಮಾಡುತ್ತಿದ್ದಾನೆ! ಏಕಾಂತಸಮಯ. ಹಂಸಶಯ್ಯೆಯಲ್ಲಿ ಸುಂದರಿಯಾದ ಪ್ರಿಯಪತ್ನಿಯ ಬಾಹುಬಂಧನದಲ್ಲಿ ಹರ್ಷ-ಉಲ್ಲಾಸಗಳಿಂದ ಮೈಮರೆತು ಪ್ರೇಮಸಾಮ್ರಾಜ್ಯದಲ್ಲಿ ವಿಹರಿಸುತ್ತಿದ್ದಾನೆ ಹಿರಣ್ಯಕಶಿಪು. ಮನಸ್ಸು ಪ್ರಶಾಂತವಾಗಿದೆ. ಪ್ರೇಯಸಿಯ ಆಲಿಂಗನದ ಅಂಗಸಂಗಸುಖದಲ್ಲಿ ಪ್ರಸನ್ನಚಿತ್ತನಾಗಿದ್ದಾನೆ.

ಪತಿಯ ಅಪ್ಪುಗೆಯಲ್ಲಿ ಮೈಮರೆತ ಕಯಾಧುವು ಮುಗುಳು ನಗೆಯನ್ನು ಹೊರಸೂಸುತ್ತಾ- "ಪ್ರಾಣಕಾಂತ! ನಾನು ಅಂದು ಹೇಳಿದಂತೆಯೇ ಆಯಿತಲ್ಲಾ! ನಾನಂದು ತಮ್ಮನ್ನು "ಸ್ವಾಮಿ, ತಾವು ತಪಸ್ಸಿನಿಂದ ಯಾವಾಗ ಹಿಂದಿರುಗುವಿರಿ" ಎಂದು ಪ್ರಶ್ನಿಸಿದಾಗ ನೀವು "ವರ್ಷಾಣಾಮಯುತಂ ಮೇ ತಪಸ್ತ್ವಿದಮ್-" ನನ್ನೀ ತಪಸ್ಸು ಹತ್ತು ವರ್ಷಗಳೆಂದು ಹೇಳಿದ್ದೀರಿ. "ತತ್ಕಿಮರ್ಥಂ ಮಹಾರಾಜ ಸಾಂಪ್ರತಂ ತ್ಯಕ್ತವಾನ್ ವ್ರತಮ್" ಆದ್ದರಿಂದ ಏತಕ್ಕಾಗಿ ನೀವು ಆ ತಪೋರೂಪ ವ್ರತವನ್ನು ತ್ಯಜಿಸಿ ಬಂದಿರಿ? ಸ್ವಾಮಿ, ನೀವು ನನ್ನ ಪ್ರಾಣವಲ್ಲಭರು ಆದುದರಿಂದ ಪ್ರೀತಿಯಿಂದ ಕೇಳುತ್ತಿದ್ದೇನೆ. ಸತ್ಯ ವಿಚಾರವನ್ನು ಹೇಳಿರಿ, ಎಂದು ಕೇಳಿದಳು.

ಪ್ರಿಯಪತ್ನಿಯ ವಚನವನ್ನಾಲಿಸಿ ನಸುನಗುತ್ತಾ ಹಿರಣ್ಯಕಶ್ಯಪನು 'ದೇವಿ, ನಾನು ತಪಸ್ಸು ಮಾಡದೆ ಹಿಂದಿರುಗಿದ ಕಾರಣವನ್ನು ಹೇಳುವೆನು, ಕೇಳು. ಮಹಾನಂದಪ್ರದವೂ ಪ್ರಶಾಂತವೂ ಆದ ಆ ತಪೋಭೂಮಿಯಲ್ಲಿ ನಾನು ತಪಸ್ಸಿಗಾಗಿ ಸಂಕಲ್ಪ ಮಾಡುತ್ತಿರುವಾಗ ಎರಡು ಕಲವಂಕ ಪಕ್ಷಿಗಳು ಬಂದು ನನ್ನೆದುರು ಮರದ ಮೇಲೆ ಕುಳಿತು "ಓಂ ನಮೋ ನಾರಾಯಣಾಯ" ಎಂದು ಮೂರುಬಾರಿ ಉಚ್ಚರಿಸಿ ಹಾರಿಹೋದವು! ಶತ್ರುವಾದ ನಾರಾಯಣನ ನಾಮವನ್ನು ಕೇಳಿದ್ದರಿಂದ ಅಪಶಕುನವೆಂದು ಭಾವಿಸಿ ನಾನು ರಾಜಧಾನಿಗೆ ಮರಳಿಬಂದೆನು" ಎಂದು ಹೇಳಿದನು.

ಏಕಾಂತದಲ್ಲಿ ಪತ್ನಿಯೊಡನೆ ಸರಸದಲ್ಲಿ ಇರುವಾಗ "ಓಂ ನಮೋ ನಾರಾಯಣಾಯ" ಎಂದು ಹೇಳುತಿರುವಾಗಲೇ 'ವೀರ್ಯದ್ರಾವೋಭವತ್ತದಾ'

'ರೇತಸ್ಸಿಚಾ ಪಿತ್ರಾ ಸಂಬಂಧಃ ಎಂಬಂತೆ ಅದೇ ಕಾಲವನ್ನು ನಿರೀಕ್ಷಿಸುತ್ತಿದ್ದ ಶಂಕುಕರ್ಣನು ದೈತ್ಯರಾಜನ ದೇಹದಿಂದ ಕಯಾಧುವಿನ ಗರ್ಭವನ್ನು ಸೇರಿದನು!* ಹೀಗೆ ಶ್ರೀ ಹರಿಭಕ್ತನಾದ ಕರ್ಮಜಯದೇವ ಶಂಕುಕರ್ಣನು "ಓಂ ನಮೋ ನಾರಾಯಣಾಯ" ಎಂಬ ನಾಮೋಚ್ಚಾರಣಕಾಲದಲ್ಲಿಯೇ ಶ್ರೀಹರಿಯ ಸಂಕಲ್ಪದಂತೆ ದೈತ್ಯಸಾಮ್ರಾಜ್ಞಿಯ ಗರ್ಭವನ್ನು ಪ್ರವೇಶಿಸಿದನು.

೦ ೦ ೦ ೦

ದಿನಗಳುರುಳಿದವು. ಕೊನೆಗೆ ಒಂದು ದಿನ ಹಿರಣ್ಯಕಶ್ಯಪನು ಅವಧ್ಯತ್ವ ದವರವನ್ನು ಪಡೆಯಲು ತುಂಬಿದ ಗರ್ಭಿಣಿಯಾದ ಕಯಾಧುವನ್ನು ಬಿಟ್ಟು, ಅವಳಿಂದ ಬೀಳ್ಕೊಂಡು ತಪಸ್ಸಿಗಾಗಿ ಮಂದರಾಚಲಕ್ಕೆ ಹೊರಟನು.

## ೪. ಕಯಾಧುವಿನ ಗರ್ಭರಕ್ಷಣೆ

ಮಂದರಾಚಲದಲ್ಲಿ ಹಿರಣ್ಯಕಶ್ಯಪನು ಚತುರಾನನರನ್ನು ಒಲಿಸಲು ಘೋರ ವಾದ ತಪಸ್ಸನ್ನು ಪ್ರಾರಂಭಿಸಿದನು.

ಇತ್ತ ದೈತ್ಯಸಾಮ್ರಾಟನು ತಪಸ್ಸಿಗಾಗಿ ತೆರಳಿದ ವಿಚಾರವನ್ನರಿತ ಇಂದ್ರ ದೇವರು ದೇವತೆಗಳಿಂದೊಡಗೂಡಿ ದೈತ್ಯರಾಜ್ಯವನ್ನು ಆಕ್ರಮಿಸಿ, ದೈತ್ಯರನ್ನು ಅಲ್ಲಿಂದ ಓಡಿಸಿ ದೈತ್ಯಸಾಮ್ರಾಜ್ಞಿಯಾದ ಕಯಾಧುವು ಗರ್ಭಿಣಿಯಾಗಿರುವುದನ್ನು ಅರಿತು ಶತ್ರುಶೇಷವನ್ನು ಉಳಿಸಬಾರದೆಂದು ಕಯಾಧುರವಿನ ಗರ್ಭವನ್ನು ನಾಶಪಡಿಸಲಿಚ್ಛಿಸಿ, ದೀನಳೂ, ಅಬಲೆಯೂ ಆದ ಕಯಾಧುವನ್ನು ಸೆರೆ ಹಿಡಿದು ಎಳೆದೊಯ್ದನು.

ಅದೇ ವೇಳೆಗೆ ದೈವಯೋಗದಿಂದ ನಾರದರು ಭಗವನ್ನಾಮ ಸಂಕೀರ್ತನ ಮಾಡುತ್ತಾ ಅಲ್ಲಿಗೆ ದಯಮಾಡಿಸಿದರು. ಇಂದ್ರನು ಕಯಾಧುವನ್ನು ಸೆರೆ ಹಿಡಿದಿರು ವುದನ್ನರಿತ ನಾರದರು ಇಂದ್ರನಿಗೆ ಬುದ್ಧಿಹೇಳಿ ಕಯಾಧುವಿನ ಗರ್ಭದಲ್ಲಿ ಸಾಕ್ಷಾತ್ ವಾಯ್ವಾವೇಶಯುಕ್ತನಾದ ಮಹಾ ಭಾಗವತೋತ್ತಮನಿರುವುದರಿಂದ ಅವನನ್ನು ಸಂಹರಿಸಲು ಜಗತ್ತಿನಲ್ಲಿ ಯಾರೂ ಸಮರ್ಥರಲ್ಲ! ಆ ಶ್ರೀಹರಿಭಕ್ತನಿಂದಲೇ ದೇವತೆಗಳ ಮತ್ತು ಸಮಸ್ತ ಜಗತ್ತಿನ ಕಲ್ಯಾಣವಾಗುವುದು- ಮುಂತಾಗಿ ಉಪದೇಶಿಸಿ ಕಯಾಧುವಿನ ಗರ್ಭಸ್ಥಶಿಶುವನ್ನು ರಕ್ಷಿಸಿದರು. ಇಂದ್ರನು ಜ್ಞಾನ ದೃಷ್ಟಿಯಿಂದ ನಾರದರ ಮಾತಿನ ಸತ್ಯತೆಯನ್ನರಿತು ಕಯಾಧುವಿಗೆ ಪ್ರದಕ್ಷಿಣೆಮಾಡಿ ಮನಸಾ ಉದರಸ್ಥ ವಾಯುದೇವರಿಗೆ ನಮಿಸಿ ತೆರಳಿದನು.*

*1) "ಋತು ಕಾಲೇ ತು ಸಂಪ್ರಾಪ್ತೇ ಜಾತೋ ಗರ್ಭಸ್ತ ದೈವ ಹಿ ||
2) "ಓಂ ರೇತಸ್ಸಿಗ್ಯೋಽಥ ಓಂ" - ಬ್ರ.ಸೂ-೩-೧-೨೮.
3) "ಓಂ ಯೋನೇಶ್ಶರೀರಂ ಓಂ"- ಬ್ರ.ಸೂ-೩.೧.೨೯.
1 ಇಂದ್ರಸ್ತು ರಾಜಮಹಿಷೀಂ ಮಾತರಂ ಮಮ ಚಾಗ್ರಹೀತ್ | ನಿಯಮಾನಾಂ ಭಯೋದ್ವಿಗ್ನಾಂ ರುದಂತೀಂ ಕುರರೀಮಿವ || ಯದೃಚ್ಛಯಾಗತಸ್ತತ್ರ ದೇವರ್ಷಿರದೃಶೇ ಪಥಿ || - ಭಾಗವತ-೭-೭-೭.
ಇತ್ಯುಕ್ತಸ್ತಾಂ ವಿಹಾಯೇಂದ್ರೋ ದೇವರ್ಷೇರ್ಮಾನಯನ್ ವಚಃ | ಅನಂತಪ್ರಿಯಭಕ್ತ್ಯೈನಾಂ ಪರಿಕ್ರಮ್ಯ ದಿವಂ ಯಯೌ || ಭಾಗವತ -೭-೭-೧೧.

ಆಗ ಕಯಾಧುವು ಹರ್ಷಭರಿತಳಾಗಿ "ಸ್ವಾಮಿ, ಕರುಣಾಳುಗಳಾದ ನೀವು ಸಕಾಲದಲ್ಲಿ ಬಂದು ನನ್ನನ್ನೂ ನನ್ನ ಗರ್ಭಸ್ಥ ಶಿಶುವನ್ನೂ ಕಾಪಾಡಿದಿರಿ. ಇಕೋ ನಿಮಗೆ ನನ್ನ ಅನಂತ ವಂದನೆಗಳು" ಎಂದು ನಮಸ್ಕರಿಸಿದಳು. ನಾರದರು "ಪುತ್ರಿ! ನಿನ್ನ ವಿಪತ್ತು ದೂರಾಯಿತು. ಚಿಂತಿಸಬೇಡ. ನಿನ್ನ ಪತಿಯು ತಪಸ್ಸಿನಿಂದ ಹಿಂದಿರುಗುವವರೆಗೂ ನೀನು ನನ್ನ ಆಶ್ರಮದಲ್ಲಿ ಪ್ರಸನ್ನ ಚಿತ್ತಳಾಗಿ, ಭಗವಚ್ಚಿಂತನ ಮಾಡುತ್ತಾ ಕಾಲಾಪನೆ ಮಾಡಮ್ಮಾ" ಎಂದು ಹೇಳಿ ಅವಳನ್ನು ತಮ್ಮ ಆಶ್ರಮಕ್ಕೆ ಕರೆದ್ಯೊದರು1

ನಾರದರ ಆಶ್ರಮದಲ್ಲಿ ಮಹಾರಾಣಿ ಕಯಾಧುದೇವಿಯು ಸುಪ್ರಸನ್ನಳಾಗಿ ಕಾಲಯಾಪನೆ ಮಾಡತೊಡಗಿದ್ದಳು.2 ಆಶ್ರಮವಾಸಿಗಳಾದ ಋಷಿಪತ್ನಿಯರ ಸಹ ವಾಸದಲ್ಲಿ ಅವಳ ಮನಸ್ಸು ಬರುಬರುತ್ತಾ ವಿಶುದ್ಧವಾಗಹತ್ತಿತು. ಪಂಚ ಪಂಚ ಉಷಃಕಾಲದಲ್ಲಿ ಎದ್ದು ಋಷಿಪತ್ನಿಯರೊಡನೆ ನದಿಯಲ್ಲಿಮಿಂದು ಭಗವದ್ಧ್ಯಾನ ಪರಳಾದರೆಂದರೆ ಅವಳಿಗೆ ಇಹಲೋಕದ ಸ್ಮೃತಿಯೇ ತಪ್ಪಿದಂತಾಗುವುದು. ಋಷಿ ಪತ್ನಿಯರು ಬೇಡಬೇಡವೆಂದು ತಡೆದರೂ ಅವಳು ಸ್ವತಃ ನಾರದರ ಆಹ್ನಿಕ-ದೇವ ಪೂಜಾದಿಗಳಿಗೆ ಬೇಕಾದ ಸಮಸ್ತ ಸಾಧನಗಳನ್ನೂ ಅಣಿಮಾಡುವಳು. ಸ್ವಲ್ಪವೂ ಬೇಸರವಿಲ್ಲದೆ ಶ್ರೀ ಹರಿಯ ಸೇವೆಯಲ್ಲಿ ಭಾಗಿಯಾಗಿ ಪುಣ್ಯಸಾಧನೆ ಮಾಡಿ ಕೊಳ್ಳುವಳು. ಗುರುಹಿರಿಯರ ಸೇವೆಯಲ್ಲಿ ಬಹಳ ಆದರ, ಸ್ವಲ್ಪವೂ ಉದಾಸೀನವಿಲ್ಲ. ವ್ರತ, ನಿಯಮ, ಉಪವಾಸಗಳಿಂದ ದೇಹವನ್ನು ದಂಡಿಸಿ ಸರ್ವದಾ ಸತ್ಕಾಲ ಕ್ಷೇಪನಿರತಳಾಗಿದ್ದ ಕಯಾಧುವು ಓರ್ವ ಯೋಗಿನಿಯಂತೆ, ತಪಸ್ವಿನಿಯಂತೆ ಕಾಣು ತ್ತಿದ್ದಳು. ನಿಜ,3 ಜಗನ್ಮಾನ್ಯ ಭಾಗವತಶಿರೋಮಣಿಯನ್ನು ಉದರದಲ್ಲಿ ಧರಿಸಿದ್ದ ಆ ಮಹಾತಾಯಿಯು ಸಾಕ್ಷಾದ್ವಾಯ್ವಾವೇಶಯುಕ್ತನಾದ, ಲೋಕಕಲ್ಯಾಣಕಾರಕನಾದ ಶ್ರೀ ಹರಿಭಕ್ತಾಗ್ರಣಿಯನ್ನು ಪಡೆಯಲಿರುವ ಆಕೆಯು ಒಂದು ತಪಸ್ಸನ್ನೇ ಆಚರಿಸ ಬೇಕಾಗಿತ್ತಲ್ಲವೇ? ಶ್ರೀ ಹರಿಯೇ ಅವೊಂದು ಅವಕಾಶವನ್ನವಳಿಗೆ ತಂದಿತ್ತು ಈ ವಿಧವಾದ ಪವಿತ್ರಾಚರಣೆಯಲ್ಲಿ ಅವಳು ತೊಡಗುವಂತೆ ಮಾಡಿದ್ದಾನೆಂದು ಹೇಳಬಹುದು. ಜಗತ್ಪ್ರಾಣನಾದ ಸಮೀರಣನ ಪರಮಾವೇಶಯುಕ್ತನಾದ ಶಂಕುಕರ್ಣ ದೇವತೆಗೆ ಜನ್ಮನೀಯುವ ಆ ತಾಯಿಯ ಆಚಾರ-ವಿಚಾರ ನಡೆ-ನುಡಿಗಳೆಲ್ಲ ಉತ್ಕೃಷ್ಟವಾಗರಬೇಕಾದುದು ಸಹಜವಷ್ಟೆ! ಕಯಾಧೂ ದೇವಿಯ ಈ ಬಗೆಯ ಸಾತ್ವಿಕ ಆಚರಣೆ, ಅವಳ ವಿನಯ-ಭಕ್ತಿ-ಶ್ರದ್ಧೆ-ಗಾಂಭೀರ್ಯಾದಿ ಸದ್ಗುಣಗಳನ್ನು

---

1 ತತೋ ನೋ ಮಾತರಮೃಷಿಃ ಸಮಾನೀಯ ನಿಜಾಶ್ರಮಮ್ |
ಆಶ್ವಾಸ್ಯಾ ಹೋಷ್ಯತಾಂ ವತ್ಸೇ! ಯಾವತ್ತೇ ಭರ್ತುರಾಗಮಃ || -ಭಾಗವತ

2 ತಥೇತ್ಯವಾತ್ಸೀದ್ದೇವರ್ಷೇಃ ರಂತಿಸಾಪ್ಯಕುತೋಭಯಾ | ಯಾವದ್ದೈತ್ಯಪತಿ
ರ್ಘೋರಾತ್ತಪಸೋ ನ್ಯವರ್ತತ || -ಭಾಗವತ-೭-೭-೧೩

3 "ಋಷಿಂ ಪರ್ಯಚರತ್ತತ್ರ ಭಕ್ತ್ಯಾಪರಮಯಾ ಸತಿ" || -ಭಾಗವತ

ಕಂಡು ಋಷಿಪತ್ನಿಯರೂ ವಿಸ್ಮಿತರಾಗುತ್ತಿದ್ದರು. ಅವಳ ನಿರ್ಮಲವಾದ ಮನಸ್ಸು ಶ್ರದ್ಧಾ-ಭಕ್ತಿ-ಸೇವೆಗಳನ್ನು ಕಂಡು ಸ್ವಯಂ ನಾರದ ಮಹರ್ಷಿಗಳೂ ಮುಗ್ಧರಾಗುತ್ತಿದ್ದರು. ಅವಳ ಸದ್ಗುಣ-ಸೇವೆಗಳಿಂದ ಸುಪ್ರೀತರಾದ ದೇವರ್ಷಿಗಳು ಅವಳಲ್ಲಿ ಪಿತೃವತ್ಪ್ರೇಮ-ವಾತ್ಸಲ್ಯಗಳನ್ನು ತೋರುತ್ತಿದ್ದರು. ಕಯಾಧುವಿಗೆ ಪುರಾಣಾದಿಗಳಲ್ಲಿ ಉಕ್ತವಾದ ಪರಮಾತ್ಮನ ಅಮರಚರಿತೆ, ಮಹಾಮಹಿಮೆ, ಲೀಲಾವಿಲಾಸಗಳನ್ನು ಶ್ರೀಹರಿತತ್ವಗಳನ್ನೂ ಶ್ರವಣಮಾಡಿಸುತ್ತಿದ್ದರು. ಹೀಗೆ ಕಯಾಧೂದೇವಿಯು ನಾರದರ ಆಶ್ರಮದಲ್ಲಿ ಸದಾಚಾರ ಸದ್ಭಾವನಾಭರಿತಳಾಗಿ ಕಾಲಕಳೆಯಹತ್ತಿದಳು.

## ೫. ಹಿರಣ್ಯಕಶ್ಯಪನ ತಪಸ್ಸು-ವರಪ್ರಾಪ್ತಿ

ದೈತ್ಯರಾಜ ಹಿರಣ್ಯಕಶಿಪುವು ತನ್ನ ಯೋಗ್ಯತೆಗೆ ಮೀರಿದ ದುರಭಿಸಂಧಿಯಿಂದ ಯುಕ್ತವಾದ ಅಜೇಯತ್ವ-ಅವಧ್ಯತ್ವ, ಅಜರಾಮರತ್ವ, ತ್ರೈಲೋಕ್ಯಾಧಿಪತಿತ್ವ ಮತ್ತು ಸಕಲಲೋಕಾಧಿಪತಿತ್ವಾದಿ ಮಹಾ ವರಗಳನ್ನು ಪಡೆಯಲು ಬ್ರಹ್ಮದೇವರನ್ನು ಕುರಿತು ಮಂದರಪರ್ವತದಲ್ಲಿ ಉಗ್ರತಪಸ್ಸಿನಲ್ಲಿ ಮಗ್ನನಾದನು.[1]

ಅವನು ತನ್ನ ಪಾದಾಂಗುಷ್ಠಗಳ ಮೇಲೆ ನಿಂತು ತನ್ನೆರಡು ಕರಗಳನ್ನೂ ಮೇಲೆ ಎತ್ತಿ, ಆಕಾಶದತ್ತ ದೃಷ್ಟಿಯನ್ನಿಟ್ಟು ಧ್ಯಾನಮಗ್ನನಾಗಿ ನಿಂತು, ತಪಸ್ಸು ಮಾಡುತ್ತಿದ್ದಾನೆ. ರಕ್ತಾಂಬರ-ಗಂಧಾನುಲೇಪದಿಂದ ಅಲಂಕೃತನಾದ ಅವನು ತಪಸ್ಸಿನಲ್ಲಿ ಮಗ್ನನಾಗಿ ಸಹಸ್ರಾಧಿಕ ವರ್ಷಗಳಾಗಿರುವುದರಿಂದ ಕಠೋರಕಿರಣಗಳಂತೆ ರಕ್ತವರ್ಣದ ಅವನ ಜಟೆಗಳು ಬೆಳಗುತ್ತವೆ. ಆ ಜಟೆಗಳಿಂದ ಹೊರಹೊಮ್ಮುವ ಕಿರಣಗಳು ಪ್ರಳಯಕಾಲದ ಸೂರ್ಯಕಿರಣದಂತೆ ಭಯಂಕರರೂಪತಾಳಿವೆ. ಅವನು ಉಗ್ರವಾದ ತಪಸನ್ನಾಚರಿಸುತ್ತಿರುವಾಗ ದೈತ್ಯೇಂದ್ರನ ತಲೆಯ ಅಗ್ರಭಾಗದಿಂದ ತಪೋಮಯವಾದ ಅಗ್ನಿಯು ಹೊಗೆಯನ್ನು ಬಿಡುತ್ತಾ ಪ್ರಜ್ವಲಿಸಲಾರಂಭಿಸಿತು.[2]

ಆ ಅಗ್ನಿಯ ಪ್ರಚಂಡ ಜ್ವಲಾಮಂಡಲದ ತಾಪದಿಂದ ದೇವತೆಗಳು ಸ್ವರ್ಗವನ್ನು ಬಿಟ್ಟು ಹೊರಬರಲು ಅಸಮರ್ಥರಾದರು. ಹಿರಣ್ಯಕಶ್ಯಪನ ತೇಜೋಜ್ವಾಲೆಯಿಂದ ಮೇಲಿನ-ಕೆಳಗಿನ ಮತ್ತು ಸುತ್ತಲಿನ ಲೋಕಗಳೆಲ್ಲವೂ ಬೆಂದುಬೆಂಡಾಗಹತ್ತಿದವು. ಭಾವಿ, ಕೆರೆ, ತಟಾಕ, ನದಿಗಳೆಲ್ಲವೂ ಕ್ಷೋಭಿಸಿದವು, ಸಪ್ತದ್ವೀಪ ಮತ್ತು ಪರ್ವತಗಳಿಂದ ಯುಕ್ತವಾದ ಭೂಮಂಡಲವು ನಡುಗಹತ್ತಿತು. ನಕ್ಷತ್ರ-ಗ್ರಹಗಳು ಚಲಿಸಿ ಬೀಳಲಾರಂಭಿಸಿದವು, ದಶದಿಕ್ಕುಗಳೂ ಉರಿಯಹತ್ತಿದವು,

---

1 ಹಿರಣ್ಯಕಶಿಪೂ ರಾಜನ್ ಅಜೇಯಮಜರಾಜರಂ | ಆತ್ಮಾನಮಪ್ರತಿದಂದ್ವಂ ಏಕರಾಜ್ಯಂ ವಿಧತ್ಸತಃ | ಸ ತೇಪೇ ಮಂದರದ್ರೋಣ್ಯಾಂ ತಪಃ ಪರಮದಾರುಣಮ್ ||
-ಭಾಗವತ-೭-೩-೧

2 ಊರ್ಧ್ವಬಾಹುರ್ನಭೋದೃಷ್ಟಿಃ ಪಾದಾಂಗುಷ್ಠಾಶ್ರಿತಾವನಿಃ | ಜಟಾದೀಧಿತಿಭೀರೇಜೆ-ಸಂವರ್ತಾರ್ಕ ಇವಾಂಶುಭಿಃ | ತಸ್ಮಿನ್ ತಪಸ್ತಪ್ಯಮಾನೇ ದೇವಸ್ಥಾನಾನಿ ಭೇಜಿರೇ ||
-ಭಾಗವತ-೭-೩-೨-೩

ದೈತ್ಯರಾಜನ ಈ ಕಠೋರವೂ ಉಗ್ರವೂ ಆದ ತಪೋಜ್ವಾಲೆಯ ಕಷ್ಟವನ್ನು ತಡೆಯಲಾಗದ ಅಮರರು ಸ್ವರ್ಗವನ್ನು ತ್ಯಜಿಸಿ ಸತ್ಯಲೋಕಕ್ಕೆ ಧಾವಿಸಿದರು.

ಸತ್ಯಲೋಕಕ್ಕೆ ಬಂದ ದೇವತೆಗಳು ಬ್ರಹ್ಮದೇವರಲ್ಲಿ, "ದೇವ ದೇವ ಜಗತ್ಪತೇ, ಬ್ರಹ್ಮದೇವ, ದೈತ್ಯರಾಜನಾದ ಹಿರಣ್ಯಕಶಿಪುವಿನ ತಪಸ್ಸಿನಿಂದ ನಾವು ಸ್ವರ್ಗದಲ್ಲಿ ವಾಸಮಾಡಲು ಅಸಮರ್ಥರಾಗಿದ್ದೇವೆ. ನೀವು ಸೃಷ್ಟಿಸಿದ ಸಮಸ್ತ ಪ್ರಪಂಚವೂ ಹಿರಣ್ಯಕಶ್ಯಪನ ಉಗ್ರತಪಸ್ಸಿಗೆ ಆಹಾರರೂಪವಾಗಿ ನಾಶವಾಗುವ ಮೊದಲೇ ಏನಾದರೊಂದು ಉಪಾಯದಿಂದ, ಅವನು ತಪಸ್ಸನ್ನು ಉಪರಮಿಸುವಂತೆ ಒಂದು ಪರಿಹಾರವನ್ನು ಮಾಡಿರಿ" ಎಂದು ಪ್ರಾರ್ಥಿಸಿದರು.

ದೇವತೆಗಳ ಪ್ರಾರ್ಥನೆಯಿಂದ ಮನಕರಗಿದ ಬ್ರಹ್ಮದೇವರು ಮುಂದೆ ಮಾಡಬೇಕಾದ ಕರ್ತವ್ಯವನ್ನು ಚಿಂತಿಸಿ ಒಂದು ನಿರ್ಧಾರಕ್ಕೆ ಬಂದರು. ದೈತ್ಯರಾಜ ಹಿರಣ್ಯಕಶ್ಯಪನು ಘೋರವಾದ ತಪಸ್ಸನ್ನು ಮಾಡುತ್ತಿದ್ದಾನೆ. ಅದರಿಂದ ಜಗತ್ತಿಗೆ ಬಹು ಕಷ್ಟವಾಗುತ್ತಿದೆ. ಲೋಕಕ್ಕೆ ಬಂದಿರುವ ಕಷ್ಟ ಪರಿಹಾರವಾಗಬೇಕಾದರೆ ದೈತ್ಯನಿಗೆ ವರದಾನಮಾಡಬೇಕು. ಅದರಿಂದ ತಪಸ್ಸಿಗೆ ಫಲ ಉಂಟೆಂದು ದೈತ್ಯರಿಗೆ ನಂಬಿಕೆ ದೃಢವಾಗುತ್ತದೆ. ಆದರೆ ತಾವು ನೀಡುವ ವರದಿಂದಲೇ ಕ್ರೂರಿಯೂ ಲೋಕಕಂಟಕನೂ ಆದ ಹಿರಣ್ಯಕಶ್ಯಪುವಿನ ವಿನಾಶವೂ ಆಗಬೇಕೆಂಬುದೇ ಪರಾತ್ಪರನಾದ ಶ್ರೀ ಹರಿಯ ಸಂಕಲ್ಪವಾದ್ದರಿಂದ ಆ ದೇವದೇವನ ಇಚ್ಛೆಯನ್ನು ಬಲ್ಲ ಪಿತಾಮಹ ಬ್ರಹ್ಮದೇವರು ದಕ್ಷ-ಭೃಗು, ಮುಂತಾದವರಿಂದೊಡಗೂಡಿ ಹಂಸಾರೂಢರಾಗಿ ಸದ್ಯದ ವಿಪತ್ತಿನಿಂದ ದೇವತೆಗಳನ್ನೂ ಮತ್ತು ಸಮಸ್ತ ಜಗತ್ತನ್ನೂ ಕಾಪಾಡಲು ಹಿರಣ್ಯಕಶ್ಯಪನಿಗೆ ವರಪ್ರದಾನ ಮಾಡಲು ಮಂದರಪರ್ವತಕ್ಕೆ ದಯಮಾಡಿಸಿದರು.[1]

೦ ೦ ೦ ೦

ಇತ್ತ ನಾರದರ ಆಶ್ರಮದಲ್ಲಿ ಒಂದು ಏಕಾದಶಿ ಬೆಳಗಿನಿಂದಲೂ ಭಗವದ್ಧ್ಯಾನ, ಪೂಜಾದಿಗಳಲ್ಲಿ ನಿರತಳಾದ ಕಯಾಧೂದೇವಿಯು ಬಹುಶ್ರಾಂತಳಾಗಿದ್ದಾಳೆ. ರಾತ್ರಿಯಾಯಿತು. ಏಕಾದಶೀ ಪ್ರಯುಕ್ತ ಜಾಗರಣೆಸೇವೆ ಪ್ರಾರಂಭವಾಗಿದೆ, ನಾರದರು ಕೃಷ್ಣಾಜಿನದ ಮೇಲೆ ಕುಳಿತಿದ್ದಾರೆ.

ಆಗ ಕಯಾಧುವು (ಶುಚಿಸ್ಮಿತೆಯು)- "ಸ್ವಾಮಿ, ನೀವು ದಯಮಾಡಿ ನನಗೆ ಶ್ರೀಹರಿಯ ಮಹಿಮಾದಿಗಳನ್ನು ತಿಳಿಸಿ ಅನುಗ್ರಹಿಸಿರಿ" ಎಂದು ಪ್ರಾರ್ಥಿಸಿದಳು. ಆಗ ನಾರದರು "ಮಂಗಳಾಂಗಿ, ಹಿಂದೆ ಸಾಕ್ಷಾತ್ ಶ್ರೀಹರಿಯು ಲೋಕಮಾತೆಯಾದ ಶ್ರೀಲಕ್ಷ್ಮೀದೇವಿಗೆ ಹೇಳಿದ ಮಹಿಮೆಯನ್ನು ಹೇಳುತ್ತೇನೆ ಕೇಳು. ದೇವಿ, ಸಚ್ಚಿದಾನಂದವಿಗ್ರಹನಾದ ಶ್ರೀಹರಿಯನ್ನು ಭಕ್ತಿಯಿಂದ ಆರಾಧಿಸು. ಅದರಿಂದ ತುಷ್ಟನಾದ

1. ಇತಿ ವಿಜ್ಞಾಪಿತೋ ದೇವೈರ್ಭಗವಾನಾತ್ಮಭೂರ್ನೃಪ | ಪರಿತೋ ಭೃಗುದಕ್ಷಾದ್ಯೈಃ ಯಯೌ ದೈತ್ಯೇಶ್ವರಾಶ್ರಮಮ್ ||

ನಾರಾಯಣನು ಮೋಕ್ಷವನ್ನೇ ದಯಪಾಲಿಸುವವನು, ಶ್ರೀಹರಿಭಕ್ತರನ್ನು ಯಾವ ಶತ್ರುಗಳೂ, ದುಷ್ಟಗ್ರಹಗಳೂ, ರಾಕ್ಷಸರೂ ಹಿಂಸಿಸುವುದಿಲ್ಲ. ಶ್ರೀಹರಿಭಕ್ತಿಯು ವ್ಯರ್ಥವಾದಂತೆಲ್ಲಾ ಅವನು ಭಕ್ತಜನರಿಗೆ ಸಮಸ್ತ ಶ್ರೇಯಸ್ಸುಗಳನ್ನು ಕರುಣಿಸುವನು, ಮಗಳೇ ! ಕರಚರಣ ಮುಂತಾದ ಅವಯವಗಳು, ಕಣ್ಣು, ಕಿವಿ, ನಾಲಿಗೆ, ಮನಸ್ಸು. ಶರೀರ ರಾಜ್ಯ ಮುಂತಾದ ಸಂಪತ್ತುಗಳೆಲ್ಲವನ್ನೂ ಶ್ರೀಮನ್ನಾರಾಯಣನ ಪೂಜೆಗೆ ಅರ್ಪಿಸಿ ನವವಿಧ ಭಕ್ತಿಯಿಂದ ಭಗವಂತನನ್ನು ಸೇವಿಸಬೇಕು. ಶರೀರವು ನಶ್ವರವಾದುದು. ಅದು ಯಾವಾಗ ನಾಶವಾಗುವುದೆಂದು ಹೇಳಲು ಸಾಧ್ಯವಿಲ್ಲ, ತಾಯಿಯ ಉದರದಿಂದ ಹೊರಬರುವಾಗಲೇ ಮೃತ್ಯುವು ಜೀವನ ಬೆನ್ನು ಹತ್ತಿ ಬರುವುದು ಆದ್ದರಿಂದ ಅಹಂಕಾರ ಮಮಕಾರಗಳನ್ನು ಬಿಟ್ಟು-ವ್ಯರ್ಥವಾಗಿ ಕಾಲ ಕಳೆಯದೆ ಶ್ರೀಹರಿಯನ್ನು ಭಕ್ತಿಯಿಂದ ಪೂಜಿಸಬೇಕು. ದೇವತೆಗಳು ಅಸುರರು ಎಂದು ಸೃಷ್ಟಿಯು ಎರಡು ಪ್ರಕಾರವಾಗಿದೆ. ಅದರಲ್ಲಿ ಹರಿಭಕ್ತರು ದೇವಸ್ವಭಾವರು, ಪುತ್ರಿ, ನೀನೂ ಹರಿಭಕ್ತಳಾಗಿದ್ದೀಯೇ, "ಹರಿಭಕ್ತಿಯುತಾ ದೇವಾಸ್ತದ್ಧೀನಾ ಅಸುರಾ ಮತಾಃ । ತಸ್ಮಾದ್ದೇವಿ ಶೃಣುಷ್ವ ತ್ವಂ ಹರಿಭಕ್ತಿಪರಾಯಣಾ ॥"[1] ಶ್ರೀಹರಿಭಕ್ತಳಾದ ನೀನು ಸರ್ವೇಶ್ವರನಾದ ಶ್ರೀಹರಿಯನ್ನು ದಂಭಾಚಾರಗಳಿಲ್ಲದೆ ಭಕ್ತಿಶ್ರದ್ಧೆಗಳಿಂದ ಪೂಜಿಸು" ಎಂದು ಹೇಳಿ ಕಯಾಧುರಾಣಿಗೆ ಶ್ರೀಹರಿಯ ಅಚಿಂತ್ಯಾದ್ಭುತಶಕ್ತಿ, ಮಹಾ ಮಹಿಮೆ, ಭಕ್ತವಾತ್ಸಲ್ಯಾದಿಗಳನ್ನು ಪುಣ್ಯಪ್ರದವಾದ ಪರಮಾತ್ಮನ ಅವತಾರ ಲೀಲೆಗಳು, ಸತ್ತತ್ತ್ವ ರಹಸ್ಯಗಳನ್ನೂ ಶ್ರವಣಮಾಡಿಸುತ್ತಿದ್ದಾರೆ.[2] ಪಾಪ, ಶ್ರಾಂತಳಾದ ಕಯಾಧುವಿಗೆ ಅವಳಿಗೆ ಅರಿವಾಗದಂತೆಯೇ ನಿದ್ರೆ ಬಂದು ಬಿಟ್ಟಿದೆ. ಯಾವುದರ ಪರಿವೆಯೂ ಇಲ್ಲದೆ ಕಯಾಧುರಾಣಿ ನಿದ್ರಾಪರವಶಳಾಗಿದ್ದಾಳೆ.

---

1 ಗರುಡ ಪುರಾಣ

2 —ಮೇಲಿನ ಕಥೆಯು ಭಾಗವತಪುರಾಣೋಕ್ತವಾದುದು. ಅದರ ಪ್ರಕಾರ ನಾರದರ ಆಶ್ರಮದಲ್ಲಿ ಕಯಾಧುವಿಗೆ ಪ್ರಹ್ಲಾದರಿಗೂ ನಾರದರು ಉಪದೇಶಿಸಿದರೆಂದು ಉಕ್ತವಾಗಿದೆ.

ಇನ್ನು ಗರುಡಪುರಾಣದಲ್ಲಿ ಹಿರಣ್ಯಕಶ್ಯಪನ ಪತ್ನಿಯ ಹೆಸರು ಶುಚಿಷ್ಮತೀ ಎಂದೂ, ಹಿರಣ್ಯಕಶಿಪುವು ಜಪಕಾರಣ್ಯಕ್ಕೆ ಬೇಟೆಗಾಗಿ ಹೋದಾಗ ನಾರದರು ದೈತ್ಯ ರಾಜನ ಅರಮನೆಗೆ ಹೋದರೆಂದೂ, ಆಗ ಹರಿಭಕ್ತಿಭರಿತಳಾದ ಶುಚಿಷ್ಮತಿಯು ಶ್ರೀಹರಿ ಮಹಿಮೆಯನ್ನು ತಿಳಿಸುವಂತೆ ನಾರದರನ್ನು ಪ್ರಾರ್ಥಿಸಿದಳೆಂದೂ ಆಗ ದೇವರ್ಷಿ ನಾರದರು ಅವಳಿಗೂ, ಅವಳ ಗರ್ಭದಲ್ಲಿದ್ದ ಶಿಶು (ಭಾವಿ ಪ್ರಹ್ಲಾದ) ವಿಗೂ ಉಪದೇಶ ಮಾಡಿದರೆಂದೂ, ಅದರಿಂದ ಗರ್ಭಸ್ಥಶಿಶುವು ಶ್ರೀ ಹರಿಭಕ್ತನಾಗಿ ಪ್ರಹ್ಲಾದನೆಂಬ ಹೆಸರಿನಿಂದ ಪ್ರಖ್ಯಾತನಾದನೆಂದೂ ಉಕ್ತವಾಗಿದೆ. ನಾವು ಭಾಗವತವನ್ನು ಅನುಸರಿಸಿ ಈ ಕಥಾಭಾಗವನ್ನು ಬರೆಯುತ್ತಿದ್ದರೂ ಇಲ್ಲಿ ಗರುಡಪುರಾಣಕಥಾಭಾಗವನ್ನೂ ಸೇರಿಸಿ ಬರೆದಿದ್ದೇವೆ. —ಗ್ರಂಥಕರ್ತ

ನಾರದಮಹರ್ಷಿಗಳಿಗೆ ಇಂದೇಕೋ ಬಹಳ ಉತ್ಸಾಹ ! ಮೈಮರೆತು ಶ್ರೀಹರಿಯ ಚರಿತ್ರೆಯನ್ನು ಹೇಳುತ್ತಿದ್ದ ಮುನಿಪುಂಗವರು ಸಕಲ ವೇದಾದಿಶಾಸ್ತ್ರಗಳಿಂದ ಪರಮ ಮುಖ್ಯವೃತ್ತಿಯಿಂದ ಪ್ರತಿಪಾದ್ಯನಾದ ಶ್ರೀರಮಾರಮಣನ ಸತ್ತತ್ತ್ವ ರಹಸ್ಯಗಳನ್ನೂ, ಭಗವದುಪಾಸನಾ ಕ್ರಮಗಳನ್ನೂ, ಭಕ್ತಿಯ ವೈವಿಧ್ಯ ವೈಶಿಷ್ಟ್ಯಾದಿಗಳನ್ನೂ ಉಪದೇಶಿಸಲಾರಂಭಿಸಿದರು.

ಆಗ ಪ್ರಶಾಂತವಾಗಿದ್ದ ಆ ಪರಿಸರದಲ್ಲಿ "ಹೂಂ, ಹೂಂ" ಎಂಬ ಧ್ವನಿ ಕೇಳಿಬರುತ್ತಿದೆ. ! ವಿಸ್ಮಯದಿಂದ ನಾರದರು ಕಯಾಧುವನ್ನು ನೋಡಿದರು, ಪಾಪ, ಅವಳು ನಿದ್ರಾಸಕ್ತಳಾಗಿದ್ದಾಳೆ. ಸುತ್ತಲೂ ನೋಡಿದರು, ಯಾರೂ ಇಲ್ಲ ! ಇದೇನಾಶ್ಚರ್ಯ ಇದಾರ ಧ್ವನಿ ? ಎಂದು ಧ್ವನಿಯು ಎತ್ತಕಡೆಯಿಂದ ಬರುತ್ತಿದೆಯೆಂದು ಪರೀಕ್ಷಿಸಿದರು. ಪರಮಾಶ್ಚರ್ಯ ! ಕಯಾಧೂರಾಣಿಯ ಉದರದಿಂದ ಧ್ವನಿ ಕೇಳಿಬರುತ್ತಿದೆ. ಆಗ ನಾರದರಿಗಾದ ಆನಂದ–ಆಶ್ಚರ್ಯಗಳು ಅವರ್ಣನೀಯ. ಪರಮಾನಂದದಿಂದ ನಾರದರ ಮೈಪುಳಕಿಸಿತು ಕಂಠ ತುಂಬಿ ಬಂದಿತು.

"ಆಹಾ, ಶ್ರೀಹರಿ, ದೇವದೇವ ನಿನ್ನ ಲೀಲೆಯನ್ನು ಬಲ್ಲವರಾರು ಪ್ರಭು ? ಈಗಿನಿಂದಲೇ ನಿನ್ನ ಭಕ್ತಾಗ್ರಣಿಯನ್ನು ಜಾಗೃತಗೊಳಿಸುತ್ತಿರುವೆಯಾ ? ಈ ಬಡ ಜೋಗಿಯೇ ನಿನ್ನ ಅಂತರಂಗ ಭಕುತನ ಗುರುವಾಗಬೇಕೆಂದು ಸಂಕಲ್ಪಿಸಿರುವೆಯಾ ? ಮಾಧವ, ನಾನೇ ಧನ್ಯ. ಜಗನ್ನಾಟಕ ಸೂತ್ರಧಾರಿ, ನೀನು ಆಡಿಸಿದಂತೆ ಆಡಲೇಬೇಕಲ್ಲವೆ ? ಸ್ವಾಮಿ, ಅಂದು ನಿನ್ನ ಪ್ರೇರಣೆಯಂತೆ ದೈತ್ಯರಾಜನನ್ನು ಅವಧ್ಯತ್ವ ವರವನ್ನು ತಪಸ್ಸಿನಿಂದ ಪಡೆಯುವಂತೆ ಪ್ರಚೋದಿಸಿದೆ. ಮುಂದೆ ಮತ್ತೆ ನಿನ್ನ ಪ್ರೇರಣೆಯಂತೆ, ಸಂಕಲ್ಪದಂತೆಯೇ ದೇವೇಂದ್ರನಿಂದ ಕಯಾಧೂದೇವಿಯನ್ನೂ, ಅವಳ ಗರ್ಭಸ್ಥ ಶಿಶುವನ್ನೂ ರಕ್ಷಿಸಿದೆ. ಈಗ ಪ್ರಬಲನಾದ ದೈತ್ಯರಾಜನನ್ನೇ ಎದುರಿಸಿ ನಿನ್ನ ಅದ್ಭುತ ಮಹಿಮೆ, ಸರ್ವೋತ್ತಮತ್ವ, ಸರ್ವತ್ರವ್ಯಾಪ್ತಿತ್ವಾದಿ ಅಚಿಂತ್ಯಾದ್ಭುತ ಶಕ್ತಿಗಳನ್ನು ಜಗತ್ತಿಗೆ ತೋರಿಕೊಡಲಿರುವ ಈ ಉದರಸ್ಥ ಸತ್ವಶಾಲಿಯನ್ನು ತಯಾರಿಸುವ ಗುರುತರ ಹೊಣೆಯನ್ನು ನನ್ನ ಮೇಲೆಯೇ ಹಾಕಿರುವೆಯಾ ? ಆಗಲಿ, ದೇವ ನಿನ್ನ ಇಚ್ಛೆಯಂತೆಯೇ ಬ್ರಹ್ಮದೇವನ ವರದಿಂದ ಮತ್ತನಾಗಿ ಹಿರಣ್ಯಕಶ್ಯಪನು ಹಿಂದಿರುಗುವಷ್ಟರಲ್ಲಿಯೇ ಅವನ ಗರ್ವವನ್ನು ಮುರಿದು, ನಿನ್ನ ಭಕ್ತನಾಗಿ ಲೋಕಕಲ್ಯಾಣಮಾಡಲು ಶಕ್ತನಾಗುವಂತೆ ಗರ್ಭಸ್ಥನಾಗಿರುವ ಈ ಮಹಾನುಭಾವನನ್ನು ಪೂರ್ಣವಾಗಿ ತಯಾರುಮಾಡಿ ಸಿದ್ಧಪಡಿಸುವೆನು. ಶ್ರೀಹರಿ, ನಿನ್ನನ್ನು ದ್ವೇಷಿಸುವ ಖೂಳ ದೈತ್ಯನ ಪುತ್ರನಾಗಿಯೇ ಈ ಭಕ್ತರಾಜನ ಜನನ ! ಮಗನೇ ತಂದೆಗೆ ವಿರೋಧಿ ! ಪ್ರತಿಸ್ಪರ್ಧಿ ಅಘಟಿತಘಟನಾಪಟುವಾದ ನೀನು ಸತ್ಯಸಂಕಲ್ಪ. ದೇವ ನಿನಗೆ ಅನಂತ ವಂದನೆಗಳು" ಎಂದು ನಾರದರು ಧ್ಯಾನಾಸಕ್ತರಾದರು.

ಅಂದಿನಿಂದ ನಾರದಮಹರ್ಷಿಗಳು ಪ್ರತಿನಿತ್ಯವೂ ಕಯಾಧುವಿಗೆ ಉಪದೇಶ ಮಾಡುವ ನೆಪದಿಂದ ಸಕಲ ವೇದಾಶಾಸ್ತ್ರಾರ್ಥಸಾರ, ಭಾಗವತಧರ್ಮ, ಭಗವದ್ಭಕ್ತಿ ಶ್ರೀಹರಿಯ ಮಹಿಮಾತಿಶಯಗಳನ್ನು ದೈತ್ಯರಾಣಿಗೂ, ಅವಳ ಗರ್ಭಸ್ಥಶಿಶುವಿಗೂ ಉಪದೇಶಿಸಿದರು.[1]

ಒಂದು ದಿನ ನಾರದರು ಸಂತೋಷದಿಂದ ಕಯಾಧೂ ದೇವಿಗೆ ಪರಮಾತ್ಮನ ಮಹಿಮೆಗಳನ್ನು ಉಪದೇಶಿಸುತ್ತಿರುವಾಗ ಕಯಾಧುವು ನಾರದರಿಗೆ ಕರಮುಗಿದು "ಸ್ವಾಮಿ, ತಾವು ನನಗೊಂದು ವರವನ್ನು ಕರುಣಿಸಬೇಕು" ಎಂದು ವಿಜ್ಞಾಪಿಸಿದಳು.

ನಾರದರು ಸುಪ್ರಸನ್ನರಾಗಿ "ಮಂಗಳಾಂಗಿ, ಕುಮಾರಿ! ನಿನಗೇನು ವರಬೇಕು, ಕೇಳಮ್ಮ" ಎಂದರು. ಆಗ ಕಯಾಧುವು ವಿನೀತಳಾಗಿ "ಮುನಿವರ್ಯ! ನನ್ನ ಪತಿದೇವನು ಬಂದು ನನ್ನನ್ನು ರಾಜಧಾನಿಗೆ ಕರೆದುಕೊಂಡುಹೋಗುವವರೆಗೂ, ನನಗೆ ಪ್ರಸವವಾಗಬಾರದು ! ನಾನು ತಮ್ಮಲ್ಲಿ ಇಚ್ಛಾ ಪ್ರಸವ ವರವನ್ನೂ, ನನ್ನ ಉದರಸ್ಥಶಿಶುವಿಗೆ ಕ್ಷೇಮವನ್ನೂ ಬೇಡುವೆನು" ಎಂದು ಪ್ರಾರ್ಥಿಸಿದಳು.

ನಾರದಮಹರ್ಷಿಗಳು ಹರುಷದಿಂದ "ಸಾಧು, ಸಾಧ್ವಿ ! ಪತಿವ್ರತೆಯಾದ ಸ್ತ್ರೀಗೆ ಭೂಷಣವಾದ ವರವನ್ನೇ ಯಾಚಿಸಿದ್ದೀಯೇ ! ಹಾಗೆ ಆಗಲಿ, ನೀನು ಅಪೇಕ್ಷಿಸಿದಾಗಲೇ ನೀನು ಪ್ರಸವಿಸುವೆ. ನಿನ್ನ ಗರ್ಭದಲ್ಲಿರುವ ಕುಮಾರನಿಗೆ ಸರ್ವದಾ ಸನ್ಮಂಗಳ, ಕ್ಷೇಮಗಳುಂಟಾಗುದು. ಇದು ನನ್ನ ಪ್ರಭುವಾದ ಶ್ರೀಹರಿ ಪರಮಾತ್ಮನ ಕಾರುಣ್ಯದಿಂದ ಸತ್ಯವಾಗಿ ನೆರವೇರುವುದು ! ಚಿಂತಿಸಬೇಡಮ್ಮ" ಎಂದು ಕಯಾಧೂರಾಣಿಗೆ ವರಪ್ರದಾನ ಮಾಡಿದರು.[2]

o o o o

ಇತ್ತ ಮಂದರಪರ್ವತದಲ್ಲಿ ತಪೋನಿರತನಾದ ಹಿರಣ್ಯಕಶ್ಯಪನಿಗೆ ವರದಾನ ಮಾಡಲು ಬಂದ ಬ್ರಹ್ಮದೇವರು ಬಿದಿರು-ಹುಲ್ಲುಗಳಿಂದ ಮುಚ್ಚಿಹೋಗಿ ದೇಹದ ಸುತ್ತಲೂಹುತ್ತಬೆಳೆದು ಇರುವೆ-ಹುಳಗಳಿಂದ ಮುತ್ತಲ್ಪಟ್ಟು ಅಸ್ತಿ ಚರ್ಮಮಾತ್ರ ಉಳಿದಿರುವ ಹಿರಣ್ಯಕಶ್ಯಪನ ಜೀರ್ಣದೇಹವನ್ನು ಕಂಡು "ವತ್ಸ ! ಏಳು, ನಿನ್ನ ಘೋರವಾದ ತಪಸ್ಸು ಸಾಕುಮಾಡು. ಇಕೋ ನೋಡು, ನಿನಗೆ ಒಲಿದು ಬಂದಿದ್ದೇನೆ. ನಿನಗಿಷ್ಟವಾದ ವರವನ್ನು ಪ್ರಾರ್ಥಿಸು. ದೈತ್ಯರಾಜ ! ನಿನ್ನ ಶ್ರೇಷ್ಠ ತಪಸ್ಸಿನಿಂದ ನಿನಗೆ ವಶನಾಗಿದ್ದೇನೆ. ವರವನ್ನು ಬೇಡು" ಎಂದು ಹೇಳಿ ತಮ್ಮ

---

1 "ಧರ್ಮಸ್ಯ ತತ್ವಂ ಜ್ಞಾನಂ ಚ ಮಾಮಪ್ಯುದ್ದಿಶ್ಯ ನಿರ್ಮಲಮ್ ॥"

—ಭಾಗವತ.

ಏತತ್ ಶ್ರುತ್ವಾ ನಾರದಾತ್ತು ಗರ್ಭಸ್ಥೋ ಹಿ ಮಹಾಪ್ರಭುಃ ।
ಪ್ರಕರ್ಷಾಹ್ಲಾದ ಸಂಯುಕ್ತೋ ಬಭೂವ ಹರಿವಲ್ಲಭಃ ॥ —ಗರುಡಪುರಾಣ.

2 "ಅಂತರ್ವತ್ನೀ ಸ್ವಗರ್ಭಸ್ಯ ಕ್ಷೇಮಾಯೇಚ್ಛಾಪ್ರಸೂತಯೇ ।
ಋಷಿಃ ಕಾರುಣಿಕಸ್ತಸ್ಯಾಃ ಪ್ರಾದಾದುಭಯಮೀಶ್ವರಃ ॥" —ಭಾಗವತ.

ಕಮಂಡಲೋದಕದಿಂದ ಹಿರಣ್ಯಕಶ್ಯಪನ ಜೀರ್ಣಶರೀರದ ಮೇಲೆ ಪ್ರೋಕ್ಷಿಸಿದರು.

ಏನಾಶ್ಚರ್ಯ! ಆ ಕೂಡಲೇ ಕಟ್ಟಿಗೆಯಿಂದ ಹೊರಹೊಮ್ಮುವ ಅಗ್ನಿಯಂತೆ ತೇಜಃಪುಂಜವಾದ, ವಜ್ರದಂತೆ ಸುದೃಢವಾದ, ಸರ್ವಾಂಗಸುಂದರವಾದ ತಾರುಣ್ಯ ಪೂರ್ಣದೇಹದಿಂದ ಕಂಗೊಳಿಸುತ್ತಾ ಹಿರಣ್ಯಕಶ್ಯಪನು ಹುತ್ತದಿಂದಹೊರಬಂದನು.

ಸರ್ವಲೋಕಪಿತಾಮಹನೂ, ತನ್ನಿಷ್ಟದೇವನೂ ಆದ ಬ್ರಹ್ಮದೇವನು ಅಂಬರದಲ್ಲಿ ಅಂಚೆಯನ್ನೇರಿ (ಹಂಸವನ್ನೇರಿ) ನಗುಮೊಗದಿಂದ ಸುಪ್ರಸನ್ನನಾಗಿ ತನಗೆ ದರ್ಶನವನ್ನು ಕರುಣಿಸಿದ್ದನ್ನು ಕಂಡು ಹರ್ಷಪುಲಕಿತಗಾತ್ರನಾಗಿ ದೇವರಿಗೆ ಸಾಷ್ಟಾಂಗ ನಮನಗೈದು ಕರಜೋಡಿಸಿ ನಿಂತು ಆನಂದಬಾಷ್ಪಸಿಕ್ತನಯನನಾಗಿ ವಿನಯಪೂರ್ವಕವಾಗಿ ಸ್ತೋತ್ರಮಾಡಲಾರಂಭಿಸಿದನು.[1]

ಕಲ್ಪಾಂತೇ ಕಾಲಸೃಷ್ಟೇನ ಯೋಂಧೇನ ತಮಸಾವೃತಮ್ ।
ಅಭಿವ್ಯನಕ್‌ಜಗದಿದಂ ಸ್ವಯಂಜ್ಯೋತಿಃ ಸ್ವರೋಚಿಷಾ ॥ ೨೮ ॥
ಆತ್ಮನಾತ್ರಿವೃತಾಚೇದಂ ಸೃಜತ್ಯವತಿ ಲುಂಪತಿ ।
ರಜಸ್ಸತ್ವತಮೋಧಾಮ್ನೇ ಪರಾಯ ಮಹತೇ ನಮಃ ॥ ೨೯ ॥
—ಭಾಗವತ

ದೇವದೇವ! ಮಹಾಕಲ್ಪಾಂತ್ಯದಲ್ಲಿ ಪ್ರಳಯಕಾಲ ಪ್ರವರ್ತಕನಾದ ನಿನ್ನಿಂದ (ಶ್ರೀಹರಿಯಿಂದ) ಅಭಿವ್ಯಕ್ತವಾದ ದುರ್ಗಾದೇವಿಯಿಂದ ಅಭಿಮನ್ಯಮಾನವಾದ ತಮಸ್ಸಿನಿಂದ ಈ ಜಗತ್ತು (ಜಗತ್ಸರ್ಜಕವಾದ ಪ್ರದ್ಯುಮ್ನಾದಿ ರೂಪಗಳು ಮತ್ತು ಪ್ರಕೃತ್ಯಾದಿ) ಆವೃತವಾಗಿತ್ತು. ಆಗ ನೀನು ನಿನ್ನ ತೇಜಸ್ಸನ್ನು ವ್ಯಕ್ತಪಡಿಸಿ ಅದರಿಂದ ತಮಸ್ಸನ್ನು ದೂರಮಾಡಿ ಪ್ರದ್ಯುಮ್ನಾದಿ ಜಗತ್ತನ್ನು ಪ್ರಕಟಗೊಳಿಸಿದಿ. ನಂತರ ನೀನು ಪ್ರಕೃತಿಯನ್ನು ಕಾರ್ಯೋನ್ಮುಖವಾಗಿಮಾಡಿ ಅದರಿಂದ ಮಹತ್ತತ್ವಾದಿ ಪ್ರಪಂಚವನ್ನು ಸೃಷ್ಟಿಸಿ, ರಕ್ಷಣೆಮಾಡಿ, ಸಂಹರಿಸುತ್ತೀಯೇ. ಇಂಥ ನಿನಗೆ ನಮಸ್ಕಾರ,

ಹೀಗೆ ಹಿರಣ್ಯಕಶ್ಯಪನು ಬಹುವಿಧವಾಗಿ ಸ್ತುತಿಸಿ ಅನಂತರ ವರವನ್ನು ಬೇಡಿದನು.—

ಯದಿ ದಾಸ್ಯಸ್ಯಭಿಮತಾನ್ ವರಾನ್ಮೇ ವರದೋತ್ತಮ ।
ಭೂತೇಭ್ಯಸ್ತ್ವದ್ವಿಸೃಷ್ಟೇಭ್ಯೋ ಮೃತ್ಯುರ್ಮಾಭೂನ್ಮಮ ಪ್ರಭೋ ॥೩೨॥

---

1 ಇಲ್ಲಿ ಹಿರಣ್ಯಕಶ್ಯಪನು ಮಾಡಿರುವ ಸ್ತೋತ್ರವು ಸರ್ವೋತ್ತಮನಾದ ಶ್ರೀಹರಿಪರಮಾತ್ಮನಿಗೇ ಅನ್ವಯಿಸುತ್ತದೆ. ಸಾಕ್ಷಾತ್ ಶ್ರೀಹರಿಗೇ ಸಂಬಂಧಿಸಿರುವ ವಿಶೇಷಣಗಳಿಂದ ಯುಕ್ತವಾದ ಸ್ತುತಿಯೂ, ಬ್ರಹ್ಮದೇವರನ್ನುದ್ದೇಶಿಸಿ ಮಾಡಿದಂತಿರುವ ಸ್ತುತಿಯೂ ಶ್ರೀಹರಿ ಬ್ರಹ್ಮದೇವರಿಬ್ಬರಿಗೂ ಅನ್ವಯಿಸುವಂತಿರುವ ಸ್ತುತಿಗಳೂ ಇವೆ. ಹೀಗೆ ಮಿಶ್ರವಾಕ್ಯಗಳಿಂದ ಕೂಡಿರುವ ಈ ಸ್ತುತಿಯನ್ನು ಸಾಕ್ಷಾತ್ ಶ್ರೀಹರಿಯನ್ನೇ ಸ್ತುತಿಸಿದ್ದಾಗಿ ತಿಳಿಯಬೇಕು. ಕೆಲವೆಡೆ ಅಂತರ್ಯಾಮಿವಿವಕ್ಷೆಯಿಂದ ಮಾಡಿದ್ದಾಗಿ ಅರಿಯಬೇಕು.

ನಾಂತರ್ಬಹಿರ್ದಿವಾನಕ್ತಮನ್ಯಸ್ಮಾದಪಿ ಚಾಯುಧೈಃ ।
ನ ಭೂಮೌ ನಾಂಬರೇ ಮೃತ್ಯುರ್ನನರೈರ್ನಮೃಗೈರಪಿ ॥ ೩೮ ॥
ವ್ಯಸುಭಿರ್ವಾಸುಮದ್ಭಿರ್ವಾ ಸುರಾಸುರಮಹೋರಗೈಃ ।
ಅಪ್ರತಿದ್ವಂದತಾಂಯುದ್ಧೇ ಐಕ್ಯಪತ್ಯಂ ಚ ದೇಹಿನಾಮ್ ॥ ೩೯ ॥
ಸರ್ವೇಷಾಂ ಲೋಕಪಾಲನಾಂ ಮಹಿಮಾನಂ ತಥಾತ್ಮನಃ ।
ತಪೋಯೋಗಪ್ರಭಾವೇನ ಯೋ ನರಿಷ್ಯತಿ ಕರ್ಹಿಚಿತ್ ॥ ೪೦ ॥

ದೇವ! ನೀನು ನನ್ನ ತಪಸ್ಸಿಗೆ ಮೆಚ್ಚಿ ವರವನ್ನು ಕೊಡುವಂತಿದ್ದರೆ ಸ್ವಾಮಿ, ನನಗಿಂಥ ವರವನ್ನು ದಯಪಾಲಿಸು—ನೀನು ಸೃಷ್ಟಿಸಿದ ಯಾವ ಪ್ರಾಣಿಯಿಂದಲೂ ನನಗೆ ಮರಣಬರಬಾರದು! ಒಳಗೆ-ಹೊರಗೆ-ಹಗಲು-ರಾತ್ರಿ, ದೇಹಾವಯವ, ಭಿನ್ನವಾದ ಖಡ್ಗಾದಿ ಆಯುಧಗಳಿಂದ, ಭೂಮಿಯಲ್ಲಿ, ಅಂತರಿಕ್ಷದಲ್ಲಿ, ಮನುಷ್ಯರಿಂದ, ಮೃಗಗಳಿಂದ, ಜೀವಂತ ಇಲ್ಲವೇ ಮೃತಪ್ರಾಣಿಗಳಿಂದ, ಸುರ–ಅಸುರ-ಮಹೋರಗ (ನಾಗ)—ಇವು ಯಾವುದರಿಂದಲೂ ನನಗೆ ಮರಣವಾಗಬಾರದು. ಯುದ್ಧದಲ್ಲಿ ಯಾರೂ ನನ್ನನ್ನು ಪ್ರತಿಸ್ಪರ್ಧಿಸಬಾರದು. ದೇಹವುಳ್ಳವರಲ್ಲಿ ಏಕಾಧಿಪತ್ಯವು ನನಗಿರಬೇಕು! ಸರ್ವಲೋಕಪಾಲಕರ ಮಹಿಮೆಯು ನನಗೆ ದೊರಕಬೇಕು !! (ಸ್ವಾಮಿ, ನಿನ್ನ ಮಹಿಮೆಯು ಹೇಗೆ ನಶಿಸುವುದಿಲ್ಲವೋ ಹಾಗೆಯೇ ಯಾವ ಕಾರಣದಿಂದಲೂ ನನ್ನ ಮಹಿಮೆಯೂ ನಶಿಸಬಾರದಂತೆ ವರವನ್ನು ಕೊಡು—ಹೀಗೆ ಪ್ರಾರ್ಥಿಸಿದ್ದು ಅವನು ಬ್ರಹ್ಮಪದವೂ ತನಗೆ ದೊರಕಬೇಕೆಂಬುದನ್ನು ಸೂಚಿಸುವುದು)" ಎಂದು ವರವನ್ನು ಬೇಡಿದನು.

ಪುರುಷರಿಗೆ ಅತ್ಯಂತ ದುರ್ಲಭವಾದ ಈ ರೀತಿ ವರವನ್ನು ಬೇಡಿದರೂ ಶ್ರೀಹರಿ ಸಂಕಲ್ಪದಂತೆ ಬ್ರಹ್ಮದೇವರು ಶ್ರೀಹರಿಯ ಪ್ರೇರಣೆಯಂತೆ ಈ ಮಹತ್ತರವಾದ ವರವನ್ನು ಅನುಗ್ರಹಿಸಿ ಸತ್ಯಲೋಕಕ್ಕೆ ದಯಮಾಡಿಸಿದರು.

o o o o

ದೈತ್ಯಸಾಮ್ರಾಟನಾದ ಹಿರಣ್ಯಕಶ್ಯಪನು ಬ್ರಹ್ಮದೇವರನ್ನು ತಪಸ್ಸಿನಿಂದ ಮೆಚ್ಚಿಸಿ ಅವರಿಂದ ಅಸಾಧಾರಣ ವರವನ್ನು ಪಡೆದು ಪರಮಾನಂದಭರಿತನಾಗಿ ರಾಜಧಾನಿಗೆ ಹಿಂದಿರುಗಿದನು.

ಆ ವಿಚಾರವನ್ನು ಅರಿತ ದೇವತೆಗಳು ದೈತ್ಯರಾಜ್ಯವನ್ನು ಬಿಟ್ಟು ಹೊರಟು ಹೋದರು.

ರಾಜಧಾನಿಯಲ್ಲಿ ಹಿರಣ್ಯಕಶ್ಯಪನಿಗೆ ತಾನು ತಪಸ್ಸಿಗೆ ಹೊರಟಲಾಗಾಯಿತು ನಡೆದ ಎಲ್ಲ ವಿಚಾರಗಳೂ ತಿಳಿದವು. ದೈತ್ಯರಾಜನು ದೇವರ್ಷಿ ನಾರದರ ಆಶ್ರಮಕ್ಕೆ ಬಂದನು.

ದೈತ್ಯರಾಜನ ಆಗಮನದಿಂದ ಸಂತೋಷಗೊಂಡ ನಾರದ ಮಹರ್ಷಿಗಳು ಅವನನ್ನು ಸ್ವಾಗತಿಸಿದರು. ಪತಿಯ ಆಗಮನದಿಂದ ಕಯಾಧುವಿಗೆ ಅತ್ಯಂತ ಆನಂದ ಉಂಟಾಯಿತು.

ಹಿರಣ್ಯಕಶ್ಯಪನು ನಾರದರಿಗೆ ನಮಸ್ಕರಿಸಿ "ಮುನಿವರ್ಯ! ನಿಮ್ಮ ಉಪಕಾರ ನನ್ನ ಮೇಲೆ ಬಹಳವಾಯಿತು. ನನ್ನ ಹಿತಕ್ಕಾಗಿ ನೀವು ತಪಸ್ಸಿನಿಂದ ಪಿತಾಮಹ ನನ್ನು ಸಂತೋಷಪಡಿಸಿ ಅವಧ್ಯತ್ವವರವನ್ನು ಪಡೆಯುವಂತೆ ಸಲಹೆ ನೀಡಿದಿರಿ. ನಿಮ್ಮ ಉಪದೇಶದಂತೆ ನಾನು ಬ್ರಹ್ಮದೇವರನ್ನು ತಪಸ್ಸಿನಿಂದ ಮೆಚ್ಚಿಸಿ ಅಸಾಧಾರಣವಾದ ವರವನ್ನು ಪಡೆದಿರುತ್ತೇನೆ!

ಇನ್ನು ನಾನು ತಪಸ್ಸಿಗೆ ತೆರಳಿದಾಗ ನನ್ನ ಪತ್ನಿಯನ್ನು ಇಂದ್ರನಿಂದ ರಕ್ಷಿಸಿದಿರಿ. ಮುಖ್ಯವಾಗಿ ಭಾವೀ ದೈತ್ಯಸಾಮ್ರಾಜ್ಯಾಧಿಪತಿಯಾಗಲಿರುವ ಗರ್ಭಸ್ಥ ಶಿಶುವನ್ನು ಸಂರಕ್ಷಿಸಿ ನಮ್ಮ ದೈತ್ಯವಂಶಕ್ಕೇ ಮಹೋಪಕಾರ ಮಾಡಿರುತ್ತೀರಿ ! ಮಾತ್ರವಲ್ಲ; ದೈತ್ಯಸಾಮ್ರಾಜ್ಞಿಗೆ ಯಾವ ಆಪತ್ತೂ ಬರದಂತೆ ನಿಮ್ಮ ಆಶ್ರಮದಲ್ಲಿ ಆಶ್ರಯನೀಡಿ ಸಂರಕ್ಷಿಸಿರುವಿರಿ. ಸ್ವಾಮಿ, ನಿಮ್ಮ ಉಪಕಾರವನ್ನು ನಾನೆಂದಿಗೂ ಮರೆಯಲಾರೆ. ತಾವು ಅಪ್ಪಣೆಕೊಟ್ಟರೆ ಸಾಮ್ರಾಜ್ಞಿಯನ್ನು ರಾಜಧಾನಿಗೆ ಕರೆದೊಯ್ಯುವೆನು" ಎಂದು ವಿಜ್ಞಾಪಿಸಿದನು.

ನಾರದಮಹರ್ಷಿಗಳು ಸಂತೋಷದಿಂದ ಕಯಾಧೂದೇವಿಯನ್ನು ದೈತ್ಯೇಂದ್ರನೊಡನೆ ಕಳುಹಿಸಿಕೊಟ್ಟರು. ಹಿರಣ್ಯಕಶಿಪು–ಕಯಾಧುದೇವಿಯರು ದೇವರ್ಷಿಗಳಿಗೆ ನಮಸ್ಕರಿಸಿ ಆಶೀರ್ವಾದಪಡೆದು ರಾಜಧಾನಿಗೆ ಹಿಂದಿರುಗಿದರು.

## ೬. ಭಾಗವತಾಗ್ರಣಿಯ ಅವತಾರ

ಅದೊಂದು ಶುಭದಿನ. ವಿಶ್ವಬಂಧುವೂ, ಸರ್ವಭೂತಹಿತೇರತನೂ ಜಗನ್ಮಂಗಲಕರನೂ ಆದ ವಿಭೂತಿ ಪುರುಷನೊಬ್ಬನು ಅವತರಿಸಿದ ಮಹಾದಿನ ! ಸಕಲ ಗ್ರಹಗಳೂ ಶುಭಸ್ಥಾನದಲ್ಲಿದ್ದು ಶುಭದೃಷ್ಟಿಯಿಂದೀಕ್ಷಿಸುತ್ತಿದ್ದ ದಿನ. ಸಕಲಗ್ರಹಗಳಿಗೂ ಬಲಪ್ರದನಾದ ಸರಸಿಜಾಕ್ಷನೇ ಸುಪ್ರೀತನಾಗಿ ಸರ್ವದಾ ಸಲಹಲು ಸಿದ್ಧನಾಗಿದ್ದನೆಂದಮೇಲೆ ಸರ್ವಗ್ರಹಗಳೂ ಮಂಗಲದೃಷ್ಟಿವೀಕ್ಷಣದಿಂದ ಭಾಗವತಾಗ್ರಣಿಯ ಅವತಾರವನ್ನು ನಿರೀಕ್ಷಿಸುತ್ತಿದ್ದುದು ಆಶ್ಚರ್ಯದ ವಿಷಯವೇನಲ್ಲ.

ದೈತ್ಯಸಾಮ್ರಾಜ್ಞಿಯಾದ ಕಯಾಧೂದೇವಿ ಪರಮಮಂಗಳಕರನಾದ ಶ್ರೀವಾಯುದೇವರ ಆವೇಶಯುಕ್ತನೂ ಶ್ರೀಹರಿಪಾದಾಬ್ಜವನ್ನು ಆಶ್ರಯಿಸಿದನೂ ಕರ್ಮಜದೇವನೂ ಆದ ಸುಪುತ್ರನನ್ನು ಪ್ರಸವಿಸಿದಳು.[2] ಜಗದುದ್ಧಾರಕ-ಭಾಗ್ಯರವಿಯ ಅವತಾರವಾಯಿತು! ಭಾರತದೇಶದ ತಾತ್ವಿಕ-ಧಾರ್ಮಿಕ—ಇತಿಹಾಸವನ್ನು

---

1 ಗರುಡಪುರಾಣದಲ್ಲಿ ಬರುವ ಪ್ರಹ್ಲಾದಚರಿತ್ರೆಯಲ್ಲಿ ಕಯಾಧುವನ್ನು ಶುಚಿವ್ರತೀ ಎಂದು ಹೆಸರಿಸಿದ್ದಾರೆ.

2 ಅತೋ ಶುಚಿವ್ರತೀದೇವೀ ಸುಷಾವ ಪುತ್ರಮುತ್ತಮಮ್ । ವಾಯುನಾ ಚ ಸಮಾವಿಷ್ಟಂ ಹರಿಪಾದಾಬ್ಜಸಂಶ್ರಯಮ್ ॥
—ಗರುಡಪುರಾಣ

ಪುನರ್ನಿರ್ಮಾಣಮಾಡಲಿರುವ ಕರ್ಮಜದೇವತೆ ಶಂಕುಕರ್ಣ ಬ್ರಹ್ಮದೇವರ ಶಾಪ ರೂಪ ವರದಿಂದ ಅವತರಿಸಿದನು ! ಮಹಾಭಾಗವತೋತ್ತಮ, ಭಾಗವತಧರ್ಮ ಪ್ರಸಾರಕ ಸತ್ಯ-ಧರ್ಮ ಜ್ಞಾನ-ಭಕ್ತಿ-ವೈರಾಗ್ಯಗಳ ಸಾಕಾರನಾದ ಮಂಗಳ ಮೂರ್ತಿಯ ಜನನವಾಯಿತು ! ಶ್ರೀಹರಿಭಕ್ತರ ಶ್ರೇಣಿಯಲ್ಲಿ ಅಗ್ರಗಣ್ಯನಾಗಲಿರುವ ಮಹನೀಯನು ಉದಯಿಸಿದನು. ಅಮರದುಂದುಭಿಯು ಮೊಳಗಿತು ! ಪರಮಾನಂದ ತುಂದಿಲರಾದ ದೇವತೆಗಳು ಪುಷ್ಪವೃಷ್ಟಿ ಮಾಡಿದರು ! ಗಂಧರ್ವರು ಗಾನ ಮಾಡಿದರು ! ಅಪ್ಸರ ಸ್ತ್ರೀಯರು ನರ್ತಿಸಿದರು. ಋಷಿಮುನಿಗಳು, ಸಜ್ಜನರು ಆನಂದಾಬ್ಧಿಯಲ್ಲಿ ಮುಳುಗಿದರು !

ಸುರರು ಪುಷ್ಪವೃಷ್ಟಿಗೈದುದನ್ನೂ, ದೇವದುಂದುಭಿಗಳು ಮೊಳಗಿದ್ದನ್ನೂ ಕಂಡು ಕೇಳಿದ ದೈತ್ಯಸಾಮ್ರಾಟನು, ತನ್ನ ಭಯದಿಂದ, ಭಾವೀ ದೈತ್ಯಸಾಮ್ರಾಟನ ಅವತಾರಕ್ಕೆ ದೇವತೆಗಳು ಆನಂದ ಸೂಚಿಸಿದರೆಂದೂ ಆನಂದಿಸಿ, ತನ್ನ ಪರಾ ಕ್ರಮಕ್ಕೆ ಮೂರು ಲೋಕವೂ ನಡುಗುವುದೆಂದೂ ಗರ್ವಿಸಿದನು.

ದೈತ್ಯರಾಜಧಾನಿಯಲ್ಲಂದು ಅತಿಸಂಭ್ರಮ ! ಜನತೆಯ ಆನಂದ ವರ್ಣಿಸಲಸ ದಳ. ದೊಡ್ಡವರು, ಸಣ್ಣವರು, ಸ್ತ್ರೀಪುರುಷರೆಂಬ ಭೇದವಿಲ್ಲದೆ ಎಲ್ಲರೂ ಉತ್ಸವದಲ್ಲಿ ಭಾಗವಹಿಸಿದ್ದಾರೆ, ಸರ್ವರ ಮುಖವೂ ಸಂತಸದಿಂದ ಕಂಗೊಳಿಸುತ್ತಿದೆ. ಎಲ್ಲರೂ ಸಾಮ್ರಾಟನನ್ನು ಅಭಿನಂದಿಸುವವರೇ! ಹಿರಣ್ಯಕಶ್ಯಪನು ಆನಂದಸಾಗರದಲ್ಲಿ ಮುಳುಗೇಳತ್ತಿದ್ದಾನೆ.

ಮಂಗಳಸ್ನಾನವಾದ ಮೇಲೆ ದೈತ್ಯರು ಶುಕ್ರಾಚಾರ್ಯರ ನೇತೃತ್ವದಲ್ಲಿ ಜಾತ ಕರ್ಮ-ನಾಮಕರಣಾದಿ ಮಹೋತ್ಸವಗಳು ವಿಜೃಂಭಣೆಯಿಂದ ನೆರವೇರಿದವು. ಅತ್ಯಂತ ಸುಂದರನೂ, ಮನಮೋಹಕನೂ ಆದ ರಾಜಕುಮಾರ ದರ್ಶನಮಾತ್ರದಿಂದ ಸಕಲರ ಕಣ್ಮನಗಳಿಗೆ ಆನಂದವನ್ನೀಯುತ್ತಿದ್ದಾನೆ. ಬಹುಶಃ ಈ ಕಾರಣದಿಂದಲೇ ಏನೋ ದೈತ್ಯಗುರುಗಳು ನಾಮಕರಣ ಕಾಲದಲ್ಲಿ ರಾಜಕುಮಾರನಿಗೆ "ಪ್ರಹ್ಲಾದ"[1] ಎಂಬ ಹೆಸರನ್ನೇ ಆರಿಸಿದ್ದಾರೆ. ವಿಧ್ಯುಕ್ತವಾಗಿ ಹಿರಣ್ಯಕಶ್ಯಪನು ಕುಮಾರನಿಗೆ "ಪ್ರಹ್ಲಾದರಾಜ" ಎಂಬ ಅನ್ವರ್ಥಕನಾಮಕರಣಮಾಡಿ ಮುದಿಸಿದನು. ಈ ಸಂತೋಷದ ಸಮಯದಲ್ಲಿ ಸಾಮ್ರಾಜ್ಯದಲ್ಲೆಲ್ಲಾ ಅನ್ನದಾನ, ವಸ್ತ್ರದಾನ, ದಕ್ಷಿಣಾಪ್ರದಾನಾದಿಗಳು ಜರುಗಿದವು. ನಮ್ಮ ಕಥಾನಾಯಕನಾದ ಶ್ರೀಪ್ರಹ್ಲಾದ ರಾಜನು ಹುಟ್ಟಿದ ಸಂತೋಷಕ್ಕಾಗಿ ಸಾಮ್ರಾಜ್ಯದಲ್ಲೆಲ್ಲಾ ಹದಿನೈದು ದಿನ ಪರಿಯಂತ ಉತ್ಸವವನ್ನು ಆಚರಿಸಲಾಯಿತು.

---

1 ಪ್ರಹ್ಲಾದೋऽಪಿ ಮಹಾಭಾಗಃ ಕರ್ಮದೇವಸಮಃ ಸ್ಮೃತಃ ।
ಪ್ರಕರ್ಷಾಹ್ಲಾದ ಯುಕ್ತತ್ವಾತ್ ನಾರದಸ್ಯೋಪದೇಶತಃ ॥
ಅತಃ ಪ್ರಹ್ಲಾದನಾಮಾಸೌ ಪೃಥಿವ್ಯಾಂ ಖಿಗಸತ್ತಮಃ ॥
ಗರುಡಪುರಾಣ-ಬ್ರಹ್ಮ-ಕಾಂಡ ಅ-38-33

ದಿನಗಳು ಉರುಳಹತ್ತಿದವು. ಅರಮನೆಯಲ್ಲಿ ಪ್ರಹ್ಲಾದನು ಶುಕ್ಲಪಕ್ಷದ ಚಂದ್ರನಂತೆ ದಿನೇ ದಿನೇ ನವನವಕಾಂತಿ ಕಲೆ-ಸೌಂದರ್ಯಗಳಿಂದ, ಸರ್ವರ ಕಣ್ಮನಗಳನ್ನು ತಣಿಸುತ್ತಾ ಅಭಿವೃದ್ಧಿಸಹತ್ತಿದನು. ಪ್ರಹ್ಲಾದನ ಜನನಾನಂತರ ಕಯಾಧುವು ಅನುಹ್ಲಾದ, ಸಹ್ಲಾದ, ಹ್ಲಾದ ಎಂಬ ಮೂವರು ಪುತ್ರರನ್ನು ಪಡೆದಳು. ನಾಲ್ವರು ರಾಜಕುಮಾರರೂ ವರ್ಧಿಸಹತ್ತಿದರು. ಕಾಲಕಳೆದಂತೆಲ್ಲಾ ತಂದೆ ಮಕ್ಕಳಲ್ಲಿ ವಿಪರೀತಗುಣಗಳು ಅಭಿವ್ಯಕ್ತವಾಗಿ ವಿರುದ್ಧಕಾರ್ಯಗಳ ದ್ವಂದ್ವ ಪ್ರಕಟವಾಗಹತ್ತಿತು.

ದೈತ್ಯಚಕ್ರವರ್ತಿ ಹಿರಣ್ಯಕಶ್ಯಪನು ಒಂದಾದಮೇಲೊಂದರಂತೆ ರಾಜ್ಯಗಳನ್ನು ಗೆಲ್ಲುತ್ತಾ ದೈತ್ಯಸಾಮ್ರಾಜ್ಯವನ್ನು ಭದ್ರಪಡಿಸುತ್ತಿದ್ದರೆ, ಭಕ್ತಚಕ್ರವರ್ತಿ ಪ್ರಹ್ಲಾದನು ದೇವರ್ಷಿನಾರದರ ಉಪದೇಶವನ್ನು ಮನನಮಾಡುತ್ತಾ ಒಂದೊಂದು ಸತ್ತತ್ವಗಳಸಾರವನ್ನೂ ಸ್ವಾಧೀನಪಡಿಸಿಕೊಳ್ಳುತ್ತಾ ತಾನು ಕಟ್ಟಲಿರುವ ಭಕ್ತಿ ಸಾಮ್ರಾಜ್ಯದ ಬುನಾದಿಯನ್ನು ಭದ್ರಪಡಿಸಹತ್ತಿದ್ದನು !

ದೈತ್ಯೇಂದ್ರನು ಬಾಹುಬಲದಿಂದ ಎಲ್ಲರನ್ನೂ ಜಯಿಸುತ್ತಾ, ಜಗತ್ತಿನಲ್ಲಿ ತನಗೆ ಎದುರಿಲ್ಲವೆಂಬ ಗರ್ವದಿಂದ ತನ್ನ ರಾಕ್ಷಸೀ ಮಹತ್ವಾಕಾಂಕ್ಷೆಗೆ ಎದುರಾದವರನ್ನೆಲ್ಲಾ ಸದೆ ಬಡಿಯುತ್ತಾ, ದೀನ-ದಲಿತರು, ಸಾತ್ವಿಕರಾದ ಋಷಿಮುನಿಗಳನ್ನು ವಿವಿಧ ರೀತಿಯಿಂದ ಹಿಂಸಿಸುತ್ತಾ, ತಾಮಸಗುಣಗಳಿಗೆ ಮಾತೃಸ್ಥಾನನೆನಿಸಿ, ಅತ್ಯಂತ ಕಠಿಣಾತ್ಮಕನಾಗಿ ದೇವ-ದ್ವಿಜರನ್ನು ಜರಿಯುತ್ತಾ, ಅನ್ಯಾಯ-ಅತ್ಯಾಚಾರ-ಹರಿದ್ವೇಷಾದಿಗಳಿಂದ ವಿಜೃಂಭಿಸುತ್ತಿದ್ದರೆ; ನಮ್ಮ ಭಕ್ತರಾಜನಾದ ಪ್ರಹ್ಲಾದನು ಪ್ರೇಮದಿಂದ ಎಲ್ಲರ ಮನಸ್ಸನ್ನೂ ಜಯಿಸುತ್ತಾ, ಜಗತ್ತಿನಲ್ಲಿ ಭಗವದ್ಭಕ್ತಿ ಸಾತ್ವಿಕತನಗಳಿಗೆ ಎದುರಿಲ್ಲವೆಂದು ತೋರಿಕೊಡುತ್ತಾ, ತನ್ನ ದೇವ ಸ್ವಭಾವ, ಹರಿದಾಸ್ಯದ ಮಹತ್ವಾಕಾಂಕ್ಷೆಗಳನ್ನು ಪ್ರತಿಯೊಬ್ಬ ಸುಜೀವಿಗಳಲ್ಲೂ ಪ್ರಚೋದಿಸುತ್ತಾ, ದೀನ-ದಲಿತರು, ಸಾತ್ವಿಕರಾದ ಋಷಿಮುನಿಗಳನ್ನು ಪ್ರೀತಿ-ವಿಶ್ವಾಸ-ಶ್ರದ್ಧೆಗಳಿಂದ ಪೂಜಿಸುತ್ತಾ ಸಾತ್ವಿಕಗುಣಗಳಿಂದ, ಅಕಳಂಕಚರ್ಯೆ, ವಿನಯ, ಗಾಂಭೀರ್ಯ. ಔದಾರ್ಯ, ಸರ್ವಭೂತಹಿತಾಸಕ್ತಿಗಳಿಂದ ಸದ್ಗುಣಗಳ ಮಾತೃಸ್ಥಾನನೆನಿಸಿ ದಯಾರ್ದ್ರಹೃದಯನಾಗಿ ದೇವ-ದ್ವಿಜರ ಆರಾಧಕನಾಗಿ, ಸತ್ಯ-ಧರ್ಮ-ಹರಿಭಕ್ತಿಗಳಿಂದ ವಿರಾಜಿಸುತ್ತಿದ್ದನು ! ಹೀಗೆಯೇ ಗತಿಸಿತು ಬಹುಕಾಲ.

o o o o

ಹಿರಣ್ಯಕಶ್ಯಪನು ವರಪಡೆದು ಬಂದ ಮೇಲೆ ದೇವತೆಗಳನ್ನು ಜಯಿಸಿ ಸ್ವರ್ಗಸಿಂಹಾಸನವನ್ನು ಪಡೆಯಲು ನಿಶ್ಚೈಸಿದನು. ತನ್ನ ಆಶಯವನ್ನು ಪ್ರಿಯಪತ್ನಿ ಕಯಾಧುರಾಣಿಗೆ ತಿಳಿಸಿ, ವಿಜಯಯಾತ್ರೆಗೆ ಅವಳ ಅನುರಾಗದ ಅನುಮತಿ ಪಡೆಯಲು ಕಯಾಧುವಿನ ಅಂತಃಪುರಕ್ಕೆ ತೆರಳಿದನು.

ಪತಿಯ ಆಶಯವನ್ನರಿತ ಕಯಾಧುವು ರಾಜಕುಮಾರ ಪ್ರಹ್ಲಾದರಾಜನ ಐದನೇ ವರ್ಷದ ವರ್ಧಂತ್ಯುತ್ಸವವು ಸಮೀಪಿಸಿರುವುದರಿಂದ ಆ ಮಹೋತ್ಸವಾ-

ನಂತರ ಜೈತ್ರಯಾತ್ರೆಯನ್ನು ಕೈಗೊಳ್ಳಬಹುದೆಂದು ತನ್ನ ಅಭಿಪ್ರಾಯವನ್ನು ನಿವೇದಿಸಿದಳು. ಆದರೂ ಹಿರಣ್ಯಕಶ್ಯಪನು ತನ್ನ ತೀರ್ಮಾನವನ್ನು ಬದಲಿಸಲು ಒಪ್ಪಲಿಲ್ಲ.

ದೈತ್ಯರಾಜನು ಪತ್ನಿಗೆ ಸಮಾಧಾನ ಹೇಳಿ ಪ್ರಹ್ಲಾದಕುಮಾರನ ಜನನವಾದ ಮೇಲೆ ನಾರದಮಹರ್ಷಿಗಳ ದರ್ಶನಮಾಡಿ ರಾಜಕುಮಾರನಿಗೆ ಅವರ ಆಶೀರ್ವಾದ ಪಡೆಯಲು ಬಯಸಿದ್ದ ವಿಚಾರವನ್ನು ಕಯಾಧುವಿಗೆ ನೆನಪಿಸಿ "ರಾಣಿ ! ನಾನು ಸ್ವರ್ಗವನ್ನು ಜಯಿಸುವುದರ ಮೂಲಕ ಸ್ವರ್ಗಸಿಂಹಾಸನದಲ್ಲಿ ಕುಳಿತು ಪ್ರಿಯ ಕುಮಾರ ಪ್ರಹ್ಲಾದನ ವರ್ಧಂತೀಮಹೋತ್ಸವವನ್ನು ಆಚರಿಸುವೆನು ! ನೀನು ಕುಮಾರನೊಡನೆ ನಾರದಮಹರ್ಷಿಗಳ ಆಶ್ರಮಕ್ಕೆ ತೆರಳಿ ಅಲ್ಲಿ ಮುನೀಂದ್ರರ ನೇತೃತ್ವದಲ್ಲಿ ಪ್ರಹಾದ ಕುಮಾರನ ಹುಟ್ಟಿದ ಹಬ್ಬವನ್ನು ಆಚರಿಸು. ಅವರ ಆಶ್ರಮದಲ್ಲಿಯೇ ಕುಮಾರನ ವರ್ಧಂತಿಯನ್ನಾಚರಿಸುವುದು ಅತ್ಯಂತ ಸೂಕ್ತವಾಗಿದೆ" ಎಂದು ಹೇಳಿ ಕಯಾಧೂದೇವಿಯಿಂದ ಬೀಳ್ಕೊಂಡು ದೈತ್ಯಸೇನೆಯೊಡನೆ ಸ್ವರ್ಗ ವಿಜಯಕ್ಕಾಗಿ ಧಾವಿಸಿದನು.

ಕಯಾಧುವು ಮರುದಿನವೇ ಮಿತಪರಿವಾರದೊಡನೆ ಪ್ರಹ್ಲಾದಕುಮಾರನನ್ನು ಕರೆದುಕೊಂಡು ನಾರದರ ಆಶ್ರಮಕ್ಕೆ ಆಗಮಿಸಿದಳು. ದೇವರ್ಷಿಗಳಿಗೆ ಇದರಿಂದ ಅಪಾರ ಸಂತೋಷವಾಯಿತು. ನಾರದರು ಮಹಾರಾಣಿ ಮತ್ತು ರಾಜಕುಮಾರರಿಗೆ ಯೋಗ್ಯ ಬಿಡಾರಗಳನ್ನೇರ್ಪಡಿಸಿ ಆದರೋಪಚಾರ ಮಾಡಿದರು.

## ೭. ನಾರದರ ಉಪದೇಶ ಸಫಲವಾಯಿತು !

ನಾರದ ಮಹರ್ಷಿಗಳ ಆಶ್ರಮದಲ್ಲಿ ವಿಶೇಷ ಸಂಭ್ರಮ. ತಳಿರುತೋರಣ ಗಳಿಂದ ಧ್ವಜ-ಪತಾಕೆಗಳಿಂದ ರಂಭಾಸ್ತಂಭಗಳಿಂದ ಆಶ್ರಮವು ಅಲಂಕೃತವಾಗಿದೆ.

ನಾರದರ ಆಶ್ರಮದಲ್ಲಿ ಪ್ರಹ್ಲಾದರಾಜನ ಐದನೇ ವರ್ಷದ ವರ್ಧಂತೀ ಪ್ರಯುಕ್ತ ಅನೇಕ ಋಷಿಮುನಿಗಳು ಸೇರಿದ್ದಾರೆ. ಅದೇ ಸಮಯದಲ್ಲಿ ಕಯಾಧು ರಾಣಿಯೂ ನಾರದರೂ, ನಾರದರ ಕೈಹಿಡಿದುಕೊಂಡು ಸರ್ವಾಭರಣಗಳಿಂದ ಅಲಂಕೃತನಾದ ಸುಂದರಬಾಲಕ ಪ್ರಹ್ಲಾದನೂ ಬಂದರು. ನಾರದರು 'ಪುತ್ರಿ ! ಕಯಾಧು, ವೇದಿಕೆಯ ಮೇಲೆ ಕುಳಿತು ಪೂಜೆಗೆ ಸಿದ್ಧಳಾಗು. ಕುಮಾರ ಪ್ರಹ್ಲಾದನ ವರ್ಧಂತ್ಯುತ್ಸವವನ್ನು ಪರಮಾತ್ಮನ ಪೂಜೆಯಿಂದಲೇ ಆರಂಭಿಸೋಣ. ಕುಮಾರನ ಶ್ರೇಯಸ್ಸಿಗೋಸ್ಕರ ಭಗವಂತನನ್ನು ಪ್ರಾರ್ಥಿಸು. ಕುಮಾರ, ಪ್ರಹ್ಲಾದ ! ಎಲ್ಲಿ ನನ್ನ "ಮಹತಿ" ಯನ್ನಿತ್ತುಕೊಡು" ಎಂದು, ಪ್ರಹ್ಲಾದನು ತಂದಿತ್ತ ಮಹತೀ ಎಂಬ ವೀಣೆಯನ್ನು ಸ್ವೀಕರಿಸಿ ಪ್ರೀತಿಯಿಂದ ಪ್ರಹ್ಲಾದನ ಶಿರದಮೇಲೆ ಕರವಿರಿಸಿ "ಮಗು! ಇಲ್ಲಿ ಬಾ. ಈ ಆಸನದಲ್ಲಿ ಕುಳಿತುಕೋ. ಹೂಂ, ನಾನೀಗ ಭಗವಂತನನ್ನು ಆಹ್ವಾನಿ

ಸುವೆನು" ಎಂದು ಹೇಳಿ ವೀಣೆಯನ್ನು ನುಡಿಸುತ್ತಾ ಹಾಡಲಾರಂಭಿಸಿದರು.

ರಾಗ : ಭೂಪ ತಾಳ : ಆದಿ

ಕರುಣಾಕರ ರಂಗ ಬಾ ದೇವ ।
ಚರಣಸೇವಕನ ಮೊರೆಯನು ಕೇಳಿ ನೀ ॥ ಪ ॥
ವರವೈಕುಂಠದಿಂ ಭಕುತರ ಸೇವೆಯ ।
ಹರುಷದಿ ಕೈಗೊಳಲೆಂದೀ ಸಮಯದಿ ॥ ಅ । ಪ ॥

ಎಲ್ಲರೂ ಆನಂದದಿಂದ ನಾರದರ ಗಾನಾಮೃತಪಾನ ಮಗ್ನರಾಗಿರಲು ಇದ್ದಕ್ಕಿದ್ದಂತೆ ವೇದಿಕೆಯ ಮೇಲಿದ್ದ ಮಂಟಪದಲ್ಲಿ ಮಿಂಚೊಂದು ಮಿನುಗಿದಂತಾಗಿ ದಿವ್ಯ ಪ್ರಕಾಶವುಂಟಾಗಿ ಶ್ರೀನಾರಾಯಣನ ಮೂರ್ತಿಯು ಅಲೌಕಿಕತೇಜಸ್ಸಿನಿಂದ ಕಂಗೊಳಿಸಿತು. ಅದನ್ನು ಕಂಡು ಆಶ್ರಮವಾಸಿಗಳೆಲ್ಲರೂ "ಜಯ ನಾರಾಯಣ ! ಜಯ ಜಯ ಮಾಧವ" ಎಂದು ಹರ್ಷಧ್ವನಿಗೈಯುತ್ತಾ ಎದ್ದು ನಿಂತರು. ಕಯಾಧು ನಾರದರೂ ಸಂಭ್ರಮದಿಂದ ಮೇಲೆದ್ದು ಕರಜೋಡಿಸಿ ನಿಂತರು. ನಾರದರು ಆನಂದ ದಿಂದ ಮತ್ತೆ ಗಾನಮಾಡಹತ್ತಿದರು.

ಮಂದಸ್ಮಿತವದನಾರವಿಂದ ಅಪ್ರಾಕೃತಗುಣಸಾಂದ್ರ ।
ಮಂದರಗಿರಿಧರ ನಂದಕಂದ ಗೋವಿಂದ ಸದಾನಂದ ॥
ಇಂದು ನಮ್ಮ ಅಘವೃಂದವ ಕಳೆದಾನಂದವ ತಂದೀಯೋ ।
ತಂದೆ ! ಕಂದ ಪ್ರಹ್ಲಾದನ ಪೊರೆ ನಿನಗೊಂದಿಪೆ ಶ್ರೀರಮಣ ॥ ಚ ॥

ನಾರದರು ಭಕ್ತಿಪರವಶರಾಗಿ ಹಾಡುತ್ತಿರಲು ಭಗವಂತನ ಮೂರ್ತಿಯು ಮಂದಹಾಸಬೀರಿ ಅಭಯನೀಡುತ್ತಿರುವಂತೆ ಭಾಸವಾಗಲು ನಾರದರು ಭಕ್ತ್ಯುದ್ರೇಕ ದಿಂದ ಪ್ರಾರ್ಥಿಸಹತ್ತಿದರು.

"ದೇವ! ದಯಾಮಯ, ಭಕ್ತನ ನುಡಿಕೇಳಿ ಮೂರ್ತಿಯಲ್ಲಿ ಮೈದೋರಿದೆಯಾ? ಸ್ವಾಮಿ, ಭಕ್ತರಲ್ಲಿ ನಿನಗೆಷ್ಟು ಮಮತೆ ! ನಮಗಾಗಿ ಧಾವಿಸಿಬಂದ ನಿನ್ನ ಕಮಲ ದಂತೆ ಮೃದುವಾದ ಪಾದಗಳೆಷ್ಟುನೊಂದವೋ ದೇವ ! ಕ್ಷಮಿಸು ತಂದೆ" ಎಂದು ಶ್ರೀಹರಿಯ ಮೂರ್ತಿಯನ್ನು ಸ್ಪರ್ಶಿಸಿ ನಮಸ್ಕರಿಸಿದರು.

ಆಗ ಧೀರಗಂಭೀರಧ್ವನಿಯೊಂದು ಕೇಳಿಬಂದಿತು-"ನಾರದ ! ನಾನು ವೈಕುಂಠ ದಲ್ಲಿ ಮಾತ್ರ ಇರುವೆನೇ ? ಇಲ್ಲಿಲ್ಲವೇನು ?"

ಭಗವಂತನ ವಾಣಿಯನ್ನಾಲಿಸಿ ಸರ್ವರ ಮೈಪುಳಕಿಸಿತು. "ಜಯ ಜಯ ಲಕ್ಷ್ಮೀಶ" ಎಂದು ಎಲ್ಲರೂ ಸಾಷ್ಟಾಂಗವೆರಗಿದರು. ಪ್ರಹ್ಲಾದಕುಮಾರನು ತದೇಕ ದೃಷ್ಟಿಯಿಂದ ಭಗವನ್ಮೂರ್ತಿಯನ್ನು ನೋಡಿ ಭಕ್ತ್ಯತಿಶಯದಿಂದ ಕಣ್ಣಿನಿಂದ ಆನಂದಾಶ್ರು ಹರಿಯುತ್ತಿರಲು, ಕರದಲ್ಲಿ ತಾಳಹಿಡಿದು ಮೈಮರೆತು ಹಾಡುತ್ತಾ ನರ್ತಿಸಲಾರಂಭಿಸಿದನು.

ರಾಗ–ಶ್ಯಾಮ ತಾಳ–ಆದಿ

ಅಲ್ಲಿರುವೆ ಇಲ್ಲಿರುವೆ ಎಲ್ಲೆಲ್ಲಿಯೂ ನೀನಿರುವೆ !
ಫುಲ್ಲನಯನ ನಾರಾಯಣ ವಂದಿಪೆ ಸೊಲ್ಲಿದು ಸಟೆಯಲ್ಲ ॥ ಪ ॥
ಆಕಾಶದಿ ನೀನಿರುವೆ ! ಸಾಕಾರನೆ ವಾಯ್ವಗ್ನಿಗಳಲ್ಲಿರುವೆ
ನಾಕಮರ್ತ್ಯಪಾತಾಳಸಿಂಧುಗಿರಿ ವನದರಿಯಲ್ಲಿರುವೆ ದೇವ ॥ ಅ । ಪ ॥
ಸಕಲಜೀವ ಸಂಪ್ರೇರಕ ಸರ್ವಾಂತರ್ಗತ ಸರ್ವೇಶ ।
ಪ್ರಕಟವಾಗಿ ನಿಜಭಕ್ತನ ಪೊರೆಯಲು ಬಂದೆಯಾ ಶ್ರೀರಮಣ ॥ ಚ ॥

ಬಾಲಪ್ರಹ್ಲಾದನ ತತ್ತ್ವಾರ್ಥಗರ್ಭಿತವಾದ ಸ್ತುತಿಯನ್ನು ಎಲ್ಲರೂ ಕೇಳಿ ಅವನ ಭಕ್ತ್ಯತಿಶಯನ್ನೂ, ತಾದಾತ್ಮ್ಯಭಾವವನ್ನೂ ಕಂಡು ಬೆರಗಾದರು. ಆಗ ನಾರದ ಮಹರ್ಷಿಗಳಿಗಾದ ಸಂತೋಷ ಅವರ್ಣನೀಯ. ಪ್ರಹ್ಲಾದನಲ್ಲಿ ತಾವು ಬಿತ್ತಿದ್ದ ಹರಿಭಕ್ತಿಯ ಬೀಜವು ಐದು ವರ್ಷಗಳಲ್ಲೇ ಹೆಮ್ಮರವಾಗಿ ಫಲಭರಿತ ವಾದುದನ್ನು ನೋಡಿ ತಮ್ಮ ಶ್ರಮ ಸಾರ್ಥಕವಾಯಿತೆಂದು ಮುದಗೊಂಡರು.

ಆಗ ಬಾಲ ಪ್ರಹ್ಲಾದನು ಭಗವನ್ಮೂರ್ತಿಗೆ ಸಾಷ್ಟಾಂಗ ನಮಸ್ಕಾರ ಮಾಡಿ, "ಪರಾತ್ಪರ, ವಾಸುದೇವ ಜಗದೀಶ್ವರ, ನಿನ್ನೀ ಪವಿತ್ರಮೂರ್ತಿಯಲ್ಲಿ ನಿನ್ನನ್ನು ಕಾಣುತ್ತಿರುವೆನು ! ನಿನ್ನ ದರ್ಶನದಿಂದ ಧನ್ಯನಾದೆ, ತಂದೆಯೇ, ನನ್ನ ಅಜ್ಜ ನಾರದರು ನಿನ್ನ ಜಗನ್ಮೋಹಕ ರೂಪಲಾವಣ್ಯಗಳನ್ನು ಬಣ್ಣಿಸಿ, ನಿನ್ನ ಅನಂತ ಗುಣಗಳು, ಅಚಿಂತ್ಯಾದ್ಭುತಶಕ್ತಿ, ಅಪ್ರತಿಹತ ಮಹಿಮಾತಿಶಯಗಳನ್ನೂ ಹೇಳುತ್ತಿದ್ದರು. ಅಹಹ ! ನಿಜ, ನನ್ನಜ್ಜ ನಾರದರು ವರ್ಣಿಸುತ್ತಿದ್ದ ನಿನ್ನ ದಿವ್ಯ ಮಂಗಳರೂಪವನ್ನಿಂದು ಕಂಡೆ ! ಸತ್ಯಾಶ್ರಯ ! ನಿನ್ನ ಭುವನ ಸುಂದರ ರೂಪವು ನನ್ನ ಹೃದಯ ಕಮಲದಲ್ಲಿ ನೆಲೆನಿಂತಿದೆ. ಪ್ರಭು, ಭಕ್ತವತ್ಸಲ! ನಿನ್ನ ನಾಮಸ್ಮರಣ ಮಾತ್ರದಿಂದ ನನ್ನ ಮನಸ್ಸು ಉಲ್ಲಾಸಗೊಳ್ಳುತ್ತಿದೆ. ಶರೀರವು ರೋಮಾಂಚನ ಗೊಳ್ಳುತ್ತಿದೆ. ದೇವ ನಿನ್ನ ರೂಪವನ್ನು ಹೃದಯ ಗುಹೆಯಲ್ಲಿ ಸೆರೆಹಿಡಿದುಬಿಟ್ಟಿರು ವೆನು ! ನೀನಿನ್ನು ನನ್ನಿಂದ ತಪ್ಪಿಸಿಕೊಳ್ಳಲಾರೆ ! ಸರ್ವದಾ ನನ್ನೊಳಗೆ-ಹೊರಗೆ-ಸುತ್ತಲೂ ಇದ್ದು ಕಾಪಾಡು ! ಹೇಳು ದೇವ ನೀನು ಸದಾ ನನ್ನವನಾಗಿದ್ದು ಸಲಹುವೆಯಾ ?" ಎಂದು ಪ್ರಾರ್ಥಿಸಿ ನಮಸ್ಕರಿಸಿದನು.

ಮತ್ತೆ ಅದೇ ಧೀರಗಂಭೀರ ಮಂಜುಳಧ್ವನಿಯು ಕೇಳಿಸಿತು. "ನಾರದ ಎಂತಹ ಸುಂದರ ಬಾಲಕನಿವನು ? ನನ್ನ ಕುಮಾರ ಬ್ರಹ್ಮದೇವ ಇವನನ್ನು ಪ್ರತ್ಯೇಕವಾಗಿ ಮನವಿಟ್ಟು ನಿರ್ಮಿಸಿದಂತಿದೆಯಲ್ಲ ! ಬಾಲಕನಾದರೂ ಇವನ ಹೃದಯವೆಷ್ಟು ವಿಶಾಲ, ಇವನ ಮನಸ್ಸು ಎಷ್ಟು ಪರಿಶುದ್ಧ. ಎಷ್ಟು ಪರಿಪಕ್ವ ವಾಗಿದೆ ನಿನ್ನ ಶಿಷ್ಯನಲ್ಲವೇ ಇವನು. ಅಂದಮೇಲೆ ಕೇಳುವುದೇನು ? ವತ್ಸ, ಪ್ರಹ್ಲಾದ! ನಿರ್ಮಲನಿಷ್ಕಾಮ ಪ್ರೇಮದಿಂದ ನನ್ನನ್ನು ಆರಾಧಿಸಿ, ಭಜಿಸಿದವರನ್ನು ಉದ್ಧರಿಸುವುದೇ ನನ್ನ ಸಂಕಲ್ಪ. ನಿಜ, ಭಕ್ತರಾಜ ! ನೀನು ನನ್ನನ್ನು ಸೆರೆಹಿಡಿದು

ಬಿಟ್ಟಿರುವೆ. ನಿನ್ನ ಭಕ್ತಿಪಾಶದಿಂದ ಬದ್ಧನಾದ ನಾನು ಸರ್ವದಾ ನಿನ್ನೊಡನೆಯೇ ಇರಬೇಕಲ್ಲವೇ ? ಚಿಂತಿಸದಿರು ಕುಮಾರ, ಸದಾ ನಿನ್ನೊಡನಿದ್ದು ನೀನು ಕರೆದಾಗ ಓಡಿಬರುವೆನು ! ವತ್ಸ, ನಿನಗೆ ಮಂಗಳವಾಗಲಿ".

ಅನಂತರ ಮಂಟಪದಲ್ಲಿನ ದಿವ್ಯಪ್ರಕಾಶವೂ, ಪ್ರತಿಮೆಯಲ್ಲಿ ಅಭಿವ್ಯಕ್ತವಾದ ದಿವ್ಯತೇಜಸ್ಸೂ ಮಾಯವಾಗಿ ಮೊದಲಿನಂತೆ ಅಲಂಕೃತ ನಾರಾಯಣಮೂರ್ತಿ ಕಂಗೊಳಿಸಿತು. ಅದನ್ನು ಗಮನಿಸಿದ ಭಕ್ತಜನರು "ಜಯ ಜಯ ಕಮಲಾಕಾಂತ" ಎಂದು ಹರ್ಷಧ್ವನಿಗೈದು ಪ್ರಹ್ಲಾದನನ್ನು ನೋಡಿ "ಬಾಲಭಕ್ತ ಪ್ರಹ್ಲಾದ ! ಶ್ರೀಹರಿಯನ್ನು ಒಲಿಸಿಕೊಂಡ ನೀನು ಪುಣ್ಯಶಾಲಿ, ಮಹಾನುಭಾವ" ಎಂದು ಪ್ರಶಂಸಿಸಿದರು.

ನಾರದರು ಆನಂದದಿಂದ ಪ್ರಿಯಶಿಷ್ಯ ಬಾಲಪ್ರಹ್ಲಾದನನ್ನು ಭರದಿಂದ ಬರಸೆಳೆದಪ್ಪಿ "ಧನ್ಯ ಕುಮಾರ ! ನನ್ನ ಶ್ರಮವೀಗ ಸಾರ್ಥಕವಾಯಿತು. ಸಾಮ್ರಾಜ್ಞಿ ! ನಿನ್ನ ಮತ್ತು ಕುಮಾರ ಪ್ರಹ್ಲಾದನ ಪುಣ್ಯವಿಶೇಷದಿಂದ ಸರ್ವರೂ ಭಗವನ್ಮೂರ್ತಿಯಲ್ಲಿ ದೇವದೇವನ ದಿವ್ಯ ತೇಜಸ್ಸನ್ನು ಕಾಣುವಂತಾಯಿತು. ಸರ್ವೇಶ್ವರನ ಅಪ್ರಾಕೃತ ಮಂಗಳಕರ ವಾಣಿಯನ್ನು ಆಲಿಸುವ ಭಾಗ್ಯ ದೊರಕಿತು. ಪ್ರಹ್ಲಾದನಂತಹ ಶ್ರೇಷ್ಠ ಪುತ್ರನನ್ನು ಪಡೆದ ನಿನ್ನ ಭಾಗ್ಯಕ್ಕೆ ಎಣೆಯಿಲ್ಲ. "ಅನನ್ಯಾಶ್ಚಿಂತಯಂತೋ ಮಾಂ ಯೇ ಜನಾಃ ಪರ್ಯುಪಾಸತೇ ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಮ್ ॥" ಎಂಬ ಅಭಯವಚನದಂತೆ ಪ್ರಹ್ಲಾದನ ಯೋಗಕ್ಷೇಮವನ್ನು ಶ್ರೀಹರಿಯು ವಹಿಸಿರುವನು. ನಮ್ಮ ಪ್ರಿಯಶಿಷ್ಯ ಪ್ರಹ್ಲಾದರಾಜನು ಜಗತ್ತಿನಲ್ಲಿ ಮಹಾಭಾಗವತೋತ್ತಮನೆನಿಸಿ, ಅಜರಾಮರ ಕೀರ್ತಿಗಳಿಸುವನು" ಎಂದು ಹೇಳಲು ಕಯಾಧುವು ಭಕ್ತಿವಿನಯಗಳಿಂದ "ತಂದೆಯೇ ಇವೆಲ್ಲವೂ ನಿಮ್ಮ ಅನುಗ್ರಹದ ಫಲ" ಎಂದು ಅಭಿವಂದಿಸಿದಳು.

ಆಗ ನಾರದ ಮಹರ್ಷಿಗಳು ಭಗವನ್ಮೂರ್ತಿಗೆ ಕಯಾಧು ಪ್ರಹ್ಲಾದರಿಂದ ಮಂಗಳಾರತಿ ಮಾಡಿಸಿ, ಅವರಿಗೂ, ಆಶ್ರಮವಾಸಿಗಳಿಗೂ ಪ್ರಸಾದವನ್ನು ಕರುಣಿಸಿ ಪ್ರಹ್ಲಾದರಾಜನಿಗೆ ಋಷಿಕನ್ಯೆಯರಿಂದ ಆರತಿಮಾಡಿಸಿ ವೇದೋಕ್ತವಚನಗಳಿಂದ ಆಶೀರ್ವಾದಮಾಡಿಸಿದರು.

ಅನಂತರ ಸಕಲ ಋಷಿಮುನಿ ಮುಂತಾದ ಆಮಂತ್ರಿತರಿಗೆ ಆತಿಥ್ಯವನ್ನು ನೆರವೇರಿಸಿ, ಭೋಜನಾನಂತರ ಸರ್ವ ಋಷಿಮುನಿಗಳಿಂದ ಪ್ರಹ್ಲಾದನಿಗೆ ಮಂಗಳಾಶೀರ್ವಾದಗಳನ್ನು ಮಾಡಿಸಿದರು.

ಹೀಗೆ ಪ್ರಹ್ಲಾದ ಕುಮಾರನ ವರ್ಧಂತ್ಯುತ್ಸವವು ವೈಭವದಿಂದ ಜರುಗಿದ ಮೇಲೆ ನಾರದರು ಕಯಾಧೂದೇವಿ, ಪ್ರಹ್ಲಾದರನ್ನು ರಾಜಪರಿವಾರದೊಡನೆ ರಾಜಧಾನಿಗೆ ಕಳುಹಿಸಿಕೊಟ್ಟರು.

## ೮, ಪ್ರಹ್ಲಾದರಾಜರ ಸದ್ಗುಣಪೂರ್ಣ ವ್ಯಕ್ತಿತ್ವ

ನಾರದಮಹರ್ಷಿಗಳ ಆಶ್ರಮದಿಂದ ಬಂದಮೇಲೆ ಬಾಲಪ್ರಹ್ಲಾದರ ನಡವಳಿಕೆಯಲ್ಲಿ ಒಂದು ರೀತಿಯ ಮಾರ್ಪಾಟಾಗಹತ್ತಿತು. ಅವರು ನಾರದರ ಉಪದೇಶವನ್ನು ಜೀವನದಲ್ಲಿ ಅಳವಡಿಸಿಕೊಂಡು ಓರ್ವ ಭಾಗವತೋತ್ತಮ-ಮಹಾತ್ಮನಲ್ಲಿರಬೇಕಾದ ಸದ್ಗುಣವಿರಾಜಿತರಾಗಿ ಐದುವರ್ಷ ವಯಸ್ಕರಾಗಿದ್ದಾಗಲೇ ಆಚರಣೆಗೆ ತಂದು, ವಿಶಿಷ್ಟ ರೀತಿಯಿಂದ ತಮ್ಮಜೀವನವನ್ನು ರೂಪಿಸಿಕೊಳ್ಳಲಾರಂಭಿಸಿದರು.

ಪ್ರಹ್ಲಾದರಾಜರ ಯೋಗ್ಯತೆ ಬಹುದೊಡ್ಡದು. ಭಗವದ್ಭಕ್ತರಲ್ಲಿ ಅವರು ಅಗ್ರಗಣ್ಯರು. ಅವರ ಹರಿಭಕ್ತಿಗೆ ಯಾವಾಗಲೂ ಕುಂದಿರಲಿಲ್ಲ. ಅವರ ಹರಿಭಕ್ತಿಯು ಶಾಶ್ವತವೂ, ನಿತ್ಯವೂ ಆಗಿತ್ತು.[1] ಅವರು ಮಾತೃಗರ್ಭದಲ್ಲಿದ್ದಾಗಲಿಂದಲೂ ಹರಿ ಭಕ್ತರು, ಜನ್ಮವೈಷ್ಣವರು[2]. ತಂದೆಯಾದ ಹಿರಣ್ಯಕಶ್ಯಪನ ಬಾಯಿಂದ 'ನಾರಾಯಣ' ನಾಮೋಚ್ಚರಣವಾಗುತ್ತಿದ್ದಾಗಲೇ ಪ್ರಹ್ಲಾದರು ಮಾತೃಗರ್ಭವನ್ನು ಸೇರಿದರಾದ್ದರಿಂದಲೇ ಅವರು 'ಜನ್ಮವೈಷ್ಣವ' ರಾದರು. ಅವರ ಜೀವನವು ಪ್ರಾರಂಭದಿಂದ ಕೊನೆಯವರೆಗೂ ಶ್ರೀಹರಿಭಕ್ತಿಯಿಂದ ಸುಸಂಸ್ಕೃತವಾದುದು. ಅವರ ಬದುಕು ಪರಮ ಪವಿತ್ರ. ಪ್ರಹ್ಲಾದರ ದೇಹದಲ್ಲಿನ ರಕ್ತದಮನಿಗಳಲ್ಲಿ ಶ್ರೀಹರಿಭಕ್ತಿಯೇ ಓತಪ್ರೋತವಾಗಿ ಹರಿಯುತ್ತಿತ್ತು, ಅದು ಅಸ್ಥಿಗತವಾಗಿತ್ತು, ಅಚ್ಯುತನ ರತಿ, ಭಗವಂತನ ನಾಮಮಂತ್ರವೇ ಅವರ ಉಸಿರಾಗಿತ್ತು. ಅವರ ಪ್ರತಿಯೊಂದು ನಡೆ, ನುಡಿ, ಚಿಂತನ ಎಲ್ಲವೂ ಪರಮಾತ್ಮನ ಸಂಬಂಧಿಯಾಗಿತ್ತು.[3] ಪ್ರಹ್ಲಾದರು ಅಜಾತಶತ್ರುಗಳು, ಶಮದಮಾದಿ ಸಂಪದ್ಭರಿತರು. ಉತ್ತಮ ಜೀವಿಗಳು, ಸುಶೀಲರು. ಸತ್ಯಂಧರು, ಜಿತೇಂದ್ರಿಯರು. ಸದಾ ಪರಮಾತ್ಮನಲ್ಲೇ ಮನಸ್ಸುಳ್ಳವರು.[4] ಈ ಒಂದೊಂದು ವಿಶೇಷಣವೂ ಅವರಲ್ಲಿ ಸಾರ್ಥಕವಾಗಿತ್ತು. ಹೀಗೆ ಅವರ ಜೀವನ, ಚರಿತ್ರೆಗಳು ವೈಶಿಷ್ಟ ಪೂರ್ಣವಾದವು.

ಬಾಲಕರಾದ ಪ್ರಹ್ಲಾದರ ಏಕೈಕಕಾರ್ಯವೆಂದರೆ ಭಗವಂತನ ಧ್ಯಾನ. ಅವರಿಗೆ ಊಟ, ತಿಂಡಿ, ನಿದ್ರೆ ಯಾವುದೂ ಬೇಡ. ಅಚ್ಯುತನ ಅನುರಾಗವೇ ಅವರ ಜೀವನದ ಇತಿಮಿತಿ. ಸರ್ವದಾ ಪರಮಾತ್ಮಸಮಾಹಿತರಾಗಿದ್ದ ಅವರಿಗೆ ಆಟ-ಪಾಟಗಳಲ್ಲಿ ಎಂದೂ ಪ್ರವೃತ್ತಿಯುಂಟಾಗುತ್ತಿರಲಿಲ್ಲ[5] ಪ್ರಹ್ಲಾದರು ಪರಮಾತ್ಮನ ಗುಣಗಳನ್ನು

---

1. ಪ್ರಹ್ಲಾದೋ ನಿತ್ಯಭಕ್ತಿಮಾನ್ ‖ -ಬ್ರಹ್ಮಾಂಡಪುರಾಣ —ಭಾ. ತಾ.
2. "ಪ್ರಹ್ಲಾದೋ ಜನ್ಮವೈಷ್ಣವಃ ‖" ಶ್ರೀನರಸಿಂಹಪುರಾಣ ಅ. ೪೧
3. "ವಾಸುದೇವೇ ಭಗವತಿ ಯಸ್ಯ ನೈಸರ್ಗಿಕೀ ರತಿಃ ‖ —ಭಾಗವತ.
4 "ಬ್ರಹ್ಮಣ್ಯಃ ಶೀಲಸಂಪನ್ನಃ ಸತ್ಯಸಂಧೋ ಜಿತೇಂದ್ರಿಯಃ ‖" —ಭಾಗವತ.
5. "ನ್ಯಸ್ತಕ್ರೀಡನಕೋ ಬಾಲಃ ‖" —ಭಾಗವತ

ಅನುಸಂಧಾನಮಾಡಿಕೊಂಡು ತಮ್ಮಷ್ಟಕ್ಕೆ ತಾವೇ ಅಳುವರು, ಒಮ್ಮೆ ನಗುವರು, ಮತ್ತೊಮ್ಮೆ ನಾಟ್ಯವಾಡುವರು ಅವರು 'ಕೃಷ್ಣಗ್ರಹಗೃಹೀತಾತ್ಮ' ರಾಗಿದ್ದರು. ಅವರಿಗೆ ಸದಾ ದೇವರ ಹುಚ್ಚು ಹಿಡಿದುಹೋಗಿದ್ದಿತು.[6] ದೇವರ ಕೊರಗು ಚೆನ್ನಾಗಿ ಹತ್ತಿದ್ದ ಅವರು ಹುಟ್ಟಿನಿಂದಲೇ ಪರಮಭಾಗವತರಾಗಿದ್ದರು.

ಜಗತ್ತಿನ ಜೀವರಾಶಿಯನ್ನು ಎರಡು ಗುಂಪಾಗಿ ಭಾಗಿಸಬಹುದು- ದೇವ ಮತ್ತು ಅಸುರ ಎಂದು. ಶ್ರೀಹರಿಭಕ್ತಿಪರಾಯಣರು ದೇವಗಣದವರು ಅದಿಲ್ಲದವರೇ ಅಸುರರ ಗುಂಪು. ಇದು ಶಾಸ್ತ್ರಸಮ್ಮತವೂ ಆಗಿದೆ. ಜಗತ್ತಿನ ಅತಿಮುಖ್ಯ ಮಂತ್ರವೇ ಶ್ರೀವಿಷ್ಣುಭಕ್ತಿ. ಅದಿಲ್ಲದೇ ಉಳಿದೆಲ್ಲವೂ ವ್ಯರ್ಥ. ಎಲ್ಲ ವ್ಯವಹಾರಗಳಿಗೂ ಅಳತೆಗೋಲು. ವಿಷ್ಣುಭಕ್ತಿರಹಿತವಾದ ಯಾವುದೂ ಧರ್ಮವಾಗಲಾರದು. ಭಕ್ತಿಸಹಕೃತವಾದುದೆಲ್ಲವೂ ಧರ್ಮವೇ ! ಈ ಒಂದು ಮಾನದಂಡದಿಂದ ಅಳೆದು ವಿಚಾರಮಾಡಿದಾಗ ಪ್ರಹ್ಲಾದರಾಜರ ಯೋಗ್ಯತೆಯು ವ್ಯಕ್ತವಾಗುವುದು. ಅವರ ಸ್ಥಾನ ಅದೆಷ್ಟು ಶ್ರೇಷ್ಠವೆಂಬುದು ಸ್ಪಷ್ಟವಾಗುವುದು"

ಹಿರಣ್ಯಕಶ್ಯಪನಿಗೆ ಪ್ರಹ್ಲಾದ ಸಹ್ಲಾದ ಅನುಹ್ಲಾದ ಹ್ಲಾದ ಎಂದು ನಾಲ್ವರು ಪುತ್ರರು. ಅವರಲ್ಲಿ ಬಾಲಕ ಪ್ರಹ್ಲಾದ ಶ್ರೀಮನ್ನಾರಾಯಣೋಪಾಸಕನು. ಅವನು ಸದಾಚಾರ ಸಂಪನ್ನನೂ ಬ್ರಾಹ್ಮಣಪ್ರಿಯನೂ, ಜಿತೇಂದ್ರಿಯನೂ, ಸತ್ಯಪ್ರಜ್ಞನೂ ಆಗಿದ್ದನು. ಅವನು ಪರಮಾತ್ಮನಂತೆ [ಕಿಂಚಿತ್ಸಾಮ್ಯ] ಭೂತದಯೆಯುಳ್ಳವನೂ ಸಮಸ್ತ ಪ್ರಾಣಿಗಳಲ್ಲಿ ವಾತ್ಸಲ್ಯಪೂರ್ಣನೂ ಆಗಿದ್ದನು. ಹಿರಿಯರಲ್ಲಿ ದಾಸನಂತೆ, ದೀನರಲ್ಲಿ ತಂದೆಯಂತೆ, ಸಮಾನರಲ್ಲಿ ಅಣ್ಣ ತಮ್ಮಂದಿರಂತೆಯೂ ಗುರುಗಳಲ್ಲಿ ಪೂಜ್ಯ ಭಾವನೆಯುಳ್ಳವನೂ ಆಗಿ, ತನ್ನ ಲೋಕವೃತ್ತಿಯನ್ನು ಆಚರಿಸುತ್ತಿದ್ದನು. ವಿದ್ಯಾ ಧನ, ರೂಪ, ಸಂಪತ್ತು, ಸತ್ಕುಲಪ್ರಸೂತಿ [ರಾಜವಂಶದಲ್ಲಿ ಜನ್ಮ] ಇವೆಲ್ಲ ತನಗಿದೆಯೆಂದು ಎಂದೂ ಗರ್ವಿಸದೆ ವಿಪತ್ಕಾಲದಲ್ಲಿಯೂ ಹರಿವಿಸ್ಮರಣೆಯಿಲ್ಲದೆಶಾಂತಚಿತ್ತನಾಗಿದ್ದು ಕಂಡು ಕೇಳಿದ ವಿಷಯಗಳಲ್ಲಿಅಸಾರಬುದ್ಧಿಯುಳ್ಳವನಾಗಿಇಂದ್ರಿಯ,ಪ್ರಾಣ ಮನಸ್ಸುಗಳನ್ನು ನಿಗ್ರಹಿಸಿ ವಿಷಯವಾಸನಾರಹಿತನಾಗಿ, ಮಹಾವಿರಕ್ತನಾಗಿದ್ದನು. ಅಸುರವಂಶದಲ್ಲಿ ಜನಿಸಿದ್ದರೂ ಆಸುರಕರ್ಮಾಚರಣೆ ಅವನಲ್ಲಿರಲಿಲ್ಲ. ಅವನು ದೇವ

---

6. "ಕೃಷ್ಣಗ್ರಹಗೃಹೀತಾತ್ಮಾ ನ ವೇದ ಜಗದೀದೃಶಮ್ । ಕ್ವಚಿದ್ರುದತಿ ವೈಕುಂಠ ಚಿಂತಾಶಬಲಚೇತನಃ ॥ ಕ್ವಚಿದ್ಧಸತಿ ತಚ್ಚಿಂತಾಹ್ಲಾದ ಉದ್ಗಾಯತಿ ಕ್ವಚಿತ್ । ನದತಿ ಕ್ವಚಿದುತ್ಕಂಠೋ ವಿಲಜ್ಜೋ ನೃತ್ಯತಿ ಕ್ವಚಿತ್ ॥ ಕ್ವಚಿತ್ತದ್ಭಾವನಾಯುಕ್ತಸ್ತನ್ಮಯೋಽನುಚಕಾರ ಹ । ಕ್ವಚಿದುತ್ಪುಲಕಸ್ತೂಷ್ಣೀಮಾಸ್ತೇ ಸಂಸ್ಪರ್ಶನಿರ್ವೃತಃ ॥ ಅಸ್ಪಂದಪ್ರಣಯಾನಂದಸಲಿಲಾಮೀಲಿತೇಕ್ಷಣಃ ॥"

ಸ್ವಭಾವನಾಗಿದ್ದನು.[7] ಶ್ರೀಹರಿಯ ಗುಣಗಳಂತೆ ಅವನಲ್ಲಿದ್ದ ಉತ್ತಮಗುಣಗಳನ್ನು ಸಂಪೂರ್ಣವಾಗಿ ಹೇಳಲು ಸಾಧ್ಯವಿಲ್ಲ[8]. ದೈತ್ಯರಿಗೆ ಸ್ವಾಭಾವಿಕ ಶತ್ರುಗಳಾದ ದೇವತೆಗಳೂ ಸಹ ಸಜ್ಜನರ ವಿಷಯವನ್ನು ಹೇಳುವಾಗ ಪ್ರಹ್ಲಾದನನ್ನೇ ದೃಷ್ಟಾಂತ ವಾಗಿ ಹೇಳುವರೆಂದಮೇಲೆ ಇನ್ನು ಪ್ರಹ್ಲಾದನ ಗುಣಗಳ ಬಗ್ಗೆ ಹೆಚ್ಚು ವಿವರಣೆ ಬೇಕಾಗಲ್ಲವಷ್ಟೇ ! ಹೆಚ್ಚು ಹೇಳುವುದೇನಿದೆ ? ಪ್ರಹ್ಲಾದರಾಜನ ಒಂದೊಂದು ಗುಣವೂ ಅವನ ಮಹಾತ್ಮ್ಯಸೂಚಕವಾಗಿದೆ ! ![9].

ಪ್ರಹ್ಲಾದನು ಸರ್ವವ್ಯಾಪ್ತನಾದ, ಸರ್ವಗುಣಪೂರ್ಣನಾದ ಶ್ರೀಮನ್ನಾರಾಯಣ ನಲ್ಲಿ ಸ್ವಾಭಾವಿಕವೂ, ನಿರ್ನಿಮಿತ್ತವೂ ಆದ ಭಕ್ತಿಯುಳ್ಳವನು. ಐದು ವರ್ಷದ ಬಾಲಕನಾಗಿದ್ದರೂ ಅವನು ಬಾಲಕರಿಗೆ ಸ್ವಾಭಾವಿಕವಾದ ಆಟ-ಪಾಟಾದಿಗಳಲ್ಲಿ ಮಗ್ನನಾಗದೆ ಅವಧೂತ ಶಿಖಾಮಣಿಯಾದ ಜಡಭರತನಂತೆ, ಸದಾ ಶ್ರೀಹರಿಧ್ಯಾನ ಪರನಾಗಿದ್ದನು. ಹಿಂದೆ ನಿರೂಪಿಸಿದಂತೆ ಕೃಷ್ಣನೆಂಬ ಗ್ರಹ (ಪಿಶಾಚ) ದಿಂದ ಗ್ರಸ್ತಮನಸ್ಕನಾಗಿದ್ದು ಅವನಿಗೆ ಹೊರಜಗತ್ತಿನ ಪರಿವೇ ಇರಲಿಲ್ಲ[10]. ಕುಳಿತಾಗ, ಓಡಾಡುವಾಗ, ಊಟ ಮಾಡುವಾಗ, ನೀರುಕುಡಿಯುವಾಗ, ಮಾತನಾಡುವಾಗ ಅವನು ಆ ವ್ಯಾಪಾರಗಳಲ್ಲಿ ಗಮನವೀಯದೆ ಶ್ರೀ ನಾರಾಯಣನ ಸಾಕ್ಷಾತ್ಕಾರವನ್ನು

---

7. ಪ್ರಹ್ಲಾದೋಽಭೂನ್ಮಹಾಂಸ್ತೇಷಾಂ ಗುಣೈರ್ಮಹದುಪಾಸಕಃ । ಬ್ರಹ್ಮಣ್ಯಃ ಶೀಲಸಂಪನ್ನಃ ಸತ್ಯಸಂಧೋ ಜಿತೇಂದ್ರಿಯಃ ॥ ಆತ್ಮವತ್ಸರ್ವಭೂತಾನಾಂ ಏಕಃ ಪ್ರಿಯಸುಹೃತ್ತಮಃ । ದಾಸವತ್ಸನ್ನತಾರ್ಯಾಂಘ್ರಿಃ ಪಿತೃವದ್ದೀನವತ್ಸಲಃ ॥ ಭ್ರಾತೃವತ್ಸದೃಶೇ ಸ್ನಿಗ್ಧೋ ಗುರುಷ್ವೀಶ್ವರಭಾವನಃ । ವಿದ್ಯಾರ್ಥರೂಪಜನ್ಮಾಢ್ಯಃ ಮಾನಸ್ತಂಭವಿವರ್ಜಿತಃ ॥ ನೋದ್ವಿಗ್ನಚಿತ್ತೋ ವ್ಯಸನೇಷು ನಿಸ್ಪೃಹಃ ಶ್ರುತೇಷು ದೃಷ್ಟೇಷು ಗುಣೇಷ್ವವಸ್ತುದೃಕ್ ದಾಂತೇಂದ್ರಿಯಪ್ರಾಣಶರೀರಧೀಸ್ಸದಾ ಪ್ರಶಾಂತಕಾಮೋ ರಹಿತಾಸುರೋಽಸುರಃ ॥ ಯಸ್ಮಿನ್ಮಹಾಗುಣಾ ರಾಜನ್ ಗೃಹ್ಯಂತೇ ಕವಿಭಿರ್ಮುಹುಃ । ನ ತೇಽಧುನಾಪಿಧೀಯಂತೇ ಯಥಾ ಭಗವತೀಶ್ವರೇ ॥ —ಭಾಗವತ

8. ಇಲ್ಲಿ ಹರಿಯ ಗುಣಗಳಂತೆ ಎಂದು ಹೇಳಿರುವುದನ್ನು ಪ್ರಹ್ಲಾದನಿಗೆ ಪರಮಾತ್ಮನ ಕಿಂಚಿತ್ ಸಾಮ್ಯವೆಂದು ತಿಳಿಯಬೇಕು.
"ಅನ್ಯೇಷಾಂ ಹರಿಸಾಮ್ಯಂತು ಕಿಂಚಿತ್ಸಾಮ್ಯಮುದೀರಿತಮ್ ।
ಸಮ್ಯಕ್ ಸಾಮ್ಯಂತು ಮತ್ಸ್ಯಾದೇರಿತಿ ಶಾಸ್ತ್ರಸ್ಯನಿರ್ಣಯಃ ॥"
—ಭಾಗವತ ತಾತ್ಪರ್ಯ-೭-೪-೩೬

9. ಯಂ ಸಾಧುಗಾಥಾ ಸದಸಿ ರಿಪವೋಽಪಿ ಸುರಾ ನೃಪ । ಪ್ರತಿಮಾನಂ ಪ್ರಕುರ್ವಂತಿ ಕಿಮುತಾನ್ಯೇ ಭವಾದೃಶಾಃ । ಗುಣೈರಲಮಸಂಖ್ಯೇಯೈಃ ಮಹಾತ್ಮ್ಯಂ ತಸ್ಯ ಸೂಚ್ಯತೇ ॥ —ಭಾಗವತ

10. 1. ವಾಸುದೇವೇ ಭಗವತಿ ಯಸ್ಯ ನೈಸರ್ಗಿಕೀರತಿಃ । ನ್ಯಸ್ತಕ್ರೀಡನಕೋ ಬಾಲೋ ಜಡವತ್ತನ್ಮನಾಃ ಸದಾ ॥ ಕೃಷ್ಣಗ್ರಹಗೃಹೀತಾತ್ಮಾ ನ ವೇದ ಜಗದೀದೃಶಮ್ ॥ —ಭಾಗವತ
2. ಜಡವತ್–ಜಡಭರತವತ್ —ಮಂದಾನಂದಿನೀ.

ಮಾತ್ರ ಅನುಸಂಧಾನಕ್ಕೆ ತಂದುಕೊಳ್ಳುತ್ತಿದ್ದನು. ಆ ಸಾಕ್ಷಾತ್ಕಾರದಲ್ಲಿ ಒಮ್ಮೊಮ್ಮೆ ಚಂಚಲಚಿತ್ತನಾದಾಗ ಅಳುವನು, ಗಟ್ಟಿಯಾಗಿ ಶ್ರೀಹರಿಯ ಗುಣಗಳನ್ನು ಗಾನ ಮಾಡುವನು, ಗೋವಿಂದನ ಧ್ಯಾನತರನಾದಾಗ ನಗುವನು: ಲಜ್ಜೆಯನ್ನು ತೊರೆದು ನರ್ತಿಸುವನು. ಶ್ರೀಹರಿಧ್ಯಾನ ಮಗ್ನನಾಗಿ ಹರಿಸರ್ವೋತ್ತಮತ್ವಜ್ಞಾನಯುಕ್ತನಾಗಿ ಶ್ರೀಹರಿಯಂತೆ ಚೇಷ್ಟೆಗಳನ್ನೆಸಗುತ್ತಾ ಅಚ್ಛಿನ್ನಭಕ್ತಿಯುಳ್ಳವನಾಗಿ, ವಿಷಯವಿರಕ್ತನಾಗಿ ಶ್ರೀಹರಿಯ ಗುಣಗಾನ ಮಾಡುತ್ತಾ ಪುಳಕಿತಗಾತ್ರನಾಗಿ ಕಣ್ಣುಗಳಿಂದ ಆನಂದಾಶ್ರು ಹರಿಸುತ್ತ ಶ್ರೀಹರಿಮನಸ್ಕನಾಗಿ ಶ್ರೀನಾರದಾದಿ ಸತ್ಸೇವೆಯಿಂದ ದೊರಕಿದ ಜ್ಞಾನದಿಂದ ಶ್ರೀಹರಿಯಲ್ಲಿ ದೃಢ ಭಕ್ತಿಯುಳ್ಳವನಾಗಿ ಪ್ರಶಾಂತಮನಸ್ಕನಾಗಿದ್ದನು[11]. ಮಹಾನುಭಾವನಾದ ಪ್ರಹ್ಲಾದನ ಗುಣಗಳನ್ನು ಎಷ್ಟು ವರ್ಣಿಸಿದರೂ ಸ್ವಲ್ಪವೇ ಸರಿ.

## ೯. ಹಿರಣ್ಯಕಶ್ಯಪನ ರಾಜ್ಯಭಾರ

ಬ್ರಹ್ಮದೇವರ ವರವನ್ನು ಪಡೆದ ದೈತ್ಯೇಂದ್ರ ಹಿರಣ್ಯಕಶ್ಯಪನು ಸ್ವರ್ಗದ ಮೇಲೆ ದಾಳಿಮಾಡಿ ದೇವತೆಗಳನ್ನು ಜಯಿಸಿ ಬಿಟ್ಟನು. ಆಗ ಸುರಗುರು ಬೃಹಸ್ಪತ್ಯಾಚಾರ್ಯರು "ಇದು ದೈತ್ಯರ ಉನ್ನಾಹಕಾಲ, ದೇವೇಂದ್ರ! ಈಗ ಸಹನೆಯಿಂದಿದ್ದು ಮುಂದೆ ಈ ದೈತ್ಯನ ನಾಶಮಾಡಲು ಯತ್ನಿಸಬೇಕು" ಎಂದು ಸಲಹೆ ನೀಡಿದರು. ಅದರಂತೆ ದೇವತೆಗಳಿಂದೊಡಗೂಡಿದ ಮಹೇಂದ್ರನು ಸ್ವರ್ಗದಿಂದ ಕಣ್ಮರೆಯಾದನು.

ಹಿರಣ್ಯಕಶ್ಯಪನು ಶ್ರೀಹರಿಪರಮಾತ್ಮನನ್ನು ದ್ವೇಷಿಸಹತ್ತಿದನು. ಸಮಗ್ರೈಶ್ವರ್ಯಾದಿಗುಣರತ್ನಾಕರನಾದ, ಪರಾತ್ಪರನಾದ ಶ್ರೀಹರಿಯಲ್ಲಿ ಜಯಾಂಶೋಪೇತನಾದ್ದರಿಂದ ಸ್ವಯಂ ಭಕ್ತನಾಗಿದ್ದರೂ ಹಿರಣ್ಯಕಶ್ಯಪನು ದ್ವೇಷಮಾಡಿದನು.[12]

---

11. ಆಸೀನಃ ಪರ್ಯಟನ್ನಶ್ನನ್ ಶಯಾನಃ ಪ್ರಪಿಬನ್ ಬ್ರುವನ್ ।
ನಾನುಸಂದಧ ಏತಾನಿ ಗೋವಿಂದ ಪರಿರಂಭಿತಃ ॥ ೩೯ ॥
ಕ್ವಚಿದ್ರೋದಿತಿ ಗೋವಿಂದ ಚಿಂತಾಚಂಚಲ ಚೇತನಃ
ಕ್ವಚಿದ್ಧಸತಿ ತಚ್ಚಿಂತಾಹ್ಲಾದ ಉದ್ಗಾಯತಿ ಕ್ವಚಿತ್ ॥ ೪೦ ॥
ನದತಿ ಕ್ವಚಿದುತ್ಕಂಠೋ ವಿಲಜ್ಜೋ ನೃತ್ಯತಿ ಕ್ವಚಿತ್ ।
ಕ್ವಚಿತ್ತದ್ಭಾವನಾಯುಕ್ತಸ್ತನ್ಮಯೋನು ಚಕಾರ ಹ ॥ ೪೧ ॥
ಕ್ವಚಿದುತ್ಪುಲಕಸ್ತೂಷ್ಣೀ ಮಸ್ತೇಪಸ್ಪರ್ಶಸಸ್ಪೃಹಃ ।
ಅಸ್ಪಂದಪ್ರಾಣ ಆನಂದ ಸಲೀಲಾಮೀಲಿತೇಕ್ಷಣಃ ॥ ೪೨ ॥
ಸ ಉತ್ತಮಶ್ಲೋಕಪದಾರವಿಂದಯೋ ರ್ನಿಷೇವಯಾ
ಕಿಂಚನ ಸಂಗಲಬ್ಧಯಾ ।
ತನ್ವನ್ ಪರಾಂ ನಿರ್ವೃತಿಮಾತ್ಮನೋ ಮುಹುಃ
ದುಸ್ಸಂಗದೀನಃ ಸ್ವಮನಶ್ಶಮಂ ವ್ಯಧಾತ್ ॥ ೪೨ ॥

12 "ಸ್ವತೋ ಭಕ್ತಾ ಹಿರಣ್ಯಾದ್ಯಾ: ಪರಾವೇಶಾದ್ಧರೌ ದ್ವಿಷ:" ಪರ ಎಂದರೆ ಇಲ್ಲಿ ಪರಮಾತ್ಮನೆಂದರ್ಥವಲ್ಲ. ಪರ ಎಂದರೆ ಅಸುರಾವೇಶದಿಂದ ಎಂದರ್ಥ.

ಹಿರಣ್ಯಕಶ್ಯಪನು ದಶದಿಕ್ಕುಗಳಲ್ಲಿ ದೇವತೆಗಳು, ಮನುಷ್ಯರು, ಗಂಧರ್ವವರು, ಗರುಡರು, ನಾಗರು, ಸಿದ್ಧರು, ಚಾರಣರು, ವಿದ್ಯಾಧರರು, ಯಕ್ಷ-ರಾಕ್ಷಸ–ಪಿಶಾಚ-ಭೂತಪತಿಗಳೇ ಆದ ಎಲ್ಲರನ್ನೂ ಜಯಿಸಿ, ಲೋಕಪಾಲಕರ ಸ್ಥಾನಗಳನ್ನು ಸ್ವಾಧೀನಪಡಿಸಿಕೊಂಡು ಸ್ವರ್ಗಲೋಕವನ್ನು ಜಯಿಸಿ, ಅವನು ವಿಶ್ವವಿಜಯಿ-ಯೆನಿಸಿ ಮಹೇಂದ್ರನ ಅಮರಾವತಿಯನ್ನು ಆಕ್ರಮಿಸಿ ಅಲ್ಲಿ ಸ್ವರ್ಗಲೋಕದ ಉತ್ತಮ ವಿಷಯಾದಿ ಸುಖಗಳನ್ನು ಅನುಭವಿಸುತ್ತಾ ಯಜ್ಞಭಾಗಿಗಳಲ್ಲದ ದೇವತೆಗಳಿಂದ ಅಂದರೆ ಆದಿತ್ಯರು, ವಸುಗಳು, ರುದ್ರರು ಎಂಬೀ ದೇವತಾತ್ರಯದಿಂದ ಸೇವೆಗೊಳ್ಳುತ್ತಾ ಮದೋನ್ಮತ್ತನಾಗಿ ಅವರೆಲ್ಲರಿಂದ ಕಪ್ಪಕಾಣಿಕೆಗಳನ್ನು ಪಡೆಯುತ್ತಾ ಎಲ್ಲರಾಜರಿಗೂ ಶಾಸಕನಾಗಿ ರಾಜ್ಯಭಾರಮಾಡಲಾರಂಭಿಸಿದನು.

ಸನಕಾದಿಗಳ ಶಾಪವನ್ನು ಹೊಂದಿದ್ದ ಜಯನಾಮಕ ದ್ವಾರಪಾಲಕನು ಹಿರಣ್ಯಕಶಿಪುವಾಗಿ ಜನಿಸಿ, ವರದಿಂದ ಮತ್ತನಾಗಿ ಲೋಕಕಂಟಕನಾಗಿ ರಾಜ್ಯಭಾರ ಮಾಡಲಾರಂಭಿಸಿದನು. ಅವನ ಉಗ್ರಶಾಸನವನ್ನು ತಾಳಲಾರದೆ ಲೋಕಪಾಲಕರೆಲ್ಲರೂ ಸೇರಿ ಶ್ರೀಹರಿಪರಮಾತ್ಮನಿಗೆ ಶರಣುಹೋದರು.[2]

ದೇವತೆಗಳು ಜಿತೇಂದ್ರಿಯರಾಗಿ ಚಿತ್ತಶುದ್ಧಿಯಿಂದ ನಿದ್ರೆಯನ್ನು ತ್ಯಜಿಸಿ ವಾಯುಭಕ್ಷಣಮಾಡುತ್ತಾ ಶ್ರೀಮನ್ನಾರಾಯಣನನ್ನು ಉಪಾಸನೆಮಾಡುತ್ತಾ "ಓಂ ನಮೋ ಭಗವತೇ ಮಹಾಪುರುಷಾಯ ಮಹಾತ್ಮನೇ । ವಿಶುದ್ಧಾನುಭವಾನಂದ–ಸಂದೋಹಾಯ ಯತೋಽಭಯಮ್ ॥" ಎಂದು ಅತ್ಯಂತ ಭಕ್ತಿಶ್ರದ್ಧೆಗಳಿಂದ ಪ್ರಾರ್ಥಿಸಹತ್ತಿದರು. ಇವರ ಭಕ್ತಿಗೆ ಮೆಚ್ಚಿದ ಶ್ರೀಮನ್ನಾರಾಯಣನು ಆಕಾಶವಾಣಿಯ (ಶ್ರೀವಾಯುದೇವರ) ದ್ವಾರಾ ಅವರಿಗೆ ಹೀಗೆ ಅಭಯವಚನವನ್ನು ಅನುಗ್ರಹಿಸಿದನು,

"ಮಾಭೈಷ್ಟ ವಿಬುಧಶ್ರೇಷ್ಠಾಃ ಸರ್ವೇಷಾಂ ಭದ್ರಮಸ್ತು ವಃ ।
ಮದ್ದರ್ಶನಂ ಹಿ ಭೂತಾನಾಂ ಸರ್ವಶ್ರೇಯೋಪಪತ್ತಯೇ ॥
ಜ್ಞಾತಮೇತಸ್ಯ ದೌರಾತ್ಮ್ಯಂ ದೈತೇಯಾಪಸದಸ್ಯ ಯತ್ ।
ತಸ್ಯ ಶಾಂತಿಂ ಕರಿಷ್ಯಾಮಿ ಕಾಲಸ್ತಾವತ್ಪ್ರತೀಕ್ಷತಾಮ್ ॥
ಯದಾ ದೇವೇಷು ವೇದೇಷು ಗೋಷು ವಿಪ್ರೇಷು ಸಾಧುಷು ।
ಧರ್ಮೇ ಮಯಿ ಚ ವಿದ್ವೇಷಃ ಸ ವಾ ಆಶು ವಿನಶ್ಯತಿ ॥
ನಿರ್ವೈರಾಯ ಪ್ರಶಾಂತಾಯ ಸ್ವಸುತಾಯ ಮಹಾತ್ಮನೇ ।
ಪ್ರಹ್ಲಾದಾಯ ಯದಾ ದ್ರುಹ್ಯೇದ್ಧರಿಷ್ಯೇಽಪಿ ವರೋರ್ಜಿತಮ್ ॥

ದೇವತಾಶ್ರೇಷ್ಠರೆ ! ಹೆದರಬೇಡಿ, ನಿಮ್ಮೆಲ್ಲರಿಗೂ ಮಂಗಳವಾಗಲಿ. ನನ್ನ ದರ್ಶನ (ಮದ್ವಿಷಯಜ್ಞಾನ)ವು ಸಮಸ್ತಭೂತಗಳ ಸಕಲಶ್ರೇಯಸ್ಸಿಗೆ ಕಾರಣ

2. ತಸ್ಮಾದುಗ್ರದಂಡಸಂವಿಗ್ನಾಃ ಸರ್ವೇ ಲೋಕಾಃ ಸಪಾಲಕಾಃ ।
ಅನ್ಯತ್ರಾಲಬ್ಧಶರಣಾಃ ಶರಣಂ ಯಯುರಚ್ಯುತಮ್ ॥ —ಭಾಗವತ

ವಾಗಿದೆ. ದೈತ್ಯಾಪಸದನಾದ ದುರಾತ್ಮನಾದ ಹಿರಣ್ಯಕಶ್ಯಪನ ದಾಂಧಲೆ, ಕಿಡಿಗೇಡಿತನಗಳನ್ನು ನಾನು ತಿಳಿದಿದ್ದೇನೆ. ಅವಕ್ಕೆ ತಕ್ಕ ಪರಿಹಾರವನ್ನು ಮಾಡುತ್ತೇನೆ. ಸಮಯಪ್ರತೀಕ್ಷೆಮಾಡಿರಿ. ಆ ದೈತ್ಯನು ಯಾವಾಗ ವೇದಗಳು, ದೇವತೆಗಳು, ಗೋವುಗಳು, ಬ್ರಾಹ್ಮಣರು, ಸಾಧುಜನರು, ಧರ್ಮವನ್ನೂ ಮತ್ತು ನನ್ನನ್ನೂ ಹೆಚ್ಚಾಗಿ ದ್ವೇಷಿಸುವನೋ ಆಗ ಅವನ ವಿನಾಶವು ತಾನಾಗಿಯೇ ಆಗುವುದು! ಮುಖ್ಯವಾಗಿ ನಿರ್ವೈರನೂ ಪ್ರಶಾಂತನೂ, ಸರ್ವಗುಣಪೂರ್ಣನಾದ ನನ್ನಲ್ಲಿ ಭಕ್ತಿಯುಳ್ಳವನೂ ಆದ ಪ್ರಹ್ಲಾದನನ್ನು ಯಾವಾಗ ಹೆಚ್ಚಾಗಿ ದ್ವೇಷಿಸಿ ಪೀಡಿಸುವನೋ; ಆವಾಗ ನಾನು ವರಬಲದಿಂದ ಉನ್ಮತ್ತನಾಗಿರುವ ಹಿರಣ್ಯಕಶ್ಯಪನನ್ನು ಸಂಹರಿಸುವೆನು."

ಧೀರಗಂಭೀರಧ್ವನಿಯಿಂದ ಬಂದ ಈ ಭಗವಂತನ ಅಭಯವಚನವನ್ನು (ಅಮೃತವಾಣಿ) ಆಲಿಸಿ ಪರಮಾನಂದತುಂದಿಲರಾಗಿ ಶ್ರೀಹರಿಯ ಮಹಿಮೆಯನ್ನು ಕೊಂಡಾಡುತ್ತಾ ತಮ್ಮ ಕಾರ್ಯವು ಯಶಸ್ವಿಯಾಗುವುದು, ದೈತ್ಯನ ಸಂಹಾರವಾಗುವುದೆಂದು ನಂಬಿ ದೇವತೆಗಳು ಭಗವಂತನಿಗೆ ನಮಸ್ಕರಿಸಿ ತೆರಳಿದರು.

ದೇವತೆಗಳು ಪ್ರಾರ್ಥಿಸಿದಾಗ ಶ್ರೀಹರಿಯು ವೇದ, ದೇವತೆಗಳು, ಗೋಬ್ರಾಹ್ಮಣರು, ಸಜ್ಜನರು, ಧರ್ಮ ಮತ್ತು ನನ್ನ ಮೇಲೆ ಹಿರಣ್ಯಕಶ್ಯಪನು ಹೆಚ್ಚು ದ್ವೇಷಮಾಡಿದಾಗ ಮತ್ತು ಪ್ರಹ್ಲಾದನನ್ನು ದ್ವೇಷಿಸಿ ಹಿಂಸಿಸಿದಾಗ ಅವನನ್ನು ಸಂಹರಿಸುತ್ತೇನೆ' ಎಂದು ಅಭ್ಯಹಕೊಡಿಸಿ "ಪ್ರಹ್ಲಾದನನ್ನು ಹಿಂಸಿಸಿದಾಗ" ಎಂದು ಒತ್ತುಕೊಟ್ಟು ಹೇಳಿರುವುದು ಅತ್ಯಂತ ಗಮನಾರ್ಹವಾಗಿದೆ.

'ಪ್ರಹ್ಲಾದನಿಗಾಗಿಯೇ ನಾನು ಅವತರಿಸುತ್ತೇನೆ' ಎಂದು ಹೇಳಿದ್ದರಿಂದ ಜಗತ್ತಿನಲ್ಲಿ ಪ್ರಹ್ಲಾದನು ಶ್ರೀಹರಿಯ ಭಕ್ತಾಗ್ರೇಸರ, ಅವನಲ್ಲಿ ಭಗವಂತನಿಗೆ ಅಪಾರ ವಾತ್ಸಲ್ಯ ಅನುಗ್ರಹವಿದೆ ಎಂದು ಖ್ಯಾತಿಯುಂಟಾಗುತ್ತದೆ. ಅವನ ಕೀರ್ತಿಗಾಗಿ, ಆದರಿಂದ ಶ್ರೀಹರಿಯ ಭಕ್ತಾಭಿಮಾನವೂ ವಿಖ್ಯಾತವಾಗುವುದೆಂಬ ಅಭಿಪ್ರಾಯದಿಂದ ಶ್ರೀಮನ್ನಾರಾಯಣನು ದೇವತೆಗಳೆದುರು ಪ್ರಹ್ಲಾದರಾಜನನ್ನು ವಿಶೇಷಾಕಾರವಾಗಿ ನಿರ್ದೇಶನ ಮಾಡಿ ತನ್ನ ಭಕ್ತಪರಾಧೀನತೆಯನ್ನು ಸ್ಪಷ್ಟಪಡಿಸಿದ್ದಾನೆ ಎಂದು ತಿಳಿಯಬೇಕು.

## ೧೦. ಪಿತಾ—ಪುತ್ರರ ದ್ವಂದ್ವಾರಂಭ !

ತ್ರಿಲೋಕವಿಜಯಗಳಿಸಿದ ಹಿರಣ್ಯಕಶ್ಯಪನು ತನ್ನ ರಾಜಧಾನಿಯಲ್ಲಿ ಸುರರನ್ನು ಜಯಿಸಿದ ನಿಮಿತ್ತವಾಗಿ "ವಿಜಯೋತ್ಸವ"ವನ್ನು ನೆರವೇರಿಸುತ್ತಿದ್ದಾನೆ. ಪ್ರತಿದಿನವೂ ನರ್ತನ ಗೀತಾದಿಗಳಿಂದ ಸುರಸುಂದರಿಯನ್ನು ಮೀರಿಸುವ ರೂಪಲಾವಣ್ಯಶೋಭಿತರಾದ ದೈತ್ಯಸಾಮ್ರಾಜ್ಯದ ಆಸ್ಥಾನನರ್ತಕಿಯರು, ಸಂಗೀತಕಾರರು ಹಿರಣ್ಯಕಶ್ಯಪನನ್ನೂ ಸಭಾಸದರನ್ನೂ ಆನಂದಗೊಳಿಸುತ್ತಿದ್ದಾರೆ, ವಿವಿಧ ಭಕ್ಷ್ಯಭೋಜ್ಯಗಳ ಔತಣಕೂಟ, ಸುರಾಪಾನಾದಿಗಳಿಂದ ಎಲ್ಲರೂ ಮದೋನ್ಮತ್ತರಾಗಿದ್ದಾರೆ, ಎಲ್ಲರೂ

ಕನಕಕಶ್ಯಪನನ್ನು ಹೊಗಳುತ್ತಿದ್ದಾರೆ. ಸಭಾಸದರ ಸ್ತುತಿ, ಓಲೈಸುವಿಕೆಗಳಿಂದ ದೈತ್ಯಸಾಮ್ರಾಟನು ಮೈಮರೆತು ಅಮಂದಾನಂದತುಂದಿಲನಾಗಿದ್ದಾನೆ.

ಆಗ ಪ್ರಹ್ಲಾದಕುಮಾರನು ಶ್ರೀಹರಿಸ್ಮರಣೆಮಾಡುತ್ತಾ ಸಭೆಗೆ ಬಂದನು.

ರಾಗ—ಷಣ್ಮುಖಪ್ರಿಯ ತಾಳ—ರಝಂಪೆ

ಸ್ಥಿರವಲ್ಲ ವೈಭವವು ಜಗದೊಳಗೆ ಮರುಳೇ ।
ನೀರಮೇಲಣಗುಳ್ಳೆಯಂತಿದನು ತಿಳಿಯೋ
ಪರವಶದಿ ತಿಂದುಂಡು ಮಧುಪಾನದಿಂ ಮದಿಸಿ ।
ಮೆರೆಯದಿರು ಕ್ಷಣಿಕವಿದು ವಿಷಯಸುಖ ಬಂಧಕವು ॥ ಅ । ಪ ॥
ಹರಿಯ ಭಜಿಸದ ಜಿಹ್ವೆ ಚರಿತೆಕೇಳದ ಕರ್ಣ।
ವರರೂಪವೀಕ್ಷಿಸದ ಕಣ್ಣಿದ್ದೇನುಫಲ ? ॥
ಪರಮಸುಖವೀವ ವರ ಸಿರಿ ರಮಣಸಂಘ್ರಿಗಳ ।
ಸ್ಮರಿಸು ಮೂಢನೆ ಜನುಮ ವ್ಯರ್ಥಮಾಡಲಿ ಬೇಡ ॥ ಚರಣ ॥

ಅದನ್ನಾಲಿಸಿ ಅಸಮಾಧಾನಪಾದರೂ ಹೊರಗೆ ತೋರ್ಪಡಿಸದೆ ಹಿರಣ್ಯಕಶ್ಯಪನು ಹುಸಿನಗೆ ಹೊರಸೂಸುತ್ತಿರಲು ಪ್ರಹ್ಲಾದನು ಮುಂದೆ ಬಂದು "ತಂದೆಯೇ ವಂದಿಸುವೆನು" ಎಂದು ನಮಸ್ಕರಿಸಿದನು.

ಹಿರಣ್ಯಕಶ್ಯಪನು ಅಸಮಾಧಾನ-ಕೋಪಗಳನ್ನು ಹತ್ತಿಕ್ಕಿಕೊಂಡು "ಬಾ ಚಿರಂಜೀವಿ ! ನನ್ನ ಅಂಕವನ್ನಲಂಕರಿಸು" ಎಂದು ಪ್ರಹ್ಲಾದನನ್ನು ತೊಡೆಯಮೇಲೆ ಕೂಡಿಸಿಕೊಂಡು ಮೈದಡವಿ, ಪುರೋಹಿತರನ್ನು ನೋಡಿ"ಆಚಾರ್ಯಪಂಡರೇ! ನಮ್ಮ ಈ ದಿಗ್ವಿಜಯೋತ್ಸವ ನಿಮಿತ್ತವಾದ ವಿಶ್ರಾಂತಿಯು ಮುಗಿದ ಮೇಲೆ ನಿಮ್ಮ ಶಾಸ್ತ್ರ ಮತ್ತು ಶಸ್ತ್ರ ವಿದ್ಯಾಲಯದಲ್ಲಿ ನಮ್ಮ ಕುಮಾರ ಪ್ರಹ್ಲಾದನ ಹೆಸರನ್ನು ದಾಖಲು ಮಾಡಿಸಿ ವಿದ್ಯಾಭ್ಯಾಸ ಮಾಡಿಸಿರಿ" ಎಂದು ಹೇಳಿದನು. ಶಂಡಾಮರ್ಕರು ಸಂತೋಷದಿಂದ "ಆಗಬಹುದು ಮಹಾಪ್ರಭು" ಎಂದು ವಿಜ್ಞಾಪಿಸಿದರು.

ಹಿರಣ್ಯಕಶಿಪುವು ಪ್ರಹ್ಲಾದನ ಬೆನ್ನಿನಮೇಲೆ ಕೈಯಾಡಿಸುತ್ತಾ "ಕುಮಾರಾ, ನೀನು ನಮ್ಮ ದೈತ್ಯವಂಶಭೂಷಣನಾಗಿ ಕೀರ್ತಿಗಳಿಸಬೇಕು. ಆಚಾರ್ಯರು ಉಪದೇಶಿಸಿದಂತೆ ನಡೆದು ನನ್ನ ಮನಸ್ಸಂತೋಷಪಡಿಸಬೇಕು" ಎನಲು ಪ್ರಹ್ಲಾದನು ವಿನೀತನಾಗಿ "ಆಗಲಿ ತಾತ ! ನಾನಿನ್ನು ಮಾತೆಯ ಬಳಿಗೆ ಹೋಗುವೆನು" ಎಂದು ತಂದೆಗೆ ವಂದಿಸಿ ಅಂತಃಪುರಕ್ಕೆ ತೆರಳಿದನು.

## ೧೧. ಗುರುಕುಲದಲ್ಲಿ ಪ್ರಹ್ಲಾದರಾಜ

ದೈತ್ಯಪುರೋಹಿತರಾದ ಶಂಡಾಮರ್ಕರ ವಿದ್ಯಾಪೀಠದ ಮುಂಭಾಗದ ಉಪವನದಲ್ಲಿ ದೈತ್ಯಬಾಲಕರು ಗುಂಪಾಗಿ ಸೇರಿ ಆಟಪಾಟಗಳಲ್ಲಿ ಮಗ್ನರಾಗಿದ್ದಾರೆ.

ತಂದೆಯ ಆಜ್ಞೆಯಂತೆ ಗುರುಕುಲ ಸೇರಿದ ಪ್ರಹ್ಲಾದನು ಕರದಲ್ಲಿ ನಾರಾಯಣನ ವಿಗ್ರಹವನ್ನು ಹಿಡಿದುಬಂದನು. ದೈತ್ಯಬಾಲಕರು ಅವನನ್ನು ಸ್ವಾಗತಿಸಿದರು.

ಪ್ರಹ್ಲಾದನು ನಸುನಗುತ್ತಾ "ಮಿತ್ರರೇ, ಗುರುಗಳು ಬಂದಿರುವರೇ?' ಎನಲು ವಿಚಕ್ಷಣನೆಂಬ ವಿದ್ಯಾರ್ಥಿಯು "ಕುಮಾರ! ಗುರುಗಳಿಂದು ಬರುವುದು ಸ್ವಲ್ಪ ತಡವಾಗಬಹುದೆಂದು ಹೇಳಿದ್ದಾರೆ. ರಾಜಪುತ್ರ ! ಉಪಾಧ್ಯಾಯರು ಬರುವವರೆಗೆ ಏನು ಮಾಡುವುದು?" ಎಂದು ಪ್ರಶ್ನಿಸಿದನು.

ಆಗ ಪ್ರಹ್ಲಾದನು "ಗೆಳೆಯರೆ, ಇಂದು ನಾನೊಂದು ಕವಿತೆಯನ್ನು ರಚಿಸಿರುವೆನು. ಅದನ್ನು ಹೇಳುವೆನು ಕೇಳಿರಿ. ನೀವೂ ನನ್ನೊಡನೆ ಗಾನಮಾಡಿರಿ" ಎಂದು ಕೈಯಲ್ಲಿ ಚಿಟಿಕೆಗಳನ್ನು ಹಿಡಿದು ಹಾಡಹತ್ತಿದನು.

ರಾಗ—ಸರಸ್ವತಿ ತಾಳ—ಆದಿ

ನಾರಾಯಣ ಎನ್ನಿರೋ ನೀವೆಲ್ಲರು ।
ನಾರದನುತನಂಘ್ರಿಯ ಸ್ಮರಣೆಮಾಡಿರೋ ॥ ಪ ॥
ಪರ ಶ್ರೀರಮಣನ ಭಜಿಸುವ ಮನುಜಗೆ ।
ಸಫಕವು ಬಹುಪೂರ, ಶುಭಕರ ॥ ಅ । ಪ ॥
ಕರುಣಾಕರ ಕರಿವರದ ದನುಜಹರ ।
ಹರವಿರಿಂಚಸುತ ಮಹಿಮಾಸಾಗರ ।
ಸರುವ ದೇವರದೇವ ! ಜಗದಾಧಾರ ।
ಸ್ಮರಿಸುವ ಭಕುತರ ಕಾವ ಗುಣಾಕರ ॥ಚರಣ॥

ಎಲ್ಲ ದೈತ್ಯಬಾಲಕರೂ ಪ್ರಹ್ಲಾದರಾಜನ ಸುತ್ತಲೂ ಸುತ್ತುತ್ತಾ "ನಾರಾಯಣ ಎನ್ನಿರೋ" ಎಂದು ಭಜನೆಮಾಡಹತ್ತಿದರು, ಪ್ರಹ್ಲಾದಕುಮಾರ ಧ್ಯಾನಾಸಕ್ತನಾಗಿ ಮೈಮರೆತ.

ಅದೇ ವೇಳೆಗೆ ಗುರುಗಳಾದ ಆಚಾರ್ಯ ಶಂಡರು ಬಂದು ಆ ದೃಶ್ಯವನ್ನು ಕಂಡು ದಿಗ್ಭ್ರಾಂತರಾಗಿ ನಿಂತರು, ಗುರುಗಳನ್ನು ಕಂಡು ವಿದ್ಯಾರ್ಥಿಗಳು ಭಯದಿಂದ ಸುಮ್ಮನೆ ನಿಂತರು. ಶಂಡರು ಪ್ರಹ್ಲಾದನ ಏಕಾಗ್ರತೆಯನ್ನು ಕಂಡು ವಿಸ್ಮಿತರಾಗಿ ಪ್ರಹ್ಲಾದನ ಭುಜಗಳನ್ನು ಹಿಡಿದು 'ಪ್ರಹ್ಲಾದಕುಮಾರ ! ಏನೀ ತನ್ಮಯತೆ, ಎಚ್ಚರನಾಗು ಎಂದರು.

ಎಚ್ಚರಗೊಂಡ ಪ್ರಹ್ಲಾದನು "ಹಾಂ, ಯಾರದು ? ನಾನೆಲ್ಲಿರುವೆನು? ಆಹಾ ಎಂತಹ ಸುಂದರ ಸ್ವಪ್ನ !" ಎಂದಾಗ, ಶಂಡರು-"ಪ್ರಹ್ಲಾದ ಅದೇನು ಕನಸು ! ಮೈಮರತೇಕೆ ನಿಂತಿರುವೆ" ಎಂದರು.

ಪ್ರಹ್ಲಾದನು ಗುರುಗಳನ್ನು ಕಂಡು 'ಓಹೋ, ಆಚಾರ್ಯರು, ಗುರುಗಳೆ, ನಮಸ್ಕರಿರುವೆನು' ಎಂದು ಕರಜೋಡಿಸಿದನು.

**ಶಂಡ :** ಆಯುಷ್ಮಾನ್‌ಭವ, ರಾಜಕುಮಾರ ! ಬಾ, ಕುಮಾರ ಪಾಠಶಾಲೆಗೆ ಹೋಗೋಣ.

ಆಚಾರ್ಯರು ಎಲ್ಲರೊಡನೆ ಪಾಠಶಾಲೆಗೆ ಬಂದು ಆಸನಾಸೀನರಾಗಿ ನಂತರ "ಪ್ರಹ್ಲಾದ ! ಕನಸೆನ್ನುತ್ತಿದೆಯಲ್ಲ ! ಅದೇನು ಕನಸು ?" ಎಂದು ಪ್ರಶ್ನಿಸಿದರು.

**ಪ್ರಹ್ಲಾದ :** ಗುರುಗಳೇ, ನಾನು ಹರಿನಾಮ ಸಂಕೀರ್ತನೆ ಮಾಡುತ್ತಿರುವಾಗ ನಿದ್ರೆ ಬಂದಂತಾಗಿ ಒಂದು ಕನಸು ಕಂಡೆನು.

**ಶಂಡ :** (ಅಸಮಾಧಾನದಿಂದ) ಅದೇನಪ್ಪಾ ನಿನ್ನ ಕನಸು ?

**ಪ್ರಹ್ಲಾದ :** ನಾನು ಹರಿಭಜನೆಯಲ್ಲಿ ಮಗ್ನನಾದಂತೆಯೂ, ಅದನ್ನು ಕಂಡು ತಂದೆಯವರು ಹರಿಯನ್ನು ಮರೆಯಬೇಕೆಂದು ಹೇಳಿದಂತೆಯೂ, ಆದರೂ ನಾನು ಹರಿಭಜನೆ ಮಾಡುತ್ತಿರಲು ಅವರು ಕೋಪಗೊಂಡು ....

**ಶಂಡ :** ಅಹುದು ಕುಮಾರ ! ನಿನ್ನ ವರ್ತನೆಯಿಂದ ಸಾಮ್ರಾಟರಿಗೆ ಕೋಪ ಬರದಿರುವುದೇ ? ಹೂಂ, ಆಮೇಲೆ ?

**ಪ್ರಹ್ಲಾದ :** ತೀರ್ಥರೂಪರು ಕುಪಿತರಾಗಿ ನನಗೆ ವಿವಿಧ ಶಿಕ್ಷೆಗಳನ್ನು ಕೊಡುತ್ತಿದ್ದಂತೆಯೂ, ಆಗ ಶಂಖ-ಚಕ್ರಧಾರಿಯಾಗಿ ಜಗನ್ಮೋಹನಾಕಾರನಾದ ಶ್ರೀಹರಿಯು ನನ್ನನ್ನು ರಕ್ಷಿಸಿ ಶಿರದಮೇಲೆ ಕರವಿರಿಸಿ ಮಂದಹಾಸ ಬೀರುತ್ತಿದ್ದಂತೆಯೂ ಆಯಿತು. ಕಣ್ಣು ತೆರೆದು ನೋಡುತ್ತೇನೆ ... ...ನೀವು !

**ಶಂಡ :** (ರಮಿಸುವವರಂತೆ) ಪ್ರಹ್ಲಾದ ನಿನಗೆಲ್ಲೋ ಹುಚ್ಚು ಹಿಡಿದಿದೆ. ನಿನಗೆ ಯಾವಾಗಲೂ ಅದೇ ಚಿಂತೆ, ಅಂತೆಯೇ ನಿನಗೆ ಯಾವಾಗಲೂ ಅದೇ ಕನಸು ಬೀಳುವುದು ! ಇರಲಿ ಬಿಡು, ನೋಡು ಕುಮಾರ ! ನೀನು ದೈತ್ಯಕುಲದ ಭಾವೀ ಸಾಮ್ರಾಟನಾಗುವವನು ! ಕುಲಕ್ರಮಾಗತ ಸಂಪ್ರದಾಯದಂತೆ ವರ್ತಿಸಬೇಕಪ್ಪಾ. ಈದಿನ ಸಾಮ್ರಾಟರು ಗುರುಕುಲಕ್ಕೆ ಬರುವುದಾಗಿ ಹೇಳಿಕಳಿಸಿರುವರು. ಎಲ್ಲರೂ ನಾನು ಹೇಳಿಕೊಟ್ಟ ಪಾಠಗಳನ್ನು ಪ್ರಭುಗಳ ಮುಂದೆ ಚೆನ್ನಾಗಿ ಒಪ್ಪಿಸಬೇಕು, ಕುಮಾರ, ನೀನೂ ಸಹ ನಾನೂ ಹೇಳಿಕೊಡುವುದನ್ನು ಕಲಿತು ನಿನ್ನ ತಂದೆಯ ಮನಸ್ಸಿಗೆ ಸಂತೋಷವನ್ನುಂಟುಮಾಡಬೇಕು !

**ಪ್ರಹ್ಲಾದ :** [ಗುರುಗಳ ಹತ್ತಿರಕುಳಿತು] ಗುರುದೇವ, ಇಂದು ನೀವು ಏನು ಹೇಳಿಕೊಡುವಿರಿ ?

ಆಗ ಶಂಡರು ಉತ್ಸಾಹದಿಂದ ಪ್ರಹ್ಲಾದರಾಜ ಮತ್ತು ದೈತ್ಯಬಾಲಕರುಗಳಿಗೆ "ಹರಿಯು ಅಸ್ವತಂತ್ರನು, ನಿರಾಕಾರನು, ಶೂನ್ಯನು, ಪ್ರಪಂಚವೂ, ಶೂನ್ಯ. ಜೀವಬ್ರಹ್ಮೈಕ್ಯ ಮತ್ತು ಪ್ರಪಂಚಮಿಥ್ಯಾತ್ವವೇ ಸರಿಯಾದ ಸಿದ್ಧಾಂತ" ಎಂದು ಅದ್ವೈತ ಸಿದ್ಧಾಂತವನ್ನು ಉಪದೇಶಮಾಡಿ, "ಪ್ರಹ್ಲಾದ, ದೈತ್ಯಬಾಲಕರೇ, ಇದನ್ನೇ ನೀವು ದೈತ್ಯಸಾಮ್ರಾಟರ ಮುಂದೆ ಹೇಳಬೇಕು" ಎಂದರು.

---

1. ......ಪ್ರಹ್ಲಾದಂ ನಯಕೋವಿದಂ । ಪಾಠಯಾಮಾಸತುಃ ಪಾಠ್ಯಾನನ್ಯಾಂಶ್ಚಾಸುರ ಬಾಲಕಾನ್ ॥ --ಭಾಗವತ

ಗುರುಗಳು ಹೇಳಿದ ಪಾಠ ಹರಿಭಕ್ತನಾದ ಪ್ರಹ್ಲಾದನಿಗೆ ಒಪ್ಪಿಗೆಯಾಗಲಿಲ್ಲ. ಅಂತೆಯೇ ಅದನ್ನು ಅವನು ಮನಸ್ಸಿಟ್ಟು ಕೇಳಲಿಲ್ಲ.[1] ಮತ್ತು ಅದು ವೈಷ್ಣವ ಸಿದ್ಧಾಂತಕ್ಕೆ ವಿರುದ್ಧವಾದುದೆಂದೂ, ಅಸಾಧುವಾದ ಆ ತತ್ವವು ಶ್ರೇಯಸ್ಕರ ವಲ್ಲವೆಂದೂ ಅವನು ಭಾವಿಸಿದನು.[2]

ಪ್ರಹ್ಲಾದನು ತಮ್ಮ ಉದ್ದೇಶವನ್ನು ನಿರ್ಲಕ್ಷಿಸುತ್ತಿರುವುದನ್ನು ಗಮನಿಸಿದ ಆಚಾರ್ಯ ಶಂಡರು ಬೇರೆ ರೀತಿಯಿಂದ ಅವನನ್ನು ದಾರಿಗೆ ತಂದು ಸಾಮ್ರಾಟರಿಗೆ ಸಂತೋಷವಾಗುವಂತೆ ಮಾಡಬೇಕೆಂದು ನಿಶ್ಚಯಿಸಿ "ಪ್ರಹ್ಲಾದ ! ನಾನು ಹೇಳಿ ಕೊಟ್ಟಿದ್ದನ್ನು ನೀನು ಕಲಿಯುತ್ತಿಲ್ಲ. ಇದರಿಂದ ನಿನ್ನ ತಂದೆಗೆ ಕೋಪಬರುವುದು. ಹೋಗಲಿ, ನಾನು ಈಗ ಹೇಳಿಕೊಡುವುದನ್ನಾದರೂ ಸಾಮ್ರಾಟರ ಮುಂದೆ ಹೇಳಿ ಅವರನ್ನು ಸಂತೋಷಪಡಿಸು" ಎಂದರು.

**ಪ್ರಹ್ಲಾದ :** ಹಾಗೇ ಆಗಲಿ ಗುರುಗಳೇ.

**ಶಂಡ :** ಹಾಗಾದರೆ ಹೀಗೆ ಹೇಳು, ಪ್ರಹ್ಲಾದ-"ಜಗದೀಶ್ವರಾಯ ಹಿರಣ್ಯ ಕಶಿಪವೇ ನಮಃ !

**ಪ್ರಹ್ಲಾದ :** [ಮಂದಹಾಸದಿಂದ] ಜಗದೀಶ್ವರಾಯ ಶ್ರೀಮನ್ನಾರಾಯ-ಣಾಯ ನಮಃ !

ಪ್ರಹ್ಲಾದನು ಹೇಳಿದ್ದನ್ನು ಕೇಳಿ ಕುಪಿತರಾದ ಶಂಡರು, "ಪ್ರಹ್ಲಾದ ನಾನು ಹೇಳಿದಂತೆ ಹೇಳು—" ತ್ರಿಭುವನ ವಿಜಯಿ, ಸರ್ವವಂದ್ಯ, ಮಹಾಮಹಿಮ ಹಿರಣ್ಯ ಕಶಿಪುಬ್ರಹ್ಮಣೇ ನಮಃ"

**ಪ್ರಹ್ಲಾದ :** ಜಗದುದರ- ಜಗತ್ಕಾರಣ-ಅಜಭವಾದಿವಂದ್ಯ-ಸರ್ವೇಶ್ವರ— ಸಕಲಾಗಮೈಕವೇದ್ಯ-ಕರುಣಾಸಾಗರ-ಪರಬ್ರಸ್ವಹ್ಮರೂಪ, ಶ್ರೀಮನ್ನಾರಾಯಣ ! ನಿನಗೆ ನಮಸ್ಕಾರ ! !

**ಶಂಡ :** [ಕೋಪದಿಂದ] ಮುಗಿಯಿತೋ, ಇನ್ನೂ ಏನಾದರೂ ಉಳಿದಿದೆಯೋ ? [ದೀನನಾಗಿ] ಅಪ್ಪಾ, ಪ್ರಹ್ಲಾದ, ನಿನಗೇಕಪ್ಪಾ ಈ ಹಟ ? [ರಮಿಸುತ್ತಾ] ನೋಡು, ನೀನು ಹೀಗೆ ಮಾಡಿದರೆ ಸಾಮ್ರಾಟರ ಕೋಪಕ್ಕೆ ನೀನು ಪಾತ್ರನಾಗುವುದು ಮಾತ್ರವಲ್ಲ, ನಾನೂ ಅವರ ಕೋಪಕ್ಕೆ ಗುರಿಯಾಗಬೇಕಾ ಗುತ್ತದೆ ! ಈ ಬಡಬ್ರಾಹ್ಮಣನಿಗೆ ತೊಂದರೆ ಕೊಡುವುದರಿಂದ ನಿನಗೇನುಲಾಭ ? ಪ್ರಹ್ಲಾದ! ನೀನು ಭಜಿಸುವೆಯಲ್ಲ, ಆ ನಾರಾಯಣ ! ಅವನಾರು ಗೊತ್ತೆ ?

---

1. ಯತ್ತತ್ರ ಗುರುಣಾಪ್ರೋಕ್ತಂ ಶುಶ್ರುವೇ ನ ಪಪಾಠಹ ।
2. ನ ಸಾಧು ಮೇನೇ ಮನಸಾ ಸ್ವರೂಪಾಸದ್ಗ್ರಹಾಶ್ರಯಮ್ ॥ —ಭಾಗವತ
"ಸ್ವರೂಪಾಸದ್ಗ್ರಹಾಶ್ರಯಂ ಸ್ವರೂಪೇಣ ಅಸದಸಾಧುಗ್ರಹಃ ಪಕ್ಷಃ ವೈಷ್ಣವ ಸಿದ್ಧಾಂತ ವಿರುದ್ಧ ಇತಿಯಾವತ್॥ ಮಂದನಂದಿನೀ.

**ಪ್ರಹ್ಲಾದ :** [ನಕ್ಕು] ಇದೇನು ಹೀಗೆ ಕೇಳುವಿರಿ ಗುರುಗಳೇ ? ಅವನು ಸಾಕ್ಷಾತ್ ಪರಬ್ರಹ್ಮ !

**ಶಂಡ :** [ವ್ಯಗ್ರರಾಗಿ] ಅದಲ್ಲ–ನಾನು ಹೇಳಿದ್ದು, ಆ ಹರಿ ಯಾರುಗೊತ್ತೆ ? ಅವನು, ನಿನ್ನ ಚಿಕ್ಕಪ್ಪನನ್ನು ಕೊಂದವನು! ಅವನನ್ನು ನೀನು ಭಜಿಸಬಹುದೆ ?

**ಪ್ರಹ್ಲಾದ :** ಲೋಕಹಿಂಸಕರಾಗಿ ಅಪರಾಧಮಾಡಿದವರನ್ನು ಭಗವಂತನು ಶಿಕ್ಷಿಸುವುದು ಸ್ವಾಭಾವಿಕವಲ್ಲವೇ ಗುರುಗಳೇ ?

**ಶಂಡ :** ನಿನಗೆ ತಲೆ ಕೆಟ್ಟಿದೆ ! ಆ ಹರಿಯು ನಿಮ್ಮ ವಂಶದ ಪರಮವೈರಿ!

**ಪ್ರಹ್ಲಾದ :** ಶತ್ರುಮಿತ್ರರು ಆ ಮಹನೀಯನಿಗಿಲ್ಲ !

**ಶಂಡ :** ನಿನ್ನ ಚಿಕ್ಕಪ್ಪನನ್ನು ಸಂಹರಿಸಿದವನು ಶತ್ರುವಲ್ಲವೇ ?

**ಪ್ರಹ್ಲಾದ :** [ಮುಗುಳುನಗೆಯಿಂದ] ನನ್ನನ್ನು ರಕ್ಷಿಸುತ್ತಿರುವವನು ಮಿತ್ರನಲ್ಲವೇ ?

**ಶಂಡ :** [ಕುಪಿತರಾಗಿ] ಅವನು ವಂಚಕ, ನಿನ್ನ ತಂದೆಯ ಕಡುವೈರಿ.

**ಪ್ರಹ್ಲಾದ :** [ವಿನಯವಾಗಿ] ಅದು ತಂದೆಯವರ ಭ್ರಮೆ ! ಜಗದೀಶ್ವರ ನಲ್ಲಿ ದ್ವೇಷಮಾಡುವುದು ಶ್ರೇಯಸ್ಕರವಲ್ಲ.

**ಶಂಡ :** ಕುಮಾರ ! ಹಾಗೆಲ್ಲ ಮಾತನಾಡಬಾರದು, ನಿನ್ನ ತಂದೆ ಸಾಮಾನ್ಯ ನಲ್ಲ, ಅವನೇ ಜಗದೀಶ್ವರನು, ಅವನನ್ನೇ ನೀನು ಭಜಿಸಬೇಕು.

**ಪ್ರಹ್ಲಾದ:** (ನಗುತ್ತಾ) ಗುರುಗಳೇ ಎಲ್ಲವನ್ನೂ ತಿಳಿದ ನೀವೂ ಹೀಗೆ ಹೇಳ ಬಹುದೇ ? ಸತ್ಯಕ್ಕೆ ದೂರವಾದ ವಿಚಾರಗಳನ್ನು ನಿರ್ಮಲ ಮನಸ್ಸಿನ ಬಾಲಕರ ತಲೆಗೆ ತುಂಬಿ, ಅವರನ್ನು ಅಡ್ಡಮಾರ್ಗಕ್ಕೆ ಎಳೆಯಬಹುದೇ ? ಕ್ಷಮಿಸಿ, ಸ್ವಾಮಿ, ನೀವು ಅಸತ್ಯವನ್ನು ನುಡಿಯುತ್ತಿರುವುದನ್ನು ಕಂಡು ನನಗೆ ದುಃಖವಾಗುತ್ತಿದೆ.

**ಶಂಡ :** (ಅಪ್ರತಿಭನಾಗಿ ಅಸತ್ಯ ನುಡಿಯುತ್ತಿದ್ದೇನೆಯೇ ನಿಜವಾಗಿಯೂ ನಿನ್ನ ತಂದೆಯೇ ಜಗದೀಶ್ವರನಾಗಿದ್ದಾನೆ !

**ಪ್ರಹ್ಲಾದ :** ಸ್ವಾಮಿ-ನನ್ನ ತಂದೆಯು ಎಂತು ಜಗದೀಶನಾಗುವನು?

**ಶಂಡ :** ಏಕಾಗಬಾರದು ಪ್ರಹ್ಲಾದ ?

**ಪ್ರಹ್ಲಾದ :** (ನಸುನಕ್ಕು) ಈ ಚರಾಚರ ಜಗತ್ತನ್ನು ನನ್ನ ತಂದೆ ನಿರ್ಮಿಸಿ ದನೆ ? ದೊಡ್ಡ ದೊಡ್ಡ ಪರ್ವತಗಳು, ತುಂಬಿಹರಿಯುವ ನದಿಗಳು, ವಿಸ್ತಾರವಾದ ಸಮುದ್ರ, ಮನೋಹರ ನೀಲಾಕಾಶ, ಮಿನುಗುವ ನಕ್ಷತ್ರಗಳು, ಗಗನಚುಂಬಿ ವೃಕ್ಷ ಗಳು, ಸುಂದರ ಪಶುಪಕ್ಷಿಗಳು, ಇವೆಲ್ಲವನ್ನೂ ತಂದೆಯು ಸೃಷ್ಟಿಸಿದನೆ ಪ್ರಕೃತಿ ಸೌಂದರ್ಯದಿಂದ ರಾರಾಜಿಸುವ ಈ ಉಪವನಗಳು, ಜಗತ್ತಿಗೇ ಪ್ರಕಾಶ ನೀಡುವ ಸೂರ್ಯ, ಶಾಂತಿ ಆನಂದಗಳನ್ನೀಯುವ ಚಂದ್ರ ಇವೆಲ್ಲವನ್ನೂ ಸೃಷ್ಟಿಸಿದವರಾರು ತಂದೆಯೇ ? ಇದನ್ನಾವಾಗ ಅವನು ನಿರ್ಮಿಸಿದ. ನನ್ನ ಪಿತನು ಜನಿಸುವ ಮೊದಲು

ಇವೆಲ್ಲ ಇರಲಿಲ್ಲವೆ ? ಸಮಸ್ತ ಜೀವರಾಶಿಗೂ ಆಯಾ ಕಾಲದಲ್ಲಿ ಇದ್ದಲ್ಲಿಯೇ ಆಹಾರವನ್ನೊದಗಿಸುವವರಾರು? ಚಂದ್ರ ಸೂರ್ಯ ಗ್ರಹರಾಶಿಗಳಿಗೆ ಕಾರಣರಾರು. ನನ್ನ ಪಿತನೇನು? ಹಾಗಿದ್ದಲ್ಲಿ ಅವನು ಸೂರ್ಯ ಚಂದ್ರರ ಗತಿಯನ್ನು ನಿರೋಧಿಸಲಿ ಪ್ರಕೃತಿ ಧರ್ಮವನ್ನು ಬದಲಿಸಲಿ ! ಅನಾದಿಕಾಲದಿಂದ ಅವ್ಯಾಹತವಾಗಿ ನಡೆದು ಬಂದಿರುವ ಜನನ–ಮರಣಗಳನ್ನು ನಿಲ್ಲಿಸಬಲ್ಲನೇ ನನ್ನ ಜನಕ !!

ಪ್ರಹ್ಲಾದನ ವಿಚಾರಸರಣಿಗೆ ಬೆರಗಾದ ಶಂಡರು ಅವನಿಗೆ ಉತ್ತರ ಹೇಳಲು ಅಸಮರ್ಥರಾಗಿ 'ಶೇಷಂ ಕೋಪೇನ ಪೂರಯೇತ್' ಎಂಬಂತೆ ತುಂಬಾ ಕ್ರುದ್ಧರಾಗಿ "ನಿನ್ನೀ ಪುರಾಣಕ್ಕೆ ಯಾರಯ್ಯ ಉತ್ತರ ಕೊಡಲು ಸಮರ್ಥರು ?" ಎಂದೆನಲು ಪ್ರಹ್ಲಾದನು "ಅಂದವೇಲೆ ನನ್ನ ಜನಕನೆಂತು ಜಗದೀಶನಾಗಬಲ್ಲ ? ಆ ಜಗತ್ಪ್ರಭುವಿನ ಕಾರುಣ್ಯಮಾತ್ರದಿಂದ ಜೀವಿಸುತ್ತಿರುವ ಪಿತನನ್ನು ಜಗದೀಶ್ವರನೆಂದು ನಾನು ಹೇಗೆ ಒಪ್ಪಲಿ ? ನೀವೇ ಹೇಳಿ, ಗುರುಗಳೇ" ಎಂದನು.

**ಶಂಡ** : (ಅನುನಯದಿಂದ) ಮಗು! ಒಪ್ಪುಯಾವರೂ ನಾನು ಹೇಳಿದಂತೆ ಹೇಳಪ್ಪಾ ! 'ಓಂ ಹಿರಣ್ಯಕಶಿಪವೇ ನಮಃ '

**ಪ್ರಹ್ಲಾದ** : ಓಂ ನಮೋ ನಾರಾಯಣಾಯ !

ನಾರಾಯಣಶಬ್ದವನ್ನಾಲಿಸಿ ಒಳಬಂದ ಹಿರಣ್ಯಕಶ್ಯಪನು "ತ್ರಿಲೋಕವಿಜಯಿಯಾದ ನನ್ನ ರಾಜ್ಯದಲ್ಲಿ ನನ್ನ ಕಡುವೈರಿಯನ್ನು ನೆನೆಯಲೆಷ್ಟು ಧೈರ್ಯ! ಯಾರು, ಯಾರು ನನ್ನ ಶತ್ರುವಿನ ಸ್ತುತಿಪಾಠಕ ?" ಎಂದು ಗರ್ಜಿಸಿದನು.

ಎಲ್ಲರೂ ಭಯದಿಂದ ನಡಗುತ್ತಾ ನಿಲ್ಲಲು ಪ್ರಹ್ಲಾದನು ಮುಂದೆ ಬಂದು "ಜನಕ ! ವಂದಿಸುವೆನು" ಎಂದು ನಮಸ್ಕರಿಸಲು ಪುತ್ರನನ್ನು ಕಂಡ ದೈತ್ಯರಾಜನ ಮುಖವರಳಿತು, ದೈತ್ಯೇಂದ್ರನು ಸಂತಸದಿಂದ "ವತ್ಸ, ಚಿರಂಜೀವ, ವ್ಯಾಸಂಗವು ಚೆನ್ನಾಗಿ ನಡೆದಿರುವುದೇ ಕುಮಾರ ?" ಎಂದು ಮಗನನ್ನು ತೊಡೆಯಮೇಲೆ ಕೂಡಿಸಿಕೊಂಡು 'ಪ್ರಹ್ಲಾದನೆ ನೀನು ಏನು ಕಲಿತಿರುವೆ ಹೇಳು' ಎಂದನು.

**ಪ್ರಹ್ಲಾದ** : ತಂದೆಯೇ ಏನು ಹೇಳಲಿ ?

**ಹಿರಣ್ಯ** : ನೀನಾವುದನ್ನು ಉತ್ತಮ ವಿಚಾರವೆಂದು ತಿಳಿದಿರುವೆ. ಅದನ್ನು ಹೇಳು.[1]

## ಪ್ರಹ್ಲಾದ ಉವಾಚ

"ತತ್ಸಾಧು ಮನ್ಯೇಽಸುರವರ್ಯ ! ದೇಹಿನಾಂ । ಸದಾ ಸಮುದ್ವಿಗ್ನ ಧಿಯಾಮಸದ್ಗ್ರಹಾತ್ ।

---

1. ಏಕದಾಽಸುರರಾಟ್ ಪುತ್ರಮಂಕಮಾರೋಪ್ಯ ಪಾಂಡವ ।
ಪಪ್ರಚ್ಛ ಕಥ್ಯತಾಂ ವತ್ಸ ! ಮನಸೇ ಸಾಧು ಯದ್ಭವಾನ್ —ಭಾಗವತ

ಪಿತ್ವಾತ್ಮಪಾತಂ ಗೃಹಮಂಧಕೂಪಂ। ವನಂಗತೋಃ ಯದ್ಧರಿಮಾಶ್ರಯೇತ॥

**ಪ್ರಹ್ಲಾದ :** ಅಸುರವರ್ಯ! ದುರ್ವಿಷಯಗಳ ಅಭ್ಯಾಸದಿಂದ, ಅಥವಾ ಅಸಾರವಾದ ವಿಷಯಸುಖವನ್ನು ಸಾರಭೂತವಾದುದೆಂದು ಭ್ರಮಿಸಿ ದುಃಖ ಪರಂಪರೆಯಲ್ಲಿ ಸಿಲುಕಿ ತೊಳಲುವ ಜನರಿಗೆ ನರಕಾದಿ ಅನರ್ಥಗಳಿಗೆ ಕಾರಣವಾಗಿರುವ ಸಂಸಾರಸುಖವನ್ನು ತ್ಯಜಿಸಿ. ಸಜ್ಜನರ ಸಹವಾಸದಿಂದ ಶ್ರೀಹರಿಪರಮಾತ್ಮನ ಆಶ್ರಯ ವನ್ನು ಪಡೆಯುವುದೇ ಉತ್ತಮವಾದ ಅಭ್ಯಾಸದ ಫಲವೆಂದು ನಾನು ತಿಳಿದಿದ್ದೇನೆ!

ಪ್ರಹ್ಲಾದನ ಮಾತು ಕೇಳಿ ಹಿರಣ್ಯಕಶ್ಯಪನಿಗೆ ಅಸಾಧ್ಯ ಕೋಪತಾಪಗಳುಂಟಾ ದವು. ಆದರೂ ಅದನ್ನು ಮೇಲೆ ತೋರಗೊಡದೆ ಪರಿಹಾಸದಿಂದ ನಕ್ಕು "ಆಚಾರ್ಯರೇ, ಬಾಲಕರ ಬುದ್ಧಿಯು ಶತ್ರುಪಕ್ಷದವರ ಸಹವಾಸದಿಂದ ಕೆಡುವುದು. ಹೂಂ, ಇನ್ನು ಮುಂದೆ ನಮ್ಮ ಕುಮಾರನು ಶತ್ರುವಾದ ಆ ಹರಿಯ ಪಕ್ಷದವರ ಅಂದರೆ ಬ್ರಾಹ್ಮಣರ ಉಪದೇಶಾದಿಗಳ ಪ್ರಭಾವಕ್ಕೆ ಒಳಗಾಗದಂತೆ ಎಚ್ಚರವಹಿಸಿರಿ. ಮತ್ತು ನಿಮ್ಮ ಮನೆ ಯಲ್ಲಿಯೇ ಇವನಿಗೆ ನಮ್ಮ ಕುಲಕ್ರಮಾಗತವಾದ ವಿದ್ಯೆಗಳನ್ನು ಕಲಿಸಿರಿ"[2] ಎಂದು ಹೇಳಿ ಅರಮನೆಗೆ ತೆರಳಿದನು.

ಹಿರಣ್ಯಕಶ್ಯಪನು ತೆರಳಿದಮೇಲೆ ಶಂಡರು "ಬಂದಿದ್ದ ವಿಪತ್ತಿನಿಂದ ಸದ್ಯ ಕ್ಕಂತೂ ಪಾರಾದೆ! ಪ್ರಹ್ಲಾದ! ನಿನ್ನ ತಂದೆಯು ಅಪ್ಪಣೆಯನ್ನು ಕೇಳಿದೆಯಲ್ಲವೇ? ಬಾ, ನಮ್ಮ ಮನೆಗೆ ಹೋಗೋಣ. ಅಲ್ಲಿ ನಿನಗೆ ಪಾಠಹೇಳುವೆನು" ಎಂದು ಹೇಳಿ ಪ್ರಹ್ಲಾದನನ್ನು ಕರೆದುಕೊಂಡು ಮನೆಗೆ ತೆರಳಿದರು.

ಶಂಡಾಮರ್ಕರು ಪ್ರಹ್ಲಾದಕುಮಾರನಿಗೆ ಧರ್ಮಾರ್ಥಕಾಮ ಪ್ರತಿಪಾದಕ ವಾದ ಅರ್ಥಶಾಸ್ತ್ರವನ್ನು ಉಪದೇಶಿಸಿದರು.

ಕೆಲದಿನಗಳಾದ ಮೇಲೆ ಶಂಡಾಮರ್ಕರು ಸಾಮ, ದಾನ, ಭೇದ. ದಂಡ-ಎಂಬ ನಾಲ್ಕು ಉಪಾಯಗಳನ್ನು ಬೋಧಿಸುವ ನೀತಿಶಾಸ್ತ್ರದಲ್ಲಿ ಪ್ರಹ್ಲಾದನು ಪಾರಂಗತ ನಾಗಿದ್ದಾನೆ(ಧರ್ಮ-ಅರ್ಥ-ಕಾಮ ಹಾಗೂ ಅಪಾತತಃ ಮೋಕ್ಷಶಾಸ್ತ್ರಗಳಲ್ಲಿ ಪರಿಣಿತ ನಾಗಿದ್ದಾನೆ) ಎಂದು ತಿಳಿದು, ಈಗ ತಮ್ಮ ಶಿಕ್ಷಣಸಾಮರ್ಥ್ಯ-ಚತುರತೆಗಳನ್ನು ದೈತ್ಯ ಚಕ್ರವರ್ತಿಗೆ ತೋರಿಸಿ ಅವನ ವಿಶೇಷ ಪ್ರೀತಿವಿಶ್ವಾಸಗಳಿಸಬೇಕೆಂದು ಬಯಸಿ ಪ್ರಹ್ಲಾದನನ್ನು ಹಿರಣ್ಯಕಶಿಪುವಿನ ಬಳಿಗೆ ಕರೆದುಕೊಂಡು ಹೋದರು.

## ೧೨. ಭಕ್ತಿ-ಕ್ರೌರ್ಯಗಳ ಸೆಣಸಾಟ

ದೈತ್ಯೇಂದ್ರನೂ ಜನಕನೂ ಆದ ಹಿರಣ್ಯಕಶ್ಯಪನನ್ನು ಕಂಡೊಡನೆಯೇ ಪ್ರಹ್ಲಾದರಾಜನು ವಿನೀತನಾಗಿ ಪಿತನಿಗೆ ನಮಸ್ಕರಿಸಿ ಕರಜೋಡಿಸಿ ನಿಂತನು. ಅದನ್ನು ಕಂಡು ಹಿರಣ್ಯಕಶ್ಯಪನಿಗೆ ಅತ್ಯಂತ ಹರ್ಷವಾಯಿತು, ಪ್ರೇಮ-ವಾತ್ಸಲ್ಯಗಳಿಂದ

---

2. ಶ್ರುತ್ವಾ ಪುತ್ರಗಿರೋ ದೈತ್ಯಃ ಪರಪಕ್ಷಸಮಾಹಿತಾ। ಜಹಾಸ ಬುದ್ಧಿರ್ಬಾಲಾನಾಂ ಭಿದ್ಯತೇ ಪರಬುದ್ಧಿಭಿಃ॥ ಸಮ್ಯಗ್ವಿಧಾರ್ಯತಾಂ ಬಾಲೋ ಗುರುಗೇಹೇ ದ್ವಿಜಾತಿಭಿಃ। ವಿಷ್ಣುಪಕ್ಷಪ್ರತಿಚ್ಛನ್ನೈಃ ನಭಿದ್ಯೇತಾಸ್ಯ ಧೀರ್ಯಥಾ॥ —ಭಾಗವತ

ಕುಮಾರನ ಮೈಮೇಲೆ ಕೈಯಾಡಿಸಿ ಮಗನನ್ನು ಆಲಂಗಿಸಿಕೊಂಡು ಆಶೀರ್ವದಿಸಿ ಮುದ್ದಿಸಿ ಮುದ್ದುಗೊಂಡು "ವತ್ಸ! ನಿನಗೆ ನಿಮ್ಮ ಗುರುಗಳು ಈ ಒಂದು ಅವಧಿಯಲ್ಲಿ ಬಹು ವಿಚಾರಗಳನ್ನು ಕಲಿಸಿರಬೇಕಲ್ಲವೆ? ಎಲ್ಲಿ, ಪ್ರಹ್ಲಾದ! ಅವರು ನಿನಗೆ ಕಲಿಸಿರುವುದರಲ್ಲಿ ಉತ್ತಮವಾದುದನ್ನು ಅನುವಾದ ಮಾಡು" ಎಂದನು.[1]

ಪ್ರಹ್ಲಾದನು ತಂದೆಯ ಅಪ್ಪಣೆಯನ್ನಾಲಿಸಿ ಸಂತೋಷದಿಂದ ಹೇಳಲಾರಂಭಿಸಿದನು.

ಪ್ರಹ್ಲಾದ :—

"ಶ್ರವಣಂ ಕೀರ್ತನಂ ವಿಷ್ಣೋಃ ಸ್ಮರಣಂ ಪಾದಸೇವನಂ ।
ಅರ್ಚನಂ ವಂದನಂ ದಾಸ್ಯಂ ಸಖ್ಯಮಾತ್ಮನಿವೇದನಮ್ ॥
ಇತಿ ಪುಂಸಾರ್ಪಿತಾ ವಿಷ್ಣು ಭಕ್ತಿಶ್ಚೇನ್ನವಲಕ್ಷಣಾ ।
ಕ್ರಿಯತೇ ಭಗವತ್ಯದ್ಧಾ ತನ್ಮನ್ಯೇಽಧೀತಮುತ್ತಮಮ್ ॥

ತಂದೆಯೇ, ಶ್ರೀವಿಷ್ಣುವಿನ ಮಹಿಮೆಗಳನ್ನು ಕೇಳುವುದು, ಶ್ರೀಹರಿಯನಾಮ ಮತ್ತು ಕಲ್ಯಾಣಗುಣಗಳನ್ನು ಸಂಕೀರ್ತನಮಾಡುವುದು ಮತ್ತೆ ಅದನ್ನು ಅನುಸಂಧಾನಕ್ಕೆ ತಂದುಕೊಳ್ಳುವುದು, ಭಗವಂತನನ್ನೂ ಮತ್ತು ಭಗವದ್ಭಕ್ತರನ್ನೂ ಸೇವಿಸುವುದು ತುಳಸೀಪುಷ್ಪಾದಿಗಳಿಂದ ಪರಮಾತ್ಮನನ್ನು ಅರ್ಚಿಸುವುದು, ಬಾರಿಬಾರಿಗೂ ಶ್ರೀಹರಿಗೆ ನಮಸ್ಕಾರಮಾಡುವುದು ಅಥವಾ ಸ್ತೋತ್ರಮಾಡುವುದು, ನಾನು ಶ್ರೀಹರಿಪರಮಾತ್ಮನ ದಾಸ ಎಂಬ ಅನುಸಂಧಾನ, ಭಗವಂತನಲ್ಲಿ ಅತ್ಯಂತ ಭಕ್ತಿ ಮಾಡುವುದು, ಅಂದರೆ ಶ್ರೀಹರಿಯು ನಮ್ಮನ್ನು ಕಾಪಾಡುವನೆಂಬ ವಿಶ್ವಾಸ. [ಸಖ್ಯ] ಪರಮಾತ್ಮನು ನಮ್ಮಲ್ಲಿ ಮತ್ತು ಮುಕ್ತರಲ್ಲೂ ಸಹ ನಿಯಮನ ಮಾಡಲು ಅಂತರ್ಯಾಮಿಯಾಗಿದ್ದಾನೆ ಎಂಬ ದೃಢವಾದ ಜ್ಞಾನ [ಆತ್ಮನಿವೇದನ]-ಹೀಗೆ ಪೋಷಕವಾದ ನವವಿಧ ಭಕ್ತಿಯು ಯಾವ ಶಾಸ್ತ್ರಾಧ್ಯಯನದಿಂದ ಜನಿಸುವುದೋ, ಆ ಉತ್ತಮವಾದ ಶಾಸ್ತ್ರಾಭ್ಯಾಸವೇ ಜ್ಞಾನಸಾಧನವೆಂದು, ಉತ್ತಮವಾದ ವಿದ್ಯೆಯೆಂದು ನಾನು ತಿಳಿದಿದ್ದೇನೆ.

ಹೀಗೆ ಹೇಳಿದ ಪ್ರಹ್ಲಾದನ ಮಾತನ್ನು ಕೇಳಿ ಹಿರಣ್ಯಕಶ್ಯಪನಿಗೆ ಅತಿಯಾದ ಕೋಪವುಂಟಾಯಿತು. ಕೋಪದಿಂದ ತುಟಿಗಳು ಕಂಪಿಸುತ್ತಿರಲು ಆಚಾರ್ಯ ಶಂಡರತ್ತ ಕ್ರೂರದೃಷ್ಟಿ ಬೀರಿ "ಎಲವೆಲವೋ ಬ್ರಾಹ್ಮಣಾಧಮ! ನನ್ನೀಪುತ್ರನು ಶತ್ರುವಾದ ವಿಷ್ಣುವಿನ ಪಕ್ಷವನ್ನು ಆಶ್ರಯಿಸಿದ್ದಾನೆ. ನೀವೇ ನನ್ನ ಆಜ್ಞೆಯನ್ನು ಲಕ್ಷಿಸದೆ ಪ್ರಹ್ಲಾದನಿಗೆ ಅಸಾರವಾದುದನ್ನು ಉಪದೇಶಿಸಿರುವಿರಿ! ಗುರುಪುತ್ರರೆಂದು ಈವರೆಗೆ

---

1. ಪಾದಯೋಃ ಪತಿತಂ ಬಾಲಂ ಪ್ರತಿನಂದ್ಯಾಶಿಷಾಸುರಃ। ಪರಿಷ್ವಜ್ಯ ಚಿರಂ ದೋರ್ಭ್ಯಾಂ ಪರಮಾಪಾಪ ನಿರ್ವೃತಿಮ್......॥ ಇದಮಾಹ ಯುಧಿಷ್ಠಿರ॥
ಪ್ರಹ್ಲಾದಾನೂಚ್ಯತಾಂ ತಾತ ಸ್ವಧೀತಂ ಕಿಂಚಿದುತ್ತಮಮ್ ।
ಕಾಲೇನೈತಾವತಾಯುಷ್ಮನ್ಯದಶಿಕ್ಷದ್ಗುರೋರ್ಭವಾನ್ ॥ —ಭಾಗವತ

ನಾನು ನಿಮ್ಮನ್ನು ಬಹುಮಾನದಿಂದ ಕಾಣುತ್ತಿದ್ದೆ. ಈಗ ಗೊತ್ತಾಯಿತು. ನೀವು ವೇಷಧಾರಿಗಳಾದ ವಿರುದ್ಧಪಕ್ಷದವರು! ಹಿಂದೆ ಮಾಡಿದ ಪಾಪದ ಫಲವಾಗಿ ರೋಗವು ಹುಟ್ಟುವಂತೆ ಕಾಲಬಂದಾಗ ಶತ್ರುಗಳ ದ್ರೋಹವು ವ್ಯಕ್ತವಾಗುವುದು. ಗುರುಗಳಾಗಿದ್ದರೂ ಕಾರ್ಯಾಕಾರ್ಯ ವಿವೇಕರಹಿತರಾಗಿ ಸೊಕ್ಕಿನಿಂದ ವರ್ತಿಸಿರುವ ನೀವು ಶಿಕ್ಷೆಗೆ ಅರ್ಹರಾಗಿರುವಿರಿ!" ಎಂದು ತೀಕ್ಷ್ಣವಚನಗಳಿಂದ ಶಂಡಾಮರ್ಕರನ್ನು ಹಳಿದನು.[1]

ದೈತ್ಯರಾಜನ ಕಟುವಾಕ್ಯಗಳಿಂದ ಶಂಡಾಚಾರ್ಯರು ವಿಕಾರಹೊಂದದೆ ವಿಜ್ಞಾಪಿಸಿದರು. "ದೈತೇಂದ್ರ! ನಾನಾಗಲಿ ಇನ್ಯಾರೇ ಆಗಲಿ ಉಪದೇಶಿಸಿದ್ದರಿಂದ ನಿನ್ನ ಕುಮಾರನ ಬುದ್ಧಿಯು ಕೆಟ್ಟಿಲ್ಲ! ಅದು ಅವನಿಗೆ ಸ್ವಾಭಾವಿಕವಾಗಿದೆ! ನೀನಿಂತು ಕೋಪಿಸುವುದು ಸರಿಯಲ್ಲ. ರಾಜನ್, ನೀನು ಹೇಳಿದಂತೆ ನಾನು ಛದ್ಮ ವೇಷಧರಿಸಿದ ಪ್ರತಿಪಕ್ಷದವನಾಗಿದ್ದಲ್ಲಿ ನಾನು ಬ್ರಹ್ಮಜ್ಞಾನಿಯಾಗಿರಲು ಸಾಧ್ಯವೇ? ನನ್ನ ಮೇಲೆ ದೋಷಹೊರಿಸಿ ಕೋಪಗೊಳ್ಳಬೇಡ.[2]

ಆಗ ಹಿರಣ್ಯಕಶ್ಯಪನು ಪ್ರಹ್ಲಾದನನ್ನು ನೋಡಿ "ಪ್ರಹ್ಲಾದ! ಈ ಗುರುಗಳ ಉಪದೇಶದಿಂದ ನಿನ್ನ ಬುದ್ಧಿಯು ಕೆಟ್ಟಿಲ್ಲವೆಂದು ಅವರ ಮಾತಿನಿಂದ ವ್ಯಕ್ತವಾಗುತ್ತಿದೆ. ಹಾಗಿದ್ದರೆ ನಿನಗೀ ದುರ್ಬುದ್ಧಿಯು ಯಾರಿಂದುಂಟಾಯಿತು?" ಎಂದು ಪ್ರಶ್ನಿಸಲು ಪ್ರಹ್ಲಾದ ಹೀಗೆ ಹೇಳಿದನು—"ತಂದೆಯೇ ನನ್ನ ಬುದ್ಧಿಯು ಕೆಟ್ಟಿಲ್ಲ! ನಿನ್ನ ಬುದ್ಧಿಯೇ ದುಷ್ಟವಾದುದು. ಭಗವಂತನಾದ ಹರಿಯಲ್ಲಿ ಮನಸ್ಸು ರಮಿಸಬೇಕಾದರೆ ಸ್ವ-ಪರಪ್ರಯತ್ನಗಳೇನೂ ಬೇಕಾಗಿಲ್ಲ. ದಿನದಿನವೂ ವಿಷಯೋಪಭೋಗಗಳಲ್ಲಿಯೇ ಮಗ್ನರಾಗಿ ಮನಬಂದಂತೆ ಪತ್ನೀ–ಪುತ್ರಾದಿ ಕುಟುಂಬಭರಣದಲ್ಲಿ ಕರ್ತೃತ್ವಾಭಿಮಾನವುಳ್ಳ ನಿಮ್ಮಂತಹ ಅಸುರಪಕ್ಷಾವಲಂಬಿಗಳಿಗೆ ಶ್ರೀಕೃಷ್ಣನಲ್ಲಿ ಭಕ್ತಿಯುಂಟಾಗುವುದಾದರೂ ಹೇಗೆ ಸಾಧ್ಯ? ಶಾಶ್ವತ ಸುಖವನ್ನು ಪಡೆಯಬೇಕಾದರೆ–ಜ್ಞಾನಿಗಳೂ, ಸಂಸಾರದಲ್ಲಿ ಅಸಾರಬುದ್ಧಿಯುಳ್ಳವರೂ, ನಿಷ್ಕಿಂಚನರೂ ಭಗವದ್ಭಕ್ತರೂ ಆದ ಸನ್ಯಾಸಿ ಮುಂತಾದ ಸಜ್ಜನರ ಸೇವೆ ಮಾಡಬೇಕು. ಅದಿಲ್ಲದೆ

---

1. ಹಿರಣ್ಯಕಶಿಪುರುವಾಚ-

ಬ್ರಹ್ಮಬಂಧೋ ಕಿಮೇತತ್ತೇ ವಿಪಕ್ಷಂ ಶ್ರಯತಾಸತಾ ।
ಅಸಾರಂ ಗ್ರಾಹಿತೋ ಬಾಲೋ ಮಾಮನಾದೃತ್ಯ ದುರ್ಮತೇ ॥
ಸಂತಿ ಹ್ಯಸಾಧವೋ ಲೋಕೇ ದುರ್ಮೈತ್ರಾಶ್ಛದ್ಮವೇಷಿಣಃ ।
ತೇಷಾಮುದೇತ್ಯಘಂ ಕಾಲೇ ರೋಗಃ ಪಾತಕಿನಾಮಿವ ॥

2. ಗುರುಪುತ್ರ ಉವಾಚ ।

ನ ಮತ್ಪ್ರಣೀತಂ ನ ಪರಪ್ರಣೀತಂ ಸುತೋ ವದತ್ಯೇಷ ತವೇಂದ್ರಶತ್ರೋ ।
ನೈಸರ್ಗಿಕೀಯಂ ಮತಿರಸ್ಯ ರಾಜನ್ ನಿಯಚ್ಛ ಮನ್ಯುಂ ಕ್ವತದಾತ್ಮಮಾನಃ

—ಭಾಗವತ

ಪರಮಪುರುಷಾರ್ಥವಾದ ಸಂಸಾರ ನಿವೃತ್ತಿಗೆ (ಮೋಕ್ಷಕ್ಕೆ) ಕಾರಣನಾದ ಶ್ರೀಹರಿ ಪರಮಾತ್ಮನು ಖಂಡಿತ ಲಭಿಸಲಾರನು.[1]

ಇಂತು ಕಂತುಜನಕನ ಏಕಾಂತ ಭಕ್ತನಾದ ಪ್ರಹ್ಲಾದನು ಹೇಳಿದೊಡನೆಯೇ ಹಿರಣ್ಯಕಶ್ಯಪನ ಕೋಪ ಅಧಿಕವಾಯಿತು. ಆಗವನು ಕಣ್ಣು ಕೆಂಪಗೆಮಾಡಿಕೊಂಡು ಅವರೆಗೂ ತನ್ನ ತೊಡೆಯ ಮೇಲೆ ಕೂಡಿಸಿಕೊಂಡಿದ್ದ ಮಗನನ್ನು ಕೆಳಗೆತಳ್ಳಿ ಸಿಟ್ಟಿನಿಂದ "ಈ ದುಷ್ಟನು ತನ್ನ ಚಿಕ್ಕಪ್ಪನನ್ನು ಸಂಹರಿಸಿದ ಅಧಮನಾದ ಹರಿಯದಾಸನಾಗಿ ಅವನನ್ನು ಸೇವಿಸುತ್ತಿದ್ದಾನೆ. ಸಾಮಾನ್ಯವಾಗಿ ಸಣ್ಣಮಕ್ಕಳಿಗೆ ತಂದೆತಾಯಿಗಳಲ್ಲಿ ಬಿಡಲಾಗದ ಪ್ರೀತಿಯಿಂದಿರುವುದು ಕಂಡುಬಂದಿದೆ. ಇವನಾದರೊ ತಂದೆತಾಯಿಗಳ ಮೇಲಿನ ಪ್ರೇಮವನ್ನೇ ತೊರೆದಿದ್ದಾನೆ ! ಶತ್ರುವಾಗಿದ್ದರೂ ದ್ವೇಷದಿಂದ ಹಿತವನ್ನಾದರೂ ಮಾಡುತ್ತಿದ್ದಲ್ಲಿ ಅಂಥವನನ್ನು ಪುತ್ರನೆಂದು ತಿಳಿಯಬಹುದು. ಆದರೆ ದೇಹದಿಂದ ಜನಿಸಿದ ಮಗನು ಅಪಕಾರಿಯಾಗಿದ್ದಲ್ಲಿ ಅಂಥವನನ್ನು ಬಾಲ್ಯದಲ್ಲಿಯೇ ಸಂಹರಿಸಿಬಿಡಬೇಕು. ದೇಹದ ಒಂದು ಅಂಗವು ಕೆಟ್ಟಿದ್ದರೆ ಅದನ್ನು ಕಡಿದು ಹಾಕಿದರೆ ಉಳಿದ ಅವಯವಗಳು ಸುರಕ್ಷಿತವಾಗಿ ಉಳಿಯುವಂತೆ ಈ ದುರ್ಬುದ್ಧಿಯ ಪುತ್ರನಾದ ಪ್ರಹ್ಲಾದನನ್ನು ಸಂಹರಿಸುವುದರಿಂದ ದೈತ್ಯಕುಲವು ಅಭಿವೃದ್ಧಿಸುವುದು. ಇವನು ನಮಗೆ ಸ್ವಭಾವಶತ್ರುವಾಗಿದ್ದಾನೆ. ಆದ್ದರಿಂದ ಇವನನ್ನು ಎಲ್ಲ ಉಪಾಯಗಳಿಂದಲೂ ಸಂಹರಿಸಿರಿ" ಎಂದು ದೈತ್ಯವೀರರಿಗೆ ಆಜ್ಞಾಪಿಸಿದನು.[2]

ದೈತ್ಯಚಕ್ರವರ್ತಿಯು ಹೀಗೆ ಹೇಳಿದ ಕೂಡಲೇ ಭಯಂಕರರೂಪ, ಕೋರೆಹಲ್ಲು ಕೆಂಬಣ್ಣದ ಮೀಸೆ-ದಾಡಿಗಳಿಂದ ಯುಕ್ತರಾದ ರಾಜಭಟರಾದ ದೈತ್ಯರು ಪ್ರಹ್ಲಾದನನ್ನು ನೆಲದ ಮೇಲೆ ಕೆಡವಿ "ಕೊಲ್ಲಿರಿ, ಕೊಲ್ಲಿರಿ" ಎಂದು ಭಯಂಕರ ಧ್ವನಿಗೈಯುತ್ತಾ ಬಾಲಕನಾದ ಪ್ರಹ್ಲಾದಕುಮಾರನ ಮರ್ಮಸ್ಥಾನಗಳನ್ನು ಈಟಿ, ಶೂಲಗಳಿಂದ ತಿವಿಯುಹತ್ತಿದರು.ಆದರೆ ಅದೃಶ್ಯನೂ ಗುಣಪೂರ್ಣನೂ ಪರಾತ್ಪರನೂ ಆದ ಶ್ರೀಹರಿಯ ಪಾದಕಮಲಗಳಲ್ಲಿಯೇ ಮನಸ್ಸನ್ನು ನಿಲ್ಲಿಸಿ ಧ್ಯಾನಾಸಕ್ತನಾದ ಪ್ರಹ್ಲಾದನಿಗೆ ಬಾಹ್ಯವ್ಯಾಪಾರಗಳಲ್ಲಿ ಗಮನವೇ ಇರಲಿಲ್ಲ, ದೈತ್ಯರು ಪ್ರಹ್ಲಾದನನ್ನು ಸಂಹರಿಸಲು ಮಾಡಿದ ಎಲ್ಲ ಪ್ರಯತ್ನಗಳೂ ಪಾತಕಿಯು ಮಾಡಿದ

---

1. ನೈಷಾಂ ಮತಿಸ್ತಾವದುರುಕ್ರಮಾಂಘ್ರಿಂ ಸ್ಪೃಶತ್ಯನರ್ಥಾಪಗಮೋ ಯದರ್ಥಃ । ಮಹೀಯಸಾಂ ಪಾದರಜೋಽಭಿಷೇಕಂ ನಿಷ್ಕಿಂಚನಾನಾಂ ನ ವೃಣೀತ ಯಾವತ್ ॥
2. ಇತ್ಯುಕ್ತ್ವೋಪರತಂ ಪುತ್ರಂ ಹಿರಣ್ಯಕಶಿಪೂ ರುಷಾ । ಅಂಧೀಕೃತಾತ್ಮಾ ಸ್ವೋತ್ಸಂಗಾನ್ನಿರಸ್ಯತ ಮಹೀತಲೇ॥ ವಧ್ಯತಾಂ... ಸರ್ವೈರುಪಾಯೈರ್ಹಂತವ್ಯಃ ಸಂಭೋಗಶಯನಾಸನೈಃ । ಸುಹೃಲ್ಲಿಂಗಧರಃ ಶತ್ರುಃ ಮುನೇರ್ದುಷ್ಟಮಿವೇಂದ್ರಿಯಮ್ ॥

—ಭಾಗವತ

ಪುಣ್ಯಕರ್ಮವಂತೆ ನಿಷ್ಫಲವಾದವು! ಸರ್ವಜಗತ್ತನ್ನೂ ರಕ್ಷಿಸುವ ಪ್ರಭು ಶ್ರೀಹರಿಯ ಅನುಗ್ರಹವಿರಲು ಈ ದೈತ್ಯರ ಪ್ರಯತ್ನಗಳೆಲ್ಲ ವ್ಯರ್ಥವಾದುದು ಅಚ್ಚರಿಯೇನಲ್ಲ.[1]

ತನ್ನ ಆಣತಿಯಂತೆ ದೈತ್ಯರು ಪ್ರಹ್ಲಾದನನ್ನು ಕೊಲ್ಲಲು ಮಾಡಿದ ಯತ್ನವು ವ್ಯರ್ಥವಾದುದನ್ನು ಕಂಡು ಹಿರಣ್ಯಕಶ್ಯಪನಿಗೆ ಮನಸ್ಸಿನಲ್ಲಿ ಭಯವುಂಟಾಯಿತು. ಇವನನ್ನು ಈಗಲೇ ಸಂಹರಿಸದಿದ್ದರೆ ಮುಂದೆ ಇವನಿಂದ ತನಗೆ ಅಪಾಯವಾಗಬಹುದೆಂದು ತರ್ಕಿಸಿ ಏನಕೇನ ಪ್ರಕಾರೇಣ ಪ್ರಹ್ಲಾದನನ್ನು ಸಂಹರಿಸಲು ಉದ್ಯುಕ್ತನಾದನು.[2] ಸರಿ, ಪ್ರಾರಂಭವಾಯಿತು ಭಕ್ತಿ–ಕ್ರೌರ್ಯಗಳ ಸೆಣಸಾಟ !

ಹಿರಣ್ಯಕಶ್ಯಪನು ತನ್ನ ನಂಬಿಕೆಯ ಸೇವಕರಾದ ಕರಾಳ ದುರ್ಮುಖ ಮುಂತಾದ ದೈತ್ಯರನ್ನು ಕರೆದು "ದೈತ್ಯವೀರರೇ ಈ ದುಷ್ಟಬಾಲಕನು ದೈತ್ಯವಂಶದ ಶತ್ರುವಾದ ಆ ಹರಿಯ ಭಜಕನಾಗಿದ್ದಾನೆ. ಇವನಿನ್ನು ಜೀವಿಸಬಾರದು ಇಕೋ. ಈ ನಾಗಪಾಶದಿಂದ ಇವನನ್ನು ಬಿಗಿದು ಸಮುದ್ರದಲ್ಲಿ ಬಿಸುಟುಬನ್ನಿರಿ" ಎಂದು ಆಜ್ಞಾಪಿಸಿದನು.

ಬಹು ಕ್ರೂರಿಯಾದ ಕರಾಳನು ನಾಗಪಾಶದಿಂದ ಪ್ರಹ್ಲಾದನನ್ನು ಬಂಧಿಸಿ ಹೊತ್ತುಕೊಂಡು ಸಮುದ್ರ ತೀರಕ್ಕೆ ಬಂದು ಪ್ರಹ್ಲಾದನನ್ನು ಎತ್ತಿ ಘೋರಗರ್ಜನೆಯುತ್ತಿರುವ ಸಮುದ್ರ ಮಧ್ಯದಲ್ಲಿ ಎಸೆದು ರಾಜಧಾನಿಗೆ ಹಿಂದಿರುಗಿದನು.

ಆಗೊಂದು ಅದ್ಭುತ ವ್ಯಾಪಾರವೇ ನಡೆದುಹೋಯಿತು ! ಪ್ರಹ್ಲಾದನು ಸಮುದ್ರಕ್ಕೆ ಬೀಳುತ್ತಿರುವಂತೆಯೇ ವರುಣದೇವನು ಮಿಂಚಿನ ವೇಗದಲ್ಲಿ ಸಮುದ್ರದಿಂದ ಮೇಲೆದ್ದು ಬಂದು ಬೀಳುತ್ತಿರುವ ಪ್ರಹ್ಲಾದನನ್ನು ತನ್ನೆರಡು ಕರಗಳಲ್ಲಿ ಹಿಡಿದು ಸಾಗರತೀರದ ಮರಳಿನ ಮೇಲೆ ಮಲಗಿಸಿ ಉಪಚರಿಸಿ ತೆರಳಿದನು ! ಅದೇ ಸಮಯದಲ್ಲಿ ಗಗನ ಮಾರ್ಗದಲ್ಲಿ ಪೈದೋರಿದ ಗರುಡದೇವನು ಪ್ರಹ್ಲಾದನಿಗೆ ಬಿಗಿದಿದ್ದ ನಾಗಪಾಶವನ್ನು ಕಿತ್ತೊಗೆದು "ಭಕ್ತರಾಜ ! ನನ್ನ ಪ್ರಭುವಿಗೆ ಪ್ರಿಯನಾದ ನಿನ್ನ ರಕ್ಷಣೆ ನನ್ನ ಕರ್ತವ್ಯವೆಂದು ಬಗೆದು ಈ ನಾಗಪಾಶದಿಂದ ನಿನ್ನನ್ನು ಬಿಡುಗಡೆ ಮಾಡಿದ್ದೇನೆ. ಬಾಲಕನಾದರೂ ನಿನ್ನ ಮನೋಧಾರಢ್ಯ, ಹರಿಭಕ್ತಿ ಶ್ಲಾಘನೀಯವಾದುದು ! ಕುಮಾರ ! ನಿನಗೆ ಮಂಗಳವಾಗಲಿ. ಜಯ ಶ್ರೀಹರಿ" ಎಂದು ಅದೃಶ್ಯನಾದನು. ಆಗ ಮತ್ತೆ ವರುಣದೇವನು ಅನರ್ಘ್ಯರತ್ನಗಳೊಡನೆ ಬಂದು ಪ್ರಹ್ಲಾದನನ್ನು ಎಚ್ಚರಗೊಳಿಸಿದನು. ಧ್ಯಾನದಿಂದ ಎಚ್ಚರಗೊಂಡ

1. ನದಂತೋ ಭೈರವಂ ನಾದಂ ಛಿಂಧಿ ಭಿಂಧೀತಿ ವಾದಿನಃ। ಆಸೀನಂ ಚಾಹನನ್ ಶೂಲೈಃ ಪ್ರಹ್ಲಾದಂ ಸರ್ವಮರ್ಮಸು ॥ ಪರೇ ಬ್ರಹ್ಮಣ್ಯನಿರ್ದೇಶ್ಯೇ ಭಗವತ್ಯಖಿಲಾತ್ಮನಿ । ಯುಕ್ತಾತ್ಮನ್ಯಫಲಾ ಆಸನ್ನಪುಣ್ಯಸ್ಯೇವ ಸತ್ಕ್ರಿಯಾಃ —ಭಾಗವತ
2. ಪ್ರಯಾಸೇಽಪಹತೇ ತಸ್ಮಿನ್ ದೈತ್ಯೇಂದ್ರಃ ಪರಿಶಂಕಿತಃ । ಚಕಾರ ತದ್ವಧೋಪಾಯಾನ್ ನಿರ್ಬಂಧೇನ ಯುಧಿಷ್ಠಿರ ॥ —ಭಾಗವತ

ಪ್ರಹ್ಲಾದನು "ಇದೇನು, ನಾನೆಲ್ಲಿರುವೆನು (ವರುಣನನ್ನು ನೋಡಿ) ಸ್ವಾಮಿ, ತಾವು ಯಾರು ?" ಎಂದು ಪ್ರಶ್ನಿಸಿದನು.

**ವರುಣ** : ಭಕ್ತಶಿಖಾಮಣಿ ! ನಾನು ವರುಣದೇವನು. ನಿನ್ನ ತಂದೆಯ ಆಜ್ಞೆಯಂತೆ ಕರಾಳನೆಂಬ ದೈತ್ಯನು ನಾಗಪಾಶದಿಂದ ಬಂಧಿತನಾದ ನಿನ್ನನ್ನು ನನ್ನ ಮಡಿಲಿನಲ್ಲಿ ಹಾಕಿಹೋದನು. ಹರಿಭಕ್ತನಾದ ನಿನ್ನನ್ನು ನಾನೇ ಇಲ್ಲಿಗೆ ಕರೆತಂದೆನು. ಗರುಡ ದೇವನು ಬಂದು ನಾಗಪಾಶದಿಂದ ನಿನ್ನನ್ನು ವಿಮೋಚಿಸಿದನು. ವತ್ಸ, ಜಗತ್ಸ್ವಾಮಿಯ ಪ್ರೇಮಪಾತ್ರನಾದ ನಿನ್ನನ್ನು ನಾಶಪಡಿಸಲು ಅದಾರು ಸಮರ್ಥ ರಾದಾರು ? ಇಕೋ, ಹರಿಭಕ್ತನಿಗೆ ನನ್ನ ಕಾಣಿಕೆ ! (ಅನರ್ಘ್ಯರತ್ನ ವೈಢೂರ್ಯಾದಿ ಗಳನ್ನು ಸಮರ್ಪಿಸಿ) ಮಗು, ಇವು ನಿನ್ನ ಜನಕನಿಗೂ ದುರ್ಲಭವಾದುದು. ಹರಿ ಭಕ್ತನಾದ ನಿನ್ನ ಸ್ಪರ್ಶದಿಂದ ನಾನು ಪುನೀತನಾದೆ.

**ಪ್ರಹ್ಲಾದ** : [ವಿಸ್ಮಯಾನಂದದಿಂದ] ಪೂಜ್ಯರೇ, ನಿಮ್ಮ ದರ್ಶನದಿಂದ ಧನ್ಯ ನಾದೆ ! ಆಹಾ, ನನ್ನ ಸ್ವಾಮಿಯು ನಿಮ್ಮಲ್ಲಿಯಲ್ಲವೇ ವಿಶ್ರಮಿಸುವನು ! ನೀವೆಂಥ ಸುಕೃತಶಾಲಿಗಳು ! ದೇವ, ಜಗತ್ತಿಗೆ ಆಶ್ರಯದಾತನಾದ ನನ್ನ ಪ್ರಭುವಿನ ಸತತ ಸಾನ್ನಿಧ್ಯದಿಂದ ಪವಿತ್ರರಾದ ನಿಮ್ಮನ್ನು ಕಂಡು ನನ್ನ ಜನ್ಮ ಸಾರ್ಥಕವಾಯಿತು. ಬಾಲಕನ ವಂದನೆಗಳನ್ನು ಸ್ವೀಕರಿಸಿ ಆಶೀರ್ವದಿಸಿರಿ [ನಮಸ್ಕರಿಸುವನು].

ವರುಣನು ಪ್ರಹ್ಲಾದನನ್ನು ಆಲಂಗಿಸಿ, "ಕುಮಾರ ! ನಿನ್ನ ಹರಿಭಕ್ತಿಯು ಸ್ಥಿರವಾಗಿರಲಿ! ಪ್ರಹ್ಲಾದ, ನಿನಗೆ ಮಂಗಳವಾಗಲಿ"ಎಂದು ಹೇಳಿ ಅದೃಶ್ಯನಾದನು.

ಪ್ರಹ್ಲಾದರಾಜನು ಹರ್ಷಾತಿರೇಕದಿಂದ "ಭಗವನ್ ! ಪುರಾಣಪುರುಷೋ-ತ್ತಮ ! ಮೃತ್ಯುವಿನ ದವಡೆಯಿಂದ ಪಾರುಮಾಡಿದ ನಿನ್ನೀ ಕಾರುಣ್ಯಕ್ಕೆ ಎಣೆ ಯುಂಟೆ ?" ಎಂದು ಭಗವಂತನನ್ನು ಸ್ತುತಿಸಹತ್ತಿದನು—

ರಾಗ : ಹಿಂದೂಸ್ಥಾನಿಭೈರವಿ ತಾಳ : ಆದಿ

ಗೋವರ್ಧನ ಗಿರಿಧಾರಿ ಮುರಾರಿ ।
ಶಿವವಿರಿಂಚಿನುತ ಕೌಸ್ತುಭಧಾರಿ ॥ ಪ ॥
ಮಕರಕುಂಡಲಮಾಲಾ ಮುಕುಟವಿಹಾರಿ ।
ಶಂಖ-ಚಕ್ರ ಪೀತಾಂಬರಧಾರಿ ॥ ಅ । ಪ ॥
ಗೋವರ್ಧನಗಿರಿಧಾರಿ ಮುರಾರಿ ॥

੦ ੦ ੦ ੦

ಸಮುದ್ರದಲ್ಲಿ ಬಿಸುಟರೂ, ನಾಗಪಾಶ-ಮೃತ್ಯುಬಂಧಗಳಿಂದ ತಪ್ಪಿಸಿಕೊಂಡು ಬದುಕಿಬಂದ ಪ್ರಹ್ಲಾದನನ್ನು ಕಂಡು ಆಶ್ಚರ್ಯ-ಕ್ರೋಧಮಗ್ನನಾದ ದೈತ್ಯ ರಾಜನು ಮತ್ತೆ ಕರಾಳ ದುರ್ಮುಖರಿಗೆ ಸರ್ಪದಂಶನಮಾಡಿಸಿ ಪ್ರಹ್ಲಾದನನ್ನು ಸಂಹರಿಸುವಂತೆ ಆಜ್ಞಾಪಿಸಿದನು. ಪ್ರಹ್ಲಾದನನ್ನು ಎತ್ತಿಕೊಂಡು ಕರಾಳು-

ದುರ್ಮುಖರು ಹಾವಾಡಿಗನೊಡನೆ ನಿರ್ಜನ ಪ್ರದೇಶಕ್ಕೆ ಬಂದು ಪ್ರಹ್ಲಾದನಿಗೆ ಸರ್ಪದಂಶನ ಮಾಡಿಸಲುದ್ಯುಕ್ತರಾದರು. ಆಗ ಎಲ್ಲಿಂದಲೋ ಒಂದು ಗರುಡಪಕ್ಷಿ ಒಂದು ಸರ್ಪವನ್ನು ಕಚ್ಚಿಕೊಂಡು ಹಾರಿಹೋಯಿತು! ಆಗ ದೈತ್ಯರು ಪ್ರಹ್ಲಾದ ನನ್ನು ಅರಮನೆಗೆ ಕರೆತಂದರು. ಪ್ರಹ್ಲಾದರಾಜ ಭಕ್ತಿಯಿಂದ ಭಗವಂತನನ್ನು ಸ್ತುತಿಸುತ್ತ ಅರಮನೆಗೆ ತೆರಳಿದನು.

ಗೋವರ್ಧನಗಿರಿಧಾರಿ ಮುರಾರಿ
ಶರಣಾಗತಜನ ಭಯಪರಿಹಾರಿ ।
ಮುರುಳೀಮೋಹನ ಭಕ್ತೋದ್ಧಾರಿ ॥ ೦ ॥

೦ ೦ ೦ ೦

ಕಯಾಧೂರಾಣಿಯು ಅಂತಃಪುರದಲ್ಲಿ ಚಿಂತಾಕ್ರಾಂತಳಾಗಿರುವಾಗ ಹಿರಣ್ಯ ಕಶ್ಯಪನು ಬಂದು ಪ್ರಹ್ಲಾದನ ಅವಿಧೇಯತೆ, ತನ್ನ ಆಜ್ಞೆಯನ್ನು ಧಿಃಕರಿಸಿ ಹರಿ ಸ್ತುತಿಯಲ್ಲಿ ಮಗ್ನನಾಗಿರುವುದು, ಕುಪಿತನಾದ ತಾನು ಅವನಿಗೆ ನೀಡಿದ ಶಿಕ್ಷೆಗಳು, ಅದೆಲ್ಲದರಿಂದಲೂ ಕುಮಾರನು ಅದು ಹೇಗೋ ಪಾರಾದುದು ಮುಂತಾದ ವಿಚಾರ ಗಳನ್ನೂ ಹೇಳಿದನು. ಕಯಾಧುವು ತಂದೆಮಕ್ಕಳ ಈ ಸೆಣಸಾಟದಿಂದ ಮುಂದೇನು ಅನರ್ಥವಾಗುವದೋ ಎಂದು ಭಯಗೊಂಡು "ನಾಥ ! ಪ್ರಹ್ಲಾದನಿನ್ನೂ ಬಾಲಕ. ಹುಡುಗರಿಗೆ ಈ ರೀತಿ ಹಟ ಸ್ವಾಭಾವಿಕ, ಅವನನ್ನು ನಾನು ಸರಿಪಡಿಸುವೆನು, ನೀವು ನಿಶ್ಚಿಂತೆಯಿಂದಿರಿ" ಎಂದಳು. ಹಿರಣ್ಯಕಶ್ಯಪನು "ರಾಣಿ, ಇನ್ನು ಚಿಂತೆಗೆ ಅವಕಾಶವಿಲ್ಲ. ಆ ಪಿತೃದ್ರೋಹಿಯನ್ನು ಸರಿಪಡಿಸುವ ಶ್ರಮವೂ ಇನ್ನು ನಿನಗಿಲ್ಲ" ಎಂದು ಗಹಗಹಿಸಿ ನಗಹತ್ತಿದನು.

ಪತಿಯ ಮಾತಿನ ಮರ್ಮವನ್ನರಿಯದೆ ಭಯದಿಂದ ಕಯಾಧುವು "ಪ್ರಾಣ ವಲ್ಲಭ ! ಹೀಗೇಕೆ ಹೇಳುವಿರಿ. ಪ್ರಹ್ಲಾದ ಕುಮಾರನೆಲ್ಲಿ? ಅವನನ್ನೇನು ಮಾಡಿ ದಿರಿ" ಎಂದಾಗ ಹಿರಣ್ಯಕಶ್ಯಪನು "ಇನ್ನೆಲ್ಲಿಯ ಪ್ರಹ್ಲಾದ! ಅವನನ್ನು ಬೆಟ್ಟದಿಂದ ತಳ್ಳಿ ಸಂಹರಿಸಲು ಅಷ್ಟಾವಕ್ರನೊಡನೆ ಕಳಿಸಿರುವೆನು. ಇಷ್ಟು ಹೊತ್ತಿಗೆ ಆ ದೈತ್ಯ ಕುಲಕುಠಾರನು ಮರಣಹೊಂದಿರಬಹುದು ! ಆ ಸಂತೋಷದವಾರ್ತೆ ಕೇಳಲು ಕಾತರನಾಗಿರುವೆನು" ಎಂದನು. ಪತಿಯ ಮಾತನ್ನು ಕೇಳಿದ ಕೂಡಲೇ ಕಯಾಧುವು ಭಯಾರ್ತಳಾಗಿ 'ಹಾ, ಕುಮಾರ' ಎಂದು ಮೂರ್ಛಿತಳಾದಳು. ದೈತ್ಯರಾಜನು ಅವಳನ್ನು ಎಚ್ಚರಗೊಳಿಸಿ "ರಾಣಿ ! 'ಕುಲಸ್ಯಾರ್ಥೇ ತ್ಯಜೇದೇಕಂ ವಂಶದ ಹಿತ ದೃಷ್ಟಿಯಿಂದ ಕುಲಕುಠಾರನಾಗಬಹುದಾದ ಒಬ್ಬ ಮಗನನ್ನು ತ್ಯಜಿಸಬೇಕೆಂದು ಅಭಿಯುಕ್ತವಚನವಿದೆ. ನಮ್ಮ ದೈತ್ಯವಂಶದ ಹಿತಕ್ಕಾಗಿ ಪ್ರಹ್ಲಾದನನ್ನು ಬಲಿ ಕೊಡಬೇಕಾಯಿತು! ನನ್ನನ್ನು ಕ್ಷಮಿಸು ಕಯಾಧು" ಎಂದು ರಾಣಿಯನ್ನು ಸಮಾಧಾನಪಡಿಸಹತ್ತಿದನು.

ಎಚ್ಚರಗೊಂಡ ಕಯಾಧುವು ಕಣ್ಣೀರು ಸುರಿಸುತ್ತಾ, ಹಾ, ಕುಮಾರ, ಪ್ರಹ್ಲಾದ ನೀನಿಂತು ಅಪಮೃತ್ಯುಗೀಡಾಬೇಕೆಂದೇ ನಾನು ನಿನ್ನನ್ನು ಹಡೆದೆನೆ? ಅಯ್ಯೋ, ಈ ದುಃಖವನ್ನು ನಾನೆಂತು ಸಹಿಸಲಿ" ಎಂದು ಗೋಳಿಡುತ್ತಿರಲು ದೈತ್ಯರಾಜನು "ಶಾಂತಳಾಗು ದೇವಿ, ಸಮಾಧಾನ ತಾಳು" ಎಂದು ಸಂತೈಸಿದನು.

ಕಯಾಧುವಿನ ಕಣ್ಣಿನಲ್ಲಿ ಧಾರಾಕಾರವಾಗಿ ನೀರು ಹರಿಯುತ್ತಿತ್ತು. ದುಃಖಾರ್ತಳಾದ ಆ ತಾಯಿ ಹುಚ್ಚಿಯಂತೆ ಪುತ್ರವಿಯೋಗವನ್ನು ಸಹಿಸಲಾಗದೆ ಬಡಬಡಿಸಹತ್ತಿದಳು.

"ಕಂದ, ಪ್ರಹ್ಲಾದ! ನಿನ್ನೀ ತಾಯಿಯನ್ನು ತ್ಯಜಿಸಿ ಹೊರಟುಹೋದೆಯಾ, ಕುಮಾರ! ನೀನೆಲ್ಲಿರುವೆ? ಹೂಂ, ಇನ್ನೆಲ್ಲಿಯ ಪ್ರಹ್ಲಾದ ನನ್ನ ಆ ಮುದ್ದು ಮಗನು ಪರ್ವತದ ಕೆಳಭಾಗದ ಅದಾವುದೋ ಅಂಧಕಾರಮಯ ಕರಾಳಗರ್ತದಲ್ಲಿ ಬಿದ್ದು ಅಸುವನ್ನು ನೀಗಿರುವನು. ಕಂದ, ನನ್ನ ಮಾತನ್ನಾಲಿಸಿದ್ದರೆ, ನಿನಗೀಗತಿ ಬರುತ್ತಿರಲಿಲ್ಲ. ಈಗ ನಾನು ನಿನ್ನನ್ನಗಲಿ ಹೇಗೆ ಜೀವಿಸಲಿ? [ಭ್ರಮಿಷ್ಠಳಂತೆ] ಇಲ್ಲ, ನನ್ನ ಕಂದ ಮೃತನಾಗಿಲ್ಲ! ನನ್ನ ಹೃದಯದಲ್ಲಿ ಅದೇನೋ ಒಂದು ಆಶಾಕಿರಣ ಮೂಡುತ್ತಿದೆ. ತಾಯಿಯ ಮನದ ಅನಿಸಿಕೆ ಹುಸಿಯಾಗಲಾರದು. ಪರಮಾತ್ಮಾ, ನನ್ನ ಮುದ್ದು ಪ್ರಹ್ಲಾದನನ್ನು ನನಗೆ ಉಳಿಸಿಕೊಡು ತಂದೆ" ಎಂದು ಪ್ರಾರ್ಥಿಸುತ್ತಿರುವಂತೆಯೇ ಶ್ರೀಹರಿನಾಮಸಂಕೀರ್ತನಮಾಡುತ್ತಾ ಅಷ್ಟಾವಕ್ರನೊಡನೆ ಪ್ರಹ್ಲಾದನು ಬಂದನು.

ಕಯಾಧುವು ಕುಮಾರ ಪ್ರಹ್ಲಾದನನ್ನು ಕಂಡು ಆನಂದಾತಿರೇಕದಿಂದ ಓಡಿಬಂದು 'ಮಗು, ಪ್ರಹ್ಲಾದ! ನೀನು ಸುಖವಾಗಿರುವೆಯಾ' ಎಂದು ತಬ್ಬಿ ಮೈಮರೆತಳು. ಪ್ರಹ್ಲಾದನೂ ತಾಯಿಯ ಕೊರಳಪ್ಪಿ 'ಅಮ್ಮಾ, ನಿನ್ನ ಆಶೀರ್ವಾದ, ಶ್ರೀಹರಿಯ ಕೃಪೆಯಿಂದ ಸುಖವಾಗಿರುವೆನಮ್ಮ' ಎಂದು ಹೇಳುತ್ತಿರಲು ಹಿರಣ್ಯಕಶ್ಯಪನು ಪ್ರಹ್ಲಾದನು ಬದುಕಿ ಬಂದಿರುವುದನ್ನು ಕಂಡು ದಿಗ್ಭ್ರಾಂತನಾಗಿ ಇದೇನಚ್ಚರಿ. ಇವನು ಮತ್ತೆ ಬದುಕಿ ಬಂದಿರುವನಲ್ಲಾ! ತ್ರಿಲೋಕವನ್ನೇ ಜಯಿಸಿದ ನನಗೆ ಈ ಸಣ್ಣ ಬಾಲಕನನ್ನು ಗೆಲ್ಲಲಾಗಲಿಲ್ಲವಲ್ಲ! [ಸಿಟ್ಟಿನಿಂದ] ಎಲವೋ ಪಿತೃದ್ರೋಹಿ! ನೀನಿನ್ನೂ ಜೀವಿಸಿರುವೆಯ? [ಅಷ್ಟಾವಕ್ರನನ್ನು ಕೆಂಗಣ್ಣಿನಿಂದ ನೋಡಿ] ಸ್ವಾಮಿದ್ರೋಹಿ! ಪ್ರಹ್ಲಾದ ಹೇಗೆ ಬದುಕಿದನು? ನನ್ನ ಆಜ್ಞೆಯನ್ನು ಪಾಲಿಸಲಿಲ್ಲವೇ" ಎಂದು ಅಬ್ಬರಿಸಿದನು.

ಅಷ್ಟಾವಕ್ರನು ಭಯದಿಂದ ಕಂಪಿಸುತ್ತಾ "ಮಹಾಪ್ರಭು, ಈ ಸೇವಕನನ್ನು ಕ್ಷಮಿಸಿರಿ. ಅನ್ನದಾತಾ! ನಿಮ್ಮ ಅಪ್ಪಣೆಯಂತೆ ರಾಜಕುಮಾರನನ್ನು ಉನ್ನತವಾದ ಬೆಟ್ಟದತುದಿಯಿಂದ ಕೆಳಕ್ಕೆ ನೂಕಿದೆನು, ಆ ಹರಿಯನ್ನು ಸ್ಮರಿಸುತ್ತಾ ಕುಮಾರ ಕೆಳಗೆ ಬಿದ್ದನು ! ಏನಾಯಿತೆಂದು ನೋಡಲು ಗಿರಿಯ ತಳಭಾಗಕ್ಕೆ ಹೋದೆನು, ಏನು

ಹೇಳಲಿ ಪ್ರಭು ! ಪ್ರಹ್ಲಾದಕುಮಾರನು ಆನಂದದಿಂದ ನಲಿಯುತ್ತಾ ಗಾನ ಮಾಡುತ್ತಾ ನರ್ತಿಸುತ್ತಿದ್ದನು ! ಆ ಅಚ್ಚರಿಯನ್ನು ಕಂಡು ನನ್ನ ಕಣ್ಣುಗಳನ್ನು ನಾನೇ ನಂಬದಾದೆ! ಮುಂದೇನೂ ಮಾಡಲು ತೋರದೆ ವಿಷಯವನ್ನು ಅರಿಕೆ ಮಾಡಲು ಕುಮಾರನೊಡನೆ ಬಂದಿದ್ದೇನೆ" ಎಂದು ವಿಜ್ಞಾಪಿಸಿದನು. ಹಿರಣ್ಯಕಶ್ಯಪನು ಕಿಂಕರ್ತವ್ಯಮೂಢನಾಗಿ, ಮಾತಾಪುತ್ರರು ಪರಸ್ಪರ ಪ್ರೇಮದಿಂದ ತಬ್ಬಿಕೊಂಡು ನಲಿಯುತ್ತಿರುವುದನ್ನು ನೋಡುತ್ತಾ ವಿಸ್ಫಾರಿತನೇತ್ರನಾಗಿ ನಿಂತನು.

ಕಯಾಧುವು ಪುತ್ರನ ಅಂಗಾಂಗಗಳನ್ನು ಮಮತೆಯಿಂದ ಸ್ಪರ್ಶಿಸುತ್ತಾ "ಆಹಹ! ನನ್ನ ಪುತ್ರನು ಜೀವಿಸಿರುವನು! ಮಗು, ಪ್ರಹ್ಲಾದಾ, ಆ ಮಹಾ ಶೃಂಗಾಗ್ರದಿಂದ ಕೆಳಗೆ ಬಿದ್ದ ನಿನಗೆ ಏನೂ ಘಾಸಿಯಾಗಲಿಲ್ಲವೇ?" ಎಂದೆನಲು,ಪ್ರಹ್ಲಾದನು "ತಾಯಿ ಆ ಜಗದೀಶನೇ ಪೊರೆಯುತ್ತಿರಲು ನನಗೇನಾಗುವುದಮ್ಮಾ ?" ಎಂದನು.

**ಕಯಾಧು :** [ಆನಂದದಿಂದ] ಅಹುದು ಕಂದ! ಆ ಸ್ವಾಮಿಯು ಸರ್ವದಾ ನಿನ್ನನ್ನು ರಕ್ಷಿಸುತ್ತಿರುವನು. ಅಂದು ನಾರದ ಮಹರ್ಷಿಗಳ ಆಶ್ರಮದಲ್ಲಿ ಆ ಭಕ್ತ ಬಂಧುವು ನಿನಗೆ ವರದಾನ ಮಾಡಿದ್ದು ಈಗ ನೆನಪಿಗೆ ಬಂದಿತು. ಕುಮಾರ ! ನೀನು ಭಾಗ್ಯಶಾಲಿ, ನೀನೆಂತು ಜೀವಿಸಿದೆ ಹೇಳಪ್ಪ ?

**ಪ್ರಹ್ಲಾದ :** ಮಾತಾ ! ನಾನು ಶ್ರೀಹರಿಯನ್ನು ಧ್ಯಾನಿಸುತ್ತಿರುವಾಗ ಅಷ್ಟಾವಕ್ರನು ನನ್ನನ್ನು ಕೆಳಕ್ಕೆ ನೂಕಿದನು. ಪರ್ವತಾಗ್ರದಿಂದ ನಾನು ಕೆಳಕ್ಕೆ ಬೀಳುತ್ತಿರುವಂತೆಯೇ ಸರ್ವಾಭರಣ ಭೂಷಿತಳೂ ಅತ್ಯಂತ ತೇಜಸ್ವಿನಿಯೂ ಆದ ದೇವಿಯೋರ್ವಳು ನನ್ನನ್ನು ತನ್ನ ಮಡಿಲಲ್ಲಿ ಹಿಡಿದು ಹೂವಿನಂತೆ ಮೆಲ್ಲಗೆ ಧರೆಗಿಳಿಸಿ ತಲೆಯಮೇಲೆ ಕರವಿರಿಸಿ 'ವತ್ಸ; ಪ್ರಹ್ಲಾದಾ; ನಾನೇ ಭೂದೇವಿಯು! ನನ್ನ ಪತಿಗೆ ಪ್ರೀತ್ಯಾಸ್ಪದನಾದ ನಿನ್ನನ್ನು ಸರ್ವದಾ.ಕಾಪಾಡುವೆನು. ನಿನಗೆ ಮಂಗಳವಾಗಲಿ" ಎಂದು ಹೇಳಿ ಅದೃಶ್ಯಳಾದಳು ! ಆಹಾ ಆ ತಾಯಿಯನ್ನು ನೋಡುತ್ತಿರುವಾಗ ನಿನ್ನ ನೆನಪಾಯಿತಮ್ಮಾ! ಅಂತೆಯೇ ನಿನ್ನನ್ನು ಕಾಣಲು ಆತುರದಿಂದ ಓಡೋಡಿ ಬಂದೆನಮ್ಮ.

ಕಯಾಧುವಿನ ಕಣ್ಣಿನಲ್ಲಿ ಆನಂದಾಶ್ರು ಮಿಡಿಯಿತು. ಮಮತೆಯಿಂದ ಮಗನನ್ನು ಬಿಗಿದಪ್ಪಿ ಮುದ್ದಿಸುತ್ತಾ ಮೈಮರೆತಳು. ಹಿರಣ್ಯಕಶ್ಯಪನು 'ಭೂದೇವಿ' ಎಂದು ಮಗನು ಹೇಳಿದ್ದನ್ನು ಕೇಳಿ ಕಟಕಟನೆ ಹಲ್ಲುಕಡಿದನು. ತನ್ನ ಸಹೋದರನ ಮೃತ್ಯುವಿಗೆ ಕಾರಣಳಾದವಳೇ ತನ್ನ ಮಗನನ್ನು ರಕ್ಷಿಸಿದಳೆಂದು ತಿಳಿದಮೇಲಂತೂ ಅವನ ಹೃದಯದಲ್ಲಿ ದ್ವೇಷ-ಕೋಪಜ್ವಾಲೆಯು ಭುಗಿಲೆಂದು ಉರಿಯಹತ್ತಿತು. ಅತಿ ಕೋಪದಿಂದ ಪ್ರಶ್ನಿಸಿದ "ಪ್ರಹ್ಲಾದ, ಏನಂದೆ ?" ಭೂದೇವಿ ! ಭೂದೇವಿ !! ಆ ಪಾತಕಿಯೇ ನಿನ್ನನ್ನು ರಕ್ಷಿಸಿದಳೇ ?"

**ಪ್ರಹ್ಲಾದ :** ಅಹುದು ತಂದೆಯೇ, ಆ ದಯಾಮಯಳೇ ನನ್ನ ರಕ್ಷಕಳು. ಮಾತೆಗಿಂತ ಅತಿಶಯ ಮಮತೆ ತೋರಿದ ಆ ಮಹಾನುಭಾವಳನ್ನು ಪಾತಕಿಯೆನ್ನದಿರಪ್ಪಾ.

**ಹಿರಣ್ಯ :** (ಕೌತುಕ-ದುಃಖದಿಂದ) ಆಶ್ಚರ್ಯ! ಪ್ರಹ್ಲಾದ, ನಿನ್ನ ಚಿಕ್ಕಪ್ಪನ ಮರಣಕ್ಕೆ ಕಾರಣಳಾದ ಆ ಮಾಯಾಂಗನೆಯು ನಿನ್ನನ್ನು ಬದುಕಿಸಿ, ನನ್ನನ್ನು ಕೊಂದಳು ! ಹಾಯ್ ಹಾಯ್ ಎಲ್ಲವೂ ವಿಪರೀತವಾಗಿ ಪರಿಣಮಿಸುತ್ತಿದೆಯಲ್ಲ !

**ಕಯಾಧು :** [ಕರಮುಗಿದು] ಆಹಾ, ಭೂದೇವಿ ! "ಕ್ಷಮೆ" ಎಂಬ ನಿನ್ನ ಹೆಸರು ಇದೀಗ ಸಾರ್ಥಕವಾಯಿತು. ತಾಯಿಯ ಮನದಳಲನ್ನು ತಾಯಿಯಲ್ಲವೇ ಅರಿಯಬಲ್ಲಳು ! ದೇವಿ ! ಭೂಮಾತೆ, ನನ್ನ ಕುಮಾರನನ್ನು ಸಂರಕ್ಷಿಸಿದ ನಿನಗೆ ಅನಂತ ವಂದನೆಗಳು.

**ಪ್ರಹ್ಲಾದ :** ತಂದೆಯೇ! ತಾಯಿಯು ಹೇಳಿದಂತೆ ಕ್ಷಮಾಗುಣದಿಂದ 'ಕ್ಷಮೆ'ಯೆಂದೇ ಖ್ಯಾತಳಾದ ಭೂಮಾತೆಯು ಯಾರನ್ನೂ ದ್ವೇಷಿಸುವುದಿಲ್ಲ. ಜಗತ್ತಿನ ಜನರು ಮಾಡುವ, ಮಾಡುತ್ತಿರುವ ಎಲ್ಲಾ ಅನ್ಯಾಯ, ಅಧರ್ಮ, ಅತ್ಯಾಚಾರಗಳನ್ನೂ ಸಹಿಸಿ ಕಾಪಾಡುವ ಆ ತಾಯಿಯು ಯಾರಿಗೂ ಅಪಕಾರಮಾಡುವವಳಲ್ಲ, ಆದರೆ ಅಶಾಶ್ವತವಾದ ದೇಹವನ್ನು, ಪೌರುಷ ಬಾಹುಬಲಗಳನ್ನು ನಂಬಿ ದರ್ಪದಿಂದ ಮೇರೆಮೀರಿ ವರ್ತಿಸಿ ಜನರು ಅಧರ್ಮ-ಅತ್ಯಾಚಾರಗಳನ್ನಾಚರಿಸಿ ಕುಕರ್ಮದ ಫಲವನ್ನು ಅನುಭವಿಸುವರು 'ಅವಶ್ಯಮನುಭೋಕ್ತವ್ಯಂ ಕೃತಂ ಕರ್ಮ ಶುಭಾಶುಭಮ್' ಅಷ್ಟೇ ! ಜನಕ ! ಈಗಲಾದರೂ ಶ್ರೀಹರಿಯ ಮಹಿಮೆಯನ್ನರಿತು ಆ ಸ್ವಾಮಿಯ ಮೇಲಿನ ದ್ವೇಷವನ್ನು ಬಿಡಲಾರೆಯಾ ?

**ಹಿರಣ್ಯ :** ಛೀ ಮೂರ್ಖ ! ನನಗೇ ಉಪದೇಶಿಸುವೆಯಾ? (ಸ್ವಗತ) ಹಾಯ್ ದುರ್ವಿಧಿಯೇ ನನಗೆಂತಹ ಸಂಕಟವನ್ನು ತಂದೊಡ್ಡಿರುವೆ, ಈ ಮುದ್ದು ಬಾಲಕನ ನಿರ್ಮಲ ಮೃದುತಮ ಹೃದಯದಲ್ಲಿ ಹರಿಭಕ್ತಿಯ ವಿಷಬೀಜವನ್ನು ಬಿತ್ತಿ, ಇವನಿಗೆ ಭಕ್ತಿಯ ಹುಚ್ಚು ಹಿಡಿಸಿ, ಮಧುರಮಯವಾಗಿದ್ದ ನಮ್ಮ ಸಂಸಾರವೆಂಬ ನಂದನವನದಲ್ಲಿ ದಾವಾನಲವನ್ನೇಕೆ ಹಬ್ಬಿಸಿರುವೆ? ಈ ದಳ್ಳುರಿಯನ್ನು ನಾನೆಂತು ಸಹಿಸಲಿ? ದೈತ್ಯವಂಶದ ಹಿತವನ್ನು ಬಿಟ್ಟು ಈ ಕರುಳಿನ ಕಂದಮ್ಮನನ್ನು ಪ್ರೀತಿಸಲೇ, ಅಥವಾ ಕುಲವೈರಿಯ ಸ್ತುತಿಪಾಠಕನಾಗಿರುವ ಈ ದುಷ್ಟ ಬಾಲಕನನ್ನು ತ್ಯಜಿಸಿ ದೈತ್ಯವಂಶದ ಹಿತಸಾಧಿಸಲೇ ? ಈಗ ನನ್ನ ಕರ್ತವ್ಯವೇನು? ನಾನೇನು ಮಾಡಲಿ?" ಎಂದು ಚಿಂತಿಸುತ್ತಾ ರಾಜಸಭೆಗೆ ತೆರಳಿದನು.

o o o o

ದಿನೇ ದಿನೇ ಪ್ರಹ್ಲಾದನಲ್ಲಿ ಪರಮಾತ್ಮಭಕ್ತಿಯು ಅಭಿವೃದ್ಧಿಸಹತ್ತಿತು. ಇದರಿಂದ ಹಿರಣ್ಯಕಶ್ಯಪನ ಚಿಂತೆಯೂ ಅಧಿಕವಾಯಿತು. ಸಾಮ-ದಾನ-ಭೇದ

ಮತ್ತು ದಂಡ ಎಂಬ ನಾಲ್ಕುವಿಧ ಉಪಾಯಗಳಿಂದಲೂ ಪ್ರಹ್ಲಾದನನ್ನು ದಾರಿಗೆ ತರಲು ದೈತ್ಯರಾಜನು ಯತ್ನಿಸಿದರೂ ಪ್ರಯೋಜನವಾಗಲಿಲ್ಲ. ಹರಿಭಕ್ತನೆಂದು ಅವನು ಪುತ್ರನನ್ನು ಹೆಚ್ಚಾಗಿ ದ್ವೇಷಿಸಹತ್ತಿದನು. ಮತ್ತೆ ಮತ್ತೆ ದಂಡೋಪಾಯ ಗಳಿಂದ ದೈತ್ಯವಂಶದ ನಡೆನುಡಿಗಳನ್ನನುಸರಿಸುವಂತೆ ಮಾಡಲು ಹಿರಣ್ಯಕಶ್ಯಪನು ಹೆಣಗಾಡಿದನು. ಸತ್ಯನಾಮಕನಾದ ಪರಮಾತ್ಮನ ಮಹತ್ವವನ್ನು ತಂದೆಗೆ ತಿಳಿಸಿ ಕೊಟ್ಟು; ಅವನು ಉದ್ಧೃತನಾಗುವಂತೆ ಮಾಡಲು ಪ್ರಹ್ಲಾದನು ಸತ್ಯಾಗ್ರಹ ವನ್ನೇ ಹೂಡಿದನು.

ದೈತ್ಯಚಕ್ರವರ್ತಿಯು ಕ್ರೋಧದಿಂದ ಉನ್ಮತ್ತನಾಗಿ ಮಗನಿಗೆ ವಿವಿಧ ಹಿಂಸೆ ಗಳನ್ನು ಕೊಡಲಾರಂಭಿಸಿದನು. ಮದಗಜಗಳಿಂದ ಮಗನನ್ನು ತುಳಿಸಲು ಆನೆ ಗಳನ್ನು ಬಿಟ್ಟಾಗ ಅವು ಸೊಂಡಲುಗಳನ್ನು ಮೇಲೆತ್ತಿ ಭಕ್ತರಾಜರಿಗ ನಮಸ್ಕರಿಸಿ ಓಡಿ ಹೋದವು ! ಇನ್ನೂ ಕೆಲ ಮತ್ತೇರಿದ ಆನೆಗಳ ಚೂಪಾದ ದಂತಗಳಿಂದ ಪುತ್ರನನ್ನು ತಿವಿಸಿದಾಗ ಆನೆಗಳ ದಂತಗಳೇ ಮುರಿದು ಅವು ಭಯಂಕರ ಶಬ್ದ ಮಾಡುತ್ತಾ ಓಡಿದವು !! ಅನಂತರ ದೈತ್ಯರಾಜನ ಅಪ್ಪಣೆಯಂತೆ ಅಸುರರು ಪ್ರಹ್ಲಾದನನ್ನು ಉರಿಯುವ ಬೆಂಕಿಯಲ್ಲಿ ನೂಕಿದರು, ಅಗ್ನಿದೇವನ ಆ ಭಯಂಕರ ಕಾವು ಪ್ರಹ್ಲಾದನಿಗೆ ಶ್ರೀಗಂಧಾಭಿಷೇಕಮಾಡಿದಂತೆ ತಂಪಾಯಿತು. ! ಶಸ್ತ್ರಾಸ್ತ್ರ ಗಳಿಂದ ಹಿಂಸಿಸಿದಾಗ ಅವುಗಳೇ ಭಗ್ನವಾದವು! ದೈತ್ಯವೀರರು ದೊಡ್ಡ ದೊಡ್ಡ ಬೆಟ್ಟ ಗಳು. ಬಂಡೆಗಲ್ಲುಗಳನ್ನು ಕುಮಾರನ ಮೇಲೆ ಎತ್ತಿ ಹಾಕಿದರು. ಅವು ಪ್ರಹ್ಲಾದನಿಗೆ ಪುಷ್ಪವೃಷ್ಟಿಯಾಗಿ ಪರಿಣಮಿಸಿದವು! ಮಗನನ್ನು ಹಿರಣ್ಯಕಶ್ಯಪನು ಕೈಕಾಲು ಹೆಡ ಮುರಿಗೆ ಕಟ್ಟಿಸಿ ಅಂಧಕೂಪದಲ್ಲಿ ಅನ್ನಾಹಾರಗಳಿಲ್ಲದೆ ನಿರ್ಜಂಧನದಲ್ಲಿಡಿಸಿದನು. ಸಮಸ್ತ ಚೇತನಪ್ರಪಂಚಕ್ಕೆ ಆಯಾ ಕಾಲದಲ್ಲಿ ಇದ್ದಲ್ಲಿಯೇ ಆಹಾರವನ್ನೊದಗಿಸಿ ಕಾಪಾಡುವ ಪ್ರಭುವು ತನ್ನ ಪರಮ ಭಕ್ತನ ಯೋಗಕ್ಷೇಮವನ್ನು ನೋಡದಿರು ವನೆ? ಪ್ರಹ್ಲಾದನಿಗೆ ಹಸಿವು ನೀರಡಿಕೆಗಳೇ ಆಗದಂತೆ, ಮೃಷ್ಟಾನ್ನಭೋಜನ ಮಾಡಿದಂತೆ ತೃಪ್ತಿಯನ್ನೇ ಕರುಣಿಸಿದನು !

ಹೀಗೆ ದೈತ್ಯರಾಜನು ಪುತ್ರನನ್ನು ಸಂಹರಿಸಲು ಮಾಡಿದ ಎಲ್ಲಾ ಪ್ರಯತ್ನ ಗಳೂ, ವ್ಯರ್ಥವಾಗಿ ಪ್ರಹ್ಲಾದರಾಜನು ಎಂದಿನಂತೆ ನಗುತ್ತಲೇ ಸಂತೋಷ ದಿಂದ ಕಂಗೊಳಿಸುತ್ತಿದ್ದನು.

ಆಗ ಶಂಡಾಮರ್ಕರು ಬಂದು ದೈತ್ಯರಾಜನಿಗೆ ಏಕಾಂತದಲ್ಲಿ ಧೈರ್ಯಹೇಳಿ ವಿಜ್ಞಾಪಿಸಿದರು-"ದೈತ್ಯೇಂದ್ರ! ತ್ರಿಲೋಕಗಳನ್ನೂ ಭ್ರೂವಿಭ್ರಮಮಾತ್ರದಿಂದಲೇ ಜಯಿಸಿದ ಪರಾಕ್ರಮಿಯಾದ ನಿನಗೇನು ಚಿಂತೆ ? ಹುಡುಗರ ಬುದ್ಧಿ. ಒಮ್ಮೆ ಒಳಿತು, ಒಮ್ಮೆ ಕೆಡಕಾಗುವುದು, ಮಕ್ಕಳಿಗೆ ವಿವೇಕವಿನ್ನೂ ಬಂದಿರುವುದಿಲ್ಲ. ಮುಂದೆ ಕಾಲಾಂತರದಲ್ಲಿ ಉಪಾಯ ಯೋಜನೆಗಳಿಂದ ಅವನ ಬುದ್ಧಿ ಸರಿಹೋಗ

ಬಹುದು. ರಾಜರ್ಷ, ಹಿಂಸೆಯು ಹೆಚ್ಚಾದಂತೆ ಮಕ್ಕಳ ಹಟವೂ ಹೆಚ್ಚುವುದು. ಆದ್ದರಿಂದ ಅವನನ್ನು ಪೂಜ್ಯ ಶುಕ್ರಾಚಾರ್ಯರು ಬರುವವರೆಗೆ ನಿರ್ಬಂಧನವಲ್ಲಿಟ್ಟು ಅವರಿಂದ ಉಪದೇಶ ಮಾಡಿಸು, ಆಗ ಅವನು ನಮ್ಮ ಮಾರ್ಗಕ್ಕೆ ಬರುವನು," ಎಂದು ಸಲಹೆ ನೀಡಿದರು.

ಗುರುಪುತ್ರರಾದ ಶಂಡಾಮರ್ಕರ ಸಲಹೆಗೆ ಸಮ್ಮತಿಸಿ ಹಿರಣ್ಯಕಶ್ಯಪನು "ಪೂಜ್ಯರೇ ಹಾಗೆಯೇ ಆಗಲಿ, ನೀವು ಪ್ರಹ್ಲಾದನನ್ನು ನಿರ್ಬಂಧನದಲ್ಲಿಟ್ಟು ಅವನಿಗೆ ರಾಜಧರ್ಮ, ಗೃಹಸ್ಥಧರ್ಮ ಮತ್ತು ನಮ್ಮ ವಂಶದ ಸಂಪ್ರದಾಯಗಳನ್ನು ಬೋಧಿಸಿರಿ" ಎಂದನು. ಅದರಂತೆ ಅವರು ಪ್ರಹ್ಲಾದನಿಗೆ ಮೋಕ್ಷಮಾರ್ಗವನ್ನು ಬಿಟ್ಟು ಕೇವಲ ಪ್ರವೃತ್ತಿಮಾರ್ಗಕ್ಕೆ ಸಹಾಯಕವಾದ ಧರ್ಮ, ಅರ್ಥ, ಕಾಮ ವಿಚಾರಗಳನ್ನು ಉಪದೇಶಿಸಿದರು. ಅವು ರಾಗದ್ವೇಷಗಳನ್ನು ಹೆಚ್ಚಿಸುವುದೆಂದು ತಿಳಿದ ಪ್ರಹ್ಲಾದನು ಅವನ್ನು ಕಡೆಗಣಿಸಿದನು.

## ೧೩. ದೈತ್ಯಬಾಲಕರಿಗೆ ಪ್ರಹ್ಲಾದನ ಉಪದೇಶ

ಒಂದುದಿನ ಶಂಡಾಮರ್ಕರು ತಮ್ಮ ಗೃಹಸ್ಥಧರ್ಮವಾದ ಅಗ್ನಿಹೋತ್ರಾದಿಗಳನ್ನು ನೆರವೇರಿಸಲು ಮನೆಗೆ ತೆರಳಿದರು, ಆಗ ದೈತ್ಯಬಾಲಕರು ಆಟವಾಡಲು ಸಮಯದೊರೆಯಿತೆಂದು ಉತ್ಸಾಹದಿಂದ ಪ್ರಹ್ಲಾದನಲ್ಲಿಗೆ ಬಂದು "ರಾಜಕುಮಾರ! ಗುರುಗಳು ಮನೆಗೆ ಹೋಗಿರುವರು. ಈಗ ಅನಾಯಾಸವಾಗಿ ವೇಳೆ ದೊರೆತಿದೆ, ಬಾ, ಏನಾದರೂ ಆಟವನ್ನು ಆಡೋಣ" ಎಂದು ಆಹ್ವಾನಿಸಿದರು.

ಆಗ ಮಹಾನುಭಾವನಾದ ಪ್ರಹ್ಲಾದನು ಆಟಪಾಟಗಳಿಂದ ವ್ಯರ್ಥಕಾಲಹರಣ ಮಾಡಲಪೇಕ್ಷಿಸುವ ದೈತ್ಯಬಾಲಕರಲ್ಲಿ ಹರಿಭಕ್ತಿಯನ್ನು ಉದ್ದೀಪಿಸಲಿಚ್ಛಿಸಿ ಅವರಲ್ಲಿನ ಕೃಪೆಯಿಂದ ಮೃದುಮಧುರ ವಚನಗಳಿಂದ "ಮಿತ್ರರೇ, ನಿಮ್ಮ ಶ್ರೇಯಸ್ಸಿಗಾಗಿ ನಾನು ಕೆಲ ಹಿತವಚನಗಳನ್ನು ಹೇಳುತ್ತೇನೆ, ಕೇಳಿರಿ" ಎಂದನು. ಪ್ರಹ್ಲಾದನಲ್ಲಿನ ಗೌರವ ಬುದ್ಧಿಯಿಂದ ದೈತ್ಯಬಾಲಕರು ಅವನ ಸುತ್ತಲೂ ನಿಂತು "ಆಗಲಿ ಮಿತ್ರ, ನೀನು ನಮ್ಮ ಹಿತಕ್ಕಾಗಿ ಹೇಳುವುದನ್ನು ನಾವು ಕೇಳಲು ಸಿದ್ಧರಿದ್ದೇವೆ" ಎಂದರು.

ದೈತ್ಯಯೋನಿಯಲ್ಲಿ ಜನಿಸಿದ್ದರೂ ಭಗವದ್ಭಕ್ತನಾದ ಪ್ರಹ್ಲಾದನು ಮುಖ್ಯಪ್ರಾಣನಲ್ಲಿರತನಾದ್ದರಿಂದ ಕರುಣೆಯಿಂದ ದೈತ್ಯಬಾಲಕರಿಗೆ ಹೀಗೆ ಉಪದೇಶಿಸಿದನು.

**ಪ್ರಹ್ಲಾದ :**—ಹಂತಾರ್ಭಕಾ ಮೇ ಶೃಣುತ ವಚೋವಸ್ಸರ್ವತಶ್ಶಿವಮ್ ।
ವಯಸ್ಯಾನ್ ಪಶ್ಯತ ಮೃತಾನ್ ಕ್ರೀಡಾಂಧಾ ಮಾ ಪ್ರಮಾದ್ಯಥ ॥
—ಭಾಗವತ

ಪ್ರೀತ್ಯಾಸ್ಪದರಾದ ದೈತ್ಯಬಾಲಕರೇ ! ಸದಾ ಮಂಗಳಕರವಾದ ನನ್ನ ಮಾತನ್ನಾಲಿಸಿರಿ. ಕೇವಲ ಆಟಪಾಟಗಳಲ್ಲಿಯೇ ಕಾಲವನ್ನು ವ್ಯರ್ಥಮಾಡಬೇಡಿರಿ.

ಮೃತ್ಯುವು ಬೆನ್ನಹಿಂದೆಯೇ ಬಾಯಿತೆರೆದು ನಿಂತಿರುವುದು, ಯಾವ ಸಮಯದಲ್ಲಿ ನಾವು ಮೃತ್ಯು ವಶವಾಗುವೆವೋ ಹೇಳಲಾಗುವುದಿಲ್ಲ, ನಿಮ್ಮ ಸಮವಯಸ್ಕರಾದ ಎಷ್ಟೋ ಬಾಲಕರು ಸಣ್ಣ ವಯಸ್ಸಿನಲ್ಲಿಯೇ ಮೃತರಾಗಿರುವುದನ್ನು ನೋಡು ತ್ತಿದ್ದೀರಿ. ಆಯುಷ್ಯವು ನಮ್ಮ ಸ್ವಾಧೀನವಲ್ಲಿಲ್ಲ, ಆದ್ದರಿಂದ ಕ್ರೀಡಾದಿಗಳಲ್ಲಿ ನಿರತರಾಗಿ ಕೆಡಬೇಡಿರಿ.

ನ ಪುರಾ ವಿವಶಂ ಬಾಲಾ ಆತ್ಮನೋಽರ್ಥೇ ಪ್ರಿಯೈಷಿಣಃ ।
ಗುರೂಕ್ತಮಪಿ ನ ಗ್ರಾಹ್ಯಂ ಯದನರ್ಥೇಽರ್ಥಕಲ್ಪನಮ್ ॥

ಹಿಂದಿನ ಕಾಲದಲ್ಲಿ ಮಾರ್ಕಂಡೇಯರೇ ಮೊದಲಾದವರು ಬಾಲ್ಯದಿಂದಲೇ ಶಾಶ್ವತಸುಖಕ್ಕಾಗಿ ಭಗವದ್‌ಜ್ಞಾನವನ್ನು ಸಂಪಾದಿಸಿ ಉದ್ಧೃತರಾದರು. ನಮ್ಮ ಗುರುಗಳೂ ನಮಗೆ ಜ್ಞಾನೋಪದೇಶ ಮಾಡುತ್ತಿದ್ದಾರಲ್ಲ ಅದರಿಂದ; ನಮಗೆ ಶ್ರೇಯಸ್ಸಾಗುವುದಿಲ್ಲವೇ ? ಎಂದು ನೀವು ಕೇಳಬಹುದು. ನಿಜ, ಗುರುಗಳು ಉಪ ದೇಶಿಸುತ್ತಿದ್ದಾರೆ, ಆದರೆ ಅವರು ಉಪದೇಶಿಸುತ್ತಿರುವುದೇನು ? ಧರ್ಮ, ಅರ್ಥ, ಕಾಮಗಳೆಂಬ ತ್ರಿವರ್ಗವನ್ನು ! ಅದು ವೈಷಯಿಕ ಸುಖೋಪಭೋಗ ಸಾಧನ ವಾಗಿರುವುಧರಿಂದ ಅದು ನಿಮ್ಮನ್ನು ಸಂಸಾರರೂಪ ಸುಳಿಗೆ ತಳ್ಳುವುದು. ಅದು ಅನರ್ಥಕ್ಕೆ ಕಾರಣವಾಗಿದೆ. ಅದರಿಂದ ಅಜ್ಞಾನ ಪರಿಹಾರವಾಗಿ ಶ್ರೀಹರಿಯ ಪ್ರಸಾದ ಮತ್ತು ಮೋಕ್ಷ ಸುಖವು ದೊರಕಲಾರದು. ಆದುದರಿಂದ ಕೇವಲ ಸಂಸಾರದಲ್ಲಿಯೇ ತೊಳಲುವಂತೆ ಮಾಡುವ ಗುರುಗಳ ಉಪದೇಶವು ಅಗ್ರಾಹ್ಯವಾಗಿದೆ.

ಯದುಕ್ತ್ಯಾ ನ ಪ್ರಬುದ್ಧ್ಯೇತ ಸುಪ್ತಸ್ತ್ವಜ್ಞಾನನಿದ್ರಯಾ ।
ನ ಶ್ರದ್ಧಧ್ಯಾನ್ಮತಂ ತಸ್ಯ ಯಥಾಂಧೋ ಹ್ಯಂಧನಾಯಕಃ ॥

ನಿಮ್ಮ ಗುರುಗಳ ಉಪದೇಶದಿಂದ ವೈಷಯಿಕಸುಖವು ಲಭಿಸಿದರೂ ಆ ಸುಖವು ದುಃಖಾನುಬಂಧಿಯೇ ಆಗಿರುವುದು, ಅದನ್ನು ಕೇಳಿದರೆ ಒಬ್ಬ ಕುರುಡನು ಮತ್ತೊಬ್ಬ ಕುರುಡನ ಮಾರ್ಗದರ್ಶನದಲ್ಲಿ ಹೋಗಿ ಕೊನೆಗೆ ಅವರಿಬ್ಬರೂ ದೊಡ್ಡ ಹಳ್ಳದಲ್ಲಿ ಬಿದ್ದು ಅನರ್ಥಕ್ಕೆ ಗುರಿಯಾಗುವಂತಾಗುವುದಾದ್ದರಿಂದ ಅವರ ಮಾತು ಕೇಳ ಬಾರದು. ಹಾಗಾದರೆ ಶಂಡಾಮರ್ಕರು ಗುರುಗಳಲ್ಲವೇ ? ಅವರ ಮಾತು ಕೇಳುವುದು ಯುಕ್ತವಲ್ಲವೇ ಎಂದು ನೀವು ಪ್ರಶ್ನಿಸಬಹುದು. ಸ್ವಲ್ಪ ವಿಚಾರಮಾಡಿರಿ. "ಗುಶಬ್ದಸ್ತ್ವಂಧಕಾರಸ್ಯಾದ್ರುಶಬ್ದಸ್ತನ್ನಿವರ್ತಕಃ" ಎಂದು ಶಾಸ್ತ್ರಕಾರರು ಗುರು ಶಬ್ದವನ್ನು ನಿರ್ವಚನ ಮಾಡಿದ್ದಾರೆ. ಅಂದರೆ ಅಜ್ಞಾನವೆಂಬ ಅಂಧಕಾರವನ್ನು ಹೋಗಲಾಡಿಸಿ ಜ್ಞಾನವನ್ನು ಬೆಳಗಿಸುವವರೇ ಗುರುಗಳು. ನಮ್ಮ ಗುರುಗಳಲ್ಲಿ ಆ ಧರ್ಮವಿಲ್ಲವೇ ? ಎಂದರೆ ಕೇಳಿ ಮಿತ್ರರೇ, ಸ್ವತಃ ಗುರುಗಳಿಗೆ ಅಜ್ಞಾನಾದಿಗಳಿರ ಬಾರದು. ಶಿಷ್ಯರನ್ನು ಅಜ್ಞಾನ ನಿದ್ರೆಯಿಂದೆಚ್ಚರಿಸಿ ಆತ್ಮೋದ್ಧಾರಕ್ಕೆ ಸಹಾಯಕ ವಾದ ಜ್ಞಾನವನ್ನು ಉಪದೇಶಿಸಬೇಕು. ಇಂಥವರೇ ಗುರುಗಳು. ನಮ್ಮ ಗುರುಗಳು ಶಾಸ್ತ್ರಾರ್ಥವನ್ನು ಬಲ್ಲವರಾಗಿದ್ದರೂ ಶಾಶ್ವತಸುಖಸಾಧನವಾದ ತತ್ವಜ್ಞಾನವನ್ನು

ಬೋಧಿಸದೆ, ಸಂಸಾರದಲ್ಲೇ ರತರಾಗುವಂತೆ ಮಾಡುವ ತ್ರಿವರ್ಗವನ್ನು ಉಪದೇಶಿಸುತ್ತಿದ್ದಾರೆ. ಅಂಥ ಗುರುಗಳ ಮಾತನ್ನು ಕೇಳಿದರೆ ಖಂಡಿತವಾಗಿ ನಿಮಗೆ ಶ್ರೇಯಸ್ಸಾಗುವುದಿಲ್ಲವಾದ್ದರಿಂದ ಅವರ ಉಪದೇಶಕ್ಕೆ ಗಮನಕೊಡಬೇಡಿರಿ."

**ಓರ್ವ ದೈತ್ಯಬಾಲಕ :** ಪ್ರಹ್ಲಾದ ! ನೀನು ಗುರುಗಳ ಮಾತು ಕೇಳಬಾರದೆಂದು ಹೇಳುತ್ತಿರುವೆ. ಗುರುಗಳು ನೀತಿಶಾಸ್ತ್ರವನ್ನು ಉಪದೇಶಿಸುವುದರಿಂದ ನಮ್ಮ ಶತ್ರು–ಮಿತ್ರ–ಉದಾಸೀನರ ಜ್ಞಾನವಾಗಿ ಅದು ನಮ್ಮ ಸಂಪತ್ತಿನ ಹೆಚ್ಚಳಕ್ಕೆ ಕಾರಣವಾಗುವುದರಿಂದ ಅದು ಹೇಯವೆಂದು ಹೇಗೆ ತಿಳಿಯುವುದು ?

**ಪ್ರಹ್ಲಾದ :** "ಕಃ ಶತ್ರುಃ ಕ ಉದಾಸೀನಃ ಕಿಂ ಮಿತ್ರಂ ಚೇಹ ಆತ್ಮನಃ ।
ಭವತ್ಸ್ವಪಿ ನಯೈಃ ಕಿಂ ಸ್ಯಾದ್ದ್ವೈವಂ ಸಂಪದ್ವಿಪತ್ಪ್ರದಮ್॥"

ಶತ್ರುಗಳಾರು, ಮಿತ್ರರಾರು, ಉದಾಸೀನರಾರು ? ಭಗವಂತನೇ ಅವರವರ ಕರ್ಮಾನುಸಾರವಾಗಿ ಅದನ್ನು ಪ್ರೇರಿಸುವನು. ಅದೃಷ್ಟಪ್ರೇರಕನಾದ ಪರಮಾತ್ಮನೇ ಸಂಪತ್ತು ವಿಪತ್ತುಗಳನ್ನು ಕೊಡುವ ಸ್ವತಂತ್ರಪ್ರಭುವಾಗಿದ್ದಾನೆ ! ಅವನ ಪ್ರೇರಣೆಯಿಲ್ಲದೆ ನೀತಿಶಾಸ್ತ್ರವೇನು ಮಾಡಬಲ್ಲದು ?

**ವಿಚಕ್ಷಣ :** (ಇನ್ನೊಬ್ಬ ಹುಡುಗ) ಅದು ಹೋಗಲಿ, ಮಿತ್ರ, ಪ್ರವೃತ್ತಿರೂಪ ಧರ್ಮಶಾಸ್ತ್ರವು ಸ್ವರ್ಗಾದಿಸಂಪತ್ತಿಗೆ ಕಾರಣವಾಗಿರುವುದರಿಂದ ಅದನ್ನು ಗುರುಗಳಿಂದ ಕಲಿಯಬಹುದಲ್ಲವೇ ?

**ಪ್ರಹ್ಲಾದ :** ಪ್ರವೃತ್ತಿಧರ್ಮಾಚರಣೆಯಿಂದ ಮನುಷ್ಯನು ಇಂದ್ರಿಯಗಳಿಗೆ ವಶನಾಗಿ ಜನನ–ಮರಣರೂಪ ಸಂಸಾರದ ಸುಳಿಯಲ್ಲಿ ಸಿಲುಕಿ ಆತ್ಮಘಾತ ಮಾಡಿಕೊಳ್ಳುವನು. ನಿವೃತ್ತಿಧರ್ಮವನ್ನು ಅನುಸರಿಸಿ ಸರ್ವಕರ್ಮಗಳನ್ನು ಹರ್ಯರ್ಪಣಬುದ್ಧಿಯಿಂದ ಶ್ರೀಹರಿಪೂಜೆಯೆಂದು ಮಾಡಿದರೆ, ಆಗ ಆ ಕರ್ಮಗಳು ಸಂಸಾರಬಂಧನಕ್ಕೆ ಕಾರಣವಾಗುವುದಿಲ್ಲ. ನಿವೃತ್ತಿ ಕರ್ಮಾನುಷ್ಠಾನಮಾಡುವ ಜ್ಞಾನಿಗಳು ಇಹದಲ್ಲಿ ಸಂಪತ್ತನ್ನೂ ಪರದಲ್ಲಿ ಉತ್ತಮಗತಿಯನ್ನೂ ಹೊಂದುತ್ತಾರೆ. ಅಂಥವರು ಬಹು ವಿರಳ. ಪ್ರವೃತ್ತಿಕರ್ಮಾನುಷ್ಠಾನದಿಂದ ನಶ್ವರವಾದ ಸ್ವರ್ಗಾದಿಫಲವು ದೊರಕುವುದು. ನಿವೃತ್ತಿಕರ್ಮಾನುಷ್ಠಾನದಿಂದ ಜ್ಞಾನವುಂಟಾಗಿ ಕೊನೆಗೆ ಶಾಶ್ವತವಾದ ವೈಕುಂಠ ಪ್ರಾಪ್ತಿಯಾಗುವುದು.

**ಮತ್ತೊಬ್ಬ ಬಾಲಕ :** ಅದು ಸರಿ, ಪ್ರಹ್ಲಾದ ! ನಿವೃತ್ತಿಧರ್ಮಾನುಷ್ಠಾನದಿಂದ ಶ್ರೇಯಸ್ಸುಂಟಾಗುವುದು ಎಂದು ನೀನು ಹೇಳಿದೆ, ಆಗಲಿ, ಅದಕ್ಕೆ ಬೇಕಾದಷ್ಟು ಅವಕಾಶವಿದೆ. 'ಬಾಲ್ಯೇ ವಿದ್ಯಾಂ ನಿಷೇವೇತ ಯೌವನೇ ದಾರಸಂಗ್ರಹಂ । ಸ್ಥಾವಿರ್ಯೇ ಮೋಕ್ಷಮಾತಿಷ್ಠೇತ್ ಸರ್ವದಾ ಧರ್ಮಮಾಚರೇತ್॥" ಎಂದು ಸ್ಮೃತಿಯು ಬೋಧಿಸುತ್ತದೆ. ಮೋಕ್ಷಕ್ಕೆ ಸಾಧನವಾದ ನಿವೃತ್ತಿಧರ್ಮವನ್ನು ನಾವು ನಮಗೆ ವಯಸ್ಸಾದಮೇಲೆ ಮಾಡಬಹುದಲ್ಲವೇ ?

**ಪ್ರಹ್ಲಾದ :** (ನಸುನಕ್ಕು) ಮಿತ್ರರೇ ನನ್ನ ಮಾತುಕೇಳಿರಿ
"ಕೌಮಾರ ಆಚರೇತ್ಪ್ರಾಜ್ಞಃ ಧರ್ಮಾನ್ ಭಾಗವತಾನಿಹ ।
ದುರ್ಲಭಂ ಮಾನುಷಂ ಜನ್ಮ ತದಪ್ಯಧ್ರುವಮರ್ಥದಮ್ ॥"

ಆತ್ಮೋದ್ಧಾರಕ್ಕೆ ಕಾರಣವಾದ ಭಾಗವತಧರ್ಮಗಳನ್ನು ಆಚರಿಸಲು ನಮಗೆ ವಯಸ್ಸಾಗಲಿ ಎಂದು ಕಾಯಬಾರದು. "ಸರ್ವದಾ ಧರ್ಮಮಾಚರೇತ್" ಎಂದು ಹೇಳಿರುವುದರಿಂದ ಪ್ರಾಜ್ಞನು ಬಾಲ್ಯದಿಂದಲೇ ಭಾಗವತ ಧರ್ಮಗಳನ್ನು ಆಚರಿಸಲು ಪ್ರಾರಂಭಿಸಬೇಕು. ಮಾನವಜನ್ಮವು ಶ್ರೇಯಸ್ಸಾಧನವಾಗಿದೆ. ಆಗಲೇ ಮನುಷ್ಯನಿಗೆ ವಿವೇಕಬುದ್ಧಿಯು ಬರುವುದು. ಆಗ ಶ್ರೀಹರಿತತ್ತ್ವಜ್ಞಾನವನ್ನು ಪಡೆದು ಪರಮ ಪುರುಷಾರ್ಥವಾದ ಮೋಕ್ಷವನ್ನು ಪಡೆಯಬಹುದು. ಮಾನವಜನ್ಮವು ದುರ್ಲಭ ವಾದುದು. ಆದ್ದರಿಂದ ಪರಮಪುರುಷಾರ್ಥಸಾಧನಕ್ಕೆ ಸಹಾಯಕವಾದ ಮಾನವ ಜನ್ಮ ಲಭಿಸಿರುವಾಗ ಬಾಲ್ಯದಿಂದಲೇ ಧರ್ಮಾಚರಣರತರಾಗಬೇಕು. ಸರ್ವ ಪ್ರಾಣಿ ಗಳಿಗೂ ಹರಿಯೇ ಪ್ರೀತ್ಯಾಸ್ಪದನು. ಅಂತರ್ನಿಯಾಮಕನಾದ ಆ ಪ್ರಭುವು ಸುಖ ಪ್ರದನೂ, ನಿರ್ವ್ಯಾಜ ಉಪಕಾರಿಯೂ ಆಗಿದ್ದಾನೆ. ಅವನನ್ನು ಬಿಟ್ಟು ಅನ್ಯ ದೇವತೆಗಳನ್ನು ಸೇವಿಸುವುದರಿಂದ ಹಲಕೆಲ ಫಲಗಳು ದೊರೆಯಬಹುದಾದರೂ ಶಾಶ್ವತಸುಖ ಲಭಿಸಲಾರದು. ಆದ್ದರಿಂದ ಜನನ–ಮರಣರೂಪ ಸಂಸಾರ ಬಂಧನ ವನ್ನು ಕಳೆದು, ಸರ್ವ ಜೀವರ ಮುಖ್ಯ ಗುರಿಯಾದ ಶಾಶ್ವತಸುಖರೂಪ ಮೋಕ್ಷ ವನ್ನು ಕರುಣಿಸುವ ಶ್ರೀಮನ್ನಾರಾಯಣನ ಪಾದೋಪಸರ್ಜನಮಾಡಬೇಕು.

**ದೈತ್ಯಬಾಲಕರು :** ಪ್ರಹ್ಲಾದ ! ಮಾನವನಿಗೆ ನೂರುವರ್ಷಗಳ ಆಯುಷ್ಯವು ಕ್ಲಿಪ್ತವಾಗಿದೆಯಷ್ಟೆ ? ಅಂದಮೇಲೆ ಈ ಅವಧಿಯಲ್ಲಿ ಅನೇಕ ಸುಖಸಾಧನಗಳನ್ನು ಸಂಪಾದಿಸಬಹುದಲ್ಲವೇ ? ಹೀಗಿರುವಾಗ "ಕೌಮಾರ ಆಚರೇತ್ಪ್ರಾಜ್ಞಃ ಧರ್ಮಾನ್ ಭಾಗವತಾನಿಹ॥" ಎಂಬ ನಿಯಮವೇಕೆ ?

**ಪ್ರಹ್ಲಾದ :** ಮಿತ್ರರೇ, ನೂರುವರ್ಷ ಆಯುಷ್ಯವಿದ್ದರೂ ದೇಹವು ಶಾಶ್ವತ ವಾಗಿರುವುದೆಂದು ಹೇಗೆ ಹೇಳಲು ಸಾಧ್ಯ ? ನೂರುವರ್ಷಗಳಲ್ಲಿ ಅರ್ಧಭಾಗವು ರಾತ್ರಿಯಲ್ಲಿ ನಿದ್ರಾದಿಗಳಿಂದ ನಿಷ್ಫಲವಾಗುವುದು. ಇಪ್ಪತ್ತು ವರ್ಷಗಳು ಬಾಲ್ಯ– ಕೌಮಾರಾವಸ್ಥೆಗಳಲ್ಲಿ ಆಟನೋಟಗಳಲ್ಲಿ, ಸಾರಾಸಾರಾವಿವೇಕಜ್ಞಾನವಿಲ್ಲದಲೇ ಬೇರೆ ಬೇರೆ ಕಾರ್ಯಗಳಲ್ಲಿ ನಷ್ಟವಾಗುವುದು. ಇನ್ನು ಇಪ್ಪತ್ತು ವರ್ಷಗಳು ವಾರ್ಧಕ್ಯ, ರೋಗ ರುಜಿನಾದಿಗಳಿಂದ ಬಳಲಿ ಏನುಮಾಡಲೂ ಸಾಧ್ಯವಾಗದೆ ನಷ್ಟವಾಗುವುದು. ಉಳಿಯುವುದು ಕೇವಲ ಹತ್ತುವರ್ಷಗಳು ಮಾತ್ರ. ಈ ಹತ್ತುವರ್ಷಗಳು ಯೌವನ ದಲ್ಲಿ ವಿಷಯಭೋಗಾದಿಗಳಲ್ಲಿಯೇ ಕಳೆದುಹೋಗುವದು. ಅಂದಮೇಲೆ ಸಾಧನ ಮಾಡಿಕೊಳ್ಳಲು ಅವಕಾಶವಾದರೂ ಎಲ್ಲಿದೆ ?

ಗೆಳೆಯರೇ, ಸಂಸಾರದಲ್ಲಿ ಮಗ್ನನಾದವನು ಜ್ಞಾನಿಯಾದರೂ ಶ್ರೀಹರಿಯು ಸರ್ವಸ್ವತಂತ್ರನೆಂಬ ಜ್ಞಾನವಿಲ್ಲದೆ ಇದು ನನ್ನದು ಎಂಬ ಸ್ವಾತಂತ್ರ್ಯ ಭ್ರಮೆಯಿಂದ ಮೋಕ್ಷಸಾಧನವಾದ ಪರಾತ್ಪರತತ್ವಜ್ಞಾನಕ್ಕೆ ಎರವಾಗುವನು, ಸಂಸಾರವು ಅಸಾರವೆಂದರಿತಿದ್ದರೂ ಅನಿತ್ಯವೆಂದು ತಿಳಿದಿದ್ದರೂ ಮಡದಿಯ ಮೋಹದ ಮಾತು, ಓರೆನೋಟಗಳಿಗೆ ಮಾರುಹೋಗಿ ಸ್ತ್ರೀಯಳ ಕ್ರೀಡೆಯ ಸಾಧನವಾದ ಆಟಿಕೆಯಾಗಿ [ಗೊಂಬೆಯಾಗಿ] ವರ್ತಿಸುವುದರಿಂದ ಭವಬಂಧನದಿಂದ ಬಿಡಿಸಿಕೊಳ್ಳಲು ಅಶಕ್ತನಾಗುವನು. ಆದ್ದರಿಂದ ವಿಷಯಲೋಲುಪರಾದ ದೈತ್ಯರ ಸಂಗವನ್ನು ತೊರೆದು ನೀವು ನಾರಾಯಣನಿಗೆ ಶರಣು ಮೋಗಬೇಕು, ಬ್ರಹ್ಮಾರ್ಪಣದಬುದ್ಧಿಯಿಲ್ಲದೆ ಧರ್ಮಾರ್ಥಕಾಮಗಳ ಸೇವನದಿಂದ ಮೋಕ್ಷದೊರೆಯದು. ಆದ್ದರಿಂದ ವಿಷಯ ಸುಖವು ಅಸಾರವೆಂದರಿತು ಸ್ವತಂತ್ರನಾದ ಶ್ರೀಹರಿಯೇ ಮೋಕ್ಷಪ್ರದನೆಂದು ನಂಬಿ ಅವನನ್ನು ಆಶ್ರಯಿಸಿ, ವಿರಕ್ತರಾದ ಜ್ಞಾನಿಗಳು ಸಂಸಾರಬಂಧನದಿಂದ ಮುಕ್ತರಾಗಿದ್ದಾರೆ. ಅವರಂತೆ ನಾವೂ ಆಚರಿಸಬೇಕು.

ಆದುದರಿಂದ ಭಕ್ತಿಯಿಂದ ಭಗವಂತನನ್ನು ಸಂತೋಷಪಡಿಸುವುದು ನಮ್ಮ ಮುಖ್ಯ ಕರ್ತವ್ಯವಾಗಿದೆ.

**ವಿಚಕ್ಷಣ :** ಮಿತ್ರಾ, ನೀನಿಷ್ಟು ಮಹತ್ವಪೂರ್ಣ ವಿಚಾರಗಳನ್ನು ಮಹಾ ಜ್ಞಾನಿಯಂತೆ ಉಪದೇಶಿಸುತ್ತಿರುವೆಯಲ್ಲ ! ಈ ಜ್ಞಾನವು ನಿನಗೆ ಹೇಗೆ ಲಭಿಸಿತು ? ಪ್ರಹ್ಲಾದನು ಮಿತ್ರನ ವಚನವನ್ನಾಲಿಸಿ ನಸುನಗುತ್ತ "ಗೆಳೆಯರೆ ನನಗೀಜ್ಞಾನವು ಮಹಾತ್ಮರಾದ ದೇವರ್ಷಿ ನಾರದರ ಉಪದೇಶದಿಂದ ಲಭ್ಯವಾಯಿತು. ಅಲಭ್ಯವಾದ ಈ ಜ್ಞಾನವನ್ನು ಶ್ರೀಹರಿಯು ವಿರಕ್ತರಾದ ತನ್ನ ಏಕಾಂತಭಕ್ತರಿಗೆ ಉಪದೇಶಿಸುವನು. ಶ್ರೀಹರಿಯು ತನ್ನ ಏಕಾಂತಭಕ್ತರಾದ ನಾರದರಿಗೆ ಈ ಜ್ಞಾನವನ್ನು ಉಪದೇಶಿಸಿದನು. ನರಸಖನಾದ ನಾರಾಯಣನಿಂದ ಸಾಕ್ಷಾತ್ತಾಗಿ ಉಪದೇಶಪಡೆದ ದೇವರ್ಷಿ ನಾರದರಿಂದ ಇಂತಹ ಪರಿಶುದ್ಧ ಭಾಗವತಧರ್ಮಗಳನ್ನೂ, ಭಗವತ್ತತ್ವ ಜ್ಞಾನವನ್ನೂ ನಾನು ತಿಳಿದುಕೊಂಡಿದ್ದೇನೆ.[1]

**ದೈತ್ಯಬಾಲಕರು :** ಪ್ರಹ್ಲಾದ ! ನಾವೂ ನೀನು ಗುರುಗಳಲ್ಲಿಯೇ ಓದುತ್ತಿದ್ದೇವೆ, ಅಂತಃಪುರದಲ್ಲಿ ನಿರ್ಬಂಧದಲ್ಲಿದ್ದ ನಿನಗೆ ನಾರದರ ಮಿಲನ ಹೇಗಾಯಿತು ? ಅವರು ಯಾವಾಗ ನಿನಗೆ ಉಪದೇಶಿಸಿದರು ? ನಮ್ಮ ಅನುಮಾನವನ್ನು ಪರಿಹರಿಸು,

---

1. ಜ್ಞಾನಂ ತದೇತದಮಲಂ ದುರವಾಪಮಾಹ| ನಾರಾಯಣೋ ನರಸಖಃ ಕಿಲ ನಾರದಾಯ॥
ಏಕಾಂತಿನಾಂ ಭಗವತಸ್ತದಕಿಂಚನಾನಾಂ | ಪಾದಾರವಿಂದರಜಸಾಪ್ಲುತದೇಹಿನಾಂ ಸ್ಯಾತ್॥
ಶ್ರುತಮೇತನ್ಮಯಾ ಪೂರ್ವಂ ಜ್ಞಾನಂ ವಿಜ್ಞಾನಸಂಯುತಂ | ಧರ್ಮಂ ಭಾಗವತಂ ಶುದ್ಧಂ ನಾರದಾದ್ದೇವದರ್ಶನಾತ್ ॥
—ಭಾಗವತ

ದೈತ್ಯಕುಮಾರರ ಮಾತನ್ನು ಕೇಳಿ ಪ್ರಹ್ಲಾದಕುಮಾರನು ತಾನು ದೇವರ್ಷಿಗಳಿಂದ ಉಪದೇಶಪಡೆದ ಬಗೆಯನ್ನು ಹೇಳಹತ್ತಿದನು.

**ಪ್ರಹ್ಲಾದ :** "ಹಿಂದೆ ನನ್ನ ತಂದೆಯು ತಪಸ್ಸಿಗೆ ತೆರಳಿದಾಗ ದೇವೇಂದ್ರನು ದೈತ್ಯರನ್ನು ಜಯಿಸಿ ನನ್ನ ಮಾತೆಯನ್ನು ಸೆರೆಹಿಡಿದು ಎಳೆದೊಯ್ಯುತ್ತಿದ್ದನು. ಆಗ ತಾಯಿಯು ಗರ್ಭಿಣಿಯಾಗಿದ್ದಳು. ನಾನು ಅವಳ ಉದರದಲ್ಲಿದ್ದೆನು. ಇಂದ್ರನು ಗರ್ಭಸ್ಥನಾಗಿದ್ದ ನನ್ನನ್ನು ಸಂಹರಿಸಲು ಪ್ರಯತ್ನಿಸಿದಾಗ ದೈವಯೋಗದಿಂದ ಅಲ್ಲಿಗೆ ಬಂದ ನಾರದರು ಅವನಿಗೆ ಬುದ್ಧಿಹೇಳಿ "ತಾಯಿಯಗರ್ಭದಲ್ಲಿರುವ ಶಿಶುವು ಪರಮ ಭಗವದ್ಭಕ್ತನು. ಅವನನ್ನು ಸಂಹರಿಸಲು ಯಾರಿಂದಲೂ ಸಾಧ್ಯವಿಲ್ಲ" ಎಂದು ಹೇಳಿದಾಗ ಇಂದ್ರನು ಮಾತೆಯನ್ನು ಬಿಟ್ಟು ನಮಸ್ಕರಿಸಿ ತೆರಳಿದನು. ಅನಂತರ ನಾರದರು ನನ್ನ ತಾಯಿಯನ್ನು ತಮ್ಮಾಶ್ರಮಕ್ಕೆ ಕರೆದೊಯ್ದು ಆಶ್ರಯವಿತ್ತು ಅವಳಿಗೆ ತತ್ವಧರ್ಮಗಳನ್ನು ಉಪದೇಶಿಸುತ್ತಾ ಅವಳ ಪ್ರಾರ್ಥನೆಯಂತೆ ಇಚ್ಛಾಪ್ರಸೂತಿವರವನ್ನು ಕರುಣಿಸಿ ಸಂರಕ್ಷಿಸಿದರು. ಆಗ ನಾರದರು ತಾಯಿಯನ್ನು ನಿಮಿತ್ತಮಾಡಿಕೊಂಡು ನನಗೆ ಶ್ರೀಹರಿತತ್ವಗಳನ್ನೂ, ತತ್ವಜ್ಞಾನ ಸಾಧನವಾದ ಭಾಗವತ ಧರ್ಮಗಳನ್ನೂ ಉಪದೇಶಮಾಡಿದರು. ಮಾತೆಯು ಸ್ತ್ರೀಸಹಜವಾಗಿಯೂ ಬಹುಕಾಲ ಗತಿಸಿದ್ದರಿಂದಲೂ ಅದನ್ನು ಮರೆತಳು. ಆದರೆ ದೇವರ್ಷಿ ನಾರದರ ಅನುಗ್ರಹದಿಂದ ನಾನು ಅದನ್ನು ಮರೆಯಲಿಲ್ಲ. ಈಗ ನಾನು ನನಗೆ ಪ್ರೀತ್ಯಾಸ್ಪದರಾದ ನಿಮಗೂ ಆ ತತ್ವಜ್ಞಾನ ಉಂಟಾಗಲೆಂದೇ ಉಪದೇಶಿಸುತ್ತಿದ್ದೇನೆ. ಮಿತ್ರರೇ, ಶ್ರದ್ಧಾಭಕ್ತಿಗಳಿಂದ ನೀವೂ ಇದನ್ನು ಕೇಳಿರಿ. ನಿಮಗೆ ಉತ್ತಮ ಫಲವು ದೊರಕುವುದು" ಎಂದು ಹೇಳಿ; ಪ್ರಹ್ಲಾದ ರಾಜನು "ಜನ್ಮಾದ್ಯಾಃ ಷಡಿಮೇ ಭಾವಾಃ" ಎಂದು ಪ್ರಾರಂಭಿಸಿ "ತಸ್ಮಾದ್ಭವದ್ಭಿಃ ಕರ್ತವ್ಯಂ ಕರ್ಮಣಾಂ ತ್ರಿಗುಣಾತ್ಮನಾಂ। ಬೀಜನಿರ್ಹರಣೇ ಯೋಗಃ ಪ್ರವಾಹೋ ಪರಮೋ ಧಿಯಃ ॥" ಎಂಬುವವರೆಗೆ ವಿಸ್ತಾರವಾಗಿ ದೈತ್ಯಬಾಲಕರಿಗೆ ಅನೇಕ ಶ್ರೀಹರಿತತ್ವಗಳನ್ನೂ, ಮಹಿಮಾತಿಶಯಗಳನ್ನೂ, ಪರಮಪ್ರಮೇಯ ಸಾರಗಳನ್ನೂ ತಿಳಿಸಿಕೊಟ್ಟು, ಭಗವಂತನಲ್ಲಿ ನಿಷ್ಕಲ್ಮಷ ಭಕ್ತಿಮಾಡಿದರೆ ಅವನ ಅನುಗ್ರಹವಾಗುವುದೆಂದು ಉಪದೇಶಿಸಿದನು.

**ದೈತ್ಯಬಾಲಕರು :** ಪ್ರಹ್ಲಾದ! ಭಗವಂತನಲ್ಲಿ ಭಕ್ತಿಮಾಡಬೇಕೆಂದು ಹೇಳಿದ್ದೀಯೆ. ಆ ಭಕ್ತಿಯನ್ನು ಯಾವ ರೀತಿಯಾಗಿ ಮಾಡಬೇಕೆಂಬುದನ್ನು ದಯಮಾಡಿ ತಿಳಿಸಿ ಉಪಕರಿಸು.

ಪ್ರಹ್ಲಾದನು ದೈತ್ಯಬಾಲಕರಿಗೆ ನವವಿಧಭಕ್ತಿ, ಭಕ್ತರ ಲಕ್ಷಣಗಳನ್ನು ವಿಸ್ತಾರವಾಗಿ ನಿರೂಪಿಸಿದನು.

**ದೈತ್ಯಬಾಲಕರು :** ಮಿತ್ರ, ಶ್ರೀಹರಿಯು ಭಕ್ತಿಯಿಂದ ಒಲಿದು ಉದ್ಧರಿಸುವನೆಂದು ಹೇಳಿದಿ. ನಾವು ಏನೂ ತಿಳಿಯದ ಹುಡುಗರು, ಮೇಲಾಗಿ ದೈತ್ಯರು. ನಮ್ಮನ್ನು ಶ್ರೀಹರಿಯು ರಕ್ಷಿಸುವನೇ ?

**ಪ್ರಹ್ಲಾದ :** ಮಿತ್ರರೇ, ಶ್ರೀಹರಿಯು ನಮ್ಮ ಭಕ್ತಿಯನ್ನು ನೋಡುವನೇ ವಿನಃ ನಮ್ಮ ಜಾತಿ, ವಯಸ್ಸು, ವಿದ್ಯೆ, ಯೋಗ್ಯತೆಗಳನ್ನಲ್ಲ; ಕೇಳಿರಿ—

"ನಾಲಂ ದ್ವಿಜತ್ವಂ ದೇವತ್ವಂ ಋಷಿತ್ವಂ ವಾಸುರಾತ್ಮಜಾಃ ।
ಪ್ರೀಣನಾಯ ಮುಕುಂದಸ್ಯ ನ ವೃತ್ತಂ ನ ಬಹುಜ್ಞತಾ ॥
ನ ದಾನಂ ನ ತಪೋ, ನೇಜ್ಯಾ ನ ಶೌಚಂ ನ ವ್ರತಾನಿ ಚ ।
ಪ್ರೀಯತೇಽಮಲಯಾ ಭಕ್ತ್ಯಾ ಹರಿರನ್ಯದ್ವಿಡಂಬನಮ್ ॥"

ಸಮಸ್ತಕ್ಕೂ ಪ್ರಭುವಾದ ಶ್ರೀಮುಕುಂದನಾಮಕ ಹರಿಯನ್ನು ಸಂತೋಷ ಪಡಿಸಲು ಬ್ರಾಹ್ಮಣಾದಿ ಜಾತಿ, ದೇವತಾಜನ್ಮ, ಋಷಿತ್ವ ಮುಂತಾದವು ಕಾರಣ ವಲ್ಲ. ಅಥವಾ ಅಪಾರ ವಿದ್ವತ್ತು, ದಾನ, ತಪಸ್ಸು, ಯಾಗ, ಶೌಚ, ವ್ರತೋಪ ವಾಸಾದಿಗಳೂ ಕಾರಣವಲ್ಲ. ಆದರೆ ಆ ಪ್ರಭು ವಿನಲ್ಲಿ ನಿರ್ದುಷ್ಟವಾದ ಭಕ್ತಿಮಾಡು ವುದರಿಂದ ಪರಮಾತ್ಮನು ಪ್ರೀತನಾಗುವನು.

ತತೋ ಹರೌ ಭಗವತಿ ಭಕ್ತಿಂ ಕುರತ ದಾನವಾಃ ।
ಆತ್ಮೋಪಮ್ಯೇನ ಸರ್ವತ್ರ ಸರ್ವಭೂತಾತ್ಮನೀಶ್ವರೇ ॥
ದೈತೇಯಾ ಯಕ್ಷರಕ್ಷಾಂಸಿ ಸ್ತ್ರಿಯಃ ಶೂದ್ರಾ ವ್ರಜೌಕಸಃ ।
ಖಗಾಃ ಮೃಗಾಃ ಪಾಪಜೀವಾಃ ಸಂತಿ ಹ್ಯಚ್ಯುತತಾಂ ಗತಾಃ ॥
ಏತಾವಾನೇವ ಲೋಕೇಽಸ್ಮಿನ್ ಪುಂಸಾಂ ಸ್ವಾರ್ಥಃ ಪರಃ ಸ್ಮೃತಃ ।
ಏಕಾಂತಭಕ್ತಿರ್ಗೋವಿಂದೇ ಯತ್ಸರ್ವತ್ರ ತದೀಕ್ಷಣಮ್ ॥"

ಆದ್ದರಿಂದ, ಎಲೈ ದೈತ್ಯಬಾಲಕರೆ, ಶ್ರೀಹರಿಯು ನಿಮ್ಮನ್ನು ಪೊರೆಯು ವನೋ ಇಲ್ಲವೋ ಎಂದು ಸಂದೇಹಿಸಬೇಡಿರಿ. ಸಕಲ ಜೀವರಲ್ಲಿ ಅಂತರ್ಯಾಮಿ ಯಾಗಿರುವ ಷಡ್ಗುಣೈಶ್ವರ್ಯಸಂಪನ್ನನಾದ ಪರಮಾತ್ಮನಾದ ಶ್ರೀಹರಿಯಲ್ಲಿ ನಿಮ್ಮನ್ನು ನೀವು ಪ್ರೀತಿಸುವಂತೆ ಭಕ್ತಿಮಾಡಬೇಕು. ಬೇರೆ ಬೇರೆ ಜಾತಿಗಳಲ್ಲಿ ಹುಟ್ಟಿ ದರೂ, ಜೀವರು ಪರಮಾತ್ಮನಲ್ಲಿ ಭಕ್ತಿಮಾಡಿ ಶಾಶ್ವತವಾದ ಸುಖಕ್ಕೆ ಭಾಗಿಗಳಾಗಿ ದ್ದಾರೆ. ಶಿಶುಪಾಲ ಮುಂತಾದ ದೈತ್ಯರು, ನಲಕೂಬರಾದಿ ಯಕ್ಷರು, ಪೂತನಾ ರಾಕ್ಷಸಿ [ಅವಳಲ್ಲಿ ಆವಿಷ್ಟಳಾಗಿದ್ದ ಊರ್ವಶಿ] ಹಿಡಿಂಬಿ, ಘಟೋತ್ಕಚಾದಿರಾಕ್ಷಸರು, ಗೋಪಾಂಗನೆಯರು, ವ್ರಜದ ಗೋಪಾಲಕರು, ಖಾಂಡವದಹನದಲ್ಲಿ ಮೃತವಾದ ಜರಿತರ್ಯಾದಿ ಪಕ್ಷಿಗಳು, ಪಶುಗಳು, ಪಾಪಜೀವರಾದ ನೃಗಾದಿರಾಜರು ಗೋವಿಂದ ನಲ್ಲಿ ಭಕ್ತಿಮಾಡಿ ಮುಕ್ತರಾಗಿರುವ ವಿಚಾರ ಪುರಾಣಾದಿಗಳಿಂದ ವ್ಯಕ್ತವಾಗುವುದು. ಸರ್ವೋತ್ತಮನೂ ಜಗಜ್ಜನ್ಮಾದಿ ಕಾರಣನೂ, ಅಚಿಂತ್ಯಾದ್ಭುತ ಮಹಿಮನೂ, ವೇದೈಕವೇದ್ಯನೂ ಆದ ಶ್ರೀಹರಿಪರಮಾತ್ಮನಲ್ಲಿ ಏಕಾಂತಭಕ್ತಿ ಮಾಡುವುದೇ ಪರಮಪುರುಷಾರ್ಥವು.

ಆದ್ದರಿಂದ ದೈತ್ಯಬಾಲಕರೇ, ಶ್ರೀಹರಿಯೇ ಸರ್ವೋತ್ತಮನು, ಅವನೇ ಜಗ ಜ್ಜನ್ಮಾದಿ ಕಾರಣನೆಂದು ವೇದ-ಉಪನಿಷತ್ ಮುಂತಾದ ಸಕಲಶಾಸ್ತ್ರಗಳು ಹೊಗಳಿ

ಸಾರುತ್ತಿವೆ. ಶ್ರೀಮನ್ನಾರಾಯಣನು ಪುರುಷೋತ್ತಮನು, ಅನಂತಕಲ್ಯಾಗುಣಪರಿಪೂರ್ಣ, ನಿರ್ದೋಷ, ಆನಂದಮಯ, ಸರ್ವತ್ರವ್ಯಾಪ್ತ, ಆತನೊಬ್ಬನೇ ಸ್ವತಂತ್ರ ಲಕ್ಷ್ಮೀಬ್ರಹ್ಮದೇವರಿಂದಾರಂಭಿಸಿ ಸರ್ವರೂ ಆತನ ದಾಸರು. ಮತ್ತು ಶ್ರೀಹರಿಯಿಂದಲೂ, ಪರಸ್ಪರರೂ ಭಿನ್ನರಾದವರು. ಅಂದರೆ ಜೀವೇಶ್ವರರಿಗೆ ಪಾರಮಾರ್ಥಿಕವಾದ ಭೇದವುಂಟು, ಸಂತತವೂ ಎಲ್ಲಜೀವರೂ ಶ್ರೀಹರಿಗೆಅಧೀನರು. ಸ್ವರೂಪಾನಂದಾವಿರ್ಭಾವರೂಪವಾದ ಆತ್ಯಂತಿಕದುಃಖ ನಿವೃತ್ತಿಪೂರ್ವಕವಾದ ಮೋಕ್ಷವೇ ಸರ್ವಜೀವರ ಪರಮಗುರಿ. "ಯಸ್ಯ ಪ್ರಸಾದಾತ್ ಪರಮಾರ್ತಿರೂಪಾದಸ್ಮಾತ್ಸಂಸಾರಾನ್ಮುಚ್ಯತೇ ನಾಪರೇಣ। ನಾರಾಯಣೋಽಸೌ ಪರಮೋ ವಿಚಿಂತ್ಯೋ ಮುಮುಕ್ಷುಭಿಃ ಕರ್ಮಪಾಶಾದಮುಷ್ಮಾತ್॥", "ನಾಹಂ ಮೋಕ್ಷಪ್ರದೋ ವತ್ಸ, ಮೋಕ್ಷದಸ್ತು ಜನಾರ್ದನಃ" ಇತ್ಯಾದಿ ಶ್ರುತಿಪುರಾಣಾದಿಗಳ ಪ್ರಮಾಣದಂತೆ ಶ್ರೀಹರಿಯ ಪ್ರಸಾದದಿಂದ ಮಾತ್ರ ಮುಕ್ತಿಯು ಲಭ್ಯವಾಗುವುದು, ಶ್ರೀಹರಿಯು ಭಕ್ತಿಯಿಂದ ಮಾತ್ರ ಒಲಿಯುವನು.

ಮಿತ್ರರೇ ! ನನ್ನ ತಂದೆಯು ತಾನೆ ಜಗದೀಶನೆಂದೂ, ಶ್ರೇಷ್ಠನೆಂದೂ ಭ್ರಮಿಸಿದ್ದಾನೆ. ಆ ಜ್ಞಾನವು ಮೋಕ್ಷೋಪಯೋಗಿಯಲ್ಲ, ಅದು ತಮಸ್ಸಿಗೆ ಕಾರಣ. ಅವನಂತೆ ನೀವೂ ಭ್ರಮಿಷ್ಠರಾಗಬೇಡಿರಿ, ಜಗದೀಶನಾದ, ಸ್ವತಂತ್ರನಾದ, ಪರಾತ್ಪರನಾದ ಶ್ರೀಹರಿಯಿರಲು ದೈತ್ಯನಾದ ನನ್ನ ತಂದೆಯೆಂತು ಸ್ವತಂತ್ರನಾಗಬಲ್ಲನು? ಶ್ರೀಹರಿಭಕ್ತರಾದ ರುದ್ರಾದಿದೇವತೆಗಳಿಗೂ ಹರಿಯ ವಿಷಯದಲ್ಲಿ ಮೋಹವುಂಟು, ಅಂದಮೇಲೆ ಉಳಿದವರ ಪಾಡೇನು ?

ಶ್ರೀಹರಿಯ ವಿಶೇಷಾನುಗ್ರಹವು, ಪರಮ ಪ್ರಸಾದವು, ಮಹಾಭಾಗವತೋತ್ತಮರೂ, ಜೀವೋತ್ತಮರೂ ಆದ ಶ್ರೀವಾಯುದೇವರಲ್ಲಿರುವುದರಿಂದ ಅಜ್ಞಾನಾದಿದೋಷರಹಿತರಾದ ಶ್ರೀ ವಾಯುದೇವರ ಸನ್ಮತವನ್ನೇ ನಾವು ಆಶ್ರಯಿಸಬೇಕು. ದುರಹಂಕಾರಿಯಾದ ನನ್ನ ತಂದೆಯ ಕುಮತವನ್ನು ತ್ಯಜಿಸಬೇಕು.

"ನ ಶ್ರದ್ಧೇಯಂ ಕುಮತಂ ತಸ್ಯ ಚೈವ ।
ಸಂಶ್ರದ್ಧೇಯಂ ವಾಯುಮತಂ ಸದೈವ ॥"

ಶ್ರೀವಾಯುದೇವರ ಮತವನ್ನು ಆಶ್ರಯಿಸುವುದರಿಂದಲೇ ಉದ್ಧಾರವಾಗುವುದು. ಶ್ರೀಹರಿಯು ಸರ್ವತ್ರವ್ಯಾಪ್ತನಾಗಿದ್ದು ಸತ್ತಾಪ್ರದನಾಗಿರುವನೆಂದು ತಿಳಿಯುವುದರಿಂದ ಆ ಪರಮಾತ್ಮನಲ್ಲಿ ನಿರ್ಮಲವಾದ ಭಕ್ತಿಯುಂಟಾಗುತ್ತದೆ. ಆದ್ದರಿಂದ ನನ್ನ ಪ್ರೀತ್ಯಾಸ್ಪದರಾದ ದೈತ್ಯಬಾಲಕರೇ, ನೀವು ಶ್ರೀಹರಿಯಲ್ಲಿ ಏಕಾಂತ ಭಕ್ತಿಯನ್ನು ಮಾಡಿ ನಿಮ್ಮ ಯೋಗ್ಯತೆಗನುಸರಿಸಿ ಶ್ರೀಹರಿಯ ಅನುಗ್ರಹದಿಂದ ಮೋಕ್ಷವನ್ನು ಪಡೆದು ಉದ್ಧೃತರಾಗಿರಿ.

ಪ್ರಹ್ಲಾದನು ಅತ್ಯಂತ ದಯಾರ್ದ್ರ ಹೃದಯನಾಗಿ ತನ್ನ ಮಿತ್ರರಾದ ದೈತ್ಯಬಾಲಕರಿಗೆ ಇಂತು ತತ್ವಜ್ಞಾನ ಪರಿಪ್ಲುತವಾದ ಅಮೋಘ ಉಪದೇಶವನ್ನು

ಮಾಡಿದ ಮೇಲೆ ದೈತ್ಯಬಾಲಕರು ಪ್ರಹ್ಲಾದನು ತಮ್ಮ ಕಲ್ಯಾಣಕ್ಕಾಗಿಯೇ ಇಂತಹ ಉಪದೇಶಮಾಡಿ ಅನುಗ್ರಹಿಸಿದ್ದಾನೆ ಎಂದು ತಿಳಿದು ಅವನ ಉಪದೇಶದಂತೆಯೇ ವರ್ತಿಸಲು ನಿಶ್ಚಯಿಸಿದರು. ಮತ್ತು ಅಂದಿನಿಂದ ಶಂಡಾಮರ್ಕರು ಹೇಳಿದ ಪಾಠಗಳನ್ನು ಕಡೆಗಣಿಸಿದರು. ಪ್ರಹ್ಲಾದನ ಶಿಷ್ಯರಾಗಿ ನೀತಿಶಾಸ್ತ್ರವನ್ನು ತಿರಸ್ಕರಿಸಿ ಹರಿಭಕ್ತರಾಗಿ ಶ್ರೀಪರಮಾತ್ಮನಲ್ಲಿ ನಿರ್ಮಲ ಭಕ್ತಿಮಾಡುತ್ತಾ ಮೋಕ್ಷ ಮಾರ್ಗಾವಲಂಬಿಗಳಾದರು.

ಮನೆಯಿಂದ ಬಂದ ಶಂಡಾಮರ್ಕರು ಈ ಎಲ್ಲ ವಿಪರೀತಗಳನ್ನು ಕಂಡು ಭಯಗೊಂಡು ಇದನ್ನು ಹೀಗೆಯೇ ಬಿಟ್ಟರೆ ಅನರ್ಥವಾಗುವುದೆಂದು ಭಾವಿಸಿ ಈ ಎಲ್ಲ ವಿಚಾರಗಳನ್ನೂ ದೈತ್ಯಸಾಮ್ರಾಟನಿಗೆ ತಿಳಿಸಲು ಅರಮನೆಗೆ ಧಾವಿಸಿದರು.

## ೧೪. ಪ್ರಹ್ಲಾದರ ಕಾರುಣ್ಯಾತಿಶಯ

ಶಂಡಾಮರ್ಕರು ದೈತ್ಯರಾಜ ಹಿರಣ್ಯಕಶ್ಯಪನ ಅರಮನೆಗೆ ಬಂದು ಎಲ್ಲರ ವಿಚಾರಗಳನ್ನೂ ನಿವೇದಿಸಿದರು.

ಇದರಿಂದ ಹಿರಣ್ಯಕಶ್ಯಪನಿಗೆ ಅಸಾಧ್ಯ ಕ್ರೋಧವುಂಟಾಯಿತು. ಈ ಕುಲಕಲಂಕನಿಂದ ದೈತ್ಯಕುಲವೇ ನಾಶವಾಗುವುದೆಂಬ ಭಯವುಂಟಾಯಿತು. ಆಗವನು ಪುರೋಹಿತರಾದ ಗುರುಪುತ್ರರನ್ನು ಪ್ರಹ್ಲಾದನ ನಾಶಕ್ಕೆ ಏನಾದರೂ ಉಪಾಯವನ್ನು ಹೇಳಿ ಎನ್ನಲು ಶಂಡಾಮರ್ಕರು "ದೈತ್ಯರಾಜ ! ಆಭಿಚಾರಿಕ ಕೃತ್ತಿಯನ್ನು ನಿರ್ಮಿಸಿ ಪ್ರಹ್ಲಾದನ ಮೇಲೆ ಬಿಟ್ಟರೆ ಅದು ನಿಶ್ಚಯವಾಗಿ ರಾಜಕುಮಾರರನ್ನು ನಾಶಪಡಿಸುವುದು" ಎಂದು ವಿಜ್ಞಾಪಿಸಿದರು.

**ಹಿರಣ್ಯ :** ದೈತ್ಯಪುರೋಹಿತರೇ, ಬೇಗ ಈ ಪ್ರಹ್ಲಾದನನ್ನು ಸಂಹರಿಸಲು ಆಭಿಚಾರಿಕ ಕೃತ್ತಿಯನ್ನು ಉತ್ಪತ್ತಿಮಾಡಿರಿ ! ತಡಮಾಡಬೇಡಿರಿ.[1]

ಹಿರಣ್ಯಕಶ್ಯಪನ ಮಾತನ್ನಾಲಿಸಿ ಶಂಡಾಮರ್ಕರು ಹಾಗೆಯೇ ಮಾಡುವುದಾಗಿ ಹೇಳಿ ತಮ್ಮ ಪಾಠಶಾಲೆಗೆ ಬಂದು ನಯ-ವಿನಯವಾಗಿ ಪ್ರಹ್ಲಾದನಿಗೆ ಉಪದೇಶ ಮಾಡಿದರು. ಆದರೆ ಅದರಿಂದ ಏನೂ ಪ್ರಯೋಜನವಾಗಲಿಲ್ಲ ! ಆಗ ಅವರು ಕೋಪದಿಂದ "ಎಲವೋ ದುರ್ಬುದ್ಧಿಯುಳ್ಳ ಬಾಲಕನೆ ! ನಾವಿಷ್ಟು ಹೇಳಿದರೂ ನೀನು ವಿಷ್ಣುವೆಂಬ ಮೋಹಗ್ರಹವನ್ನು [ಹರಿಭಕ್ತಿಯನ್ನು] ಬಿಡದಿದ್ದರೆ, ನಿನ್ನನ್ನು

1. "ತ್ವರ್ಯತಾಂ ತ್ವರ್ಯತಾಂ ಹೇಹೇ ಸದ್ಯೋ ದೈತ್ಯಪುರೋಹಿತಾಃ ।
ಕೃತ್ಯಾಂ ತಸ್ಯ ವಿನಾಶಾಯ ಉತ್ಪಾದಯತ ಮಾಚಿರಮ್ ॥".

—ವಿಷ್ಣುಪುರಾಣ.

ಸಂಹರಿಸಲು ಕೃತ್ತಿಯನ್ನು ಸೃಜಿಸಬೇಕಾದೀತು ! ಜೋಕೆ"[1] ಎಂದು ಎಚ್ಚರಿಸಿದರು. ಅವರ ಮಾತನ್ನು ಕೇಳಿ ಪ್ರಹ್ಲಾದನು ನಿರ್ಭಯವಾಗಿ "ಆಚಾರ್ಯರೇ, ಜೀವನನ್ನು ಕೊಲ್ಲುವರಾರು ? ರಕ್ಷಿಸುವರಾರು ? ಸರ್ವಸ್ವತಂತ್ರನಾದ, ಸ್ವಾಮಿಯಾದ ಶ್ರೀಹರಿಯ ಸಂಕಲ್ಪಕ್ಕೆ ವಿರುದ್ಧವಾಗಿ ಅಸ್ವತಂತ್ರಜೀವರು. ಏನುತಾನೆ ಮಾಡಬಲ್ಲರು ?" ಎಂದು ಹೇಳಿದನು.

ಪ್ರಹ್ಲಾದನ ಮಾತು ಕೇಳಿ ಕೋಪ–ಆಶ್ಚರ್ಯಗಳಿಂದ ಯುಕ್ತರಾದ ರಾಜಪುರೋಹಿತರು ಪ್ರಹ್ಲಾದನ ಸಂಹಾರಕ್ಕಾಗಿ ಅಭಿಚಾರಿಕ ಕೃತ್ತಿಯನ್ನು ಸೃಷ್ಟಿಸಿ ಪ್ರಹ್ಲಾದನ ಮೇಲೆ ಬಿಟ್ಟರು.

ಬೆಂಕಿಯ ಭಯಂಕರ ಜ್ವಾಲೆಯಂತೆ ಪ್ರಜ್ವಲಿಸುವ ಕೃತ್ತಿಯು ತನ್ನ ಪಾದಾಘಾತದಿಂದ ಭೂಮಿಯನ್ನೇ ಕಂಪಿಸುತ್ತಾ ಕ್ರೋಧದಿಂದ ಪ್ರಹ್ಲಾದರಾಜನ ಪ್ರಾಣಹರಣಕ್ಕಾಗಿ ಧಾವಿಸಿ ತ್ರಿಶೂಲದಿಂದ ಪ್ರಹ್ಲಾದನ ಎದೆಯನ್ನು ತಿವಿಯಿತು ! ಆಶ್ಚರ್ಯ ! ಬಾಲಪ್ರಹ್ಲಾದನ ವಕ್ಷಃಸ್ಥಳಸ್ಪರ್ಶಮಾತ್ರದಿಂದ ತ್ರಿಶೂಲವೇ ತುಂಡು ತುಂಡಾಯಿತು!! ಬಾಲಪ್ರಹ್ಲಾದ ಶ್ರೀಹರಿಧ್ಯಾನಪರನಾಗಿ ನಿಶ್ಚಲನಾಗಿ ನಸುನಗುತ್ತಾ ನಿಂತಿದ್ದಾನೆ. ಅವನ್ನುಕಂಡು ಶಂಡಾಮರ್ಕರು ಮೂಕವಿಸ್ಮಿತರಾದರು.

ನಿಜ, ಶ್ರೀಹರಿಯು ಯಾವ ಮಹಾನುಭಾವರ ಹೃದಯಕಮಲದಲ್ಲಿ ಸತತವೂ ನಲಿಯುತ್ತಿರುವನೋ, ಯಾರ ಹೃದಯದಲಿ ಜೀವೋತ್ತಮರೂ, ಜಗತ್ಪ್ರಾಣರೂ ಆದ ಶ್ರೀಮುಖ್ಯಪ್ರಾಣದೇವರು ಸಂತತ ಸನ್ನಿಧಾನದಿಂದ ಸಂಶೋಭಿಸುವರೋ ಅಂಥವರಿಗೆ ಯಾರಿಂದತಾನೆ ಏನು ಅಪಾಯವಾಗಬಲ್ಲದು ?

"ಯತ್ರಾನಪಾಯೀ ಭಗವಾನ್ ಹೃದ್ಯಾಸ್ತೇ ಹರಿರೀಶ್ವರಃ ।
ಭಂಗೋ ಭವತಿ ವಜ್ರಸ್ಯ ತತ್ರ ಶೂಲಸ್ಯ ಕಾ ಕಥಾ ? ॥"

ಯಾರಹೃದಯದಲ್ಲಿ ಸರ್ವೇಶ್ವರನಾದ ಶ್ರೀಮನ್ನಾರಾಯಣನು ಸರ್ವದಾ ಬಿಡದೆ ವಾಸಿಸುವನೋ. ಅಂಥವರ ಮೇಲೆ ವಜ್ರಾಯುಧವನ್ನು ಪ್ರಯೋಗಿಸಿದರೂ ಅದು ಭಗವದ್ಭಕ್ತರನ್ನೇನು ಮಾಡಬಲ್ಲದು ? ಹಾಗೆ ಪ್ರಯೋಗಿಸಿದ ವಜ್ರಾಯುಧವೇ ಚೂರುಚೂರಾಗುವುದೆಂದ ಮೇಲೆ ಇನ್ನು ಕೇವಲ ಸಾಮಾನ್ಯವಾದ ಕೃತ್ತಿಯ ಶೂಲವು ಭಗ್ನವಾಯಿತೆಂದು ಹೇಳುವುದೇನಿದೆ ?

ದೈತ್ಯರಾಜನ ಅಪ್ಪಣೆಯಂತೆ ಶಂಡಾಮರ್ಕರು ನಿರ್ದಯರಾಗಿಪಾಪರಹಿತರೂ, ಭಗವದ್ಭಕ್ತರೂ ಆದ ಬಾಲಪ್ರಹ್ಲಾದರನ್ನು ಸಂಹರಿಸಲು ಭಯಂಕರವಾದ

---

1. ಯದ್ಯಸ್ಮದ್ವಚನಾನ್ಮೋಹಗ್ರಹಂ ನ ತ್ಯಕ್ಷ್ಯಸೇ ಭವಾನ್ ।
ತತಃ ಕೃತ್ಯಾಂ ವಿನಾಶಾಯ ತವ ಸೃಕ್ಷ್ಯಾಮ ದುರ್ಮತೇ ॥"
—ವಿಷ್ಣುಪುರಾಣ.

ಅಭಿಚಾರಿಕ ಕೃತ್ತಿಯನ್ನು ಉತ್ಪಾದಿಸಿ ಪ್ರಹ್ಲಾದರ ಮೇಲೆ ಪ್ರಯೋಗಿಸಿದ್ದರು. ಆದರೆ ಅದು ಪ್ರಹ್ಲಾದರನ್ನು ನಾಶಪಡಿಸಲು ಅಶಕ್ತವಾಯಿತು. ಆಗ ಆ ಕೃತ್ತಿಯು ತನ್ನನ್ನು ಸೃಜಿಸಿ ಪ್ರಹ್ಲಾದರ ಮೇಲೆ ಬಿಟ್ಟ ಪುರೋಹಿತ ಶಂಡಾಮರ್ಕರ ಮೇಲೆಯೇ ತಿರುಗೆರಗಿತು. ಭಯಂಕರವಾದ ಆ ಕೃತ್ತಿಯ ಜ್ವಾಲೆಯಲ್ಲಿ ದಹಿಸಿ ಹೋಗುತ್ತಿರುವ ಪುರೋಹಿತರು ಅದರಿಂದ ಪಾರಾಗಲು ಸಾಧ್ಯವಿಲ್ಲದೆ ಹಾಹಾಕಾರ ಮಾಡತೊಡಗಿದರು. ಅದನ್ನು ಕಂಡು ದಯಾಳುಗಳಾದ ಪ್ರಹ್ಲಾದರ ಹೃದಯವು ಕರಗಿ ಕಾರುಣ್ಯಪೂರ್ಣವಾಯಿತು. 'ಸರ್ವೇಜನಾಸ್ಸುಖಿನೋ ಭವಂತು' ಎಂಬ ಮಂತ್ರವನ್ನೇ ಸದಾ ಜಪಿಸುವ ಹರಿಭಕ್ತ ಪ್ರಹ್ಲಾದರು ತಮ್ಮ ನಾಶಕ್ಕಾಗಿ ಪ್ರಯತ್ನಿಸಿದ ಗುರುಗಳಾದ ಶಂಡಾಮರ್ಕರ ಕಷ್ಟವನ್ನು ಕಂಡು ಸಹಿಸಲಾಗಲಿಲ್ಲ. ಅವರು ನಾಶವಾಗುತ್ತಿರುವುದನ್ನು ಅವರು ನೋಡದಾದರು. ಆ ಮಹಾತ್ಮರ ಹೃದಯ ಪುರೋಹಿತರನ್ನು ರಕ್ಷಿಸಲು ತವಕಗೊಂಡಿತು. ಪ್ರಹ್ಲಾದರು ಅತ್ಯಂತ ದಯಾಪೂರ್ಣರಾಗಿ "ಹೇ ಕೃಷ್ಣ ಅನಂತ, ಶ್ರೀಹರಿ, ಕಾಪಾಡು, ಕಾಪಾಡು. ನನ್ನ ಕಾರಣವಾಗಿ ಇವರು ನಾಶವಾಗುವುದನ್ನು ನಾನು ಸಹಿಸಲಾರೆ, ಪ್ರಭು. ಇವರನ್ನು ರಕ್ಷಿಸು ತಂದೆ" ಎಂದು ಹೃತ್ಪೂರ್ವಕವಾಗಿ ಪ್ರಾರ್ಥಿಸಿದರು,

ಇಂತು ಅತಿಭಕ್ತಿಯಿಂದ ಪ್ರಹ್ಲಾದರು ಭಗವಂತನನ್ನು ಪ್ರಾರ್ಥಿಸುತ್ತಾ ಪುರೋಹಿತರನ್ನು ಸ್ಪರ್ಶಿಸಿದರು. ಅಹಹ! ಏನದ್ಭುತ! ಪ್ರಹ್ಲಾದರ ಕರಸ್ಪರ್ಶ ಮಾತ್ರದಿಂದ ಅಗ್ನಿಜ್ವಾಲೆಯ ಭೀಕರ ಯಾತನೆಯಿಂದ ಮರಣೋನ್ಮುಖರಾಗಿದ್ದ ಶಂಡಾಮರ್ಕರಿಗೆ ಅಮೃತಸ್ಪರ್ಶವಾದಂತಾಗಿ ಎಲ್ಲಾ ಯಾತನೆಗಳೂ ಮಾಯವಾಗಿ ಮೊದಲಿನಂತೆಯೇ ಆರೋಗ್ಯಯುಕ್ತರಾಗಿ ಆನಂದದಿಂದ ನಲಿಯಹತ್ತಿದರು.

ಈ ಅದ್ಭುತಪವಾಡವನ್ನು ಕಣ್ಣಾರೆ ಕಂಡು ಅನುಭವಿಸಿದ ಪುರೋಹಿತರು ಆಶ್ಚರ್ಯಚಕಿತರಾದರು. ಆಗ ಅವರ ಮನದಲ್ಲಿ ಪ್ರಹ್ಲಾದರ ಬಗ್ಗೆ ಆದರ ಮತ್ತು ವಿಶೇಷ ಗೌರವಬುದ್ಧಿಯುಂಟಾಯಿತು. ವಿನಯಪೂರ್ವಕವಾಗಿ ತಮ್ಮೆದುರು ನಿಂತಿರುವ ಪ್ರಹ್ಲಾದರನ್ನು ಕಂಡು ಕೃತಜ್ಞತೆಯಿಂದ ತುಂಬಿದ ಹೃದಯದಿಂದ--

"ದೀರ್ಘಾಯುರಪ್ರತಿಹತೋ ಬಲವೀರ್ಯಸಮನ್ವಿತಃ ।
ಪುತ್ರಪೌತ್ರಧನೈಶ್ವರ್ಯೈರ್ಯುಕ್ತೋ ವತ್ಸ ಭವೋತ್ತಮಃ ॥"

—[ವಿಷ್ಣುಪುರಾಣ]

"ಕುಮಾರ, ಪ್ರಹ್ಲಾದ ! ನೀನು ಪರಮಶ್ರೇಷ್ಠನಾಗಿದ್ದೀಯೆ. ನೀನು ದೀರ್ಘಾಯುಗವಾಗಿ. ಅಪ್ರತಿಹತನಾಗಿ, ಬಲವೀರ್ಯಗಳಿಂದ ಯುಕ್ತನಾಗಿ. ಪುತ್ರ ಪೌತ್ರರಿಂದಲೂ, ಸಿರಿಸಂಪತ್ತುಗಳಿಂದಲೂ ಕಂಗೊಳಿಸಿ ಉತ್ತಮನೆಂದು ಕೀರ್ತಿಗಳಿಸಿ ರಾಜಿಸು"—ಎಂದು ಆಶೀರ್ವದಿಸಿದರು.

ಅನಂತರ ಹಿರಣ್ಯಕಶ್ಯಪನಿಗೆ ನಡೆದ ಸಮಸ್ತ ವಿಚಾರಗಳನ್ನೂ ನಿವೇದಿಸಿ

'ಪ್ರಹ್ಲಾದನು ಮಹಾನುಭಾವ, ಅವನನ್ನು ಕೊಲ್ಲುವುದು ಯಾರಿಂದಲೂ ಸಾಧ್ಯವಿಲ್ಲ. ನಮ್ಮನ್ನೇ ಅವನು ಕಾಪಾಡಿದ ಕರುಣಾಮೂರ್ತಿ' ಎಂದು ಹೇಳಿ ಮನೆಗೆ ತೆರಳಿದರು.

## ೧೫. ವಿಷಕುಡಿದು ಜೀರ್ಣಿಸಿಕೊಂಡರು !

ಕಯಾಧುವು ಅಂತಃಪುರದಲ್ಲಿ ಚಿಂತಾಮಗ್ನಳಾಗಿದ್ದಾಳೆ, ದೈತ್ಯವಂಶದ ಹಿತವೇ ಸರ್ವಸ್ವವೆಂದು ನಂಬಿ ಅವರ ಹಿತಕ್ಕಾಗಿ ಹೊಟ್ಟೆಯಲ್ಲಿ ಹುಟ್ಟಿದ ಪುತ್ರನನ್ನೇ ದ್ವೇಷಿಸುತ್ತಾ, ವಿವಿಧ ಹಿಂಸೆಗೆ ಗುರಿಪಡಿಸುತ್ತಿರುವ ತನ್ನ ಪತಿ ಒಂದು ಕಡೆ, ಶ್ರೀಹರಿಯ ಹುಚ್ಚು ಹಿಡಿದು ಅವನ ಸೇವೆ, ನಾಮಸ್ಮರಣೆ ಭಕ್ತಿಗಳೇ ತನ್ನ ಸರ್ವಸ್ವವೆಂದು ನಂಬಿ ತಂದೆಯ, ಹಿರಿಯರ ಮಾತಿಗೆ ಬೆಲೆಕೊಡದೆ ತಾನು ನಂಬಿರುವ ಹರಿಯೇ ಸರ್ವೋತ್ತಮ, ಅವನಿಂದಲೇ ಜಗತ್ತಿನ ಸರ್ವರ ಉದ್ಧಾರ, ಕಲ್ಯಾಣವೆಂದು ತಂದೆಗೆ ವಿರುದ್ಧವಾಗಿ ವಾದಿಸುತ್ತಿರುವ ಕುಮಾರ ಪ್ರಹ್ಲಾದ ಮತ್ತೊಂದು ಕಡೆ ! ಮಧ್ಯದಲ್ಲಿ ತಾನು ಅನುಭವಿಸುತ್ತಿರುವ ದುಃಖ, ಯಾತನೆಗಳಿಂದ ಬಳಲುತ್ತಿದ್ದಾಳೆ— ಕಯಾಧು. ಈ ತಂದೆಮಕ್ಕಳ ವಿರೋಧ–ದ್ವಂದ್ವಗಳು ಹೇಗೆ ಪರ್ಯವಸಾನವಾಗುವುದೋ ಎಂಬ ಭಯ, ಕಾತರ, ಚಿಂತೆಗಳಿಂದ ಮರ್ಮಾಹತಳಾಗಿದ್ದಾಳೆ, ಆ ತಾಯಿ.

"ಹಾ, ದುರ್ವಿಧಿಯೇ ! ನನ್ನ ದುಃಖಕ್ಕೆ ಅಂತ್ಯವೇ ಇಲ್ಲವೇ ? ಯಾವ ಜನ್ಮದ ಪಾಪದ ಫಲವಿದು? ಜಗತ್ತಿನ ಸೃಷ್ಟಿಯಲ್ಲಿ ನಾನು ನಿರ್ಭಾಗ್ಯಳು ! ನನ್ನ ಕಷ್ಟ ಯಾರಲ್ಲಿ ಹೇಳಿಕೊಳ್ಳಲಿ ? ಮನಸ್ಸಿಗೆ ಶಾಂತಿಯೇ ಇಲ್ಲದಂತಾಗಿದೆಯಲ್ಲ ! ನೆನೆಯಲೂ ಹೃದಯವಿದಾರಕವಾದ ಭವಿಷ್ಯದ ದುಷ್ಟ ಕಲ್ಪನೆಗಳು ಬೆನ್ನು ಹತ್ತಿದ ಬೇತಾಳದಂತೆ ಬಾಧಿಸುತ್ತಿರುವುದು. ತಂದೆಮಕ್ಕಳ ಈ ಹಗೆತನದ ಪರಿಣಾಮವೇನಾಗುವುದೋ ಕಾಣೆನೇ ! ಹರಿದ್ವೇಷದಿಂದ ಇತ್ತ ಯುಕ್ತಾಯುಕ್ತ ಶಕ್ತಿಯನ್ನೇ ಕಳೆದುಕೊಂಡು ಕುಮಾರನನ್ನು ದ್ವೇಷಿಸುತ್ತಿರುವನು ನನ್ನ ಸ್ವಾಮಿ. ಅತ್ತ ಮುದ್ದು ಕಂದಮ್ಮ ಪ್ರಹ್ಲಾದನು ನಾರಾಯಣನೇ ಸರ್ವಸ್ವವೆಂದು ಬಗೆದು ನನ್ನ ಹಿತವಚನವನ್ನೂ ಗಮನಿಸದೆ ಹರಿಯ ಆರಾಧನೆಯಲ್ಲಿ ಮಗ್ನನಾಗಿದ್ದಾನೆ. ಅಬಲೆಯಾದ ನಾನು ಈ ಉಭಯರ ಮಧ್ಯದಲ್ಲಿ ಸಿಲುಕಿ ಸಂಕಟದಿಂದ ಬಳಲುತ್ತಿರುವೆನು. ನಾನೀಗ ಯಾರಿಗೆ ಮೊರೆಹೋಗಲಿ ?" ಎಂದು ದುಃಖಿಸಹತ್ತಿದಳು.

ಗುರುಪುತ್ರರ ಮಾತಿನಿಂದ ಕಂಗೆಟ್ಟ ಹಿರಣ್ಯಕಶ್ಯಪನು ಕೋಪದಿಂದ ಹುಚ್ಚನಂತಾಗಿ ಕುಮಾರ ಪ್ರಹ್ಲಾದನನ್ನು ಎಳೆದುಕೊಂಡು ಬಂದು "ದೇವಿ, ನಿನ್ನೀಕುಮಾರನು ಮೇರೆ ಮೀರಿದ್ದಾನೆ. ನನ್ನ ಸಹನೆಗೂ ಒಂದು ಮಿತಿಯಿದೆ, ಕಯಾಧು ! ನೀನ್ನೀ ಪುತ್ರರನ್ನು ಸರಿಪಡಿಸದಿದ್ದರೆ....ಮುಂದೆ ನಾನೇ ಸ್ವತಃ ಇವನನ್ನು ಶಿಕ್ಷಿಸಬೇಕಾದೀತು !" ಎಂದು ಅಬ್ಬರಿಸಿದನು.

**ಕಯಾಧು :** (ಪ್ರಹ್ಲಾದನನ್ನು ಅಪ್ಪಿ) ವತ್ಸ ! ಪ್ರಹ್ಲಾದ, ಹೀಗೇಕೆ ಮಾಡುತ್ತಿರುವೆ ಕಂದ ! ತಂದೆಯ ಮನಸ್ಸಿಗೆ ಹರ್ಷವಾಗುವಂತೆ ವರ್ತಿಸಬಾರದೆ?

**ಪ್ರಹ್ಲಾದ :** ತಾಯಿ, ತಂದೆಗೆ ನಾನೆಂದೂ ವಿರೋಧಿಯಲ್ಲಮ್ಮ! ಅವರ ಹಿತಕ್ಕಾಗಿಯೇ ನಾನು ಪ್ರಯತ್ನಿಸುತ್ತಿದ್ದೇನೆ.

**ಹಿರಣ್ಯಕನು :** (ಸಿಟ್ಟಿನಿಂದ) "ಕೇಳಿದಯಾ ದೇವಿ! ನಿನ್ನೀಸುತನು ನನ್ನ ಹಿತ ವನ್ನು ಬಯಸುವನಂತೆ ! ನನ್ನ ಆಜನ್ಮ ಶತ್ರುಪಕ್ಷವನ್ನು ಅವಲಂಬಿಸಿರುವ ಈ ದುಷ್ಟನು ಇನ್ನು ಬದುಕಿರಬಾರದು!" ಹೀಗೆ ಹೇಳುತ್ತಿರುವಾಗಲೇ ದುರ್ಮುಖನು ಕಾಲಕೂಟ ಸದೃಶವಾದ ವಿಷವನ್ನು ತಂದು ಸಾಮ್ರಾಟನಿಗೆ ಅರ್ಪಿಸಿ ತೆರಳಿದನು.

ಕಯಾಧುವು ಭಯದಿಂದ "ಸ್ವಾಮಿ ಅದೇನು ?" ಎಂದು ಕೇಳಲು ಹಿರಣ್ಯ ಕಶ್ಯಪನು "ನಿನ್ನ ಮಗನನ್ನು ಸಂಹರಿಸಲು ಈ ವಿಷವನ್ನು ತರಿಸಿದ್ದೇನೆ! ಹೂಂ, ರಾಣಿ ಈ ವಿಷವನ್ನು ಕುಲಕಂಟಕನಾದ ನಿನ್ನ ಪುತ್ರನಿಗೆ ನಿನ್ನ ಕೈಯಿಂದಲೇ ಕುಡಿಸು" ಎಂದು ವಿಷದ ಬಟ್ಟಲನ್ನು ಕಯಾಧುವಿನ ಕೈಗೆ ಕೊಡಹೋಗಲು, ಕಯಾಧುವು ಭಯದಿಂದ ಹಿಂದೆಸರಿದು "ಏನು? ಏನೆಂದಿರಿ ಸ್ವಾಮಿ, ನನ್ನ ಮುದ್ದು ಕಂದನಿಗೆ ನಾನೇ ವಿಷಕುಡಿಸಬೇಕೆ? ಅಸಾಧ್ಯ! ಅದೆಂದಿಗೂ ಆಗದ ಮಾತು"ಎಂದಳು.

ಹಿರಣ್ಯನು (ಕೋಪದಿಂದ) "ಇದು ನಿನ್ನ ಪತಿಯ ಆಜ್ಞೆ! ಹೂಂ, ಪ್ರಹ್ಲಾದ ನಿಗೆ ವಿಷಪ್ರಾಶನ ಮಾಡಿಸು" ಎಂದು ಕಯಾಧುವನ್ನು ಬಲಾತ್ಕರಿಸುತ್ತಿರುವಾಗ ಪ್ರಹ್ಲಾದನು "ಅಮ್ಮಾ! ನೀನೇಕೆ ಚಿಂತಿಸುವೆ? ಪತಿಯ ಆಜ್ಞೆಯನ್ನು ಪರಿಪಾಲಿಸು ವುದೇ ನಿನ್ನ ಧರ್ಮ! ಹೂಂ ಕೊಡು, ತಾಯಿ ವಿಷವನ್ನು!" ಎಂದನು.

ಪ್ರಹ್ಲಾದನ ಮಾತು ಕೇಳಿ ಅಚ್ಚರಿಯಿಂದ ಮಗನ ಮುಖವನ್ನು ನೋಡಿ 'ಹೂಂ, ತೆಗೆದುಕೋ' ಎಂದು ಕಯಾಧುವಿಗೆ ವಿಷದ ಬಟ್ಟಲನ್ನು ಕೊಡಹೋಗಲು ಕಯಾಧುವು ಪತಿಯ ಪಾದವನ್ನು ಹಿಡಿದು ಕಣ್ಣೀರು ಸುರಿಸುತ್ತಾ "ಬೇಡ ಬೇಡ, ನಾಥ, ನನ್ನ ಮಗನಿಗೆ ನನ್ನ ಕೈಯಿಂದಲೇ ವಿಷಕುಡಿಸಬೇಡಿ, ನಿಮಗೆ ಸೆರಗೊಡ್ಡಿ ಬೇಡುತ್ತೇನೆ" ಎನ್ನುತ್ತಿರುವಾಗ, ಪ್ರಹ್ಲಾದರಾಜನೇ ಪಿತನ ಕರದಿಂದ ವಿಷದ ಬಟ್ಟಲನ್ನು ತೆಗೆದುಕೊಂಡು "ಮಾತೆ, ನೀನು ಚಿಂತಿಸಬೇಡ, ಸರ್ವಶಕ್ತನಾದ ಭಗ ವಂತನ ದಯವಿರುವಾಗ ಈ ವಿಷವು ನನಗೇನೂ ಮಾಡಲಾರದು. ಹಿಂದೆ ಅನೇಕ ವಿಧದಿಂದ ನನ್ನನ್ನು ಕೊಲ್ಲಲು ತಂದೆಯು ಯತ್ನಿಸಿದಾಗ ನನ್ನನ್ನು ಕಾಪಾಡಿದ ಆ ಮಹಾಪ್ರಭು ಶ್ರೀಹರಿಯು ಈಗಲೂ ರಕ್ಷಿಸುವನು" ಎಂದು ಹೇಳಿ ಶ್ರೀಹರಿಯನ್ನು ಧ್ಯಾನಿಸಿ 'ಓಂ ನಮೋ ನಾರಾಯಣಾಯ' ಎಂದು ಉಚ್ಚರಿಸುತ್ತಾ ಹಾಲು ಕುಡಿ ದಂತೆ ವಿಷವನ್ನು ಕುಡಿದುಬಿಟ್ಟನು ಪ್ರಹ್ಲಾದರಾಜ ! ಅದನ್ನು ಕಂಡು ಕಯಾಧುವು ಚಿಟ್ಟನೆ ಚೀರಿ ಮೂರ್ಛಾಕ್ರಾಂತಳಾದಳು.

ಹಿರಣ್ಯಕಶ್ಯಪನು "ಇಂದಿಗೆ ನನ್ನ ಶತ್ರುವಿನ ಪಕ್ಷಪಾತಿಯಾದ ಈ ಪ್ರಹ್ಲಾದನ ಗತಿ ಮುಗಿಯಿತು" ಎಂದು ಸಂತಸದಿಂದ ಹಿಗ್ಗುತ್ತಾ ಪ್ರಹ್ಲಾದನನ್ನು ನೋಡ ಹತ್ತಿದನು.

ಪ್ರಹ್ಲಾದನು ಹಾಗೆಯೇ ಶ್ರೀಹರಿಧ್ಯಾನಮಗ್ನನಾಗಿ ನಿಂತಿರುವುದನ್ನು ಕಂಡು ಹಿರಣ್ಯಕಶ್ಯಪನು ಆಶ್ಚರ್ಯದಿಂದ ಮುಂದೆಬಂದು ಪ್ರಹ್ಲಾದನ ಭುಜ ಹಿಡಿದು ಅಲು ಗಾಡಿಸಿದಾಗ ಪ್ರಹ್ಲಾದನು ಕಣ್ತೆರೆದು ತಂದೆಯನ್ನು ನೋಡಿ "ಜನಕ ! ನಿನಗೊಂದಿ ಸುವೆನು" ಎನಲು ಹಿರಣ್ಯಕಶಿಪುವು ಭಯ ವಿಸ್ಮಯಗಳಿಂದ 'ಹ್ಞಾಂ' ಎಂದ ಹಿಂಜ ರಿದು ಪುತ್ರನನ್ನು ನೋಡಹತ್ತಿದನು.

**ಪ್ರಹ್ಲಾದ :** (ಮಂದಹಾಸಬೀರುತ್ತಾ) ಆಹಾ, ದೇವ ! ಜಗನ್ನಾಥ, ನಾರಾಯಣ, ಅಖಿಲಲೋಕಗುರೋ ! ಭಕ್ತವತ್ಸಲ, ನೀನೆಂಥ ಕರುಣಾಪೂರ್ಣನು? ನಿನ್ನೀ ಸ್ವಜನವಾತ್ಸಲ್ಯವನ್ನೆಂತು ಬಣ್ಣಿಸಲಿ ದೇವ !

"ಗೋವರ್ಧನಗಿರಿಧಾರಿ ಮುರಾರಿ
ವಿಷಭಯಹರ ವಿಷಕಂಠವರದ ಹರಿ ।
ಪೂಶರಪಿತ ಶ್ರೀರಮಣ ಸುಜನಾಧಾರಿ ॥" ॥ ೨ ॥

ಎಂದು ಸ್ತುತಿಸಿದನು.

**ಹಿರಣ್ಯ :** (ಭ್ರಾಂತನಾಗಿ) ದುರುಳ! ಇನ್ನೂ ಜೀವಿಸಿರುವೆಯಾ ? ಕರಾಳ ವಿಷವೂ ನಿನಗೆ ಅಮೃತವಾಯಿತೇ ?

**ಪ್ರಹ್ಲಾದ :** ತಂದೆಯೇ, ಯಾರ ನಾಮಸ್ಮರಣೆಯು ಸುಜೀವಿಗಳಿಗೆ ಅಮೃತ ತ್ವವನ್ನು ನೀಡಲು ಸಮರ್ಥವಾಗಿಯೋ ಅಂಥ ಪರಾತ್ಪರನನ್ನು ಸದಾ ಭಜಿಸುವವ ರಿಗೆ ಈ ವಿಷವು ಏನು ಮಾಡೀತು? ಇದೆಲ್ಲವೂ ಶ್ರೀಹರಿಯ ಮಹಿಮೆಯೆಂದು ತಿಳಿ, ಇಷ್ಟೊಂದು ನಿದರ್ಶನಗಳಾದರೂ ಇನ್ನೂ ಆ ಭಗವಂತನ ಮಹಿಮೆಯು ನಿನಗೆ ಅರಿವಾಗಲಿಲ್ಲವೇ ? ಈಗಲಾದರೂ ಆ ದಯಾಮಯನನ್ನು ದ್ವೇಷಿಸುವುದನ್ನು ಬಿಟ್ಟು, ಆ ಶ್ರೀಹರಿಯನ್ನು ಆಶ್ರಯಿಸಿ ನೀನೂ ಸುಖಿಯಾಗು !

ಹಿರಣ್ಯಕಶ್ಯಪನು ಅಸಮಾಧಾನ ಕೋಪತಾಪಗಳಿಂದ "ಹರಿ! ಹರಿ!! ಕೇಳ ಲಾರೆ ನನ್ನ ವೈರಿಯ ನಾಮಸ್ಮರಣೆಯನ್ನು !" ಎಂದು ಬಡಬಡಿಸಿ "ಗುರುದೇವ ! ಆಚಾರ್ಯ ಶುಕ್ರರೇ! ಇನ್ನು ನೀವೇ ಗತಿ" ಎಂದು ಅಂತಃಪುರದಿಂದ ಧಾವಿಸಿದನು.

## ೧೬. ಪ್ರಹ್ಲಾದನ ಅಚಲ ನಿರ್ಧಾರ !

ದೈತ್ಯಸಾಮ್ರಾಟನು ತನ್ನ ಗುರುಗಳಾದ ಶುಕ್ರಾಚಾರ್ಯರು ಉಪದೇಶಿಸಿದಂತೆ ಮಾಡಲು ನಿರ್ಧರಿಸಿ ಸಿಂಹಾಸನದಲ್ಲಿ ಅಲಂಕೃತನಾಗಿದ್ದಾನೆ. ಸಭೆಯಲ್ಲಿ ದೈತ್ಯ ವೀರರು ತಮತಮಗೆ ವಿಹಿತವಾದ ಆಸನಗಳಲ್ಲಿ ಕುಳಿತಿದ್ದಾರೆ.

ದೈತ್ಯರಾಜನ ಅಪ್ಪಣೆಯಂತೆ ಕರಾಳ–ದುರ್ಮುಖರು ಪ್ರಹ್ಲಾದಕುಮಾರನನ್ನು ಸಭೆಗೆ ಕರೆದುತಂದರು, ಪ್ರಹ್ಲಾದನು ಯಾವ ಚಿಂತೆಯೂ ಇಲ್ಲದೆ, ನಿರ್ಭಯನಾಗಿ ಮಂದಹಾಸಬೀರುತ್ತಾ ಬಂದು ತಂದೆಯ ಮುಂದೆ ನಿಂತು ಜನಕ! ನಮಸ್ಕರಿಸುವೇನು" ಎಂದು ಅಭಿವಂದಿಸಿದನು.

ಹಿರಣ್ಯಕಶ್ಯಪನು ಅಸಮಾಧಾನವನ್ನು ನುಂಗಿಕೊಂಡು ಹುಸಿನಗೆ ಬೀರುತ್ತಾ "ಕುಮಾರ! ನಾನು ಹೇಳಿದ ವಿಚಾರವನ್ನು ಯೋಚಿಸಿದೆಯಾ ? ನಿನ್ನ ಹಟವನ್ನು ತ್ಯಜಿಸಿ ನಿನ್ನ ಪಿತನನ್ನು ಸಂತೋಷಪಡಿಸಲಾರೆಯಾ?" ಎಂದನು.

**ಪ್ರಹ್ಲಾದ :** ಜನಕ ! ನಾನೊಬ್ಬ ಬಾಲಕ. ತಮ್ಮ ವಿಚಾರ ಪರಂಪರೆಯನ್ನು ಅರಿಯುವಷ್ಟು ಯೋಗ್ಯತೆ ನನಗೆಲ್ಲಿ ? ಆದರೂ ತಂದೆಯೇ ನಾನೆಂದಿಗೂ ನಿಮಗೆ ಅಹಿತವನ್ನೆಸಗಿಲ್ಲವೆಂದು ನನ್ನ ಅಂತರಾತ್ಮ ಹೇಳುತ್ತಿದೆ.

**ಹಿರಣ್ಯ :** ಹಾಗಾದರೆ....ನಿನ್ನ ನಿರ್ಧಾರವೇನು ? ನಿನ್ನ ಮುಂದಿನ ಗುರಿಯೇನು !

**ಪ್ರಹ್ಲಾದ :** ಅಪ್ಪಾ, ಜಗತ್ತಿನಲ್ಲಿ ಪರಮಾತ್ಮನಕಿಂತ ಪ್ರಿಯವಾದ ವಸ್ತು ಬೇರೊಂದಿಲ್ಲ ! ಆ ಸರ್ವೇಶನ ಪೂಜನ, ಭಜನ, ಸ್ಮರಣೆ ಇವೇ ನನ್ನ ಗುರಿ ! ಆ ಪರಾತ್ಪರನನ್ನು ಒಲಿಸಿಕೊಳ್ಳಬೇಕೆಂಬುದೇ ನನ್ನ ನಿರ್ಧಾರ !!

**ಹಿರಣ್ಯ :** [ಕುಪಿತನಾಗಿ] ಆ ಮಾಯಾವಿಯ ಜಪವನ್ನೇ ಮಾಡುತ್ತಿರುವನೆನ್ನುವೆಯಾ ?

**ಪ್ರಹ್ಲಾದ :** [ನಮ್ರನಾಗಿ] ನಿಜ, ತಂದೆಯೇ, ಆ ಮಾಯಾಪತಿಯೇ ಎಲ್ಲರಕಿಂತಧಿಕನು ! "ಅಣೋರಣೀಯಾನ್ ಮಹತೋ ಮಹೀಯಾನ್", ಏಕೋ ನಾರಾಯಣ ಆಸೀನ್ನಬ್ರಹ್ಮಾ ನ ಚ ಶಂಕರಃ", "ನಾರಾಯಣಾದೇವ ಸಮುತ್ಪದ್ಯಂತೇ, ನಾರಾಯಣಾತ್ಪ್ರವರ್ಧಂತೇ ನಾರಾಯಣೇ ಪ್ರಲೀಯಂತೇ", ಇತ್ಯಾದಿ ಶ್ರುತಿಗಳು ಶ್ರೀಹರಿಯ ಪರಮಾದ್ಭುತ ಶಕ್ತಿಯನ್ನು ಹೊಗಳುವವು ! ಅವನನ್ನು ಆರಾಧಿಸಿ ಒಲಿಸಿಕೊಂಡು ಶ್ರೇಯೋವಂತರಾಗಬೇಕೆಂಬುದೇ ವೇದಾದಿ ಶಾಸ್ತ್ರಗಳ ಉಪದೇಶ, ತಂದೆಯೇ, ನೀನು ಆ ಪರಮಾತ್ಮನನ್ನು ಭಜಿಸಿ ಉದ್ಧೃತನಾಗು !

**ಹಿರಣ್ಯ :** [ಕ್ರುದ್ರನಾಗಿ] ಹಾಗಾದರೆ ನಿನ್ನ ಕೊನೆಯ ನಿರ್ಧಾರವೇನು ?

**ಪ್ರಹ್ಲಾದ :** ತಂದೆಯೇ ! ಶ್ರೀಹರಿಯೇ ಸರ್ವೋತ್ತಮ ದೇವತೆ ! ಅವನಿಂದಲೇ ಸೃಷ್ಟಿಸ್ಥಿತಿ ಸಂಹಾರಾದಿ ಕಾರ್ಯಗಳು ಜರಗುವವು. ಅವನೇ ಸರ್ವಜೀವ ರಕ್ಷಕ ! ಅವನಿಗೆ ಶರಣಾಗತನಾಗಿದ್ದೇನೆ. ಸರ್ವದಾ ಅವನನ್ನು ಆರಾಧಿಸಿ, ಭಕ್ತಿಯಿಂದ ಧ್ಯಾನಿಸಿ ಅವನ ಅನುಗ್ರಹಕ್ಕೆ ಪಾತ್ರನಾಗುವುದೇ ನನ್ನ ಗುರಿ, ನನ್ನೀ ನಿರ್ಧಾರ ಅಚಲ !!

## ೧೭. ದೈತ್ಯರಾಜನಿಗೆ ವಾಯುದೇವರ ಹಿತೋಕ್ತಿ !

ಪ್ರಹ್ಲಾದನ ಅಚಲನಿರ್ಧಾರವನ್ನು ಕೇಳಿ ಸಭಿಕರು ಆಶ್ಚರ್ಯಚಕಿತರಾಗಿ ಕುಳಿತರು! ಹಿರಣ್ಯಕಶ್ಯಪನು ಕ್ರೋಧೋನ್ಮತ್ತನಾಗಿ ಕರದ ಖಡ್ಗವನ್ನು ಜಳಪಳಿಸುತ್ತಾ ಪ್ರಹ್ಲಾದನನ್ನು ಸಂಹರಿಸಲು ಉದ್ಯುಕ್ತನಾದಾಗ ಸಚಿವರು ಅವನನ್ನು ತಡೆದರು.

ಅದೇ ವೇಳೆಗೆ ವಿಚಿತ್ರಕಾಂತಿಯೊಂದು ಬೆಳಗುತ್ತಿರಲು ಶ್ರೀವಾಯುದೇವರು ಪಕ್ಷಿರೂಪದಿಂದ ಬಂದು ಹಿರಣ್ಯಕಶ್ಯಪನ ಮುಂಭಾಗದ ಸ್ತಂಭದ ಮೇಲೆ ಕುಳಿತರು! ಅದನ್ನು ಕಂಡು ಸರ್ವರೂ ಆಚ್ಚರಿಯಿಂದ ಇದೇನೆಂದು ನೋಡುತ್ತಿರುವಾಗ ಪಕ್ಷಿರೂಪದ ವಾಯುದೇವರು. ಹಿರಣ್ಯಕಶ್ಯಪನನ್ನು ಕುರಿತು ಹೀಗೆ ಅಪ್ಪಣೆಕೊಡಿಸಿದರು-

**ವಾಯು:** ಎಲ್ಲವೋ ದೈತ್ಯ! ಹಿರಣ್ಯಕಶಪು, ನೀನು ಮೂರ್ಖನಾಗಿದ್ದೀಯೆ! ನಿನ್ನ ಮರಣ ಸಮಯ ಹತ್ತಿರವಾಗುತ್ತಿದೆ! ನಿನ್ನ ಈ ಅಸುರಭಾವವನ್ನು ಬಿಟ್ಟು ಹರಿಭಕ್ತನಾದ ನಿನ್ನ ಕುಮಾರ ಪ್ರಹ್ಲಾದನಿಗೆ ಶರಣುಹೋಗು. ಶ್ರೀಹರಿಯ ಪಾದಾರವಿಂದವನ್ನು ಭಜಿಸು, ಎಲೋ ಅಸುರ ! ನಿನ್ನ ಆಯುಷ್ಯ ಮುಗಿಯುತ್ತಾ ಬಂದಿದೆ, ಇನ್ನು ಮೂರು ಪ್ರಹರಗಳ ತರುವಾಯ ನೀನು ಮೃತನಾಗುತ್ತೀಯೇ!

ಪಕ್ಷಿಯೊಂದು ಬಂದು ಸಾಮ್ರಾಟನಾದ ತನ್ನೆದುರು ಕುಳಿತು ತನಗೇ ಉಪದೇಶ ಮಾಡಿದ್ದನ್ನು ಕಂಡು ಹಿರಣ್ಯಕಶ್ಯಪನು ವಿಸ್ಮಿತನಾದನು, ಸಭಾಸದರೆಲ್ಲ 'ಇದೇನು ವಿಪರೀತ! ದೈತ್ಯರಾಜನಿಗೇನು ವಿಪತ್ತು ಸಂಭವಿಸುವುದೋ' ಎಂದು ಭಯಗೊಂಡರು.

ಪಕ್ಷಿಯ ಮಾತಿನಿಂದ ಕ್ರುದ್ಧನಾದ ದೈತ್ಯರಾಜನು ಬ್ರಹ್ಮದೇವರ ವರಬಲದ ಧೈರ್ಯದಿಂದ ಮದೋನ್ಮತ್ತನಾಗಿ "ಎಲೈ ಪಕ್ಷಿಯೇ! ನೀನೇನು ಬಡಬಡಿಸುತ್ತಿರುವೆ? ನಾನು ಮರಣ ಹೊಂದುವೆನೇ? ಹಹ್ಹ ಹ! ಮೂರ್ಖ ಪಕ್ಷಿಯೇ, ಕೇಳು—ಇಂದ್ರ, ಸೂರ್ಯ, ಯಮ, ಗಂಧರ್ವ, ರುದ್ರಾದಿ ದೇವತೆಗಳು ಅಷ್ಟೇಏಕೆ? ನೀನು ಹೇಳಿದ ಲಕ್ಷ್ಮೀಪತಿಯಾದ ಆ ಹರಿ, ಇವರ್ಯಾರಿಂದಲೂ ನನಗೆ ಭಯವಿಲ್ಲ !" ಎಂದು ಗದರಿಸಿದನು.

**ಪಕ್ಷಿರೂಪದ ವಾಯುದೇವರು :** ಏಕಿಂತು ಪ್ರಲಪಿಸುವೆ ? ಮೂರ್ಖ, ಅಸಾಧ್ಯವಾದ ಮಾತುಗಳನ್ನಾಡುತ್ತಿರುವೆ, ಅಶಕ್ಯಕಾರ್ಯದಲ್ಲಿ ಕೈಹಾಕಿದ್ದೀಯೇ. ಪ್ರಹ್ಲಾದ ಕುಮಾರನು ಹೇಳಿದಂತೆ ಈಗಲಾದರೂ ಶ್ರೀಹರಿಯನ್ನು ಆರಾಧಿಸು.

---

1. ಈ ಮುಂದಿನ ಕಥಾಭಾಗವು, ಅಂದರೆ ಶ್ರೀವಾಯುದೇವರು ಪಕ್ಷಿರೂಪದಿಂದ ಬಂದು ಹಿರಣ್ಯಕಶ್ಯಪನಿಗೆ ಶ್ರೀಹರಿ-ಪ್ರಹ್ಲಾದನ ಮೇಲಿನ ದ್ವೇಷಬಿಟ್ಟುಬಿಡುವಂತೆ ಹಿತೋಕ್ತಿಯನ್ನು ಹೇಳಿ ಎಚ್ಚರಿಸಿಹೋದ ವಿಚಾರವು ಗರುಡಪುರಾಣ-ಬ್ರಹ್ಮಕಾಂಡದಲ್ಲಿ ಬರುತ್ತದೆ. ಅದನ್ನೇ ಇಲ್ಲಿ ನಿರೂಪಿಸಲಾಗಿದೆ.

ಅವನ ಅನುಗ್ರಹಕ್ಕೆ ಪಾತ್ರನಾಗು ! ಇಲ್ಲದಿದ್ದರೆ... ....

**ಹಿರಣ್ಯ :** [ಗರ್ವದಿಂದ] ಹೂಂ, ಇಲ್ಲದಿದ್ದರೆ ?

**ವಾಯು :** ಇಲ್ಲದಿದ್ದರೆ ಶ್ರೀಮನ್ನಾರಾಯನು ಕ್ಷಣಾರ್ಧವಲ್ಲಿ ನಿನ್ನನ್ನು ತೊಡೆಯ ಮೇಲೆ ಹಾಕಿಕೊಂಡು ತನ್ನ ತೀಕ್ಷ್ಣವಾದ ನಖಗಳಿಂದ ನಿನ್ನ ಹೃದಯವನ್ನು ಸೀಳಿಹಾಕುವನು[2]. ರುದ್ರಾದಿದೇವತೆಗಳೆಲ್ಲರೂ ಆ ಶ್ರೀಮನ್ನಾರಾಯಣನ ಭಕ್ತರೆಂದ ಮೇಲೆ "ಶಿವೋऽಹಂ" ಎಂದು ವ್ಯರ್ಥವಾಗಿ ಉಪಾಸನೆಮಾಡಿ ಕೆಡಬೇಡ! ರುದ್ರದೇವರಿಗಿಂತ ಉತ್ತಮರು ವಾಯುದೇವರು. ಅಂದರೆ ನಾನು! ಅವರಕಿಂತ ಅಧಿಕಳು ಲಕ್ಷ್ಮೀದೇವಿ, ಶ್ರೀಲಕ್ಷ್ಮೀಪತಿಯಾದ ಶ್ರೀನಾರಾಯಣನು ಸರ್ವೋತ್ತಮನು! ಆ ಮಹಾಪ್ರಭುವಿನ ಸಂಕಲ್ಪಕ್ಕೆ ವಿರುದ್ಧವಾಗಿ ನಿನ್ನ ಸ್ವಪ್ರಯತ್ನದಿಂದಲೇ ಪ್ರಹ್ಲಾದ ಕುಮಾರನನ್ನು ಸಂಹರಿಸಲು ಶಕ್ತನಾಗಿದ್ದೇನೆ ಎಂದು ನೀನು ತಿಳಿದು ಗರ್ವಿಸುತ್ತಿದ್ದರೆ, ಎಲ್ಲಿ ನೋಡೋಣ, ಅವನನ್ನು ಸಂಹರಿಸುವ ಯೋಗ್ಯತೆ ನಿನಗಿದೆಯೇ ತೋರಿಸು ? ಯಾರು ಸಾಯುವರೆಂದು ಜಗತ್ತೇ ನೋಡುವುದು ! ಎಲವೋ ಕೇಳಿಲ್ಲಿ. ನೀನೇ ಶೀಘ್ರವಾಗಿ ಶ್ರೀನಾರಾಯಣನಿಂದ ಸಂಹೃತನಾಗುತ್ತೀಯೆ. ಇದರಲ್ಲಿಸಂದೇಹವಿಲ್ಲ. ಈಗಲಾದರೂ ಎಚ್ಚೆತ್ತುಕೊಂಡು ಉದ್ಧೃತನಾಗು!

ಹೀಗೆ ಪಕ್ಷಿರೂಪದ ವಾಯುದೇವರು ನಿರ್ದಾಕ್ಷಿಣ್ಯದಿಂದ ಹೇಳಲು ಹಿರಣ್ಯಕಶಪನು ಅತ್ಯಂತ ಕುಪಿತನಾಗಿ ತನ್ನ ಧನುಸ್ಸಿಗೆ ಬಾಣವನ್ನು ಹೂಡಿ ಪಕ್ಷಿಯನ್ನು ಕೊಲ್ಲಲು ಅದರ ಮೇಲೆ ಬಿಟ್ಟನು. ಆದರೆ ಅದರಿಂದ ಪಕ್ಷಿಗೆ ಸ್ವಲ್ಪವಾದರೂ ಕ್ಷತಿಯಾಗಲಿಲ್ಲ !

ಆಗ ಪಕ್ಷಿರೂಪದ ಪವಮಾನರು "ಅಯ್ಯೋ ತುಚ್ಛ ! ನೋಡಿದೆಯಾ ನಿನ್ನ ಶಕ್ತಿಯ ಬೇಲೆ ಎಷ್ಟೆಂದು ? ನಿನ್ನ ಪ್ರಭುತ್ವವೀಗ ಎಲ್ಲಿ ಹೋಯಿತು ?" ಎಂದು ಹಂಗಿಸಿದರು. ಆಗ ಹಿರಣ್ಯಕಶ್ಯಪನು ಒಂದು ಶರವನ್ನು ಅಗ್ನಿಮಂತ್ರದಿಂದ ಅಭಿಮಂತ್ರಿಸಿ ಆ ಆಗ್ನೇಯಾಸ್ತ್ರವನ್ನು ಪಕ್ಷಿಯಮೇಲೆ ಬಿಟ್ಟನು! ಧಗಧಗಿಸುತ್ತಾ ಬರುತ್ತಿರುವ ಆ ಆಗ್ನೇಯಾಸ್ತ್ರವನ್ನು ಮಧ್ಯದಲ್ಲಿಯೇ ತಡೆದು ಪಕ್ಷಿಯು ನುಂಗಿಬಿಟ್ಟಿತು! ಮತ್ತೆ ಅವರು—"ಎಲವೋ ಮರುಳೆ, ಏಕೆ ವೃಥಾಪ್ರಯತ್ನಿಸಿ ಶ್ರಮಪಡುವೆ? ನಾನೇ ಜಗದೀಶ್ವರ, ನನಗೆ ಸಮರಾರಿದ್ದಾರೆ,ಸಮಸ್ತಕ್ಕೂ ನಾನೇ ಪ್ರಭು ಎಂದು ಗರ್ವಿಸುತ್ತಿದ್ದೆಯಲ್ಲ, ಈಗೆಲ್ಲಿ ಓಡಿಹೋಯಿತು ನಿನ್ನ ಈಶತ್ವ? ನಿನ್ನ ದುರಾಭಿಮಾನವನ್ನು ಬಿಟ್ಟು ಬ್ರಹ್ಮರುದ್ರೇಂದ್ರಾದ್ಯಮರವಂದಿತನಾದ ಇಂದಿರಾಹೃದಯಮಂದಿರನಾದ

---

2. ಜ್ಯೇಷ್ಠೋತ್ತಮರಾದ ವಾಯುದೇವರು ನೀನು ಶೀಘ್ರವಾಗಿ ಹತನಾಗುವಿ ಎಂದೂ ಹೇಗೆ ಸಂಹೃತನಾಗುವಿ ಎಂಬ ಭವಿಷ್ಯವನ್ನೂ ನುಡಿದು ಎಚ್ಚರಿಸಿದರೂ ದೈತ್ಯರಾಜನು ಅದನ್ನು ಕಡೆಗಣಿಸಿದನು.

ಶ್ರೀಹರಿಯನ್ನು ಭಜಿಸು. ಆ ಪ್ರಭುವಿನ ಪಾದವನ್ನು ಆಶ್ರಯಿಸು" ಎಂದು ಉಪದೇಶಿಸಿದರು.

ಇದರಿಂದ ಹೆಚ್ಚು ಕೆರಳಿ ಕ್ರೋಧೋನ್ಮತ್ತನಾದ ಆ ದೈತ್ಯರಾಜ ಹಿರಣ್ಯಕಶಿಪುವು ಪಾಶುಪತಾಸ್ತ್ರವನ್ನು ಅಭಿಮಂತ್ರಿಸಿ ಪಕ್ಷಿಯಮೇಲೆಸೆದನು ! ಪಕ್ಷಿರೂಪದ ಶ್ರೀವಾಯುದೇವರು ಪಾಶುಪತಾಸ್ತ್ರವನ್ನು ಎಲ್ಲರೂ ನೋಡುತ್ತಿರುವಂತೆಯೇ ನುಂಗಿಬಿಟ್ಟರು ! ಮತ್ತು ದೈತ್ಯರಾಜನನ್ನು ನೋಡಿ—"ಮೂರ್ಖ ! ಈಗಲಾದರೂ ತಿಳಿಯಿತೇ ನಿನ್ನ ಶಕ್ತಿ ಎಷ್ಟೆಂದು ? ಹೂ, ಇನ್ನಾದರೂ ಭಕ್ತ ಪ್ರಹ್ಲಾದರಾಜನ ಮೇಲಿನ ಹಗೆತನವನ್ನು ಬಿಟ್ಟು, ಅವನನ್ನು ಸಮಾಧಾನಗೊಳಿಸು. ಮತ್ತು ಸರ್ವೋತ್ತಮನಾದ ಶ್ರೀ ವಿಷ್ಣುವನ್ನು ಅನನ್ಯಗತಿಕನಾಗಿ ಭಜಿಸು ! ಇಲ್ಲವಿದ್ದರೆ ನೀನು ಶೀಘ್ರವಾಗಿ ಸಂಹೃತನಾಗುವುದು ನಿಶ್ಚಿತ ! ಎಚ್ಚರ !!" ಎಂದು ಹೇಳಿ ಪಕ್ಷಿರೂಪದ ಶ್ರೀವಾಯುದೇವರು ಅದೃಶ್ಯರಾದರು.

ಪಕ್ಷಿರೂಪದಿಂದ ಬಂದು ತನಗೆ ಹಿತೋಕ್ತಿಯನ್ನು ಹೇಳಿದ ಜೀವೋತ್ತಮರೂ, ಸರ್ವಜೀವರಿಗೆ ಪ್ರೇರಕರೂ ಆದ ಶ್ರೀವಾಯುದೇವರನ್ನು ದೈತ್ಯರಾಜನು ಸಾಮಾನ್ಯ ಪಕ್ಷಿಯೆಂದು ಭಾವಿಸಿ ಅದನ್ನು ಕೊಲ್ಲಲೆತ್ನಿಸಿದನು ! ಗರುಡ-ಶೇಷ-ರುದ್ರರಕಿಂತ ತಾರತಮ್ಯದಲ್ಲಿ ಅತ್ಯಂತ ಶ್ರೇಷ್ಠರೂ ಜಗಜ್ಜೀವನರೂ ಆದ ಪವಮಾನರನ್ನು ಸಾಮಾನ್ಯನಾದ ಈ ದೈತ್ಯನು ಸಂಹರಿಸಲು ಸಾಧ್ಯವೇ ? ಒಂದು ಪಕ್ಷಿಯೆಂದು ಭಾವಿಸಿ ಕೊಲ್ಲಲೆತ್ನಿಸಿ ವಿಫಲನಾದ್ದರಿಂದ ದೈತ್ಯೇಂದ್ರನಿಗೆ ನಾಚಿಕೆಯಾಯಿತು ! ಭಯವುಂಟಾಯಿತು. ಅದು ಶ್ರೀಹರಿಯಲ್ಲಿಯೂ, ಅವನ ಭಕ್ತನಾದ ತನ್ನ ಮಗ ಪ್ರಹ್ಲಾದನ ಮೇಲೆ ದ್ವೇಷರೂಪತಾಳಿತು ! ಸರ್ವ ದೈತ್ಯವೀರರೆದುರು ತನಗಾದ ಅಪಮಾನದಿಂದ ಕ್ರುದ್ಧನಾದ ಹಿರಣ್ಯಕಶ್ಯಪನು ಕಿಂಕರ್ತವ್ಯಮೂಢನಾದನು. ಪಕ್ಷಿಯ ಮೇಲಿನ ಕೋಪತಾಪಗಳನ್ನು ಕುಮಾರ ಪ್ರಹ್ಲಾದನ ಮೇಲೆ ತೋರಿ ಕಿಡಿಕಿಡಿಯಾದನು.

## ೧೮. ಶ್ರೀನೃಸಿಂಹಾವತಾರ ಮತ್ತು ದೈತ್ಯನ ಸಂಹಾರ !

ಪ್ರಹ್ಲಾದನಮೇಲೆ ಕೋಪಗೊಂಡ ಹಿರಣ್ಯಕಶ್ಯಪನು "ಎಲವೋ ದೈತ್ಯಕುಲ ಕುಠಾರ ! ನಿನ್ನ ಹುಚ್ಚಾಟ ವಿಪರೀತವಾಯಿತು. ಲೋಕಪಾಲಕರೇ ನನ್ನ ಭ್ರೂವಿಭ್ರಮಣಕ್ಕೆ ಹೆದರಿ ನಡುಗುತ್ತಿರುವಾಗ ಅದಾರಬಲದಿಂದ ಹೀಗೆ ನೀನು ಗರ್ವದಿಂದ ಹರಟುತ್ತಿರುವೆಯೋ ?" ಎಂದು ಪ್ರಶ್ನಿಸಿದನು.[1]

---

1. ಹೇ ದುರ್ವಿನೀತ ಮಂದಾತ್ಮನ್ ಕುಲಭೇದಕರಾಧಮ| ಸ್ತಬ್ಧಂ ಮಚ್ಛಾಸನೋದ್ವೃತ್ತಂ ನೇಷ್ಯೇತ್ವಾದ್ಯಯಮಕ್ಷಯಮ್ ॥ ಕ್ರುದ್ಧಸ್ಯ ಯಸ್ಯ ಕಂಪಂತೇ ತ್ರಯೋಲೋಕಾಃ ಸಹೇಶ್ವರಾಃ | ತಸ್ಯ ಮೇಽಭೀತವನ್ಮೂಢ ಶಾಸನಂ ಕಿಂ ಬಲೋತ್ಯಗಾಃ ॥
—ಭಾಗವತ-೭-೮-೬-೭.

**ಪ್ರಹ್ಲಾದ :** [ನಸುನಕ್ಕು] ರಾಜನ್ !ನಾನೇ ಜಗದೀಶ್ವರ, ತ್ರಿಲೋಕ ವಿಜಯಿ, ನನ್ನ ಪರಾಕ್ರಮಕ್ಕೆ ಎದುರಿಲ್ಲ ಎಂದು ಗರ್ವದಿಂದ ಮೆರೆಯುತ್ತಿದ್ದೆ ಯಲ್ಲವೆ ? ಇದೀಗ ಒಂದು ಪಕ್ಷಿಯನ್ನು ಕೊಲ್ಲಲಾಗದೆ ತಲೆತಗ್ಗಿಸಿ ನಿಂತುದನ್ನು ಆಗಲೇ ಮರೆತುಬಿಟ್ಟೆಯಾ ? ಆ ಪಕ್ಷಿಯಾರೆಂದು ತಿಳಿದೆ ? ಸಕಲ ಜೀವರಲ್ಲಿ ಅಂತರ್ಗತರಾಗಿದ್ದು ಶ್ರೀಹರಿಯ ಪ್ರೇರಣೆಯಂತೆ, ಸಂಕಲ್ಪದಂತೆ ಜಗತ್ಪ್ರಾಣರಾಗಿ ನಿಯಮನಗೊಳಿಸುವ ಸಾಕ್ಷಾತ್ ಮುಖ್ಯಪ್ರಾಣದೇವರು !! ಅವರ ಉಪದೇಶವನ್ನು ನಿರ್ಲಕ್ಷಿಸಿ ಅವರನ್ನೇ ಸಂಹರಿಸಲು ಉದ್ಯುಕ್ತನಾಗಿ ವಿಫಲನಾಗಿಯೂ ಈಗ ಮತ್ತೆ ನಿನಗಾರಬಲವೆಂದು ನನ್ನನ್ನು ಪ್ರಶ್ನಿಸುವೆಯಾ ?

ಕೇಳು ತಂದೆಯೇ ! ನನಗಾರಬಲವೆಂದು ಕೇಳಿದೆಯಲ್ಲವೇ ? ಸಾಮಾನ್ಯತೃಣ ದಿಂದ ಹಿಡಿದು ನಿನಗೆ ವರದಾನ ಮಾಡಿದ ಬ್ರಹ್ಮದೇವರ ಪರ್ಯಂತವಾಗಿ ಸಮಸ್ತ ಚರಾಚರ ಜಗತ್ತು ಯಾರವಶದಲ್ಲಿದೆಯೋ, ಅಂಥ ಬ್ರಹ್ಮಾದಿಗಳಿಗೆ ಇರುವುದೂ ಆ ಹರಿಯ ಒಂದೇ ಬಲ ! ಬಲಶಾಲಿಗಳಿಗೆಲ್ಲ ಬಲಪ್ರದವಾದ ಆ ಮಹಾಬಲದ ಮುಂದೆ ಮತ್ತಾವ ಬಲವೂ ನಿಲ್ಲಲಾರದು; ಜನಕ ! ಇಷ್ಟೇ ಅಲ್ಲ; ಯಾವಬಲದಿಂದ ನೀನು 'ಮಹಾಬಲಿ' ಎಂದು ತಿಳಿದಿರುವೆಯೋ, ನನ್ನ ಜೀವನವು ಅದೇ ಸರ್ವಶಕ್ತಿ ಮಾನ್ ನನ್ನ ಪ್ರಭು ಶ್ರೀಹರಿಯ ಬಲವನ್ನೇ ಅವಲಂಬಿಸಿದೆ ![1]

ಹಿರಣ್ಯಕಶ್ಯಪನಿಗೆ ಕೋಪವು ಮಿತಿಮೀರಿತು, ಅಸಮಾಧಾನ, ಕ್ರೋಧಗಳಿಂದ ಕಂಪಿಸುತ್ತಾ ಸಿಂಹಾಸನದಿಂದ ಇಳಿದುಬಂದು ಪ್ರಹ್ಲಾದನನ್ನು ಎಳೆಯುತ್ತಾ "ಹರಿ, ಹರಿ ! ಎಲ್ಲಿರುವನೋ ಆ ನಿನ್ನ ಹರಿ ? ನನ್ನ ಮಮತೆಯ ಸಹೋದರನನ್ನು ಸಂಹರಿಸಿದ ಆ ವಂಚಕನಲ್ಲಿರುವನೋ ?" ಎಂದಬ್ಬರಿಸಿದನು. ಮತ್ತೆ ಪ್ರಹ್ಲಾದ ನನ್ನು ನೋಡಿ ಅವನೇ ಹರಿಯೆಂದು ಭ್ರಮಿಸಿ ಅವನನ್ನು ಅತ್ತಿತ್ತ ತಳ್ಳಾಡುತ್ತಾ "ಹರಿ ! ಹರಿ ! ! ಸಿಕ್ಕಿದೆಯಾ ! ಈಗ ನನ್ನ ಕೈಯಿಂದ ಹೇಗೆ ತಪ್ಪಿಸಿಕೊಳ್ಳುವೆಯೋ ನೋಡುತ್ತೇನೆ" ಎಂದು ಹೇಳಿದನು.

ಆಗ ಪ್ರಹ್ಲಾದನು ಶಾಂತರೀತಿಯಿಂದಲೇ ತಂದೆಗೆ ಹೇಳಿದನು—"ಜನಕ ! ಹರಿಯ ದ್ವೇಷದಿಂದ ಮತ್ತನಾದ ನಿನಗೆ ಎಲ್ಲವೂ ಹರಿಮಯವಾಗಿಯೇ ಕಾಣುವುದು, ಸಹಜ ಅಪ್ಪಾ, ನಾನು ಶ್ರೀಹರಿಯಲ್ಲ. ಅವನ ದಾಸನಾದ ಪ್ರಹ್ಲಾದನು

**ಹಿರಣ್ಯ :** [ಎಚ್ಚೆತ್ತು] ನೀನು ಹರಿಯಲ್ಲವೇ ? ಹಾಗಾದರೆ ಆ ಮಾಯಾವಿ ಎಲ್ಲಿರುವನು, ಹೇಳು ?

---

1. ಪ್ರಹ್ಲಾದ ಉವಾಚ ॥ "ನ ಕೇವಲಂ ಮೇ ಭವತಶ್ಚ ರಾಜನ್ ಸವೈ ಬಲಂ ಬಲಿನಾಂಚಾ ಪರೇರೇಷಾಂ । ಪರಾವರೇಽಮೀ ಸ್ಥಿರಜಂಗಮಾ ಯೇ ಬ್ರಹ್ಮಾದಯೋ ಯೇನ ವಶಂ ಪ್ರಣೀತಾಃ ॥

—ಭಾಗವತ. ೭-೮-೮.

**ಪ್ರಹ್ಲಾದ :** ಜನಕ ! ಶ್ರೀಹರಿಯು ಎಲ್ಲಕಡೆಯಲ್ಲಿಯೂ ಇರುವನು. ಅವ ಲ್ಲದ ಸ್ಥಳವೇ ಇಲ್ಲ, ಅವನು ನನ್ನಲ್ಲಿರುವನು, ನಿನ್ನಲ್ಲಿಯೂ ಇರುವನು.

**ಹಿರಣ್ಯ :** ಹಾಂ, ನನ್ನಲ್ಲಿರುವನೇ ?

**ಪ್ರಹ್ಲಾದ :** ಅಹುದು ತಂದೆಯೇ, ಅವನು ಎಲ್ಲರಲ್ಲಿಯೂ ಇರುವನು.

ಹಿರಣ್ಯಕಶ್ಯಪನು ಗುರುಗಳಾದ ಶುಕ್ರಾಚಾರ್ಯರು ಹೇಳಿದಂತೆ ವರ್ತಿಸಿದರೆ ಎಲ್ಲಿ ದ್ದರೂ ಆ ಹರಿಯು ಪ್ರಹ್ಲಾದನನ್ನು ರಕ್ಷಿಸಲು ಬರುವವನು,ಆಗ ತಾನು ಅವನನ್ನು ಶುಲಿಭವಾಗಿ ನಾಶಪಡಿಸಬಹುದೆಂಬ ಸಂತಸದಿಂದ ಉಬ್ಬಿ—"ಪ್ರಹ್ಲಾದ ! ಆ ನಿನ್ನ ವಿಷ್ಣುವು ಎಲ್ಲಕಡೆ ಇರುವನೆಂದೆಯಲ್ಲವೇ ? ಅಜ್ಞಬಾಲಕ ! ನಿನ್ನನ್ನು ಈಗಲೇ ಸಂಹರಿಸುವೆನು ! ನಿನ್ನನ್ನು ಆ ನಿನ್ನ ಹರಿ ಹೇಗೆ "ರಕ್ಷಿಸುವನೋ ನೋಡುವೆನು" ಎಂದು ಪ್ರಹ್ಲಾದನನ್ನು ಸಂಹರಿಸಲು ಖಡ್ಗವನ್ನು ಮೇಲೆತ್ತಿದನು.

**ಪ್ರಹ್ಲಾದ :** . [ನಿರ್ಭೀತಿಯಿಂದ] ಭಕ್ತರ ಯೋಗಕ್ಷೇಮವನ್ನು ಸರ್ವದಾ ನಿರ್ವಹಿಸುತ್ತಿರುವ ಆ ನನ್ನ ಸ್ವಾಮಿಗೆ ಅಲ್ಪಶಕ್ತನಾದ ನಿನ್ನಿಂದ ನನ್ನನ್ನು ಕಾಪಾಡು ವುದೊಂದು ಮಹತ್ಕಾರ್ಯವಲ್ಲ ಅಪ್ಪಾ, ನನಗೆ ಜನ್ಮವಿತ್ತ ನಿನಗೆ ನನ್ನೀ ಶರೀರದ ಮೇಲೆ ಅಧಿಕಾರವಿದೆ. ನನ್ನ ಸಂಹಾರದಿಂದ ನಿನ್ನ ಹರಿದ್ವೇಷ ಶಾಂತವಾಗುತ್ತಿದ್ದರೆ- ಇಕೋ ನಿನ್ನ ಖಡ್ಗಕ್ಕೆ ನನ್ನ ಶಿರವು ಸಿದ್ಧವಾಗಿರುವುದು. (ಕರಜೋಡಿಸಿ) ಹರಿನಾರಾಯಣ. ಜಯನಾರಾಯಣ

**ಹಿರಣ್ಯ :** ಎಲ್ಲಿರುವನೋ ಆ ನಿನ್ನ ಹರಿ ? ಈ ಸಿಂಹಾಸನದಲ್ಲಿರುವನೇ ?

**ಪ್ರಹ್ಲಾದ :** ಇರುವನು ತಂದೆಯೆ !

**ಹಿರಣ್ಯ ;** [ಪ್ರಹ್ಲಾದನನ್ನು ಎಳೆದು] ಈ ಗೋಡೆಯಲ್ಲಿ ?

**ಪ್ರಹ್ಲಾದ :** ಅಲ್ಲಿಯೂ ಇರುವನು

**ಹಿರಣ್ಯ :** (ಭೂಮಿಯನ್ನು ಕಾಲಿನಿಂದಪ್ಪಳಿಸಿ) ಇಲ್ಲಿ ?

**ಪ್ರಹ್ಲಾದ :** (ದೃಢವಾಗಿ) ಇರುವನು

ಆಗ ಹಿರಣ್ಯಕಶ್ಯಪನು ಸಭೆಯಲ್ಲಿದ್ದ ಉಕ್ಕಿನ ಸ್ತಂಭವನ್ನು ತೋರಿ ಪ್ರಹ್ಲಾದ ಆ ಮಾಯಾವಿ, ನಿನ್ನ ಸ್ವಾಮಿ, ಹರಿಯು ಇಲ್ಲಿರುವನೇನು ?" ಎಂದಾರ್ಭಟಿಸಿದನು.

**ಪ್ರಹ್ಲಾದ :** ಜನಕ ಅವನಿರದ ಸ್ಥಳವೇ ಇಲ್ಲ, ಶ್ರೀಹರಿಯು ಆ ಸ್ತಂಭ ದಲ್ಲಿಯೂ ಇರುವನು

**ಹಿರಣ್ಯ :** ಎಲವೋ ಬಾಲಕ ನಿಜ, ನೀನೀಗ ಮರಣವನ್ನು ಬಯಸು ತ್ತಿರುವೆ. ಅಂತೆಯೇ ಹೀಗೆ ಅಸಂಬದ್ಧ ಪ್ರಲಾಪ ಮಾಡುತ್ತಿರುವೆ.[1] ಶ್ರೀನಾರಾಯ ಣನೇ ನಿನಗೆ ಬಲಪ್ರದನೆಂದು ಕೊಚ್ಚಿದೆಯಲ್ಲವೆ ?

---

1. ಹಿರಣ್ಯಕಶಿಪುರುವಾಚ—ವ್ಯಕ್ತಂ ತ್ವಂ ಮರ್ತುಕಾಮೋಸಿ ಯೋತಿಮಾತ್ರಂ ವಿಕತ್ಥಸೇ
—ಭಾಗವತ

ಅವನು ಸರ್ವತ್ರವ್ಯಾಪ್ತನಾಗಿದ್ದರೆ, ಈ ಸ್ತಂಭದಲ್ಲಿ ಏಕೆ ಕಾಣಿಸುತ್ತಿಲ್ಲ ?[1] ಬಾಯಿ ಬಡಕನಂತೆ ಬಡಬಡಿಸುವ ನಿನ್ನ ತಲೆಯನ್ನು ಈಗಲೇ ಕತ್ತರಿಸುವೆನು ! ಆ ಹರಿಯು ನಿನ್ನನ್ನು ಅದೆಂತು ರಕ್ಷಿಸುವನೋ ನೋಡುವೆನು ![2] ಹೀಗೆ ಕೆಟ್ಟಮಾತು ಗಳಿಂದ ಭಗವದ್ಭಕ್ತನಾದ ಪ್ರಹ್ಲಾದನನ್ನು ನಿಂದಿಸಿ, ಕಾಲಿಂದ ಒದ್ದು ಖಡ್ಗವನ್ನು ಎತ್ತಿಹಿಡಿದು ಸ್ತಂಭವನ್ನು ಮುಷ್ಟಿಯಿಂದ ಬಲವಾಗಿ ಗುದ್ದಿದನು.[3]

ಅದೇನಾಶ್ಚರ್ಯ ! ಕೂಡಲೇ ಆ ಸ್ತಂಭದಿಂದ ಅತ್ಯಂತ ಭಯಂಕರವಾದ ಶಬ್ದವೊಂದು ಕೇಳಿಬಂದಿತು. ಆ ಮಹಾನಾದವು ಅಖಂಡಬ್ರಹ್ಮಾಂಡಭಾಂಡವೇ ತುಂಡಾಗುತ್ತಿರುವುದೋ ಎಂಬಂತೆ ಅತಿ ಕಠೋರ ಪ್ರಚಂಡವಾಗಿದ್ದು ಸರ್ವರ ಗುಂಡಿಗೆಯನ್ನು ನಡುಗಿಸುವಂತಿತ್ತು. ಆ ಪ್ರಚಂಡ ಭಯಪ್ರದ ನಿನಾದವನ್ನಾಲಿಸಿ ರುದ್ರಾದಿ* ದೇವಸಂದೋಹವು ತಂತಮ್ಮ ಲೋಕನಾಶ ಮಾಡಲು ಅಕಾಲಪ್ರಳಯ ವೇನಾದರೂ ಸಂಭವಿಸುತ್ತಿರುವುದೋ ಎಂದೇ ಭಾವಿಸಿ ಭಯಗೊಂಡರು.[4] ನಿಜ ಸುತನ ಕೊಲ್ಲಲೆಣಿಸಿದ ಕ್ಷುಲ್ಲ ಹಿರಣ್ಯಕಶ್ಯಪನು ಬರಸಿಡಿಲೆರಗಿದಂತೆ ಘೋರವಾದ ಆ ಶಬ್ದವನ್ನಾಲಿಸಿ ಬೆಚ್ಚಿಬಿದ್ದು ಆ ನಿನಾದವೆತ್ತಕಡೆಯಿಂದ ಬರುತಿಪ್ಪುದೆಂದರಿಯಲೊಮ್ಮೆ ಸುತ್ತಲೂ ಪರಿಕಿಸಿದನು. ಎತ್ತನೋಡಿದರೂ ಆ ಭೀಕರ ನಿನಾದ ಬಂದ ತಾಣ ವರಿಯಲಾಗದೆ ದಿಗ್ಭ್ರಮೆಗೊಂಡು ನಿಂತನು. ಮೈ ನಡುಗಿಸುವ ಆ ಶಬ್ದದಿಂದ ದೈತ್ಯಸಾಮ್ರಾಟನ ಕಿಂಕರರಾದ ದಾನವವೀರರು ಭಯಗೊಂಡರು, ಅಂಬರದಲ್ಲಿ ಶಬ್ದವಾದರದು ಒಂದು ಚೇತನವನ್ನಾಶ್ರಯಿಸಿಯೇ ಬರಬೇಕಲ್ಲವೇ ? ಇದೇನಾಶ್ಚರ್ಯ ! ಚೇತನರಿಲ್ಲದಯೇ ನಿನಾದ ಬರುತ್ತಿದೆಯಲ್ಲ ! ಎಂದು

---

1. ಯಸ್ತ್ವಯಾ ಮಂದಭಾಗ್ಯೋಕ್ತೋ ಮದನ್ಯೋ ಜಗದೀಶ್ವರ. ।
ಕ್ವಾಸೌ ಯದಿ ಸ ಸರ್ವತ್ರ ಕಸ್ಮಾತ್ಸ್ತಂಭೇ ನ ದೃಶ್ಯತೇ?
2. ಸೋಽಹಂ ವಿಕತ್ಥಮಾನಸ್ಯ ಶಿರಃಕಾಯಾದ್ಧರಾಮಿ ತೇ ।
ಗೋಪಾಯೇತ ಹರಿಸ್ತ್ವಾದ್ಯ ಯಸ್ತೇ ಶರಣಮೀಪ್ಸಿತಃ ॥ —ಭಾಗವತ ೭-೮-೧೩-೧೪
3. ನಾರದ ಉವಾಚ—ಏವಂ ದುರುಕ್ತೈರ್ಮುಹುರರ್ದಯನ್ ರುಷಾ । ಸುತಂ ಮಹಾಭಾಗವತಂ ಮಹಾಸುರಃ। ಖಡ್ಗಂ ಪ್ರಗೃಹ್ಯೋತ್ಪತಿತೋ ವರಾಸನಾತ್ಸ್ತಂಭಂ ತತಾಡಾತಿಬಲಃ ಸ್ವಮುಷ್ಟಿನಾ ॥ ಭಾಗವತ ೭-೮-೧೫.

* ಅಜಾದಯಃ ಎಂಬಲ್ಲಿ ರುದ್ರಾದಿಗಳೆಂದು ಅರ್ಥಮಾಡಬೇಕು, ಏಕೆಂದರೆ ಬ್ರಹ್ಮದೇವರಿಗೆ ಭ್ರಾಂತಿಯಿಲ್ಲದ್ದರಿಂದ ಅಜಾದಯಃ ಎಂಬ ಪದಕ್ಕೆ ಅತದ್ಗುಣ ಸಂವಿಜ್ಞಾನ ಬಹುವ್ರೀಹಿಯಿಂದ ಬ್ರಹ್ಮದೇವರನ್ನು ಬಿಟ್ಟು ರುದ್ರಾದಿದೇವತೆಗಳೆಂದು ಅರ್ಥಮಾಡಬೇಕೆಂದು ಮಂದನಂದಿನೀಕಾರರು ಬರೆದಿದ್ದಾರೆ.

4. ತದೈವ ತಸ್ಮಿನ್ನಿನದೋತಿಭೀಷಣೋ ಬಭೂವ ಯೇನಾಂಡಕಟಾಹಮಸ್ಫುಟತ್ ।
ಯಂ ವೈ ಸ್ವಧಿಷ್ಣ್ಯೋಪಗತಂ ತ್ವಜಾದಯಃ। ಶ್ರುತ್ವಾ ಸ್ವಧಾಮಾತ್ಯಯಮಂಗ ಮೇನಿರೇ ॥
—ಭಾಗವತಿ ೭-೮-೧೬

ಹಿರಣ್ಯಕಶ್ಯಪನು ಯೋಚಿಸುತ್ತಿರುವಂತೆಯೇ ಆ ಸಭೆಯ ಸ್ತಂಭವನ್ನೊಡೆದುಕೊಂಡು ತನ್ನ ಅದ್ಭುತ ಆಕಾರದಿಂದ ಭಯಜನಕವಾದ ಒಂದು ಪ್ರಾಣಿಯು ಹೊರಬಂದಿತು!

ಅದು ಸಿಂಹವೂ ಅಲ್ಲ, ನರನೂ ಅಲ್ಲ ! ಇಂತು ನರ–ಮೃಗರೂಪವಾಗಿದೆ ಆ ವಿಚಿತ್ರಪ್ರಾಣಿ ! ನಿಜ,

"ಸತ್ಯಂ ವಿಧಾತುಂ ನಿಜಭೃತ್ಯಭಾಷಿತಂ ವ್ಯಾಪ್ತಿಂ ಚ ಭೂತ್ತೇಷ್ವಖಿಲೇಷು ಚಾತ್ಮನಃ।
ಅದೃಶ್ಯತಾತ್ಯದ್ಭುತರೂಪಮುದ್ವಹನ್ ಸ್ತಂಭೇ ಸಭಾಯಾಂ ನ ಮೃಗಂ ನ ಮಾನುಷಮ್ ॥"

–'ಶ್ರೀಹರಿಯು ಸರ್ವತ್ರವ್ಯಾಪ್ತನಾಗಿದ್ದಾನೆ. ಅವನು ನಮ್ಮೆಲ್ಲರ ರಕ್ಷಕನಾಗಿದ್ದಾನೆ' ಎಂದು ಏಕಾಂತ ಭಕ್ತಪ್ರಹ್ಲಾದನ ವಚನವು ಮತ್ತು ಬ್ರಹ್ಮನ ವರವು ಸತ್ಯವೆಂದು ತೋರಿಕೊಡಲು ಶ್ರೀಹರಿಯು ನರಹರಿರೂಪತಾಳಿ ಆ ದೈತ್ಯ ಸಭೆಯ ಸ್ತಂಭದಿಂದೊಡೆದು ಬಂದು ಸರ್ವರಿಗೂ ದೃಗ್ಗೋಚರನಾದನು.

ಹಿರಣ್ಯಕಶ್ಯಪನು ಆ ಘೋರರೂಪವನ್ನು ನೋಡಿ ವಿಸ್ಮಿತನಾಗಿ––

"ನಾಯಂ ಮೃಗೋ ನಾಪಿ ನರೋ ವಿಚಿತ್ರ
ಮಹೋ ಕಿಮೇತನ್ನೃಮಗೇಂದ್ರ ರೂಪಮ್॥"

"ಇದು ಸಿಂಹವೂ ಅಲ್ಲ, ಮನುಷ್ಯನೂ ಅಲ್ಲ, ವಿಚಿತ್ರವಾದ ನರಮೃಗೇಂದ್ರ ರೂಪಧಾರಿಯಾದ ಈ ಪ್ರಾಣಿಯು ಯಾರಾಗಿರಬಹುದು ?" ಎಂದು ಯೋಚಿಸುತ್ತಿರುವಂತೆಯೇ ಅವನ ಮುಂಭಾಗದಲ್ಲಿಯೇ ಆ ನರಸಿಂಹಾಕೃತಿಯು ಬಂದು ನಿಂತಿತು!

ಆ ಅಪೂರ್ವ ನರಸಿಂಹಾಕೃತಿಯು, ದರ್ಶನಮಾತ್ರದಿಂದ ಭಯಪ್ರದವಾಗಿದ್ದಿತು. ಕಾದಕಾಂಚನ (ಬಂಗಾರ)ದಂತೆ ಕೆಂಪಾದ ಕಣ್ಣುಗಳು, ಸುತ್ತಲೂ ಹರಡಿರುವ ಜಟಾಜೂಟಗಳ ಮಧ್ಯದಲ್ಲಿ ಭಯಂಕರವಾದ ತೆರೆದಬಾಯಿ, ಕ್ರೂರವಾದ ಕೋರೆ ಹಲ್ಲುಗಳು, ಮೊನಚಾದ ಕತ್ತಿಯ ಅಲಗಿನಂತೆ ಬಾಯಿಯಿಂದ ಹೊರಹೊಮ್ಮಿ ಹೊಯ್ದಾಡುತ್ತಿರುವ ನಾಲಿಗೆ, ಗಂಟುಹಾಕಿದ ಹುಬ್ಬುಗಳು, ನಿಗರಿನಿಂತ ಕಿವಿಗಳು, ಪರ್ವತಕಂದರಗಳಂತಿರುವ ಮೂಗಿನ ಹೊಳ್ಳೆಗಳು, ವಿಸ್ತಾರವಾದ ಕೋರೆದಂತಿರುವ ಫಾಲಪ್ರದೇಶ, (ಹಣೆ), ಮುಗಿಲೆತ್ತರದ ದೀರ್ಘದೇಹ, ತುಂಬಿದ ಕುತ್ತಿಗೆ, ಪುಷ್ಟವಾಗಿ ಉಬ್ಬಿದ ಎದೆ-ತೊಡೆಗಳು, ಸಿಂಹದ ನಡುವಿನಂತಿರುವ ಕಟಿಪ್ರದೇಶ !

ಶ್ರೀನರಸಿಂಹಸ್ವಾಮಿಯು ವಿವಿಧಾಲಂಕಾರಗಳಿಂದ ಕಂಗೊಳಿಸುತ್ತಿದ್ದನು. ವಿಸ್ತೃತೋರಸ್ಥಳದಿ ಕಂಗೊಳಿಪ ಶ್ರೀವತ್ಸ-ಕೌಸ್ತುಭಗಳಿಂದಲೂ, ಶ್ರೀರಮಾ ಲಾಲಿತ ಶ್ರೀತುಳಸೀ ಮುಕ್ತಾವಳೀ ಚಿತ್ರಾವಳೀ ಮಾಲೆಗಳಿಂದಲೂ, ಶ್ರೀಗಂಧ ಕಸ್ತೂರೀ ಲೇಪನ, ಹೀರಗಂಭೀರ ವಿದ್ಯುತ್ಪ್ರಭೆಯಂತೆಸೆವ ಕುಂಡಲೋದಾರ ಕೇಯೂರ ಕಂಕಣ ಅಂಗುಲೀಯಕ-ಹಾರಗಳಿಂದಧಿಕಭೂಷಣಗಳಿಂದುದ್ದೀಪಿಸುವ ಮಿಂಚಿನಿಂದುತ್ಫುಲ್ಲಚಂದ್ರ ಕಿರಣವರ್ಣ (ಹಾಲುಬೆಳದಿಂಗಳಿನಂತೆ ಶುಭ್ರವಾದ),ಪ್ರಭೆಯಿಂದ ಸ್ಫುರಿಸುವ ಶರೀರರೋಮಾವಳಿಯಿಂದಲೂ, ಮದಮತ್ತ ಶುಂಡಾಲತುಂಡ

ಪ್ರಕಾಂಡ ಭುಜಗಳಲ್ಲೊಪ್ಪುವ ಸಹಸ್ರಾಧಿಕ ಪ್ರಚಂಡಾಯುಧಗಳಿಂದುದ್ದೀಪಿತ ದೀಪ್ತಿಯಿಂ ಬೆಳಗುವ ನಖಗಳಿಂದಲೂ. ಚಕ್ರ ಶಂಖ-ಗದಾದಿ ಶ್ರೇಷ್ಠಾಯುಧಗಳಿಂದ ವಿದ್ರಾವಿತ ಕ್ಷುದ್ರ ರಾಕ್ಷಸ-ಪಿಶಾಚಾದ್ಯಸುರ ಸಂದೋಹದಿಂದ, ನಿತಂಬ ಸಾನು ಜಂಘಾಪ್ರದೇಶದವರೆಗೆ ಆವೃತವಾದ ಹೊಳೆವ ಪೀತಕೌಶೇಯವಾಸ [ವಸ್ತ್ರ]ಗಳಿಂ ಬೆಡಗುಗೊಂಡ. ಕಾಂಚೀದಾಮದಿಂ ಬದ್ಧ ಕಟಿಪ್ರದೇಶದಿಂದಲೂ, ಮಂಜುಳ ಮಂಜೀರದಿಂದೊಪ್ಪುವ ಪಾದಕಮಲಗಳಿಂದ ಕೋಟಿಮಾರ್ತಾಂಡ ಪ್ರಖರತೇಜಸ್ಸಿನಿಂದ ನೋಡಲಸದಳವಾದ ಜ್ವಾಲೆಯಂತತಿ ಭೀಕರಸ್ವರೂಪದ ಶ್ರೀನೃಸಿಂಹಾಕೃತಿಯನ್ನು ಕಂಡು ದೈತ್ಯೇಂದ್ರನು ನಿಬ್ಬೆರಗಾದನು.[1]

ಆಗ ಹಿರಣ್ಯಕಶಿಪುವು ಹೀಗೆ ಯೋಚಿಸಿದನು—"ಈ ನರಸಿಂಹ ಮೂರ್ತಿಯ್ದೇ ಬೇರಾರೂ ಅಲ್ಲ, ನನ್ನ ಸ್ವಾಭಾವಿಕ ಶತ್ರುವಾದ ನಾರಾಯಣನ ಅವತಾರನೇ ಆಗಿದ್ದಾನೆ ! ನಾನು ನನ್ನ ಪುತ್ರನಾದ ಪ್ರಹ್ಲಾದನನ್ನು ಸಂಹರಿಸಲುದ್ಯುಕ್ತನಾದ್ದರಿಂದ ಆ ಹರಿಯು ನನ್ನನ್ನು ಸಂಹರಿಸಲು ಬಂದಿರುವಂತಿದೆ ![2] ಗುರುದೇವನ ಆಣತಿಯಂತೆ ನಾನಾವ ಉದ್ದಿಶ್ಯದಿಂದ ಪ್ರಹ್ಲಾದನನ್ನು ಕೊಲ್ಲಲೆಣಿಸಿದೆನೊ ಅದೀಗ ಸಫಲವಾದಂತಾಯಿತು ! ಈಗ ಪ್ರಹ್ಲಾದನನ್ನು ಸಂಹರಿಸುವುದರಿಂದ ಪ್ರಯೋಜನವಿಲ್ಲ" ಹೀಗೆ ಚಿಂತಿಸುತ್ತ ಹಿರಣ್ಯಕಶ್ಯಪನು ಕರದಲ್ಲಿ ಭಯಂಕರ ಗದೆಯನ್ನು ಹಿಡಿದು ಅದನ್ನು ಬೀಸುತ್ತಾ ಆರ್ಭಟಿಸುತ್ತಾ ಶ್ರೀನೃಸಿಂಹದೇವರತ್ತ ಧಾವಿಸಿದನು, ದೀಪವು ತನ್ನ ಮೃತ್ಯುವೆಂದರಿಯದ ಪತಂಗವು ದೀಪಜ್ವಾಲೆಯಲ್ಲಿ ಬೀಳುವಂತೆ, ಆ ದೈತ್ಯಾಪಸದನು ಶ್ರೀನರಮೃಗೇಂದ್ರನ ಸಹಿಸಲಳವಲ್ಲದ ತೇಜೋಜ್ವಾಲೆಯಲ್ಲಿ ಬಿದ್ದನು![3]

---

1. ಮೀಮಾಂಸಮಾನಸ್ಯ ಸಮುತ್ಥಿತೋಗ್ರತೋ । ನೃಸಿಂಹರೂಪಸ್ತದಲಂ ಭಯಾನಕಂ।
ಪ್ರತಪ್ತಚಾಮೀಕರ ಚಂಡಲೋಚನಂ । ಸ್ಫುರತ್ಸಟಾಕೇಸರಜೃಂಭಿತಾನನಮ್ ॥೨೦॥
ಕರಾಲದಂಷ್ಟ್ರಂ ಕರವಾಲಚಂಚಲ । ಕ್ಷುರಾಂತಜಿಹ್ವಂ ಭ್ರುಕುಟೀ ಮುಖೋಲ್ಬಣಂ ।
ಸ್ತಬ್ಧೋರ್ಧ್ವಕರ್ಣಂ ಗಿರಿಕಂದರಾದ್ಭುತ । ವ್ಯಾತ್ತಾಸ್ಯನಾಸಂ ಹನುಭೇದಭೀಷಣಂ ॥
ದಿವಸ್ಪೃಶತ್ಕಾಯಮದೀರ್ಘಪೀವರ । ಗ್ರೀವೋರುವಕ್ಷಸ್ಥಲಮಲ್ಪಮಧ್ಯಮಂ ।
ಚಂದ್ರಾಂಶುಗೌರೈಃ ಸ್ಫುರಿತಂ ತನೂರುಹೈರ್ವಿಷ್ವದ್ಭುಜಾನೀಕಶತಂ ನಖಾಯುಧಂ
॥ ೨೨ ॥ ಭಾಗವತ.
2. ದುರಾಸದಂ ಸರ್ವನಿಜೇತರಾಯುಧಪ್ರವೇಕವಿದ್ರಾವಿತ ದೈತ್ಯದಾನವಂ ।
ಪ್ರಾಯೇಣ ಮೇಽಯಂ ಹರಿಣೋರುಮಾಯಿನಾ ವಧಃಸ್ಮೃತೋನೇನ
ಸಮುದ್ಯತೇ ನ ಕಿಮ್ ॥ ೨೩ ॥
3. ಏವಂ ಬ್ರುವಂಸ್ತ್ವಭ್ಯಪತದ್ಗದಾಯುಧೋ । ನದನ್ನೃಸಿಂಹಂ ಪ್ರತಿದೈತ್ಯಕುಂಜರಃ।
ಅಲಕ್ಷಿತೋಗ್ನೌ ಪತಿತಃ ಪತಂಗಮೋ। ಯಥಾ ನೃಸಿಂಹೌಜಸಿ ಸೋಽಸುರಸ್ತದಾ॥೨೪॥
—ಭಾಗವತ

ಆ ದೈತ್ಯನು ಮೇಲೇರಿಬರುತ್ತಿದ್ದರೂ ನರಹರಿಯು ಅವನ ಸಾಹಸೋದ್ಯಮವನ್ನು ಕ್ಷಣಕಾಲ ಉಪೇಕ್ಷೆಮಾಡಿದನು. ಪ್ರಪಂಚದ ಸೃಷ್ಟಿಯ ಮೊದಲು ಎಲ್ಲೆಡೆ ಆವರಿಸಿದ್ದ ತಮಸ್ಸನ್ನೇ ಪಾನಮಾಡಿದ ಜ್ಞಾನಾನಂದಪೂರ್ಣವಾದ ಪುರುಷ ರೂಪದ ಶ್ರೀ ಹರಿಗೆ ಅಲ್ಪನಾದ ಈ ಖೂಳದೈತ್ಯನನ್ನು ಸಂಹರಿಸುವುದೊಂದು ಮಹತ್ಕಾರ್ಯವೇ ?[1]

ಆಗ ಮಹಾದೈತ್ಯನಾದ ಹಿರಣ್ಯಕಶಿಪುವು ಅತಿರೋಷದಿಂದ ಅತಿವೇಗವಾದ ತನ್ನ ಗದೆಯಿಂದ ನರಸಿಂಹದೇವರನ್ನು ಹೊಡೆದನು.[2] ತನ್ನ ಮೇಲೆ ಬೀಳುತ್ತಿರುವ ಆ ದೈತ್ಯನನ್ನು ಗರುತ್ಮಂತನು ಸರ್ಪವನ್ನು ಹಿಡಿಯುವಂತೆ, ಗದಾಧಾರಿಯಾದ, ಗರುಡ ವಾಹನನಾದ ಆ ನೃಸಿಂಹದೇವನು ತನ್ನ ಕರೆಗಳಿಂದ ಹಿಚುಕಿದನು. ಹಿರಣ್ಯ ಕಶ್ಯಪನು ದೇವದೇವನ ಹಿಡಿತದಿಂದ ತಪ್ಪಿಸಿಕೊಂಡು ಪಾರಾಗಲು ಯತ್ನಿಸುತ್ತಿರುವಷ್ಟರಲ್ಲಿ, ಗರುಡನು ಹಾವಿನೊಡನೆ ಚೆಲ್ಲಾಟವಾಡುವಂತೆ ನೃಸಿಂಹಸ್ವಾಮಿಯು ಆ ದೈತ್ಯನನ್ನು ಮತ್ತೆ ಹಿಡಿದು ಕ್ರೀಡಿಸಿದನು.[3]

ಶ್ರೀಹರಿಯ ಹಸ್ತದಿಂದ ಮತ್ತೆಪಾರಾದ ದೈತ್ಯನು, ತಾನು ಮಹಾಪರಾಕ್ರಮಿಯೆಂದೂ, ತನ್ನ ಪೌರುಷಕ್ಕೆ ಹೆದರಿ ನರಹರಿಯು ತನ್ನನ್ನು ಬಿಟ್ಟುಬಿಟ್ಟನೆಂದೂ ಮೋಹಿತನಾದನು.[4] ಮೇಘಮಂಡಲದ ಮೇಲಿರುವ ವಿವಿಧಭಕ್ತರೂ ಲೋಕಪಾಲಕರೂ ಆದ ಶಿವ-ಶಕ್ರಾದಿ ದಿಕ್ಪಾಲಕ ಸಮೂಹವೂ ಮತ್ತು ಚಂದ್ರಸೂರ್ಯಾದಿ ಸರ್ವ ಗ್ರಹನಿಕರವೂ ಪರಮಾತ್ಮನ ಈ ವಿಡಂಬನದಿಂದ ಆ ಮರುಳ ಹಿರಣ್ಯಕನ ಶಕ್ತಿಯೇ ಅಧಿಕವಾದಂತಿದೆಯಲ್ಲಾ, ಆ ದೈತ್ಯನು ಮತ್ತೆ ನರಹರಿಯ ಹಿಡಿತಕ್ಕೆ ಸಿಕ್ಕುವನೋ ಇಲ್ಲವೋ ಎಂದು ಸಂಶಯಗೊಂಡರು.[5]

---

1. ನ ತದ್ವಿಚಿತ್ರಂ ಖಲು ಸತ್ತ್ವಧಾಮನಿ । ಸ್ವತೇಜಸಾ ಯೋನು ಪುರಾ ಪಿಬತ್ತಮಃ ॥
—ಭಾಗವತ

2. ತತೋಭಿಪದ್ಯಾಭ್ಯಹನ ನ್ಮಹಾಸುರೋ । ರುಷಾ ನೃಸಿಂಹಂ ಗದಯೋರುವೇಗಯಾ ।
—ಭಾಗವತ

3. ತಂವಿಕ್ರಮಂತಂ ಸಗದಂ ಗದಾಧರೋ ಮಹೋರಗಂ ತಾರ್ಕ್ಷ್ಯಸುತೋ ಯಥಾಗ್ರಹೀತ್ ।
ಸತತ್ಸ್ವಹಸ್ತೋತ್ಕಲಿತಸ್ತದಾಽಸುರೋ । ವಿಕ್ರೀಡಿತೋ ಯದ್ವದಹಿರ್ಗರುತ್ಮತಃ ॥೨೬॥

4. ಅಸಾಧ್ವಮನ್ಯಂತ ಹೃತೌಕಸೋಽಮರಾ । ಘನಚ್ಛದಾ ಭಾರತ ಸರ್ವಧಿಷ್ಣ್ಯಪಾಃ ।
ತಂ ಮನ್ಯಮಾನೋ ನಿಜವೀರ್ಯಶಂಕಿತಂ । ಯದ್ಧಸ್ತಮುಕ್ತೋ ನಹರಿಂ ಮಹಾಸುರಃ ॥

5. ಪುನಸ್ತಮಾಸಜ್ಜತಖಡ್ಗಚರ್ಮಣೀ । ಪ್ರಗೃಹ್ಯವೇಗೇನ ಜಿತಶ್ರಮೋಮೃಧೇ ॥ ೨೭ ॥
ತಂ ಶ್ಯೇನವೇಗಂ ಶತಚಂದ್ರವರ್ತ್ಮಭಿಃ । ಚರಂತಮಚ್ಛಿದ್ರಮುಪರ್ಯಧೋ ಹರಿಃ ।
ಕೃತ್ವಾಟ್ಟಹಾಸಂ ಖರಮುತ್ಸ್ವನೋಲ್ಬಣಂ । ನಿಮೀಲಿತಾಕ್ಷಂ ಜಗೃಹೇ ಮಹಾಜವಃ ॥ ೨೮ ॥

ಸ್ವಲ್ಪ ದೇಹಾಯಾಸವನ್ನು ಪರಿಹರಿಸಿಕೊಂಡು ದೈತ್ಯರಾಜನು ಬೇಗ ಕತ್ತಿ-ಗುರಾಣಿಗಳನ್ನು ಹಿಡಿದು ಭಗವಂತನೊಡನೆ ಯುದ್ಧಮಾಡಲು ಧಾವಿಸಿಬಂದನು. ಆಗ ನರಹರಿಯು ಶ್ಯೇನ (ಗಿಡುಗ) ಪಕ್ಷಿಯಂತೆ ರಭಸದಿಂದ ಕಣ್ಣುಮುಚ್ಚಿ ಅತ್ತಿಂದಿತ್ತ ಸಂಚರಿಸುತ್ತಾ ಮಹಾಧ್ವನಿಗೈಯುತ್ತಾ ಎಲ್ಲೆಡೆ ಸುತ್ತುತ್ತಿರುವಾಗ, ಖೂಳನಾದ ಹಿರಣ್ಯಕಶ್ಯಪನು ಬಂಧಿಸಲು ಹವಣಿಸುತ್ತಾ ವಜ್ರಾಘಾತದಿಂದ ಕ್ಷತನಾಗದೆ ಭ್ರಾಂತನಾಗಿರಲು ಶ್ರೀನೃಸಿಂಹದೇವನು, ಹುಲಿಯು ಇಲಿಯನ್ನು ಹಿಡಿಯುವಂತೆ ಕರಗಳಲ್ಲಿ ಬಿಗಿಯಾಗಿ ಹಿಡಿದು ಸಭಾಸ್ಥಾನದ ದ್ವಾರದ ಹೊಸ್ತಲಿನಲ್ಲಿ ತನ್ನ ತೊಡೆಯ ಮೇಲೆ ಕೆಡವಿಕೊಂಡು ಕುಳಿತು, ಹಿರಣ್ಯಕಶ್ಯಪನ ಉದರವನ್ನು ಗರುಡನು ವಿಷೋಲ್ಬಣ ಸರ್ಪವನ್ನು ಸೀಳುವಂತೆ ಲೀಲೆಯಿಂದಲೇ ತನ್ನ ನಖಾಯುಧಗಳಿಂದ ಬಗೆದನು.[1]

ಆಗ ಶ್ರೀನರಸಿಂಹದೇವನು ಕೋಪದಿಂದ ಕೆಂಪಾದ ಕರಾಳ ಕಣ್ಣುಗಳಿಂದ ಭಯಂಕರ ಸ್ವರೂಪನಾಗಿ ತನ್ನ ಉದ್ದವಾದ ನಾಲಿಗೆಯಿಂದ ಕೆಳದುಟಿಯನ್ನು ನೆಕ್ಕುತ್ತಾ ನೋಡಲತಿಭೀಕರನಾಗಿ ಕಾಣುತ್ತಿದ್ದನು. ಹಿರಣ್ಯಕಶ್ಯಪನ ರಕ್ತಮಜ್ಜಾ ರಸಗಳಿಂದ ಆ ದೇವನು ತನ್ನ ಕೆಂಪಾದ ಜಟೆಯನ್ನೂ, ಮುಖವನ್ನೂ ರಂಗೇರಿಸಿಕೊಂಡು ಮೃಗರಾಜನು ಮದಿಸಿದ ಗಜರಾಜನ ಕುಂಭಸ್ಥಳವನ್ನು ಸೀಳಿ ಸಂಹರಿಸಿ ಅದರ ಕರುಳುಗಳನ್ನು ಕೊರಳೊಳಗೆ ಮಾಲೆಯಂತೆ ಧರಿಸುವಂತೆ, ದೈತ್ಯಹಿರಣ್ಯಕನ ಕರುಳುಮಾಲೆಗಳನ್ನು ತನ್ನ ಕುತ್ತಿಗೆಯಲ್ಲಿ ಧರಿಸಿ ಮತ್ತೆ ತೀಕ್ಷ್ಣವಾದ ನಖರಗಳಿಂದ ಖೂಳನ ಹೃದಯಕಮಲವನ್ನು ಸೀಳಿಹಾಕಿದನು.[2]

ಇಂತು ಆ ದಾನವಾಂತಕನು ಲೋಕಕಂಟಕನಾದ ದೈತ್ಯಾಧಿಪನನ್ನು ಸಂಹಾರ ಮಾಡಿದ ಮೇಲೆ ದೈತ್ಯರಾಜನ ಅನುಚರರಾದ ದಾನವವೀರರು ತಮ್ಮ ಪ್ರಭುವು ಮೃತನಾದುದನ್ನು ಕಂಡು, ಆತನ ಶರೀರವನ್ನು ಅಲ್ಲಿಯೇ ಬಿಟ್ಟು ಶ್ರೀನೃಸಿಂಹದೇವನನ್ನು ನಾಲ್ಕೂ ದಿಕ್ಕಿನಿಂದ ಸುತ್ತುಗಟ್ಟಿ ದೇವದೇವನ ಮೇಲೆರಿಹೋದರು. ಆಗ ಜಗದೀಶನಾದ ಶ್ರೀನರಹರಿಯು ಆ ಎಲ್ಲ ದೈತ್ಯರನ್ನೂ ತನ್ನ ನಖಾಯುಧಗಳಿಂದ ಸಂಹರಿಸಿದನು.[3]

---

1. ವಿಷ್ವಕ್‌ಸ್ಫುರಂತಂ ಗ್ರಹಣಾತುರಂ ಹರಿ । ರ್ವ್ಯಾಲೋಯಥಾಖುಂ ಕುಲಿಶಾಕ್ಷತತ್ವಚಂ ॥
ದ್ವಾರ್ಯೂರ ಆಪಾತ್ಯ ದದಾರ ಲೀಲಯಾ । ನಖೈರ್ಯಥಾಹಿಂ ಗರುಡೋ
ಮಹಾವಿಷಮ್ ॥ —ಭಾಗವತ ೭-೮-೨೯

2. ಸಂರಂಭದುಷ್ಪ್ರೇಕ್ಷ್ಯಕರಾಲಲೋಚನೋ ವ್ಯಾತ್ತಾನನಾಂತಂ ವಿಲಿಹನ್ ಸ್ವಜಿಹ್ವಯಾ ।
ಅಸೃಗ್ಲವಾಕ್ತಾರುಣಕೇಸರಾನನೋ । ಯಥಾಂತ್ರಮಾಲೀ ದ್ವಿಪಹತ್ಯಯಾ ಹರಿಃ ॥೩೦॥
ನಖಾಂಕುರೋತ್ಪಾಟಿತಹೃತ್ಸರೋರುಹಂ ।

3. ವಿಸೃಜ್ಯ ತಸ್ಯಾನುಚರಾನುದಾಯುಧಾನ್ ॥ ಅಹನ್ ಸಮಂತಾನ್ನಖಶಸ್ತ್ರಪಾರ್ಷ್ಣಿಭಿಃ ।
ದೋರ್ದಂಡಯೂಥೋನುಪಥಾನ್ ಸಹಸ್ರಶಃ ॥ ೩೧ ॥

ಆ ಕಾಲವಲ್ಲಿ ಅತ್ಯಂತ ಕುಪಿತನಾದ ನರಸಿಂಹಸ್ವಾಮಿಯ ಆರ್ಭಟದಿಂದ ಸಕಲ ಜಗತ್ತೂ ತಲ್ಲಣಿಸಹತ್ತಿತು. ಶ್ರೀನರಸಿಂಹದೇವನ ಜಟೆಯು ವೇಗದಿಂದ ಮೇಘ ಸಮೂಹಗಳು ದಿಕ್ಕೆಟ್ಟು ಚೆದುರಿದವು. ಸೂರ್ಯಾದಿ ನವಗ್ರಹಗಳು ಭಗವಂತನ ನೇತ್ರಾಗ್ನಿಕಾಂತಿಯ ಜ್ವಾಲೆಯಿಂದ ಮಂಕಾದವು.ಕ್ರುದ್ಧನಾದ ಹರಿಯ ಉಸುರಿನಿಂದ ಸಮುದ್ರಗಳು ಅಲ್ಲೋಲಕಲ್ಲೋಲವಾದವು. ದಿಗ್ಗಜಗಳು ಆ ಜಗಜಟ್ಟಿಯ ಅಟ್ಟಹಾಸಪೂರ್ಣ ಹೂಂಕಾರದಿಂದ ದಿಕ್ಕಾಪಾಲಾಗಿ ಓಡಹತ್ತಿದವು.[1] ಶ್ರೀನೃಸಿಂಹ ಸ್ವಾಮಿಯ ಜಟಾಘಾತದಿಂತ, ಹಾರಿಬಂದ ವಿಮಾನಗಳಿಂದ ಆಗಸವು ತುಂಬಿ ಹೋಯಿತು. ಭೂಮಿಯು, ಸ್ವಾಮಿಯ ಚರಣಗಳ ಭಾರದ ಪೀಡೆಯಿಂದ ಕಡು ನೊಂದಿತು. ಪರಮಾತ್ಮನ ಪರಮರಭಸಭರದಿಂದ ಪರ್ವತಗಳು ಹಾರಿಹೋದವು. ನರಹರಿಯ ತೇಜಸ್ಸಿನಿಂದ ಆಕಾಶದಿಕ್ಕುಗಳು ಕಾಂತಿಹೀನವಾದವು.[2] ಇಂತು ಪರಾತ್ಪರನಾದ ಶ್ರೀನರಸಿಂಹದೇವನು ಹಿರಣ್ಯಕಶಿಪು ಮತ್ತು ಅವನ ಅನುಚರರಾದ ದೈತ್ಯ ನಾಯಕರುಗಳನ್ನು ಕೊಂದು ತನ್ನ ಅವಯುವ ವಿಶೇಷಗಳ ಪರಾಕ್ರಮವನ್ನು ತೋರಿ ಕೊಟ್ಟು ಸಭೆಯ ಉಚ್ಚಸ್ಥಾನದಲ್ಲಿ ವಿರಾಜಿಸಿದ್ದ ಸಿಂಹಾಸನದಲ್ಲಿ ಮಂಡಿಸಿದನು. ಆಗ ಆ ಪರಮಾತ್ಮನು ಅಭೂತಪೂರ್ವಶರೀರದಿಂದ ಭೈರವನೂ, ತೇಜಃಪುಂಜನೂ, ವಿಕಟ ಮುಖವಿರಾಜಿತನೂ, ಅಸಹ್ಯರೂಪನೂ (ಸಹಿಸಲಸದಳರೂಪನೂ), ಆಗಿದ್ದುದರಿಂದ ಈ ಧರಾತಲದಲ್ಲಿ ಅವನ ಸನಿಹಕ್ಕೆ ಹೋಗಲು ಯಾರೂ ಶಕ್ತರಾಗಲಿಲ್ಲ.[3]

ತ್ರಿಲೋಕಗಳಿಗೂ ಶಿರೋಜ್ವರ [ತಲೆನೋವಾಗಿದ್ದ]ವಾಗಿದ್ದ ಆದಿದೈತ್ಯನಾದ ಹಿರಣ್ಯಕಶ್ಯಪನು ಶ್ರೀನರಹರಿಯಿಂದ ಸಂಹೃತನಾದುದನ್ನು ಕೇಳಿ ಅಮರಾಂಗನೆಯರು ಆನಂದಾನಂದತುಂದಿಲರಾಗಿ ತಮ್ಮ ತಲೆಗಳನ್ನು ಮೇಲೆತ್ತಿ ಶ್ರೀ ನರಸಿಂಹದೇವರ ಮೇಲೆ ಪುಷ್ಪವೃಷ್ಟಿಯನ್ನು ಮಾಡಿದರು.[4]

---

1: ಸಟಾವಧೂತಾ ಜಲದಾಃ ಪರಾಪತನ್। ಗ್ರಹಾಶ್ಚ ತದ್ದೃಷ್ಟಿವಿಮುಷ್ಟರೋಚಿಷಃ। ಅಂಭೋಧಯಃ ಶ್ವಾಸಹತಾ ವಿಚುಕ್ಷುಭುಃ। ನಿರ್ಹ್ರಾದಭೀತಾ ದಿಗಿಭಾ ವಿಚುಕ್ರುಶುಃ ॥ ೩೨ ॥
—ಭಾಗವತ

2. ದ್ಯೌಸ್ತತ್ಸಟೋತ್ಕ್ಷಿಪ್ತವಿಮಾನಸಂಕುಲಾ । ಪ್ರೋತ್ಸರ್ಪತ ಕ್ಷ್ಮಾ ಚ ಪದಾತಿಪೀಡಿತಾ । ಶೈಲಾಃ ಸಮುತ್ಪೇತುರಮುಷ್ಯ ರಂಹಸಾ । ತತ್ತೇಜಸಾ ಖಂ ಕಕುಭೋ ನ ರೇಜಿರೇ ॥೩೩॥

3. ತತಸ್ಸಭಾಯಾಮುಪವಿಷ್ಟಮುತ್ತಮೇ । ನೃಪಾಸನೇ ಸಂಭೃತತೇಜಸಂ ವಿಭುಮ್ ॥ ಅಲಕ್ಷಿತದ್ವೈರಥ ಮತ್ಯಮರ್ಷಣಂ ಪ್ರಚಂಡವಕ್ತ್ರಂ ನ ಬಭಾಜ ಕಶ್ಚನ ॥ ೩೪ ॥

4. ನಿಶಮ್ಯ ಲೋಕತ್ರಯಮಸ್ತಕಜ್ವರಂ ತಮಾದಿದೈತ್ಯಂ ಹರಿಣಾ ಹತಂ ಮೃಧೇ ॥ ಸಹರ್ಷವೇಗೋತ್ಕಲಿತಾನನಾ ಮುಹುಃ ಪ್ರಸೂನವರ್ಷೈರ್ವವೃಷುಃ ಸುರಸ್ತ್ರಿಯಃ ॥೩೫॥

ಆಗ ಅಮರನಿಕರರು ಕುತೂಹಲದಿಂದ ವಿಮಾನಾರೂಢರಾಗಿ ಬಂದು ಶ್ರೀನರಹರಿಯ ಮಹಿಮಾತಿಶಯವನ್ನು ಕಾಣಲು ಅಂಬರದಲ್ಲಿ ತುಂಬಿ ನಿಂತರು.[1]

ಆಗ ಅಮರ ಲೋಕದ ಆನಕದುಂದುಭಿಗಳು ದೈತ್ಯನ ಮರಣದಿಂದಾದ ಹರ್ಷದಿಂದ ಸ್ವಯಂಧ್ವನಿಸಿದವು, ಗಂಧರ್ವರು ಗಾನಮಾಡಿದರು. ಅಪ್ಸರೆಯರು ನರ್ತಿಸಿದರು[2] ದೇವತೆಗಳ ಪುಷ್ಪವೃಷ್ಟಿ, ಗಾನ-ನರ್ತನಾದಿಗಳಿಂದ ನರಹರಿಯು ಪ್ರೀತನಾಗಿ ಉಗ್ರರೂಪವನ್ನು ಸ್ವಲ್ಪಶಾಂತಗೊಳಿಸಿದನು.

## ೧೯. ಬ್ರಹ್ಮಾದಿದೇವತೆಗಳ ಸ್ತೋತ್ರ

ಆಗ ಬ್ರಹ್ಮ-ರುದ್ರೇಂದ್ರಾದಿದೇವತೆಗಳು ಋಷಿ-ಪಿತೃ-ಸಿದ್ಧ-ವಿದ್ಯಾಧರ-ಮಹೋರಗ-ಮನು-ಪ್ರಜಾಪತಿ-ಗಂಧರ್ವ-ಅಪ್ಸರಸ್ತ್ರೀಯರು ಚಾರಣ-ಯಕ್ಷ-ಕಿಂಪುರುಷ, ವೇತಾಳ-ಕಿನ್ನರರು-ಹಾಗೂ ವಿಷ್ಣುಪಾರ್ಷದರಾದ ಸುನಂದ ಕುಮುದಾದಿಗಳು ಶ್ರೀನರಹರಿಯನ್ನು ಬೇರೆ ಬೇರೆಯಾಗಿ ಸ್ತೋತ್ರ ಮಾಡಹತ್ತಿದರು.[3]

**ಬ್ರಹ್ಮದೇವರು :**

ನತೋಽಸ್ಮ್ಯನಂತಾಯ ದುರಂತಶಕ್ತಯೇ । ವಿಚಿತ್ರವೀರ್ಯಾಯ ಪವಿತ್ರಕರ್ಮಣೇ ।
ವಿಶ್ವಸ್ಯ ಸರ್ಗಸ್ಥಿತಿಸಂಯಮಾನ್ಗುಣೈಃ । ಸಲೀಲಯಾ ಸಂದಧತೇಽವ್ಯಯಾತ್ಮನೇ ॥

ಶ್ರೀನರಸಿಂಹದೇವ, ನೀನು ದುರಂತಜ್ಞಾನಬಲಾದಿ ಶಕ್ತಿಯುಳ್ಳವನು, ವಿಚಿತ್ರ ವೀರ್ಯನು, ಸುಜನ ವೃಂದವನ್ನು ಪಾವನಗೊಳಿಸುವವನು. ಆಯಾಸವಿಲ್ಲದೆ ಜಗತ್ತಿಗೆ ಸೃಷ್ಟಿ-ಸ್ಥಿತಿ-ಸಂಹಾರಗಳನ್ನು ತಂದುಕೊಡುವವನು. ನಿತ್ಯವಾದ ಜ್ಞಾನಾನಂದ ಶರೀರನಾಗಿರುವೆ. ನಿನಗೆ ನಾನು ಸದಾ ಪ್ರಣತನಾಗಿದ್ದೇನೆ.

**ರುದ್ರದೇವರು ;**

ಕೋಪಕಾಲೋ ಯುಗಾಂತಸ್ತೇ । ಹತೋಽಯಮಸುರೋಽಲ್ಪಕಃ ।
ತತ್ಸುತಂ ಪಾಹ್ಯುಪಸೃತಂ । ಭಕ್ತಂ ತೇ ಭಕ್ತವತ್ಸಲ ॥

ಪ್ರಭು ! ಸಹಸ್ರಯುಗಾಂತಕಾಲದ ಪ್ರಳಯ ಕಾಲದಲ್ಲಿ ನೀನಿಂತು ಕೋಪ

---

1. ತದಾ ವಿಮಾನಾವಲಿಭಿರ್ನಭಸ್ಥಲಂ ದಿದೃಕ್ಷತಾಂ ಸಂಕುಲಮಾಸ ನಾಕಿನಾಂ ॥ —ಭಾಗವತ

2. ಸುರಾನಕಾ ದುಂದುಭಯೋಽಥ ಜಘ್ನಿರೇ। ಗಂಧರ್ವಮುಖ್ಯಾ ನನೃತುರ್ಜಗುಸ್ತ್ರಿಯಃ॥

3. ತತ್ರೋಪವ್ರಜ್ಯ ವಿಬುಧಾ । ಬ್ರಹ್ಮೇಂದ್ರಗಿರಿಶಾದಯಃ ॥
ಈಡಿರೇ ನರಶಾರ್ದೂಲಂ । ನಾತಿದೂರಚರಾಃ ಪೃಥಕ್ ॥ —ಭಾಗವತ

ಗೊಳ್ಳುವುದು ಯುಕ್ತವಾಗಿದೆ. ಅಲ್ಪನೂ ಕ್ಷುದ್ರನೂ ಆದ ದೈತ್ಯನನ್ನು ವಧಿಸಲು ಇಷ್ಟು ಕೋಪವು ತರವೇ ಪರಾತ್ಪರ ? ಈಗ ಆ ದೈತ್ಯನೂ ನಿನ್ನಿಂದ ಮೃತನಾಗಿದ್ದಾನೆ. ಭಕ್ತವತ್ಸಲ, ನಿನ್ನ ಈ ಕೋಪವನ್ನು ಉಪಶಮಿಸಿ ನಿನಗೆ ಶರಣಾಗತನಾಗಿರುವ ಏಕಾಂತ ಭಕ್ತನಾದ ಪ್ರಹ್ಲಾದನನ್ನು ಕಾಪಾಡು.

ಅನಂತರ ಇಂದ್ರಾದಿದೇವತೆಗಳೆಲ್ಲರೂ ಶ್ರೀನರಹರಿಯನ್ನು ವಿವಿಧರೀತಿಯಿಂದ ಸ್ತೋತ್ರ ಮಾಡಿದರು. ಆದರೂ ಜಗದೀಶನ ಕೋಪವು ಇಳಿಯಲಿಲ್ಲ.[1] ಆಗ ದೇವತೆಗಳು ಭಗವಂತನ ಕೋಪಶಮನ ಮಾಡುವಂತೆ ಶ್ರೀಲಕ್ಷ್ಮೀದೇವಿಯನ್ನು ಪ್ರಾರ್ಥಿಸಿದರು, ರಮಾದೇವಿಯು ಹರಿಯ ನೂತನ ರೂಪವನ್ನು ಕಂಡು ಹೆದರಿದವಳಂತೆ ನಟಿಸಿದಳು. ಸರ್ವಜ್ಞಳಾದ ಆ ಲೋಕಮಾತೆಯು ಭಗವಂತನ ಕೋಪಶಮನ ಮಾಡಿದ ಕೀರ್ತಿಯು ಪ್ರಹ್ಲಾದನಿಗೆ ಬರಬೇಕೆಂದು ಬಯಸಿ ಸುಮ್ಮನೇ ನಿಂತಳು.

ಆಗ ಬ್ರಹ್ಮದೇವರು ಪ್ರಹ್ಲಾದನನ್ನು ಕರೆದು "ವತ್ಸ ! ನಿನ್ನ ತಂದೆಯ ಸಂಹಾರಕ್ಕಾಗಿ ತಳೆದ ಕೋಪ-ಉಗ್ರಸ್ವರೂಪವನ್ನು ಶಾಂತಗೊಳಿಸಬೇಕೆಂದು ಶ್ರೀಹರಿಯನ್ನು ಪ್ರಾರ್ಥಿಸು" ಎಂದಾಜ್ಞಾಪಿಸಿದರು. ಭಗವಂತನ ಭಕ್ತವಾತ್ಸಲ್ಯ ಜಗತ್ತಿಗೆ ಪ್ರಕಟವಾಗಬೇಕೆಂಬುದೇ ಶ್ರೀಹರಿ-ಲಕ್ಷ್ಮೀದೇವಿಯ ಇಚ್ಛೆಯೆಂದರಿತಿದ್ದ ಬ್ರಹ್ಮದೇವರು ಭಾಗವತಾಗ್ರಣಿ ಪ್ರಹ್ಲಾದರನ್ನು ಮುಂದೆ ಮಾಡಿದರು.[2] ಬ್ರಹ್ಮದೇವರ ಅಪ್ಪಣೆಯಂತೆ ಪ್ರಹ್ಲಾದರು ಮೆಲ್ಲನೆ ಶ್ರೀನರಹರಿಯ ಬಳಿಗೆ ಬಂದು ಶ್ರೀಹರಿಗೆ ದಂಡಪ್ರಣಾಮ ಮಾಡಿದರು.[3]

ಶ್ರೀನೃಸಿಂಹದೇವರು ತಮ್ಮ ಪಾದಕಮಲದಡಿಯಲ್ಲಿ ಭಕ್ತ್ಯತಿಶಯದಿಂದ ನಮಸ್ಕರಿಸಿ ಬಿದ್ದಿರುವ ಪ್ರಹ್ಲಾದನನ್ನು ಕಾರುಣ್ಯದಿಂದ ಮೇಲೆಬ್ಬಿಸಿ ತೊಡೆಯ ಮೇಲೆಕೂಡಿಸಿಕೊಂಡು ಪ್ರೇಮದಿಂದ ಅವನ ಮೇಲೆ ಕೈಯಾಡಿಸಿ ತಾಯಿಯಂತೆ ಆಲಂಗಿಸಿ ಶಿರಸ್ಸನ್ನಾಘ್ರಾಣಿಸಿ, ನಂತರ ಅವನ ಶಿರದಲ್ಲಿ ಅಭಯಪ್ರದ ಅಮೃತಕರವನ್ನಿರಿಸಿದರು.[4]

---

1. ಭಗವಂತನ ಕ್ರೋಧವು ಜ್ವಲಿಸುವಂತಹುದಲ್ಲ. ಅದು ಶತ್ರುಗಳಿಗೆ ಅಪಕಾರವೆನ್ನಿಸಿ ಜನರಿಗೆ ಭಯಜನಕವಾಗಿದ್ದು ಜ್ಞಾನಾನಂದಾತ್ಮಕವಾಗಿರುವುದೆಂದು ತಿಳಿಯಬೇಕು ಎಂದು "ಮಂದನಂದಿನೀ" ವ್ಯಾಖ್ಯಾನಕಾರರ ಅಭಿಪ್ರಾಯ,
2. ಪ್ರಹ್ಲಾದಂ ಪ್ರೇಷಯಾಮಾಸ ಬ್ರಹ್ಮಾವಸ್ಥಿತಮಂತಿಕೇ । ತಾತ ಪ್ರಶಮಯೋಪೇಹಿ ಸ್ವಪಿತ್ರೇ ಕುಪಿತಂ ಪ್ರಭುಂ ॥ —ಭಾಗವತ
3. ತಥೇತಿ ಶನಕೈ ರಾಜನ್ ಮಹಾಭಾಗವತೋಽರ್ಭಕಃ ।
ಉಪೇತ್ಯ ಭುವಿ ಕಾಯೇನ ನನಾಮ ವಿಧೃತಾಂಜಲಿಃ ॥ —ಭಾಗವತ
4. ಸ್ವಪಾದಮೂಲೇ ಪತಿತಂ ತಮರ್ಭಕಂ । ವಿಲೋಕ್ಯ ದೇವಃ ಕೃಪಯಾ ಪರಿಪ್ಲುತಃ ॥
ಉತ್ಥಾಪ್ಯ ತಚ್ಛೀರ್ಷ್ಣ್ಯದಧತ್ಕರಾಂಬುಜಂ। ಕಾಲಾಹಿವಿತ್ರಸ್ತಧಿಯಾಂ ಕೃತಾಭಯಂ
— ಭಾಗವತ

## ೨೦. ಪ್ರಹ್ಲಾದರಾಜರ ಸ್ತೋತ್ರ

ಪರಮಮಂಗಳಮೂರ್ತಿಯಾದ ಪರಮಾತ್ಮನ ಅಮೃತಮಯಸ್ಪರ್ಶದಿಂದ ಪ್ರಹ್ಲಾದರ ಸಕಲದುರಿತಗಳೂ ಪರಿಹೋದವು. ಹರಿಯನುಗ್ರಹದಿಂದ ಕೂಡಲೇ ಪರಮಾತ್ಮನ ಜ್ಞಾನವು ಅಭಿವ್ಯಕ್ತವಾಗಿ ಪರಮಾನಂದ ತುಂದಿಲರಾದ ಪ್ರಹ್ಲಾದ ರಾಜರ ಕಣ್ಣುಗಳಿಂದ ಆನಂದಬಾಷ್ಪ ಹರಿಯತೊಡಗಿತು. ಶರೀರವು ರೋಮಾಂಚನ ಪುಳಕಿತವಾಯಿತು. ಆಗ ಪ್ರಹ್ಲಾದರು ಭಕ್ತ್ಯುದ್ರೇಕದಿಂದ ನೃಸಿಂಹದೇವರ ಪಾದ ಕಮಲಗಳನ್ನು ಧ್ಯಾನಿಸುತ್ತಾ, ಸ್ವರೂಪಾನಂದವನ್ನು ಅನುಭವಿಸುತ್ತಾ ಪ್ರೇಮ ಗದ್ಗದಕಂಠದಿಂದ ಶ್ರೀಹರಿಯನ್ನು ಏಕಾಗ್ರಚಿತ್ತದಿಂದ ಸ್ತೋತ್ರಮಾಡಲಾರಂಭಿಸಿದರು.[1]

**ಪ್ರಹ್ಲಾದ :** ದೇವಾಧಿದೇವ !

**ಬ್ರಹ್ಮಾದಯಸ್ಸುರಗಣಾ ಮುನಯೋಽಥ ಸಿದ್ಧಾಃ**
**ಸತ್ವೈಕತಾನ ಮತಯೋ ವಚಸಾಂ ಪ್ರವಾಹೈಃ ।**
**ನಾಂತಂ ಪರಸ್ಯ ಪರತೋಽಪ್ಯಧುನಾಪಿ ಯಾಂತಿ**
**ಕಿಂ ತೋಷ್ಟುಮರ್ಹತಿ ಸ ಮೇ ಹರಿರುಗ್ರಜಾತೇಃ ॥**

ವಿರಿಂಚಿ-ಹರಾದ್ಯಮರೋತ್ತಮರೂ, ವಸಿಷ್ಠಾದಿಮಹರ್ಷಿಗಳೂ, ಸಿದ್ಧರೂ, ಶ್ರೀಹರಿಯೊಬ್ಬನೇ ಬಲ-ಜ್ಞಾನ, ಆನಂದಾದ್ಯಭಿವ್ಯಕ್ತಿಯುಳ್ಳವನೇ ಹೊರತು ಮತ್ತೊಬ್ಬರಾರೂ ಅಲ್ಲವೆಂದು ನಿಶ್ಚಿತಮತಿಗಳಾಗಿ ಉತ್ಕೃಷ್ಟ ವೇದವಚನಗಳಿಂದ ವಿಧವಿಧವಾಗಿ ಸ್ತುತಿಸಿದರೂ ಅದ್ಯಾಪಿ ಪ್ರಕೃತ್ಯತೀತನಾದ ಭಗವಂತನ (ನಿನ್ನ) ಮಹಿಮೆಯು ಇಷ್ಟೆಂದು ತಿಳಿಯಲು ಅಸಮರ್ಥರಾಗಿರುವಾಗ, ಉಗ್ರಜಾತಿಯವನಾದ ಅಂದರೆ ಅಸುರಕುಲದಲ್ಲಿ ಜನಿಸಿದ ನಾನು, ಶತ್ರುಸಂಹಾರಕನೂ, ಇಷ್ಟಾರ್ಥದಾಯಕನೂ ಆದ ಶ್ರೀಹರಿಯನ್ನು (ನಿನ್ನನ್ನು) ಸ್ತುತಿಸಲು ಶಕ್ತನಾದೇನೇ ?

ಮನ್ಯೇ ಧನಾಭಿಜನರೂಪತಃ ಶ್ರುತೌಜ-
ಸ್ತೇಜಃ ಪ್ರಭಾವಬಲಪೌರುಷಬುದ್ಧಿಯೋಗಾಃ ।
ನಾರಾಧನಾಯ ಹಿ ಭವಂತಿ ಪರಸ್ಯ ಪುಂಸೋ
ಭಕ್ತ್ಯಾ ತುತೋಷ ಭಗವಾನ್ಗಜಯೂಥಪಾಯ ॥

---

1. ಸತತ್ಕರಸ್ಪರ್ಶಧುತಾಖಿಲಾಶುಭಃ । ಸಪದ್ಯಭಿವ್ಯಕ್ತಪರಾತ್ಮದರ್ಶನಃ
ತತ್ಪಾದಪದ್ಮಂ ಹೃದಿನಿರ್ವೃತೋ ದಧೌ । ಹೃಷ್ಯತ್ತನುಃ ಕ್ಲಿನ್ನಹೃದಶ್ರುಲೋಚನಃ
ಅಸ್ತೌಷೀದ್ಧರಿಮೇಕಾಗ್ರಮನಸಾ ಸುಸಮಾಹಿತಃ । ಪ್ರೇಮಗದ್ಗದಯಾ ವಾಚಾ ತನ್ನ್ಯಸ್ತಹೃದಯೇಕ್ಷಣಃ ॥ —ಭಾಗವತ

ದೇವ ! ಸಿರಿಸಂಪತ್ತು, ಸತ್ಕುಲದಲ್ಲಿ ಹುಟ್ಟುವಿಕೆ. ಧಾರಣಶಕ್ತಿ, ಬ್ರಹ್ಮ ವರ್ಚಸ್ಸು, ಉದಾರವಾದ ಮನಸ್ಸು, ಶಾರೀರಕಬಲ, ಪರಾಕ್ರಮ, ಏಕಾಗ್ರಚಿತ್ತ ವಿರುವುದು, ಧ್ಯಾನ—ಇವು ಯಾವುದೂ ನಿನ್ನನ್ನು ಒಲಿಸಿಕೊಂಡು ನಿನ್ನ ಅನುಗ್ರಹ ವನ್ನು ದೊರಕಿಸಿಕೊಡಲು ಸಮರ್ಥವಾಗಲಾರದು ! ಸ್ವಾಮಿ, ನೀನು ಭಕ್ತಿಯಿಂದಲೇ ತೃಪ್ತನಾಗುತ್ತೀಯೆ. ಗಜೇಂದ್ರನ ಭಕ್ತಿಯಿಂದಲ್ಲವೇ ನೀನವನಿಗೆ ಪ್ರಸನ್ನನಾಗಿ ಮೋಕ್ಷವನ್ನು ಕರುಣಿಸಿದಿ ? ಆದುದರಿಂದ ಶ್ರೀಹರಿಯೇ, ನಿನ್ನನ್ನು ಭಕ್ತಿಯಿಂದ ಒಲಿಸಿಕೊಳ್ಳಬೇಕಲ್ಲದೆ, ಬೇರೆಮಾರ್ಗವಿಲ್ಲ. ಓಂದೆ ಹೇಳಿದಂತೆ ಸಿರಿಸಂಪಾದಾದಿಗಳೆಲ್ಲ ವನ್ನೂ ನಿನಗೆ ಭಕ್ತಿಯಿಂದ ಸಮರ್ಪಿಸಿ ನಿನ್ನನ್ನು ಸಂತೋಷಪಡಿಸಬಹುದೆಂದು ನಾನು ನಂಬಿದ್ದೇನೆ.

ಸ್ವಾಮಿ, ಬ್ರಾಹ್ಮಣನು ಸತ್ಯ ಧರ್ಮಾದಿ ದ್ವಾದಶಗುಣಯುಕ್ತನಾಗಿದ್ದರೂ ಪರಾತ್ಪರನಾದ ನಿನ್ನಲ್ಲಿ ಭಕ್ತಿರಹಿತನಾಗಿದ್ದಲ್ಲಿ ಅಂಥ ಬ್ರಾಹ್ಮಣನಕಿಂತಲೂ ತ್ರಿಕರಣ ಪೂರ್ವಕವಾಗಿ ನಿನ್ನಲ್ಲಿ ಭಕ್ತಿಶ್ರದ್ಧೆಗಳನ್ನಿಟ್ಟಿರುವ ಚಂಡಾಲನೇ ಉತ್ತಮ ನೆಂದು ನಾನು ಭಾವಿಸುವೆನು. ಅಂಥವನು ಅವರ ಕುಲವನ್ನೇ ಪಾವನಗೊಳಿಸುವನು. ಭಕ್ತವತ್ಸಲನಾದ ನೀನು ಭಕ್ತಜನರ ಉದ್ಧಾರಕ್ಕಾಗಿಯೇ ಅವರ ಸೇವೆಯನ್ನು ಸ್ವೀಕರಿಸುವೆಯಲ್ಲದೆ ಅದರಿಂದ ನಿನಗೇನೂ ಆಗಬೇಕಾಗಿಲ್ಲ. ಈಗ ನೀನು. ತನ್ನ ಸ್ವಾರ್ಥತೆಯಿಂದ ತ್ರಿಲೋಕೇಶ್ವರನಾದ ನಿನ್ನಲ್ಲಿ ದ್ವೇಷಮಾಡಿ, ಲೋಕಕಂಟಕ ನಾಗಿದ್ದ ನನ್ನ ತಂದೆಯನ್ನು ಸಂಹರಿಸಿರುವೆ. ಆದ್ದರಿಂದ ದೇವ ! ನಿನ್ನ ಕೋಪವನ್ನು ಉಪಸಂಹರಿಸು ಸ್ವಾಮಿ, ದುಷ್ಟ ಜಂತುಗಳಾದ ಚೇಳು, ಹಾವುಗಳನ್ನು ಕೊಂದರೆ ಆನಂದವಾಗುವಂತೆ ಅಹಿಂಸಾಪ್ರಿಯರಾದರೂ ಸಜ್ಜನರಿಗೆ ಈ ದೈತ್ಯನ ಸಂಹಾರ ದಿಂದ ಆನಂದವಾಗುವುದು. ಎಲ್ಲ ಸಜ್ಜನರೂ ಹರ್ಷದಿಂದ ತಂತಮ್ಮ ಮನೆಗಳಿಗೆ ಹೋಗಲಿ. ಶ್ರೀನೃಸಿಂಹದೇವ ! ನಿನ್ನೀರೂಪವನ್ನು ಸಕಲರೂ ಪಾಪಪರಿಹಾರ ಮತ್ತು ಐಶ್ವರ್ಯ ಪ್ರಾಪ್ತಿಗಾಗಿ ಧ್ಯಾನಿಸುವರು.[1]

ನಾಹಂ ಬಿಭೇಮ್ಯಜಿತ ತೇತಿ ಭಯಾನಕಸ್ಯ
ಜಿಹ್ವಾಗ್ನಿ ನೇತ್ರಭ್ರುಕುಟೀರಭಸೋಗ್ರ ದಂಷ್ಟ್ರಾತ್
ಆಂತಸ್ರಜಃ ಕ್ಷತಜ ಕೇಸರ ಶಂಕುಕರ್ಣಾತ್
ನಿರ್ಹ್ರಾದಭೀತದಿಗಿಭಾದರಿಭಿನ್ನಖಾಗ್ರಾತ್ ॥ ೧೫ ॥

ಹೇ ಅಜಿತ, ನಿನ್ನ ಈ ಭಯಂಕರ ರೂಪವನ್ನು ಕಂಡು ನಾನು ಭೀತನಾಗಿಲ್ಲ. ಸ್ವಾಮಿ ! ಕೆಂಡವನ್ನು ಕಾರುವ ಕಣ್ಣುಗಳು, ನಿನ್ನ ಭ್ರುಕುಟಿ, ಉಗ್ರದಂಷ್ಟ್ರಗಳು.

---

1. ತದ್ಯಚ್ಛಮನ್ಯುಮಸುರಶ್ಚ ಹತಸ್ತ್ವಯಾದ್ಯ । ಮೋದೇತ ಸಾಧುರಪಿ ವೃಶ್ಚಿಕಸರ್ಪಹತ್ಯಾ ॥ ಲೋಕಾಶ್ಚ ನಿರ್ವೃತಿಮಿತಾಃ ಪ್ರತಿಯಾಂತು ಸರ್ವೇ ॥ ರೂಪಂ ನೃಸಿಂಹ ವಿಭವಾಯ ಜನಾಃಸ್ಮರಂತಿ —ಭಾಗವತ—ಅ.೭-ಶ್ಲೋ-೧೪

ಕೊರಳಲ್ಲಿರುವ ಕರುಳುಮಾಲೆಗಳು, ರಕ್ತದಿಂದ ಕೆಂಪಾಗಿ ನಿಗರಿನಿಂತಿರುವ ಕಿವಿಗಳು, ಅಷ್ಟದಿಗ್ಗಜಗಳನ್ನೂ ಹೆದರಿಸಿದ ಹೂಂಕಾರ, ಶತ್ರುವನ್ನು ಸೀಳುವ ಈ ತೀಕ್ಷ್ಣ ನಖಗಳು, ಇವೆಲ್ಲವನ್ನೂ ನೋಡಿ ನಾನು ಹೆದರಿಲ್ಲ. ಆದರೆ, ದೀನರಕ್ಷಕನಾದ ಪ್ರಭು ! ಉಗ್ರವಾದ ಸಂಸಾರವೆಂಬ ಸುಳಿಯಲ್ಲಿ ಸಿಲುಕಿ ಅಲ್ಲಿನ ಕಷ್ಟಗಳೊಡನೆ ಕಾದಾಡಿ ಹೋರಾಡಿ ನಿರ್ವೀರ್ಯನಾಗಿದ್ದೇನೆ. ನಾವು. ನಮ್ಮ ಕರ್ಮದಿಂದ ಬದ್ಧರಾಗಿ ಜನನ ಮರಣ ರೂಪವಾದ ಸಂಸಾರವೆಂಬ ಅನರ್ಥಕ್ಕೆ ಭಾಗಿಗಳಾಗುತ್ತೇವೆ. ಹೇ ಉತ್ತಮ ! ಈ ಜನನ ಮರಣಗಳಿಂದ ಹೆದರಿದವರಿಗೆ ಶರಣ್ಯನಾದ ನಿನ್ನ ಪಾದ ಕಮಲದೆಡೆಗೆ ನಾನೆಂದು ಬಂದು ಸೇರುವೆನು ?[1]

ದೇವ, ಪ್ರಿಯವಿಯೋಗ ಅಪ್ರಿಯ ಸಂಯೋಗಗಳಿಂದುಂಟಾದ ಶೋಕಾಗ್ನಿಯಿಂದ ಎಲ್ಲ ಯೋನಿಗಳಲ್ಲಿ ಬಳಲುತ್ತ ದುಃಖನಿವಾರಕೋಪಾಯವೂ ದುಃಖ ರೂಪವೇ ಆದ್ದರಿಂದ ಅದರ ಪರಿಹಾರ ಮಾರ್ಗವರಿಯದೆ ಒಂದು ದೇಹದಿಂದ ಮತ್ತೊಂದು ದೇಹಕ್ಕೆ ತಿರುಗುತ್ತಿದ್ದೇನೆ. ಸರ್ವಗುಣಪೂರ್ಣನಾದ ಹೇ ನೃಸಿಂಹ ದೇವ, ನಿನ್ನ ದಾಸನಾಗುವ ಉಪಾಯವನ್ನು ಅನುಗ್ರಹಿಸಿ ತಿಳಿಸು.[2]

ನೀನು ನಿರ್ವಾಜ್ಯ ಪ್ರೇಮಮಯನೂ, ಅನಿಮಿತ್ತ ಬಂಧುವೂ ಆದ ಸರ್ವೋತ್ತಮ ದೇವನು. ನಿನ್ನ ಅದ್ಭುತ ಅವತಾರ ಲೀಲೆಗಳನ್ನು ಬ್ರಹ್ಮದೇವರು ಗಾನಮಾಡಿಸ್ತುತಿಸುತ್ತಿದ್ದಾರೆ. ಅದನ್ನು ನಾನು ಗಾನಮಾಡಿ, ಸಂಸಾರಬಂಧಮುಕ್ತರಾಗಿ ನಿನ್ನ ಪಾದವನ್ನೇ ಆಶ್ರಯಿಸಿಕೊಂಡಿರುವ ಪರಮಹಂಸರ ಸೇವೆಯಿಂದ ನಿನ್ನ ವಿಷಯಕವಾದ ತತ್ತ್ವಜ್ಞಾನವನ್ನು ಪಡೆದು ನರಕಾದ್ಯನರ್ಥಗಳು ಮತ್ತು ಪತ್ನೀ ಸುತಾದಿ ವಿಷಯಸಂಗರೂಪ ಸಮುದ್ರವನ್ನು ದಾಟುವೆನು.[3]

ಸ್ವಾಮಿ, ಪುಟ್ಟಬಾಲಕರಿಗೆ ಮಾತಾಪಿತೃಗಳು ಸಂರಕ್ಷಕರು, ರೋಗಾರ್ತರಿಗೆ ಔಷಧವು ಹಿತಕರ, ಸಮುದ್ರದಲ್ಲಿ ಮುಳುಗೇಳುವವರಿಗೆ ದೋಣಿಯು ತಾರಕವು. ಬಿಸಿಲಿನ ತಾಪದಿಂದ ಬಳಲಿದವರಿಗೆ ನೀರಿನಿಂದ ತಾಪಶಮನವಾಗುವುದು. ಇವೆಲ್ಲ ಪ್ರಪಂಚದಲ್ಲಿ ಅಪೇಕ್ಷಣೀಯವು, ಇದರಂತೆ ಜನನ–ಮರಣರೂಪ ಸಂಸಾರದಿಂದ ತಪ್ತರಾದ, ನಿನ್ನ ಉಪಾಸಕರನ್ನು ನೀನು ಭವಬಂಧನದಿಂದ ಬಿಡಿಸಿ ಆನಂದವನ್ನು ಕರುಣಿಸುತ್ತೀಯೋ[4].

---

1. ಭಾಗವತ ಸ್ಕಂಧ ೭ ಅಧ್ಯಾಯ ೯. ಶ್ಲೋಕ —೧೬
2. — " " " " —೧೭
3. — " " " " —೧೮
4. — " " " " —೧೯

ಹೀಗೆ ಶ್ರೀನರಸಿಂಹದೇವರನ್ನು ವಿವಿಧ ರೀತಿಯಿಂದ ಸ್ತುತಿಸಿದ ಪ್ರಹ್ಲಾದ ರಾಜರು ಮುಂದುವರೆದು ಹೀಗೆ ಸ್ತೋತ್ರ ಮಾಡಹತ್ತಿದರು.

ದೇವ ! ಈ ಸಂಸಾರವು ಶಾಶ್ವತವಲ್ಲ, ಕ್ಷಣಿಕವೆಂದು ಅರಿತಿರುವೆನು, ಅನಿತ್ಯವಾದ ದೇಹಯುಕ್ತರಾದ ಜೀವರು ಇಂದ್ರಿಯಭೋಗ, ಬ್ರಹ್ಮಾದಿಪರ್ಯಂತ ಆಯುಷ್ಯ, ಸಂಪತ್ತು, ಧನಕನಕಾದಿಗಳನ್ನು ಅಪೇಕ್ಷಿಸಬಾರದು. ಕಾಲರೂಪಿಯಾದ ನಿನ್ನಿಂದ ಅವೆಲ್ಲವೂ ನಾಶವಾಗುವವು. ಅಂತೆಯೇ ನಾನು ಅವನ್ನು ಬಯಸುವುದಿಲ್ಲ. ಸ್ವಾಮಿ, ನಿನ್ನ ಸೇವಕರಾದ ಮುಕ್ತ ಜನರ ಗುಂಪಿಗೆ ನನ್ನನ್ನು ಸೇರಿಸಿ ಕಾಪಾಡು.[1]

ಕ್ವಾಹಂ ರಜಃಪ್ರಭವ ಈಶ ತಮೋಧಿಕೇಸ್ಮಿನ್
ಜಾತಸ್ಸುರೇತರಕುಲೇ ಕ್ವ ತವಾನುಕಂಪಾ ? ।
ನ ಬ್ರಹ್ಮಣೋ ನ ತು ಭವಸ್ಯ ನ ವೈ ರಮಾಯಾ
ಯನ್ಮೇರ್ಪಿತಃ ಶಿರಸಿ ಪದ್ಮಕರ ಪ್ರಸಾದಃ ॥ ೨೬ ॥

ಪರಮಾತ್ಮ ! ಅಜ್ಞಾನ ಪ್ರಚುರವಾದ ಅಸುರಕುಲದಲ್ಲಿ ಜನಿಸಿದ ನಾನೆಲ್ಲಿ ? ಭಕ್ತಾನುಗ್ರಹಕಾರಕವಾದ ನಿನ್ನ ಅನುಕಂಪ (ಅನುಗ್ರಹ)ವೆಲ್ಲಿ ? ಇವೆರಡೂ ಪರಸ್ಪರ ವಿರುದ್ಧವಾದವು. ಸತ್ವಪ್ರಧಾನವಾದ ಶ್ರೀಹರಿತ್ವಜ್ಞಾನಯುಕ್ತರು ನಿನ್ನ ಅನುಗ್ರಹಕ್ಕೆ ಪಾತ್ರರು. ಹೀಗಿದ್ದರೂ ನೀನು ನನ್ನಲ್ಲಿ ಅನುಗ್ರಹ ಮಾಡಿರುವುದು ಆಶ್ಚರ್ಯಕರ ! ನಿನ್ನ ಪ್ರಸಾದವೂ ಅನ್ಯಾದೃಶ. ಕಮಲದಂತೆ ಆಹ್ಲಾದಕರವಾದ ನಿನ್ನ ಅಮೃತಹಸ್ತವನ್ನು ನನ್ನ ಶಿರದಮೇಲಿಟ್ಟು ರಮಾ-ಬ್ರಹ್ಮರುದ್ರಾದಿಗಳಿಕಿಂತ ವೈಶಿಷ್ಟ್ಯಪೂರ್ಣ ವಾತ್ಸಲ್ಯವನ್ನು ನನ್ನಲ್ಲಿ ತೋರಿದ್ದೀಯೆ. ದೇವ, ಅಸುರ ಕುಲದಲ್ಲಿ ಜನಿಸಿದ್ದರೂ, ನನ್ನ ಭಕ್ತಿಯ ಹಿರಿಮೆ-ಮಹಿಮೆಗಳನ್ನು ತೋರಲು ನಿನ್ನ ಕರಕಮಲನ್ನು ನನ್ನ ತಲೆಯಮೇಲಿರಿಸಿ ಅನುಗ್ರಹಿಸಿದ್ದೀಯೇ.

ಲೋಕದಲ್ಲಿ ಸಾಮಾನ್ಯವಾಗಿ ಇವರು ತಮ್ಮವರು, ಅವರು ಬೇರೆ ಎಂದು ಪ್ರೀತಿ–ದ್ವೇಷಗಳನ್ನು ಮಾಡುವುದು ಕಂಡುಬಂದಿದೆ. ಆದರೆ ನೀನು ಲೋಕ ವಿಲಕ್ಷಣ ಮಹಿಮನೂ, ಅನಿಮಿತ್ತ ಬಂಧುವೂ ಆಗಿರುವೆ. ನಿನ್ನ ಪ್ರಸಾದವು ಸೇವಾನುಗುಣವಾಗಿದ್ದು ಮಾಡುವ ಭಕ್ತಿ, ಯೋಗ್ಯತೆಗೆ ತಕ್ಕಂತೆ ನಿನ್ನನ್ನಾರಾಧಿಸಿ ಜನರು ಅದಕ್ಕೆ ತಕ್ಕ ಫಲವನ್ನು ಪೊಂದುವರು. ಲಕ್ಷ್ಮೀದೇವಿಯೂ ತಾನು ಮಾಡುವ ನಿವರಧಿಕ ಭಕ್ತಿಯಿಂದಲೇ ನಿನ್ನ ಅತ್ಯಂತವಾದ ಅಧಿಕವಾದ ಪ್ರಸಾದಕ್ಕೆ ಪಾತ್ರಳಾಗಿದ್ದಾಳೆ. ಶ್ರೀಹರಿ ! ನೀನು, ಮಾಡಿದ ಸೇವೆಗನುಗುಣವಾಗಿ ಕುಲ–ಜಾತಿಗಳನ್ನು ನೋಡದೆ ಕಲ್ಪವೃಕ್ಷದಂತೆ ಸೇವಿಪರಿಗೆ ಫಲಪ್ರದವನಾಗಿದ್ದೀಯೆ.[2]

ಪ್ರಭು! ಸಂಸಾರಸರ್ಪವಿಷದೂಷಿತ ಗರ್ತದಲ್ಲಿ ಬಿದ್ದು ವಿಷಯಲೋಲುಪರಾದ ದೈತ್ಯಜನರಲ್ಲಿ ಹುಟ್ಟಿ. ಆವರ ಸಂಗದಿಂದ ಪಾರಾಗಲು ಇಚ್ಛಿಸಿದ್ದ ನನಗೆ ನಾರದ

---

1. —ಭಾಗವತ ಸ್ಕಂಧ ೭. ಅ. ೯. ಶ್ಲೋಕ —೨೭
2. — " " ೨೮

ಮಹರ್ಷಿಗಳು ಜ್ಞಾನೋಪದೇಶಮಾಡಿ ತಮ್ಮ ಶಿಷ್ಯವರ್ಗದಲ್ಲಿ ನನ್ನನ್ನು ಸೇರಿಸಿಕೊಂಡು ಅನುಗ್ರಹ ಮಾಡಿದರು. ಷಡ್ಗುಣೈಶ್ವರ್ಯಸಂಪನ್ನನಾದ ಪ್ರಭುವೇ ! ಸೇವಕತನದ ರುಚಿಯನ್ನು ಕಂಡಿರುವ ನಾನು ನಿನ್ನ ಸೇವಕನಾಗಿಯೇ ಇರಬಯಸುತ್ತೇನೆ. ನಿನ್ನನ್ನು ಸೇವಿಸುವುದನ್ನು ಹೇಗೆ ಬಿಡಲಿ ? ಖಂಡಿತ ಬಿಡಲಾರೆ.

**ಮತ್ಪ್ರಾಣರಕ್ಷಣಮನಂತಪಿತುರ್ವಧಂ ಚ**
**ಮನ್ಯೇ ಸ್ವಭೃತ್ಯಋಷಿವಾಕ್ಯಮೃತಂ ವಿಧಾತುಂ ।**
**ಖಡ್ಗಂ ಪ್ರಗೃಹ್ಯ ಯದವೋಚದಸದ್ವಿಧಿತ್ಸುಃ**
**ತ್ವಾಮೀಶ್ವರೋ ಮದಪರೋಽವತು ಕಂ ಹರಾಮಿ ॥ ೨೯ ॥**

ಹೇ ಅನಂತ ! ಶ್ರೀಹರಿಯು ಸರ್ವಭೂತಗಳಲ್ಲಿಯೂ ಅಂತರ್ಯಾಮಿಯಾಗಿದ್ದು ಭಕ್ತರನ್ನು ರಕ್ಷಿಸುತ್ತಾನೆ ಎಂದು ನಾರದ ಮಹರ್ಷಿಗಳು ನನಗೆ ಉಪದೇಶಿಸಿದ್ದರು[1] ಅದನ್ನು ನಾನು ನನ್ನ ತಂದೆಗೆ ಎತ್ತಿಹೇಳಿ "ತಾತ ! ನೀನು ಜಗದೀಶ್ವರನಲ್ಲ. ನಿನ್ನಕಿಂತ ಭಿನ್ನನಾದ ಸರ್ವೋತ್ತಮನಾದ ಜಗದೀಶ್ವರನು ಬೇರೊಬ್ಬನಿದ್ದಾನೆ" ಎಂದು ಹೇಳಿದಾಗ ಅವನು ನಾರದರ ಮತ್ತು ನನ್ನ ವಾಕ್ಯವನ್ನು ಅಸತ್ಯಗೊಳಿಸಲು "ಪ್ರಹ್ಲಾದ ! ಇಕೊ ಈ ಖಡ್ಗದಿಂದ ನಿನ್ನ ಶಿರಸ್ಸನ್ನು ಕತ್ತರಿಸುವೆನು.ನೀನು ಹೇಳಿದ ಸರ್ವತ್ರವ್ಯಾಪ್ತನಾದ ಆ ವಿಷ್ಣುವು ಬಂದು ನಿನ್ನನ್ನು ರಕ್ಷಿಸಲಿ" ಎಂದು ಆರ್ಭಟಿಸಿದನು. ಆಗ ನೀನು ನನ್ನ ಪ್ರಾಣರಕ್ಷಣೆ, ನಿನ್ನ ಭಕ್ತರಾದ ನಾರದರ ವಾಕ್ಯವನ್ನು ಸತ್ಯಮಾಡಲು ಮತ್ತು ಹಿರಣ್ಯಕಶ್ಯಪನ ಸಂಹಾರ ಮಾಡುವ ಉದ್ದೇಶದಿಂದ ಸ್ತಂಭದಿಂದ ಹೊರಬಂದು ನಾರದ ಮಹರ್ಷಿಗಳ, ನನ್ನ ವಚನಗಳನ್ನು ಸತ್ಯಮಾಡಿ, ದುಷ್ಟನಾದ ಹಿರಣ್ಯಕಶಿಪುವನ್ನು ಸಂಹರಿಸಿ ನನ್ನನ್ನು ಸಂರಕ್ಷಣೆಮಾಡಿದ್ದೀಯೇ.

ಕೋನ್ವತ್ರ ತೇಽಖಿಲಗುರೋ ಭಗವನ್ ಪ್ರಯಾಸ–
ಉತ್ತಾರಣೇಽಸ್ಯ ಭವಸಂಭವಲೋಪಹೇತೋಃ ।
ಮೂಢೇಷು ವೈ ಮಹದನುಗ್ರಹ ಆರ್ತ ಬಂಧೋ
ಕಿಂ ತೇನ ತೇ ಪ್ರಿಯಜನಾನನುಸೇವಮಾನಃ[2] ॥ ೪೨ ॥

ಹೇ ಅಖಿಲಲೋಕಗುರುವಾದ ಶ್ರೀಪತಿ ! ಸೃಷ್ಟಿಸ್ಥಿತ್ಯಾದಿ ಕಾರ್ಯಕರಣ ಸಮರ್ಥನಾದ ನಿನಗೆ ಈ ಸಂಸಾರವೆಂಬ ವೈತರಣಿಯಿಂದ ನನ್ನನ್ನು ಪಾರುಮಾಡಲು ಸ್ವಲ್ಪವೂ ಶ್ರಮವಿಲ್ಲ. ಆಪ್ತಕಾಮನಾದ ನಿನಗೆ ಭಕ್ತರನ್ನು ಕಾಪಾಡುವುದು ಸ್ವಭಾವವಾಗಿದೆ. ತಿರ್ಯಗ್ಯೋನಿಯಲ್ಲಿ ಜನಿಸಿದ ಗಜೇಂದ್ರನಂತೆ, ಅಸುರಕುಲದಲ್ಲಿ ಜನಿಸಿದ

---

1. ಸರ್ವತ್ರ ಭೂತೇಷು ಭಗವಾನಾಸ್ತೇ ಈಶ್ವರಃ ॥ ಯತ್ಸರ್ವತ್ರ ತದೀಕ್ಷಣಂ ॥"
2. —ಭಾಗವತ. ಸ್ಕಂಧ-೭-ಅಧ್ಯಾಯ ೯—೪೨

ನಮ್ಮಲ್ಲಿ ನೀನು ಅನುಗ್ರಹಮಾಡಬೇಕು. ಆರ್ತಪ್ರಾಣರಕ್ಷಣಪಾರಾಯಣ ! ಭಕ್ತ ವತ್ಸಲ, ನನ್ನನ್ನು ಈ ಭವಬಂಧನದಿಂದ ರಕ್ಷಿಸು. ಆಪ್ತಕಾಮನಾದ ನಿನಗೆ ಅದ ರಿಂದಾವ ಪ್ರಯೋಜನವಿಲ್ಲವಾದರೂ, ಅದು ನನ್ನಲ್ಲಿ ಮಹದನುಗ್ರಹವೇ ಆಗುವುದು.

ನೈವೋದ್ವಿಜೇ ಭವದುರತ್ಯಯವೈತರಣ್ಯಾ
ಸ್ತ್ವದ್ವೀರ್ಯಗಾಯನಮಹಾಮೃತ ಮತ್ತಚಿತ್ತಃ ।
ಶೋಚೇ ನು ತಂ ವಿಮುಖಚೇತಸ ಇಂದ್ರಿಯಾರ್ಥ-
ಮಾಯಾ ಸುಖಾಯ ಭರಮುದ್ವಹತೋ ವಿಮೂಢಾನ್[1] ॥೪೩॥

ಸ್ವಾಮಿ, ನೀನು ಸರ್ವೋತ್ತಮ. ಸರ್ವತಂತ್ರಸ್ವತಂತ್ರ, ವೇದೈಕವೇದ್ಯ, ಜೀವರು ನಿನ್ನ ಪ್ರತಿಬಿಂಬರು,ಅಧೀನರು. ಭಕ್ತಿಯಿಂದ ಪ್ರಸನ್ನನಾಗಿ ನೀನು ಅವ ರವರ ತಾರತಮ್ಯೋಪೇತ ಸಾಧನೆಗೆ ತಕ್ಕಂತೆ ಮೋಕ್ಷವನ್ನು ದಯಪಾಲಿಸುವಿ-ಎಂದು ಹೇಳುವ ವೈದಿಕ ವೈಷ್ಣವ ದ್ವೈತಸಿದ್ಧಾಂತವನ್ನು ಪ್ರತಿಪಾದಿಸುವ ವೇದಾಂತ ಶಾಸ್ತ್ರವನ್ನು ಶ್ರವಣ-ಮನನಮಾಡಿ, ಗಾಯನದಿಂದ ಆ ಮಹಾತತ್ವಾಮೃತಪಾನ ಮಾಡಿ, ಆನಂದತುಂದಿಲನಾದ ನನಗೆ ಈ ಸಂಸಾರವೆಂಬ ವೈತರಣಿಯ ಭಯವಿಲ್ಲ ! ಆದರೆ-ಪ್ರಭು ! ಶಾಸ್ತ್ರಶ್ರವಣವಿಲ್ಲದಲೇ ನಿನಗೆ ವಿಮುಖರಾಗಿ ಇಂದ್ರಿಯವಿಷಯ ಸಂಗದಿಂದ ಬರುವ ನಶ್ವರವಾದ ಐಹಿಕ ಸುಖೋಪಭೋಗಗಳಿಗಾಗಿ ಕುಟುಂಬಭರಣ ಮಾಡುತ್ತಿರುವ ಅಜ್ಞಜನರು ಈ ಸಂಸಾರಚಕ್ರದಿಂದ ಪಾರಾಗುವುದೆಂತೆಂದು ನಾನು ಚಿಂತಿಸುತ್ತಿದ್ದೇನೆ,

ಪ್ರಾಯೇಣ ದೇವಮುನಯೋ ಸ್ವವಿಮುಕ್ತಿಕಾಮಾ
ಮೌನಂ ಚರಂತಿ ವಿಜನೇ ನ ಪರಾರ್ಥದೃಷ್ಟಾಃ ।
ನೈತಾನ್ವಿಹಾಯ ಕೃಪಣಾನ್ವಿಮುಕ್ಷ ಏಕೋ
ನಾನ್ಯಂ ತ್ವದಸ್ಯ ಶರಣಂ ಭ್ರಮತೋನು ಪಶ್ಯೇ ॥೪೪॥

ಸ್ವಾಮಿ, ತಾತ್ವಿಕ ದೇವತೆಗಳು ಮತ್ತು ಋಷಿಗಳು ಸ್ವಾಶ್ರಿತರಾದ ಪರರಿಗೆ ಮೋಕ್ಷವಾಗಬೇಕೆಂದು ಏಕಾಂತದಲ್ಲಿ ಕಾಷ್ಟಮೌನವ್ರತವನ್ನು ಆಚರಿಸುವರು. ಅವರ ಸಹಾಯದಿಂದಲೇ ನಾನು ಕೃಪಣರಾದ ಅಜ್ಞಜನರಿಗೆ ಮೋಕ್ಷವನ್ನು ಅಪೇಕ್ಷಿಸುವ ನಾದ್ದರಿಂದ ಆ ತತ್ವಾಭಿಮಾನಿ ದೇವತೆಗಳ ವಿಶೇಷಾನುಗ್ರಹವನ್ನು ಸಂಪಾದಿಸ ಬಯಸುತ್ತೇನೆ, ಅದಕ್ಕೆ ನಿನ್ನ ಹೊರತು ಬೇರಾರು ನನಗೆ ಗತಿಯಿಲ್ಲ, ಆದ್ದರಿಂದ ಅನುಗ್ರಹಿಸು ದೇವ ! ದೇವತೆಗಳು ತಮ್ಮನ್ನು ಆಶ್ರಯಿಸಿದವರಲ್ಲಿ ದಯೆಮಾಡು ವಂತೆ ನಾನೂ ಸಹ ನನ್ನನ್ನು ಆಶ್ರಯಿಸಿರುವ ದೈತ್ಯಬಾಲಕರಲ್ಲಿ ಕಾರುಣ್ಯವುಳ್ಳವ ನಾಗಿದ್ದೇನೆ. ಅವರನ್ನು ಬಿಟ್ಟು ನಾನೊಬ್ಬನೇ ಮೋಕ್ಷವನ್ನು ಬಯಸುವುದಿಲ್ಲ ! "ನನ್ನ ಪ್ರಸಾದದಿಂದ ನಿನಗೆ ಮೋಕ್ಷವಾಗಲಿ, ಉಳಿದ ದೈತ್ಯಬಾಲಕರು ತಮತಮಗೆ

1. ಭಾಗವತ ಸ್ಕಂಧ ೭. ಅಧ್ಯಾಯ ೯.

ಯೋಗ್ಯವಾದ ಮಾರ್ಗದಿಂದ ಮುಕ್ತರಾಗಲಿ" ಎಂದು ನೀನು ಅಜ್ಞಾಪಿಸಬಹುದು. ಆದರೆ ಪ್ರಭು ! ಅವರಿಗೆ ನಿನ್ನ ಹೊರತು ಬೇರಾರೂ ಗತಿಯಿಲ್ಲ. ಆದುದರಿಂದ ಅವರಿಗೆ ನೀನೇ ಮೋಕ್ಷಮಾರ್ಗವನ್ನು ತೋರಿಸಬೇಕು.[1]

ತ್ವಂ ವಾಯುರಗ್ನಿರವನಿರ್ವಿಯದಂಬುಮಾತ್ರಾಃ
ಪ್ರಾಣೇಂದ್ರಿಯಾಣಿ ಹೃದಯಂ ಚಿದನುಗ್ರಹಶ್ಚ ।
ಸರ್ವಂ ತ್ವಮೇವ ಸಗುಣೋ ವಿಗುಣಶ್ಚ ಭೂಮನ್
ನಾನ್ಯತ್ತ್ವದಸ್ತ್ಯಪಿ ಮನೋ ವಚಸಾ ನಿರುಕ್ತಮ್[2] ॥೪೮॥

ಶ್ರೀಹರಿಯೇ ! ವಾಯು, ಅಗ್ನಿ, ಪೃಥ್ವಿ, ಆಕಾಶ, ಜಲಾದಿ ಪಂಚಮಹಾಭೂತಗಳು, ಮಾತ್ರಾಗಳು, ಪಂಚಜ್ಞಾನೇಂದ್ರಿಯಗಳು, ಹೃದಯ. ಸಾತ್ವಿಕ ಸಂಸಾರಿ ಮುಕ್ತಜೀವರು, ಶೌಕ್ಲ್ಯಾದಿಗುಣವಿಶಿಷ್ಟ ವಸ್ತುಗಳು, ಉತ್ಪನ್ನಾನಂತರಕ್ಷಣಾವಚ್ಛಿನ್ನ 'ನಿರ್ಗುಣವಸ್ತು', ಮನೋವಾಗೋಚರ ಪ್ರಕೃತಿ ಮುಂತಾದ ಸರ್ವವಸ್ತುವೂ ನೀನೇ ಆಗಿದ್ದೀಯೇ. ನಿನ್ನ ವಿನಃ ಅವಕ್ಕೆ ಪ್ರವೃತ್ತಿ ಮುಂತಾದ ಸತ್ತೆಗಳು ಕೂಡುವುದಿಲ್ಲವಾದ್ದರಿಂದ ಅವೆಲ್ಲವೂ ನಿನ್ನ ಅಧೀನವಾಗಿವೆ. ಎಲೈ ಭೂಮನ್ ಸರ್ವಗುಣಪರಿಪೂರ್ಣ, ನೀನು ಪ್ರಕೃತ್ಯಾದಿ ಪ್ರಪಂಚದಿಂದ ಅತ್ಯಂತ ಭಿನ್ನನಾಗಿದ್ದು ಅದರ ಅಂತರ್ಯಾಮಿಯಾಗಿದ್ದೀಯೇ.

ದೇವ ! ಸತ್ವ ರಜಸ್ತಮೋಗುಣಾಭಿಮಾನಿ ದೇವತೆಗಳು, ಮಹತ್ವತ್ತ್ವಾಭಿಮಾನಿಗಳಾದ ಬ್ರಹ್ಮಾದಿ ದೇವತೆಗಳು, ಮನಸ್ತತ್ತ್ವಾಭಿಮಾನಿಗಳಾದ ರುದ್ರ-ಚಂದ್ರಾದಿದೇವತೆಗಳು, ತತ್ತ್ವೇಶವ್ಯತಿರಿಕ್ತದೇವತೆಗಳು, ಮನುಷ್ಯೋತ್ತಮರು, ಋಷಿಗಳು—ಇವರೆಲ್ಲರೂ ಉತ್ಪತ್ತಿ ಮತ್ತು ವಿನಾಶಗಳುಳ್ಳ ದೇಹವುಳ್ಳವರಾಗಿದ್ದಾರೆ. ಶ್ರೇಷ್ಠಜ್ಞಾನಿಗಳೂ ಸಹ ಯುಕ್ತ್ಯಾದಿಗಳಿಂದ ನಿನ್ನನ್ನು ಸಾಕಲ್ಯೇನ ತಿಳಿಯು

---

1. ತತ್ತ್ವಾಭಿಮಾನಿದೇವತೆಗಳು ತಮ್ಮ ಆಶ್ರಿತರಲ್ಲಿ ವಿಶೇಷ ದಯೆಮಾಡಬೇಕೆಂದು ಪರಮಾತ್ಮನ ಅಪ್ಪಣೆ ಇದೆ. ಅದರಂತೆ ಕೆಲವು ಪ್ರಬಲಋಷಿಗಳು ತಾವು ಕಂಡ ವೇದಾದ್ಯುಪದೇಶದಿಂದ ಸ್ವಾಶ್ರಿತರಲ್ಲಿ ವಿಶೇಷಾನುಗ್ರಹಮಾಡಬೇಕೆಂಬ ಅನುಶಾಸನವೂ ಇದೆ. ಪ್ರಹ್ಲಾದರು. (ಈ ಗುಂಪಿಗೆ ಸೇರಿದವರಾದ್ದರಿಂದ) ತಮ್ಮ ಕೃಪೆಗೆ ಪಾತ್ರರಾದ ದೈತ್ಯ ಬಾಲಕರನ್ನು ಸಂಸಾರ ಚಕ್ರದಿಂದ ಪಾರುಮಾಡಲು ಆಶಿಸಿ ಪರಮಾತ್ಮನನ್ನು ಪ್ರಾರ್ಥಿಸಿದ್ದಾರೆಂದು ತಿಳಿಯಬೇಕು. ಇದರಿಂದ ಪ್ರಹ್ಲಾದರಿಗೆ ಸ್ವಾಶ್ರಿತರಲ್ಲಿ ದೀನದಲಿತ-ಕೃಪಣರಲ್ಲಿ ಅಜ್ಞರಾದವರಲ್ಲಿ ಎಂತಹ ಕಾರುಣ್ಯವಿದೆ. ಅವರಿಗಾಗಿ ಅವರು ಹೇಗೆ ಪರಿತಪಿಸುವರೆಂಬುದು ವ್ಯಕ್ತವಾಗುವುದು.
2. ಭಾಗವತ. ಸ್ಕಂಧ ೭ ಅಧ್ಯಾಯ ೯.

ಲಾರರು. ನಿನ್ನ ಮಹಿಮೆಯನ್ನು ವೇದಗಳ ಸಮೂಹದಿಂದಲೇ ಗುರೂಪದೇಶದ್ವಾರಾ, ಶ್ರವಣಮನನಾದಿಗಳಿಂದ ತಿಳಿದು ನಿನ್ನನ್ನು ಸಾಕ್ಷಾತ್ಕರಿಸಿಕೊಂಡು ಮುಕ್ತರಾಗುವರು.[1]

ತತ್ತೇಽರ್ಹತ್ತಮ ನಮಃ ಸ್ತುತಿಕರ್ಮಪೂಜಾಃ
ಕರ್ಮ ಸ್ಮೃತಿಶ್ಚರಣಯೋಃ ಶ್ರವಣಂ ಕಥಾಯಾಮ್ ।
ಸಂಸೇವಯಾ ತ್ವಯಿ ವಿನೇತಿ ಷಡಂಗಯಾ ಕಿಂ
ಭಕ್ತಿಂ ಜನಃ ಪರಮಹಂಸಗತೌ ಲಭೇತ[2] ॥೫೦॥

ದೇವದೇವ ! ಯೋಗಿಗಳು ನಿನ್ನನ್ನು ಷಡಂಗಸೇವೆಯಿಂದ ಒಲಿಸಿಕೊಂಡು ನಿನ್ನ ಅತ್ಯರ್ಥಪ್ರಸಾದವನ್ನು ಪಡೆಯಬೇಕೇ ವಿನಃ ಬೇರೆ ಮಾರ್ಗವಿಲ್ಲ. ಷಡಂಗ ಗಳಿಂದ ಸೇವಿಸುವುದೆಂದರೆ—ಪ್ರಭು! ಸರ್ವದಾ ಮನಸ್ಸು ನಿನ್ನ ರೂಪವನ್ನು ಚಿಂತಿಸು ತ್ತಿರಬೇಕು. ಕಣ್ಣುಗಳು ನಿನ್ನ ಮಂಗಳಕರಮೂರ್ತಿ ದರ್ಶನರತವಾಗಬೇಕು, ನಾಲಿಗೆಯು ನಿನ್ನ ಗುಣ ಮತ್ತು ಮಹಿಮಾದಿಗಳನ್ನು ಸ್ತುತಿಸುತ್ತಿರಬೇಕು. ಕರಗಳು ನಿನ್ನ ಕೈಂಕರ್ಯ ಮಾಡಬೇಕು. ಚರಣಗಳು ನಿನ್ನ ಪಾವನವಾದ ಕ್ಷೇತ್ರಯಾತ್ರೆ ಮಾಡಬೇಕು. ಕರ್ಣಗಳು ನಿನ್ನ ಅಮರಚರಿತ್ರೆ, ಲೀಲಾವಿಲಾಸಕಥೆಗಳನ್ನು ಆಲಿಸು ತ್ತಿರಬೇಕು, ಹೀಗೆ ಯೋಗಿಗಳು ಷಡಂಗಯುಕ್ತವಾದ ನಿನ್ನ ಸೇವೆಯಿಂದ ಪರಮ ಹಂಸ ಪ್ರಾಪ್ಯನಾದ ನಿನ್ನಲ್ಲಿ ಭಕ್ತಿಮಾಡಿ ಒಲಿಸಿಕೊಂಡು ನಿನ್ನ ಅತ್ಯರ್ಥ ಪ್ರಸಾದ ವನ್ನು ಪಡೆಯುವರು. ಹಾಗಿಲ್ಲದೆ ನಿನ್ನ ಅತ್ಯರ್ಥಪ್ರಸಾದಕ್ಕೆ ಬೇರೆ ಮಾರ್ಗವಿಲ್ಲ.

ಹೀಗೆ ಪ್ರಹ್ಲಾದರಾಜನು ತನ್ನ ಯೋಗ್ಯತಾನುಸಾರವಾಗಿ ಅತ್ಯಂತ ಭಕ್ತಿ ಶ್ರದ್ಧೆಗಳಿಂದ ಶ್ರೀನರಸಿಂಹದೇವರನ್ನು ಸ್ತೋತ್ರಮಾಡಿದನು. ಮತ್ತು ಪರಮಾತ್ಮನ ಚರಣಕಮಲಗಳಿಗೆ ಸಾಷ್ಟಾಂಗಪ್ರಣಾಮಮಾಡಿದನು.

ಇಂತು ಪ್ರಹ್ಲಾದರಾಜನು ಸ್ತೋತ್ರಮಾಡಲು ನಿರ್ಗುಣನಾದ (ಅಂದರೆ ಪ್ರಾಕೃತ ಸತ್ವಾದಿಗುಣಹೀನನಾದ) ಶ್ರೀನೃಸಿಂಹದೇವನು ಬಾಲಭಕ್ತನ ಸ್ತುತಿಯಿಂದ ಸುಪ್ರಸನ್ನನಾಗಿ ಕೋಪವನ್ನು ತ್ಯಜಿಸಿ ಶಾಂತನಾದನು.[3]

---

1. "ಅನ್ಯೇ ಅಧಿಕಾರಿಣಃ ಶಬ್ದಾತ್—ವೇದಾತ್- 'ಸರ್ವವೇದಾಂತಪ್ರತ್ಯಯ ನ್ಯಾಯೇನ' ಯಥಾಯೋಗ್ಯಂ ಶ್ರುತ್ವಾ ಮತ್ವಾ ಧ್ಯಾತ್ವಾ, ಸಾಕ್ಷಾತ್ಕೃತ್ಯ ಚ ಸಂಸಾರಾದ್ವಿರಮಂತಿ।"
—ಮಂದನಂದಿನೀ

2. ಭಾಗವತ. ಸ್ಕಂಧ ೭ ಅಧ್ಯಾಯ ೯.

3. ಏತಾವದ್ವರ್ಣಿತಗುಣೋ ಭಕ್ತ್ಯಾ ಭಕ್ತೇನ ನಿರ್ಗುಣಃ ।
ಪ್ರಹ್ಲಾದಂ ಪ್ರಣತಂ ಪ್ರೀತೋ ಗತಮನ್ಯುರಭಾಷತ ॥ ೫೦ ॥
—ಭಾಗವತ ಸ್ಕಂಧ ೭ ಅ. ೯

## ೨೧. ಶ್ರೀಹರಿಯ ಭಕ್ತವಾತ್ಸಲ್ಯ ಮತ್ತು ವರಪ್ರದಾನ

ಸಾಷ್ಟಾಂಗವೆರಗಿ ಭಕ್ತಿಪರವಶನಾಗಿ ತನ್ನ ಪಾದಮೂಲದಲ್ಲಿ ಬಿದ್ದಿರುವ ಪ್ರಹ್ಲಾದನನ್ನು ಶ್ರೀಪ್ರಭು ನೋಡಿದ. ತನ್ನ ಮಹಿಮೆಯನ್ನು ಭಕ್ತ್ಯತಿಶಯದಿಂದ ನಾನಾ ವಿಧವಾಗಿ ವರ್ಣಿಸಿ ಸ್ತೋತ್ರಮಾಡಿ, ಸರ್ವಸ್ವವನ್ನೂ ತನ್ನ ಪದತಲದಲ್ಲಿ ರ್ಪಿಸಿ ತನ್ನ ಪ್ರಸಾದಕ್ಕಾಗಿ ಹಾತೊರೆದು ಮೈಮರೆತು ಬಿದ್ದಿರುವ ಬಾಲ ಪ್ರಹ್ಲಾದನನ್ನು ಕಂಡ ಭಕ್ತಬಂಧು ಶ್ರೀನರಸಿಂಹದೇವರ ಹೃದಯ ಕರುಣಾಪೂರ್ಣವಾಯಿತು. ಪ್ರೇಮದಿಂದ ದೇವನು ಕರುಣಾರ್ದ್ರ ದೃಷ್ಟಿಯಿಂದೀಕ್ಷಿಸಿ, ಮೆಲ್ಲನೇ ತನ್ನ ಭಕ್ತವಾತ್ಸಲ್ಯವನ್ನು ಪ್ರಕಟಿಸಲು ಪ್ರಹ್ಲಾದನನ್ನು ಮೇಲೆತ್ತಿ ತಾಯಿಯು ಬಾಡಿಬಳಲಿದ ತನ್ನ ಕಂದಮ್ಮನನ್ನು ಹೇಗೆ ಮೇಲೆತ್ತಿ ಮಡಲಿನಲ್ಲಿಕೂಡಿಸುಕೊಂಡು ರಮಿಸುವಳೋ, ಅದರಂತೆಯೇ ಮುದ್ದುಮಗು, ಭಕ್ತ ಪ್ರಹ್ಲಾದನನ್ನು ತನ್ನ ತೊಡೆಯಮೇಲೆ ಕೂಡಿಸಿಕೊಂಡು ಅಮೃತಮಯವಾದ ತನ್ನೆರಡೂ ಕರಗಳಿಂದ ಮೆಲ್ಲನೆ ಮೈದಡವಿ ಮತ್ತೆ ಮತ್ತೆ ಆಲಿಂಗಿಸಿಕೊಂಡು ಬಾಲಭಕ್ತನ ಶಿರಸ್ಸನ್ನಾಘ್ರಾಣಿಸಿ, ತನ್ನ ಕರಕಮಲವನ್ನು ಪ್ರಹ್ಲಾದನ ಶಿರಸ್ಸಿನಮೇಲಿಟ್ಟು ಅತ್ಯಂತ ಪ್ರೀತಿಯಿಂದ ಮಾತನಾಡಿದನು.[1]

**ಶ್ರೀನೃಸಿಂಹ:** ವತ್ಸ! ಪ್ರಹ್ಲಾದ, ನನಗಾಗಿ ನೀನೆಷ್ಟು ಕಷ್ಟಗಳನ್ನು ಅನುಭವಿಸಿದೆಯಪ್ಪಾ, ಬಾಲಕನಾದ ನೀನು ದುಷ್ಟನಾದ ಹಿರಣ್ಯಕಶ್ಯಪನು ನೀಡಿದ ಭೀಷಣ ಶಿಕ್ಷೆಗಳ ಯಾತನೆಯನ್ನು ಅದೆಂತು ಸಹಿಸದೆಯೋ ಕಂದ! ಕೋಮಲವಾದ ನಿನ್ನ ಶರೀರವು ಅದೆಷ್ಟು ಘಾಸಿಹೊಂದಿತೋ, ನನ್ನಲ್ಲಿ ನಿನಗೆಷ್ಟು ಪ್ರೀತಿ, ಭಕ್ತಿ! ಅಹಹ, ಕುಮಾರ! ನನ್ನ ಸರ್ವೋತ್ತಮತ್ವ, ಸರ್ವಸ್ವಾಮಿತ್ವ, ಸರ್ವವ್ಯಾಪ್ತಿತ್ವಗಳನ್ನು ಸಾರಲು ಎಷ್ಟು ಶ್ರಮಿಸಿದೆಯೊ ಭಕ್ತರಾಜ! ನಾನು ಬರಲು ತಡವಾಯಿತೆಂದು ನೊಂದೆಯಾ ಮಗು?

**ಪ್ರಹ್ಲಾದ:** ದೇವ! ಜಗನ್ನಾಥ! ಕಮಲಾಕಾಂತ! ನಿನ್ನ ಚರಣಕಮಲ ಮಕರಂದಾಸ್ವಾದನಮತ್ತ ಮಧುಕರನಂತಾದ ನನಗೆ, ಅದೂ ಸದಾ ಪೊರೆಯುವ ಪ್ರಭು ನೀನಿರಲೆನಗೆ ನೋವೆಂದರೇನು ಸ್ವಾಮಿ? ನಿನ್ನ ಭಕ್ತರಿಗೆ ವಿಪತ್ತೆಲ್ಲಿಯದು?

**ಶ್ರೀನೃಸಿಂಹ:—**

ಪ್ರಹ್ಲಾದ ಭದ್ರ! ಭದ್ರಂ ತೇ ಪ್ರೀತೋಽಹಂ ತೇಽಸುರೋತ್ತಮ।
ವರಂ ವೃಣೀಷ್ವಾಭಿಮತಂ ಕಾಮರೂಪೋಽಸ್ಮ್ಯಹಂ ನೃಣಾಮ್ ॥೫೨॥
ಮಾಮಪ್ರಣೀತ ಆಯುಷ್ಮನ್ ದರ್ಶನಂ ದುರ್ಲಭಂ ಹಿ ಮೇ।
ದೃಷ್ಟ್ವಾ ಮಾಂ ನ ಪುನರ್ಜಂತುರಾತ್ಮಾನಂ ತಪ್ತುಮರ್ಹತಿ ॥೫೩॥
ಪ್ರೀಣಂತಿ ಹ್ಯಥ ಮಾಂ ಧೀರಾಃ ಸರ್ವಭಾವೇನ ಮಾಧವಂ।

---

1. ...ವಿಲೋಕ್ಯನಾಥಃ ಕೃಪಯಾ ಪರಿಪ್ಲುತಃ। ಕೃತ್ವಾ ತಮಂಕೇ ಸ್ವಜನೈಕಬಂಧುಃ। ಶನೈರ್ವಿಧುನ್ವನ್ ಕರಪಲ್ಲವೇನ। ಸ್ಪೃಶನ್ ಮುಹುಃ ಮಾತೃವದಾಲಿಲಿಂಗ॥

ಶ್ರೇಯಸ್ಕಾಮಾ ಮಹಾಭಾಗಾಃ ಸರ್ವೇಷಾಮಾಶಿಷಾಂ ಪತಿಮ್ ॥೨೪॥

ಮಂಗಳಕರನಾದ ಹೇ ಪ್ರಹ್ಲಾದ! ವತ್ಸ. ನಿನ್ನ ಭಕ್ತಿಗೆ ಮೆಚ್ಚಿದ್ದೇನೆ. ನಿನಗೆ ಮಂಗಳವಾಗಲಿ. ಹೇ ಅಸುರಶ್ರೇಷ್ಠ ! ನಿನಗೆ ಬೇಕಾದ ವರವನ್ನು ಕೇಳಿಕೋ. ಭಕ್ತರ ವಾಂಛಿತಗಳನ್ನು ನಾನು ಪೂರ್ಣಮಾಡುವವನಾಗಿದ್ದೇನೆ; ಭಕ್ತಿಯಿಂದ ಪ್ರೀತಿಗೊಳಿಸದೆ ನನ್ನ ದರ್ಶನವು ದೊರೆಯಲಾರದು, ದುರ್ಲಭನಾದ ನನ್ನನ್ನು ಸಾಕ್ಷಾತ್ಕಾರಪಡಿಸಿಕೊಂಡ ಮಾನವನಿಗೆ ಸಂಸಾರತಾಪವುಂಟಾಗಲಾರದು. ಲಕ್ಷ್ಮೀಪತಿಯಾದ ನನ್ನನ್ನು ಪ್ರೀತಿಯಿಂದ ಮೆಚ್ಚಿಸಿಕೊಳ್ಳಬಲ್ಲವರು ಸಾಮಾನ್ಯರಲ್ಲ, ಧೀರರು ಮತ್ತು ಮಹಾಸತ್ವಶಾಲಿಗಳು.

ಶ್ರೀನರಹರಿಯು ಮಾತನ್ನಾಲಿಸಿ, ಏಕಾಂತಭಕ್ತನಾದ ಪ್ರಹ್ಲಾದನ ಮನಸ್ಸು ಪ್ರಲೋಭನಗೊಳಿಸುವ ವರಗಳನ್ನು ಬೇಡಲು ಒಪ್ಪಲಿಲ್ಲ. ಭಗವಂತನು ಪರೀಕ್ಷಿಸಲು ಮಾಡಿದ ಪ್ರಲೋಭನಗಳಿಗೆ ಅವನು ಸೋಲಲಿಲ್ಲ ! ಷಡ್ಗುಣೈಶ್ವರ್ಯಸಂಪನ್ನನಾದ ಶ್ರೀಹರಿಯಿಂದ ಪ್ರಹ್ಲಾದನು ಯಾವ ವರಗಳನ್ನು ಪಡೆಯಲೂ ಬಯಸಲಿಲ್ಲ. ಏಕೆಂದರೆ ವರಗಳ ಉಪಭೋಗದಿಂದ ಏಕಾಂತ ಭಕ್ತರ ಭಕ್ತಿಯೋಗಕ್ಕೆ ಅಂತರಾಯ ವುಂಟಾಗುವುದು. ಅಂತೆಯೇ ಪ್ರಹ್ಲಾದರಾಜನು ಕಾಮವರ್ಧಕ ವಿಷಯೋಪಭೋಗಕ್ಕೆ ಬಲಿಯಾಗಲಿಲ್ಲ.

ಪ್ರಹ್ಲಾದರಾಜನು ಶ್ರೀನೃಸಿಂಹದೇವರು ತನ್ನ ಯೋಗ್ಯತೆಯನ್ನು ತಿಳಿದಿದ್ದರೂ ತೋರಿಕೆಗಾಗಿ ಪ್ರಲೋಭನವನ್ನು ಮಾಡುವರೆಂದು ತೋರಿಸಲು ನಸುನಗುತ್ತಾ ಇಂತೆಂದನು; "ದೇವ, ಜನ್ಮಾರಭ್ಯ ವಿಷಯಗಳಲ್ಲಿ ನಾನು ಆಸಕ್ತಿತಾಳದೆ ಸಂಸಾರಭಯದಿಂದ ನಿರ್ವೇದವನ್ನು ಹೊಂದಿ ಮೋಕ್ಷವನ್ನು ಅಪೇಕ್ಷಿಸಿ ನಿನ್ನನ್ನು ಆಶ್ರಯಿಸಿದ್ದೇನೆ. ನಾನು ನಿನ್ನ ಸೇವಕನು. ನೀನು ನನ್ನ ಸ್ವಾಮಿ. ನಾನು ನಿನ್ನಿಂದ ಏನನ್ನೂ ಬೇಡದೆ ನಿನ್ನನ್ನು ನಿರ್ವ್ಯಾಜವಾಗಿ ಸೇವಿಸುವ ಭಕ್ತನು. ನೀನು ಅನಿಮಿತ್ತ ಭಕ್ತವಾತ್ಸಲ್ಯವುಳ್ಳ ಪ್ರಭುವು. ಜಗತ್ತಿನಲ್ಲಿ ರಾಜನು (ಪ್ರಭುವು) ಭೃತ್ಯರಿಂದ ತನ್ನ ಆಜ್ಞಾಪಾಲನರೂಪವಾದ ಪ್ರತಿಫಲವನ್ನೂ, ಭೃತ್ಯರು ವೇತನಾದಿಗಳನ್ನೂ ಅಪೇಕ್ಷಿಸಿ ಸ್ವಾಮಿ ಭೃತ್ಯಭಾವವನ್ನು ನಡೆಸಿಕೊಂಡು ಬರುವುದು ಕಂಡಿದೆಯಾದರೂ ನಾವು ಆರೀತಿಯ ಸ್ವಾಮಿಭೃತ್ಯರಲ್ಲ! ಆದರೆ ನಮ್ಮಿಬ್ಬರಲ್ಲಿ ಅನಿಮಿತ್ತವಾದ ಅನಪಾಶ್ರಯವಾದ ಸೇವ್ಯ-ಸೇವಕ ಭಾವ ಸಂಬಂಧವಿದೆ.[1]

ಆದರೆ ಸ್ವಾಮಿ, ನೀನು 'ಬೇಕಾದ ವರವನ್ನು ಬೇಡು' ಎಂದು ನನಗೆ ಅಪ್ಪಣೆ ಮಾಡಿದ್ದೀಯೆ, ಅದನ್ನು ಮೀರುವುದು ಯುಕ್ತವಲ್ಲ. ಆದಕಾರಣ ಹೇ ಸ್ವಾಮಿ, ನರಸಿಂಹ! ನನ್ನ ವಾಂಛಿತವನ್ನು ನೀನು ಪೂರ್ಣಮಾಡುವಂತಿದ್ದರೆ, ನನ್ನ ಹೃದಯ

1. ಅಹಂ ತ್ವಕಾಮಸ್ತ್ವದ್ಭಕ್ತಸ್ತ್ವಂಚ ಸ್ವಾಮ್ಯನಪಾಶ್ರಯಃ ।
ನಾನ್ಯಥೇಹಾವಯೋರರ್ಥೋ ರಾಜಸೇವಕಯೋರಿವ ॥ —ಭಾಗವತ-೭-೧೦-೬

ದಲ್ಲಿ, ಮನಸ್ಸಿನಲ್ಲಿ ಮೋಕ್ಷಮಾರ್ಗಪ್ರತಿಬಂಧಕವಾದ ಕಾಮವಾಸನೆಯು ಸರ್ವಥಾ ಜನಿಸದಂತೆಮಾಡು. ನಿನ್ನಲ್ಲಿ ಅಚಲವಾದ ಭಕ್ತಿಯನ್ನು ಕೊಡು. ನಿನ್ನ ಕೃಪಾಕಟಾಕ್ಷ ದಿಂದ ಅಧಿಕಾರಿ ಜೀವನು ಜನನ ಮರಣ ರೂಪವಾದ ಈ ಸಂಸಾರದಿಂದ ಪಾರಾಗಿ ಶಾಶ್ವತವೂ, ಸ್ವರೂಪಾನಂದಾವಿರ್ಭಾವರೂಪವೂ ಆದ ಮೋಕ್ಷವನ್ನು ಪಡೆಯು ವನು. ಹೇ ಪುಂಡರೀಕಾಕ್ಷ! ನಾರದಮಹರ್ಷಿಗಳು ನನಗೆ ಉಪದೇಶಿಸಿದ ಮಂತ್ರ ದಿಂದ ನಿನ್ನ ದರ್ಶನವಾಯಿತು !

ಓಂ ನಮೋ ಭಗವತೇ ತುಭ್ಯಂ ಪುರುಷಾಯ ಮಹಾತ್ಮನೇ ।
ಹರಯೇಽದ್ಭುತಸಿಂಹಾಯ ಬ್ರಹ್ಮಣೇ ಪರಮಾತ್ಮನೇ ॥

ಷಡ್ಗುಣೈಶ್ವರ್ಯ ಸಂಪನ್ನನಾದ, ಅತ್ಯಂತ ಆಶ್ಚರ್ಯಕರ ಸಿಂಹರೂಪವನ್ನು ಧರಿಸಿದ, ಸರ್ವಾಂತರ್ಯಾಮಿಯೂ ಸರ್ವಗುಣ ಪರಿಪೂರ್ಣ ದೇಹಾಂತರ್ಗತ ಪುರುಷನೂ, ಮಹಾತ್ಮನೂ ಆದ ಶ್ರೀಹರಿಯೇ, ನಿನಗೆ ನಮಸ್ಕಾರ ಎಂದು ವಿಧಿ ಪೂರ್ವಕವಾಗಿ ಮಂತ್ರವನ್ನು ಜಪಿಸಿ ಭಕ್ತಿಪೂರ್ವಕ ವಂದಿಸಿದರೆ ಪರಮಾತ್ಮನ ಸಾಕ್ಷಾತ್ಕಾರವಾಗುವುದು. ಹೀಗೆ ನನ್ನಲ್ಲಿ ಕೃಪೆಮಾಡಿ ದರ್ಶನವಿತ್ತ ಶ್ರೀನೃಸಿಂಹ ದೇವ! ನಿನಗೆ ಅನಂತ ಪ್ರಣಾಮಗಳು."

**ಶ್ರೀನೃಸಿಂಹ :** ಭಕ್ತರಾಜ, ಪ್ರಹ್ಲಾದ! ನಾನೊಡ್ಡಿದ ಪರೀಕ್ಷೆಯಲ್ಲಿ ನೀನು ಉತ್ತೀರ್ಣನಾದೆ! ವತ್ಸ, ನಿನ್ನ ನಿಷ್ಕಾಮವಾದ ಭಕ್ತಿಯಿಂದ ನಾನು ಸಂತುಷ್ಟ ನಾಗಿದ್ದೇನೆ. ನೀನು ಏನಾದರೊಂದು ವರವನ್ನು ಕೇಳಪ್ಪಾ, ಕೊಡಲು ಸಿದ್ಧನಾಗಿ ದ್ದೇನೆ. ಆಗ ಪ್ರಹ್ಲಾದನು...."ದೇವ ! ಜನ್ಮಾಂತರೇಷ್ವಪಿ । ದಾಸಸ್ತವಾಹಂ ಭೂಯಾಸಂ ಗರುತ್ಮಾನಿವ ಭಕ್ತಿಮಾನ್॥" ಎಂದು ಭಗವಂತನಿಗೆ ನಮಸ್ಕರಿಸಿ— "ಪ್ರಭು! ಯಾವ ನಿನ್ನೀ ನಿತ್ಯನೂತನ ಸುಂದರರೂಪವನ್ನು ಕಾಣಲು ಕಾಡುಮೇಡು ಗಳಲ್ಲಿ ಅನ್ನಾಹಾರಗಳನ್ನು ತ್ಯಜಿಸಿ ಘೋರವಾದ ತಪಸ್ಸನ್ನಾಚರಿಸಿದರೂ ಮಹಾತ್ಮ ರಾದ ಋಷಿಮುನಿಗಳಿಗೆ ಗೋಚರನಾಗದ ನೀನು ಏನೂ ಅರಿಯದ ಬಾಲಕನಾದ ನನ್ನ 'ಬಾ, ಶ್ರೀಹರಿ' ಎಂಬ ಕೂಗಿಗೆ ಓಗೊಟ್ಟು ಓಡಿಬಂದು ನಿನ್ನ ಪರಮಮಂಗಳ ರೂಪದರ್ಶನವಿತ್ತು ಅನುಗ್ರಹಿಸಿರುವಾಗ ಬೇರೆ ಮತ್ತೇನು ವರವನ್ನು ಬೇಡಲಿ ಗೋವಿಂದ? ಆದರೆ ಸ್ವಾಮಿ, ನನಗೊಂದಾಶೆಯಿದೆ, ನಾನು ಜನ್ಮಾಂತರಗಳಲ್ಲಿಯೂ ಗರುಡದೇವರಂತೆ ನಿನ್ನ ದಾಸನಾಗಬೇಕು. ನಿನ್ನ ಭಜಕನಾಗಬೇಕು.[1] ಇಷ್ಟನ್ನು

1. ಸಾಕ್ಷಾತ್ ಭಗವಂತನೇ ಒಲಿದುಬಂದು ವರವನ್ನು ಕೊಡುತ್ತೇನೆ ಬೇಡು ಎಂದರೆ ನಮ್ಮ ಪ್ರಹ್ಲಾದರಾಜರು ಯಾವವರವನ್ನೂ ಬೇಡದೆ ಕೇವಲ ನಿನ್ನ ಭಕ್ತನಾಗಬೇಕು—ದಾಸ ನಾಗಬೇಕು— ಎಂದು ಪ್ರಾರ್ಥಿಸಿದರು. ಇದರಿಂದ ಅವರದು ಎಂತಹ ನಿಷ್ಕಾಮ ನಿವ್ಯಾರ್ಜಭಕ್ತಿ ಎಂಬುದು ಸ್ಪಷ್ಟವಾಗುವುದು ಮತ್ತು ಇಲ್ಲಿ 'ಜನ್ಮಾಂತರೇಷ್ವಪಿ' ಎಂದು ಬಹುವಚನದಿಂದ ಪ್ರಾರ್ಥಿಸಿರುವುದರಿಂದ ಶ್ರೀಪ್ರಹ್ಲಾದರು ಮುಂದೆ ಮೂರುಜನ್ಮಗಳನ್ನು ತಾಳಲಿರುವುದು ಮತ್ತು ಆ ಮೂರು ಜನ್ಮ 1 ಬಾಹ್ಲಿಕ 2 ವ್ಯಾಸರಾಜ, 3 ರಾಘವೇಂದ್ರಾವತಾರಗಳಲ್ಲೂ ಭಕ್ತರೂ— ದಾಸರೂ— ಆಗಿದ್ದು ಶ್ರೀಹರಿಯನ್ನು ಸೇವಿಸಲು ಆಶಿಸಿರುವುದು ಸ್ಪಷ್ಟವಾಗುತ್ತದೆ.

ಮಾತ್ರ ಅನುಗ್ರಹಿಸು. ಇದೇ ನಾನು ನಿನ್ನಲ್ಲಿ ಪ್ರಾರ್ಥಿಸುವ ವರ !

**ಶ್ರೀನೃಸಿಂಹ :** ಆಹಾ, ಭಕ್ತಶಿಖಾಮಣಿ ! ನನಗೆಂಥ ಸಂಕಟವನ್ನು ತಂದೊಡ್ಡಿದೆಯಪ್ಪಾ."ಅಹಂ ತವಾತ್ಮದಾನೇಚ್ಛುಃ ತ್ವಂ ತು ಭೃತ್ಯತ್ವಮಿಚ್ಛಸಿ॥"ಕುಮಾರ! ನೀನು ನನ್ನ ಸಂಬಂಧಿಯಾದ ಅಸದೃಶತತ್ವಗಳನ್ನು ಸಾರಿ, ತಂದೆ ನೀಡಿದ ಹಿಂಸೆಗಳನ್ನೆಲ್ಲಾ ಸಹಿಸಿ ನಾನು ಸರ್ವೋತ್ತಮ, ಜಗಜ್ಜನ್ಮಾದಿಕಾರಣ, ರಮಾಬ್ರಹ್ಮರುದ್ರೇಂದ್ರಾದಿಗಳಿಗೂ ನಿಯಾಮಕ-ಸರ್ವತ್ರವ್ಯಾಪ್ತ ಎಂದು ಸಿದ್ಧಮಾಡಿತೋರಿಸಿದ್ದೀಯೇ ! ಇಂಥ ನಿನಗೆ ನನ್ನನ್ನೇ ಅರ್ಪಿಸಿಕೊಂಡುಬಿಡಲು ಆಶಿಸುತ್ತಿದ್ದರೆ. ನೀನು ನನ್ನ ದಾಸನಾಗಬಯಸುವಿಯಲ್ಲ ! ಇನ್ನೇನಾದರೂ ವರವನ್ನು ಕೇಳು ಪ್ರಹ್ಲಾದ !

**ಪ್ರಹ್ಲಾದ :** [ವಿನೀತನಾಗಿ] "ಪ್ರಸೀದ ಸಾಸ್ತು ಮೇ ನಾಥ ! ತ್ವದ್ಭಕ್ತಿಸ್ಸಾತ್ವಿಕೀ ಸ್ಥಿರಾ॥" ಕರುಣಾಸಾಗರ, ಶ್ರೀಹರಿ! ನನಗೆ ಮತ್ತೇನೂ ಬೇಡ,ಸ್ವಾಮಿ, ನಿನ್ನಲ್ಲಿ ಅಚಲವಾದ ಸಾತ್ವಿಕವಾದ ಭಕ್ತಿಯು ಸರ್ವದಾ ಇರುವಂತೆ ಅನುಗ್ರಹಿಸು ಅದೊಂದೇ ನನಗೆ ಸಾಕು !!

**ಶ್ರೀನೃಸಿಂಹ :** ತಥಾಸ್ತು ! ವತ್ಸ, ನಿನ್ನಿಚ್ಛೆಯಂತೇ ಆಗಲಿ ! ನಿನ್ನಂಥ ಏಕಾಂತಭಕ್ತರು ಐಹಿಕಾಮುಷ್ಮಿಕಗಳಲ್ಲಿಯೂ ವಿಷಯೋಪಭೋಗಗಳನ್ನು ಇಚ್ಛಿಸುವುದಿಲ್ಲ ! ನಿಜ, ಆದರೂ ನೀನು ನನ್ನ ಆಜ್ಞೆಯಂತೆ ಒಂದು ಮನ್ವಂತರಕಾಲ ಈ ದೈತ್ಯಸಾಮ್ರಾಜ್ಯವನ್ನು ಪರಿಪಾಲಿಸು, ಅನಂತರ ಮೋಕ್ಷದಲ್ಲಿ ಆನಂದಾತಿಶಯಕ್ಕೆ ಕಾರಣವಾದ ಅಧಿಕಪುಣ್ಯವನ್ನು ಸಂಪಾದಿಸಿ ನನ್ನ ವಿಶೇಷಪ್ರಸಾದಕ್ಕೆ ಪಾತ್ರನಾಗು![1]

**ಪ್ರಹ್ಲಾದ :** ದೇವ ! ನಿನ್ನನ್ನು ಕಂಡಮೇಲೂ ಮತ್ತೆ ಈ ರಾಜ್ಯಭಾರ ಐಹಿಕಸುಖಗಳಲ್ಲಿ ನನ್ನನ್ನು ತಳ್ಳುವೆಯಾ ? ಸ್ವಾಮಿ, ನಿನ್ನ ಚರಣಸನ್ನಿಧಿಗೆ ನಾನೆಂದು ಬರುವೆನು ?

**ಶ್ರೀನೃಸಿಂಹ :** ವತ್ಸ ! ಮುವತ್ತಾರು ಸಹಸ್ರವರ್ಷ ನೀನು ರಾಜ್ಯಭಾರ ಮಾಡಲೇಬೇಕು. ನೀನು, ನಾನು ಹೇಳುವಂತೆ ರಾಜ್ಯಭಾರಮಾಡು, ಅದು ನಿನಗೆ ಬಂಧಕವಾಗುವುದಿಲ್ಲ.

ಪ್ರಹ್ಲಾದ ! ಭಕ್ತ್ಯುದ್ರೇಕಗೊಳಿಸುವ ಮಂಗಲಕರವಾದ ನನ್ನ ಎಲ್ಲ ಅವತಾರ ಕಥೆಗಳನ್ನು ಶ್ರವಣಮಾಡುತ್ತಾ ಪ್ರಕೃತ್ಯಾದಿ ಸಕಲ ಪ್ರಪಂಚಕ್ಕೂ ಸತ್ತಾಪ್ರದನಾದ ನನ್ನನ್ನು ಯಾವಾಗಲೂ ಧ್ಯಾನಮಾಡುತ್ತಾ, ಧ್ಯಾನಯೋಗದಿಂದ ಪ್ರತಿಬಂಧಕ ಕರ್ಮಗಳನ್ನು ಉಪಮರ್ದನಮಾಡಿ, ಸರ್ವಭೂತಗಳಲ್ಲಿಯೂ ಇದ್ದು ಮುಖ್ಯ

---

1 ನೈಕಾಂತಿನೋ ಮೇ ಮಯಿ ಜಾತ್ವಿಹಾಶಿಷ ಆಶಾಸತೇಮುತ್ರ ತಥಾ ಭವಾದೃಶಾಃ
ತಥಾಪಿ ಮನ್ವಂತರಮೇತದತ್ರ ದೈತ್ಯೇಶ್ವರಾಣಾಮನುಭುಂಕ್ಷ್ವ ಭೋಗಾನ್ ॥
—ಭಾಗವತ, ೭-೧೦-೧೧

ಯಜ್ಞಭೋಕ್ತೃವಾದ ನನ್ನನ್ನು ಸರ್ವೋತ್ತಮ–ಸರ್ವಸ್ವತಂತ್ರನೆಂದು ಆರಾಧಿಸು! ನಿನ್ನ ಆಧಿಪತ್ಯದಲ್ಲಿ ಭೋಗ ಮುಂತಾದವು ಬಂದೇ ಬರುವುದರಿಂದ ಅದು ಮೋಕ್ಷಕ್ಕೆ ಪ್ರತಿಬಂಧಕವೆಂದು ಚಿಂತಿಸಬೇಡ.[1]

ಭೋಗೇನ ಪುಣ್ಯಂ ಕುಶಲೇನ ಪಾಪಂ ಕಲೇವರಂ ಕಾಲಜವೇನ ಹಿತ್ವಾ ।
ಕೀರ್ತಿಂ ವಿಶುದ್ಧಾಂ ಸುರಲೋಕಗೀತಾಂ ವಿತಾಯ ಮಾಮೇಷ್ಯಸಿ
ಮುಕ್ತಬಂಧಃ ॥ ೧೪ ॥

ಮೋಕ್ಷಕ್ಕೆ ಅಭಿಮತವಲ್ಲದ ಪುಣ್ಯವನ್ನು ಭೋಗದಿಂದ ಕಳೆದುಕೊಳ್ಳಬೇಕು. ಪ್ರಾಯಶ್ಚಿತ್ತಾದಿ ಕುಶಲಕರ್ಮದಿಂದ ಪಾಪವನ್ನು ನಿರ್ಮೂಲಮಾಡಬೇಕು- ಹೀಗೆ ಮಾಡಿ ದೇವಲೋಕಗಳಲ್ಲಿಯೂ ಗಾನಮಾಡುವ ನಿರ್ಮಲ ಕೀರ್ತಿಯನ್ನು ವಿಸ್ತಾರಗೊಳಿಸಿ;ಅನಿಷ್ಟನಿವೃತ್ತಿಯಾದ ಮೇಲೆ ನೀನು ನನ್ನ ಸನ್ನಿಧಿಗೆ ಬಂದುಸೇರುತ್ತೀಯೆ.

**ಪ್ರಹ್ಲಾದ :** ಅನುಗೃಹೀತೋಽಸ್ಮಿ. ಸ್ವಾಮಿ, ಮತ್ತೊಂದು ಅನುಗ್ರಹವನ್ನು ಯಾಚಿಸುತ್ತೇನೆ. ನನ್ನ ತಂದೆಯು ಪ್ರಭುವಾದ ನೀನು ತನ್ನ ಸೋದರನನ್ನು ಸಂಹರಿಸಿದಿ ಎಂದು ನಿನ್ನ ಮೇಲೆ ದ್ವೇಷಮಾಡಿದನು. ಸರ್ವಲೋಕ ಗುರುವಾದ ನಿನ್ನನ್ನು ಮನಬಂದಂತೆ ಅಜ್ಞಾನದಿಂದ ನಿಂದಿಸಿ ಪಾಪಿಯಾದನು. ನಿನ್ನ ಭಕ್ತನೆಂದು ನನಗೆ ದ್ರೋಹಮಾಡಿದನು. ಅವನೆಸಗಿದ ಮಹತ್ತರವಾದ ಪಾಪಮೋಚನೆಯಾಗುವುದೆಂತು ? ಅದು ನಿನ್ನ ಅನುಗ್ರಹವಿಲ್ಲದೆ ಸಾಧ್ಯವಿಲ್ಲ. ಆದ್ದರಿಂದ ಪ್ರಭು ! "ಪಿತಾ ಮೇ ಪೂಯೇತ" ಭಕ್ತವತ್ಸಲ, ಅವನನ್ನು ಪಾಪಮುಕ್ತನನ್ನಾಗಿ ಮಾಡಿ ನಿನ್ನ ಕರುಣಾಕಟಾಕ್ಷದಿಂದವನ್ನು ಪವಿತ್ರಗೊಳಿಸಿ ಸದ್ಗತಿಯನ್ನು ದಯಪಾಲಿಸು ! ಇಷ್ಟೇ ನನ್ನ ಪ್ರಾರ್ಥನೆ.[2]

**ಶ್ರೀನೃಸಿಂಹ :** ಪ್ರಹ್ಲಾದ ! ವಂಶೋದ್ಧಾರಕನಾದ ನಿನ್ನಂಥ ಸತ್ಪುತ್ರನು ಜನಿಸಿದ ಇಪ್ಪತ್ತೊಂದು ಕುಲದ ಪಿತೃಗಳೇ ಪಾವನರಾಗುವರೆಂದಮೇಲೆ ನಿನ್ನ ತಂದೆಯು ಪುನೀತನಾಗಿ ಸದ್ಗತಿ ಪಡೆಯುವುದರಲ್ಲಿ ಸಂದೇಹವೇನಿದೆ ? ನಿನ್ನ ಪಿತನು ನನ್ನ ಭಕ್ತನೇ ಆಗಿದ್ದು ವಿಪ್ರಶಾಪದಿಂದ ದೈತ್ಯನಾಗಿ ಅಸುರ ಸಂಬಂಧದಿಂದ ನನ್ನ ದ್ವೇಷಿಯಾಗಿದ್ದನು. ಈಗ ಅವನು ನನ್ನ ಅನುಗ್ರಹದಿಂದ ಉತ್ತಮ ಗತಿಯನ್ನೇ ಹೊಂದಿರುವನು.[3]ಸರ್ವಪ್ರಾಣಿಗಳಲ್ಲಿ ಸಮದರ್ಶಿಗಳೂ ಪ್ರಶಾಂತರೂ,ಅಹಿಂಸಕರೂ ಆದ ನನ್ನ ಭಕ್ತರು ಸಂಚರಿಸಿದ ಕೀಕಟಾದಿಗಳಿಂದ ಯುಕ್ತವಾದ ಪಾಪದೇಶಗಳೂ ಪವಿತ್ರವಾಗುವುದೆಂದಮೇಲೆ ನಿನ್ನಂಥ ಪರಮಭಕ್ತನು ಜನಿಸಿದ್ದರಿಂದ ಹಿರಣ್ಯಕಶ್ಯಪನೇ

1. ಭಾಗವತ ಸ್ಕಂಧ ೭. ಅಧ್ಯಾಯ ೧೦. ಶ್ಲೋ. ೧೨. ೧೩.
2. ,, ,, ,, ,, ,, ,,— ೧೬-೧೭-೧೮.
3. ಭಗವಾನುವಾಚ : ತ್ರಿಸಪ್ತಭಿಃ ಪಿತಾ ಪೂತಃ ಸಹ ತೇಽನಘ ।
ಯತ್ಸಾಧೋಽಸ್ಯ ಕುಲೇಜಾತೋ ಭವಾನ್ ವೈ ಕುಲಪಾವನಃ ।೧೯।

ಮೊದಲಾಗಿ ಇಪ್ಪತ್ತೊಂದು ಜನ್ಮಾಂತರದ ಪಿತೃಗಳೂ ಪಾಪಮುಕ್ತರಾಗುವುದರಲ್ಲಿ ಆಶ್ಚರ್ಯವೇನಿದೆ.[1]

ಹೀಗೆ ಹೇಳಿ ಭಗವಾನ್ ಶ್ರೀನರಸಿಂಹದೇವನು ಮಂದಹಾಸಬೀರುತ್ತಾ ಮತ್ತೆ ಅಪ್ಪಣೆಕೊಡಿಸಿದನು—

**ಶ್ರೀನೃಸಿಂಹ :** ವತ್ಸ, ಪ್ರಹ್ಲಾದ! ನೀನು ಯಾವ ವರವನ್ನೂ ಕೇಳಲಿಲ್ಲ. ಆದರೂ ನಿನ್ನಲ್ಲಿ ಸುಪ್ರೀತನಾಗಿ ನಿನಗೆ ಎರಡು ಅನನ್ಯಸಾಧಾರಣ ವರಗಳನ್ನು ಕರುಣಿಸುತ್ತೇನೆ-ಕೇಳು, ಭಕ್ತರಾಜ !

"ಯ ಏತತ್ಕೀರ್ತಯೇನ್ಮಹ್ಯಂ ತ್ವಯಾ ಗೀತಮಿದಂ ನರಃ ।
ತ್ವಾಂ ಚ ಮಾಂ ಚ ಸ್ಮರನ್ ಕಾಲೇ ಕರ್ಮಬಂಧಾತ್ಪ್ರಮುಚ್ಯತೇ ॥"

ಪ್ರಹ್ಲಾದ ! ನನ್ನನ್ನು ನೀನು ಭಕ್ತಿಯಿಂದ ಸ್ತುತಿಸಿದ ಈ ಪರಮಶುಭಕರವಾದ ಸ್ತೋತ್ರವನ್ನು ಯಾರು ಗಾನಮಾಡಿ ಪ್ರತಿನಿತ್ಯ ಪ್ರಾತಃಕಾಲಾದಿ ಕಾಲಗಳಲ್ಲಿ ಮೊದಲು ನಿನ್ನನ್ನೂ ನಂತರ ನನ್ನನ್ನೂ ಸ್ಮರಿಸುವರೋ ಅಂಥವರು ಅನಾಯಾಸವಾಗಿ ಈ ಸಂಸಾರರೂಪಬಂಧನದಿಂದ ಬಿಡುಗಡೆಹೊಂದಿ ನನ್ನ ಅನುಗ್ರಹದಿಂದ ಮೋಕ್ಷವನ್ನು ಪಡೆಯುವರು ! ![2]

ಭವಂತಿ ಪೂರುಷಾ ಲೋಕೇ ಮದ್ಭಕ್ತಾಸ್ತ್ವಾಮನುವ್ರತಾಃ ।
ಭವಾನ್ ಮೇ ಖಲು ಭಕ್ತಾನಾಂ ಸರ್ವೇಷಾಂ ಪ್ರತಿರೂಪಧೃಕ್ ॥೨೨॥

ಕುಮಾರ! ಈ ಪ್ರಪಂಚದಲ್ಲಿ ನನ್ನ ಭಕ್ತರ ಗುಂಪಿನಲ್ಲಿಯೂ ನಿನಗೆ ವೈಶಿಷ್ಟ್ಯಪೂರ್ಣ ಮಾಹಾತ್ಮ್ಯವುಂಟಾಗಿ ನಿನ್ನ ಕೀರ್ತಿಯು ಸರ್ವತ್ರಹರಡುವುದು. ನನ್ನ ಭಕ್ತರಾದ ಅವರೆಲ್ಲರೂ ನಿನ್ನನ್ನು ಅನುಸರಿಸಿ ಆಜ್ಞಾನುವರ್ತಿಗಳಾಗುವರು, ಅಥವಾ

---

1. ಭಗವಾನುವಾಚ: ತ್ರಿಸಪ್ತಭಿಃ ಪಿತಾ ಪೂತಃ ಪಿತೃಭಿಃ ಸಹ ತೇನಘ ।
ಯತ್ಸಾಧೋಸ್ಯ ಕುಲೇಜಾತೋ ಭವಾನ್ ವೈ ಕುಲಪಾವನಃ ॥

2. "ಮೋಕ್ಷದಸ್ತು ಜನಾರ್ದನಃ, ಮೋಕ್ಷಮಿಚ್ಛೇಜ್ಜನಾರ್ದನಾತ್" ಮುಂತಾದ ಪ್ರಮಾಣಗಳಿಂದ ಜನನ-ಮರಣರೂಪ ಸಂಸಾರಬಂಧ (ಕರ್ಮಬಂಧ)ದಿಂದ ಪಾರುಮಾಡಿ ಮೋಕ್ಷವನ್ನು ಕೊಡುವ ಪ್ರಭುವೆಂದರೆ ಶ್ರೀಹರಿಯೊಬ್ಬನೇ ಎಂಬುದು ಸ್ಪಷ್ಟ. ಶ್ರೀಹರಿಯ ಅನುಗ್ರಹದಿಂದ ಲಕ್ಷ್ಮೀದೇವಿಯರೂ ಮೋಕ್ಷಪ್ರದರೆಂದು ಶಾಸ್ತ್ರಗಳು ಹೇಳುವವು. "ವಾಯುಸ್ತು ತದನುಜ್ಞಯಾ" ಎಂಬ ಪ್ರಮಾಣದಂತೆ ಜೀವೋತ್ತಮರೂ ಶ್ರೀಹರಿಭಕ್ತಾಗ್ರಣಿಗಳೂಆದವಾಯುದೇವರು ಪರಮಾತ್ಮನ ಅನುಜ್ಞೆಯಿಂದ ಮೋಕ್ಷವನ್ನುಕೊಡುವರೆಂದು ಪ್ರಮಾಣವಿದೆ.ಅವರನ್ನು ಬಿಟ್ಟರೆ ಬೇರಾರಿಗೂ ಆ ಅಧಿಕಾರವಿಲ್ಲ ! ಹೀಗಿರಲು ಶ್ರೀಹರಿಯು ಪ್ರಹ್ಲಾದನಿಗೆ ಮೋಕ್ಷಪ್ರದಾನದ ವರವನ್ನಿತ್ತಿರುವುದರಿಂದ ನಮ್ಮ ಪ್ರಹ್ಲಾದರೂ ಕರ್ಮಬಂಧವನ್ನು ಹರಿಸುವರೆಂದು ವ್ಯಕ್ತವಾಗುವುದು. ಇದನ್ನು ವಿವೇಚಿಸಿದಾಗ ಪ್ರಹ್ಲಾದರಾಜರ ಮಹತ್ವ, ಇನ್ನಾರಲ್ಲೂ ಇಲ್ಲದ ಶ್ರೀಹರಿಯ ಅನುಗ್ರಹವೆಷ್ಟೆಂಬುದು ಮನವರಿಕೆಯಾಗಿ ಮಹದಾನಂದವಾಗುವುದು.

ಯಾರು ನಿನ್ನನ್ನು ಅನುಸರಿಸಿ, ನಿನ್ನ ಭಕ್ತರಾಗುವರೋ ಅವರೇ ನನ್ನ ಭಕ್ತರಾಗಲು ಅರ್ಹರಾಗುವರು ! ಅಂದರೆ ಪ್ರಹ್ಲಾದ, ನಿನ್ನ ಭಕ್ತರಾಗಿ ಅನುಸರಿಸಿದವರನ್ನೇ ನಾನು ಭಕ್ತರೆಂದು ಸ್ವೀಕರಿಸುವೆನು[1] ಏಕೆ ಗೊತ್ತೆ ? ವತ್ಸ ! ನೀನು ನನ್ನ ಎಲ್ಲ ಭಕ್ತರಿಗೂ[2] ಉದಾಹರಣೆಯಾಗಿದ್ದು ಎಲ್ಲರಿಗೂ ಆಶ್ರಯನಾಗಿದ್ದೀಯೆ !*

**ಪ್ರಹ್ಲಾದ:** ಮಹಾಪ್ರಭು! ನಿನ್ನ ಅಣತಿಯನ್ನು ಮತ್ತು ಅನುಗ್ರಹಿಸಿ ನೀನು ಕರುಣಿಸಿದ ವರಗಳನ್ನು ಶಿರಸಾಧರಿಸಿದ್ದೇನೆ. ದೇವ ! ನಿನ್ನ ಭಕ್ತವಾತ್ಸಲ್ಯಕ್ಕೆ ಎಣೆಯೇಯಿಲ್ಲ ! ಸ್ವಾಮಿ, ನಿನಗೆ ನಮಸ್ಕಾರ !

ಆಗ ಪ್ರಹ್ಲಾದರಾಜನು ಹರಿದ್ವೇಷಿಯಾದ ತಂದೆಯ ಅಂತ್ಯಕ್ರಿಯಾದಿಗಳನ್ನು ಹೇಗೆ ಮಾಡುವುದೆಂದು ಚಿಂತಿಸುತ್ತಿರುವುದನ್ನು ಕಂಡು ಶ್ರೀನರಸಿಂಹಸ್ವಾಮಿಯು "ಪ್ರಹ್ಲಾದ ! ನಿನ್ನ ತಂದೆಯ ಪ್ರೇತಕಾರ್ಯಾದಿಗಳನ್ನು ಹೇಗೆಮಾಡುವುದೆಂದು ಯೋಚಿಸಬೇಡ. ಅವನು ನನ್ನ ಸ್ವಾಭಾವಿಕ ಭಕ್ತನಾದ ಜಯನು. ವಿಪ್ರಶಾಪದಿಂದ ಅಸುರನಾಗಿ ಜನಿಸಿದ್ದನು. ಯುದ್ಧದಲ್ಲಿ ನನ್ನ ಅಂಗಸ್ಪರ್ಶದಿಂದಲೂ, ನಿನ್ನ ಪ್ರಾರ್ಥನೆಯಂತೆ ನಾನು ಅವನ ದೇಹವನ್ನು ಕೃಪಾಕಟಾಕ್ಷದಿಂದ ಈಕ್ಷಿಸಿದ್ದರಿಂದಲೂ ಅದು ಪವಿತ್ರವಾಗಿದೆ, ನನ್ನ ಆಜ್ಞೆಯಂತೆ ನೀನು ನಿನ್ನ ತಂದೆಯ ರಾಜ್ಯದಲ್ಲಿ ಮಂಡಿಸಿ ನನ್ನ ಧ್ಯಾನಾಸಕ್ತನಾಗಿ ಬ್ರಹ್ಮಜ್ಞಾನಿಗಳ ಉಪದೇಶದಂತೆ ರಾಜ್ಯಭಾರ ಮಾಡುತ್ತಾ ವಿಹಿತ ಕರ್ಮಾನುಷ್ಠಾನಪರನಾಗಿ ಬಾಳು.[3]

ಅನಂತರ ಬ್ರಹ್ಮದೇವರು ಶ್ರೀಹರಿಯು ಅನುಗ್ರಹೋನ್ಮುಖರಾಗಿರುವುದನ್ನು ಕಂಡು ಶ್ರೀನೃಸಿಂಹದೇವರನ್ನು ಸ್ತುತಿಸಿದರು.

**ಶ್ರೀಬ್ರಹ್ಮ:** ಪರಾತ್ಪರ; ನಿಖಿಲಜಗತ್ತಿಗೆ ಸಾಕ್ಷೀಭೂತನಾದ ಪರಮಾತ್ಮ ಪರಮಚೇತನ ! ಆದಿಭೂತನೇ, ನೀನು ಜಗತ್ತಿಗೆ ಸಂತಾಪಪ್ರದನಾಗಿದ್ದ ಹಿರಣ್ಯಕಶಿಪುವನ್ನು ಸಂಹರಿಸಿ ಲೋಕಕಲ್ಯಾಣಮಾಡಿದ್ದೀಯೇ, ನನ್ನ ವರಪ್ರಭಾವ, ಚಾಂದ್ರಾಯಣಾದಿ ವ್ರತಗಳಿಂದಲೂ, ಶರೀರ ಬಲದಿಂದಲೂ ಉದ್ಧಟನಾಗಿ ಸ್ವರ್ಗದ ಅಮರಾವತಿ ಮುಂತಾದ ನಗರಗಳನ್ನು ನಾಶಪಡಿಸಿದ್ದನು. ಅವನನ್ನು ಸಂಹರಿಸಿ ಅವನ ಮಗನಾದ ಬಾಲ ಪ್ರಹ್ಲಾದನನ್ನು ನೀನು ಈಗ ಮೃತ್ಯುವಿನಿಂದ ಪಾರು ಮಾಡಿದ್ದೀಯೆ. ಇದರಿಂದ ಸಮಸ್ತ ಸುರರು, ಋಷಿಗಳು, ನರರು ಹೀಗೆ ಎಲ್ಲ ಸಜ್ಜನರಿಗೂ ಪರಮಾನಂದವಾಗಿದೆ. ದೇವ! ಮಂಗಳಕರನಾದ ನೀನು ಧ್ಯಾನಿಸುವ ಭಕ್ತರನ್ನು ಸಕಲಕಂಟಕಸಂಕಟಗಳಿಂದಲೂ ಮೃತ್ಯುವಿನಿಂದಲೂ ರಕ್ಷಿಸುತ್ತೀಯೆ.[4]

---

* ಪ್ರತಿರೂಪಧೃಕ್-ಎಂದರೆ ತಾತ್ವಿಕದೇವತೆಗಳು, ನಾರದಾದಿಗಳನ್ನು ಬಿಟ್ಟು ಸರ್ವ ಜೀವರಿಗೆ ಬಿಂಬನಾಗಿದ್ದೀಯೆ : —ಸತ್ಯಧರ್ಮೀಯ

1, ಯೇ'ತ್ವಾಮನುವೃತಾಃ ತೇ ಏವ ಮದ್ಭಕ್ತಾಃ ನಾನ್ಯೇ ।

2, ತಾತ್ವಿಕ ದೇವತೆಗಳು ಮತ್ತು ನಾರದಾದಿಗಳನ್ನು ಬಿಟ್ಟು ಸರ್ವರಿಗೂ ಪ್ರಹ್ಲಾದರು ಆಶ್ರಯ ಎಂದು ಭಾವ,

3, ಭಾಗವತ–ಸಪ್ತಮಸ್ಕಂಧ, ಅಧ್ಯಾಯ ೧೦. ಶ್ಲೋಕ–೨೨–೨೩

4, " " " " ೨೬–೨೯

ಆಗ ಶ್ರೀನೃಸಿಂಹದೇವರು "ಕಮಲಸಂಭವ! ಕ್ರೂರಿಗಳಾದ ಅಸುರರಿಗೆ ಇನ್ನು ಮುಂದೆ ಇಂಥ ವರಗಳನ್ನು ಕೊಡಬೇಡ. ಈಗ ನನ್ನ ಪ್ರೇರಣೆಯಿಂದಲೇ ಹಿರಣ್ಯ ಕಶ್ಯಪನಿಗೆ ವರಕೊಟ್ಟಿದ್ದು ನನಗೆ ಸಮ್ಮತವಾಗಿತ್ತು. ಮುಂದೆ ಇಂಥ ವರಗಳನ್ನು ಕೊಡಬೇಡ" ಎಂದು ಬ್ರಹ್ಮದೇವರಿಗೆ ಆಜ್ಞಾಪಿಸಿದರು. ಬ್ರಹ್ಮದೇವರು ಮಹಾ ಪ್ರಭುವಿನ ಆಜ್ಞೆಯನ್ನು ಶಿರಸಾಧರಿಸಿರುವುದಾಗಿ ವಿಜ್ಞಾಪಿಸಿದರು.

ಪ್ರಹ್ಲಾದರು "ಮಹಾಪ್ರಭು ! ನಿನ್ನ ಆಜ್ಞೆಯಂತೆ ವರ್ತಿಸುತ್ತೇನೆ. ಆದರೆ ನಿನ್ನ ಸನ್ನಿಧಿಗೆ ಯಾವಾಗ ಬರುವುದು" ಎಂದು ಕೇಳಿದಾಗ ಶ್ರೀನರಸಿಂಹದೇವರು ಮಂದಹಾಸಮುಖಾರವಿಂದರಾಗಿ "ವತ್ಸ! ಪ್ರಹ್ಲಾದ, "ಯಚ್ಛಾಂತಿಮೇಚಾಂತಿಪೇ!" ನೀನು ನನ್ನಲ್ಲಿ ಮುಂದಿನ ಮೂರು ಜನ್ಮಗಳಲ್ಲಿಯೂ ನನ್ನ ಭಕ್ತನಾಗಿ, ದಾಸನಾಗಿ ಸೇವಿಸುವಂತೆ ಅನುಗ್ರಹಿಸುವಂತೆ ಪ್ರಾರ್ಥಿಸಿರುವಿಯಲ್ಲವೆ ? ನಿನ್ನ ಅಭಿಲಾಷೆಯಂತೆ ನಿನ್ನ ಮುಂದಿನ ಮೂರುಜನ್ಮಗಳಲ್ಲಿಯೂ ನೀನು ನನ್ನನ್ನು ವಿಶೇಷಾಕಾರವಾಗಿ ಸೇವಿಸಿ, ನಿನ್ನ ಕೊನೆಯಜನ್ಮದಲ್ಲಿ, ಕಲಿಯುಗದ ಕಲ್ಮಷದಿಂದ ಅಜ್ಞಾನಾಂಧಕಾರದಲ್ಲಿ ಮುಳುಗಿ ಉದ್ಧಾರದದಾರಿಗಾಣದೆ ಬಳಲುವ ಸುಜನರಿಗೆ ಜ್ಞಾನದ ಬೆಳಕನ್ನು ನೀಡಿ, ದೀನ-ದಲಿತರು, ಸಕಲ ಸಜ್ಜನರುಗಳ ಮನೋಭೀಷ್ಟಗಳನ್ನು ಪೂರ್ಣಮಾಡಿ, ನಿನ್ನನ್ನು ಆಶ್ರಯಿಸಿರುವ ಸಮಸ್ತ ಭಕ್ತಜನರೊಡನೆ ನನ್ನ ಸನ್ನಿಧಿಗೆ ಬಂದು ಸೇರಿ ಸುಖಿಸುವೆ ವತ್ಸ! ನಿನಗೆ ಮಂಗಳವಾಗಲಿ" ಎಂದು ಹೇಳಿ ಎಲ್ಲರೂ ನೋಡುತ್ತಿರು ವಂತೆ ಅಂತರ್ಧಾನನಾದನು.

ಭಗವಂತನು ಅದೃಶ್ಯನಾದ ಮೇಲೆ ಕುಲಪುರೋಹಿತರಾದ ಶುಕ್ರಾಚಾರ್ಯರು ಪ್ರಹ್ಲಾದನಿಂದ ಹಿರಣ್ಯಕಶ್ಯಪನ ಅಂತ್ಯಕ್ರಿಯಾದಿಗಳನ್ನು ಸಾಂಗವಾಗಿ ನೆರವೇರಿಸಿ ದರು. ಪ್ರಹ್ಲಾದ ರಾಜನು ಸಹ್ಲಾದಾದಿ ಸಹೋದರರೊಡನೆ ಮಂಗಳಸ್ನಾನಮಾಡಿ ಪರಿಶುದ್ಧನಾದನು.

## ೨೨. ಶ್ರೀಪ್ರಹ್ಲಾದರಾಜರ ಪಟ್ಟಾಭಿಷೇಕ

ದೇವತೆಗಳ ಗುರುಗಳಾದ ಬೃಹಸ್ಪತ್ಯಾಚಾರ್ಯರು ನಿಷ್ಕರ್ಷಿಸಿದ ಉತ್ತಮ ಮುಹೂರ್ತದಲ್ಲಿ ದೈತ್ಯಸಾಮ್ರಾಜ್ಯದಲ್ಲಿ ಪ್ರಹ್ಲಾರಾಜರಿಗೆ ಶ್ರೀಬ್ರಹ್ಮದೇವರ ಆಜ್ಞಾನುಸಾರವಾಗಿ ಪಟ್ಟಾಭಿಷೇಕವನ್ನು ನೆರವೇರಿಸಲು ನಿಶ್ಚಯಿಸಲಾಯಿತು. ಈ ಸಂತೋಷ ಸಮಾಚಾರವನ್ನಾಲಿಸಿ ದೇಶದೇಶಗಳಿಂದ ಋಷಿ-ಮುನಿಗಳು, ಪ್ರಜರು, ಧರ್ಮಶೀಲರು, ಭಗವದ್ಭಕ್ತರುಗಳು ರಾಜಧಾನಿಗೆ ಬಂದು ಸೇರಹತ್ತಿದರು. ದೈತ್ಯ ರಾಜನ ಸಂಹಾರ ಕಾಲದಲ್ಲಿ ಬಂದಿದ್ದ ಶಚೀಪುರಂದರಾದಿ ಸಕಲದೇವತೆಗಳೂ, ಗಂಧ ರ್ವರೂ, ಅಪ್ಸರರು, ಯಕ್ಷ, ಕಿನ್ನರ, ಕಿಂಪುರುಷರು, ರಾಕ್ಷಸರು, ದಾನವರು ಎಲ್ಲರೂ ಪ್ರಹ್ಲಾದರಾಜರ ಪಟ್ಟಾಭಿಷೇಕವನ್ನು ನಿರೀಕ್ಷಿಸಲು ಕಾತರರಾದರು. ದೈತ್ಯ

ರಾಜಧಾನಿಯಲ್ಲಿ ಸಂಭ್ರಮ ಹೇಳತೀರದು. ರಾಜಧಾನಿಯನ್ನು ಸುಂದರವಾಗಿ ತಳಿರು ತೋರಣ, ಧ್ವಜಪತಾಕೆ ರಂಭಾಸ್ತಂಭಾದಿಗಳಿಂದ ಅಲಂಕರಿಸಲಾಗಿದೆ. ಅರಮನೆಯಲ್ಲಿನ ವೈಭವವಂತೂ ಅವರ್ಣನೀಯ.

ಮಂಗಳವಾದ್ಯ, ವೇದಘೋಷಗಳಾಗುತ್ತಿರಲು, ಗಂಧರ್ವರು ಗಾನಮಾಡುತ್ತಿರಲು, ಅಪ್ಸರಸ್ತ್ರೀಯರು ಸುಂದರವಾಗಿ ಹಾವಭಾವವಿಲಾಸಗಳಿಂದ ಶ್ರೀಹರಿಯ ನಾನಾ ಅವತಾರ ಲೀಲೆಗಳನ್ನು ನಿರೂಪಿಸುತ್ತಾ ನರ್ತಿಸುತ್ತಿದರು.

ಆಗ ಸರ್ವಾಲಂಕಾರಭೂಷಿತರಾದ ಪ್ರಹ್ಲಾದರಾಜರು ಸಹ್ಲಾದ, ಅನುಹ್ಲಾದ, ಹ್ಲಾದರೆಂಬ ಪ್ರಿಯ ಸಹೋದರರೊಡನೆ ಶ್ರೀಹರಿಯ ವಿಶೇಷ ಸನ್ನಿಧಾನ,ಅನುಗ್ರಹಗಳಿಗೆ ಪಾತ್ರರಾದ ಶ್ರೀವಾಣೀ ಕಮಲಾಸನರು, ಶ್ರೀಭಾರತೀ ಪವಮಾನರೂ, ಶ್ರೀಸೌಪರ್ಣೀ ಗರುಡದೇವರು, ಶ್ರೀವಾರುಣೀ ಶೇಷದೇವರು, ಶ್ರೀಉಮಾಮಹೇಶ್ವರರು, ಶ್ರೀಶಚೀ ಪುರಂದರಾದಿ ದೇವತೆಗಳಿಗೆ ವಿಧಿಪೂರ್ವಕವಾಗಿ ಪೂಜೆಮಾಡಿ, ಸ್ತುತಿಸಿ ಅವರಿಂದ ಆಶೀರ್ವಾದ ಪಡೆದರು.[1]

ಅನಂತರ ಸುಮಹೂರ್ತದಲ್ಲಿ ಮಂಗಳವಾದ್ಯ, ವೇದಘೋಷಗಳಾಗುತ್ತಿರಲು, ಸಕಲ ದೇವತೆಗಳು, ಋಷಿಮುನಿಗಳು, ದೈತ್ಯದಾನವರೇ ಮೊದಲಾದ ಸರ್ವರ ಸಮಕ್ಷವಾಗಿ ಶ್ರೀಬ್ರಹ್ಮದೇವರು ಬೃಹಸ್ಪತ್ಯಾಚಾರ್ಯ, ದೈತ್ಯಗುರು ಶುಕ್ರಾಚಾರ್ಯರನ್ನು ಮುಂದೆಮಾಡಿಕೊಂಡು ಸ್ವಹಸ್ತದಿಂದ ಶ್ರೀಪ್ರಹ್ಲಾದರಾಜರನ್ನು ಸಿಂಹಾಸನದಲ್ಲಿ ಮಂಡಿಸಿ ರತ್ನಖಚಿತ ಕಿರೀಟವನ್ನು ಪ್ರಹ್ಲಾದರ ತಲೆಯಮೇಲಿರಿಸಿ, ರತ್ನಖಚಿತ ಖಡ್ಗವನ್ನುಕೊಟ್ಟು, ಸಕಲತೀರ್ಥಗಳಿಂದ ಬಂದಿದ್ದ ಪವಿತ್ರಜಲಗಳಿಂದ ಪ್ರೋಕ್ಷಣಮಾಡಿ ಅನರ್ಘನವರತ್ನಗಳಿಂದ ಪ್ರಹ್ಲಾದರಾಜರಿಗೆ ಅಭಿಷೇಕಮಾಡಿ ವಿಜೃಂಭಣೆಯಿಂದ ದೈತ್ಯದಾನವರ ಸಾರ್ವಭೌಮನೆಂದು ಸಾಮ್ರಾಜ್ಯಾಭಿಷೇಕವನ್ನು ನೆರವೇರಿಸಿ ಆಶೀರ್ವದಿಸಿದರು.[2] ಸುಮಂಗಲೆಯರು ಕದಲಾರತಿ, ಮುತ್ತಿನಾರತಿ, ರತ್ನದಾರತಿ, ದೀಪಾರತಿಗಳನ್ನೆತ್ತಿದರು. ಆಗ ಶ್ರೀಹರಿ ಭಕ್ತಾಗ್ರಣಿಗಳಾದ ಪ್ರಹ್ಲಾದರಾಜರ ಪಟ್ಟಾಭಿಷೇಕದಿಂದ ಹರ್ಷನಿರ್ಭರವಾದ ದೇವದುಂದುಭಿಗಳು ಮೊಳಗಿದವು. ದೇವತೆಗಳು ಪುಷ್ಪವೃಷ್ಟಿ ಮಾಡಿದರು. ನೆರೆದ ಸಜ್ಜನರು "ಜಯ ಜಯ ಪ್ರಹ್ಲಾದರಾಜ, ದೈತ್ಯಕುಲಸಾರ್ವಭೌಮ, ಶ್ರೀಹರಿ ಭಕ್ತಾಗ್ರೇಸರ, ಸದ್ಧರ್ಮಸಂಸ್ಥಾಪನಾಚಾರ್ಯ, ಜಯ ಜಯ" ಎಂದು ಗಗನವೇ ಭೇದಿಸುವಂತೆ ಹರ್ಷಧ್ವನಿಮಾಡಿದರು.[3]

---

1 ತತಃ ಸಂಪೂಜ್ಯ ವಿಧಿವತ್ ವಮದೇವಪರಮೇಷ್ಠಿನಮ್
ಭವಂ ಪ್ರಜಾಪತೀನ್ ದೇವಾನ್ ಪ್ರಹ್ಲಾದೋ ಭಗವತ್ಕಲಾಃ ॥೩೨॥
ಭಾಗವತ, ಸ್ಕಂಧ ೭-೮-೧೦

2. ತತಃ ಕಾವ್ಯಾದಿಭಿಃ ಸಾರ್ಧಂ ಮುನಿಭಿಃ ಕಮಲಾಸನಃ ।
ದೈತ್ಯಾನಾಂ ದಾನವಾನಾಂ ಚ ಪ್ರಹ್ಲಾದಮಕರೋತ್ಪತಿಮ್ ॥೩೩

ಆಗ ದೇವತೆಗಳು, ದೈತ್ಯರು ಮೊದಲಾಗಿ ಸರ್ವರೂ ಪ್ರಹ್ಲಾದರಾಜರಿಗೆ ಅಪೂರ್ವ ಉಡುಗೊರೆಗಳನ್ನರ್ಪಿಸಿದರು. ಪ್ರಹ್ಲಾದರಾಜರು ಎಲ್ಲವೂ ಶ್ರೀಹರಿಚಿತ್ತವೆಂದು ನುಡಿಯುತ್ತಾ ಪೂಜ್ಯರೂ, ಹಿರಿಯರೂ ಆದ ಸರ್ವರಿಗೂ ವಂದಿಸಿ ಎಲ್ಲರ ಆಶೀರ್ವಾದ ಪಡೆದು, ಅವರವರ ಯೋಗ್ಯತೆಗೆ ತಕ್ಕಂತೆ ಮಾನಮರ್ಯಾದೆ ಮಾಡಿ, ಉಡುಗೊರೆ ನೀಡಿದರು. ಹೀಗೆ ಶ್ರೀಪ್ರಹ್ಲಾದರಾಜರ ಪಟ್ಟಾಭಿಷೇಕೋತ್ಸವವು ವಿಜೃಂಭಣೆಯಿಂದ ಸಾಂಗವಾದ ಮೇಲೆ ಬ್ರಹ್ಮಾದಿದೇವತೆಗಳೆಲ್ಲರೂ, ಋಷಿಮುನಿಗಳೂ ಪ್ರಹ್ಲಾದರನ್ನು ಅಭಿನಂದಿಸಿ, ಆಶೀರ್ವದಿಸಿ ತಮ್ಮ ತಮ್ಮ ಲೋಕ-ಆಶ್ರಮಗಳಿಗೆ ತೆರಳಿದರು[1].

## ೨೩. ಶ್ರೀಪ್ರಹ್ಲಾದರಾಜರ ರಾಜ್ಯಭಾರ

ಶ್ರೀಪ್ರಹ್ಲಾದರಾಜರು ಶ್ರೀನೃಸಿಂಹದೇವರು ಆಜ್ಞಾಪಿಸಿದಂತೆ ದೈತ್ಯ ಸಾಮ್ರಾಜ್ಯದಲ್ಲಿ ಪಟ್ಟಾಭಿಷಿಕ್ತರಾದ ಮೇಲೆ ಮಂಗಳಕರವಾದ, ಭಕ್ತಿಪ್ರಚೋದಕವಾದ ಶ್ರೀಹರಿಯ ವಿವಿಧಾವತಾರ ಕಥೆಗಳನ್ನು ಜ್ಞಾನಿಗಳಿಂದ ಶ್ರವಣಮಾಡಿ ಆನಂದಿಸುತ್ತಾ, ಬ್ರಹ್ಮಜ್ಞಾನಿಗಳ ಉಪದೇಶ-ಮಾರ್ಗದರ್ಶಗಳಂತೆ ತಮ್ಮ ಪ್ರಜನನ್ನು ಮಕ್ಕಳಂತೆ ಕಾಣುತ್ತಾ, ಸರ್ವಜನರ ಅಭ್ಯುದಯ-ಹಿತಕಾರಕ ಕಾರ್ಯಗಳನ್ನೆಸಗುತ್ತಾ ಜನತೆಯಲ್ಲಿ ಶ್ರೀಹರಿತತ್ವಜ್ಞಾನ, ಧರ್ಮ, ಸದಾಚಾರ, ಪರೋಪಕಾರ, ಅಹಿಂಸಾ, ಶೀಲ-ವಿನಯಾದಿ ಸದ್ಗುಣಗಳು ವೃದ್ಧಿಸುವಂತೆ ಸರ್ವಜನರ ಕಲ್ಯಾಣಕ್ಕಾಗಿಯೇ ಶ್ರಮಿಸುತ್ತಾ ಧರ್ಮದಿಂದ ರಾಜ್ಯಭಾರ ಮಾಡುತ್ತಿದ್ದರು.

ಪ್ರಹ್ಲಾದರಾಜರು ಸಮಸ್ತಜಗತ್ತಿಗೂ ಶ್ರೀಹರಿಯೇ ಸತ್ತಾಪ್ರದನೆಂಬ ನಿಶ್ಚಯ ಜ್ಞಾನದಿಂದ ನಿಷ್ಕಾಮನೆಯಿಂದ ಸರ್ವವನ್ನೂ ಶ್ರೀಹರಿಗೆ ಸಮರ್ಪಿಸಿ ಶ್ರೀರಮಾರಮಣನನ್ನು ಭಕ್ತಿಯಿಂದ ಆರಾಧಿಸುತ್ತಾ, ಧ್ಯಾನಿಸುತ್ತಾ, ಸರ್ವದಾ ಹರಿಭಕ್ತಿ, ಭಾಗವತಧರ್ಮಪ್ರಸಾರಕರಾಗಿ ಧ್ಯಾನಯೋಗದಿಂದ ಪ್ರತಿಬಂಧಕ ಕರ್ಮಗಳನ್ನು ಉಪಮರ್ದನಮಾಡಿ, ಸರ್ವಭೂತಗಳಲ್ಲಿ ನಿಂತು, ಮುಖ್ಯವಾಗಿ ಯಜ್ಞಭೋಕ್ತೃವಾದ ಶ್ರೀಹರಿಯು ಸರ್ವೋತ್ತಮ, ಸರ್ವಸ್ವತಂತ್ರನೆಂದು ತಿಳಿದು ಪೂಜಿಸುತ್ತಿದ್ದರು. ಮೋಕ್ಷಕ್ಕೆ ಉಪಯುಕ್ತವಲ್ಲದ ಹೆಚ್ಚಿನ ಪುಣ್ಯವನ್ನು ಭೋಗದಿಂದ ನಿವೃತ್ತಿ ಮಾಡಿಕೊಂಡು [ಭೋಗೇನ ಪುಣ್ಯಂ-ಭಾಗವತ] ಪ್ರಾಯಶ್ಚಿತ್ತಾದಿ ಕುಶಲಕರ್ಮಗಳಿಂದ ಪಾಪಪರಿಹಾರ ಮಾಡಿಕೊಂಡು [ಕುಶಲೇನ ಪಾಪಂ-ಭಾಗವತ]

---

1. ಅಭಿನಂದ್ಯ ತತೋ ದೇವಾಃ ಪ್ರಯುಜ್ಯ ಪರಮಾಶಿಷಃ ।
ಸ್ವಧಾಮಾನಿ ಯಯೂ ರಾಜನ್ ಬ್ರಹ್ಮಾದ್ಯಾಃ ಪ್ರತಿಪೂಜಿತಾಃ ॥೭೪॥

ಜಗತ್ತಿಗೆ ಆದರ್ಶರಾದ ಚಕ್ರವರ್ತಿ, ಶ್ರೀಹರಿಭಕ್ತಾಗ್ರೇಸರರೆಂದು ಕೀರ್ತಿಗಳಿಸಿದರು. ಅವರ ಕೀರ್ತಿಯನ್ನು ಮೂರುಲೋಕಗಳಲ್ಲಿಯೂ ಸುಜನರು ಹಾಡಹತ್ತಿದರು. [ಕೀರ್ತಿಂ ವಿಶುದ್ಧಾಂ ಸುರಲೋಕಗೀತಾಂ—ಭಾಗವತ].

ಶ್ರೀಹರಿಭಕ್ತರಾದ ಪ್ರಹ್ಲಾದರು ಆತ್ಮೀಯರ ಸಲಹೆಯಂತೆ ಗೃಹಸ್ಥಧರ್ಮವನ್ನು ಸ್ವೀಕರಿಸಿ ಅದೂ ಶ್ರೀಭಗತ್ಪೂಜೆಗೆ ಸಾಧನವಾಗುವಂತೆ ವರ್ತಿಸುತ್ತಾ ದಾಂಪತ್ಯಜೀವನವನ್ನು ನಡೆಸುತ್ತಿದ್ದರು. ಭಗವಂತನ ಅನುಗ್ರಹದಿಂದ ಅವರಿಗೆ ಆಯುಷ್ಮಾನ್, ಶಿಬಿ, ಬಾಷ್ಕಲ ಮತ್ತು ವಿರೋಚನರೆಂಬ ನಾಲ್ವರು ಪುತ್ರರು ಜನಿಸಿದರು.[1]

## ೨೪. ಪ್ರಹ್ಲಾದರಾಜರ ನ್ಯಾಯನಿಷ್ಠೆ

ಪ್ರಹ್ಲಾದರಾಜರಲ್ಲಿ ಸತ್ಯ-ಧರ್ಮಪ್ರಜ್ಞೆ, ನ್ಯಾಯನಿಷ್ಠೆಗಳು ಅಸದೃಶವಾಗಿದ್ದವು. ಪ್ರಹ್ಲಾದರ ನ್ಯಾಯನಿಷ್ಠುರತೆಯನ್ನು ಎತ್ತಿಸಾರುವ ಅನೇಕ ಸಂದರ್ಭಗಳು ವೇದ-ಪುರಾಣಾದಿಗಳಿಂದ ತಿಳಿಯಬಹುದಾಗಿದೆ.

ಪ್ರಹ್ಲಾದರಾಜರ ಪುತ್ರನಾದ ವಿರೋಚನನು ಗುರುಕುಲದಲ್ಲಿ ವ್ಯಾಸಂಗ ಮಾಡುತ್ತಿರುವಾಗ ಜರುಗಿದ ಒಂದು ಘಟನೆಯು ವಜ್ರಕ್ಕೆ ಕುಂದಣವಿಟ್ಟಂತೆ ಪ್ರಹ್ಲಾದರ ಕೀರ್ತಿಯನ್ನು ಬೆಳಗಿಸಿತು.

ಗುರುಕುಲದಲ್ಲಿ ದೈತ್ಯ-ದಾನವ-ಬ್ರಾಹ್ಮಣಾದಿ ವಿದ್ಯಾರ್ಥಿಗಳು ವ್ಯಾಸಂಗ ಮಾಡುತ್ತಿದ್ದರು. ಅಲ್ಲಿ ವಿದ್ಯಾರ್ಥಿಗಳು ಅನೇಕ ವಿಷಯಗಳನ್ನು ಚರ್ಚಿಸುತ್ತಿದ್ದರು. ಒಂದು ದಿನ ಜಗತ್ತಿನಲ್ಲಿ ಯಾರು ಶ್ರೇಷ್ಠರು ಎಂಬ ಪ್ರಶ್ನೆ ಉದ್ಭವಿಸಿದಾಗ ವಿರೋಚನನು ತಾನೇ ಶ್ರೇಷ್ಠನೆಂದು ಹೇಳಿದನು. ಉಳಿದ ವಿದ್ಯಾರ್ಥಿಗಳು ಚಕ್ರವರ್ತಿಯ ಮಗನೆಂಬ ಅಹಂಭಾವದಿಂದ ಹೀಗೆ ಪ್ರಲಾಪಿಸಿದ್ದಾನೆ—ಅದು ತಪ್ಪು ಎಂದು ತಿಳಿದಿದ್ದರೂ ವಿರೋಚನನ ಭಯದಿಂದ ಮೌನವಹಿಸಿದರು. ಆದರೆ ಅದನ್ನು ನೋಡಿ ಸುಮ್ಮನಿದ್ದರೆ ವಿರೋಚನನನ್ನು ಅಡ್ಡದಾರಿಗೆ ಹೋಗಲು ಬಿಟ್ಟಂತಾಗುವುದು, ಶ್ರೀಹರಿಭಕ್ತಾಗ್ರಣಿಗಳಾದ ಪ್ರಹ್ಲಾದರ ಪುತ್ರನು ಹಾಗೆ ಆಗಬಾರದೆಂಬ ಉದ್ದೇಶದಿಂದ ಗುರುಕುಲದ ಉಪಾಧ್ಯಾಯರಲ್ಲೊಬ್ಬರ ಪುತ್ರನಾದ ಸುಮತಿ ಎಂಬ ಬ್ರಾಹ್ಮಣಕುಮಾರನು— "ವಿರೋಚನ, ನೀನು ಹೇಳಿದ್ದು ಸರಿಯಲ್ಲ. ಜಗತ್ತಿನಲ್ಲಿ ಒಬ್ಬ ವ್ಯಕ್ತಿಯು ಶ್ರೇಷ್ಠ ಅಥವಾ ಪೂಜ್ಯನೆನಿಸುವುದು, ಅವನ ಕುಲ, ಸಿರಿಸಂಪತ್ತು, ಅಧಿಕಾರಗಳಿಂದಲ್ಲ. ಯಾವನು ಬ್ರಹ್ಮಜ್ಞಾನಿಯೋ ಅವನೇ ಶ್ರೇಷ್ಠನೆಂದು ಶಾಸ್ತ್ರಗಳು ಸಾರುವವು. ಆದುದರಿಂದ ನೀನು ಶ್ರೇಷ್ಠನಲ್ಲ !" ಎಂದು ಹೇಳಿದನು ಇದರಿಂದ

1. ಮತ್ಸ್ಯಪುರಾಣ—ಆರನೆಯ ಅಧ್ಯಾಯ.

ವಿರೋಚನನಿಗೆ ಬಹುಕೋಪ ಅಸಮಾಧಾನಗಳುಂಟಾದವು. ಆಗ ಅವನು "ನೀನು ಬ್ರಾಹ್ಮಣನಾದ್ದರಿಂದ ನೀನೇ ಶ್ರೇಷ್ಠನೆಂದು ತಾನೇ ನಿನ್ನ ಅಭಿಪ್ರಾಯ?" ಎನಲು ಸುಮತಿಯು "ಮಿತ್ರ ! ಹಾಗೆ ನಾನು ಹೇಳಲಿಲ್ಲ. ಬ್ರಾಹ್ಮಣ— ಎಂದರೆ ಬ್ರಹ್ಮ ನನ್ನು ತಿಳಿದವನು. ಅಂದರೆ ಬ್ರಹ್ಮಜ್ಞಾನಿ. ಹಾಗೆ ಬ್ರಹ್ಮಜ್ಞಾನಿಯಾದವನೇ ಶ್ರೇಷ್ಠ ನೆಂದು ನನ್ನ ಅಭಿಮತ" ಎಂದು ಹೇಳಿದನು. ಅದರ ಮೇಲೆ ಚರ್ಚೆನಡೆದು ಕೊನೆಗೆ ವಿರೋಚನನು "ಇದು ಇಂದು ತೀರ್ಮಾನವಾಗಲೇಬೇಕು. ಸೋತವರು ಗೆದ್ದವರಿಗೆ ತಲೆದಂಡ ತರಬೇಕು" ಎಂದು ಹಟಹಿಡಿದಿದ್ದರಿಂದ "ಈ ವಿಚಾರವನ್ನು ನಿಷ್ಪಕ್ಷಪಾತ ವಾಗಿ ನಿರ್ಣಯ ಹೇಳಲು ಶ್ರೀಪ್ರಹ್ಲಾದರಾಜರೊಬ್ಬರೇ ಸಮರ್ಥ"ರೆಂದು ಎಲ್ಲರೂ ಒಪ್ಪಿದರು.

ವಿದ್ಯಾರ್ಥಿಗಳು, ಸುಮತಿ ಮತ್ತು ವಿರೋಚನರು ಪ್ರಹ್ಲಾದರಲ್ಲಿಗೆ ಬಂದು ಎಲ್ಲ ವಿಚಾರವನ್ನು ನಿವೇದಿಸಿ 'ನೀವೇ ಇದರ ನಿರ್ಣಯಮಾಡಬೇಕು' ಎಂದು ಕೋರಿದರು. ವಿರೋಚನನು ತಾನು ರಾಜಕುಮಾರನಾದುದರಿಂದ ತಂದೆಯು ತನ್ನ ಪರವಾಗಿಯೇ ತೀರ್ಪು ನೀಡುವನೆಂದು ಮನದಲ್ಲೇ ಉಬ್ಬಿದನು. ಬ್ರಾಹ್ಮಣ ಕುಮಾರನು ಪ್ರಹ್ಲಾದರು ಮಹಾನುಭಾವರು, ಭಗವದ್ಭಕ್ತರು. ಸತ್ಯನಿಷ್ಠರು ಆದುದರಿಂದ ಸತ್ಯವನ್ನೇ ಎತ್ತಿಹಿಡಿಯುವರೆಂದು ದೃಢವಾಗಿ ನಂಬಿದನು.

ಪ್ರಹ್ಲಾದರಿಗೆ ಇದೊಂದು ಸತ್ವಪರೀಕ್ಷೆಯೆಂದು ತೋರಿತು. ಇಂಥ ಬಿಕ್ಕಟ್ಟಿನ ಪ್ರಸಂಗದಲ್ಲಿ ಬೇರೆಯವರಾಗಿದ್ದರೆ ಏನುಮಾಡುತ್ತಿದ್ದರೋ. ಆದರೆ ಮಹಾನು ಭಾವರಾದ ಪ್ರಹ್ಲಾದರಾಜರು ನ್ಯಾಯನಿಷ್ಠೆಯಿಂದ ಸತ್ಯವನ್ನೇ ಎತ್ತಿಹಿಡಿದರು. ಅವರು ಅನೇಕ ಉದಾಹರಣೆಗಳನ್ನೂ ಪ್ರಮಾಣಗಳನ್ನೂ ವಿಮರ್ಶಿಸುತ್ತಾ ಕೊನೆಗೆ ಬ್ರಾಹ್ಮಣ ಕುಮಾರನು ಹೇಳಿದಂತೆ ಬ್ರಹ್ಮಜ್ಞಾನಿಯೇ ಶ್ರೇಷ್ಠ ಮತ್ತು ಪೂಜ್ಯ ಎಂದು ತೀರ್ಮಾನಹೇಳಿಬಿಟ್ಟರು! ಅದರ ಪರಿಣಾಮವೇನಾದೀತೆಂಬುದು ಅವರಿಗೆ ತಿಳಿದಿತ್ತು. ಆದರೂ ಅವರು ಸ್ವಾರ್ಥಕ್ಕಾಗಿ ಸತ್ಯ-ನ್ಯಾಯಗಳಿಗೆ ದ್ರೋಹಮಾಡದೇ ತಮ್ಮ ತೀರ್ಮಾನದಿಂದ ಪುತ್ರನು 'ತಲೆದಂಡ' ತೆರಬೇಕೆಂಬುದನ್ನೂ ಲೆಕ್ಕಿಸದೆ, ಯೋಚಿಸದೆ ನಿರ್ಣಯವನ್ನು ಹೇಳಿ 'ಸತ್ಯಸಂಧ'ರೆಂಬ ತಮ್ಮ ಕೀರ್ತಿಯನ್ನು ಉಜ್ವಲಗೊಳಿಸಿದರು.

ಸರ್ವರೂ ಪ್ರಹ್ಲಾದರ ನಿರ್ಣಯವನ್ನಾಲಿಸಿ ದಿಙ್ಮೂಢರಾದರು. ಅವರ ನ್ಯಾಯನಿಷ್ಠುರತೆಯನ್ನು ಕಂಡು ಹಾಡಿ ಹೊಗಳಿ ಹರಸಿದರು. ವಿರೋಚನ ದಿಗ್ಭ್ರಾಂತನಾದ. ಅವನ ಗರ್ವವೆಲ್ಲ ಪ್ರಹ್ಲಾದರ ಒಂದೇ ಮಾತಿನಿಂದ ಇಳಿದು ಹೋಯಿತು. ನಿಬಂಧನೆಗೆ ತಕ್ಕಂತೆ ನಡೆಯಲೇ ಬೇಕಾಯಿತು. ಪ್ರಹ್ಲಾದರು ನಿರ್ವಿಕಾರಚಿತ್ತರಾಗಿ ಒರೆಯಿಂದ ಖಡ್ಗವನ್ನು ಹಿರಿದು ಬ್ರಾಹ್ಮಣಕುಮಾರನಿಗಿತ್ತು ವಿರೋಚನನ ತಲೆ ತೆಗೆಯಬಹುದೆಂದು ಹೇಳಿದರು ! ಸಭಾಸದರು ಆಶ್ಚರ್ಯ, ಭಯದಿಂದ ಮುಂದೇನಾಗುವುದೋ ಎಂದು ನೋಡುತ್ತಿರುವಾಗ ಬ್ರಾಹ್ಮಣಕುಮಾ

ರನು "ಮಹಾನುಭಾವ! ನಿಮ್ಮಂತಹವರು ಜಗತ್ತಿನಲ್ಲಿ ಸಿಗಲಾರರು. ನೀನು ಶ್ರೀಹರಿಯನ್ನೇ ಒಲಿಸಿಕೊಂಡ ಪರಮಭಕ್ತ, ಆದರ್ಶ ಬ್ರಹ್ಮಜ್ಞಾನಿ, ಸತ್ಯಸಂಧ, ನ್ಯಾಯದಾನನಿಪುಣ! ನಮ್ಮೆಲ್ಲರಿಗೂ ನೀನು ಆದರ್ಶ ಚಕ್ರವರ್ತಿ! ನಾನು ರಾಜಪುತ್ರನೊಡನೆ ವಾದಿಸಿದ್ದು ತಪ್ಪು ಎಂದು ಈಗ ಅನಿಸುತ್ತದೆ. ಅಹಿಂಸೆ, ಸರ್ವರ ಕ್ಷೇಮಚಿಂತನೆಯೂ ಬ್ರಾಹ್ಮಣನ ಧರ್ಮ! ಆದ್ದರಿಂದ ಸತ್ಯನಿಷ್ಠರಾದ ನಿಮ್ಮಂಥ ಮಹಾನುಭಾವರಿಗೆ ದುಃಖಪ್ರದವಾದ ಕಾರ್ಯಮಾಡಿದರೆ ಶ್ರೀಹರಿ ಎಂದಿಗೂ ಮೆಚ್ಚನು. ಮೇಲಾಗಿ ಬ್ರಾಹ್ಮಣನಿಗೆ ಕ್ಷಮಾಗುಣ ಅತ್ಯವಶ್ಯಕ! ನನ್ನ ಮಿತ್ರನಾದ ವಿರೋಚನನನ್ನು ಸಂಹರಿಸುವುದು ಬ್ರಾಹ್ಮಣಧರ್ಮಕ್ಕೆ ವಿರುದ್ಧವಾದುದು. ನಿಮ್ಮ ನ್ಯಾಯ ನಿರ್ಣಯದಿಂದಲೇ ನನಗೆ 'ತಲೆದಂಡ' ಬಂದಂತಾಗಿದೆ! ನೀವೂ ವಿರೋಚನನನ್ನು ಕ್ಷಮಿಸಬೇಕು" ಎಂದು ಪ್ರಾರ್ಥಿಸಿ ಕತ್ತಿಯನ್ನು ಪ್ರಹ್ಲಾದರ ಪಾದದಡಿಯಲ್ಲಿಟ್ಟು ವಿನೀತನಾಗಿ ನಿಂತನು. ಕೂಡಲೇ ಸಭಾಸದರೆಲ್ಲರೂ ಬ್ರಾಹ್ಮಣ ಕುಮಾರನ ಉದಾರಗುಣಗಳನ್ನು ಮುಕ್ತಕಂಠದಿಂದ ಶ್ಲಾಘಿಸಿದರು. ಸರ್ವರಿಗೂ ಪರಮಾನಂದವಾಯಿತು.*

ಆಗ ಪ್ರಹ್ಲಾದರಾಜರು ನಸುನಗುತ್ತಾ "ನೋಡಿದೆಯಾ ವಿರೋಚನ! ಯಾರು ಶ್ರೇಷ್ಠರೆಂದು ಈಗ ಅರ್ಥವಾಯಿತೇ? ಸಿರಿ ಸಂಪತ್ತು, ಸ್ಥಾನಮಾನ, ಅಧಿಕಾರ-ಇದಾವುದೂ ಶ್ರೇಷ್ಠತೆ-ಪೂಜ್ಯತೆಯನ್ನು ತಂದುಕೊಡಲಾರದು, ಎಲ್ಲರಲ್ಲಿಯೂ ಭಗವಂತನಿದ್ದಾನೆಂಬ ದೃಢನಂಬಿಕೆ, ಬ್ರಹ್ಮಜ್ಞಾನ, ಶಮದಮ, ಶಾಂತ್ಯಾದಿ ಸದ್ಗುಣಗಳೇ ಪೂಜ್ಯತೆಯನ್ನು ತಂದುಕೊಡುತ್ತವೆ. ಕುಮಾರ! ಇನ್ನು ಮುಂದಾದರೂ, ದೊಡ್ಡವರು ಸಣ್ಣವರಲ್ಲಿ ಹೇಗೆ ವರ್ತಿಸಬೇಕು, ಹೇಗೆ ಮಾತನಾಡಬೇಕು- ಎಂಬುದನ್ನು ಈ ದೃಷ್ಟಾಂತದಿಂದ ಅರಿತು ಯೋಗ್ಯನಾಗಿ ಬಾಳು" ಎಂದು ಬುದ್ಧಿವಾದ ಹೇಳಿದರು.

"ಪ್ರಹ್ಲಾದೋ ವೈ ಕಾಯಾಧವಃ ಸ್ವಪುತ್ರಂ ವಿರೋಚನಂ ಅಪಸ್ಯಧತ್ತ" ಎಂಬ ವೇದವಚನವು ಈ ಕಥಾನಕವನ್ನು ಸೂಚಿಸುತ್ತದೆ. ಈ ಒಂದು ಉದಾಹರಣೆಯು ಪ್ರಹ್ಲಾದರ ನಿಷ್ಪಕ್ಷಪಾತದೃಷ್ಟಿ, ನ್ಯಾಯ ನಿಷ್ಠುರತೆಗಳಿಗೆ ಜ್ವಲಂತ ಉದಾಹರಣೆಯಾಗಿದೆ.

o o o

ಹೀಗೆ ಪ್ರಹ್ಲಾದರಾಜರು ಶ್ರೀಹರಿಯ ಆಜ್ಞೆಯಂತೆ ಸತ್ಯ, ಧರ್ಮ, ನ್ಯಾಯಮಾರ್ಗದಿಂದ ರಾಜ್ಯಭಾರಮಾಡಿ ಸರ್ವರ ಗೌರವಾದರಗಳಿಗೆ ಪಾತ್ರರಾದರು. ಅವರ ರಾಜ್ಯಾಡಳಿತ ಕಾಲದಲ್ಲಿ ಸಮಸ್ತಪ್ರಜಾನೀಕರವೂ ಸ್ವವರ್ಣಾಶ್ರಮಗಳಿಗೆ ವಿಹಿತವಾದ ಕರ್ಮಾಚರಣ-ಧರ್ಮಾಚರಣರತರಾಗಿ, ಸತ್ಯ-ಧರ್ಮೋಪಾಸಕರಾಗಿ, ಸತ್ಶಾಸ್ತ್ರಾಧ್ಯಯನ, ಯಜನ, ಯಾಜನಪ್ರವಚನಶೀಲರಾಗಿ, ಶೀಲಸಂಪನ್ನರಾಗಿ, ದೇವ-ದ್ವಿಜ

* ಪ್ರಹ್ಲಾದರ ನ್ಯಾಯನಿಷ್ಠೆಗೆ ಈ ಗ್ರಂಥದ 1236ನೇ ಪುಟ ನೋಡಿ.

ಗುರುಪೂಜಕರಾಗಿ, ಪರಸ್ಪರ ಸ್ನೇಹಸೌಹಾರ್ದ್ರದಿಂದ ಸನ್ಮಾರ್ಗಗಾಮಿಗಳಾಗಿ ಸುಖ ದಿಂದ ಜೀವನ ನಡೆಸುತ್ತಿದ್ದರು.

ಇಂತು ಶ್ರೀಪ್ರಹ್ಲಾದರಾಜರು ಮೂವತ್ತಾರು ಸಹಸ್ರ ವರ್ಷ ರಾಜ್ಯಭಾರ ಮಾಡಿ ಅನಂತರ ಪುತ್ರನಿಗೆ ರಾಜ್ಯವನ್ನೊಪ್ಪಿಸಿಕೊಟ್ಟು ಶ್ರೀಹರಿವರ್ಷಖಂಡದಲ್ಲಿ ಶ್ರೀನೃಸಿಂಹ ದೇವರನ್ನು ಉಪಾಸಿಸುತ್ತಾ ಸಾಧನಮಾಡಿಕೊಳ್ಳಹತ್ತಿದರು. ಭಾಗವತಾಗ್ರಣಿಗಳಾದ ಅವರು ಲೋಕಕಲ್ಯಾಣಾರ್ಥವಾಗಿ ಶ್ರೀನೃಸಿಂಹ ದೇವರನ್ನು ಕುರಿತು ತಪೋನಿರತನಾಗಿ ಹರಿವರ್ಷಖಂಡದಲ್ಲಿ ವಿರಾಜಿಸಿದನು.

೦ ೦ ೦ ೦

ಯುಗಗಳುರುಳಿದವು. ಪ್ರಹ್ಲಾದರ ತರುವಾಯ ದೈತ್ಯಸಾಮ್ರಾಜ್ಯವನ್ನು ವಿರೋಚನನೂ ಅನಂತರ ಬಲಿಯೂ ಆಳಿದರು. ಈ ಬಲಿಚಕ್ರವರ್ತಿಯು ಶ್ರೀಹರಿ ಭಕ್ತನೂ ದಾನಶೂರನೂ ಆಗಿದ್ದನು, ದೈತ್ಯಗುರು ಶುಕ್ರಾಚಾರ್ಯರು ಬಲಿರಾಜನಿಂದ 'ಸರ್ವಜಿತ್‌ಯಾಗ'ವನ್ನು ಮಾಡಿಸಿದ್ದಲ್ಲದೆ ಅವನಿಗೆ ಇಂದ್ರಪದವಿಯನ್ನು ಕೊಡಿ ಸಲು ಅವನ ಕೈಯಿಂದ ಒಂದು ನೂರು ಅಶ್ವಮೇಧ ಯಾಗವನ್ನು ಮಾಡಿಸಲು ಸಂಕಲ್ಪಮಾಡಿಸಿದರು. ಬಲಿರಾಜ ತೊಂಭತ್ತೊಂಭತ್ತು ಅಶ್ವಮೇಧಗಳನ್ನು ಮಾಡಿ ಮುಗಿಸಿದ. ಇನ್ನೊಂದು ಯಾಗ ಮುಗಿದರೆ ಅವನಿಗೆ ಇಂದ್ರಪದವಿಯು ಲಭ್ಯ ವಾಗುತ್ತಿತ್ತು. ಇಂದ್ರನು ತನ್ನ ಆಧಿಪತ್ಯಕ್ಕಿಲ್ಲಿ ಭಂಗಬರುವುದೋ ಎಂದು ಹೆದರಿ ದೇವತೆಗಳೊಡನೆ ಶ್ರೀಹರಿಗೆ ಶರಣು ಹೋದ. ಹರಿಯು ಇಂದ್ರನಿಗೆ ಅಭಯವಿತ್ತು ತಾನು ಪುತ್ರನಾಗಬೇಕೆಂದು ತಪಸ್ಸು ಮಾಡುತ್ತಿದ್ದ ಅದಿತಿದೇವಿಯ ಬಯಕೆಯನ್ನು ಪೂರ್ಣಮಾಡಲು ಶ್ರೀಹರಿಯು ಅವಳಲ್ಲಿ ವಾಮನರೂಪದಿಂದ ಅವತರಿಸಿದನು.

ಇತ್ತ ಬಲಿಚಕ್ರವರ್ತಿಯೂ ನೂರನೆಯ ಅಶ್ವಮೇಧಯಾಗವನ್ನು ಮಾಡು ತ್ತಿರುವಾಗ ಅವನ ಯಾಗಶಾಲೆಗೆ ವಾಮನರೂಪೀ ಶ್ರೀಹರಿಯು ಬಂದನು. ಧರೆ ಗಿಳಿದುಬಂದ. ಸೂರ್ಯನಂತೆ ತೇಜಸ್ವಿಯಾದ ವಟುರೂಪೀ ವಾಮನನನ್ನು ಕಂಡು ಬಲಿರಾಜ 'ಸ್ವಾಮಿ ತಮಗೇನು ದಾನಬೇಕು' ಎಂದು ಕೋರಿದನು. ವಾಮನಮೂರ್ತಿ "ಮೂರು ಹೆಜ್ಜೆ ಭೂದಾನಕೊಡು" ಎಂದ. ಬಲಿರಾಜ ಸಂತೋಷದಿಂದ ದಾನ ಮಾಡಿದ. ಅದೇನಾಶ್ಚರ್ಯ ! ಬಾಲಕನಂತಿದ್ದ ವಾಮನಮೂರ್ತಿ ತ್ರಿವಿಕ್ರಮನಾಗಿ ವಿರಾಟ್‌ರೂಪತಾಳಿ ಒಂದು ಹೆಜ್ಜೆಯಿಂದ ಅಖಂಡಭೂಮಂಡಲವನ್ನೂ, ಎರಡನೆಯ ಪಾದದಿಂದ ಬ್ರಹ್ಮಲೋಕದವರೆಗಿನ ಸಮಸ್ತ ಲೋಕಗಳನ್ನೂ ಆಕ್ರಮಿಸಿ 'ಮೂರನೆಯ ಪಾದಕ್ಕೆ ಸ್ಥಳವೆಲ್ಲಿ' ಎಂದು ನಸುನಕ್ಕ. ಬಲಿರಾಜ ವಾಮನಮೂರ್ತಿಗೆ ಸಾಷ್ಟಾಂಗವೆರಗಿ 'ದೇವ ! ನಿನ್ನ ಪವಿತ್ರಪಾದವನ್ನು ನನ್ನೀಶಿರದಮೇಲಿರಿಸು' ಎಂದು ಶಿರವೊಡ್ಡಿದ. ಅವನ ಭಕ್ತಿ ದಾನಶೌಂಡತ್ವಗಳನ್ನು ಕಂಡ ತ್ರಿವಿಕ್ರಮದೇವ 'ತಥಾಸ್ತು' ಎಂದು ಬಲಿಯನ್ನು ಪಾಶದಿಂದ ಬಂಧಿಸಿದ. ಅದೇವೇಳೆಗೆ ಈ ವಿಷಯ

ವರಿತು ಪ್ರಹ್ಲಾದರಾಜರು ಹರಿವರ್ಷಖಂಡದಿಂದ ಧಾವಿಸಿಬಂದು ಈ ಎಲ್ಲ ಅದ್ಭುತವನ್ನು ಕಂಡು ಶ್ರೀಹರಿಗೆ ನಮಸ್ಕರಿಸಿ 'ಪ್ರಭು ! ಸಿರಿಸಂಪತ್ತು ವಿದ್ವಾಂಸರನ್ನೂ ಮೋಹಗೊಳಿಸುವುದು, ನಮ್ಮ ಬಲಿಯ ಐಶ್ವರ್ಯವನ್ನು ಕಿತ್ತುಕೊಂಡು ನೀನು ಅವನಲ್ಲಿ ಮಹಾ ಅನುಗ್ರಹವನ್ನೇ ಮಾಡಿರುವೆ. ವತ್ಸ ! ಬಲಿ, ನೀನು ನಿಜವಾಗಿ ಧನ್ಯ' ಎಂದು ಉದ್ಗರಿಸಿದರು. ಆಗ ಬ್ರಹ್ಮದೇವರು "ಸ್ವಾಮಿ, ನೀವು ಶತ್ರುಪಕ್ಷೀಯವರೆಂದರಿತೂ ಬಲಿಯು ಸರ್ವೋತ್ತಮನಾದ ನಿನಗೆ ದಾನಮಾಡಿ ಧನ್ಯನಾಗಿದ್ದಾನೆ ! ಅವನಲ್ಲಿ ಅನುಗ್ರಹಮಾಡಿ" ಎಂದು ಪ್ರಾರ್ಥಿಸಿದರು. ಮುಗುಳನಗೆಯನ್ನು ಹೊರಸೂಸುತ್ತಾ ಶ್ರೀವಾಮನದೇವರು "ಚತುರಾನನ ! ನನ್ನ ಪ್ರಿಯಭಕ್ತ ಪ್ರಹ್ಲಾದನ ಪೌತ್ರನಾದ ಈ ಬಲಿಯು ನನಗೆ ಅತಿಪ್ರಿಯನಾಗಿದ್ದಾನೆ. ನಾನು ಯಾರಲ್ಲಿ ಅನುಗ್ರಹಮಾಡುವೆನೋ ಅವರ ಐಶ್ವರ್ಯವನ್ನು ಹರಿಸುತ್ತೇನೆ. ಸರ್ವಲೋಕಗಳಿಗೂ ಪ್ರಭುವಾದ ನನಗೆ ದಾನಮಾಡಿದ ಈ ಬಲಿರಾಜನಿಗೆ ಮುಂದಿನ ಮನ್ವಂತರದಲ್ಲಿ ಇಂದ್ರಪದವನ್ನು ಅನುಗ್ರಹಿಸುತ್ತೇನೆ. ಅಲ್ಲಿಯವರೆಗೆ ಇವನು ಪಾತಾಳದಲ್ಲಿ ರಾಜ್ಯಭಾರಮಾಡುತ್ತಿರಲಿ. ಮುಂದಿನ ಮನ್ವಂತರದವರೆಗೆ ನಾನಿವನಿಗೆ ರಕ್ಷಕನಾಗಿ ಅವನ ಮನೆಯಬಾಗಿಲು ಕಾಯುತ್ತಿರುವೆನು. ಪ್ರಹ್ಲಾದ ! ನಿನಗೆ ಆನಂದವಾಯಿತೆ ? ಬ್ರಹ್ಮದೇವ ! ನಿನಗೂ ತೃಪ್ತಿತಾನೆ" ಎಂದು ಅಪ್ಪಣೆ ಮಾಡಲು, ಬಲಿ ಚಕ್ರವರ್ತಿಯ ಮಹಾಭಾಗ್ಯವನ್ನು ಕಂಡು ಅವನನ್ನು ಎಲ್ಲರೂ ಹೊಗಳಿದರು. ಬಲಿರಾಜ ಭಕ್ತಿಸಮ್ರಾಂಗನಾಗಿ ಆನಂದಬಾಷ್ಪ ಸುರಿಸುತ್ತಾ "ಅನುಗೃಹೀತೋಸ್ಮಿ ದೇವ" ಎಂದು ವಂದಿಸಿದ.

ಆಗ ಪ್ರಹ್ಲಾದರಾಜರು "ಪರಮಾತ್ಮ, ಭಕ್ತವತ್ಸಲ! ನೀನು ನನ್ನ ಮೊಮ್ಮಗನಲ್ಲಿ ಮಾಡಿರುವ ವಿಶೇಷಾನುಗ್ರಹವು ಅನ್ಯಾದೃಶವಾದುದು. ಹೀಗೆ ನೀನು ನನ್ನಲ್ಲೂ ಅನುಗ್ರಹ ಮಾಡಲಿಲ್ಲ ! ಪ್ರಭು ! ನಾನು ಅಷ್ಟು ಪಾಪಿಯೆ ? ಇವನಲ್ಲಿ ಮಾಡಿದ ಅನುಗ್ರಹ ನನ್ನಲ್ಲೇಕೆ ಮಾಡಲಿಲ್ಲ" ? ಎಂದು ಖಿನ್ನರಾಗಿ ವಿಜ್ಞಾಪಿಸಿದರು. ಆಗ ಶ್ರೀವಾಮನರೂಪೀ ಹರಿಯು ನಸುನಗುತ್ತಾ "ಭಕ್ತರಾಜ ! ನನ್ನ ಪ್ರೀತಿಯ ಪ್ರಹ್ಲಾದ ! ಎಂತಹ ಮಾತನಾಡುತ್ತಿರುವೆ ? ನೀನು ಪಾಪಿಯಾಗಲು ಸಾಧ್ಯವೇ ? ನಿನ್ನ ಹೆಸರು ಹೇಳಿ ಸ್ಮರಿಸಿದವರೆಲ್ಲರ ಕರ್ಮಬಂಧವೇ ಪರಿಹಾರವಾಗುವುದೆಂದು ಅಂದು ನಾನು ನಿನಗೆ ವರತ್ತಿಲ್ಲವೆ ? ವತ್ಸ ! ನಿನ್ನಲ್ಲಿ ಮಾಡಿರುವ ಅನುಗ್ರಹ ಮತ್ತಾರಲ್ಲೂ ಮಾಡಿಲ್ಲವಲ್ಲಪ್ಪ ! ನೀನು ನನ್ನ ಭಕ್ತರಲ್ಲಿ ಅಗ್ರಗಣ್ಯನಾಗಿರುವೆ. ಈ ಬಲಿರಾಜನು ನಿನ್ನ ಪೌತ್ರನೆಂದೇ ಇವನಲ್ಲಿ ಈ ತೆರನಾದ ವಿಶೇಷಾನುಗ್ರಹ ಮಾಡಿದ್ದೇನೆ !" ಎಂದು ಅಪ್ಪಣೆಮಾಡಿದನು. ಆಗ ಸಕಲರೂ ಪ್ರಹ್ಲಾದರ ಜಯ ಜಯಕಾರಮಾಡಿ ಶ್ಲಾಘಿಸಿದರು.

ಪರಮಾನಂದಭರಿತರಾದ ಪ್ರಹ್ಲಾದರಾಜರು ಶ್ರೀಹರಿಗೆ ನಮಿಸಿ 'ದೇವ ! ನಾನು ನಿನ್ನ ಆನಂದಧಾಮದಲ್ಲಿ ಸದಾ ನಿನ್ನನ್ನು ಕಾಣುತ್ತಾ ಸುಖಿಸುವ ಭಾಗ್ಯ

ಯಾವಾಗ ನೀಡುವೆ ?' ಎಂದು ಪ್ರಾರ್ಥಿಸಲು ಶ್ರೀಹರಿಯು ಮಂದಹಾಸ ಬೀರುತ್ತಾ—

**"ಯದ್ಯದ್ವೈಧಸಮಾತ್ಮನೀನಮನಘ! ಯಚ್ಛಾಂತಿಮೇಚಾಂತಿಮೇ ! !**[1]

"ಪಾಪಲೇಪವಿಲ್ಲದ ಪ್ರಹ್ಲಾದ ! ವತ್ಸ ! ಅಂದು ನೀನೇ ಬಯಸಿ ವರ ಪಡೆದಂತೆ ನೀನು ಇನ್ನೂ ಮೂರು ಜನ್ಮಗಳನ್ನೆತ್ತಿ ನನ್ನನ್ನು ವಿಶೇಷರೀತಿಯಿಂದ ಆರಾಧಿಸಿ ಸಂತೋಷಪಡಿಸಬೇಕಾಗಿದೆ ! ಕೇಳು ಕುಮಾರ ! ಕೊನೆಯ ಯುಗದಲ್ಲಿ ನಿನ್ನ ಕೊನೆಯ ಅವತಾರದಲ್ಲಿ ಕೊನೆಯ ಆಶ್ರಮದಿಂದ ನನ್ನ ಪೂಜೆಗೆ ವಿಘ್ನವಾಯಿ ತೆಂದು ಯಾವ ಬ್ರಹ್ಮದೇವನ ಶಾಪದಿಂದ ನೀನು ಅವತರಿಸಬೇಕಾಯಿತೋ ಅಂಥಾ ನನ್ನ ಸಂಬಂಧಿಯಾದ ಬ್ರಹ್ಮದೇವರ ಕರಾರ್ಚಿತ ಶ್ರೀಮೂಲರಾಮಚಂದ್ರ, ಪ್ರತಿಮೆಯನ್ನು [ನನ್ನನ್ನು] ಬಹುಕಾಲ ಪೂಜಿಸಿ ವೈದಿಕ ಸದ್ವೈಷ್ಣವ ಸಿದ್ಧಾಂತ ವನ್ನು ಪ್ರತಿಷ್ಠಾಪಿಸಿ, ಜನತೆಗೆ ಸತ್ತತ್ತ್ವರಹಸ್ಯಗಳನ್ನುಪದೇಶಿಸಿ, ಆಪಂಡಿತಪಾಮ ರರು, ದೀನ-ದಲಿತ ಜನರ ಉದ್ಧಾರಮಾಡಿ ಅಖಂಡ ವಿಶ್ವದ ಕಲ್ಯಾಣವೆಸಗಿ- ಅನಿತರ ಸಾಧಾರಣ ಕೀರ್ತಿಪ್ರತಿಷ್ಠೆಗಳನ್ನು ಗಳಿಸಿ, ನಿನ್ನ ಮೂಲರೂಪಸೇರಿ, ಅನಂತರ ಬ್ರಹ್ಮದೇವನೊಡನೆ ಮುಕ್ತಿಯೋಗ್ಯರಾದ ನಿನ್ನ ಆಶ್ರಿತ ಭಕ್ತ ಸಮು ದಾಯದೊಡನೆ ನನ್ನ ಸನ್ನಿಧಿಗೆ ಬಂದು ಸೇರಿ ನನ್ನ ಪರಮಾನುಗ್ರಹಕ್ಕೆ ಪಾತ್ರನಾಗಿ ಸುಖಿಸುವೆ !" ಎಂದು ಆಜ್ಞಾಪಿಸಿ ಅಭಯಪ್ರಧಾನ ಮಾಡಿದರು, ಪರಮಾನಂದ ತುಂದಿಲರಾದ ಪ್ರಹ್ಲಾದರಾಜರು ಶ್ರೀಹರಿಯನ್ನು ಬಗೆಬಗೆಯಿಂದ ತುತಿಸಿ, ನಮಸ್ಕರಿಸಿ, ಬಲಿರಾಜನನ್ನು ಆಶೀರ್ವದಿಸಿ ಹರಿವರ್ಷಖಂಡಕ್ಕೆ ತೆರಳಿದರು.

## ೨೫. ಉಪಸಂಹಾರ

ಶ್ರೀಪ್ರಹ್ಲಾದರಾಜರ ಚರಿತ್ರೆಯು ಅತ್ಯಂತ ಮಂಗಳಕರವಾದುದು. ಪ್ರಹ್ಲಾದರ ಚರಿತ್ರೆಯು ಭಾಗವತ, ನೃಸಿಂಹಪುರಾಣ, ವಾಯುಪುರಾಣ, ವಿಷ್ಣು ಪುರಾಣ, ಮತ್ಸ್ಯಪುರಾಣ, ಹರಿವಂಶ, ಗರುಡಪುರಾಣ–ಬ್ರಹ್ಮಕಾಂಡ, ಬ್ರಹ್ಮಾಂಡ ಪುರಾಣ, ಮಹಾಭಾರತಾದಿಗಳಲ್ಲಿ ಸ್ಥೂಲವಾಗಿ, ವಿಸ್ತಾರವಾಗಿ ನಿರೂಪಿತವಾಗಿದೆ. ವೇದಗಳಲ್ಲಿಯೂ ಪ್ರಹ್ಲಾದರ ಹೆಸರು ಉಲ್ಲೇಖಿಸಲ್ಪಟ್ಟಿದೆ. ಈ ಎಲ್ಲ ಪ್ರಮಾಣ ಗ್ರಂಥಗಳಿಂದಲೂ ಶ್ರೀಪ್ರಹ್ಲಾದರಾಜರು ಶ್ರೀಹರಿಯ ಏಕಾಂತ ಭಕ್ತರು, ಆಜನ್ಮ ವೈಷ್ಣವರು, ದೇವಸ್ವಭಾವರು, ಕೃಷ್ಣಗ್ರಹಗೃಹೀತಾತ್ಮರು, ನಿರ್ವೈರರು, ಪ್ರಶಾಂತರು, ಜಿತೇಂದ್ರಿಯರು, ಭಾಗವತಧರ್ಮಪ್ರಸಾರಕರು, ವೇದಪ್ರತಿಪಾದ್ಯ ಮಹಿಮರು ಎಂಬ ವಿಚಾರವು ಸ್ಪಷ್ಟವಾಗುವುದು.

---

1. ವಾಮನಪುರಾಣ—

ಶ್ರೀಹರಿಯ ಏಕಾಂತಭಕ್ತರೂ, ಪರಮಾನುಗ್ರಹಪಾತ್ರರೂ ಆದ ಶ್ರೀರಮಾ-ಬ್ರಹ್ಮ-ವಾಯು ದೇವರು ಅವರುಗಳ ವಿಶೇಷಸನ್ನಿಧಾನ ಪಾತ್ರರಾದವರೇ ಶ್ರೀಹರಿಯಿಂದ ಸಾಕ್ಷಾತ್ತಾಗಿ ಉಪದೇಶಪಡೆಯಲು ಅರ್ಹರೆಂದು ಶಾಸ್ತ್ರಾಧಾರಗಳಿಂದ ತಿಳಿದುಬರುತ್ತದೆ. ಆದರೆ ಶ್ರೀನೃಸಿಂಹ ರೂಪೀ ಶ್ರೀಹರಿಯು ಪ್ರಹ್ಲಾದರಿಗೆ ತತ್ತ್ವೋಪದೇಶಮಾಡಿರುವುದನ್ನು ವಿಚಾರಮಾಡಿದಾಗ ಪ್ರಹ್ಲಾದರಾಜರು ತಮ್ಮ ಸರ್ವಸ್ವವನ್ನು ಶ್ರೀಹರಿಚರಣಗಳಿಗೆ ಸಮರ್ಪಿಸಿದ್ದರಿಂದಲೂ, "ವಾಯುನಾ ಚ ಸಮಾವಿಷ್ಟಃ ಮಹಾಬಲಸಮನ್ವಿತಃ" ಎಂಬ ಪ್ರಮಾಣದಂತೆ ಶ್ರೀಭಾರತೀರಮಣ ಮುಖ್ಯಪ್ರಾಣದೇವರ ಸಂತತ ಸನ್ನಿಧಾನಯುಕ್ತರಾದ್ದರಿಂದಲೇ ಶ್ರೀನರಹರಿಯು[1] ಹೀಗೆ ಅವರಿಗೆ ತತ್ತ್ವೋಪದೇಶಮಾಡಿ ಅನುಗ್ರಹಿಸಿದನೆಂಬುದು ವ್ಯಕ್ತವಾಗುತ್ತದೆ.

ಶ್ರೀಪ್ರಹ್ಲಾದರಾಜರ ಚರಿತ್ರೆಯು ಸಕಲಶಾಸ್ತ್ರ ಪ್ರಮೇಯಗಳ ಕೈಗನ್ನಡಿಯಂತಿದೆಯೆಂದು ಧೈರ್ಯವಾಗಿ ಹೇಳಬಹುದು. ಇಲ್ಲಿ ಸಕಲಶಾಸ್ತ್ರಾರ್ಥಸಾರವೂ ಅಡಗಿದೆ. ಹರಿಯ ಅವತಾರ ಕಥೆಗಳು, ಆದಿದೈತ್ಯರಾದ ಹಿರಣ್ಯಕಶಿಪು-ಹಿರಣ್ಯಾಕ್ಷರ ವಧದ್ವಾರಾ ಶ್ರೀಹರಿಯ ದುಷ್ಟಶಿಕ್ಷಣ-ಶಿಷ್ಟರಕ್ಷಣೆ ವಿಚಾರ, ಭಗವತ್ಪ್ರಿಯರಾದ ಪ್ರಹ್ಲಾದರಾಜರ ಮಂಗಳಕರ ಚರಿತ್ರೆ- ಅವರ ಭಕ್ತಿ,ಜ್ಞಾನ,ವೈರಾಗ್ಯ,ಪರಮಾತ್ಮನ ಯಥಾರ್ಥ ತತ್ವಜ್ಞಾನ, ಶ್ರೀಹರಿಯು ನೆರವೇರಿಸುವ ಸೃಷ್ಟಿ–ಸ್ಥಿತಿ–ಸಂಹಾರಾದಿ ಲೀಲಾವಿಲಾಸಗಳ ಕಥನ, ಬ್ರಹ್ಮದೇವರಿಂದಾರಂಭಿಸಿ ತೃಣಾಂತವಾಗಿ ಸಮಸ್ತ ಜೀವರೂ ಸತ್ಯಲೋಕಾದಿಗಳೂ ಪ್ರಳಯಕಾಲದಲ್ಲಿ ನಾಶಹೊಂದಿ ಶ್ರೀಹರಿಯ ಉದರದಲ್ಲಿ ಇರುವುದೆಂಬ ಜ್ಞಾನ, ದೇಶತಃ, ಕಾಲತಃ, ಗುಣತಃ ಶ್ರೀಹರಿಯು ದೊಡ್ಡವನೆಂಬ ಜ್ಞಾನ, ಭಾಗವತಧರ್ಮಾಚರಣೆಯಿಂದಲೇ ಪರಮಾತ್ಮ ಪ್ರಾಪ್ತಿ, ಅದು ದ್ವೇಷದಿಂದ ಖಂಡಿತ ಲಭಿಸುವುದಿಲ್ಲವೆಂಬ ಜ್ಞಾನ, ಅಧ್ಯಾತ್ಮಿಕಜ್ಞಾನ ವಿಚಾರ— ಇವೆಲ್ಲವೂ ಶ್ರೀಪ್ರಹ್ಲಾದರಾಜರ ಚರಿತ್ರೆಯಲ್ಲಿ ಹಾಸುಹೊಕ್ಕಾಗಿ ಹರಿದುಬಂದಿರುವುದರಿಂದ ಅಧಿಕಾರಿ ಜೀವರಿಗೆ,ಭಗವದಪರೋಕ್ಷವನ್ನು ಬಯಸುವ, ಆತ್ಮೋದ್ಧಾರವನ್ನು ಇಚ್ಛಿಸುವವರಿಗೆ, ಮತ್ತು ಸರ್ವಜೀವರ ಮುಖ್ಯಗುರಿಯಾದ ಆತ್ಯಂತಿಕ ದುಃಖನಿವೃತ್ತಿಪೂರ್ವಕವಾದ ಸ್ವಸ್ವರೂಪಾನಂದಾವಿರ್ಭಾವ ರೂಪ ಶಾಶ್ವತ ಸುಖಾಪೇಕ್ಷಿಗಳಿಗೆ ಈ ಚರಿತ್ರೆಯು ದಾರಿದೀಪವಾಗಿರುವುದೆಂದು ಘೋಷಿಸಬಹುದು. ಅಂತೆಯೇ ಶ್ರೀಪ್ರಹ್ಲಾದರಾಜರ ಈ ಚರಿತ್ರೆಯ ಪರಮಮಂಗಳಪ್ರದವಾಗಿದೆ.

---

1. ಪ್ರಹ್ಲಾದೋ ಪರಿಮುದ್ದಿಶ್ಯ ರಾಜ್ಯಂ ಸರ್ವಮಪಾಲಯತ್ ।
ವಾಯ್ವಾವೇಶಾಚ್ಚ–ಪ್ರಹ್ಲಾದೋ ಪರಿಣಾ ತತ್ವಮಂಜಸಾ ॥
ಉಪದಿಷ್ಟೋ ಹ್ಯಭೂದ್ವೀಂದ್ರಃ ಹರಿಭಕ್ತೋ ಮಹಾಪ್ರಭು ॥
—ಗರುಡಪುರಾಣ-ಬ್ರಹ್ಮಕಾಂಡ–೪೯–೧೧೭–೧೧೮.

ಪರಮಪುಣ್ಯಪ್ರದವಾದ ಈ ಮಹಾಭಾಗವತೋತ್ತಮರ ಚರಿತ್ರೆಯನ್ನು ಶ್ರದ್ಧಾಭಕ್ತಿಗಳಿಂದ ಶ್ರವಣಮಾಡುವುದರಿಂದ ಸಕಲ ಪ್ರತಿಬಂಧಕ ಕರ್ಮನಿವೃತ್ತಿಯಾಗಿ ಇಷ್ಟಪ್ರಾಪ್ತಿಯಾಗುವುದು. ಆದಿಪುರುಷನಾದ ಶ್ರೀಹರಿ ಪರಮಾತ್ಮನ ನರಸಿಂಹಲೀಲೆ, ದೈತ್ಯರಾಜನ ವಧೆ, ಹಾಗೂ ಸಜ್ಜನರಲ್ಲಿ ಶ್ರೇಷ್ಠರಾದ ಶ್ರೀಪ್ರಹ್ಲಾದರಾಜರ ಅನುಭಾವವನ್ನು ಶ್ರವಣಮಾಡಿ, ಮತ್ತೆ ಮತ್ತೆ ಮೆಲುಕುಹಾಕುವುದರಿಂದ ಶಾಶ್ವತ ಸುಖವು ದೊರಕುವುದು. ಅಂದ ಮೇಲೆ ಐಹಿಕಾದಿ ಸುಖ, ಮಂಗಳಗಳು ದೊರಕುವುದರಲ್ಲಿ ಸಂದೇಹವೇನಿದೆ.

ಶ್ರೀರಮಾಪತಿಯಾದ ನಾರಾಯಣನನ್ನು ಸಾಕಲ್ಯೇನ ತಿಳಿಯಲು, ವರ್ಣಿಸಲು ಬ್ರಹ್ಮ–ರುದ್ರೇಂದ್ರಾದಿ ದೇವತೆಗಳಿಗೂ ಸಾಧ್ಯವಿಲ್ಲ. ಆದರೆ ಶ್ರೀಪ್ರಹ್ಲಾದರಾಜರಂತೆ–ಮೌನ ಭಕ್ತಿ, ಶಾಂತಿಗಳಿಂದ ಇಂದ್ರಿಯ ನಿಗ್ರಹಪೂರ್ವಕವಾಗಿ, ವಿರಕ್ತಿಯಿಂದ ಪರಮಾತ್ಮನನ್ನು ಅರ್ಚಿಸಿದರೆ ಶ್ರೀಹರಿಯು ಪ್ರಸನ್ನನಾಗಿ ಅನುಗ್ರಹಿಸುವನೆಂಬ ವಿಚಾರವು ಶ್ರೀಪ್ರಹ್ಲಾದರ ಚರಿತೆಯಿಂದ ದೃಢವಾಗುವುದು. ಇಂತು ಜಗತ್ತಿಗೆ ಒಂದು ಅದ್ಭುತವಾದ ಶ್ರೀಹರಿಯ ರೂಪವನ್ನು ತೋರಿಸಿಕೊಟ್ಟು ವಿಖ್ಯಾತರಾದ ಮಂಗಳಪ್ರದವಾದ ಶ್ರೀಪ್ರಹ್ಲಾದರಾಜರ'ಭಕ್ತಿವಿಜಯ'ರೂಪವಾದ ಈ ಕಥಾನಕವು ಭಗವದ್ಭಕ್ತರೂ, ಧರ್ಮಾಭಿಮಾನಿಗಳೂ ಆದ ಸರ್ವ ಸಜ್ಜನರಿಗೂ ಸನ್ಮಂಗಳಗಳನ್ನೀಯಲೆಂದು ಪ್ರಾರ್ಥಿಸುತ್ತಾ ವಿರಮಿಸುವೆವು.

ಕಲಿಯುಗ ಕಲ್ಪತರುವಿನಲ್ಲಿ ಶ್ರೀಪ್ರಹ್ಲಾದ ಚರಿತರೂಪ

ದ್ವಿತೀಯೋಲ್ಲಾಸವು ಮುಗಿದುದು.

—: ಇತಿಶಮ್ :—

—: ಇತಿಶಮ್ :—

ಶ್ರೀ ಗುರುರಾಜೋ ವಿಜಯತೇ



# ಕಲಿಯುಗ - ಕಲ್ಪತರು

## ಮೂರನೆಯ ಉಲ್ಲಾಸ

## ಶ್ರೀ ಬಾಹ್ಲೀಕರಾಜರು

ರಚಿಸಿದವರು :

ರಾಜಾ ಎಸ್. ಗುರುರಾಜಾಚಾರ್ಯರು



# ಕಲಿಯುಗ ಕಲ್ಪತರು

## ಮೂರನೆಯ ಉಲ್ಲಾಸ

## ಶ್ರೀಬಾಹ್ಲೀಕರಾಜರು

### ೧. ಅವತಾರದ ಹಿನ್ನೆಲೆ.

ಅದೊಂದು ಅಪೂರ್ವವಾದ ಪರಮಪವಿತ್ರವಾದ ಆಶ್ರಮ. ಗಗನಚುಂಬಿಗಳಾದ ವೃಕ್ಷಗಳು ಆಕಾಶದೀಪನ ರಥದ ಪತಾಕೆಯೊಡನೆ ಸ್ಪರ್ಧಿಸುತ್ತಿರುವಂತೆ ಕಂಗೊಳಿಸುತ್ತಿವೆ. ವಿವಿಧ ಫಲಭರಿತ ವೃಕ್ಷಗಳಿಂದಲೂ ಅನೇಕ ತೆರನಾದ ದೇವ ಯೋಗ್ಯ ಪುಷ್ಪಗಳಿಂದಲಂಕೃತವಾದ ತರು –ಲತಾ–ಗುಲ್ಮಾದಿಗಳಿಂದಲೂ ಅತ್ಯಂತ ಸುಂದರವಾಗಿ ಶೋಭಿಸುತ್ತಿದೆ. ನೋಡುವವರ ಕಣ್ಮನಗಳಿಗೆ ತಂಪನ್ನೆರೆಯುವ ಆ ಆಶ್ರಮದ ಸೊಬಗು ಅತಿರಮಣೀಯ, ಸಮನೋಹರ. ಅತಿ ಸುಂದರ ! ಬಹುಶಃ ಪೀತಾಂಬರಧಾರಿಯಾದ ಪರಮಾತ್ಮನೊಡನೆ ಸ್ಪಧಿಸಲು ಹಸುರುಬಣ್ಣದ ಸೀರೆಯನ್ನುಟ್ಟು ಸಾಕ್ಷಾನ್ಮಾಧವನ ಮನೋಹಾರಿಣಿಯಾದ ಇಂದಿರಾದೇವಿಯೇ ವನಸಿರಿಯ ರೂಪವನ್ನು ಮೈತಳೆದು ವಿಹರಿಸುತ್ತಿರುವಳೋ ಎಂಬಂತೆ ಕಂಗೊಳಿಸುತ್ತಿದೆ ಆ ದಿವ್ಯಪರಿಸರ!

ಅಲ್ಲಿನ ರಮ್ಯ ಉಪವನಗಳಲ್ಲಿ ಪುಷ್ಪಾಪಚಯನ ಮಾಡುತ್ತಿರುವ ಋಷಿಕನ್ನಿಕೆಯರ ನಿಸರ್ಗರಮಣೀಯ ರೂಪಲಾವಣ್ಯಗಳು ಅಮರಲಲನೆಯರ ಸೌಂದರ್ಯದೊಡನೆ ಸ್ಪರ್ಧಿಸುತ್ತಿರುವಂತಿದೆ. ಗಜ–ಕೇಸರಿಗಳು, ವ್ಯಾಘ್ರ–ಗೋವು–ಜಿಂಕೆಗಳು, ಸರ್ಪ–ಮಯೂರಗಳು, ಸ್ವಭಾವಸಿದ್ಧವಾದ ತಮ್ಮ ವೈರಭಾವವನ್ನು ತ್ಯಜಿಸಿ, ಪರಸ್ಪರ ಪ್ರೇಮದಿಂದ ಲಲ್ಲೆಗೈಯುತ್ತಿರುವುದನ್ನು ನೋಡಿದರೆ, ನಿಜವಾಗಿ ಅದೊಂದು ಯಾವನೋ ಒಬ್ಬ ಮಹಾನುಭಾವನ ಪುಣ್ಯಾಶ್ರಮವಾಗಿರಬೇಕಲ್ಲವೇ? ಎಂದು ಊಹಿಸಬಹುದಾಗಿದೆ.

ಅಲ್ಲಿ ಹರಿಯುವ ಮಂಗಳ ತರಂಗಿಣಿಯ ಗಮನವೆಷ್ಟು ಮನಮೋಹಕ ಸುತ್ತಮುತ್ತಲಿನ ಉನ್ನತಗಿರಿಶಿಖರಗಳಿಂದ ಹೊರಹೊಮ್ಮಿ ದುಮ್ಮಿಕ್ಕಿ ಭರದಿಂದ ಹರಿದು ಮುಂದೆ ಕರಿವರಗಮನೆಯಾಗಿ ಕಲರವ ಮಾಡುತ್ತಾ ಪ್ರವಹಿಸುತ್ತಿರುವ ಪವಿತ್ರನದಿಯ ಪರಿಯನ್ನು ಪರಿಕಿದರೆ, ಶ್ರೀಹರಿಚರಣಾರವಿಂದದಿಂದ ಉದ್ಭವಿಸಿದ ಪಾವನ ಸುರತರಂಗಿಣಿಯು ತನ್ನ ತಾಯ್ಮನೆಯಾದ ರಮಾರಮಣನ ಚರಣಕಮಲವನ್ನು ಯಾವನೋ ಭಗವದ್ಭಕ್ತನು ತನ್ನ ಭಕ್ತಿಪಾಶದಿಂದ ಬಂಧಿಸಿ ತನ್ನ ಹೃದಯ ಗುಹೆಯಲ್ಲಿ ಬಚ್ಚಿಟ್ಟು ಕೊಂಡಿರುವುದರಿಂದ, ಕಾತರಭಾವದಿಂದ ತನ್ನ ಉತ್ಪತ್ತಿಸ್ಥಾನವನ್ನರಸುತ್ತಾ ಅಂಬರದಿಂದ ಶ್ವೇತಾಂಬರ ಧಾರಣಿಯಾಗಿ ಧರೆಯತ್ತ ಧಾವಿಸಿ. ತವರು

ಮನೆಯನ್ನು ಸೇರುವ ಆತುರ ಕಾತುರಗಳಿಂದ ಭರದಿಂದ ಮುನ್ನುಗಿ ವನ್ಯಾಶ್ರಮ ಪ್ರದೇಶವನ್ನು ಪ್ರವೇಶಿಸಿ, ಹರಿಭಕ್ತರ ಮಹಿಮೆಯಿಂದ ಪ್ರಶಾಂತವಾಗಿ ಬೆಡಗುಗೊಂಡಿರುವ ಆ ಪುಣ್ಯಾಶ್ರಮಧಾಮವೇ ತನ್ನ ತಾಯ್ಮನೆಯೆಂದರಿತು ಅಲ್ಲಿನ ನಿಸರ್ಗ ಸೊಬಗಿನಿಂದ ಮೈಮರೆತು, ತವರು ಸಮೀಪಿಸಿದಂತೆಲ್ಲಾ ಆನಂದಪರವಶಳಾಗಿ ಉಲ್ಲಾಸದಿಂದ ಮೆಲ್ಲಮೆಲ್ಲನೆ ಹಾಡುತ್ತಾ, ನಾಟ್ಯಭಂಗಿಯಲ್ಲಿ ಬರುವ ತರುಣಿಯಂತೆ, ಹರಿಗುಣಗಾನ ಮಾಡುತ್ತಾ ತನ್ನ ಕಲಕಲರವದ ಮಂಜುಳದಿಂಚರದಿಂದ ಆ ಆಶ್ರಮ ಪ್ರದೇಶವನ್ನೆಲ್ಲಾ ರಂಜನಗೈಯುತ್ತಿರುವಂತೆ ತೋರುತ್ತದೆ !

ಇಂತಹ ಪಾವನ ಪ್ರದೇಶದಲ್ಲೊಂದು ಉದ್ಯಾನವನ. ಅಲ್ಲೊಂದು ಭವ್ಯವಾದ ಕೋಮಲ ತಳಿರುಗಳಿಂದ ನಿರ್ಮಿತವಾದ ಆಶ್ರಮ. ಆಶ್ರಮದ ವಿಸ್ತಾರವಾದ ಅಂಗಳದಲ್ಲೊಂದು ದಿವ್ಯವೇದಿಕೆ. ಅದರ ಮೇಲೆ ವಿರಾಜಿಸುತ್ತಿರುವ ಕೃಷ್ಣಾಜಿನದ ಮೇಲೆ ಅತ್ಯಂತ ತೇಜಸ್ವಿಯಾದ ಮಹನೀಯನೊಬ್ಬ ಕುಳಿತಿದ್ದಾನೆ. ದೇದೀಪ್ಯಮಾನವಾದ ಮುಖಕಾಂತಿಯಿಂದ ರಾಜಿಸುತ್ತಿರುವ ಆತನ ಸುಂದರ ದೇಹ ಸುವರ್ಣಚ್ಛವಿಯನ್ನು ನಾಚಿಸುತ್ತಿದೆ. ಮನೋಹರವಾದ, ಹುರಿಗಟ್ಟಿದ ದೇಹಸೌಷ್ಟವ, ಪೀತಾಂಬರ ಧಾರಿಯಾಗಿರುವ ಆತನ ಶಿರಸ್ಸಿನಿಂದ ಉಂಗುರ ಉಂಗುರವಾದ ನೀಲಕೇಶರಾಶಿ ಬೆನ್ನು-ಭುಜಗಳ ಮೇಲೆ ಅಲೆದಾಡುತ್ತಿದೆ. ಮುಖದಲ್ಲಿ ಸಾತ್ವಿಕ ತೇಜಸ್ಸು ಮಿನುಗುತ್ತಿದೆ. ಮಂದಹಾಸ ವದನಾರವಿಂದದಿಂದ ನೋಡಿದವರ ಮನಕಾನಂದವೀಯುತ್ತಿರುವ ಆತನು ಸದ್ವೈಷ್ಣವನೆಂದೆತ್ತಿ ಸಾರುವ ಊರ್ಧ್ವಪುಂಡ್ರದ್ವಾದಶನಾಮಗಳಿಂದಲಂಕೃತನಾಗಿ, ಕರದಲ್ಲಿ ಜಪಮಾಲೆಯನ್ನು ಹಿಡಿದು ನಿಮೀಲಿತಾರ್ಧನಯನನಾಗಿ ಭಗವದ್ಧ್ಯಾನಪರವಶನಾಗಿದ್ದಾನೆ. ಆ ಮಹಾನುಭಾವನೇ ಭಾಗವತೋತ್ತಮನಾದ ನಮ್ಮ ಶ್ರೀ ಪ್ರಹ್ಲಾದರಾಜ !! ಅವನಿರುವ ತಾಣವೇ ಹರಿವರ್ಷಖಂಡ ! ಅಲ್ಲಿ ಲೋಕಕಲ್ಯಾಣಾರ್ಥವಾಗಿ, ಅಖಂಡವಾಗಿ ಶ್ರೀನೃಕಂಠೀರವನ ಆರಾಧನೆಯಲ್ಲಿ ಮಗ್ನನಾಗಿದ್ದಾನೆ ಆ ಭಕ್ತರಾಜ !

ಅದೇ ಸಮಯದಲ್ಲಿ ದೇವರ್ಷಿ ನಾರದರು ತಮ್ಮ ಮಹತೀ ವೀಣೆಯನ್ನು ನುಡಿಸುತ್ತಾ ಶ್ರೀಹರಿಯ ಮಹಿಮೆಯನ್ನು ಗಾನಮಾಡುತ್ತಾ ಆಶ್ರಮವನ್ನು ಪ್ರವೇಶಿಸಿದರು. ಸಾತ್ವಿಕೋತ್ತಮನೂ, ಭಕ್ತಿಭಾವಪೂರಿತನೂ ಆದ ಶಿಷ್ಯೋತ್ತಮನನ್ನು ನೋಡಿದ ತಕ್ಷಣ ಭಕ್ತವಾತ್ಸಲ್ಯ ಹೊರಹೊಮ್ಮಿ ಆತನ ವಿಷಯಗಳ ಚಿಂತನವು ಅಲೆ ಅಲೆಯಾಗಿ ಮೂಡಿಬಂದಿತು ನಾರದ ಹೃತ್ಪಟಲದಲ್ಲಿ,

"ಪ್ರಿಯ ಶಿಷ್ಯನನ್ನು ನೋಡಲು ಮನವೆಷ್ಟು ಕಾತರಿಸುತ್ತಿರುವುದು! (ಧ್ಯಾನಾಸಕ್ತನಾದ ಪ್ರಹ್ಲಾದನನ್ನು ನೋಡಿ)ಆಹಾ, ಜ್ಞಾನ-ಭಕ್ತಿ-ವೈರಾಗ್ಯಾದಿ ಮಹಾಪುರುಷರ ಲಕ್ಷಣದಿಂದ ಪರಿಪೂರ್ಣನೂ, ಮಹಾ ಭಾಗವತೋತ್ತಮನೂ ಆದ ನಮ್ಮ ಪ್ರಿಯಶಿಷ್ಯ ಪ್ರಹ್ಲಾದನ ದರ್ಶನವೆಷ್ಟು ಆಹ್ಲಾದಕರ! ಈ ಮಹನೀಯನ ಸ್ವಭಾವ

ಲೋಕವಿಲಕ್ಷಣ. ಅಂತೆಯೇ ಲೋಕವಿಲಕ್ಷಣನಾದ, ಶ್ರೀ ರಮಾರಮಣನಾದ ಶ್ರೀ ನೃಕಂಠೀರವನ ಅಪೂರ್ವಾದ್ಭುತರೂಪವನ್ನು ಜಗತ್ತಿಗೆ ತೋರಿಕೊಟ್ಟು ತ್ರಿಲೋಕ ವಿಖ್ಯಾತ ಕೀರ್ತಿಪಡೆದಿರುವನು! ಈತನ ಗುಣಗಳೆಷ್ಟು ಉತ್ತಮ. ಉದಾತ್ತವಾದವು? ಹರಿಭಕ್ತರಲ್ಲಿ ನಮ್ಮ ಪ್ರಹ್ಲಾದ ರಾಜನಿಗೆ ಸಮನೆಂದರೆ ಅವನೇ! ಆದ್ದರಿಂದಲೇ ಭಗವದ್ಭಕ್ತರ ಗಣನೆಯಲ್ಲಿ ಅಗ್ರಗಣ್ಯನಾಗಿ ತ್ರಿಲೋಕಗಳಲ್ಲಿಯೂ ಖ್ಯಾತಿಗಳಿಸಿದ್ದಾನೆ. ಸರ್ವದಾ ಸಜ್ಜನೋದ್ಧಾರ, ವಿಶ್ವಶಾಂತಿ, ಲೋಕಕಲ್ಯಾಣಗಳಿಗಾಗಿಯೇ ಶ್ರೀಹರಿಯನ್ನು ಪ್ರಾರ್ಥಿಸುತ್ತಾ, ತತ್ಕಾರ್ಯದೀಕ್ಷಾಬದ್ಧನಾಗಿ ತನ್ನ ಜೀವನವನ್ನೇ ಮೀಸಲಿಟ್ಟಿರುವ ಇವನ ಗುಣಗಳನ್ನು ಎಷ್ಟು ಬಣ್ಣಿಸಿದರೂ ಸ್ವಲ್ಪವೇ ಸರಿ! ಇಂತಹ ಶಿಷ್ಯೋತ್ತಮನನ್ನು ಪಡೆದ ನಾನಲ್ಲವೇ ಧನ್ಯ!"

ಇಂತು ಭಕ್ತಶ್ರೇಷ್ಠನ ಸದ್ಗುಣಗಳಿಂದ ಮುಗ್ಧರಾದ ನಾರದ ಮಹರ್ಷಿಗಳು ಪ್ರಹ್ಲಾದನ ಸಮೀಪಕ್ಕೆ ಬಂದರು.

"ಓಂ ನಮೋ ನೃಸಿಂಹಾಯ ತೇಜಸ್ತೇಜಸೇ ಆವಿರಾವಿರ್ಭವ ವಜ್ರನಖವಂಷ್ಟ್ರ ।
ಕರ್ಮಾಶಯಾನ್ ರಂಧಯ ರಂಧಯ ತಮೋಗ್ರಸ ಸ್ವಾಹಾ! ಅಭಯಮಭಯಂ
ಆತ್ಮನೇ ಭೂಯಿಷ್ಠಾತ್ ಓಂ ॥"

ಎಂದು ಶ್ರೀನೃಸಿಂಹ ಮಂತ್ರವನ್ನು ಜಪಿಸುತ್ತಿರುವ ಪ್ರಹ್ಲಾದರಾಜರನ್ನು ಕಂಡು ಆನಂದತುಂದಿಲರಾಗಿ—

**ನಾರದ :** ದೀರ್ಘಾಯುಷ್ಮಾನ್ ಭವ, ಭಾಗವತಶ್ರೇಷ್ಠ !

ಗುರುಗಳ ಧ್ವನಿ ಕೇಳಿದ ಪ್ರಹ್ಲಾದರಾಜರು ಆಶ್ಚರ್ಯಾನಂದದಿಂದ ಕಣ್ತೆರೆದ ನಾರದರನ್ನು ಕಂಡು ದಿಗ್ಗನೆ ಮೇಲೆದ್ದು ಸಾಷ್ಟಾಂಗವೆರಗಿ,ಗುರುವರರನ್ನು ಸ್ವಾಗತಿಸಿ ಆಸನವಿತ್ತು ಅರ್ಘ್ಯಪಾದ್ಯಾದಿಗಳಿಂದ ಪೂಜಿಸಿ ಕರಮುಗಿದು ನಿಂತು "ಗುರುದೇವ ! ಈ ಶಿಷ್ಯನನ್ನು ಮರೆತುಬಿಟ್ಟಿರಾ ? ಆದೆಷ್ಟು ವರ್ಷಗಳಾದವು ತಮ್ಮ ದರ್ಶನವಾಗಿ! ಪೂಜ್ಯರೇ, ತಾವು ಕುಶಲವೇ ?" ಎಂದು ವಿನಯದಿಂದ ಕೇಳಿದರು.

**ನಾರದ :** (ಹರ್ಷದಿಂದ) ವತ್ಸ, ಪ್ರಹ್ಲಾದ! ಮಂಗಳಮೂರ್ತಿಯೂ, ಮಾಯಾಧವನೂ ಆದ ಶ್ರೀನಾರಾಯಣನ ದಾಸರಿಗೆ ಕುಶಲೇತರ ಪ್ರಸಂಗವೆಲ್ಲಿಯದು ? ಸರ್ವದಾ ಭಗವದ್ಧ್ಯಾನ, ಪೂಜಾ, ಭಗವತ್ತತ್ವಪ್ರಸಾರಾಸಕ್ತನಾಗಿ, ಹರಿವರ್ಷಖಂಡದ ಸುಜನರನ್ನು ತತ್ವೋಪದೇಶಾಮೃತದಿಂದ ಸುಕೃತಿಗಳನ್ನಾಗಿಸುತ್ತಿರುವ ನಿನ್ನನ್ನು ಕಂಡು ಅತೀವ ಹರ್ಷವಾಯಿತು. ನೀನು ಕುಶಲದಿಂದಿರುವೆಯಾ?

**ಪ್ರಹ್ಲಾದಃ** (ವಿನೀತನಾಗಿ) ಗುರುದೇವ! ತಮ್ಮ ಶುಭಾಶೀರ್ವಾದಬಲದಿಂದ ಎಲ್ಲವೂ ಕುಶಲ.

**ನಾರದ :** (ಮುಗುಳುನಗೆಯಿಂದ)ಭಕ್ತರಾಜ! ನೀನೇನಪ್ಪಾ ಸಾಮಾನ್ಯನೇ ? ಶ್ರೀಹರಿಯನ್ನೇ ನಿನ್ನ ಸ್ವಾಧೀನದಲ್ಲಿಟ್ಟುಕೊಂಡಿದ್ದೀಯೇ ! ಸಹಸ್ರಾರು ವರ್ಷಗಳ

ಕಾಲ ಹಸಿವು, ತೃಷೆಗಳನ್ನು ಜಯಿಸಿ ಘೋರ ತಪಸ್ಸನ್ನಾಚರಿಸಿದರೂ ಗೋಚರಿಸದ ಸರ್ವಸ್ವತಂತ್ರನೂ, ಯಾವ ಬಂಧನಕ್ಕೂ ಒಳಪಡದ ಆ ದೇವದೇವನನ್ನು ನಿನ್ನ ಭಕ್ತಿಸಂಕೋಲೆಗಳಿಂದ ಬಂಧಿಸಿಟ್ಟಿರುವೆಯಲ್ಲವೆ! "ಶಿಷ್ಯಾದಿಚ್ಛೇತ್ ಪರಾಜಯಂ"ಈ ವಿಚಾರದಲ್ಲಿ ನನ್ನನ್ನೂ ಮೀರಿಸುವ ನೀನು ನಿಜವಾಗಿಯೂ ಧನ್ಯ !

**ಪ್ರಹ್ಲಾದ :** [ನಾಚಿ ವಿನಮ್ರನಾಗಿ] ಇದೇನು ಗುರುದೇವ ! ಮಹಾಮಹಿಮ ರಾದ ನಿಮ್ಮ ಯೋಗ್ಯತೆಯಲ್ಲಿ, ನಿಮ್ಮ ಸಾಧನವೇನು ? ಅಸುರಕುಲೋದ್ಭವನಾದ ಅಲ್ಪನಾದ ನಾನೆಲ್ಲಿ ? ಬ್ರಹ್ಮದೇವರ ಸಾಕ್ಷಾತ್ ಪುತ್ರರಾದ ತಾವೆಲ್ಲಿ? ನಾನು ಕೇವಲ ತಮ್ಮ ಅನುಗ್ರಹೋಪಜೀವಿ.

**ನಾರದರು :** [ನಸುನಕ್ಕು] ಪ್ರಹ್ಲಾದ ! ನಿನ್ನ ಗುರುಭಕ್ತಿ ಅನ್ಯಾದೃಶ ವಾದುದು. ನೀನು ಏನೇ ಹೇಳಿದರೂ, ಹರಿಭಕ್ತಾಗ್ರಣಿಯೆಂದು ಸರ್ವಮಾನ್ಯನಾಗಿ ರುವೆ. ಇಲ್ಲದಿದ್ದರೆ ನಿನಗಾಗಿ ಶ್ರೀಹರಿಯು ಸ್ತಂಭದಿಂದೊಡೆದು ಬರುತ್ತಿದ್ದನೆ ? ಜಗತ್ತಿನಲ್ಲಿ ಮತ್ಯಾರಿಗೂಕೊಡದ ಅಸಾಧಾರಣ ವರಗಳನ್ನಿತ್ತು ಪೊರೆಯುತ್ತಿದ್ದನೆ?

**ಪ್ರಹ್ಲಾದ :** [ವಿನೀತನಾಗಿ] ಇದೇನು ಗುರುದೇವ ! ನೀವಿಂದು ಈ ಜಡ ಶಿಷ್ಯನ ಗುಣಪ್ರಶಂಸಿಸಲೆಂದೇ ಬಂದಿರುವಂತಿದೆಯಲ್ಲ! ಸ್ವಾಮಿ, ಇದೆಲ್ಲವೂ ತಮ್ಮ ಪ್ರಭಾವವೇ ಅಲ್ಲವೇ? ಬ್ರಹ್ಮದೇವನ ಶಾಪದಿಂದ ದೈತ್ಯಯೋನಿಯಲ್ಲಿ ಜನಿಸಬೇಕಾಗಿ ಬಂದು ದುಃಖದಿಂದ ಕಂಗೆಟ್ಟು ಮಾತೆಯ ಉದರದಲ್ಲಿ ಉದ್ವಿಗ್ನನಾಗಿ ಬಿದ್ದಿದ್ದ ನನ್ನಲ್ಲಿ ಪರಮಕರುಣಾಳುಗಳಾದ ತಮ್ಮಿಂದ ಶ್ರೀಹರಿಭಕ್ತಿಯ ಬೀಜಾಂಕುರ ವಾಯಿತು! ತಮ್ಮ ಉಪದೇಶರೂಪ ಹರಿಮಹಿಮಾಮೃತಪಾನಮಾಡಿ ನಾನುಆನಂದ ತುಂದಿಲನಾದೆ. ಶ್ರೀಹರಿಯ ಸಾಕ್ಷಾತ್ಕಾರಮಾಡಿಸಿಕೊಟ್ಟ ನನ್ನ ಸ್ವರೂಪೋದ್ಧಾರಕ ಗುರುಗಳು ನೀವು! ಮಹಾನುಭಾವ, ನಿಮ್ಮ ಉಪಕಾರವನ್ನು ನಾನೆಂತು ತೀರಿಸಬಲ್ಲೆ? ಲೋಕದಲ್ಲಿ ಶಿಷ್ಯರ ವಿತ್ತಾಪಹರಣಮಾಡುವ ಗುರುಗಳೇ ಅನೇಕರು ! ಆದರೆ, ಪೂಜ್ಯರೆ, ನಿಮ್ಮಂತೆ ಶಿಷ್ಯರ ಚಿತ್ತಾಪಹರಣಮಾಡಿ, ಅವರ ಉದ್ಧಾರಕ್ಕಾಗಿ ನಿರ್ಮಲಾಂತಃಕರಣದಿಂದ ತತ್ತ್ವೋಪದೇಶಮಾಡಿ, ಶಿಷ್ಯನಿಗಾಗಿ ಸರ್ವಸ್ವವನ್ನೂ ದಾನಮಾಡುವ ಗುರುಗಳು ಬಹುದುರ್ಲಭರು ಸ್ವಾಮಿ !

**ನಾರದರು :** [ಮಂದಹಾಸಬೀರಿ] ಪ್ರಹ್ಲಾದ! ಕಾರ್ಯಕ್ಕೆಗೂಡುವವರೆಗೆಜಗತ್ತಿ ನಲ್ಲಿ ಆದರ್ಶ ಗುರುಭಕ್ತನಂತೆ ನಟಿಸಿ, ವಿದ್ಯೆ,ಉಪದೇಶಾದಿಗಳನ್ನು ಹೊಂದಿ ಅವ ರಿಂದಾಗಬೇಕಾದುದೆಲ್ಲ ಮುಗಿದ ಮೇಲೆ,ಸ್ವರೂಪೋದ್ಧಾರಕ ಗುರುಗಳನ್ನೇ ಮರೆತು, ಅಹಂತ್ವದಿಂದ ಮೆರೆಯುವ ಶಿಷ್ಯರೇ ಅಧಿಕವಾಗಿರುವುದು ಇಂದು ಕಂಡುಬರುತ್ತಿರು ವಾಗ, ಸದಾ ಗುರುಭಕ್ತಿ ಪಾರಾಯಣನಾಗಿ, ಗುರ್ವಾಜ್ಞಾಪರಿಪಾಲಕನಾಗಿ, ಗುರು ಶುಶ್ರೂಷಾದಿಗಳಲ್ಲಿ ಸದಾ ಜಾಗೃತನಾಗಿರುವ ನಿನ್ನಂಥ ಸಚ್ಛಿಷ್ಯರು ಜಗತ್ತಿನಲ್ಲಿ ಬಹು ದುರ್ಲಭವಪ್ಪಾ! ನಿನ್ನಂತಹ ಉತ್ತಮ ಶಿಷ್ಯನನ್ನು ಪಡೆದ ನಾನು ನಿಜವಾಗಿ ಭಾಗ್ಯ

ಶಾಲಿ, ಪ್ರಹ್ಲಾದ, ನೀನು ಸರ್ವವಿಧದಿಂದ ಜಗತ್ತಿಗೆ ಆದರ್ಶನಾಗಿದ್ದೀಯೆ! ನಿನಗೆ ಮಂಗಳವಾಗಲಿ.

ಪ್ರಹ್ಲಾದರಾಜರು ಗುರುಗಳ ಪ್ರಶಂಸೆಯಿಂದ ಲಜ್ಜಿತರಾಗಿ, ತಲೆತಗ್ಗಿಸಿ ನಿಂತು ಕರಜೋಡಿಸಿ "ಪೂಜ್ಯರೇ, ತಾವೀಗ ಎಲ್ಲಿಂದ ದಯಮಾಡಿಸಿರುವಿರಿ ?" ಎಂದು ಪ್ರಶ್ನಿಸಿದರು.

**ನಾರದ:** ವತ್ಸ! ನಿನ್ನನ್ನು ಹರಿಸೇವೆಯಲ್ಲಿ ಜಾಗೃತಗೊಳಿಸಲು ಬಂದಿದ್ದೇನೆ,

**ಪ್ರಹ್ಲಾದ :** [ಉತ್ಸುಕತೆಯಿಂದ] ಹಾಗೆಂದರೇನು ಗುರುದೇವ! ತಮ್ಮ ಅಭಿಪ್ರಾಯ ಅವಗತವಾಗಲಿಲ್ಲ, ಸ್ಪಷ್ಟವಾಗಿ ಅಪ್ಪಣೆಕೊಡಿಸೋಣವಾಗಲಿ.

**ನಾರದ :** ಪ್ರಹ್ಲಾದ! ಸನಕಾದಿಗಳ ಶಾಪದಿಂದ ನಿನ್ನ ತಂದೆ, ಚಿಕ್ಕಪ್ಪಂದಿರಾಗಿ ಜನಿಸಿ, ಶ್ರೀನರಹರಿರೂಪದ ಶ್ರೀ ಪರಮಾತ್ಮನಿಂದ ಸಂಹೃತರಾದ ಜಯ-ವಿಜಯರು ಮತ್ತೆ ಶ್ರೀಹರಿಯ ಹಿಂದಿನ ಆದೇಶದಂತೆ ತ್ರೇತಾಯುಗದಲ್ಲಿ ರಾವಣ-ಕುಂಭಕರ್ಣರೆಂಬ ರಾಕ್ಷಸರಾಗಿ ಹುಟ್ಟಿ, ಶ್ರೀಮನ್ನಾರಾಯಣನ ಅವತಾರಿಯಾದ ಶ್ರೀರಾಮಚಂದ್ರನಿಂದ ಸಂಹೃತರಾದ ವಿಚಾರವನ್ನು ಹಿಂದೊಮ್ಮೆ ನಿನಗೆ ಹೇಳಿದ್ದು ಜ್ಞಾಪಕವಿದೆಯಷ್ಟೆ ?

**ಪ್ರಹ್ಲಾದ :** ಅಹುದು, ಗುರುದೇವ ನೆನಪಿದೆ !

**ನಾರದ :** ಅವರೇ ಈಗ ಈ ದ್ವಾಪಾರಯುಗದಲ್ಲಿ ಮತ್ತೆ ಅವತರಿಸಲಿರುವರು. ಶ್ರೀಹರಿಯ ಪರಮವೈರಿಯಾದ ಕಲಿಯೂ ತನ್ನನ್ನು ಅನುಸರಿಸುವ ತಮೋಯೋಗ್ಯ ದೈತ್ಯರುಗಳೊಡನೆ ಈ ಯುಗದಲ್ಲಿ ಅವತರಿಸಲಿರುವನು. ಈಗಾಗಲೇ ಅಸುರರು ಭಾರತಾವನಿಯ ವಿವಿಧ ರಾಜ-ಮಹಾರಾಜರ ವಂಶದಲ್ಲಿ ಜನಿಸಿ ಶ್ರೀಹರಿದ್ವೇಷ, ಶ್ರೀಹರಿತತ್ತ್ವ. ಧರ್ಮವಿರೋಧಿಗಳಾಗಿ, ಸಜ್ಜನರಿಗೆ ವಿಪರೀತ ಹಿಂಸೆ ಕೊಡುತ್ತಿರುವರು. ಅವರ ಅನ್ಯಾಯ-ಅತ್ಯಾಚಾರಗಳಿಂದ ಸಜ್ಜನರಿಗೆ ಬಹಳ ಕಷ್ಟಪ್ರಾಪ್ತವಾಗಿದೆ. ಆ ದುಷ್ಟದೈತ್ಯರ ಭಾರವನ್ನು ಹೊರಲಾರದೆ ಭೂಮಾತೆಯು ತಲ್ಲಣಿಸುತ್ತಿರುವಳು. ಈಗ ಶ್ರೀಹರಿಯ ಅವತಾರ ಅನಿವಾರ್ಯವಾಗಿದೆ. ಈಗ ಅವತರಿಸಲಿರುವ ಶ್ರೀ ಹರಿಯ ಅವತಾರವು ಎಲ್ಲ ಅವತಾರಗಳಕಿಂತ ಅತ್ಯಂತ ವೈಶಿಷ್ಟ್ಯ-ಮಹತ್ವಪೂರ್ಣವಾದ ಅವತಾರವೆನಿಸುವುದು. ಭಗವಂತನ ಲೀಲಾವಿಲಾಸಗಳು ಅಸಾಧಾರಣವಾಗಿರುತ್ತವೆ. ಶ್ರೀಹರಿಭಕ್ತರೆಲ್ಲರೂ ಈ ಒಂದು ಸತ್ಪ್ರಸಂಗವನ್ನು ಸದುಪಯೋಗಪಡಿಸಿಕೊಂಡು ಶ್ರೀಹರಿಯನ್ನು ಸೇವಿಸಿ ಉದ್ಧೃತರಾಗಲು ಈಗಾಗಲೇ ಶ್ರೀಹರಿಯ ಅವತಾರಕ್ಕೆ ಮೊದಲೇ ಅವತರಿಸಲಾರಂಭಿಸಿದ್ದಾರೆ.

ಪ್ರಹ್ಲಾದ ! ನೀನು ಶ್ರೀಹರಿಯ ಭಕ್ತಾಗ್ರಣಿ, ನೀನೀಗ ಮತ್ತೆ ಅವತರಿಸುವುದು ಅನಿವಾರ್ಯ. ಆದ್ದರಿಂದ ನೀನು ಅವತರಿಸಿ ಶ್ರೀಹರಿಯ ಈ ಭೂಭಾರಹರಣರೂಪ ಕಾರ್ಯದಲ್ಲಿ ಸೇವೆ ಸಲ್ಲಿಸಬೇಕೆಂಬುದನ್ನು ನಿನಗೆ ತಿಳಿಸಿ ಕಾರ್ಯೋನ್ಮುಖನನ್ನಾಗಿ ಮಾಡಲೆಂದೇ ನಾನು ಬಂದಿದ್ದೇನೆ.

**ಪ್ರಹ್ಲಾದ :** [ಪುಲಕಿತಗಾತ್ರರಾಗಿ, ಆನಂದಭಾಷ್ಪಸಿಕ್ತನಯನರಾಗಿ] ಆಹಾ! ಗುರುದೇವ! ನಿಮ್ಮ ವಚನವು ಅಮೃತಪ್ರಾಶನದಂತೆ ನನಗೆ ಆಮಂದಾನಂದದಾಯಕ ವಾಗಿದೆ. ಶ್ರೀಹರಿಯ ದಾಸನೂ, ನಿಮ್ಮ ಶಿಷ್ಯನೂ ಆದ ನಾನು ಶ್ರೀಹರಿಸೇವೆ ಗಾಗಿ ಅವತರಿಸುವುದು ಅಹೋಭಾಗ್ಯವೆಂದು ಭಾವಿಸಿರುವೆನು ! ಆದರೆ....

**ನಾರದ :** (ನಕ್ಕು) ಆದರೇನು ಪ್ರಹ್ಲಾದ ? ಹೂಂ, ಅರ್ಥವಾಯಿತು ! ನಿನ್ನ ಸ್ವಾಮಿಯ ಆಜ್ಞೆಯನ್ನು ಪಡೆಯಲಿಚ್ಛಿಸುವೆಯಲ್ಲವೇ ? ಆಗಲಿ, ವತ್ಸ ! ಪ್ರಾರ್ಥಿಸು ನಿನ್ನ ದೇವನನ್ನು !

**ಪ್ರಹ್ಲಾದ :** (ಭಕ್ತಿಯಿಂದ)"ವಜ್ರನಖಾಯ ವಿದ್ಮಹೇ ತೀಕ್ಷ್ಣ ದಂಷ್ಟ್ರಾಯ ಧೀಮಹಿ ತನ್ನೋ ನಾರಸಿಂಹಃ ಪ್ರಚೋದಯಾತ್" ಎಂದು ಪ್ರಾರ್ಥಿಸಲು ಕೂಡಲೇ ಮಿಂಚೊಂದು ಮಿನುಗಿದಂತಾಗಿ ಕೋಟಿಸೂರ್ಯಪ್ರಕಾಶ ಬೆಳಗುತ್ತಿರಲು ಶ್ರೀನೃಸಿಂಹ ದೇವರು ಪ್ರತ್ಯಕ್ಷರಾದರು !

**ನಾರದ-ಪ್ರಹ್ಲಾದ :** ನಮೋ ನಮೋ ನರಸಿಂಹರೂಪಾಯ ನಾರಾಯಣಾಯ !

**ಶ್ರೀನೃಸಿಂಹ :** (ಮಂದಹಾಸ ಬೀರುತ್ತಾ) ಅಭೀಷ್ಟ ಸಿದ್ಧಿರಸ್ತು ! ವತ್ಸ ಪ್ರಹ್ಲಾದ ! ನಾರದರ ಉಪದೇಶವಾದಂತೆ ತೋರುತ್ತದೆ ! ನಿನ್ನ ಮನೋರಥ ವೇನು ಕುಮಾರ ?

**ನಾರದ :** (ಕರಮುಗಿದು)ಇದೇನು ದೇವ, ನಿನ್ನ ಲೀಲಾವಿಲಾಸ? ಪ್ರಹ್ಲಾದ ನನ್ನು ಭಾರತಾವನಿಯಲ್ಲಿ ಅವತರಿಸುವಂತೆ ನೀನೇ ಪ್ರೇರಣೆಮಾಡಿ, ನಾನು ಇಲ್ಲಿಗೆ ಬರುವಂತೆ ಮಾಡಿ, ಒಳಗೆ ನಿಂತು ಹೇಳಿಸಿ, ಈಗ ಈ ರೀತಿ ನುಡಿಯುವುದೂ ನಿನ್ನ ಒಂದು ಲೀಲೆಯೆ ? ಭಗವನ್ !

ನಾರದರ ಮಾತನ್ನಾಲಿಸಿ ಶ್ರೀನೃಸಿಂಹರೂಪಿ ಶ್ರೀಹರಿಯು ನಸುನಕ್ಕು "ಪ್ರಹ್ಲಾದ ! ನನ್ನನ್ನೇಕೆ ಸ್ಮರಿಸಿದೆ?" ಎಂದು ಪ್ರಶ್ನಿಸಲು ಪ್ರಹ್ಲಾದರಾಜರು ಪರಮಾತ್ಮನಿಗೆ ಸಾಷ್ಟಾಂಗವೆರಗಿ "ಭಕ್ತಬಾಂಧವ ! ಪದ್ಮಯೋನಿಯ ಶಾಪದಿಂದ ಅಸುರ ಕುಲದಲ್ಲಿ ಜನಿಸಿದರೂ ನಿನ್ನ ಅನುಗ್ರಹ, ಪೂಜ್ಯಗುರುಗಳ ಉಪದೇಶದಿಂದ ನಿನ್ನ ಭಕ್ತನಾಗಿ ನಿನ್ನ ಕರುಣೆಗೆ ಪಾತ್ರನಾದೆ. ಈಗ ಮತ್ತೆ ಅವತರಿಸುವಾಗ ಲಾದರೂ ಅಸುರ ಕುಲದ ಸಂಬಂಧವಿಲ್ಲದೆ ಸಾತ್ವಿಕರಾದ ನಿನ್ನ ಭಕ್ತರ ಕುಲದಲ್ಲೇ ಜನಿಸುವಂತೆ ಅನುಗ್ರಹಿಸು ದೇವ!" ಎಂದು ಪ್ರಾರ್ಥಿಸಿದರು.

ಶ್ರೀನೃಸಿಂಹ;- (ನಸುನಕ್ಕು) ಮಗು, ಪ್ರಹ್ಲಾದ! ನನ್ನ ಪ್ರೇರಣೆಯಂತೆಯೇ ನಾರದನು ನಿನಗರುಹಿರುವನು, ಚಿಂತಿಸಬೇಡ. ಸರ್ವದಾ ನಿನ್ನನ್ನು ಪೊರೆಯಲು ನಾನು ಸಿದ್ಧನಾಗಿರುವಾಗ ನಿನಗೇತರ ಭಯ ? ನೀನು ಚಂದ್ರವಂಶದಲ್ಲಿ ಪ್ರಖ್ಯಾತ ರಾಜಮನೆತನದಲ್ಲಿ, ನಾನು ಅವತರಿಸುವ ಮೊದಲೇ ನನ್ನ ಭಕ್ತನಾಗಿ ಜನಿಸುವೆ ! ನಾರದ ! ನಿನಗೀಗ ಸಂತೋಷವಾಯಿತೇ ?

ನಾರದ ಪ್ರಹ್ಲಾದರು :- ನಿನ್ನ ದಾಸರಾದ ನಮಗೆ ಯಾವಾಗಲೂ ಸಂತೋಷವೇ ! ನಿನ್ನಾಣತಿಯನ್ನು ಶಿರಸಾಧರಿಸಿದ್ದೇವೆ.

ಶ್ರೀನೃಸಿಂಹದೇವರು "ನಾರದ! ವತ್ಸ, ಪ್ರಹ್ಲಾದ! ನಿಮಗೆ ಮಂಗಳವಾಗಲಿ" ಎಂದು ಆಶೀರ್ವದಿಸಿ ಅದೃಶರಾದರು.

ಪ್ರಹ್ಲಾದರಾಜರು ನಾರದರಿಗೆ ನಮಸ್ಕರಿಸಿ ಹರಿವರ್ಷಖಂಡದಿಂದ ಮತ್ತೆ ಭಾರತಾವನಿಯಲ್ಲಿ ಅವತರಿಸಲು ಜ್ಯೋತಿರೂಪದಿಂದ ಅದೃಶ್ಯರಾದರು.

## ೨. ವಂಶಪರಂಪರೆ

ಪ್ರಹ್ಲಾದರಾಜರು ಭಾರತಾವನಿಯಲ್ಲಿ ಅವತರಿಸಿದ ವಿಚಾರವನ್ನು ನಿರೂಪಿಸುವ ಮೊದಲು ಆ ಮಹನೀಯರು ಜನಿಸಿದ ಭಾರತದ ವಿಖ್ಯಾತವಾದ ವಂಶ ಪರಂಪರೆಯನ್ನಿಲ್ಲಿ ನಿರೂಪಿಸಬಯಸುವೆವು.

ಸರ್ವಲೋಕಪಿತಾಮಹರಾದ ಚತುರ್ಮುಖ ಬ್ರಹ್ಮದೇವರಿಗೆ ಅತ್ರಿ ಎಂಬ ಪುತ್ರರಾದರು. ಅವರ ಪುತ್ರನೇ ಚಂದ್ರ. ಚಂದ್ರನಿಗೆ ಬುಧ ಮಗನಾದನು. ಈ ವಂಶವು ಚಂದ್ರವಂಶವೆಂದು ಜಗದ್ವಿಖ್ಯಾತವಾಯಿತು. ಚಂದ್ರನ ಪುತ್ರನಾದ ಬುಧನಿಗೆ ಪುರೂರವನು ಪುತ್ರನು. ವಿಖ್ಯಾತನಾದ ಈ ಪುರೂರವನ ಮಗ ಆಯು. ಅವನ ಮಗನೇ ನಹುಷ ಚಕ್ರವರ್ತಿ. ನಹುಷನಿಗೆ ಯಯಾತಿ ಎಂಬ ವಿಖ್ಯಾತ ಮಗನಾದನು. ಈ ಯಯಾತಿಗೆ ಇಬ್ಬರು ಪತ್ನಿಯರು. ದೈತ್ಯಗುರುಗಳಾದ ಶುಕ್ರಾಚಾರ್ಯರ ಮಗಳಾದ ದೇವಯಾನಿಯು ಒಬ್ಬ ಪತ್ನಿ. ಮತ್ತೊಬ್ಬಳು ವೃಷಪರ್ವನೆಂಬ ದಾನವ ಚಕ್ರವರ್ತಿಯ ಮಗಳಾದ ಶರ್ಮಿಷ್ಠೆ.

ಯಯಾತಿ ಮಹಾರಾಜನಿಗೆ ಈ ಈರ್ವರು ಪತ್ನಿಯರಲ್ಲಿ ಶ್ರೀವಿಷ್ಣುಪಾದಾಸಕ್ತರಾದ ಐದು ಜನ ಪುತ್ರರುದಯಿಸಿದರು, ದೇವಯಾನಿಯಲ್ಲಿ ಯದುರಾಜ ಮತ್ತು ಚತುರ್ವಸು ಎಂಬ ಇಬ್ಬರು ಮಕ್ಕಳೂ, ಶರ್ಮಿಷ್ಠಾದೇವಿಯಲ್ಲಿ ದ್ರುಹ್ಯು, ಅನು ಮತ್ತು ಪುರು ಎಂಬ ಮೂವರು ಪುತ್ರರೂ ಜನಿಸಿದರು. ದೇವಯಾನಿ ಶರ್ಮಿಷ್ಠೆಯರಲ್ಲಿ ದೇವಕೀ-ರೋಹಿಣಿಯರಲ್ಲಿ ಬಲಭದ್ರನು ಜನಿಸಿದಂತೆ ಪುರುವು ಅವತರಿಸಿ ಪ್ರಖ್ಯಾತನಾದನು.

ದೇವಯಾನಿಯ ಮಗನಾದ ಯದುರಾಜನ ವಂಶದಲ್ಲಿ ಜನಿಸಿದ ದತ್ತಾತ್ರೇಯ ನಾಮಕ ಶ್ರೀವಿಷ್ಣುವಿನ ಪ್ರಸಾದದಿಂದ ಅಣಿಮಾದ್ಯಷ್ಟಯೋಗಸಿದ್ಧಿಯನ್ನು ಪಡೆದ ಕಾರ್ತವೀರ್ಯಾರ್ಜುನನು ಹುಟ್ಟಿದನು. ಅವನ ಸಂತತಿಯಲ್ಲಿ ಯಾದವರು ಪ್ರಖ್ಯಾತರಾದರು. ಅವರಿಗೆಲ್ಲ ಮುಖ್ಯಾಶ್ರಯನಾಗಿಯೇ ಶ್ರೀಮನ್ನಾರಾಯಣನು ಶ್ರೀಕೃಷ್ಣ ರೂಪದಿಂದ ಅವತರಿಸಿದನು.

ಶರ್ಮಿಷ್ಠೆಯ ಪುತ್ರನಾದ ಪುರುಚಕ್ರವರ್ತಿಯ ವಂಶದಲ್ಲಿ ಶ್ರೀಹರಿಪ್ರಿಯನಾದ ಭರತಚಕ್ರವರ್ತಿಯು ಜನಿಸಿದನು. ಈ ಭರತಚಕ್ರವರ್ತಿಯ ಒಂದುವಂಶದಲ್ಲಿ ಕುರುರಾಜನೂ ಮತ್ತೊಂದು ವಂಶದಲ್ಲಿ ಪ್ರತೀಪರಾಜನೂ ಜನಿಸಿದನು.

ಇಂತು ವಿಖ್ಯಾತವಾದ ಚಂದ್ರವಂಶದ ಕುರು ಮತ್ತು ಪ್ರತೀಪರಾಜರು ಶ್ರೀಹರಿ ಭಕ್ತರಾಗಿ ಲೋಕದಲ್ಲಿ ವಿಖ್ಯಾತಿಗಳಿಸಿ ಸಮಸ್ತಪ್ರಜರನ್ನು ತಂದೆಯಂತೆ ಪ್ರೀತಿಯಿಂದ ಸಲಹುತ್ತಾ ಧರ್ಮಿಷ್ಟರಾಗಿ ಪ್ರಜಾಪಾಲನೆ ಮಾಡುತ್ತಾ ಕೀರ್ತಿಗಳಿಸಿದರು.

ಪ್ರತಿಪರಾಜ ದಂಪತಿಗಳಿಗೆ ಶ್ರೀಹರಿಯ ಅನುಗ್ರಹದಿಂದ ಓರ್ವಪುತ್ರನು ಜನಿಸಿದನು. ಅವನಿಗೆ 'ದೇವಾಪಿ' ಎಂದು ನಾಮಕರಣವಾಯಿತು. ಮಗುವು ದಷ್ಟಪುಷ್ಟಾಂಗವಾಗಿ ಸುಂದರವಾಗಿದ್ದರೂ ದುರ್ದೈವದಿಂದ ದೇವಾಪಿಯು ಕುಷ್ಟರೋಗಯುಕ್ತನಾಗಿದ್ದುದರಿಂದ ಮಾತಾಪಿತೃಗಳು ಮತ್ತು ಬಾಂಧವರಿಗೆ ಬಹಳ ದುಃಖವಾಯಿತು. ದೈವೇಚ್ಛೆಗೆ ಯಾರೇನು ಮಾಡಲಾದೀತು ? ಅಂತೆಯೇ ಪ್ರತೀಪರಾಜ ದಂಪತಿಗಳು ಹೇಗೋ ಸಮಾಧಾನ ತಾಳಿದರು. ಮತ್ತು ಪುತ್ರನನ್ನು ಪ್ರೀತಿವಿಶ್ವಾಸಗಳಿಂದ ರಾಜಯೋಗ್ಯರೀತಿಯಲ್ಲಿ ಸಾಕಿ ಸಲಹಿದರು, ಆದರೂ ಪ್ರತೀಪರಾಜರಿಗೆ ಮನಸ್ಸಿನಲ್ಲಿ ವಂಶೋದ್ಧಾರಕನಾಗಿ ಚಕ್ರವರ್ತಿಯಾಗಿ ಬಾಳಬೇಕಾದ ಮಗನು ಕುಷ್ಟರೋಗವಿಶಿಷ್ಟನಾಗಿದ್ದುದರಿಂದ ತಮ್ಮ ವಂಶದ ಮುಂದಿನ ಏಳಿಗೆ ಹೇಗೆಂಬ ಚಿಂತೆ ಇದ್ದೇ ಇತ್ತು.

ಕುಲಹಿರಿಯರ ಸಲಹೆಯಂತೆ ಪ್ರತೀಪರಾಜದಂಪತಿಗಳು ವಂಶವರ್ಧಕನೂ, ಕೀರ್ತಿಶಾಲಿಯೂ ಆದ ಪುತ್ರನನ್ನು ಕರುಣಿಸುವಂತೆ ಶ್ರೀಪರಮಾತ್ಮನನ್ನು ಪ್ರಾರ್ಥಿಸಿ ಆರಾಧಿಸತೊಡಗಿದರು. "ಕಿಮಲಭ್ಯಂ ಭಗವತಿ ಪ್ರಸನ್ನೇ ಶ್ರೀನಿಕೇತನೆ ?" ಷಡ್ಗುಣೈಶ್ವರ್ಯಸಂಪನ್ನನಾದ ಶ್ರೀಲಕ್ಷ್ಮೀಜಾನಿಯು ಒಲಿದರೆ ಆವುದುತಾನೇ ಅಸಾಧ್ಯವಾದೀತು ? ಶ್ರೀಹರಿಯ ಕೃಪಾದೃಷ್ಟಿ ಈ ದಂಪತಿಗಳ ಮೇಲೆ ಬಿತ್ತೆಂದು ತೋರುತ್ತದೆ. ಅಂತೆಯೇ ಪ್ರತಿಪರಾಜನ ಪತ್ನಿಯು ಮತ್ತೆ ಗರ್ಭಧರಿಸಿದಳು. ಇದರಿಂದ ಸರ್ವರಿಗೂ ಪರಮಾನಂದವಾಯಿತು.

## ೩. ಭಾಗವತಾಗ್ರೇಸರನ ಅವತಾರ

ಪ್ರತೀಪಾರಾಜರ ಧರ್ಮಪತ್ನಿಯು ನವಮಾಸಗಳು ತುಂಬಿದ ಮೇಲೆ ಒಂದು ಶುಭಮುಹೂರ್ತದಲ್ಲಿ ಸರ್ವಲಕ್ಷಣಸಂಪನ್ನನಾದ ಪುತ್ರನನ್ನು ಪ್ರಸವಿಸಿದಳು. ಕೃತಯುಗದಲ್ಲಿ ನೃಕಂಠೀರವನನ್ನು ಒಲಿಸಿಕೊಂಡ ಶ್ರೀಪ್ರಹ್ಲಾದರಾಜರು ಭಗವಂತನನ್ನು 'ದೇವ! ನಾನು ಇನ್ನು ಮೂರು ಜನ್ಮಗಳಲ್ಲಿಯೂ ನಿನ್ನ ಭಕ್ತನಾಗಿ,ದಾಸನಾಗಿ ಸೇವಿಸುವಂತೆ ಅನುಗ್ರಹಿಸು[1] ಎಂದು ಪ್ರಾರ್ಥಿಸಿ ಅದರಂತೆ ಶ್ರೀನರಸಿಂಹದೇವರಿಂದ ವರ

1. "ದಾಸಸ್ತವಾಹಂ ಭೂಯಾಸಂ ದೇವ ಜನ್ಮಾಂತರೇಷ್ವಪಿ ॥"

ಪಡೆದಿದ್ದರು. ಮುಂದೆ ಹರಿವರ್ಷಖಂಡದಲ್ಲಿ ಭಗವದಾರಾಧನಾ ನಿರತರಾಗಿದ್ದಾಗ ನಾರದ ಮಹರ್ಷಿಗಳ ಪ್ರೇರಣೆ ಸಲಹೆಯಂತೆ ಭೂಭಾರಹರಣಕ್ಕಾಗಿ ಅವತರಿಸುವ ಶ್ರೀಹರಿಯ ಸೇವೆಮಾಡಿ ಪುನೀತರಾಗಲು ಆಶಿಸಿದರು. ಆ ಭಗವದ್ಭಕ್ತರಾದ ಶ್ರೀಪ್ರಹ್ಲಾದ ರಾಜರೇ ಈಗ ಚಂದ್ರವಂಶದ ಭರತಚಕ್ರವರ್ತಿಯ ಕುಲದಲ್ಲಿ ಪ್ರತೀಪರಾಜರಿಗೆ ಪುತ್ರರಾಗಿ ಅವತರಿಸಿದ್ದರು. ಶ್ರೀಮನ್ನಾರಾಯಣನ ಅಂತರಂಗಭಕ್ತರೂ, ಭಾಗವತಾಗ್ರೇಸರರೂ ಆದ ಶ್ರೀಪ್ರಹ್ಲಾದರಾಜರ ಪುನರಾವತಾರವಾಯಿತು ![1] ಪುರುಚಕ್ರವರ್ತಿಯ ವಿಖ್ಯಾತವಾದ ಈ ವಂಶದಲ್ಲಿ ಶ್ರೀವಾಯುದೇವರ ವಿಶೇಷಾವೇಶಯುಕ್ತರಾಗಿ, ಮಹಾಶಾಲಿಗಳಾಗಿ ಶ್ರೀಹರಿಯ ದುಷ್ಟಶಿಕ್ಷಣ-ಶಿಷ್ಟರಕ್ಷಣ-ಭೂಭಾರಹರಣ ರೂಪ ಬಲಕಾರ್ಯದಲ್ಲಿ ಸೇವೆಸಲ್ಲಿಸಲೆಂದೇ ಮಹಾಬಲಶಾಲಿಗಳಾದ ಪ್ರಹ್ಲಾದರು ಮತ್ತೆ ಪ್ರತೀಪರಾಜನಿಗೆ ಪುತ್ರರಾಗಿ ಜನಿಸಿದರು[2]. ಆಗೊಂದು ಅದ್ಭುತ ವ್ಯಾಪಾರ ನಡೆದು ಎಲ್ಲರನ್ನೂ ವಿಸ್ಮಯಗೊಳಿಸಿತು. ಮಗುವು ಜನಿಸಿದ ಕೂಡಲೇ ಭಯಂಕರ ಶಬ್ದವಾಗಿ ಭೂಮಿಯು ಸೀಳಿಹೋಯಿತು ![3] ಮಗುವು ಜನಿಸಿದ್ದಕ್ಕೇ ಹೀಗೆ ಭೂಮಿಯು ಬಿರಿದುಹೋದುದು ಈ ಶಿಶುವು ಮಹಾಬಲಶಾಲಿಯೂ, ಶ್ರೀವಾಯುದೇವರ ಆವೇಶಯುಕ್ತವೂ ಎಂಬುದಕ್ಕೆ ಉತ್ತಮ ನಿದರ್ಶನ.[4]

ಜನಿಸುವಾಗಲೇ ಇಂಥ ಅಪೂರ್ವ ಪರಾಕ್ರಮವನ್ನು ಪ್ರದರ್ಶಿಸಿದ ಸರ್ವಾಂಗ ಸುಂದರವಾದ ಶಿಶುವನ್ನು ಕಂಡು ಪ್ರತೀಪರಾಜ ದಂಪತಿಗಳು, ಮತ್ತಿತರ ರಾಜಬಂಧುಗಳಿಗಾದ ಸಂತೋಷ ಅವರ್ಣನೀಯ ! ಮಂಗಳಸ್ನಾನವಾದ ಮೇಲೆ ಭರತವಂಶದ ಸಂಪ್ರದಾಯಾನುಸಾರವಾಗಿ ಪ್ರತೀಪರಾಜರು ಪುತ್ರನಿಗೆ ವಿಧ್ಯುಕ್ತರೀತಿಯಲ್ಲಿ ಜಾತಕರ್ಮ, ನಾಮಕರಣಗಳನ್ನು ವೈಭವದಿಂದ ನೆರವೇರಿಸಿ ಮೊದಲೇ ತೀರ್ಮಾನಿಸಿದ್ದಂತೆ ಕುಮಾರನಿಗೆ "ಬಾಹ್ಲೀಕರಾಜ"ನೆಂದು ನಾಮಕರಣ ಮಾಡಿದರು.

ಹೀಗೆ ಪ್ರತೀಪರಾಜರು ಮಗನಿಗೆ ಬಾಹ್ಲೀಕರಾಜನೆಂದು ಹೆಸರಿಡಲೂ ಕಾರಣವಿತ್ತು. ಚಂದ್ರವಂಶದ ಪುರುಕುಲತಿಲಕರಾದ ಪ್ರತೀಪರಾಜರಿಗೆ ಬಾಹ್ಲೀಕದೇಶದ ರಾಜರಾದ ಪ್ರತೀಪಮಹಾರಾಜರು ತಮ್ಮ ಪುತ್ರಿಯನ್ನು ಕೊಟ್ಟು ವಿವಾಹಮಾಡಿಸಿದ್ದರು. ಅವರಿಗೆ ಪುತ್ರಸಂತಾನವಿರಲಿಲ್ಲ. ಆದ್ದರಿಂದ ಭರತವಂಶದ ಈ ಪ್ರತೀಪರಾಜರಿಗೆ ಮಗಳನ್ನು ಧಾರೆಯೆರೆದು ಕೊಡುವಾಗ, ತಮ್ಮ ವಂಶೋದ್ಧಾರಕ್ಕಾಗಿ

---

1 ...ಬಾಹ್ಲೀಕೋ ರಾಜಸತ್ತಮಃ । ಹಿರಣ್ಯಕಶಿಪೋಃ ಪುತ್ರಃ ಪ್ರಹ್ಲಾದೋ ಭಗವತ್ಪ್ರಿಯಃ ॥
—ಮಹಾಭಾರತ ತಾತ್ಪರ್ಯ ನಿರ್ಣಯ.

2 ಭೂಭಾರಕ್ಷಪಣೇ ವಿಷ್ಣೋರಂಗತಾಮಾಪ್ತುಮೇವ ಸಃ ॥ — ತಾ. ನಿರ್ಣಯ.

3 ಯೇನೈವ ಜಾಯಮಾನೇನ ತರಸಾ ಭೂರ್ವಿದಾರಿತಾ ॥ — ತಾ. ನಿರ್ಣಯ.

4 ವಾಯುನಾ ಚ ಸಮಾವಿಷ್ಟಃ ಮಹಾಬಲ ಸಮನ್ವಿತಃ ॥ — ತಾ. ನಿರ್ಣಯ.

"ಪುತ್ರಿಕಾಪುತ್ರನ್ಯಾಯ"[5]ದಿಂದ ತಮ್ಮ ಮಗಳಲ್ಲಿ ಜನಿಸುವ ಪುತ್ರನು ದತ್ತಕದ್ವಾರಾ ಮಾತಾಮಹರಾದ ತಮಗೆ ಪುತ್ರರಾಗಬೇಕೆಂದು ಬಯಸಿ, ಆದರಂತೆ ವಚನಪಡೆದು ಸಂಕಲ್ಪಪೂರ್ವಕವಾಗಿ ಕನ್ಯಾದಾನ ಮಾಡಿದ್ದರು.

ಆದರೆ ಪ್ರತೀಪರಾಜರಿಗೆ ಮೊದಲು ಜನಿಸಿದ ಪುತ್ರನಾದ ದೇವಾಪಿಯು ಕುಷ್ಟರೋಗಪೀಡಿತನಾಗಿಯೇ ಜನಸಿದ್ದರಿಂದ ಅಂಥವನನ್ನು 'ಪುತ್ರಿಕಾಪುತ್ರನ್ಯಾಯ ದಿಂದ ದತ್ತಕ ತೆಗೆದುಕೊಳ್ಳಲು ಬರುವಂತಿರಲಿಲ್ಲವಾದ್ದರಿಂದ ಬಾಹ್ಲೀಕ ದೇಶಾಧಿ ಪತಿಗಳಾದ ಪ್ರತೀಪಮಹಾರಾಜರ ಆಶೆಯು ಫಲಿಸಿರಲಿಲ್ಲ.

ಈಗ ದೈವಾನುಗ್ರಹದಿಂದ ಸರ್ವಲಕ್ಷಣ ಸಂಪನ್ನನೂ, ಮಹಾಬಲಶಾಲಿಯೂ ಆದ ಪುತ್ರನು ಹುಟ್ಟಿದ್ದರಿಂದ ಅವನನ್ನು ವಚನವಿತ್ತಂತೆ ತಮಗೆ ದತ್ತಕಕೊಡ ಬೇಕೆಂದು ಮಾವನವರು ಕೋರಿದ್ದರಿಂದ ಅವರ ಆಶೆಯನ್ನು ಪೂರೈಸುವುದು ತಮ್ಮ ಧರ್ಮವೂ ಕರ್ತವ್ಯವೂ ಆಗಿದೆಯೆಂದು ಭಾವಿಸಿ ಪ್ರತೀಪಮಹಾರಾಜರು ಮಗನಿಗೆ ನಾಮಕರಣ ಮಾಡುವಾಗ ಮುಂದೆ ಅವನು ದತ್ತಕದ್ವಾರಾ ಪ್ರತೀಪ ಮಹಾರಾಜರ ಪುತ್ರನಾಗಿ ಬಾಹ್ಲೀಕ ದೇಶಾಧಿಪತಿಯಾಗಲಿರುವುದರಿಂದ ಅದನ್ನು ಸೂಚಿಸಲೆಂದೇ ಕುಮಾರನಿಗೆ "ಬಾಹ್ಲೀಕ ರಾಜ"ನೆಂದು ನಾಮಕರಣ ಮಾಡಿದರು ! ಇದರಿಂದ ಪ್ರತೀಪಮಹಾರಾಜ ದಂಪತಿಗಳು, ಅವರ ಬಂಧುಗಳಿಗೆ ಅಪಾರ ಆನಂದವಾಯಿತು.

ಬಾಹ್ಲೀಕರಾಜ ಶುಕ್ಲಪಕ್ಷದ ಚಂದ್ರನಂತೆ ಅಭಿವೃದ್ಧಿಸುತ್ತಾ ತನ್ನ ಆಟ–ಪಾಟು ವಿದ್ಯೆ, ಅಪೂರ್ವಶಕ್ತಿ-ಸಾಹಸ-ಪರಾಕ್ರಮಗಳಿಂದ ಉಭಯವಂಶ ಲಲಾಮನಾಗಿ ಸರ್ವರನ್ನೂ ಆನಂದಗೊಳಿಸಿದನು. ಪ್ರತೀಪಮಹಾರಾಜರು ಸಕಾಲದಲ್ಲಿ ಮಾತು ಕೊಟ್ಟಂತೆ ಬಾಹ್ಲೀಕರಾಜರನ್ನು ವೈದಿಕ ವಿಧಿಪೂರ್ವಕವಾಗಿ ದತ್ತಕದಮೂಲಕ ಮಾತಾಮಹಂದಿರಾದ ಪ್ರತೀಪಮಹಾರಾಜರಿಗೆ ಒಪ್ಪಿಸಿಕೊಟ್ಟರು. ಅವರು ಪರಮಾನಂದಭರಿತರಾಗಿ ದತ್ತಕಪುತ್ರ ಬಾಹ್ಲೀಕರಾಜನಿಗೆ ಕ್ಷತ್ರಿಯೋಚಿತ ರೀತಿಯಲ್ಲಿ ವೈಭವದಿಂದ ಉಪನಯನಾದಿ ಸಂಸ್ಕಾರಗಳನ್ನು ನೇರವೇರಿಸಿದರು.

ಇದೇ ಸಮಯದಲ್ಲಿ ಶ್ರೀಭಗವಂತನ ಅನುಗ್ರಹದಿಂದ ಪ್ರತೀಪರಾಜ ದಂಪತಿ ಗಳಿಗೆ ಭರತಕುಲಭೂಷಣನೂ ಗುಣಜ್ಯೇಷ್ಠನೂ ಆದ ಮತ್ತೊಬ್ಬ ಪುತ್ರನು ಜನಿಸಿದನು. ಹರ್ಷನಿರ್ಭರರಾದ ಪ್ರತೀಪರಾಜರು ಕುಮಾರನಿಗೆ "ಶಂತನು" ಎಂದು ನಾಮಕರಣ ಮಾಡಿದರು. ಹೀಗೆ ಪ್ರತೀಪರಾಜರಿಗೆ ದೇವಾಪಿ, ಬಾಹ್ಲೀಕರಾಜ, ಶಂತನು ಎಂಬ ಮೂವರು ಪುತ್ರರಾಗಿ, ಹಿರಿಯನಾದ ದೇವಾಪಿಯು ಕುಷ್ಠರೋಗ

---

5 "ಪುತ್ರಿಕಾಪುತ್ರನ್ಯಾಯ"ವೆಂದರೆ ಪುತ್ರಸಂತಾನವಿಲ್ಲದವರು ತಮ್ಮ ಪುತ್ರಿಯನ್ನು, ಅವಳಲ್ಲಿ ಜನಿಸುವ ಮಗನು ತನಗೆ ಪುತ್ರನಾಗಬೇಕೆಂದು ಬಯಸಿ (ದತ್ತಕದಿಂದ) ವಿವಾಹ ಮಾಡಿಕೊಟ್ಟ ಮೇಲೆ ಆ ಮಗಳಲ್ಲಿ ಜನಿಸಿದ ಪುತ್ರನು ಮಾತಾಮಹನಿಗೆ ದತ್ತಕದ್ವಾರಾ ಪುತ್ರನಾಗುವುದು ಎಂದು ಅರ್ಥ. ಇದು ಶಾಸ್ತ್ರವಿಹಿತವೂ ಆಗಿದೆ.

ಪೀಡಿತನಾದ್ದರಿಂದ ಜೀವನದಲ್ಲಿ ವೈರಾಗ್ಯವುಂಟಾಗಿ ಆತ್ಮೋದ್ಧಾರ ಮಾಡಿಕೊಂಡು ಉದ್ಧೃತನಾಗಲು ಅವನು ತಪಸ್ವಿಗಾಗಿ ವನಕ್ಕೆ ತೆರಳಿದನು. ಎರಡನೆಯ ಪುತ್ರನಾದ ಬಾಹ್ಲೀಕರಾಜನು ಬಾಹ್ಲೀಕದೇಶದ ರಾಜನಾಗಿ ಬೆಳಗತೊಡಗಿದನು. ಮೂರನೆಯವನಾದ ಶಂತನು ಕುರುವಂಶಭೂಷಣನಾಗಿ ಭರತಕುಲದ ಚಕ್ರವರ್ತಿಯಾಗಿ ಭಾರತದಲ್ಲಿ ವಿಖ್ಯಾತನಾದನು.

## ೪. ಕುರುವಂಶ ಚಕ್ರವರ್ತಿ ಶಂತನು

ಬಾಹ್ಲೀಕರಾಜರ ಸಹೋದರನೂ, ಕುರುಪಾಂಡವರಿಗೆ ಮೂಲಪುರುಷನೂ ಆದ ಶಂತನು ಚಕ್ರವರ್ತಿಯ ವಿಚಾರ ತಿಳಿಯುವುದು ಅವಶ್ಯವಾದ್ದರಿಂದ ಇಲ್ಲಿ ಆ ವಿಚಾರವನ್ನು ಸ್ವಲ್ಪ ವಿವರಿಸುವುದು ಅಪ್ರಕೃತವಾಗಲಾರದು.

ಶ್ರೀಮಧ್ವಾಚಾರ್ಯರು ತಮ್ಮ "ಮಹಾಭಾರತ ತಾತ್ಪರ್ಯನಿರ್ಣಯ"ವೆಂಬ ವಿಮರ್ಶಾತ್ಮಕ ಗ್ರಂಥದಲ್ಲಿ ಪ್ರತೀಪರಾಜನ ಮೂರನೆಯ ಪುತ್ರನಾದ ಶಂತನು ಚಕ್ರವರ್ತಿಯ ಮೂಲರೂಪ ಮತ್ತು ಅವತಾರಕಾರಣ, ಚರಿತೆ ಮುಂತಾದ ವಿಚಾರಗಳನ್ನು ಚೆನ್ನಾಗಿ ನಿರೂಪಿಸಿದ್ದಾರೆ. ಮಹಾಭಾರತದಲ್ಲಿ ಬರುವ ವ್ಯಕ್ತಿಗಳ ಚಿತ್ರಣವನ್ನು ವಿಶ್ಲೇಷಿಸಿ ಪ್ರಾಮಾಣಿಕವಾಗಿ ಬರೆದಿರುವ ಆಚಾರ್ಯರ ಗ್ರಂಥಾನುಸಾರವಾಗಿ ಶಂತನು ಕಥೆ ಹೀಗಿದೆ :-

ಹಿಂದೆ ಒಮ್ಮೆ ಕಮಲಾಸನರಾದ ಶ್ರೀಬ್ರಹ್ಮದೇವರು ಪೂರ್ವಸಮುದ್ರದ ಪಶ್ಚಿಮತೀರಕ್ಕೆ, ಗಂಗಾ–ಸಮುದ್ರ ಸಂಗಮಸ್ಥಳಕ್ಕೆ ಪರ್ವಕಾಲವಾಗಿದ್ದುದರಿಂದ ದಯಮಾಡಿಸಿದ್ದರು. ಅಂದು ಪೂರ್ಣಿಮಾದಿನವಾಗಿದ್ದಿತು. ಪರ್ವಕಾಲ ಪ್ರಯುಕ್ತ ಬಿರುಗಾಳಿ, ದೊಡ್ಡದೊಡ್ಡ ಅಲೆಗಳಿಂದ ವಿಜೃಂಭಿಸಿದ ಸಮುದ್ರರಾಜನು ಉಕ್ಕೇರಿ ಧ್ಯಾನಾಸಕ್ತರಾಗಿ ಕುಳಿತಿದ್ದ ಬ್ರಹ್ಮದೇವರ ಮೇಲೆ ಬಲವಾಗಿ ಅಪ್ಪಳಿಸಿದನು. ಸಮುದ್ರಜಲವು ಅವರ ಮೇಲೆ ಬಿದ್ದಿದ್ದರಿಂದ ಅದೊಂದು ಅಭಿಷೇಕವೇ ಆಯಿತು! ಅದರಿಂದ ಕೋಪಗೊಂಡ ಬ್ರಹ್ಮದೇವರು–"ವರುಣ ! ಶಾಂತನಾಗು ಎಂದರು. ಸಮುದ್ರರಾಜ ಶಾಂತನಾದ. ಆಗ ಚತುರಾನನರು "ವರುಣ ! ನೀನು ಮದಿಸಿ ನನಗೆ ಮಹಾಭಿಷೇಕ ಮಾಡಿದ್ದರಿಂದ 'ಮಹಾಭಿಷಕ್' ಎಂಬ ರಾಜನಾಗಿ ಭೂಮಿಯಲ್ಲಿ ಜನಿಸು. ನಂತರ ನಾನು ಶಾಂತನಾಗೆಂದ ಕೂಡಲೇ ಶಾಂತತನವುಳ್ಳವನಾದ್ದರಿಂದ ಅದರ ಮುಂದಿನ ಜನ್ಮದಲ್ಲಿ ನೀನು ಶಂತನು ಎಂಬ ಹೆಸರಿನಿಂದ ಜನಿಸು. ಆಗ ಈ ಗಂಗಾದೇವಿಯೂ ದೇವತಾಕಾರ್ಯನಿಮಿತ್ತವಾಗಿ ನಿನಗೆ ಪತ್ನಿಯಾಗುವಳು"ಎಂದು ವರುಣದೇವನಿಗೆ ಶಾಪವನ್ನು ಪ್ರದಾನಮಾಡಿದರು. ಬ್ರಹ್ಮದೇವರ ಶಾಪದಿಂದ ವರುಣದೇವರು ಮುಂದೆ ಮಹಾಭಿಷಕ್ ಎಂಬ ಹೆಸರಿನ ರಾಜನಾಗಿ ಹುಟ್ಟಿ ಬಹುಕಾಲ ರಾಜ್ಯಭಾರಮಾಡಿ ಮತ್ತೆ ಬ್ರಹ್ಮದೇವರ ಆಸ್ಥಾನಕ್ಕೆ ಮರಳಿದರು.

ಮುಂದೊಂದು ಸಲ ಬ್ರಹ್ಮಸಭೆಯಲ್ಲಿ ಗಂಗಾದೇವಿಯು ಬರುವಾಗ ಅವಳ ವಸ್ತ್ರಗಳು ಅಸ್ತವ್ಯಸ್ತವಾಯಿತು. ಎಲ್ಲರೂ ತಲೆತಗ್ಗಿಸಿ ಕುಳಿತರು. ಆದರೆ ವರುಣ ದೇವರು ಮಾತ್ರ ನಗ್ನಳಾದ ಗಂಗಾದೇವಿಯನ್ನು ಆಶೆಯ ಕಣ್ಣುಗಳಿಂದ ನೋಡಿದರು. ಇದನ್ನು ಗಮನಿಸಿದ ಬ್ರಹ್ಮದೇವರು "ವರುಣ ! ನಗ್ನಸ್ತ್ರೀಯನ್ನು ದರ್ಶನಮಾಡಿದ ನೀನು ಮನುಷ್ಯನಾಗಿ ಭೂಲೋಕದಲ್ಲಿ ಶಂತನು ಎಂಬ ರಾಜನಾಗಿ ಜನಿಸು !"ಎಂದು ಶಾಪವಿತ್ತರು. ಈ ಶಾಪವು ಹಿಂದೆ ನೀಡಿದ್ದ ಶಾಪವನ್ನು ಕಾರ್ಯರೂಪಕ್ಕೆ ತರಲೆಂದೇ ಆಗಿತ್ತು. ಶಾಪವಡೆದ ವರುಣದೇವರು ಭೂಮಿಯಲ್ಲಿ ಪ್ರತೀಪರಾಜರ ಮಗನಾಗಿ ಶಂತನು ಎಂಬ ಹೆಸರಿನಿಂದ ಅವತರಿಸಿ, ಮುಂದೆ ಗಂಗಾದೇವಿಯ ಕರಪಿಡಿದರು.

ಶಂತನು-ಗಂಗಾದೇವಿಯರಿಗೆ ಮೊದಲು ಏಳುಜನ ವಸುಗಳು ಪುತ್ರರಾಗಿ ಜನಿಸಿದರು. ಅವರೆಲ್ಲರನ್ನೂ ಗಂಗೆಯು ಸಂಹರಿಸುತ್ತಿದ್ದಳು. ಮುಂದೆ ಅವರಿಗೆ ಅಷ್ಟ ವಸುಗಳಲ್ಲೊಬ್ಬನಾದ ದ್ಯುನಾಮಕವಸುವು ಮಗನಾಗಿ ಜನಿಸಿದನು. ಅವನಿಗೆ ಶಂತನು, ದೇವವ್ರತನೆಂದು ನಾಮಕರಣ ಮಾಡಿದನು, ಆ ದೇವವ್ರತನೇ ಕುರಕುಲ ಪಿತಾಮಹನಾದ ಭೀಷ್ಮಾಚಾರ್ಯನು.

ಶಂತನು ಚಕ್ರವರ್ತಿಯು ಸಕಲಶಾಸ್ತ್ರ, ಶಸ್ತ್ರಾಸ್ತ್ರಗಳಲ್ಲಿ ಪಾರಂಗತನಾದ ದೇವವ್ರತನನ್ನು ಯೌವರಾಜ್ಯಪದದಲ್ಲಿ ಪಟ್ಟಾಭಿಷೇಕಮಾಡಿ ಮುದಿಸಿದನು.

ಪೂರ್ವದಲ್ಲಿ 'ಅಗ್ನಿಷ್ವಾತ್ತ'ರೆಂದು ಖ್ಯಾತರಾದ ಪಿತೃದೇವತೆಗಳ ಮನಸ್ಸಿನಿಂದ "ಅಚ್ಛೋದಾ"ಎಂಬ ಹೆಸರಿನಿಂದ ಹುಟ್ಟಿದ ಕುಮಾರಿಯು ಶ್ರೀಹರಿಯನ್ನು ಮಗನನ್ನಾಗಿ ಪಡೆಯುವ ಅಭಿಲಾಷೆಯಿಂದ ಶ್ರೀಮನ್ನಾರಾಯಣನನ್ನು ಕುರಿತು ತಪಸ್ಸು ಮಾಡಿದಳು. ಅವಳ ತಪಸ್ಸಿಗೆ ಮೆಚ್ಚಿದ ಶ್ರೀಹರಿಯು "ವತ್ಸೆ ! ನಿನ್ನ ಮನೋರಥವನ್ನು ಪೂರೈಸುತ್ತೇನೆ" ಎಂದು ವರವನ್ನು ದಯಪಾಲಿಸಿದ್ದನು. ಆ ಅಚ್ಛೋದೆಯೇ ಈಗ ಭಾರತಾವನಿಯಲ್ಲಿ ವಸುರಾಜನಿಗೆ ಮಗಳಾಗಿ ಜನಿಸಿ, ದೈವಸಂಕಲ್ಪದಿಂದ ನಾವಿಕರಿಗೆ ಒಡೆಯನಾದ ದಾಶರಾಜನಿಗೆ ಸಿಕ್ಕು, ಅವರ ಮನೆಯಲ್ಲಿ ಪುತ್ರಿಯಂತೆ "ಕಾಳಿ" ಎಂಬ ಹೆಸರಿನಿಂದ ಬೆಳೆಯುತೊಡಗಿದಳು.

ಒಮ್ಮೆ ಪರಾಶರ ಮುನಿಗಳನ್ನು ದೋಣಿಯಲ್ಲಿ ನದಿಯ ಅತ್ತ ಕಡೆಯ ದಡಕ್ಕೆ ಮುಟ್ಟಿಸಲು ದೋಣಿಯನ್ನು ನಡೆಸುತ್ತಿದ್ದ ಕಾಳಿಯನ್ನು ನೋಡಿ ಮೋಹಿತರಾದ ಪರಾಶರ ಋಷಿಗಳು ಅವಳ ಅಂಗಸಂಗ ಮಾಡಿದರು. ಆಗ ಶ್ರೀಹರಿಯು ಶ್ರೀವೇದವ್ಯಾಸರೂಪದಿಂದ ಪುತ್ರನಾಗಿ ಅವತರಿಸಿದನು. ಮಹಾತಪಸ್ವಿಗಳಾದ ಪರಾಶರರು ಕಾಳಿಗೆ ಮತ್ತೆ ಕನ್ಯಾತ್ವವನ್ನು ಪ್ರದಾನಮಾಡಿ ಶ್ರೀವೇದವ್ಯಾಸರೊಡನೆ ತಮ್ಮ ಆಶ್ರಮಕ್ಕೆ ತೆರಳಿದರು.

ಹೀಗೆ ಭಗವಂತನನ್ನು ಪುತ್ರನಾಗಿ ಪಡೆದು ಪರಾಶರ ಮುನಿಗಳ ಅನುಗ್ರಹದಿಂದ ಮತ್ತೆ ಕನ್ಯಾತ್ವವನ್ನು ಪಡೆದು ಅತ್ಯಂತ ಸುಂದರಿಯಾಗಿ ದಾಶರಾಜನ ಮನೆಯಲ್ಲಿ

ವಿರಾಜಿಸಿದ್ದ ಕಾಳಿಯನ್ನು ಒಮ್ಮೆ ಶಂತನು ಚಕ್ರವರ್ತಿಯು ನೋಡಿ ಅವಳಲ್ಲಿ ಮೋಹ ಪರವಶನಾಗಿ ಅವಳನ್ನು ಕರಪಿಡಿಯಬಯಸಿದನು. ಆದರೆ ದಾಶರಾಜನು 'ಇವಳ ಮಗನೇ ಚಕ್ರವರ್ತಿಯಾಗಲು ಒಪ್ಪಿದರೆ ಮಗಳನ್ನು ಕೊಡುವುದಾಗಿ' ಹೇಳಿದನು. ಯುವರಾಜ ದೇವವ್ರತನಿರುವಾಗ ಈಕಾರ್ಯ ಅಸಾಧ್ಯವೆಂದು ಶಂತನು ಚಕ್ರವರ್ತಿ ನಿರಾಶನಾಗಿ ಹಿಂದಿರುಗಿ ಚಿಂತಾಕ್ರಾಂತನಾದನು. ಈ ವಿಚಾರವರಿತ ದೇವವ್ರತನು ತಂದೆಯ ಮನೋರಥವನ್ನು ಪೂರ್ಣಗೊಳಿಸಿ ಸಂತೋಷಪಡಿಸಲಾಶಿಸಿ ದಾಶರಾಜನ ನಿರಬಂಧನೆಗಳನ್ನೊಪ್ಪಿ ಅವಳ ಪೂರ್ವೋತ್ತರಗಳನ್ನರಿತು"ಈ ನಿನ್ನ ಮಗಳ ಉದರ ದಲ್ಲಿ ಜನಿಸಿದ ಮಗನೇ ಚಕ್ರವರ್ತಿಯಾಗಲಿ. ನಾನು ಆಜನ್ಮ ಬ್ರಹ್ಮಚಾರಿಯಾಗಿದ್ದು ಸಾಮ್ರಾಜ್ಯ ರಕ್ಷಕನಾಗಿರುತ್ತೇನೆ"ಎಂದು ಪ್ರತಿಜ್ಞಾಬದ್ಧನಾಗಿ ದಾಶರಾಜನ ಮಗಳೊ ಡನೆ ತಂದೆಯ ವಿವಾಹವನ್ನು ನೆರವೇರಿಸಿದನು. ದಾಶರಾಜನ ಮಗಳಾದ ಕಾಳಿಯೇ ಭರತಕುಲದ ಚಕ್ರವರ್ತಿಯಾದ ಶಂತನುವಿನ ಮಡದಿಯಾಗಿ 'ಸತ್ಯವತಿ' ಎಂಬ ಹೆಸರಿ ನಿಂದ ವಿಖ್ಯಾತಳಾದಳು. ತಂದೆಗಾಗಿ ತನ್ನ ಸರ್ವಸ್ವವನ್ನೂ ತ್ಯಾಗಮಾಡಿದ ದೇವ ವ್ರತನ ಭೀಕರಪ್ರತಿಜ್ಞೆಯನ್ನು ಕಂಡು ದೇವತೆಗಳು ಅವನನ್ನು 'ಭೀಷ್ಮ' ಎಂದು ಕರೆದು ಕೊಂಡಾಡಿದರು.

ಮುಂದೆ ಶಂತನು ಚಕ್ರವರ್ತಿಗೆ ವೇದವತಿಯಲ್ಲಿ ಚಿತ್ರಾಂಗದ-ವಿಚಿತ್ರವೀರ್ಯ ಎಂಬ ಈರ್ವರು ಪುತ್ರರಾದರು, ಶಂತನು ಚಕ್ರವರ್ತಿಯ ತರುವಾಯ ಚಿತ್ರಾಂಗದ ವಿಚಿತ್ರವೀರ್ಯರನ್ನು ಭೀಷ್ಮಾಚಾರ್ಯರು ಚಕ್ರವರ್ತಿ-ಯುವರಾಜರನ್ನಾಗಿ ಮಾಡಿದರು. ಚಿತ್ರಾಂಗದನನ್ನು, ದುರ್ವಿಧಿಯ ಕಾರಣವಾಗಿ ಚಿತ್ರಾಂಗದನೆಂಬಗಂಧರ್ವನುಸಂಹಾರ ಮಾಡಿಬಿಟ್ಟನು. ಆಗ ವಿಚಿತ್ರವೀರ್ಯನನ್ನು ಚಕ್ರವರ್ತಿಯನ್ನಾಗಿ ಮಾಡಿ ಭೀಷ್ಮಾ ಚಾರ್ಯರು ಕಾಶೀರಾಜನ ಪುತ್ರಿಯರಾದ ಅಂಬಿಕಾ, ಅಂಬಾಲಿಕಾ ಎಂಬ ರಾಜಪುತ್ರಿಯ ರನ್ನು ತಂದುಕೊಂಡು ವಿಚಿತ್ರವೀರ್ಯನಿಗೆ ವಿವಾಹಮಾಡಿಸಿದರು. ಕೆಲಕಾಲ ಕಳೆದ ಮೇಲೆ ವಿಚಿತ್ರವೀರ್ಯನು ಕ್ಷಯರೋಗಪೀಡಿತನಾಗಿ ನಿಸ್ಸಂತಾನನಾಗಿ ಮೃತನಾದನು. ರಾಜ್ಯಕ್ಕೆ ದಿಕ್ಕಿಲ್ಲವಾದ್ದರಿಂದ ಗುರುಹಿರಿಯರ ಸಮ್ಮತಿ ಪಡೆದು ರಾಜಮಾತಾ ಸತ್ಯವತಿಯು ತನ್ನ ಪುತ್ರರೂ, ಭಗವಂತನ ಅವತಾರರೂ ಆದ ವೇದವ್ಯಾಸರ ಮನ ವೊಲಿಸಿ ಅಂಬಿಕಾ, ಅಂಬಾಲಿಕೆಯರಲ್ಲಿ ಪುತ್ರೋತ್ಪತ್ತಿಯನ್ನು ಮಾಡಲು ಒಪ್ಪಿಸಿ ದಳು. ಶ್ರೀವೇದವ್ಯಾಸರಿಂದ'ನಿಯೋಗ'ದಿಂದ ಅಂಬಿಕೆಯು ಧೃತರಾಷ್ಟ್ರನನ್ನೂ, ಅಂಬಾಲಿಕೆಯು ಪಾಂಡುರಾಜನನ್ನೂ, ಭಕ್ತಳಾದ ದಾಸಿಯು ಭಗದ್ಭಕ್ತನಾದ ವಿದುರ ನನ್ನೂ ಪುತ್ರರಾಗಿಪಡೆದರು. ಶ್ರೀವೇದವ್ಯಾಸರ ನಿಯೋಗದಿಂದ ಪುತ್ರರ ಜನನಕ್ಕೆ ಕಾರಣರಾಗಿ ಕುರಸಾಮ್ರಾಜ್ಯವನ್ನು ರಕ್ಷಿಸಿದರು, ಹೀಗೆ ಕೌರವ-ಪಾಂಡವರ ತಾತನೂ, ಭೀಷ್ಮಾಚಾರ್ಯರ ತಂದೆಯೂ ಆದ ಶಂತನು ಚಕ್ರವರ್ತಿಗೆ ಅಗ್ರಜರಾದ ಬಾಹ್ಲೀಕರ ಮಹತ್ವ ಎಷ್ಟೆಂಬುದು ಇವರಿಂದ ಗೊತ್ತಾಗುವುದು.

## ೫. ತೇನ ವಿನಾ ತೃಣಮಪಿ ನ ಚಲತಿ !

ಶ್ರೀಹರಿಯ ಸಂಕಲ್ಪವನ್ನರಿಯಲು ಯಾರಿಂದಲೂ ಸಾಧ್ಯವಿಲ್ಲ. 'ತೇನ ವಿನಾ ತೃಣಮಪಿ ನ ಚಲತಿ' ಎಂಬ ಪ್ರಮಾಣದಂತೆ ಭಗವಂತನ ಇಚ್ಛೆಯಂತೆಯೇ ಎಲ್ಲವೂ ಜರಗುವುದು. ಇದಕ್ಕೆ ಬಾಹ್ಲೀಕರಾಜರು, ಮತ್ತು ಶಂತನು ಚಕ್ರವರ್ತಿಯ ವಂಶೀಕರಾದ ಪಾಂಡವರು-ಕೌರವರು ಉತ್ತಮ ಉದಾಹರಣೆಯಾಗಿದ್ದಾರೆ.

ಪ್ರತೀಪರಾಜನ ಜ್ಯೇಷ್ಠಪುತ್ರ ದೇವಾಪಿಯು ಕುಷ್ಠರೋಗಪೀಡಿತನಾಗಿರದಿದ್ದರೆ ಅವನೇ ಬಾಹ್ಲೀಕ ದೇಶಾಧಿಪತಿಗಳಾದ ಪ್ರತೀಪ ಮಹಾರಾಜರಿಗೆ ದತ್ತುಪುತ್ರನಾಗಿ ಮಾತಾಮಹನ ರಾಜ್ಯಕ್ಕೆ ಅಧಿಪತಿಯಾಗುತ್ತಿದ್ದ ! ಆಗ ಎರಡನೆಯವರಾದ ಬಾಹ್ಲೀಕರಾಜರೇ ಕುರುವಂಶದ ಚಕ್ರವರ್ತಿಗಳಾಗುತ್ತಿದ್ದರು! ವಿಧಿವಿಲಾಸವನ್ನಿಲ್ಲಿ ನಾವು ಕಾಣಬಹುದು. ಶ್ರೀಹರಿಯ ಸಂಕಲ್ಪದಂತೆ ದೇವಾಪಿಯು ಕುಷ್ಠರೋಗಪೀಡಿತನಾದ್ದರಿಂದ ಅವನು ಮಾತಾಮಹನರಾಜ್ಯಕ್ಕೆಅಧಿಪತಿಯಾಗಲಾಗದೆ,ವೈರಾಗ್ಯದಿಂದ ತಪಸ್ಸಿಗೆ ಅರಣ್ಯಕ್ಕೆ ತೆರಳಿದನು. ಎರಡನೆಯ ಪುತ್ರರಾದ ಬಾಹ್ಲೀಕರು ಮಾತಾಮಹನಿಗೆ 'ಪುತ್ರಿಕಾಪುತ್ರನ್ಯಾಯ'ದಿಂದ ದತ್ತಕಹೋಗಿ ಬಾಹ್ಲೀಕ ದೇಶಾಧಿಪತಿಗಳಾಗಬೇಕಾಯಿತು. ಈ ಒಂದು ಸಂದರ್ಭ ಒದಗಿರದಿದ್ದರೆ ಬಾಹ್ಲೀಕರೇ ಕುರುವಂಶಚಕ್ರವರ್ತಿಗಳಾಗಿ ಮುಂದೆ ಕುರು-ಪಾಂಡವರು ಜನಿಸಿ, ಅವರಲ್ಲಿ ಪರಸ್ಪರ ದ್ವೇಷಬೆಳೆದು ಕೊನೆಗೆ ಕುರುಕ್ಷೇತ್ರ ಯುದ್ಧವಾಗಿ ಭೂಭಾರಹರಣವಾಗಲು ಅವಕಾಶವೇ ಇರುತ್ತಿರಲಿಲ್ಲ! ಆದರೆ ಸತ್ಯಸಂಕಲ್ಪನಾದ ಶ್ರೀಹರಿಯು ಭೂಭಾರಹರಣಕ್ಕಾಗಿಯೇ ಅವತರಿಸಬೇಕಾಗಿದ್ದುದರಿಂದ ಆ ಕಾರ್ಯವು ಯಶಸ್ವಿಯಾಗಿ ಜರುಗಲೇಬೇಕಲ್ಲವೇ? ಅಂತೆಯೇ ಕಪಟನಾಟಕಸೂತ್ರಧಾರಿಯಾದ ಆ ಪ್ರಭುವು ಈ ಎಲ್ಲ ಸಂಘಟನೆಗಳು ಘಟಿಸುವಂತೆಮಾಡಿ ತನ್ನ ಲೀಲಾವಿಲಾಸವನ್ನು ತೋರಿದನು ಮತ್ತು ಶ್ರೀಹರಿಯ ಸಂಕಲ್ಪದಂತೆಯೇ ಎಲ್ಲವೂ ಜರುಗಿ ಕುರುಕ್ಷೇತ್ರದ ಯುದ್ಧಮೂಲಕವಾಗಿ ಭೂಭಾರಹರಣವಾಗಿ, ಧರ್ಮಾತ್ಮರಾದ ಪಾಂಡವರು ಚಕ್ರವರ್ತಿಗಳಾಗಿ, ದುಷ್ಟಶಿಕ್ಷಣ, ಶಿಷ್ಟರಕ್ಷಣ, ಭಗವತ್ತತ್ತ್ವಧರ್ಮಪ್ರಸಾರ, ಲೋಕಕಲ್ಯಾಣಾದಿ ಕಾರ್ಯಗಳು ನೆರವೇರುವಂತಾಯಿತು. ಇದೆಲ್ಲಕ್ಕೂ ಶ್ರೀಪರಮಾತ್ಮನ ಸಂಕಲ್ಪವೇ ಕಾರಣವಾಗಿದ್ದು ಶ್ರೀಹರಿಯ ಲೀಲಾವಿಲಾಸಗಳಿಗೆ ದ್ಯೋತಕವಾದೆಯೆಂದು ತಿಳಿಯಬೇಕು.

## ೬. ಬಾಹ್ಲೀಕರಾಜರ ಭವ್ಯವ್ಯಕ್ತಿತ್ವ

ಕಥಾನಾಯಕರಾದ ಬಾಹ್ಲೀಕರಾಜರು ಮಾತಾಮಹನ ರಾಜ್ಯಕ್ಕೆ ಅಧಿಪತಿಗಳಾಗಿ ಧರ್ಮದಿಂದ ರಾಜ್ಯಭಾರಮಾಡಹತ್ತಿದರು. ಭಾಗವತಾಗ್ರಣಿಗಳಾದ ಪ್ರಹ್ಲಾದರಾಜರ ಅವತಾರರಾದ ಅವರಲ್ಲಿ ಪ್ರಹ್ಲಾದರಾಜರ ಎಲ್ಲ ಗುಣಗಳೂ ವಿರಾಜಿಸಿದ್ದವೆಂದು ಪ್ರತ್ಯೇಕವಾಗಿ ಹೇಳಬೇಕಿಲ್ಲವಷ್ಟೆ? ಅಂತೆಯೇ ಅವರ ನಡೆ-

ನುಡಿ ಆಚಾರ, ಭಗವದ್ಭಕ್ತಿ, ಪ್ರಜಾಪರಿಪಾಲನೆ, ಸರ್ವಜನರ ಅಭ್ಯುದಯಾಕಾಂಕ್ಷೆಗಳೆಲ್ಲ ಜಗನ್ಮಾನ್ಯವಾಗಿದ್ದವು.

ಶ್ರೀ ಬಾಹ್ಲೀಕರಾಜರು ಸತ್ಯ, ಧರ್ಮ, ತಪಸ್ಸು, ಸ್ವಾಧ್ಯಾಯ, ಯಜನ, ಶ್ರೀಹರಿಪೂಜಾ. ಸ್ತುತಿ, ಧ್ಯಾನಸಂಪನ್ನರಾಗಿದ್ದರು, ಶಾಂತ್ಯೌದಾರ್ಯಾದಿಗುಣಗಳು ಅವರಲ್ಲಿ ರಾರಾಜಿಸಿದ್ದವು. ಪ್ರಶಾಂತರೂ, ಸತ್ಯಸಂಧರೂ, ಶೀಲಸಂಪನ್ನರೂ ಆದ ಅವರು ಸಂಸಾರವು ಬಂಧಕವೆಂದು ಅರಿತಿದ್ದರಿಂದ ಅದರಲ್ಲಿಯೇ ಮುಳಿಗಿರದೆ, ಭಗವಂತನನ್ನು ಒಲಿಸಿಕೊಂಡು ಅವನ ಅನುಗ್ರಹ ಸಂಪಾದಿಸುವತ್ತಲೇ ಅವರ ಮನಸ್ಸು ಹರಿಯುತ್ತಿತ್ತು. ಅವರು ದೇವ-ದ್ವಿಜ-ಗುರು-ಹಿರಿಯರನ್ನು ಗೌರವದಿಂದ ಕಾಣುತ್ತ ಅವರನ್ನು ಪೂಜಿಸುತ್ತಿದ್ದರು. ಪ್ರಜರನ್ನು ಸ್ವಂತ ಮಕ್ಕಳಂತೆ ಭಾವಿಸಿ ಅವರ ಕ್ಷೇಮ ಚಿಂತನೆಯಲ್ಲಿ ಮಗ್ನರಾಗಿ ಪ್ರಜಾರಂಜಕ ರಾಜರೆಂದು ಕೀರ್ತಿಗಳಿಸಿದರು.

ಭಾಗವತ ಧರ್ಮಾಚರಣೆಯಿಂದ ಅವರು ಆದರ್ಶಸಾಧಕರಾಗಿದ್ದರು, ಶಾಸ್ತ್ರಗಳು ಭಾಗವತ ಧರ್ಮಗಳನ್ನು ಹೀಗೆ ವಿವರಿಸುವವು—ಪರಮಾತ್ಮನೇ ಸರ್ವೋತ್ತಮನೆಂಬ ಬುದ್ಧಿಯಿಂದ ತದಿತರ ವಿಷಯಗಳಲ್ಲಿ ರತರಾಗದೆ, ಸರ್ವಪ್ರಾಣಿಗಳಲ್ಲಿ ಕಾರುಣ್ಯತೋರುವುದು, ಭಗವಂತನ ಭಕ್ತರೊಡನೆ ಸಂತತ ಸಹವಾಸ, ಬಾಹ್ಯಂತರ ಶೌಚಗಳನ್ನಾಚರಿಸುವುದು, ತಿತಿಕ್ಷಾ [ದುಃಖ–ಉದ್ವೇಗಸಹನೆ] ತಪಸ್ಸು ಸಂತತ. ಭಗವದ್ಗುಣಚಿಂತನ. ಸರ್ವಶಬ್ದಗಳೂ ಪರಮ ಮುಖ್ಯವೃತ್ತಿಯಿಂದ ಪರಮಾತ್ಮನನ್ನೇ ಬೋಧಿಸುತ್ತವೆಂದು ತಿಳಿಯುವುದು, ಆರ್ಜವ. ಬ್ರಹ್ಮಚರ್ಯ, ಅಹಿಂಸಾ, ಸಮತ್ವ, ಭಗವಂತನ ಮಂಗಳರೂಪವನ್ನು ಮನಸಾ ಚಿಂತಿಸುವುದು, ಸತ್ಯ, ಅಭಯ ಶಮದಮಾದಿಗಳು ಶ್ರವಣಕೀರ್ತನ-ಸ್ಮರಣ–ಸೇವಾ–ಪೂಜಾ–ನಮನ-ಸಖ್ಯ-ದಾಸ್ಯ-ಆತ್ಮಸಮರ್ಪಣೆಗಳೆಂಬ ನವವಿಧ ಭಕ್ತಿಪೂರ್ವಕವಾಗಿ ಭಗವಂತನನ್ನು ಸಂತೋಷಪಡಿಸುವುದು—ಇವೇ ಮುಂತಾದವು ಶ್ರೀಹರಿಗೆ ಅತ್ಯಂತ ಪ್ರಿಯವಾದ ಭಾಗವತ ಧರ್ಮಗಳೆನಿಸುವವು. ಒಂದೇ ಮಾತಿನಲ್ಲಿ ಹೇಳುವುದಾದರೆ 'ನಾಹಂ ಕರ್ತಾ ಹರಿಃ ಕರ್ತಾ' ಎಲ್ಲವನ್ನೂ ಶ್ರೀಹರಿಯೇ ಮಾಡುವನು, ಮಾಡಿಸುವನು ಎಂಬ ದೃಢ ವಿಶ್ವಾಸದಿಂದ ಅವನ ಪ್ರೀತ್ಯರ್ಥವಾಗಿ ಆಚರಿಸುವ ಕರ್ಮಗಳೇ ಭಾಗವತ ಧರ್ಮಗಳಾಗಿವೆ.

ಇಂಥಾ ಭಾಗವತ ಧರ್ಮಾಚರಣೆಯಲ್ಲಿ ನಿಷ್ಠರಾದ್ದರಿಂದಲೇ ಭಾಗವತಧರ್ಮ ಪ್ರಸಾರಕರೆಂದು ಬಾಹ್ಲೀಕರು ಜಗತ್ತಿನಲ್ಲಿ ಪ್ರಸಿದ್ಧರಾದರು.

ಹಿಂದೆ ನಿರೂಪಿಸಿದಂತೆ ಭಾಗವತಧರ್ಮಪ್ರವರ್ತಕ-ಪ್ರಸಾರಕರಲ್ಲಿ ರಮಾದೇವಿ, ಬ್ರಹ್ಮದೇವರು,ವಾಯುದೇವರು ಪ್ರಮುಖರು,ಭಗವಂತನೆಸಗುವ ಜಗತ್ಸೃಷ್ಟ್ಯಾದಿ ವ್ಯಾಪಾರಗಳ ಗುರಿ ಜೀವರ ಉದ್ಧಾರ.ವೇದಗಳಲ್ಲಿ ಉಕ್ತವಾಗಿರುವ ಜ್ಞಾನಮಾರ್ಗವನ್ನು ಆಚರಣೆಯಲ್ಲಿ ತಂದು,ಧ್ಯೇಯಸಾಧನೆಯ ಗುರಿಯತ್ತಮುಂದುವರೆಯುವುದು ಹೇಗೆಂಬ ಗಹನ ವಿಚಾರವನ್ನು ಜಗತ್ತಿಗೆ ಸಾರಿದವರೇ ಬ್ರಹ್ಮದೇವರು. ಅವರ

ಯುಗಯುಗಗಳ ಹಿಂದೆ ಹಚ್ಚಿದ ಜ್ಞಾನದೀವಿಗೆಯು ವಿವಿಧ ಮಾರ್ಗಗಳಲ್ಲಿ ಬೆಳೆದು ನೊಂದವೆ ಇಂದಿನವರೆಗೂ ಬೆಳಗುತ್ತಲೇ ಬಂದಿದೆ! ಸನಕಾದಿಗಳಿಂದ ಹೊರಟ ಜ್ಞಾನ ಪರಂಪರೆ ಒಂದಾದರೆ, ನಾರದರಿಂದ ಹೊರಟಿದ್ದು ಮತ್ತೊಂದು! ಇವೆರ ಡಕ್ಕೂ ತಾತ್ವಿಕವಾಗಿ ಭೇದವಿಲ್ಲ. ಎರಡರ ಗುರಿಯೂ ಒಂದೇ! ಈ ಒಂದು ಜ್ಞಾನ ಪರಂಪರೆಯಲ್ಲಿ, ಭಾಗವತಧರ್ಮ ಪರಂಪರೆಯಲ್ಲಿ ನಮಗೆ ಮೊದಲು ಎದ್ದುಕಾಣುವ ವ್ಯಕ್ತಿ, ಶ್ರೀಪ್ರಹ್ಲಾದರಾಜರು. ಇವರು ನಾರದರ ಮಾರ್ಗದಲ್ಲಿ ಮುಂದುವರೆದ ವರು. ತುಂಬುರು, ಅರ್ಜುನ, ಉದ್ಧವ, ಇಂದ್ರ, ಶುಕಾಚಾರ್ಯಮೊದಲಾದವರು ಈ ಗುಂಪಿಗೆ ಸೇರಿದವರು.

ಅನೇಕ ಋಷಿ-ಮುನಿಗಳೂ ಜ್ಞಾನಮಾರ್ಗದಲ್ಲಿ ಶ್ರಮಿಸಿ ಉದ್ಧೃತರಾಗಿ ದ್ದಾರೆ. ಆದರೆ ಅವೆಲ್ಲ ಆತ್ಮೋದ್ಧಾರಕ್ಕೆ ಮಾತ್ರ ಸೀಮಿತ. ಜಗತ್ಕಲ್ಯಾಣಾಕಾಂಕ್ಷೆ ಯಿಂದ ಸ್ವಸುಖವನ್ನು ನಿರ್ಲಕ್ಷಿಸಿ - ನನ್ನೊಬ್ಬನ ಉದ್ಧಾರವೇ ದೊಡ್ಡದಲ್ಲ, ಜಗತ್ಕಲ್ಯಾಣವಾಗಬೇಕು, ಶಾಸ್ತ್ರಜ್ಞಾನವಿಲ್ಲದ, ಏನೂ ತಿಳಿಯದ, ಅಜ್ಞಜನರ ಉದ್ಧಾರವಾಗಬೇಕು. ದೀನದಲಿತ ಜನರ ಕಲ್ಯಾಣವಾಗಬೇಕು. ಈ ಮಾರ್ಗದಲ್ಲಿ ಶ್ರಮಿಸುವುದೇ ಆನಂದ, ಇದೇ ಪರಮಾತ್ಮನ ಸೇವೆ. ಇದೇ ಧ್ಯಾನ, ಇದೇ ತಪಸ್ಸು ಎಂಬ ವಿಶಾಲ ದೃಷ್ಟಿಯಿಂದ ತಮಗೆ ದೊರಕುತ್ತಿದ್ದ ಮೋಕ್ಷವನ್ನೂ ದೂರಮಾಡಿ ಆಶ್ರಿತಜನರಿಗಾಗಿ ಪ್ರಾರ್ಥಿಸಿದ ಮಹಾನುಭಾವರು ಪ್ರಹ್ಲಾದರು. ಅವರಲ್ಲಿ ಭಗವಂತನು ಮಾಡಿದ ಅನುಗ್ರಹವೂ ಅಷ್ಟೇ ಅಸಾಧಾರಣ! "ಮದ್ಭಕ್ತಾಸ್ತ್ವಾ ಮನುವ್ರತಾಃ", "ತ್ವಾಂ ಚ ಮಾಂ ಚ ಸ್ಮರನ್ ಕಾಲೇ ಕರ್ಮ ಬಂಧಾತ್ಪ್ರಮುಚ್ಯತೆ" ಮಗು, ಪ್ರಹ್ಲಾದ! ನೀನು ನನ್ನವನಪ್ಪಾ. ಯಾರು ನಿನ್ನನ್ನು ಅನುಸರಿಸು ವರೋ ಅವರೇ ನನ್ನ ಭಕ್ತರಾಗಲು ಅರ್ಹರು!, ನಿನ್ನನ್ನು ನಂತರ ನನ್ನನ್ನು ಯಾರು ನಿತ್ಯವೂ ಸ್ಮರಿಸುವರೋ, ಅವರು ಕರ್ಮಬಂಧನದಿಂದ ಬಿಡುಗಡೆ ಹೊಂದಿ ಉದ್ಧೃತರಾಗುತ್ತಾರೆ!"- ಎಂತಹ ಅಮೃತಸ್ಯಂದಿಯಾದ, ಅಮೃತಪ್ರದವಾದ ಅಮರವಾಣಿ! ಸಾಕ್ಷಾತ್ ಭಗವಂತನ ಬಾಯಿಂದ ಇಂತಹ ಮಾತು ಬರಬೇಕಾದರೆ, ತನ್ನ ಜೊತೆಯಲ್ಲೇ ಪ್ರಹ್ಲಾದರನ್ನು ಸೇರಿಸಿಕೊಳ್ಳಬೇಕಾದರೆ, ಆ ನಮ್ಮಸ್ವಾಮಿಗೆ ಪ್ರಹ್ಲಾದರಲ್ಲಿ ಎಂತಹ ಪ್ರೇಮವಿರಬೇಕು? ಆ ಕಾರುಣ್ಯವೆಂತಹುದು? ಆದ್ದ ರಿಂದಲೇ ಅವರು ಹರಿಭಕ್ತಾಗ್ರಗಣ್ಯರು, ಭಾಗವತಧರ್ಮಪ್ರಸಾರಕರೆಂದು ತ್ರಿಲೋಕ ಗಳಲ್ಲಿ ಕೀರ್ತಿಯನ್ನು ಗಳಿಸಿದ್ದಾರೆ, ಇಂತು ವಿಖ್ಯಾತರಾದ ಪ್ರಹ್ಲಾದರಾಜರ ಅವತಾರರಾದ ಬಾಹ್ಲೀಕರಾಜರು ಭಾಗವೇತಧರ್ಮಾನುಷ್ಠಾನನಿಷ್ಠರಾಗಿ ಶ್ರೀಪರ ಮಾತ್ಮನನ್ನು ಭಕ್ತಿಶ್ರದ್ಧೆಗಳಿಂದಾರಾಧಿಸುತ್ತಾ ಶ್ರೀಹರಿಯ ಬಲಕಾರ್ಯದಲ್ಲಿ ಸೇವೆ ಸಲ್ಲಿಸಲು ಆ ಸಮಯವನ್ನು ಪ್ರತೀಕ್ಷಿಸುತ್ತಿದ್ದರು.

ಆದ್ದರಿಂದಲೇ ಬಾಹ್ಲೀಕರಾಜರು ತಾವು ಮಹಾಬಲಿಶಾಲಿಗಳಾಗಿದ್ದರೂ, ತಮ್ಮ ಶಕ್ತಿಸಾಮರ್ಥ್ಯಗಳನ್ನು ಶತ್ರುದಿಗ್ವಿಜಯ, ರಾಜ್ಯವಿಸ್ತಾರಾದಿ ಕೀರ್ತಿಕಾಮನೆಯತ್ತ

ಉಪಯೋಗಿಸಲು ಮನವೀಯಲಿಲ್ಲ. ತಮ್ಮ ಮಹಾಬಲವನ್ನು ರಾಜ್ಯದಾಹಕ್ಕಾಗಿ ಉಪಯೋಗಿಸಲಿಲ್ಲ, ಪ್ರಹ್ಲಾದರ ಗುಣವನ್ನಿಲ್ಲಿ ನಾವು ಗುರುತಿಸಬಹುದು.

ಬಾಹ್ಲೀಕರಾಜನು ಕುಲವೃದ್ಧರ ಅಪೇಕ್ಷೆಯಂತೆ ಗಾರ್ಹಸ್ಥ್ಯ ಧರ್ಮವನ್ನು ಸ್ವೀಕರಿಸಿ ಧರ್ಮದಿಂದ ಕರ್ತವ್ಯಪರರಾಗಿ ಶ್ರೀಹರಿವಾಯುಗಳಲ್ಲಿ ಭಕ್ತಿಮಾಡಿ ಭಗವಂತನ ಏಕಾಂತ ಭಕ್ತರೆನಿಸಿ ರಾಜ್ಯಪರಿಪಾಲನೆ ಮಾಡಿಕೊಂಡಿದ್ದರು.

ಈ ವೇಳೆಗೆ ಶ್ರೀಹರಿಯು ಯದುವಂಶದ ದೇವಕೀ ವಸುದೇವರಿಗೆ ಪುತ್ರನಾಗಿ ದುಷ್ಟಶಿಕ್ಷಣ–ಶಿಷ್ಟಪರಿಪಾಲನ–ಧರ್ಮಸಂಸ್ಥಾಪನೆಗಾಗಿ ಅವತರಿಸಿದ್ದನು, ವಾಯು ದೇವರು ಪಾಂಡು–ಕುಂತೀ ದೇವಿಯುವರಿಗೆ ವರರೂಪವಾಗಿಯೂ, ಇತರ ದೇವತೆ ಗಳು ಬೇರೆ ಬೇರೆ ರೂಪದಲ್ಲಿ ಭಗವಂತನ ಬಲಕಾರ್ಯವಲ್ಲಿ ಸೇವೆಸಲ್ಲಿಸಲು ಶ್ರೀಹರಿಯ ಆಜ್ಞೆಯಂತೆ ಅವತರಿದ್ದರು. ಶ್ರೀಹರಿಯು ಕೃಷ್ಣರೂಪದಿಂದವತರಿಸಿ ತನ್ನ ವಿವಿಧ ಬಾಲಲೀಲೆ, ಲೀಲಾವಿಲಾಸ, ಅಸುರ ಸಂಹಾರ ಮಹಾಮಹಿಮಾ ಪ್ರದರ್ಶನ ಮಾಡುತ್ತಾ ಭಾರತಾವನಿಯ ಸಮಸ್ತ ಸಜ್ಜನವೃಂದದ ಕಣ್ಮಣಿಯಾಗಿ ರಾಜಿಸು ತ್ತಿದ್ದನು. ಶ್ರೀಕೃಷ್ಣನ ಅದ್ಭುತ ಲೀಲಾವಿಲಾಸ–ಮಹಿಮೆಗಳನ್ನು ಕೇಳಿ ತಿಳಿದು ಬಾಹ್ಲೀಕರಾಜರು ಪರಮಸಂತುಷ್ಟರಾಗಿ ಆ ಶ್ರೀಕೃಷ್ಣನ ದಿವ್ಯರೂಪವನ್ನೇ ಚಿಂತಿ ಸುತ್ತಾ ಧ್ಯಾನಿಸುತ್ತಾ ಕಾಲಕಳೆದರು.

ಇದೇ ಸಂದರ್ಭದಲ್ಲಿ ಬಾಹ್ಲೀಕರಾಜರಿಗೆ ಭಗವಂತನ ಅನುಗ್ರಹದಿಂದ, 'ಪತ್ರತಾಪ' ಎಂಬ ಪೆಸರಿನ ಏಕಾದಶರುದ್ರರಲ್ಲೊಬ್ಬರಾದವರು ಪುತ್ರರಾಗಿ ಜನಿಸಿ ದರು. ಆ ಪುತ್ರನಿಗೆ ಬಾಹ್ಲೀಕರು 'ಸೋಮದತ್ತ' ಎಂಬ ನಾಮಕರಣ ಮಾಡಿದರು, ಸೋಮದತ್ತನಿಗೆ ಮುಂದೆ ಭೂರಿ, ಭೂರಿಶ್ರವ, ಶಲ ಎಂಬ ಮೂವರು ಪುತ್ರರಾ ರಾದರು. ಸೋಮದತ್ತ ಮತ್ತು ಅವನ ಪುತ್ರರು ಮಹಾಬಲಾಢ್ಯರೂ, ಪ್ರತಾಪಿ ಗಳೂ, ಯಜನಾಧ್ಯಯನಶೀಲರೂ, ಬಲವೀರ್ಯ ಸದ್ಗುಣಯುಕ್ತರೂ ಆಗಿ ಬಾಹ್ಲೀಕರಾಜರ ಅಜ್ಞಾನುವರ್ತಿಗಳಾಗಿ ಬಾಳಹತ್ತಿದರು.

ಇದೇ ಸಮಯದಲ್ಲಿ ವನವಾಸಿಯಾಗಿದ್ದ ಪಾಂಡುರಾಜನು ದೂರ್ವಾಸರಿಂದ ಸಂಪಾದಿಸಿದ್ದ ವರಪ್ರಭಾವದಿಂದ ಪುತ್ರಸಂತಾನವನ್ನು ದೇವತೆಗಳ ವರದಿಂದ ಪಡೆಯುಬಹುದೆಂಬುದನ್ನು ಕುಂತೀದೇವಿಯಿಂದ ತಿಳಿದು ಆನಂದಿಸಿ ದೇವತಾಮಂತ್ರಾ ಹ್ವಾನದಿಂದ ಪುತ್ರರನ್ನು ಪಡೆಯುವಂತೆ ಆಜ್ಞಾಪಿಸಿದನು, ಪತಿಯ ಅಪ್ಪಣೆಯಂತೆ ಕುಂತೀದೇವಿಯು, ಯಮಧರ್ಮ, ವಾಯುದೇವ, ಇಂದ್ರ ಇವರ ಅನುಗ್ರಹದಿಂದ ಕ್ರಮವಾಗಿ ಯುಧಿಷ್ಠಿರ [ಧರ್ಮರಾಜ], ಭೀಮಸೇನ, ಅರ್ಜುನ ಎಂಬ ಮೂವರು ದೇವತಾ ಪುತ್ರರನ್ನು ಪಡೆದಳು. ಪತಿಯ ಇಚ್ಛೆಯಂತೆ ಇನ್ನೊಂದು ಮಂತ್ರವನ್ನು ಕುಂತಿಯು ಮಾದ್ರೀದೇವಿಗೆ ಉಪದೇಶಿಸಿದಳು, ಅವಳು ಅಶ್ವಿನೀ ದೇವತೆಗಳ ಅನುಗ್ರಹದಿಂದ ನಕುಲ ಸಹದೇವರೆಂಬ ಅವಳಿ ಸಹೋದರರಾದ ಪುತ್ರರನ್ನು

ಪಡೆದಳು. ಪಾಂಡು ರಾಜನ ಐದೂಜನ ಪುತ್ರರು ತಂದೆತಾಯಿಗಳಿಗೆ ಆನಂದಪ್ರದ ರಾಗಿ ಪ್ರವರ್ಧಿಸಿದರು. ಒಂದುದಿನ ಮಾದ್ರಿಯೊಡನಿರುವಾಗ ಋಷಿಶಾಪದಿಂದ ಪಾಂಡುರಾಜನು ಮೃತನಾದನು, ಮಾದ್ರಿದೇವಿಯು ಪತಿಯೊಡನೆ ಸಹಗಮನ ಮಾಡಿದಳು. ಆಗ ಶ್ರೀವೇದವ್ಯಾಸರು ಪಂಚಪಾಂಡವರಿಗೂ ಕುಂತೀದೇವಿಗೂ ಆಶ್ರಯವಿತ್ತು ಅವರನ್ನು ರಕ್ಷಿಸಿ, ಅಭಿವೃದ್ಧರಾದ ಪಾಂಡವರನ್ನು ಕುಂತೀದೇವಿ ಯನ್ನೂ ಋಷಿಕುಮಾರರೊಡನೆ ಹಸ್ತಿನಾವತಿಗೆ ಕಳುಹಿಸಿಕೊಟ್ಟರು.

ಆಗ ಹಸ್ತಿನಾವತಿಯಲ್ಲಿ ಧೃತರಾಷ್ಟ್ರನು ರಾಜ್ಯಭಾರ ಮಾಡುತ್ತಿದ್ದನು. ಅವನಿಗೆ ದುರ್ಯೋಧನಾದಿ ನೂರುಜನ ಪುತ್ರರು ಜನಿಸಿದ್ದರು. ಅವರೆಲ್ಲರೂ ಹರಿ ದ್ವೇಷಿಗಳಾದ ದೈತ್ಯರ ಅವತಾರ ಆವೇಶಯುಕ್ತರಾಗಿದ್ದರು. ಪಾಂಡುರಾಜನು ಮೃತನಾಗಿ ಅವನಿಗೆ ಐವರು ಪುತ್ರರಾಗಿದ್ದು ಅವರನ್ನು ವೇದವ್ಯಾಸರು ರಾಜಧಾ ನಿಗೆ ಕಳುಹಿಸಿರುವ ವಿಷಯುವರಿತು ಬಾಹ್ಲೀಕರಾಜನು ತಮ್ಮ ಪುತ್ರ ಸೋಮದತ್ತ ನೊಡನೆ ಹಸ್ತಿನಾವತಿಗೆ ಬಂದು ಪಾಂಡವರನ್ನು ಕಂಡಾನಂದಿಸಿ, ಭೀಷ್ಮಾಚಾರ್ಯ ಮತ್ತು ವೇದವ್ಯಾಸರಿಗೆ "ಧೃತರಾಷ್ಟ್ರ ಮತ್ತು ಅವನ ಮಕ್ಕಳು ಹೇಗೆ ಕುರು ಸಾಮ್ರಾ ಜ್ಯಕ್ಕೆ ಅಧಿಕಾರಿಗಳೋ, ಅದರಂತೆಯೇ ಪಾಂಡುರಾಜನ ಮಕ್ಕಳಾದ ಪಾಂಡವರೂ ಅಧಿಕಾರಿಗಳಾಗಿದ್ದಾರೆ. ಆದ್ದರಿಂದ ಅವರನ್ನು ಆದರದಿಂದ ಸ್ವಾಗತಿಸಿ ಕುರು ಪಾಂಡವರಲ್ಲಿ ಭೇದತೋರದೆ ಇಬ್ಬರನ್ನು ನ್ಯಾಯ-ಧರ್ಮಗಳಿಂದ ರಕ್ಷಿಸಿಕೊಂಡು ಬರಬೇಕೆಂದು" ಸಲಹೆನೀಡಿ ಮಗನೊಡನೆ ಬಾಹ್ಲಿಕದೇಶಕ್ಕೆ ಹಿಂದಿರುಗಿದರು. ತಮ್ಮ ತಮ್ಮನಾದ ಶಂತನುವಿನ ಪೌತ್ರನ ಪುತ್ರರೂ, ಧರ್ಮಿಷ್ಠರೂ ಶ್ರೀಹರಿ ಪಾರಾಯಣರೂ ಆದ ಪಾಂಡವರಲ್ಲಿ ಬಾಹ್ಲೀಕ ರಾಜನಿಗಿದ್ದ ವಾತ್ಸಲ್ಯ—ಪ್ರೇಮ ಗಳು ಇದರಿಂದ ವ್ಯಕ್ತವಾದವು. ಸತ್ಯವತೀದೇವಿ, ಭೀಷ್ಮಾಚಾರ್ಯ, ಧೃತರಾಷ್ಟ್ರರು, ಆಕಾಶವಾಣಿ, ವೇದವ್ಯಾಸದೇವರ ಆಜ್ಞೆ ಮತ್ತು ತಮ್ಮ ವಂಶದ ಹಿರಿಯರಾದ ಬಾಹ್ಲೀಕರಾಜರ ಸಲಹೆಯಂತೆ ಕುಂತೀದೇವಿ ಪಾಂಡುನಂದನರನ್ನು ಪ್ರೀತಿಯಿಂದ ಸ್ವಾಗತಿಸಿ ಅವರನ್ನು ಕಾಪಾಡುತ್ತಾ ಬಂದರು.

ದಿನಗಳುರುಳಿದವು .. ಭೀಷ್ಮಾಚಾರ್ಯರ ಮೇಲ್ವಿಚಾರಣೆಯಲ್ಲಿ ಆಚಾರ್ಯ ದ್ರೋಣರಲ್ಲಿ ಕೌರವ-ಪಾಂಡವರು ಸಕಲ ಶಸ್ತ್ರಾಸ್ತ್ರ, ಧನುರ್ವಿದ್ಯೆಗಳಲ್ಲಿ ಪಾರಂಗತ ರಾದರು. ತಮ್ಮ ಸ್ವಭಾವಕ್ಕನುಸರಿಸಿ, ಪಾಂಡವರು ಸತ್ಯ, ಧರ್ಮನಿಷ್ಠರಾಗಿ, ಭಗವದ್ಭಕ್ತಿ, ಗುರುಹಿರಿಯರಲ್ಲಿ ಪೂಜ್ಯಭಾವನೆ, ಸರ್ವಜನರಲ್ಲಿ ವಿಶ್ವಾಸ-ಪ್ರಜಾ ರಂಜನೆ ಮುಂತಾದ ಸದ್ಗುಣಮಂಡಿತರಾಗಿ, ಮಹಾಪ್ರತಾಪಶಾಲಿಗಳಾಗಿ ಕೀರ್ತಿಗಳಿ ಸುತ್ತಿದ್ದರೆ; ತಮ್ಮ ಆಸುರ ಸ್ವಭಾವಕ್ಕನುಸರಿಸಿ ಅಹಂಕಾರ, ದಂಭ, ಸ್ವಪ್ರತಿಷ್ಠೆ, ಕ್ರೌರ್ಯ ಆತ್ಮಪ್ರಶಂಸೆ, ವಂಚನೆ, ಉದ್ಧಟತನ, ಹರಿಭಕ್ತರಾದ ಪಾಂಡವರಲ್ಲಿ ದ್ವೇಷ ಮಾಡುತ್ತಾ ದುರ್ಯೋಧನಾದಿ ಕೌರವರು ಪ್ರಬಲಿಸಿದರು. ಮೊದಲಿನಿಂದಲೂ ಕಲಿಯು ಅವತಾರನಾದ ದುರ್ಯೋಧನನಿಗೆ ಪಾಂಡವರಲ್ಲಿ ಅವರಲ್ಲಿಯೂ ಮುಖ್ಯ

ವಾಗಿ ವಾಯುದೇವರ ಅವತಾರರಾದ ಭೀಮಸೇನದೇವರಲ್ಲಿ ಅಸಾಧ್ಯ ದ್ವೇಷವಿತ್ತು. ಅವನು ಪಾಂಡವರ ಅಭ್ಯುದಯವನ್ನು ಸಹಿಸದೇ ಅವರಿಗೆ ಏನಾದರೊಂದು ಉಪಟಳ ಕೊಡುತ್ತಲೇ ಇದ್ದನು. ಅವನಿಗೆ ಶಕುನಿ, ದುಶ್ಯಾಸನ, ಕರ್ಣ ಇವರು ಬೆಂಬಲಿಗರಾಗಿದ್ದರು. ಮತ್ತು ಇವರೆಲ್ಲ ಸೇರಿ ಧೃತರಾಷ್ಟ್ರನ ಬುದ್ಧಿಕೆಡಿಸಿ ಪಾಂಡವರ ನಾಶಮಾಡಲು ಹವಣಿಸುತ್ತಿದ್ದರು. ಇದರ ಪರಿಣಾಮವಾಗಿ ಭೀಮಸೇನ ದೇವರಿಗೆ ಸರ್ಪದಂಶನ, ವಿಷಾನ್ನಭೋಜನಾದಿಗಳಾದವು. ಅದರಿಂದ ಜಗತ್ಪ್ರಾಣರಾದ ಭೀಮಸೇನದೇವರ ಕೂದಲೂ ಕೊಂಕಿಸಲಾಗಲಿಲ್ಲ. ನಂತರ ಅರಗಿನ ಮನೆಯ ಪ್ರಕರಣದಿಂದ ಪಾಂಡವರು–ಕುಂತೀದೇವಿಯರು ಭೀಮಸೇನದೇವರಿಂದ ಹೇಗೋ ಪಾರಾಗಿ ಅರಣ್ಯವಾಸಿಗಳಾಗಬೇಕಾಯಿತು.

ಮುಂದೆ ಪಾಂಡವರು ದ್ರೌಪದೀ ಸ್ವಯಂವರ ಕಾಲದಲ್ಲಿ ಮಾರುವೇಷ ತೊರೆದರು, ಅರ್ಜುನನು ಮತ್ಸ್ಯಯಂತ್ರವನ್ನು ಭೇದಿಸಿ ಕೀರ್ತಿಗಳಿಸಿದ. ತಾಯಿಯಾದ ಕುಂತೀದೇವಿಯ ಆಣತಿಯಂತೆ, ಮತ್ತು ವೇದವ್ಯಾಸದೇವರ ಸಕಾಲಿಕ ಧಾರ್ಮಿಕೋಪದೇಶದಿಂದ ಪಂಚರೂಪಳಾದ ದ್ರೌಪದಿಯನ್ನು ಪಂಚಪಾಂಡವರು ಲಗ್ನವಾದರು. ನಂತರ ವೈಭವದಿಂದ ಶ್ರೀಕೃಷ್ಣಪರಮಾತ್ಮನೊಡನೆ ಹಸ್ತಿನಾವತಿಗೆ ಬಂದು ಸೇರಿದರು, ಶ್ರೀಕೃಷ್ಣ–ವೇದವ್ಯಾಸರ ಸಲಹೆಯಂತೆ, ಕುರುಹಿರಿಯರ ಅಭಿಪ್ರಾಯದಂತೆ ಧೃತರಾಷ್ಟ್ರನು ತನ್ನ ಪುತ್ರರು ಹಸ್ತಿನಾವತಿಯಲ್ಲಿ ರಾಜ್ಯಭಾರ ಮಾಡಬೇಕೆಂದೂ, ಪಾಂಡವರು ಖಾಂಡವಪ್ರಸ್ಥದಲ್ಲಿ ರಾಜ್ಯವಾಳಬೇಕೆಂದೂ ವ್ಯವಸ್ಥೆ ಮಾಡಿದನು. ಅದರಂತೆ ಪಾಂಡವರು ಶ್ರೀಕೃಷ್ಣನ ಸಹಾಯದಿಂದ ಕಾಡುಮೇಡಾಗಿದ್ದ ಖಾಂಡವಪ್ರಸ್ಥವನ್ನು ಮಯನ ಸಹಾಯದಿಂದ ಸುಂದರ ರಾಜಧಾನಿಯನ್ನಾಗಿ ಪರಿವರ್ತಿಸಿದರು. ಅದಕ್ಕೆ ಇಂದ್ರಪ್ರಸ್ಥವೆಂಬ ನಾಮಕರಣ ಮಾಡಲಾಯಿತು. ಧರ್ಮರಾಜನು ರಾಜನಾಗಿ ಧರ್ಮದಿಂದ ರಾಜ್ಯಭಾರ ಮಾಡುತ್ತಿದ್ದನು, ಭೀಮಾರ್ಜುನಾದಿ ಸಹೋದರರು ಧರ್ಮರಾಜನಿಗೆ ಸರ್ವವಿಧದಿಂದ ವಿಧೇಯರಾಗಿದ್ದು ಅನೇಕ ರಾಜಾಧಿರಾಜರು ಧರ್ಮರಾಜನ ಆಧಿಪತ್ಯಕ್ಕೆ ತಲೆಬಾಗಿ ಕಪ್ಪಕಾಣಿಕೆಗಳಿತ್ತು ವಿಧೇಯರಾಗಿ ನಡೆಯುವಂತೆ ಮಾಡಿದರು. ದಿನೇದಿನೇ ಪಾಂಡವರ ಕೀರ್ತಿ ಜಗತ್ತಿನಲ್ಲೆಲ್ಲಾ ಪ್ರಸರಿಸಿತು.

### ೭ ಕನಕರಥ ಸಮರ್ಪಣೆ !

ಧರ್ಮರಾಜನು ಇಂದ್ರಪ್ರಸ್ಥದಲ್ಲಿ ರಾಜ್ಯಭಾರಮಾಡುತ್ತಿರುವಾಗ ಒಂದುದಿನ ನಾರದರು ಬಂದು "ರಾಜಸೂಯಯಾಗ" ವನ್ನು ಮಾಡಿ ಪಾಂಡುರಾಜನಿಗೆ ಸದ್ಗತಿಯಾಗುವಂತೆ ಮಾಡಬೇಕೆಂದು ಉಪದೇಶಿಸಿದರು. ಯುಧಿಷ್ಠಿರನು ಶ್ರೀಕೃಷ್ಣನನ್ನು ಕರೆಯಿಸಿಕೊಂಡು ಅವನೊಡನೆ ವಿಚಾರವಿನಿಮಯಮಾಡಿ ಕೃಷ್ಣನ ಆಜ್ಞೆಯಂತೆ ಭೀಮಾರ್ಜುನ–ನಕುಲ–ಸಹದೇವರನ್ನು ದಿಗ್ವಿಜಯಯಾತ್ರೆಗೆ ಕಳಿಸಿದನು. ಅವರು ಎಲ್ಲೆಡೆ ವಿಜಯಶೀಲರಾಗಿ, ರಾಜಾಧಿರಾಜರು ಧರ್ಮರಾಜನ ಸಾರ್ವಭೌಮತ್ವವನ್ನು

ಅಂಗೀಕರಿಸುವಂತೆ ಮಾಡಿದ್ದಲ್ಲದೆ, ಅವರು ಸಂತೋಷದಿಂದ ನೀಡಿದ ಅಗಾಧ ಧನ-ಕನಕ-ನವರತ್ನಾಭರಣಾದಿ ಸಿರಿಸಂಪತ್ತುಗಳನ್ನು ತಂದು ಧರ್ಮರಾಜನಿಗೆ ಸಮರ್ಪಿಸಿದರು.

ಈ ದಿಗ್ವಿಜಯಕಾಲದಲ್ಲಿ ಭೀಮಾರ್ಜುನರು ಬಾಹ್ಲೀಕದೇಶಕ್ಕೆ ಬಂದರು. ಬಾಹ್ಲೀಕರಾಜರು ಅವರನ್ನು ಪ್ರೀತ್ಯಾದರಗಳಿಂದ ಸ್ವಾಗತಿಸಿ ಸತ್ಕರಿಸಿದರು, ಆಗ ಭೀಮಾರ್ಜುನರು ವಿನಯ-ವಿಧೇಯತೆಗಳಿಂದ "ಆರ್ಯ ! ನೀವು ನಮ್ಮ ಕುಲದ ಹಿರಿಯರು. ನಮ್ಮ ಮುತ್ತಾತಂದಿರಾದ ಶಂತನು ಚಕ್ರವರ್ತಿಗಳಅಗ್ರಜರು. ನಮಗೆ ನೀವು ದೊಡ್ಡ ಮುತ್ತಾತಂದಿರಾಗಬೇಕು ! ಪೂಜ್ಯರಾದ ನೀವು ನಿಮ್ಮ ಮರಿಮಗನಾದ ನಮ್ಮಣ್ಣ ಧರ್ಮರಾಜನು ನೆರವೇರಿಸಲಿರುವ ರಾಜಸೂಯಯಾಗವು ನಿರ್ವಿಘ್ನವಾಗಿ, ಯಶಸ್ವಿಯಾಗಿ ನೆರವೇರುವಂತೆ ಅವನನ್ನು ಆಶೀರ್ವದಿಸಬೇಕು. ಮತ್ತು ನೀವು ಬಂದು ನಿಂತು ಈ ಮಹತ್ಕಾರ್ಯವನ್ನು ಸಾಂಗಗೊಳಿಸಿಕೊಟ್ಟು ಅನುಗ್ರಹಿಸಬೇಕು" ಎಂದು ಕೋರಿದರು.

ಆಗ ಸಂತುಷ್ಟರಾದ ಬಾಹ್ಲೀಕರು ನಸುನಗುತ್ತಾ—"ದೇವ, ಭೀಮಸೇನ ಅರ್ಜುನ !, ನಿಮ್ಮ ವಿನಯ, ವಿಶ್ವಾಸ. ಪ್ರೇಮಗಳನ್ನು ಕಂಡು ನನಗೆ ಅತೀವ ಹರ್ಷವಾಗಿದೆ. ಸಾಕ್ಷಾತ್ ಜಗತ್ಪ್ರಾಣನೂ, ವಾಯುದೇವನ ಪುತ್ರನೂ ಆದ ನೀನು, ಸಕಲ ದೇವತೆಗಳಿಗರಸನಾದ ಇಂದ್ರದೇವನ ಕುಮಾರನಾದ ಧನಂಜಯನೂ ಧರ್ಮಸ್ವರೂಪನೇ ಆದ ಯುಧಿಷ್ಠಿರನ ಕಾರ್ಯವನ್ನು ಜಯಪ್ರದಗೊಳಿಸಲು ಕೈಕಟ್ಟಿ ನಿಂತಿರುವಾಗ ಅದರಲ್ಲೂ ಬ್ರಹ್ಮಾಂಡನಾಯಕನೂ, ಪರಾತ್ಪರನೂ ಸ್ವಜನಪಕ್ಷಪಾತಿಯೂ, ಭಕ್ತಪ್ರಿಯನೂ, ಮೋಕ್ಷಪ್ರದನೂ ಆದ ಶ್ರೀನಾರಾಯಣನ ಅವತಾರನಾದ ಶ್ರೀಕೃಷ್ಣನು "ಮಮ ಪ್ರಾಣಾಹಿ ಪಾಂಡವಾಃ" ಎಂದು ಉದ್ಘೋಷಿಸಿ ಸರ್ವದಾ ನಿಮ್ಮ ರಕ್ಷಕನಾಗಿದ್ದು ಪೊರೆಯುತ್ತಿರುವಾಗ ರಾಜಸೂಯಯಾಗವು ಯಶಸ್ವಿಯಾಗಿ ನೆರವೇರುವುದರಲ್ಲಿ ಸಂದೇಹವೇನಿದೆ ? ಆದರೂ ವಂಶದ ಹಿರಿಯನೆಂದು ನನ್ನಲ್ಲಿ ಗೌರವತೋರಿ, ನಿಮ್ಮ ಪ್ರೀತಿಯನ್ನು ವ್ಯಕ್ತಪಡಿಸಿದ್ದೀರಿ. ಧರ್ಮಾತ್ಮರಾದ ನಿಮಗಿದು ಸ್ವಾಭಾವಿಕವೂ, ಭೂಷಣಾಪಹವೂ ಆಗಿದೆ. ಶ್ರೀಯೋಗೇಶ್ವರನಾದ ಶ್ರೀಕೃಷ್ಣ, ಪಾರ್ಥರೆಂದು ಖ್ಯಾತರಾದ ಗದಾಧಾರಿಯಾದ ಭೀಮಸೇನ, ಧನುರ್ಧಾರಿಯಾದ ಅರ್ಜುನನು ಇರುವಲ್ಲಿ ರಾಜ್ಯಲಕ್ಷ್ಮಿ, ಜಯ ಗಜಾಶ್ವಧನಧಾನ್ಯಾದಿ ಸಂಪತ್ತು ಮತ್ತು ನ್ಯಾಯವೂ ಸಹನಿಶ್ಚಲವಾಗಿ ಸೇರುವರೆಂಬುದನ್ನು [1] ನಾನು ಬಲ್ಲೆ ! ನಿಮ್ಮಲ್ಲಿ ಇಂತಹ ವೈಶಿಷ್ಟ್ಯವಿರುವಾಗ ನೀವು ಸದಾ ಜಯಕೀರ್ತಿಸಂಪನ್ನರಾಗಿ ರಾಜಿಸುವಿರಿ. ಇಂಥ ಒಂದು ಮಂಗಳಕರ ಸಮಾರಂಭ

1 ಯತ್ರ ಯೋಗೀಶ್ವರಃ ಕೃಷ್ಣೋ ಯತ್ರ ಪಾರ್ಥೋಽಧನುರ್ಧರಃ ।
ತತ್ರ ಶ್ರೀವಿಜಯೋಭೂತಿರ್ಧ್ರುವಾನೀತಿರ್ಮತಿರ್ಮಮ ॥

—ಭಗವದ್ಗೀತಾ.

ಮಂಗಳಕ ಸಮಾರಂಭದಲ್ಲಿ ಬಂದು ಭಾಗವಹಿಸುವುದು ಶ್ರೀಹರಿಸೇವೆಯೆಂದೇ ಭಾವಿಸಿದ್ದೇನೆ. ಖಂಡಿತವಾಗಿ ಬಂದು ಯಜ್ಞಸಮಾರಂಭದಲ್ಲಿ ಭಾಗವಹಿಸಿ ನನ್ನ ಯೋಗ್ಯತಾನುಸಾರವಾಗಿ ಶ್ರೀಕೃಷ್ಣಪರಮಾತ್ಮನಿಗೆ ಸೇವೆ ಸಲ್ಲಿಸುತ್ತೇನೆ ! ಈ ವಿಚಾರವನ್ನು ಭಗವಂತನಲ್ಲಿಯೂ, ಯುಧಿಷ್ಠಿರನಲ್ಲಿಯೂ ವಿಜ್ಞಾಪಿಸಿರಿ" ಎಂದು ಹೇಳಿ ಭೀಮಾರ್ಜುನರಿಗೆ ಅಮೌಲ್ಯ ಉಡುಗೋರೆಗಳನ್ನಿತ್ತು, ರಾಜಸೂಯಯಾಗಕ್ಕೆ ಅಗಾಧವಾಗಿ ಧನಕನಕರತ್ನಾಭರಣಾದಿಗಳನ್ನೂ ನೀಡಿದರು.

ಬಾಹ್ಲೀಕರಾಜರ ಭಗವದ್ಭಕ್ತಿ, ಸ್ವಜನಪ್ರೇಮ, ವಂಶೀಕರಲ್ಲಿನ ವಾತ್ಸಲ್ಯಾದಿಗಳನ್ನು ಕಂಡು ಪರಮಾನಂದಭರಿತರಾದ ಭೀಮಾರ್ಜುನರು ಬಾಹ್ಲೀಕರ ಸದ್ಗುಣಗಳನ್ನು ಶ್ಲಾಘಿಸಿ ಅವರಿಂದ ಬೀಳ್ಕೊಂಡು ಇಂದ್ರಪ್ರಸ್ಥಕ್ಕೆ ಪ್ರಯಾಣಬೆಳೆಸಿದರು.

೦ ೦ ೦ ೦

ಇಂದ್ರಪ್ರಸ್ಥದಲ್ಲಿ ಪರಮಸಂಭ್ರಮ, ರಾಜಸೂಯಯಾಗ ಸಮಾರಂಭವು ವೈಭವದಿಂದ ಜರಗುತ್ತಿದೆ. ಭಾರತದ ಎಲ್ಲ ಭಾಗಗಳಿಂದಲೂ ರಾಜಾಧಿರಾಜರು, ಋಷಿ-ಮುನಿಗಳು, ವೇದವೇದಾಂಗವೇತ್ತರು, ಧಾರ್ಮಿಕರು ಬಂದು ಸೇರಿದ್ದಾರೆ. ದೀಕ್ಷಾಬದ್ಧನಾದ ಧರ್ಮರಾಜ ಸರ್ವರ ಗೌರವಾದರಗಳಿಗೆ ಪಾತ್ರನಾಗಿ ಯಾಗಕಾರ್ಯಾಸಕ್ತನಾಗಿದ್ದಾನೆ. ಶ್ರೀಕೃಷ್ಣಪರಮಾತ್ಮ, ಭೀಷ್ಮ, ದ್ರೋಣಾದಿಗಳ ಮೇಲ್ವಿಚಾರಣೆಯಲ್ಲಿ ಯಾಗವು ಅಭೂತಪೂರ್ವವಾಗಿ ನೆರವೇರುತ್ತಿವೆ. ಸಂಪ್ರದಾಯದಂತೆ ಯಾಗಕಾಲದಲ್ಲಿ ಭೀಷ್ಮ–ದ್ರೋಣ–ಪರಶುರಾಮ–ಬಾಹ್ಲೀಕಾದಿ ಸರ್ವಮಹನೀಯರ ಅಭಿಪ್ರಾಯದಂತೆ ಧರ್ಮರಾಜ–ಭೀಮಾರ್ಜುನ–ನಕುಲ–ಸಹದೇವರು ಶ್ರೀಕೃಷ್ಣಪರಮಾತ್ಮನಿಗೆ ಅಗ್ರಪೂಜೆಯನ್ನು ಸಲ್ಲಿಸುತ್ತಿರುವಾಗ, ಸನಕಾದಿಗಳ ಶಾಪದಿಂದ ಜಯ–ವಿಜಯರು ಮೂರನೆಯ ಮತ್ತು ಕೊನೆಯಬಾರಿಯಾಗಿ ಹರಿದ್ವೇಷಿಗಳಾಗಿ ಶಿಶುಪಾಲ-ದಂತವಕ್ರರೆಂಬ ದೈತ್ಯರಾಗಿ ಜನಿಸಿದ್ದರು. ಆ ಖೂಳರು ತಮ್ಮ ಸ್ವಾಭಾವಿಕ ಹರಿದ್ವೇಷವನ್ನು ಪ್ರಕಟಿಸಿ ಕೃಷ್ಣನಿಗೆ ಅಗ್ರಪೂಜೆಮಾಡುವುದನ್ನು ವಿರೋಧಿಸಿ, ನಿಂದಿಸಿದಾಗ ಶ್ರೀಕೃಷ್ಣನು ಅವರನ್ನು ತನ್ನ ಸುದರ್ಶನಚಕ್ರದಿಂದ ಸಂಹರಿಸಿದ ಮೇಲೆ ಅಗ್ರಪೂಜೆಯು ಜರುಗಿ, ರಾಜಸೂಯಯಾಗವು ಸಾಂಗವಾಗಿ ಪೂರ್ಣವಾಯಿತು.

ರಾಜಸೂಯಯಾಗಕ್ಕೆ ಪುತ್ರ–ಪೌತ್ರರೊಡನೆ ಆಗಮಿಸಿದ್ದ ಬಾಹ್ಲೀಕರಾಜರು ಶ್ರೀಕೃಷ್ಣಪರಮಾತ್ಮನ ದರ್ಶನದಿಂದ ಪುನೀತರಾಗಿ ಶ್ರೀಕೃಷ್ಣನನ್ನು ಬಹುವಿಧವಾಗಿ ಸೇವಿಸಿ ಅವನ ಅನುಗ್ರಹಕ್ಕೆ ಪಾತ್ರರಾದರು.

ಇದೇ ಸಮಯದಲ್ಲಿ ಬಾಹ್ಲೀಕರಾಜರು ತಮ್ಮಲ್ಲಿ ವಿಶೇಷಾವೇಶ ಸನ್ನಿಧಾನವನ್ನಿಟ್ಟು ಅನುಗ್ರಹಿಸುತ್ತಿರುವ ಶ್ರೀಮುಖ್ಯಪ್ರಾಣದೇವರ ಅವತಾರಿಗಳಾದ ಶ್ರೀಭೀಮಸೇನದೇವರ ಅಧಿಕಾನುಗ್ರಹ ಸಂಪಾದನೆಗಾಗಿ ಭಗವಾನ್ ಶ್ರೀಕೃಷ್ಣನ ಪ್ರೇರಣೆಯಂತೆ ಅವನ ಸಮಕ್ಷ, ಸರ್ವಸಜ್ಜನರ ಎದುರಿನಲ್ಲಿ ಈ ಒಂದು ಸಂದರ್ಭಕ್ಕಾಗಿಯೇ ಮಾಡಿಸಿ ತಂದಿದ್ದ ಅತಿಮನೋಹರವೂ, ಅಮೂಲ್ಯವೂ ಆದ 'ಕನಕರಥ'ವನ್ನು

ಭೀಮಸೇನದೇವರಿಂದ ಸಹಿತರಾಗಿ ಪಾಂಡವರಿಗೆ ಕಾಣಿಕೆಯಾಗಿ ಸಮರ್ಪಿಸಿ, ಕನಕ ರಥದಲ್ಲಿ ಶ್ರೀಕೃಷ್ಣ, ಯುಧಿಷ್ಠಿರ, ಭೀಮಸೇನ-ದ್ರೌಪದಿಯರನ್ನು ಮಂಡಿಸಿ ವೈಭವ–ಭಕ್ತಿಪೂರ್ವಕವಾಗಿ ರಥೋತ್ಸವವನ್ನು ನೆರವೇರಿಸಿ ಶ್ರೀಹರಿವಾಯು ಭಾರತೀದೇವಿಯರನ್ನು ಮೆರೆಸಿದರು. ಆ ಮಂಗಳಕರ ಮಹೋತ್ಸವವು ಅಪೂರ್ವವೂ ಸರ್ವಸಜ್ಜನಾನಂದಕಾರಕವೂ ಆಗಿತ್ತು.

ಆಗ ಶ್ರೀಕೃಷ್ಣನು ನಸುನಗುತ್ತಾ "ಭೀಮಸೇನ! ನಿನ್ನ ವಂಶದ ಹಿರಿಯನೂ, ಧರ್ಮಾತ್ಮನೂ. ನನ್ನ ಪ್ರಿಯ ಭಕ್ತಾಗ್ರಣಿಯೂ ಆದ ಈ ಬಾಹ್ಲೀಕರಾಜನು ಈ ಕನಕರಥವನ್ನರ್ಪಿಸಿ, ರಥೋತ್ಸವವನ್ನು ನೆರವೇರಿಸಿರುವುದು ಭಾವೀ ಜಗತ್ಕಲ್ಯಾಣ, ನಿನ್ನ ನೇತೃತ್ವದಲ್ಲಿ ಧರ್ಮರಾಜನಿಗೆ ದೊರಕಲಿರುವ ಮಹಾವಿಜಯ ಪರಂಪರೆಯ ಭವಿಷ್ಯ ಸೂಚಕವೂ ಆಗಿದೆ ! ಇಂದು ನನಗೆ ಬಹು ಸಂತೋಷವಾಗಿದೆ ! ಇಂತು ನಿಮ್ಮನ್ನು ಗೌರವಿಸುವ ಈ ಬಾಹ್ಲೀಕರಾಜನಿಗೆ ನೀನು ಏನು ವರವನ್ನು ಕೊಡುವೆ" ಎಂದು ಪ್ರಶ್ನಿಸಿದನು.

ಆಗ ಮುಗುಳು ನಗೆಯನ್ನು ಹೊರಸೂಸುತ್ತಾ ಭೀಮಸೇನದೇವರು-"ಕೃಷ್ಣ ! ಸಕಲ ಚರಾಚರ ಪ್ರಪಂಚದ ಸೃಷ್ಟಿ-ಸ್ಥಿತಿ-ಲಯಾದಿ ಕಾರಣನೂ,ಸರ್ವತ್ರವ್ಯಾಪ್ತನೂ ಸರ್ವೋತ್ತಮನೂ, ಸರ್ವಜೀವನಿಯಾಮಕನೂ ಆಗಿದ್ದು, ನಿನ್ನ ಸಂಕಲ್ಪದಂತೆಯೇ ಲೀಲಾವಿನೋದಗೈಯುತ್ತಿರುವ ನಿನ್ನ ಇಚ್ಛೆಗೆ ವಿರೋಧವಾಗಿ ವರ್ತಿಸಲು ಅದಾರು ತಾನೇ ಸಮರ್ಥರಾದಾರು ? ಕಪಟನಾಟಕ ಸೂತ್ರಧಾರಿಯಾದ ನೀನು ಬಾಹ್ಲೀಕ ರಾಜರಲ್ಲಿ ಅಂತರ್ಗತನಾಗಿದ್ದು, ಪ್ರೇರಣೆಮಾಡಿ ಕನಕರಥವನ್ನು ನಮಗೆ ಕಾಣಿಕೆ ಯಾಗಿ ಕೊಡಿಸಿ, ಈಗ ನಿನ್ನ ಸಂಕಲ್ಪ ಇಚ್ಛೆಗಳನ್ನು ನನ್ನ ಮೂಲಕವಾಗಿ ಪೂರ್ಣ ಗೊಳಿಸಲಾಶಿಸಿರುವುದನ್ನು ನಾನು ಬಲ್ಲೆ ! ಪರಮಾತ್ಮಾ, ನಿನ್ನ ಇಚ್ಛೆಯಂತೆಯೇ ಆಗಲಿ" ಎಂದು ವಿಜ್ಞಾಪಿಸಿ ಬಾಹ್ಲೀಕರತ್ತ ತಿರುಗಿ "ಕುರುವಂಶದ ಹಿರಿಯರಾದ ಪೂಜ್ಯ ಬಾಹ್ಲೀಕರಾಜರೇ! ನಿಮ್ಮ ಈ ಉತ್ತಮಸೇವೆಯಿಂದ ಶ್ರೀಹರಿಯು ಸಂತುಷ್ಟ ನಾಗಿರುವನು, ನಾನೂ ಭಾರತಿಯೂ ನನ್ನ ಸಹೋದರರೂ ಸುಪ್ರಸನ್ನರಾಗಿದ್ದೇವೆ. ಶ್ರೀಕೃಷ್ಣನೊಡನೆ ನಮ್ಮನ್ನು ಕನಕರಥದಲ್ಲಿ ಮೆರೆಸಿರುವ ನೀವು ಮುಂದೆ ಚಕ್ರವರ್ತಿಗಳಂತೆ, ಯತಿರೂಪದ ಚಕ್ರವರ್ತಿಗಳಾಗಿ ಭಕ್ತರು ಅರ್ಪಿಸುವ ರಥದಲ್ಲಿ ಮೆರೆಯುವಂತೆ ಶ್ರೀಕೃಷ್ಣನ ಪ್ರೇರಣೆಯಂತೆ ವರವನ್ನು ಅನುಗ್ರಹಿಸುತ್ತಿದ್ದೇನೆ. ನಿಮ್ಮ ಮುಂದಿನ ಅವತಾರಗಳಲ್ಲಿ ಅಂಬಾರಿ, ಪಾಲಕಿ, ರಜತ-ಕನಕರಥಗಳಲ್ಲಿ ಮೆರೆದು ಲೋಕಕಲ್ಯಾಣಮಾಡಿ ಶ್ರೀಹರಿಯ ವಿಶೇಷಾನುಗ್ರಹಕ್ಕೆ ಪಾತ್ರರಾಗಿ ಕೀರ್ತಿಗಳಿಸಿರಿ" ಎಂದು ಸುಪ್ರೀತರಾಗಿ ನುಡಿದರು. ಸರ್ವರಿಗೂ ಪರಮಾನಂದವಾಯಿತು.

ಶ್ರೀಹರಿ-ವಾಯುಗಳು ತಮ್ಮಲ್ಲಿ ಮಾಡಿದ ಈ ವಿಶೇಷಾನುಗ್ರಹವನ್ನು ಕಂಡು ಹರ್ಷನಿರ್ಭರರಾಗಿ, ಆನಂದಬಾಷ್ಪ ಸುರಿಸುತ್ತಾ ಗದ್ಗದ ಕಂಠದಿಂದ ಬಾಹ್ಲೀಕ

ರಾಜರು "ಅನುಗೃಹೀತೋಽಸ್ಮಿ" ಎಂದು ವಿಜ್ಞಾಪಿಸಿದರು.[2]

ಮುಂದೆ ಕೆಲವು ದಿನಗಳು ಇಂದ್ರಪ್ರಸ್ಥದಲ್ಲಿದ್ದು ಶ್ರೀಕೃಷ್ಣನ ಸೇವೆಮಾಡಿ ಬಾಹ್ಲೀಕರಾಜರು ಪುತ್ರ-ಪೌತ್ರಾದಿಗಳಿಂದೊಡಗೂಡಿ ತಮ್ಮ ದೇಶಕ್ಕೆ ಪ್ರಯಾಣ ಬೆಳೆಸಿದರು.

## ೮. ಅವತಾರ ಪರಿಸಮಾಪ್ತಿ–ವರಪ್ರಾಪ್ತಿ

ಪಾಂಡವರು ನೆರವೇರಿಸಿದ ರಾಜಸೂಯಯಾಗ, ಆ ವೈಭವ, ಇಂದ್ರಪ್ರಸ್ಥ ರಾಜಧಾನಿಯ ಅಪೂರ್ವ ಸೌಂದರ್ಯ-ಸೊಬಗು, ಆ ಅನಿತರಸಾಧಾರಣ ಸಿರಿಸಂಪತ್ತು. ರಾಜಸೂಯಯಾಗದಿಂದ ಅಖಂಡ ಭರತವರ್ಷದ ಸಮಸ್ತರಾಜಾಧಿರಾಜರುಪಾಂಡವರಿಗೆ ನತಮಸ್ತಕರಾಗಿ ಧರ್ಮರಾಜನನ್ನು ಸಾರ್ವಭೌಮನೆಂದು ಗೌರವಿಸಿದ್ದು - ಇದೆಲ್ಲವೂ ದುಷ್ಟ, ದುರಹಂಕಾರಿ, ಮಾತ್ಸರ್ಯದ ಮಾತೃಸ್ಥಾನ, ಪಾಂಡವರ ಆಜನ್ಮವೈರಿ ಕಲಿಯ ಅಪರಾವತಾರನಾದ ದುರ್ಯೋಧನನಿಗೆ ನುಂಗಲಾರದ ತುತ್ತಾಗಿತ್ತು. ಪಾಂಡವರ ಈ ಅಭಿವೃದ್ಧಿ,ಸಂಪತ್ತು, ವೈಭವ, ಕೀರ್ತಿಗಳನ್ನು ಅವನು ಸಹಿಸದಾದ. ಏನಾದರೂ ಮಾಡಿ ಅವರ ಸಂಪತ್ತನ್ನು ಅಪಹರಿಸಿ ಪಾಂಡವರು ಬೀದಿಯ ಪಾಲಾಗುವಂತೆ ಮಾಡಬೇಕೆಂದು ಅಪೇಕ್ಷಿಸಿದ. ಇದಕ್ಕೆ 'ದುಷ್ಟ ಚತುಷ್ಟಯ'ರೆಂದು ಕುಖ್ಯಾತಿಗಳಿಸಿದ್ದ ದುರ್ಯೋಧನ, ದುಶ್ಶಾಸನ, ಶಕುನಿ ಮತ್ತು ಕರ್ಣರು ಮಂತ್ರಾಲೋಚನೆ ಮಾಡಿದರು. ಶಕುನಿಯ ಸಬಹೆ ಕುತಂತ್ರಗಳಿಂದ ಪಾಂಡವರನ್ನು ಕಪಟ ದ್ಯೂತದಲ್ಲಿ ಸೋಲಿಸಿ ಅವರ ಸರ್ವಸ್ವವನ್ನೂ ಅಪಹರಿಸಿ ಹನ್ನೆರಡು ವರ್ಷ ವನವಾಸ, ಒಂದು ವರ್ಷ ಅಜ್ಞಾತವಾಸ ಮಾಡಬೇಕೆಂಬ ನಿಬಂಧನೆಯಂತೆ ದುರ್ಯೋಧನನು ಪಾಂಡವರನ್ನು ಅರಣ್ಯಕ್ಕೆ ಅಟ್ಟಿದನು. ಧರ್ಮಾತ್ಮರಾದ ಪಾಂಡವರು ಶ್ರೀಕೃಷ್ಣನ ಅನುಗ್ರಹದಿಂದ ಸಿರಿಸಂಪತ್ತು, ವೈಭವ, ಬಡತನ, ರಾಜಧಾನಿ-ಕಾಡು ಎಲ್ಲವನ್ನೂ ಒಂದೇ ರೀತಿಯಾಗಿ ಭಾವಿಸಿ ಎಲ್ಲವೂ ಶ್ರೀಹರಿಚಿತ್ತವೆಂದು ಧರ್ಮದಿಂದ ಕಾಲಯಾಪನೆಮಾಡಿ ವನವಾಸ ಅಜ್ಞಾತವಾಸವನ್ನು ಮುಗಿಸಿ ತಮಗೆ

---

2. ಬಾಹ್ಲೀಕರಾಜರೇ ಮುಂದೆ ವ್ಯಾಸರಾಜರಾಗಿ, ಶ್ರೀ ರಾಘವೇಂದ್ರಸ್ವಾಮಿಗಳಾಗಿ ಅವತರಿಸಿದಾಗ–ರಾಜಗುರುಗಳಾಗಿ ಕರ್ನಾಟಕ ಸಾಮ್ರಾಜ್ಯ–ಮತ್ತಿತರ ರಾಜ್ಯಗಳ ಚಕ್ರವರ್ತಿ–ರಾಜಾಧಿರಾಜರಿಂದ ಸೇವಿತರಾಗಿ ಸುವರ್ಣ ಅಂಬಾರಿಯ ಮೇಲೆ ಕುಳಿತು ಆನೆಯ ಮೇಲೂ ಸುವರ್ಣ ಪಾಲಕಿಗಳಲ್ಲಿಯೂ, ರಜತ,ಕನಕರಥಗಳಲ್ಲಿಯೂ,ಕುಳಿತು ಮಹಾ ರಥೋತ್ಸವಗಳನ್ನು ನೆರವೇರಿಸಕೊಳ್ಳಲೂ. ಅದ್ಯಾಪಿ ಶ್ರೀ ರಾಘವೇಂದ್ರ ಗುರುಸಾರ್ವಭೌಮರು ಇನ್ನಾರಿಗೂ ಇಲ್ಲದ ಈ ಮಹಾ ಗೌರವ-ವೈಭವಗಳಿಗೆ ಪಾತ್ರರಾಗಿ ರಜತ-ಕನಕ-ಮಹಾರಥಗಳಲ್ಲಿ ಉತ್ಸವವನ್ನು ಕೈಗೊಂಡು ಭಕ್ತರನ್ನು ಪೊರೆಯುತ್ತಿರುವುದಕ್ಕೆ ಅಂದು ಶ್ರೀಕೃಷ್ಣನ ಆಜ್ಞೆಯಂತೆ ಭೀಮಸೇನದೇವರು ಬಾಹ್ಲೀಕರಾಜರಿಗೆ ಅನುಗ್ರಹಿಸಿದ ವರವೇ ಕಾರಣವೆಂದು ತಿಳಿಯಬೇಕು. —ಗ್ರಂಥಕಾರ

ಸೇರಿದ ರಾಜ್ಯವನ್ನು ಮತ್ತೆ ಪಡೆಯಲು ಶ್ರೀಕೃಷ್ಣನನ್ನು ತಮ್ಮ ಪರವಾಗಿ ಕೌರವ ಸಭೆಗೆ ರಾಯಭಾರಿಯಾಗಿ ಕಳಿಸಿದರು.

ಶ್ರೀಕೃಷ್ಣ ಪಾಂಡವ ರಾಯಭಾರಿಯಾಗಿ ಕುರುಸಭೆಗೆ ಹೋಗಿ ಭೀಷ್ಮ-ದ್ರೋಣ ಧೃತರಾಷ್ಟ್ರರಿಗೂ, ಸಮಸ್ತ ಸಭಾಸದರಿಗೂ, ದುರ್ಯೋಧನಾದಿಗಳಿಗೂ ತಾನು ಬಂದ ಉದ್ದೇಶವನ್ನು ವಿವರಿಸಿ, ಧರ್ಮಿಷ್ಠರೂ, ಮಹಾಪರಾಕ್ರಮಿಗಳೂ ಆದ ಪಾಂಡವರ ಹಕ್ಕಿನ ರಾಜ್ಯವನ್ನು ಅವರಿಗೆ ಒಪ್ಪಿಸಿಕೊಟ್ಟು, ಉಭಯರೂ ಸ್ನೇಹದಿಂದ ಬಾಳಬೇಕೆಂದು ಹಿತೋಕ್ತಿ ಹೇಳಿ, ಹಾಗೆಮಾಡದಿದ್ದಲ್ಲಿ ಅನಿವಾರ್ಯವಾಗಿ ಯುದ್ಧವು ಒದಗಿಬಂದು ಅಕಾರಣವಾಗಿ ರಕ್ತಪಾತವಾಗಬೇಕಾಗುವುದೆಂದೂ ಕೊನೆಗೆ ಕುರುವಂಶವೇ ನಾಶವಾಗಬೇಕಾದೀತೆಂದೂ ಎಚ್ಚರಿಸಿದನು. ಕೃಷ್ಣನ ಮಾತನ್ನು ಅನುಮೋದಿಸಿ ಅದರಂತೆ ನಡೆಯಬೇಕೆಂದು ಧೃತರಾಷ್ಟ್ರ, ದುರ್ಯೋಧನಾದಿಗಳಿಗೆ ಸಮಸ್ತ ಕುರುಸಭಾಸದರು, ಭೀಷ್ಮ-ದ್ರೋಣ, ಕೃಪ, ಅಶ್ವತ್ಥಾಮಾದಿಗಳು ಮನಒಲಿಸಲು ಪ್ರಯತ್ನಿಸಿ ವಿಫಲರಾದರು. ದುರ್ಯೋಧನನು ಪಾಂಡವರಿಗೆ ಸೂಜಿಯ ಮೊನೆಯಷ್ಟು ಭೂಮಿಯನ್ನೂ ಕೊಡುವದಿಲ್ಲವೆಂದು ಹೇಳಿಬಿಟ್ಟನು. ಮಾತ್ರವಲ್ಲ, ರಾಯಭಾರಿಯಾಗಿ ಬಂದ ಶ್ರೀಕೃಷ್ಣನ್ನೇ ಬಂಧಿಸಲು ಪ್ರಯತ್ನಿಸಿದನು. ಆಗ ಶ್ರೀಕೃಷ್ಣ ತನ್ನ ವಿಶ್ವರೂಪ ತೋರಿದನು. ದುರ್ಯೋಧನಾದಿಗಳು ಅದನ್ನು ನೋಡಲೂ ಸಮರ್ಥರಾಗದೇ ಮೂರ್ಛಿತರಾದರು. ಶ್ರೀಕೃಷ್ಣನು ಪುನಃ ಬುದ್ಧಿವಾದ ಹೇಳಿದರೂ ಫಲಕಾರಿಯಾಗಲಿಲ್ಲ. ಕೊನೆಗೆ ಶ್ರೀಕೃಷ್ಣನು 'ಪಾಂಡವರು ಅಸಹಾಯ ಶೂರರು, ಅವರು ತಮ್ಮ ರಾಜ್ಯವನ್ನು ಬಾಹುಬಲದಿಂದಲೇ ಸಾಧಿಸುವರು. ಯುದ್ಧವೇ ನೆರವೇರುವುದು' ಎಂದು ಹೇಳಿ ಧರ್ಮರಾಜಾದಿಗಳ ಬಳಿಗೆ ಬಂದು ಎಲ್ಲ ವಿಚಾರಗಳನ್ನೂ ನಿವೇದಿಸಿ, ಯುದ್ಧವು ಅನಿವಾರ್ಯವೆಂದೂ ಪಾಂಡವರು ಅದಕ್ಕೆ ಸಿದ್ಧರಾಗಬೇಕೆಂದೂ ಆಜ್ಞಾಪಿಸಿದನು.

o o o o

ಮಹಾಭಾರತ ಯುದ್ಧದಲ್ಲಿ ನಮ್ಮ ಕಥಾನಾಯಕರಾದ ಶ್ರೀ ಬಾಹ್ಲೀಕ ರಾಜರು ದುಷ್ಟರಾದ ಕೌರವರ ಪಕ್ಷವನ್ನು ವಹಿಸಿ ಯುದ್ಧಮಾಡಬೇಕಾಗಿ ಬಂದಿತು.

ದುರ್ಯೋಧನಾದಿ ಧಾರ್ತರಾಷ್ಟ್ರರೂ ಧರ್ಮರಾಜ ಭೀಮಾರ್ಜುನಾದಿ ಪಾಂಡವರೂ ಬಾಹ್ಲೀಕರಾಜರಿಗೆ ಬಂಧುಗಳೇ ಆಗಿದ್ದರು. ಆದರೂ ಭಗವದ್ಭಕ್ತರೂ, ಧರ್ಮಿಷ್ಠರೂ, ಮುಖ್ಯವಾಗಿ ಶ್ರೀಕೃಷ್ಣಪ್ರಿಯರೂ ಆಗಿದ್ದ ಪಾಂಡವರಲ್ಲೇ ಅವರಿಗೆ ವಿಶೇಷ ಮಮತೆ,ಗೌರವ-ಇದ್ದುದರಿಂದ ಅಂಥ ಪಾಂಡವರ ವಿರುದ್ಧಪಕ್ಷದಲ್ಲಿ ನಿಂತು ಹೋರಾಡಬೇಕಾಗಿ ಬಂದುದರಿಂದ ಅವರು ಮರುಗಿದರು. ಬಾಹ್ಲೀಕರಾಜರು ಯುಕ್ತಾಯುಕ್ತ ವಿವೇಚನೆಯುಳ್ಳವರೂ, ಭಗವಂತನ ಏಕಾಂತಭಕ್ತರೂ, ಧರ್ಮಪ್ರಿಯರೂ ಆಗಿದ್ದುದರಿಂದ ಅವರಿಗೆ "ಶ್ರೀಕೃಷ್ಣ-ಪಾರ್ಥರು (ಭೀಮ-ಅರ್ಜುನ) ಇರುವಲ್ಲಿಯೇ ಜಯವು ಸಿದ್ಧವೆಂಬ ವಿಚಾರ ಮನದಟ್ಟಾಗಿತ್ತು. ಆದ್ದರಿಂದಲೇ ಅವರು ಭಗವಂತನ

ವಿರುದ್ಧ ಪಕ್ಷದಲ್ಲಿದ್ದು ಹೋರಾಡಬೇಕಾಗಿ ಬಂದಿದ್ದಕ್ಕೆ ಬಹಳ ದುಃಖಿಸಿದರು. ಮಾಡುವುದೇನು ? ಭೀಷ್ಮ-ದ್ರೋಣಾದಿಗಳೂ ಭಗವದ್ಭಕ್ತರೇ ! ಆದರೂ ಅವರೂ ದುಷ್ಟನಾದ ದುರ್ಯೋಧನನ ಪರವಾಗಿ ಕಾದಾಡಬೇಕಾಗಿ ಬಂದಿತಲ್ಲವೇ ? ಕ್ಷತ್ರಿಯ ಧರ್ಮವನ್ನು ಅನುಸರಿಸಿ ನಡೆಯಲೇಬೇಕಲ್ಲ ! ಇಲ್ಲಿ ಅವರ ಮನೀಷೆ ಪರಮಾತ್ಮನ ವಿರುದ್ಧವಾಗಿ ಹೋರಾಡುವುದಲ್ಲ ; ಅವನ ಸಂಕಲ್ಪದಂತೆ ಭೂಭಾರಹರಣಕಾರ್ಯ ದಲ್ಲಿ ಶ್ರೀಹರಿಗೆ ಸೇವೆ ಸಲ್ಲಿಸುವುದಷ್ಟೇ ಆಗಿತ್ತು. ಅದಕ್ಕಾಗಿ ಅವರು ಅವತರಿಸಿದ್ದ ರಿಂದ ಆ ಕಾರ್ಯಮಾಡಿ ಭಗವದನುಗ್ರಹಕ್ಕೆ ಪಾತ್ರರಾಗಲು ನಿರ್ಧರಿಸಿದರು.

ಕುರುಕ್ಷೇತ್ರದಲ್ಲಿ ಕೌರವ-ಪಾಂಡವರ ಯುದ್ಧಕ್ಕೆ ಸಕಲವೂ ಅಣಿಯಾಗಿದೆ. ಉಭಯ ಪಕ್ಷದವರೂ ಶಿಬಿರಗಳನ್ನು ಹಾಕಿ ಮರುದಿನ ಪ್ರಾರಂಭವಾಗಲಿರುವ ಯುದ್ಧ ಸಿದ್ಧತೆಯಲ್ಲಿದ್ದಾರೆ. ಎಲ್ಲಿ ನೋಡಿದರೂ ಗಂಭೀರ ವಾತಾವರಣ. ಸಾಯಂಕಾಲ ಸೂರ್ಯಾಸ್ತಮಯವಾಗಲು ಇನ್ನೂ ಸ್ವಲ್ಪ ಸಮಯವಿದೆ. ಕುರು ಕ್ಷೇತ್ರ ಸಮೀಪದ ಒಂದು ನಿರ್ಜನ ಪ್ರಾಂತ್ಯ. ಅಲ್ಲಿ ಸುವರ್ಣರಥವೊಂದು ನಿಂತಿದೆ. ಸೂರ್ಯನ ಹೊಂಗಿರಣಗಳು ಕನಕರಥದ ಮೇಲೆ ಬಿದ್ದು ಮೊದಲೇ ಸುಂದರವಾದ ರಥ ಮತ್ತಷ್ಟು ತಳತಳಿಸುತ್ತಿದೆ. ರಥದ ಮೇಲ್ಭಾಗದಲ್ಲಿ ಗರುಡಧ್ವಜವು ಹಾರಾಡುತ್ತಿದೆ. ತೇಜೋಮೂರ್ತಿಗಳಾದ ಇಬ್ಬರು ರಥದಿಂದಿಳಿದು, ಹಚ್ಚ ಹಸು ರಾದ ಆ ಮೈದಾನದಲ್ಲಿ ಮೆಲ್ಲಮೆಲ್ಲನೆ ಸಂಭಾಷಿಸುತ್ತಾ ಅತ್ತಿಂದಿತ್ತ ಓಡಾಡುತ್ತಿದ್ದಾರೆ

ಇಂದ್ರನೀಲ ದೇಹಕಾಂತಿಯಿಂದ ಪೀತಾಂಬರಧಾರಿಯಾಗಿ ಸರ್ವಾಭರಣ ಭೂಷಿತನಾಗಿ ಉಜ್ವಲಕಾಂತಿಯಿಂದ ಕಂಗೊಳಿಸುತ್ತಾ, ಮುಗುಳುನಗೆ ಮೊಗದಿಂದ ಎಲ್ಲರ ಮನಸ್ಸನ್ನೂ ಸೂರೆಗೊಳ್ಳುವ ಸೌಂದರ್ಯನಿಧಿಯೇ ಜಗನ್ನಾಟಕ ಸೂತ್ರ ಧಾರಿಯಾದ ಭಗವಾನ್ ಶ್ರೀಕೃಷ್ಣನು ! ಅಜಾನುಬಾಹು, ತೇಜಃಪುಂಜಮೂರ್ತಿ, ಅಸಮಸಾಹಸಿಯಾದ, ಶ್ರೀಕೃಷ್ಣನ ಜೊತೆಯಲ್ಲಿರುವ ಮತ್ತೊಂದು ವ್ಯಕ್ತಿಯೇ ಭಕ್ತಿವಿನಯ ಸಂಪನ್ನನೂ, ರಿಪುಕುಲ ಭಯಂಕರನೂ ಆದ ಪವನನಂದನನಾದ ಭೀಮಸೇನದೇವ ! ಕೃಷ್ಣ ವೃಕೋದರರು ಮರುದಿನ ಜರುಗಲಿರುವ ಯುದ್ಧದ ಬಗೆಗೆ ವಿಚಾರವಿನಿಮಯ ಮಾಡುತ್ತಿದ್ದಾರೆ.

ಅದೇ ಸಮಯದಲ್ಲಿ ಅನತಿದೂರದಲ್ಲಿ ಅಶ್ವದ ಖುರಪುಟ ಧ್ವನಿಯೊಂದು ಅಲ್ಲಿ ಕೇಳಿಸಿತು. ಅದು ಭೀಮಸೇನನ ಮನಸೆಳೆಯಿತು. ಅಶ್ವಾರೋಹಿಯೋರ್ವನು ಶ್ರೀ ಕೃಷ್ಣ-ಭೀಮಸೇನ ದೇವರಿದ್ದ ಕಡೆಗೆ ಕುದುರೆಯನ್ನೋಡಿಸಿಕೊಂಡು ಬರುತ್ತಿದ್ದಾನೆ. ಅದಾರೆಂದು ಭೀಮಸೇನದೇವರು ನೋಡುತ್ತಿರುವಂತೆಯೇ ಕುದುರೆಯಿಂದಿಳಿದ ಅತ್ಯಂತ ತೇಜಸ್ವಿಯಾದ ವೃದ್ಧನಾದ ಮಹಾವೀರನೊಬ್ಬನು ಇವರಿರುವಕಡೆ ನಡೆದು ಬರಲಾರಂಭಿಸಿದನು. ಆ ವೀರನನ್ನು ನೋಡಿ ಭೀಮಸೇನದೇವರ ಮುಖವರಳಿತು.

ಶ್ರೀಕೃಷ್ಣನನ್ನು ನೋಡಿ ನಗುತ್ತಾ ಭೀಮಸೇನದೇವರಂದರು-"ಭಗವನ್, ವಾಸುದೇವ ! ಇಕೋ ನೋಡು, ನಿನ್ನ ಪ್ರಿಯಭಕ್ತ ಪ್ರಹ್ಲಾದರಾಜ ಬರುತ್ತಿರುವನು !"

**ಕೃಷ್ಣ :** (ಮಂದಹಾಸಬೀರುತ್ತಾ) ಓಹೋ, ಬಾಹ್ಲೀಕರಾಜನೇನು ? ಹೂಂ, ಕೌರವರೊಡನೆ ಸೇರಿ ಹೋರಾಡಲು ನಿಶ್ಚಯಿಸಿದ ಆ ವೀರ ನಮ್ಮ ಹತ್ತಿರವೇಕೆ ಬರುತ್ತಿರುವನು ?

**ಭೀಮಸೇನ :** ಕಪಟನಾಟಕಸೂತ್ರಧಾರಿಯಲ್ಲವೇ ನೀನು ! ಕೃಷ್ಣ ನಿನ್ನ ಲೀಲೆಯನ್ನರಿತವರಾರು ? ಅಂದು ಯುಗಯುಗಗಳ ಹಿಂದೆ-ಇದೇ ಪ್ರಹ್ಲಾದನಿಗಾಗಿ ಜಗದ್ವಿಲಕ್ಷಣ ಭಯಂಕರ ರೂಪವೆತ್ತಿ ಕಂಬದಿಂದೊಡೆದುಬಂದು, ಗುಡಿಗುಡಿಸುತ್ತಾ ಜಗತ್ತನ್ನೇ ವಿಭ್ರಮಗೊಳಿಸಿದೆ ! ಇವನಿಗಾಗಿ ನಿನ್ನನ್ನೇ ಅರ್ಪಿಸಿಕೊಳ್ಳಲು ಸಿದ್ಧನಾಗಿ ವಿಚಿತ್ರಭಕ್ತವಾತ್ಸಲ್ಯ ತೋರಿದೆ ! ಇವನಿಗೆ ಅಸಾಧಾರಣ ವರಗಳನ್ನಿತ್ತು ಲಾಲಿಸಿದೆ ! "ವತ್ಸ, ವತ್ಸ," ಎನ್ನುತ್ತಾ ತಾಯಿಯಂತೆ ಮಡಿಲಲ್ಲಿ ಕೂಡಿಸಿಕೊಂಡು ಆಲಿಂಗಿಸಿ ನಿನ್ನ ಅಲಭ್ಯ ವರದ ಹಸ್ತವನ್ನು ಶಿರದ ಮೇಲಿರಿಸಿ ಅನುಗ್ರಹಿಸಿದೆ !, ಪ್ರಭು ! ಅದೇ ನಿನ್ನ ಅಂತರಂಗಭಕ್ತನು ಈಗ ನಿನ್ನ ಬಲಕಾರ್ಯದಲ್ಲಿ ಸೇವೆ ಸಲ್ಲಿಸಲು ಬಾಹ್ಲೀಕನಾಗಿ ಅವತರಿಸಿರುವಾಗ, ನಿನಗೆ ವಿರುದ್ಧ ಪಕ್ಷದಲ್ಲಿ ನಿಂತು ಕಾದಾಡುವಂಥ ಪರಿಸ್ಥಿತಿಯನ್ನು ತಂದೊಡ್ಡಿದ್ದೀಯೆ ! ನಿನ್ನ ಈ ವಿಲಕ್ಷಣ ವ್ಯಾಪಾರಗಳನ್ನು ಕಂಡು ಮಾಧವ ! ನಾನಂತೂ ಅತ್ಯಂತ ಮುಗ್ಧನಾಗಿದ್ದೇನೆ ! ನಿನ್ನ ಈ ನಿತ್ಯ ನೂತನ, ಅಗಮ್ಯ, ಅಸದೃಶ ಲೀಲಾವಿಲಾಸವನ್ನು ಕಂಡು ನನ್ನ ಪಾಡೇ ಇಂತಾಗಿರುವಾಗ ಉಳಿದವರ ಪಾಡೇನು ? ಗೋವಿಂದ, ಸಾಕು ಮಾಡಿನ್ನು ನಿನ್ನೀ ನಟನೆಯನ್ನು, ನಿನ್ನ ಪ್ರಿಯಭಕ್ತನಲ್ಲಿ ಕೃಪೆದೋರು.

ಭೀಮಸೇನದೇವರ ಸರಸ ವಚನಗಳನ್ನಾಲಿಸಿ ಸರಸೀರುಹಾಕ್ಷನಾದ ಶ್ರೀಕೃಷ್ಣನು ಮಂದಹಾಸಚಂದ್ರಿಕೆಯನ್ನು ಹೊರಸೂಸುತ್ತಾ ಇಂತೆಂದನು—"ವೃಕೋದರ ! ನಿನ್ನ ಪೂರ್ಣಾನುಗ್ರಹಕ್ಕೆ ಪಾತ್ರನಾಗಿ, ನಿನ್ನ ವಿಶೇಷಸನ್ನಿಧಾನಯುಕ್ತನಾದ, ನನ್ನ ಪ್ರಿಯ ಕಂದ ಪ್ರಹ್ಲಾದನಲ್ಲಿ, ಅವನ ಅವತಾರನಾದ ಬಾಹ್ಲೀಕರಾಜನಲ್ಲಿ ನನ್ನ ಅನುಗ್ರಹವು ಶಾಶ್ವತವಾಗಿರುವುದನ್ನು ನೀನರಿಯೆಯಾ ? ಕುಂತೀಕುಮಾರ ! ಈಗ ಈ ಭಕ್ತರಾಜನಲ್ಲಿ ಕರುಣೆತೋರಬೇಕಾಗಿರುವವನು ನೀನು ! ನಾನಲ್ಲ !"

ಹೀಗೆ ಕೃಷ್ಣ-ಭೀಮರು ಮಾತಾಡುತ್ತಿರುವಂತೆಯೇ ಬಾಹ್ಲೀಕರಾಜರು ಹತ್ತಿರ ಬಂದು ಶ್ರೀಕೃಷ್ಣನನ್ನು ನೋಡಿದರು. ನಿತ್ಯಸುಂದರಮೂರ್ತಿ, ನೀಲನೀರದಕಾಂತಿ ವಿಲಸಿತಮನೋಹರಾಕಾರ, ಬ್ರಹ್ಮಾಂಡನಾಯಕ, ಅನಿಮಿತ್ತಬಂಧು, ಭಕ್ತವತ್ಸಲ, ತನ್ನ ಆರಾಧ್ಯದೈವ, ಮುಗುಳುನಗೆಯುಮೊಗದಿಂದ ಪರಮಮಂಗಳಮೂರ್ತಿಯಾಗಿ ಕಂಗೊಳಿಸುವ ಮಾಧವನನ್ನು ಅವಲೋಕಿಸಿ ಬಾಹ್ಲೀಕರಾಜರಿಗೆ ಮೈಪುಳಕಿಸಿತು.

ಭಕ್ತಿಸಂತೋಷಗಳಿಂದ ಕಣ್ಣಾಲಿಗಳು ತೇವಗೊಂಡವು. ಹೃದಯ ತುಂಬಿ ಬಂದಿತು. ಗದ್ಗದ ಕಂಠದಿಂದ "ಕೃಷ್ಣಾ, ಕೃಷ್ಣಾ" ಎಂದೆನ್ನುತ್ತಾ ಆ ಕೃಷ್ಣಗ್ರಹಗೃಹೀತಾತ್ಮರು ಓಡಿಬಂದು ಶ್ರೀಹರಿಪದತಲದಲ್ಲಿ ಶಿರವಿರಿಸಿ ನಮಿಸಿದರು.

ಭಗವಾನ್ ಶ್ರೀಕೃಷ್ಣ ಪ್ರೀತ್ಯತಿಶಯದಿಂದ ಬ್ಲಾಹೀಕರಾಜರನ್ನು ಹಿಡಿದೆತ್ತಿ ಆಲಂಗಿಸಿದ.ಆನಂದಪರವಶರಾದ ಬಾಹ್ಲೀಕರು ಶ್ರೀಕೃಷ್ಣನ ಪಕ್ಕದಲ್ಲಿ ನಸುನಗುತ್ತಾ ನಿಂತಿರುವ ಭೀಮವಿಕ್ರಮ ವೃಕೋದರನನ್ನು ಕಂಡರು. ಕುರುವಂಶದ ಹಿರಿಯರೆಂದು ಲೌಕಿಕವನ್ನನುಸರಿಸಿ ಭೀಮಸೇನದೇವರು ಬ್ಲಾಹೀಕರಿಗೆ ಶಿರಬಾಗಿದರು.

ಕೂಡಲೇ ಬಾಹ್ಲೀಕರು ಅದನ್ನು ವಿರೋಧಿಸಿ "ಛೇ,ಛೇ ಇದೇನು ಜಗತ್ಪ್ರಾಣ! ಸರ್ವಜೀವನಿಯಾಮಕ, ವಾಯುದೇವ! ನೀವು ನಿಮ್ಮ ಅನುಗ್ರಹೋಪಜೀವಿಯಾದ ನನಗೆ ನಮಿಸುವುದೇ?" ಎಂದರು. ಆಗ ಶ್ರೀಕೃಷ್ಣ "ಲೋಕಶಿಕ್ಷಣಾರ್ಥ! ಅಲ್ಲವೇ ಭಾರತೀರಮಣ ! ಭೀಮಸೇನ, ಬಾಹ್ಲೀಕರು ನಿನ್ನಲ್ಲಿ ಏನನ್ನೋ ಯಾಚಿಸಲು ಬಂದಂತಿದೆ. ಹೂಂ, ಅವರ ಮನೋರಥವನ್ನು ಪೂರ್ಣಮಾಡು" ಎಂದು ನಕ್ಕನು.

ಆಗ ಬಾಹ್ಲೀಕರಾಜರು ಕಣ್ಣೀರುಸುರಿಸುತ್ತಾ ಗದ್ಗದ ಕಂಠದಿಂದ "ಜಗನ್ನಾಥ! ನಿನಗೆ ತಿಳಿಯದ ವಿಷಯವೇನಿದೆ? ದೇವ, ನಿನ್ನ ಸೇವೆಗಾಗಿ ಜನಿಸಿದೆ. ಯೋಗ್ಯತಾನುಸಾರ ಸೇವಿಸಿದ್ದೇನೆ. ಸಾಕಿನ್ನು ಈ ಭವದ ಜಂಜಾಟ! ನಿನ್ನ ಹಸ್ತದಿಂದಲೇ ಮರಣವನ್ನಪ್ಪಬೇಕೆಂದೇನೋ ಆಶಿಸಿದೆ. ಆದರೆ ಆ ಭಾಗ್ಯವೂ ನನಗಿಲ್ಲವಾಯಿತು. ನೀನು ಶಸ್ತ್ರವನ್ನು ಹಿಡಿಯುವುದಿಲ್ಲವೆಂದು ಪ್ರತಿಜ್ಞೆಗೈದಿರುವೆ ! ಮೇಲಾಗಿ ನಿನ್ನ ಅಮೃತಹಸ್ತದಿಂದ ಮೃತರಾದರೆ ಅಮೃತತ್ವವೆನಿಸಿದ ಮೋಕ್ಷವೇ ನಿಶ್ಚಿತ ! ಆದರೆ ನನಗೆ ಈಗಾಗಲೇ ಮೋಕ್ಷವೂ ಬೇಡವಾಗಿದೆ, ಏಕೆಂದರೆ ಇನ್ನೂ ನಿನ್ನನ್ನು ವಿಶೇಷ ರೀತಿಯಿಂದ ಮುಂದಿನ ಜನ್ಮಗಳಲ್ಲಿ ಸೇವಿಸಬೇಕೆಂದು ಆಶಿಸಿದ್ದೇನೆ ! ಕಲಿಯುಗದಲ್ಲಿ ರೂಪದ್ವಯದಿಂದ ಮತ್ತೆ ಮತ್ತೆ ಸೇವಿಸುವ ಹಿರಿಯಾಸೆ ನನಗಿದೆ.(ಭೀಮಸೇನನತ್ತ ತಿರುಗಿ) ಆದ್ದರಿಂದ ವಾಯುದೇವ ! ನಿನ್ನ ವರದಹಸ್ತದಿಂದ ನನ್ನ ಮರಣವಾಗಬೇಕೆಂದು ನಾನು ಅಪೇಕ್ಷಿಸಿದ್ದೇನೆ. ಆದರಿಂದ ಧರ್ಮಸಾಧನೆಯಾಗುವುದು, ಕೀರ್ತಿಯೂ ಲಭಿಸುವುದು. ನನ್ನ ಇಚ್ಛೆಯೂ ಪೂರ್ಣವಾಗುವುದೆಂದು ನಂಬಿದ್ದೇನೆ. ಭಾರತೀಶ ! ನಿನ್ನ ಗದಾಪ್ರಹಾರದಿಂದ ನನ್ನ ಇಹಲೋಕ ವ್ಯಾಪಾರವು ಮುಗಿಯುವಂತೆ ಅನುಗ್ರಹಿಸು!" ಎಂದು ಭೀಮಸೇನದೇವರನ್ನು ಪ್ರಾರ್ಥಿಸಿದರು.* ಶ್ರೀಕೃಷ್ಣ ಭೀಮಸೇನದೇವರನ್ನು ನೋಡಿ ನಸುನಕ್ಕ.

---

* ಬ್ಲಾಹೀಕಃ ಪ್ರಾರ್ಥಯಾಮಾಸ ಪೂರ್ವಂ ಸ್ನೇಹಪುರಸ್ಸರಮ್ ।
ಭೀಮ ! ತ್ವಯೈವ ಹಂತವ್ಯೋ ರಣೇಹಂ ಪ್ರೀತಿಮಿಚ್ಛತಾ ॥
ತದಾ ಯಶಶ್ಚ ಧರ್ಮಂಚ ಲೋಕಂಚ ಪ್ರಾಪ್ನುಯಾಮ್ಯಹಮ್ ॥
—ತಾತ್ಪರ್ಯ ನಿರ್ಣಯ.

**ಶ್ರೀಭೀಮಸೇನ :** ಹಿರಿಯರೇ, ನನಗೆ ತೊಂದರೆಯಾಗದೆ ನಾನು ಯಾರನ್ನೂ ಸಂಹರಿಸುವುದಿಲ್ಲ ! ಅಲ್ಲದೆ ಶ್ರೀಹರಿಭಕ್ತರ ತಂಟೆಗೆ ನಾನು ಹೋಗುವುದಿಲ್ಲ.ಆದರೂ ಭಗವಂತನ ಆಜ್ಞೆ, ನಿಮ್ಮಲ್ಲಿ ನನಗಿರುವ ನಿರತಿಶಯ ಪ್ರೇಮಗಳಿಂದ ನಿಮ್ಮ ಪ್ರಾರ್ಥನೆಯನ್ನು ಅಂಗೀಕರಿಸಿದ್ದೇನೆ !" ಇಂತು ಅಭಯವಿತ್ತರು.[4]

ಭೀಮಸೇನದೇವರ ವಚನವನ್ನಾಲಿಸಿ ಬ್ಲಾಹೀಕರಾಜನಿಗೆ ಸಮಾಧಾನವಾಯಿತು. ಮನದಲ್ಲಿಯೇ ಮುದಿಸಿದರು. ಇನ್ನು ತಮ್ಮ ಉದ್ಧಾರವಾಗುವುದೆಂದವರು ತಿಳಿದರು. ತಮ್ಮ ಹರಿಸೇವಾಕಾಂಕ್ಷೆ ಪೂರ್ಣವಾಗುವುದೆಂದು ಸಂತುಷ್ಟರಾಗಿ ಶ್ರೀಕೃಷ್ಣ – ಭೀಮಸೇನದೇವರ ಅಪ್ಪಣೆಯನ್ನು ಪಡೆದು ತಮ್ಮ ಬಿಡಾರಕ್ಕೆ ತೆರಳಿದರು.

ಕುರುಕ್ಷೇತ್ರದ ತಮ್ಮ ಬಿಡಾರಕ್ಕೆ ತೆರಳಿದ ಬಾಹ್ಲೀಕರಾಜರು ಶ್ರೀವಾಯುದೇವರು ಯಾವಾಗಲೂ ತಮಗೆ ಬೆಂಗಾವಲಾಗಿರುವುದು ಪುಣ್ಯವಿಶೇಷವೆಂದು ಹಿರಿಹಿರಿ ಹಿಗ್ಗಿದರು. ಅವರು–ಬೇಗ ಯುದ್ಧವು ಪ್ರಾರಂಭವಾಗಬಾರದೇ! ಯುದ್ಧದಲ್ಲಿ ಹರಿಯ ಭೂಭಾರಹರಣಕಾರ್ಯದಲ್ಲಿ ನನ್ನ ಪರಾಕ್ರಮವನ್ನು ತೋರಿಸಿ ಶ್ರೀರಮಾಧವನ ಸೇವೆ ಮಾಡುವ ಅವಕಾಶ ಶೀಘ್ರವಾಗಿ ದೊರೆಕಬಾರದೇ, ಶ್ರೀಭೀಮಸೇನದೇವರ ಗದಾಪ್ರಹಾರದಿಂದ ತಮಗೆ ಯಾವಾಗ ಮರಣವಾದೀತು ? ಆ ಭಾಗ್ಯ ನನಗಾವಾಗ ಲಭಿಸೀತು ! ಎಂದು ಯೋಚಿಸುತ್ತಾ ಕುರುಕ್ಷೇತ್ರ ಯುದ್ಧ ಪ್ರಾರಂಭವಾಗುವ ಕ್ಷಣವನ್ನು ನಿರೀಕ್ಷಿಸ ಹತ್ತಿದರು.

o o o o

ಇತಿಹಾಸ ಪ್ರಸಿದ್ಧವಾದ ಭಾರತ ಯುದ್ಧ ಪ್ರಾರಂಭವಾಯಿತು. ಆ ಯುದ್ಧದಲ್ಲಿ ಬಾಹ್ಲೀಕರಾಜರು ತಮ್ಮ ಬಲವನ್ನು ಸಂಪೂರ್ಣವಾಗಿ ತೋರಿ ಅದನ್ನು ಭಗವತ್ಪೂಜೆಯೆಂದು ಆಚರಿಸಿದರು.

ಭೀಕರವಾಗಿ ಯುದ್ಧವು ಜರಗುತ್ತಿದ್ದ ಒಂದು ದಿನ. ಆದರೆ ಅಂದು ರಣರಂಗದಲ್ಲಿ ಯುದ್ಧವು ಅಷ್ಟು ರಭಸದಿಂದ ನಡೆಯುತ್ತಿರಲಿಲ್ಲ. ಯುದ್ಧದ ಚಟುವಟಿಕೆಗಳು ಭರದಿಂದ ಕಂಡು ಬರುತ್ತಿರಲಿಲ್ಲ. ಆದರೂ ಪರಿಸ್ಥಿತಿಯು ಭಯಂಕರವಾಗಿತ್ತು.

ಯುದ್ಧವು ಪ್ರಾರಂಭವಾಯಿತು. ಶ್ರೀಬಾಹ್ಲೀಕರಾಜರು ತಮ್ಮ ಶಿಬಿರದಲ್ಲಿ ಭಗವಂತನ ಧ್ಯಾನಪರರಾಗಿ ವಿಶೇಷ ಪ್ರಾರ್ಥನೆ ಸಲ್ಲಿಸಹತ್ತಿದರು. ಇಂದು ತಮ್ಮ ಅವತಾರ ಕಾರ್ಯ ಪರಿಸಮಾಪ್ತಿಯಾಗಬೇಕೆಂದು ಅವರು ನಿಶ್ಚಯಿಸಿದರು. ಶ್ರೀಹರಿ

---

4. ಇತ್ಯುಕ್ತಃ ಪ್ರಾಹ ತಂ ಭೀಮೋ ನಿತರಾಂ ಪೃಥಿತಸ್ತದಾ ।
ನನ್ಯಾಂ ನೈವಾನ್ಯಥಾ ಯುದ್ಧೇ ತತ್ತೇ ಸಂಶ್ರವಣಂ ಭವೇತ್ ॥
ಮ-ಭಾ-ತಾ-ನಿರ್ಣಯ :- 26-270-271.

ವಾಯುಗಳನ್ನು ಸ್ಮರಿಸಿಕೊಂಡು ಯುದ್ಧಸನ್ನದ್ಧರಾಗಿ ರಥವೇರಿ ರಣಭೂಮಿಗೆ ತೆರಳಿದರು.

ಮೊದಲು ಯುದ್ಧರಂಗದಲ್ಲಿ ಅವರಿಗೆ ಸಾತ್ಯಕಿಯು ಎದುರಾದ. ಅವನೊಡನೆ ಹೋರಾಟ ಪ್ರಾರಂಭಿಸಿದ ಬಾಹ್ಲೀಕರಾಜರು ಅವನ ರಥವನ್ನು ಮುರಿದುಹಾಕಿದರು. ಆನಂತರ ಸಾತ್ಯಕಿಯನ್ನು ಸಂಹರಿಸಲು ಬಂದು ಬಾಣವನ್ನು ಪ್ರಯೋಗಿಸಿದರು.

ಅದೇ ಸಮಯಕ್ಕೆ ಎಲ್ಲಿಯೋ ಇದ್ದ ಭೀಮಸೇನದೇವರು ಭರದಿಂದಬಂದು ಆ ಬಾಣವನ್ನು ತುಂಡುಮಾಡಿಬಿಟ್ಟರು. ಭೀಮಸೇನದೇವರು ಬಂದೊಡನೆ ಬಾಹ್ಲೀಕ ರಾಜರಿಗೆ ಪರಮಾನಂದವಾಯಿತು.

ಭೀಮಸೇನದೇವರನ್ನು ನೋಯಿಸಬೇಕೆಂಬವಿಚಾರ ನೆನಪಾಯಿತು. ಕೂಡಲೇ ಬ್ರಹ್ಮದೇವರನ್ನು ಒಲಿಸಿ ಅವರಿಂದ ತಾವು ಪಡೆದಿದ್ದ "ಶತಘ್ನೀ" ಎಂಬ ಪ್ರಚಂಡ ಗದೆಯನ್ನು ಭೀಮಸೇನದೇವರಮೇಲೆ ಪ್ರಯೋಗಿಸಿದರು! ಬಾಹ್ಲೀಕರಾಜರಿಗೆ ತಮ್ಮ ಶತಘ್ನಿಗದೆಯಿಂಥ ಭೀಮಸೇನದೇವರಿಗೆ ಯಾವ ತೊಂದರೆಯೂ ಆಗದೆಂದು ತಿಳಿ ದಿತ್ತು. ವಾಯುದೇವರಲ್ಲದೆ ಬೇರೊಬ್ಬರಮೇಲೆ ಆ ಗದೆಯ ಆಘಾತವಾಗಿದ್ದರೆ, ಕೂಡಲೇ ಅಸುನೀಗುತ್ತಿದ್ದರು! ಆದರೆ ಜೀವೋತ್ತಮರೂ ಜಗತ್ಪ್ರಾಣರೂ ಆದ ವಾಯುದೇವರೇ ಭೀಮಸೇನರಾದ್ದರಿಂದ ಶತಘ್ನೀಪ್ರಹಾರದಿಂದ ಅವರ ಕೂದಲೂ ಕೊಂಕಲಿಲ್ಲ. ಆದರೂ ಭೀಮಸೇನದೇವರು ಬ್ರಹ್ಮದೇವರ ಮೇಲಿನ ಗೌರವದಿಂದ ಶತಘ್ನೀಆಘಾತದಿಂದ ಒಮ್ಮೆ ಕಂಪಿಸಿದವರಂತೆ ನಟಿಸಿದರು! ಆಗ ಭೀಮಸೇನದೇವ ರಿಗೆ ಶ್ರೀಕೃಷ್ಣನ ಆಣತಿಯಂತೆ ತಾವು ಬಾಹ್ಲೀಕರಾಜರಿಗಿತ್ತ ಅಭಯವಚನ ನೆನಪಾ ಯಿತು. ತಮ್ಮ ಅಭಯವಚನವನ್ನು ಪೂರ್ಣಗೊಳಿಸಲು ನಿಶ್ಚಯಿಸಿ, ಅವರು ಕೆರಳಿ ದವರಂತೆ ನಟಿಸುತ್ತಾ ಬಾಹ್ಲೀಕರತ್ತ ತಿರುಗಿದರು.

ಆಗ ಬಾಹ್ಲೀಕರಿಗಾದ ಆನಂದ ಅವರ್ಣನೀಯ! ಅವರ ಮುಖದಲ್ಲಿ ಭಯ, ದೈನ್ಯ, ಭಕ್ತಿಗಳು ಒಡಮೂಡಿದವು. ಭೀಮಸೇನದೇವರು ಹತ್ತಿರ ಬರುತ್ತಿದ್ದಂತೆ ಬಾಹ್ಲೀಕರಾಜರು ರಥದಿಂದ ಕೆಳಗಿಳಿದು ಕರಮುಗಿದು "ಬಾ ದೇವ ! ಪವಮಾನ ! ತಂದೆ, ನಿನ್ನ ಪವಿತ್ರಗದೆಯಿಂದ ನಿನ್ನ ಭಕ್ತನಾದ ನನ್ನ ಇಹಲೋಕವ್ಯಾಪಾರವನ್ನು ಮುಗಿಸು ಸ್ವಾಮಿ" ಎಂದು ಪ್ರಾರ್ಥಿಸಿದರು.

ಭೀಮಸೇನದೇವರು ಮಂದಹಾಸಬೀರಿ ಬಾಹ್ಲೀಕರಮೇಲೆ ಗದಾಪ್ರಹಾರ ಮಾಡಿದರು. ಶ್ರೀಬಾಹ್ಲೀಕರಾಜರು ಶ್ರೀಹರಿವಾಯುಗಳನ್ನು ಸ್ಮರಿಸುತ್ತಾ ತಮ್ಮ ಅವತಾರ ಕಾರ್ಯವನ್ನು ಪರಿಸಮಾಪ್ತಿಗೊಳಿಸಲನುವಾದರು. ಮರಣವು ಸನ್ನಿಹಿತ ವಾಗುತ್ತಿದ್ದಂತೆ ಬಾಹ್ಲೀಕರಾಜರು ದೀನರಾಗಿ ಭಕ್ತಿಯಿಂದ "ದೇವ, ಪವಮಾನ ! ನಿನ್ನ ಭಕ್ತನಾದ ನನ್ನ ಒಂದು ಪ್ರಾರ್ಥನೆಯನ್ನು ಪೂರ್ಣಮಾಡು ತಂದೆ" ಎಂದು ಕೋರಿದರು. ಭೀಮಸೇನದೇವರು ಕಾರುಣ್ಯಪೂರ್ಣವಾಗಿ "ಅದೇನು ಕೇಳಿರಿ, ನಿಮ್ಮ ಮನೋರಥವನ್ನು ಪೂರ್ಣಮಾಡುತ್ತೇವೆ" ಎಂದರು.

ಬಾಹ್ಲೀಕರು ಕರಜೋಡಿಸಿ "ಸ್ವಾಮಿ, ಮುಂದೆ ನೀವು ಹರಿಯ ಜ್ಞಾನಕಾರ್ಯಕ್ಕಾಗಿ ಅವತರಿಸಿದಾಗ ನಿಮ್ಮ ಮತಾನುಯಾಯಿಯಾಗಿ, ನಿಮ್ಮ ಭಕ್ತನಾಗಿ,ಭಗವಂತನ ಜ್ಞಾನಕಾರ್ಯದಲ್ಲಿಯೂ ನಾನು ವಿಶೇಷ ಸೇವೆಮಾಡಲು ಆಶಿಸುತ್ತೇನೆ. ಅದರಂತೆ ನೀವು ನನ್ನಲ್ಲಿ ಅನುಗ್ರಹಿಸಿ ಸೇವೆಮಾಡಲು ವರವನ್ನು ಕರುಣಿಸಿರಿ.[1]" ಎಂದು ಪ್ರಾರ್ಥಿಸಿದರು.

ಭೀಮಸೇನದೇವರು ನಸುನಕ್ಕು "ತಥಾಸ್ತು! ಶ್ರೀಹರಿಗೆ ನಿಮ್ಮಿಂದ ವಿಶೇಷ ಸೇವೆಯು ನೆರವೇರುವಂತೆ ಅನುಗ್ರಹಿಸುತ್ತೇವೆ. ನಿಮಗೆ ಮಂಗಳವಾಗಲಿ" ಎಂದು ಸುಪ್ರೀತರಾಗಿ ಬಾಹ್ಲೀಕರ ಶಿರದ ಮೇಲೆ ಕರವಿಟ್ಟು ಅನುಗ್ರಹಿಸಿ ವರಪ್ರದಾನ ಮಾಡಿದರು.

ಕೂಡಲೇ ಬಾಹ್ಲೀಕರು ಆನಂದಭರಿತರಾಗಿ ಭಕ್ತಿಯಿಂದ"ಶ್ರೀಹರಿನಾರಾಯಣ, ಹೇಕೃಷ್ಣ, ಗೋವಿಂದ, ಶ್ರೀವಾಸುದೇವ, ನಮೋನಮಃ ಈ ಭಕ್ತನಲ್ಲಿ ಅನುಗ್ರಹವು ಸ್ಥಿರವಾಗಿರಲಿ." ಎಂದು ವಿಜ್ಞಾಪಿಸಿ ಶ್ರೀಹರಿವಾಯುಗಳ ನಾಮಸ್ಮರಣ ಮಾಡುತ್ತಾ ತಮ್ಮ ಇಹಲೋಕವ್ಯಾಪಾರ ಮತ್ತು ಅವತಾರ ಕಾರ್ಯವನ್ನು ಪರಿಸಮಾಪ್ತಿಗೊಳಿಸಿ ಅಮರರಾದರು !

ಯುದ್ಧರಂಗದಲ್ಲಿ ಇವೆಲ್ಲವನ್ನು ನೋಡುತ್ತಿದ್ದ ಸಕಲರೂ ಬಾಹ್ಲೀಕರಾಜರ ಶ್ರೀಹರಿ-ವಾಯು ಭಕ್ತಿಯನ್ನು ಕಂಡು ಆಶ್ಚರ್ಯಾನಂದಚಕಿತರಾಗಿ "ಭಾಗವತಾಗ್ರಣಿ! ಶ್ರೀಹರಿ-ವಾಯುಭಕ್ತಾಗ್ರಗಣ್ಯ! ಮಂಗಳಮೂರ್ತಿ, ಶ್ರೀಬಾಹ್ಲೀಕರಾಜರೇ, ನೀವೇ ಧನ್ಯರು, ನಿಮಗೆ ನಮೋ ನಮಃ" ಎಂದು ಅವರ ಗುಣಗಾನ ಮಾಡಿದರು.

ಇಂತು 'ಕಲಿಯುಗ – ಕಲ್ಪತರು' ಕಥಾನಕದಲ್ಲಿ ಭಾಗವತಾಗ್ರಣಿಗಳಾದ ಶ್ರೀ ಬಾಹ್ಲೀಕರಾಜ ಚರಿತೆಯೆಂಬ ಮೂರನೆಯ ಉಲ್ಲಾಸವು ಮುಗಿದುದು

॥ ಇತಿಶಮ್ ॥

---

1. ......"ವೃಕೋದರನೆಂಬ ದೇವನು ಶಿಷ್ಯನಾಗ ಬಾ| ಹ್ಲೀಕರಾಯನಾಗಿ ಪುಟ್ಟಿದ್ದ ಪ್ರಹ್ಲಾದ ತಾ ಸುಕೃತಿಯಿಂದಲಿ ಪೊಗಳ ವರವಪೇಕ್ಷಿಸಿ | ವೈದಿಕ ಮಾರ್ಗವನ್ನೇ ಹಿಡಿದು, ಉಕುತಿಯನು ಸಾಧಿಸುತಲಿ ಕಲಿಯೊಳಗೆ ನಿಮ್ಮ ಪೂಜಕನಾಗ ಬಾಳುವೆನು ಎಂದು ತಲೆಬಾಗಿದನು | ಭಕುತಿಗೆ ಮೆಚ್ಚು ತಲ್ಲೈಸಲೆಯೆಂದ......॥"

—ಶ್ರೀವಿಜಯದಾಸರು

ಶ್ರೀ ಗುರುರಾಜೋ ವಿಜಯತೇ



# ಕಲಿಯುಗ - ಕಲ್ಪತರು

## ನಾಲ್ಕನೆಯ ಉಲ್ಲಾಸ

**ಜಗದ್ಗುರು**
**ಶ್ರೀ ವ್ಯಾಸರಾಜ ಗುರುಸಾರ್ವಭೌಮರು**

ರಚಿಸಿದವರು
ರಾಜಾ ಎಸ್. ಗುರುರಾಜಾಚಾರ್ಯರು



# ಕಲಿಯುಗ ಕಲ್ಪತರು

## ನಾಲ್ಕನೆಯ ಉಲ್ಲಾಸ

## ಶ್ರೀವ್ಯಾಸರಾಜಯತಿಸಾರ್ವಭೌಮರು

### ಹಿನ್ನೆಲೆ

ಭಾರತಯುದ್ಧವು ಮುಗಿದು ಧರ್ಮರಾಜನ ಪಟ್ಟಾಭಿಷೇಕವಾಗಿ, ಅವನು ಅಖಂಡ ಭರತವರ್ಷದ ಸಾರ್ವಭೌಮನಾಗಿ ಧರ್ಮದಿಂದ ರಾಜ್ಯಪರಿಪಾಲನೆ ಮಾಡುವಂತೆ ಅನುಗ್ರಹಿಸಿದ ಶ್ರೀಕೃಷ್ಣ ದ್ವಾರಕೆಗೆ ಹಿಂದಿರುಗಿದ್ದಾನೆ. ಕುರುಕ್ಷೇತ್ರ ಯುದ್ಧದಲ್ಲಿ ಭೀಮಸೇನದೇವರ ಗದಾಪ್ರಹಾರದಿಂದ ಅಸುನೀಗಿದ ಬಾಹ್ಲೀಕರಾಜರು ಹರಿವರ್ಷಖಂಡದಲ್ಲಿ ಪ್ರಹ್ಲಾದ ರೂಪದಿಂದ ರಾರಾಜಿಸಿದ್ದಾರೆ. ಕಾಲಚಕ್ರ ಉರುಳಿತು.

ಪ್ರಹ್ಲಾದರಾಜರು ಪ್ರತಿದಿವಸವೂ ಲಕ್ಷ್ಮೀಪತಿಯ ಮಂಗಳಕರವಾದ ನಸುಗೆಂಪು ಬಣ್ಣದ ಚಿಗುರಿನಂತೆ ಶೋಭಿಸುವ ಪಾದಪಲ್ಲವವನ್ನು ತಮ್ಮ ಚಿತ್ತದಲ್ಲಿ ನೆಲೆಗೊಳಿಸಿ ವೇದೋಕ್ತ ರೀತಿಯಲ್ಲಿ ಜ್ಞಾನ–ಭಕ್ತಿಪೂರ್ವಕವಾಗಿ, ಸಂಸಾರದ ಸಮಸ್ತ ಆಶೆಗಳನ್ನೂ ಕಿತ್ತೊಗೆದು, ತ್ರಿನೇತ್ರನಾದ ನೃಕಂಠೀರವನನ್ನು ಪೂಜಿಸುತ್ತಾ ಶ್ರೀ ಹರಿಯ ಮಹಿಮಾತಿಶಯಗಳನ್ನು ಚಿಂತಿಸುತ್ತಾ ಪರಮಾನಂದದಿಂದ ಕಾಲಕಳೆಯುತ್ತಿದ್ದಾರೆ.[1]

ಹೀಗಿರಲೊಂದುದಿನ ನಾರದಮಹರ್ಷಿಗಳು ಹರಿವರ್ಷ ಖಂಡಕ್ಕೆ ಚಿತ್ತೈಸಿದರು. ಆಗ ಪ್ರಹ್ಲಾದರು ಸಂತೋಷದಿಂದ ಗುರುಗಳ ಪಾದಗಳಿಗೆರಗಿ ನಿಂತು ಕರಮುಗಿದು ''ಕಾಪಾಡಿ, ಕಾಪಾಡಿ ಗುರುದೇವ'' ಎಂದು ವಾಕ್ಯಗಳಿಂದಲೂ ಒಂದೊಂದು ಅವರ ಗುಣಗಳನ್ನು ಕೊಂಡಾಡಿ ''ಸ್ವಾಮಿ, ನಿಮ್ಮ ದರ್ಶನವಿಂದು ನನಗಾದುದು ಪುಣ್ಯ ವಿಶೇಷ.. ಗುರುವರ್ಯ! ತಾವೀಗ ಎಲ್ಲಿಂದ ದಯಮಾಡಿಸಿದಿರಿ ಆ ವಿಚಾರವನ್ನು ಹೇಳಿರಿ''ಎಂದು ಪ್ರಾರ್ಥಿಸಿದರು.

ಆಗ ನಾರದರು ಪ್ರಹ್ಲಾದರ ಮಾತುಕೇಳಿ 'ಹಾಹಾ ಕೃಷ್ಣಾ ಎನ್ನುತ್ತ ಕೃಷ್ಣನನ್ನು ನೆನೆದು ಅವನ ಮಹಿಮೆ ಎಷ್ಟು ಚಂದ ಎಂದು ಮೈಮರೆತರು.[2] ತಾವೆಲ್ಲಿದ್ದೇವೆ.

---

೧. ಅಲ್ಲಿ ತ್ರಿನೇತ್ರ ಸಿರಿವಲ್ಲಭನ ಸಿರಿಪಾದ| ಪಲ್ಲವಾರುಣಚಿತ್ತದಲ್ಲಿತಂದು ಪ್ರತಿದಿವಸ|
ನಿಲ್ಲಿಸುತ ನಿಗಮೋಕ್ತದಲ್ಲಿ ಪೂಜಿಸುತಲಿರ್ದ ಬಲ್ಲ ಭಕುತಿಗಳಿಂದಲಿ||
ಖುಲ್ಲನಲಿ ಪುಟ್ಟಿರ್ದ ಪ್ರಹ್ಲಾದದೇವನವ| ಬಲ್ಲಿದನು ತಾನಾಗಿ ಸಂಸಾರವುತ್ತರಿಸಿ|
ಎಲ್ಲ ಕಾಲದೊಳಗಿರುತಿರಲು ನಾರದಮುನಿ ಮೆಲ್ಲನೆ ನಡೆತಂದನಾಗ||೨||

2. ಬಂದ ನಾರದಮುನಿಗೆ ಪ್ರಹ್ಲಾದನೆರಗುತ್ತ| ನಿಂದು ಕರಗಳ ಮುಗಿದು ತ್ರಾಹಿ ತ್ರಾಹಿಯೆಂದು ಒಂದೊಂದು ವಾಕ್ಯದಿಂ ಕೊಂಡಾಡಿ ಬೆಸಗೊಂಡು ಇಂದು ನಿಮ್ಮಯ ದರ್ಶನ ಚಂದವಾಯಿತು ಎನಗೆ ಎತ್ತಲಿಂದಲಿ ಇತ್ತ| ಬಂದಿರಿ ವಿಚಾರವದ ಪೇಳೆಂದು ಬಿನ್ನೈಸೆ| ವೃಂದಾರಕಾ ಮೌನಿ ನುಡಿದ ಕೃಷ್ಣನ ಮಹಿಮೆ ಚಂದ ಹಾಹಾ ಎನುತಲಿ ||೩||

—ಶ್ರೀ ವಿಜಯದಾಸರು

ಏನು ಮಾಡುತ್ತಿದ್ದೇವೆ ಎಂಬುದೂ ಮರೆತುಹೋಯಿತವರಿಗೆ! ಶ್ರೀಕೃಷ್ಣನ ಮಂಗಳ ಸ್ವರೂಪವೇ ಅವರ ಚಿತ್ತದಲ್ಲಿ ನೆಲೆನಿಂತು ಬಿಟ್ಟಿತು. ಆ ಪುರುಷೋತ್ತಮನ ಅನಂತ ಕಲ್ಯಾಣಗುಣಗಳು, ಶ್ರೀಕೃಷ್ಣಾವತಾರ ಲೀಲಾವಿಲಾಸಗಳು, ಅವರ ನೆನಪಿನಸುಳಿಯಲ್ಲಿ ನಲಿಯಹತ್ತಿದವು. ಆದರಿಂದ ಕೃಷ್ಣಗ್ರಹಗೃಹೀತಾತ್ಮರಾದ ನಾರದರು ದಿಕ್ಕುಗಳನ್ನೇ ಮರೆತು ಭಕ್ತ್ಯುದ್ರೇಕದಿಂದ ಮನಬಂದಂತೆ ಕುಣಿದಾಡಹತ್ತಿದರು. ಅವರ ಕಣ್ಣುಗಳಲ್ಲಿ ಭಕ್ತಿಪಾರವಶ್ಯದಿಂದ ಆನಂದಾಶ್ರು ನಕ್ಷತ್ರಗಳಂತೆ ಹೊಳೆಯುತ್ತಾ ಬಿಂದು ಬಿಂದುವಾಗಿ ಹರಿಯತೊಡಗಿತು. ಮಕ್ಕಳಂತೆ ಜಿಗಿದಾಡುತ್ತಾ ಕಿಲಕಿಲನೆ ನಗುತ್ತಾ ಪ್ರಹ್ಲಾದರನ್ನು ಆಲಿಂಗಿಸಿ ಶ್ರೀಕೃಷ್ಣನು ಹೇಳಿದ ರಹಸ್ಯವಾರ್ತೆಯನ್ನರುಹುತ್ತಾ "ಪ್ರಹ್ಲಾದ! ನಾವೆಷ್ಟು ಧನ್ಯರೋ! ವತ್ಸ, ಕೇಳೋ ಶ್ರೀಕೃಷ್ಣನು ಹೇಳಿದ ಮಾತನ್ನು! ನಿನಗೆ ಗೊತ್ತೆ? ಶ್ರೀಹರಿಯು ಜ್ಞಾನಕಾರ್ಯಕ್ಕಾಗಿ ಜಗತ್ಪ್ರಾಣನನ್ನು ಭೂಮಿಯಲ್ಲವತರಿಸಲು ಕಳುಹುವನಂತೆ! ಆ ವಾಯುದೇವನ ಸೇವೆಗೆ ನಾನು ನೀನು ಇಬ್ಬರೂ ಅವತರಿಸಬೇಕಂತೆ! ಇದರಕ್ಕಿಂತ ಆನಂದ ಬೇರಾವುದಿದೆ ಪ್ರಹ್ಲಾದ? ನಿಜವಾಗಿ ನಾವು ಭಾಗ್ಯಶಾಲಿಗಳಲ್ಲವೇನಪ್ಪಾ! ಶ್ರೀಕೃಷ್ಣನೇ ನಾವಿಬ್ಬರೂ ಅವತರಿಸಿ ತನ್ನ ಮತ್ತು ವಾಯುದೇವನ ಸೇವೆಮಾಡಬೇಕೆಂದು ಆಜ್ಞಾಪಿಸಿದ್ದಾನೆ! ಆ ಪ್ರಭುವಿಗೆ ಭಕ್ತರಲ್ಲಿ ಅದೆಷ್ಟು ವಾತ್ಸಲ್ಯ, ತಮ್ಮವರಲ್ಲಿ ಅದೇನು ಕಾರುಣ್ಯವಪ್ಪಾ" ಎಂದು ಆನಂದ ಉತ್ಸಾಹಗಳಿಂದ ಬಡಬಡನೆ ಹೇಳಿಬಿಟ್ಟರು.[3]

ಗುರುಗಳ ಮಾತನ್ನು ಕೇಳಿ ಪ್ರಹ್ಲಾದರಾಜರಿಗೆ ಮೈಪುಳಕಿಸಿತು. ಆನಂದ ತುಂದಿಲರಾಗಿ ಪ್ರಹ್ಲಾದರು ನಾರದರಲ್ಲಿ ವಿಜ್ಞಾಪಿಸಿದರು–"ಏನೆಂದಿರಿ ಗುರುದೇವ! ಶ್ರೀಹರಿಯ ಸೇವೆಗೆ ಕಲಿಯುಗದಲ್ಲಿ ನಾನು ನೀವೂ ಅವತರಿಸಬೇಕೆ? ಶ್ರೀಕೃಷ್ಣನೇ ಹೀಗೆ ಅಪ್ಪಣೆ ಕೊಡಿಸಿದನೆ? ಆಹಾ ಸ್ವಾಮಿ, ನಾವೆಂಥ ಪುಣ್ಯಶಾಲಿಗಳು! ಆ ಮಹಾಮಹಿಮನನ್ನು ಮತ್ತೆ ಸೇವಿಸುವ ಭಾಗ್ಯ ನಮಗೆ ದೊರಕುವುದೇ? ಇಂತಹ ಪರಮಸಂತೋಷಕರವಾರ್ತೆಯನ್ನರುಹಿದ ನಿಮಗೆ ಇಕೋ, ನನ್ನ ಅನಂತ ವಂದನೆಗಳು!" ಎಂದು ಗುರುಗಳಿಗೆ ನಮಸ್ಕರಿಸಿದರು.

---

3. ದಿಕ್ಕುಗಳ ಮರೆದು ಧಿಗಿಧಿಗಿಯೆಂದು ಜಿಗಿದಾಡೆ
ಉಕ್ಕಿದವು ಕಣ್ಣೀರಾನಂದದಾಶ್ರುಧಾರೆ ತಾ-
ರಕ್ಕಿಯಂದದಿ ಬಿಂದುಗಳುದುರುತ್ತಲಿರೆ ದೇವಕ್ಕಿನಂದನನಂದುದ |
ನಕ್ಕು ಕಿಲ ಕಿಲ ರಹಸ್ಯಗಳನುಚ್ಚರಿಸುತಲಿ
ತಕ್ಕೈಸಿ ತಿಳುಹಿದನು ಮುಂದಣಾಗಮನವನು
ಇಕ್ಕೆಲರು ಸಹಪೊಂದಿ ಜನಿಸುತಿಹ ವೃತ್ತಾಂತವಕ್ಕಟಾ ಏನೆಂಬೆನು ‖ ೪ ‖
—ಶ್ರೀ ವಿಜಯದಾಸರು

ಆಗ ನಾರದ ಮುನಿಗಳು ಕಿಲಕಿಲನೆ ನಕ್ಕು ಆನಂದಪರವಶರಾಗಿ "ಪ್ರಹ್ಲಾದ ಇನ್ನೊಂದು ವಿನೋದ–ಸ್ವಾರಸ್ಯಕರ ವಿಚಾರವನ್ನು ಶ್ರೀಕೃಷ್ಣ ಹೇಳಿದ್ದಾನೆ. ಅದೇನು ಗೊತ್ತೆ ? ಕಲಿಯುಗದಲ್ಲಿ ನಾನು ನಿನ್ನ ಶಿಷ್ಯನಾಗಿ ಜನಿಸಬೇಕಂತೆ ! ವತ್ಸ ! ಶ್ರೀಹರಿಯ ಸಂಕಲ್ಪ, ಲೀಲಾವಿಲಾಸಗಳೆಷ್ಟು ವೈಚಿತ್ರ್ಯಪೂರ್ಣ ನೋಡಿದೆಯಾ ?" ಎನಲು ಪ್ರಹ್ಲಾದರು ಆಶ್ಚರ್ಯಚಕಿತರಾಗಿ "ಗುರುದೇವ ! ಇದೇನು ಹೇಳುತ್ತಿರುವಿರಿ ? ನಿಮ್ಮ ಅನುಗ್ರಹೋಪಜೀವಿಯೂ, ಶಿಷ್ಯನೂ ಆದ ನನಗೆ ನೀವು ಶಿಷ್ಯರಾಗುವುವೆ ? ಇದೆಂದಿಗೂ ಆಗದ ಮಾತು ಸ್ವಾಮಿ" ಎಂದು ಹೇಳಿದರು.

ನಾರದರು ನಸುನಕ್ಕು "ವತ್ಸ ! ಶ್ರೀಹರಿಯ ಸಂಕಲ್ಪ, ಇಚ್ಛೆಗಳಿಗೆ ವಿರುದ್ಧವಾಗಿ ವರ್ತಿಸಲು ನಾವು ಸಮರ್ಥರೆ ? ಅವನ ಇಚ್ಛೆಯಂತೆ ನಡೆಯುವುದೊಂದೇ ನಮ್ಮ ಧರ್ಮ, ಕರ್ತವ್ಯ ! ಕೇಳು ಪ್ರಹ್ಲಾದ ! ಕುರುಕ್ಷೇತ್ರ ಯುದ್ಧದಲ್ಲಿ ವೃಕೋದರನ ಗದಾ ಪ್ರಹಾರದಿಂದ ಅಸುನೀಗುವಾಗ ಅವರಲ್ಲಿ ನೀನು ಬೇಡಿದ ವರವು ನೆನಪಿದೆಯೋ ? ವೈದಿಕ ಮಾರ್ಗವನ್ನು ಅನುಸರಿಸಿ ಭಗವಂತನಿಗೆ ಪ್ರಿಯವಾದ ಜ್ಞಾನಕಾರ್ಯದಲ್ಲಿ ಸೇವೆ ಸಲ್ಲಿಸಲು ಕಲಿಯುಗದಲ್ಲಿ ಅವತರಿಸುವ ಶ್ರೀ ವಾಯುದೇವರ ಮತಾನುಯಾಯಿಯಾಗಿ ಅವರ ಭಕ್ತನಾಗಿ, ಪೂಜಕನಾಗಿ ಸೇವೆಮಾಡುವ ಭಾಗ್ಯವನ್ನು ಕರುಣಿಸಬೇಕೆಂದು ನೀನು ಬೇಡಿದೆಯಲ್ಲವೇ ? ಆಗ ಭೀಮಸೇನದೇವರು ನಿನ್ನ ಭಕ್ತಿಗೆ ಮೆಚ್ಚಿ ಅದರಂತೆ ವರವನ್ನು ಅನುಗ್ರಹಿಸಿದ್ದನ್ನು ಜ್ಞಾಪಿಸಿಕೋ ಪ್ರಹ್ಲಾದ ! ಈಗ ನಾವಿಬ್ಬರೂ ಕಲಿಯುಗದಲ್ಲಿ ಭಾರತಾವನಿಯಲ್ಲಿ ಅವತರಿಸಿ ಶ್ರೀ ಹರಿ-ವಾಯುಗಳಸೇವೆಮಾಡುವ ಕಾಲ ಸನ್ನಿಹಿತವಾಗಿದೆ[1] ಶ್ರೀಕೃಷ್ಣನ ಆಣತಿಯನ್ನೂ, ಈ ವಿಚಾರವನ್ನೂ ನಿನಗೆ ತಿಳಿಸಲೆಂದೇ ನಾನು ಇಲ್ಲಿಗೆ ಬಂದಿದ್ದೇನೆ. ಕುಮಾರ ! ನಿನ್ನ ಮುಂದಿನ ಅವತಾರಕ್ಕೆ ಸಿದ್ಧನಾಗು! ಪ್ರಹ್ಲಾದ, ನಿನಗೆ ಮಂಗಳವಾಗಲಿ, ಮತ್ತೆ ಭೂಲೋಕದಲ್ಲಿ ಗುರುಶಿಷ್ಯರಾಗಿ (ನಸು ನಕ್ಕು) ಈಬಾರಿ ನೀನು ಗುರುವಾಗಿ- ನಾನು ಶಿಷ್ಯನಾಗಿ ಸೇರೋಣ" ಎಂದು ಹೇಳಿ ಪ್ರಹ್ಲಾದರನ್ನು ಆಶೀರ್ವದಿಸಿ ಹರಿವರ್ಷ ಖಂಡದಿಂದ ನಾರದರು ತೆರಳಿದರು.

---

ವೃಕೋದರನಿಂದ ನೊಂದು ದೇಹವನ್ನು ಬಿಡುವಾಗ ಬಾ—
ಹ್ಲೀಕರಾಯನಾಗಿ ಪುಟ್ಟಿದ್ದ ಪ್ರಹ್ಲಾದ ತಾ
ಸುಕುತಿಯಿಂದಲಿ ಪೊಗಳಿ ವರವ ಬೇಡಿವನು ವೈದಿಕಮಾರ್ಗವನ್ನೇ ಪಿಡಿದು ।
ಉಕುತಿಯನು ಸಾಧಿಸುತ ಕಲಿಯೊಳಗೆ ನಿಮ್ಮಪೂ—
ಜನಕನಾಗಿ ಬಾಳುವೆನು ಎಂದು ತಲೆ ಬಾಗಿದನು
ಭಕುತಿಗೆ ಮೆಚ್ಚುತಲೈಸಲೆಂದಮಾತಿಂದು ಪ್ರಕಟವಾಯಿತು ಧರೆಯೊಳು ॥ ೫ ॥
ಶ್ರೀ ವಿಜಯದಾಸರು.

ಶ್ರೀಪ್ರಹ್ಲಾದರಾಜರು ನಾರದರ ವಚನ, ಭೀಮಸೇನದೇವರ, ಶ್ರೀಕೃಷ್ಣನ ಆಜ್ಞೆಗಳನ್ನು ಮತ್ತೆ ಮತ್ತೆ ಸ್ಮರಿಸುತ್ತಾ ಹಿರಿಹಿರಿ ಹಿಗ್ಗುತ್ತಾ ತಮ್ಮ ಅವತಾರ ಕಾಲವನ್ನು ಪ್ರತೀಕ್ಷಿಸುತ್ತಾ ಹರಿವರ್ಷಖಂಡದಲ್ಲಿ ವಿರಾಜಿಸಿದರು.

## ೧. ಶ್ರೀವೇದವ್ಯಾಸರದೇವರ ಅಭಯ

ಜಗತ್ತಿಗೇ ಪರಮಪಾವನವೆನಿಸಿದ ತತ್ತ್ವಜ್ಞಾನಕ್ಕೆ ಮಾತೃಸ್ಥಾನವಾದ, ಸಂಸ್ಕೃತಿಗಳ ಸುಮನೋಹರ ಉದ್ಯಾನವೆನಿಸಿದ, ಸನಾತನಧರ್ಮ, ವಿದ್ಯೆ, ಕಲೆ, ಸಭ್ಯತೆಗಳ ಮಂಗಳಧಾಮವಾದ, ಸಾತ್ವಿಕತೆಯ ಮೂರ್ತಸ್ವರೂಪವಾದ ಬದರಿಕಾಶ್ರಮದ ಸುಕ್ಷೇತನೆಲೆಯಲ್ಲಿ ಹಿಮಾಲಯ ನಿವಾಸಿಗಳಾದ ಕೆಲತಾಪಸರು ಪಯಣ ಮಾಡುತ್ತಿದ್ದಾರೆ. ಪವಿತ್ರಾತ್ಮರಾದ ಅವರು ತಮ್ಮ ಕಾಂತಿಯಿಂದ ದಿಗಂತವನ್ನು ಬೆಳಗಿಸುತ್ತಾ, ತಮ್ಮ ತಪಃಪ್ರಭಾವದಿಂದ ಚತುರ್ದಶಲೋಕಗಳನ್ನು ಕರತಲಾಮಲಕ ಮಾಡಿಕೊಂಡ ಮಹಾತ್ಮ್ಯವುಳ್ಳವರಂತೆ ಕಂಗೊಳಿಸುತ್ತಿದ್ದಾರೆ. ಬದರೀಯಾತ್ರೆಯನ್ನು ಕೈಗೊಂಡಿರುವ ಅವರು ಅಲ್ಲಿನ ನೈಸರ್ಗಿಕ ಸೌಂದರ್ಯವನ್ನು ಕಂಡು ಪರಮಾತ್ಮನ ಸೃಷ್ಟಿವೈಚಿತ್ರ್ಯದ ವೈವಿಧ್ಯವನ್ನು ಕೊಂಡಾಡುತ್ತಾ ಬರುತ್ತಿರುವಾಗ ಅಲ್ಲಿ ಒಂದು ಸರೋವರವನ್ನು ಕಂಡರು.

ಸಕಲ ಲೋಕಗಳನ್ನೂ ಪಾವನಗೊಳಿಸಲು ಸಮರ್ಥವಾಗಿದ್ದು, ಅಮೃತಸರಸ್ಸಿನಂತಿರುವ ಆ ಸರೋವರದ ಹೆಸರು"ಅಮೃತಧಾರಾ" ಎಂದು. ಅದರ ಗಾಂಭೀರ್ಯ ಅವರ್ಣನೀಯ. ಆ ಸರೋವರವು ಭೂದೇವಿಯ ನಾಭಿಕಮಲದಂತೆಯೂ! ಆರ್ಯಾವರ್ತದ ತಿಲಕಮಣಿಯಂತೆಯೂ, ವನದೇವಿಯ ನೀಲಗನ್ನಡಿಯಂತೆಯೂ ಶೋಭಿಸುತ್ತಿತ್ತು. ಅದು ವನಶ್ರೇಣೀವಿರಾಜಿತವಾಗಿರುವುದರಿಂದ ವನಮಾಲಾಧಾರಿಯಾದ ವಾಸುದೇವನಂತೆಯೂ, ಕನ್ನೈದಿಲೆಪುಷ್ಪಗಳಿಂದ ರಂಜಿತವಾಗಿದ್ದುದರಿಂದ ಭೂಭಾರವನ್ನು ಧರಿಸಿದ ಆದಿಶೇಷನಂತೆಯೂ, ರಾರಾಜಿಸುತ್ತಿತ್ತು. ಆ ಸರಸ್ಸಿನಲ್ಲಿರುವ ಕಮಲಗಳಲ್ಲಿ ಕುಳಿತಿರುವ ಹಂಸಪಕ್ಷಿಗಳನ್ನು ಅವಲೋಕಿಸಿದರೆ ಪದ್ಮಾಸನಾಸೀನರಾದ ಪರಮಹಂಸಸಮೂಹದಿಂದ ರಾಜಿಸುವ ಕಮಲಾಸನರಾದ ಬ್ರಹ್ಮದೇವರ ಸಭೆಯಂತೆ ಕಾಣುತ್ತಿತ್ತು.

ಇಂಥ ಸರೋವರದ ಪ್ರದೇಶವೊಂದರಲ್ಲಿ ಸನ್ಯಾಸಿಗಳು ಅವಗಾಹನ (ಸ್ನಾನ) ಮಾಡುತ್ತಿರುವಾಗ ಮೊಗ್ಗಿನಂತೆ ನೀರ್ಗುಳ್ಳೆಗಳು ಮೇಲೇಳುತ್ತಿರುವುದು ಸಂಚಿತ ಪಾಪ ಪರಂಪರೆಯಂತೆ ತೋರುತ್ತಿತ್ತು. ಋಷಿ-ಮುನಿಗಳ ಮೃತ್ತಿಕಾಸ್ನಾನದಿಂದ ನೀರುಕದಡಿ ಕೆಸರಾಗಿತ್ತು.ಅಲ್ಲಿನ ಪಕ್ಷಿಗಳ ಕಲಕಲನಿನಾದವು ಆ ಸರೋವರದ ಮೋಕ್ಷಪ್ರದಾನದಕ್ಷಬಿರುದಾವಳಿಯ ಘೋಷದಂತಿತ್ತು. ಇಂತು ಎಲ್ಲೆಮೀರಿದ ಅಪರಿಮಿತ ಮಹಿಮೋಪೇತವಾದ ಆ ಅಮೃತಧಾರಾ ಸರೋವರವನ್ನು ತಾಪಸರು ಆನಂದದಿಂದಿ

ಕ್ಷಿಸುತ್ತಾ, ಅದರ ಉತ್ತರಭಾಗದಲ್ಲಿರುವ, ಧರೆಗಿಳಿದುಬಂದ ಬ್ರಹ್ಮದೇವನ ಆವಾಸ ಸ್ಥಾನದಂತಿರುವ ಒಂದು ಮಹಾಶ್ರಮವನ್ನು ನೋಡಿದರು.

ಆ ಆಶ್ರಮದಲ್ಲಿ ಸಹಜದ್ವೇಷಾದಿಗಳು ಪ್ರಾಣಿಗಳಿಗಿರಲಿಲ್ಲ. ಅಲ್ಲಿನ ಮೃಗ ಪಶು-ಪಕ್ಷಿಗಳ ಸ್ನೇಹವು ಸರ್ವರನ್ನೂ ಬೆರಗುಗೊಳಿಸುತ್ತಿತ್ತು. ಆ ಆಶ್ರಮವು ನಿಸರ್ಗ ರಮಣೀಯವಾದ, ತನ್ನ ಸಹಜ ಸೌಂದರ್ಯದಿಂದ ಸಪ್ತರ್ಷಿಗಳ ಆವಾಸ ಸ್ಥಾನವಾದ ಮೇರುಪರ್ವತವನ್ನು ಧಿಕ್ಕರಿಸುತ್ತಿತ್ತು. ಅಲ್ಲಿ ಮೃದುವಾದ ದರ್ಭಾಸನ ದಲ್ಲಿ ಕುಳಿತು ಋಷಿಕುಮಾರರು ವೇದಪಾರಾಯಣ ಮಾಡುತ್ತಿದ್ದರು. ಅವರ ವೇದಾ ಧ್ಯಯನ ಕಲರವವು ದಿಙ್ಮಂಡಲವನ್ನೇ ಗಡಚಿಕ್ಕಿದಂತಿತ್ತು, ಇಂತಹ ತಾಪಸರಿಂದ ಅಲಂಕೃತವಾದ ಆ ಆಶ್ರಮವು ಮನೋಹರವಾಗಿದ್ದಿತು. ಅಲ್ಲಿ ಅನೇಕ ಗೃಹಸ್ಥರು ಪರ್ಣಕುಟಿಗಳಲ್ಲಿ ವಾಸಿಸುತ್ತಾ ವೇದಾಧ್ಯಯನ, ಅಗ್ನ್ಯುಪಾಸನೆ, ದೇವಪೂಜಾ, ವೈಶ್ವದೇವ, ಬಲಿಹರಣಾದಿ ದೇವತಾಕಾರ್ಯಗಳನ್ನು ಪೂರೈಸಿ, ಅಭ್ಯಾಗತರನ್ನು ಸತ್ಕರಿಸಿ ಆಶೀರ್ವಾದ ಪಡೆಯಲು ಅವರನ್ನು ನಿರೀಕ್ಷಿಸುತ್ತಾ ನಿಂತಿದ್ದರು. ಅಲ್ಲಿ ಅನೇಕ ಕಡೆ ಪುರಾಣ, ಹರಿಕಥಾ ಕಾಲಕ್ಷೇಪ ನಡೆದಿದ್ದು ಬಹುಜನರು ಕೇಳುತ್ತಾ ಕುಳಿ ತ್ತಿದ್ದರು. ಆ ಆಶ್ರಮವು ದರ್ಶನಮಾತ್ರದಿಂದ ಪಾಪಪರಿಹಾರಕವಾಗಿದ್ದಿತು. ಹೆಚ್ಚು ಹೇಳುವುದೇನಿದೆ ? ಅನನ್ಯ ಸಾಧಾರಣವಾದ ತನ್ನ ಅಪರಿಮಿತಾಶ್ಚರ್ಯ ಗುಣಗಳಿಂದ ಚತುರ್ಮುಖನನ್ನೂ ವಿಸ್ಮಯಗೊಳಿಸುವ ಆಶ್ರಮವೇ ಅದಾಗಿತ್ತು.

ಅಲ್ಲೊಂದು ದೊಡ್ಡ ಆಲದಮರವಿತ್ತು. ಸೊಂಪಾಗಿ ಬೆಳೆದು ವಿಸ್ತಾರವಾದ ಎಲೆಗಳಿಂದ ಕೂಡಿ ಎಲ್ಲ ದಿಕ್ಕುಗಳಲ್ಲಿಯೂ ವ್ಯಾಪಿಸಿದ್ದ ಅದು ಪ್ರೇಕ್ಷಣೀಯವಾಗಿತ್ತು. ಆ ವೃಕ್ಷದ ಅಡಿಯಲ್ಲಿ ಮನೋಹರ ಚಂದ್ರಚೂಡನಂತೆ ಸೇವಿಸಲ್ಪಡುತ್ತಿರುವ ತೇಜೋಮೂರ್ತಿಯನ್ನು ಯಾತ್ರಾರ್ಥಿಗಳು ನೋಡಿದರು.

ವಿಸ್ತಾರವಾದ ಆ ವೃಕ್ಷದ ಬುಡದಲ್ಲಿ ಗೋಮಯಲಿಪ್ತವಾಗಿರುವುದರಿಂದ ಶ್ಯಾಮಲವರ್ಣೋಪೇತವಾದ ಗಿಳಿಮರಿಗಳಂತಿರುವ ಮೃದುವಾದ, ಪಚ್ಚೆರತ್ನ ನಿರ್ಮಿತವಾದಂತೆ ಕಂಗೊಳಿಸುವ ಮೂಲವೇದಿಕೆಯಲ್ಲಿ ನೂರಾರು ಚಿರತೆ, ಸಾರಂಗ, ಕೃಷ್ಣಮೃಗಗಳ ಚರ್ಮಗಳನ್ನು ಹಾಸಿದ್ದು, ಮೆತ್ತನೆಯ ದರ್ಭಾಸನದಲ್ಲಿ ಅತ್ಯಂತ ತೇಜಸ್ವಿಗಳಾದ ಮಹಾನುಭಾವರೊಬ್ಬರು ಕುಳಿತ್ತಿದ್ದರು.

ಶುಭಮತಿಗಳಾದ ಅವರು ತಮ್ಮ ಕರದಲ್ಲಿ ತೆರೆದಪುಟಗಳುಳ್ಳ ತಾಲಾಓಲೆಯ ಗ್ರಂಥವನ್ನು ಹಿಡಿದಿದ್ದರು. ಮುಖಕಮಲದಲ್ಲಿ ವಿಹರಿಸುವ ದುಂಬಿಗಳಂತೆ ಅವರ ನೇತ್ರಗಳು ಹೊಳೆಯುತ್ತಿದ್ದವು. ಅವು ಉಪನಿಷನ್ಮಥಿತಾರ್ಥ ನಿಶ್ಚಯವನ್ನು ಸಮರ್ಥಿಸುತ್ತಿದ್ದವು. ಸೂರ್ಯನಂತೆ ಅವರು ಬೆಳಗುತ್ತಿದ್ದರು. ಮುಖದಲ್ಲಿ ಮನೆ ಮಾಡಿದ ಜ್ಞಾನದೀಪಿಕೆಯ ಜ್ವಾಲೆಯಂತೆ, ಮಾಗಿದ ಕರವೀರಪತ್ರದಂತೆ ಹೊಂಬ ಣ್ಣದ ಅವರ ನಾಸಿಕವು ಪರಿಶೋಭಿಸುತ್ತಿತ್ತು. ಜಟೆಯೆಂಬ ಲತಾಗುಲ್ಮಕ್ಕೆ ಮೂಲ

ದಂತಿರುವ ಕಮಲಸೌಂದರ್ಯಲಕ್ಷ್ಮಿಗೆ ಬಂಗಾರದ ತೂಗುಯ್ಯಾಲೆಯಂತೆ ಇರುವ, ಯೋಗಶಾಸ್ತ್ರವೆಂಬ ಸಂಪಿಗೆಗೆ ಎಳೆಮಗ್ಗನಂತಿರುವ ತೆಳುವಾದ ಗೋಪಿಚಂದನರಸ ಕಾಂತಿಯಿಂದ ಪ್ರಕಾಶಮಾನವಾದ ಊರ್ಧ್ವಪುಂಡ್ರದಿಂದ ಸಿಂಗರಿಸಲ್ಪಟ್ಟ ಅವರ ಫಾಲ ಪ್ರದೇಶವು ಶೋಭಾಯಮಾನವಾಗಿದ್ದಿತು.

ಸದಾ ಪ್ರವಹಿಸುವ ಕಾರುಣ್ಯ ಝರಿಯ ಹೊಲನಂತೆ ತಮ್ಮಿಂದ ಅಭಿನ್ನ ರಾದ ರಾಮ–ಕೃಷ್ಣಾದ್ಯನೇಕಾವತಾರ ರೂಪ ಮೂಲಕಾರಣವುಳ್ಳ, ಹರಿಸ್ಮರಣ ನಿರ್ಣಾಯಕ ಸಾಂದ್ರನೋಟ ಮತ್ತು ಒತ್ತಿಹೇಳುವಿಕೆಯಿಂದ ಅರುಣೀಕೃತಗಳಾದ, ವಿಷಯಸನ್ಯಾಸದಿಂದ ಸ್ವೀಕೃತ ಕಾಷಾಯವಸನಗಳಂತಿರುವ ಕಣ್ಣುಗಳಿಂದ ಅವರು ಅತ್ತಿತ್ತ ನೋಡುತ್ತಿದ್ದರು. ಕಿಕ್ಕಿರಿದು ನೆರೆದ ಸುಜನರಿಗವರು ಶಾಸ್ತ್ರೋಪದೇಶ ಮಾಡುತ್ತಿದ್ದರು. ಅವರು ಧರಿಸಿದ್ದ ಯಜ್ಞೋಪವಿತವು ಹೃದಯ ಭಾಗದಲ್ಲಿ ಶೋಭಿಸುತ್ತಿತ್ತು. ತೇಜಃಪುಂಜ ಯಜ್ಞೋಪವೀತ ಸಂತತಿಗಳಿಂದ ವಿಭಾಗಿಸಲ್ಪಟ್ಟ ಆ ಮಹನೀಯರ ವಕ್ಷಸ್ಥಳದ ಸೊಬಗು ವರ್ಣಿಸಲಸದಳ, ಆಚ್ಛಾದಿತ ಕೃಷ್ಣಾಜಿನ ಕಾಂತಿಯಿಂದ ಅವರ ಕಟಿ ಪ್ರದೇಶವು ರಮಣೀಯವಾಗಿದ್ದಿತು. ಅವರ ಪಾರ್ಶ್ವ ದಲ್ಲಿ ಜಲಪೂರ್ಣ ಕಮಂಡಲು ಕಂಗೊಳಿಸುತ್ತಿತ್ತು. ಮಹಾತಪಸ್ವಿಗಳಾದ ಅವರು ಸದಾ ಶುಕಗಳಿಂದ ಸೇವಿತವಾದ ದಾಳಿಂಬೆ ತೋಟದಂತೆ ಶುಕಮುನಿಗಳಿಂದ ಸೇವಿತ ರಾಗಿದ್ದರು.

ಅವರು ಪ್ರಕೃಷ್ಟಕಾಂತಿಯಿಂದ ಮನೋಹರರಾಗಿದ್ದರು. ಅರಳಿದ ಕಮಲ ಸದೃಶಕಣ್ಣುಗಳು, ಮೇಲೆದ್ದು ಕಾಣುವ ನಾಸಾಪುಟಗಳು ಮತ್ತು ಪ್ರಕಟಗೊಳ್ಳುವ ಮುಖಪ್ರಸಾದದಿಂದ ಮಧುರರಾದ, ಷಡ್ಗುಣೈಶ್ವರ್ಯ ಸಂಪನ್ನರಾದ ಶ್ರೀವೇದ ವ್ಯಾಸ ದೇವರನ್ನು ಕಂಡು ಸಮ್ಪ್ರರಾದ ಯಾತ್ರಾರ್ಥಿ ಋಷಿಮುನಿಗಳೆಲ್ಲರೂ ಏಕ ಕಾಲದಲ್ಲಿ ಭಕ್ತಿ ಶ್ರದ್ಧಾದಿಗಳಿಂದ ಸಮಸ್ಕರಿಸಿದರು.

ಆ ತಾಪಸರಿಗೆ ಶ್ರೀಬಾದರಾಯಣರ ಶಿಷ್ಯಜನರು ಆಸನಾದಿಗಳನ್ನಿತ್ತು ಸತ್ಕರಿಸಿದರು. ಅದರಿಂದ ಸಂತುಷ್ಟರಾದ ಆ ತಾಪಸರು ಮೇಲೆದ್ದು ನಿಂತರು. ಅವರನ್ನು ಕರುಣಾಮೃತ ಸಂತತಿಯಂತಿರುವ ತಮ್ಮ ಅಪಾಂಗವೀಕ್ಷಣಗಳಿಂದ ಪವಿತ್ರಗೊಳಿಸುತ್ತಾ ಶ್ರೀವೇದವ್ಯಾಸಮುನಿಗಳು ಮಧುರಸ್ಯಂದಿಚನಗಳಿಂದ ಮಾತ ನಾಡಿದರು.

**ಶ್ರೀವೇದವ್ಯಾಸರು :** ಎಲೈ ತಪೋನಿಧಿಗಳೇ, ಬಹುಕಾಲದ ಮೇಲೆ ಬಂದಿರು ವಿರಿ. ನಿಮಗೆ ಸ್ವಾಗತ. ಕುಶಲದಿಂದಿರುವಿರಾ ? ನಿಮ್ಮ ನಿಯಮ ಕರ್ಮಗಳು ನಿರ್ವಿಘ್ನವಾಗಿ ನೆರವೇರುತ್ತಿರುವುದಷ್ಟೆ ? ನಿಮ್ಮ ಆಶ್ರಮಗಳಲ್ಲಿ ತರುಸಮೂಹ ಗಳಿಂದುಂಟಾಗಬಹುದಾದ ದಾವಾಗ್ನಿಯು (ಕಾಡುಗಿಚ್ಚು) ನಿಮ್ಮ ತಪೋಭೂಮಿ ಯನ್ನು ಪೀಡಿಸುತ್ತಿಲ್ಲವಷ್ಟೇ ? ಅತಿಥಿ ಅಭ್ಯಾಗತರ ಸೇವೆ ಸರಿಯಾಗಿ ಜರುಗಿ,

ಅವರು ಸಂತುಷ್ಟರಾಗುತ್ತಿರುವರೇ ? ನಿಮ್ಮಲ್ಲಿ ವಿಷ್ಣುಭಕ್ತಿಯು ದೃಢವಾಗಿ ವರ್ಧಿಸುತ್ತಿರುವುದೇ ?

**ಋಷಿಮುನಿಗಳು :** ಹೇ ಗುಣಪೂರ್ಣನಾದ ಪರಮಾತ್ಮಾ, ನಿಮ್ಮ ದಯಾ ತರಂಗಿಣೀ ಪೋಷಿತ ಕೇದಾರಗಳಂತಿರುವ ನಮಗೆಲ್ಲಿಯ ಅಮಂಗಳವು ? ಆದರೆ, ಸ್ವಾಮಿ, ಭಾಗವತಾಗ್ರಣಿಗಳಾದ ಪೂಜ್ಯನಾರದರು "ಪ್ರಪಂಚವು ಪಾಪಿಷ್ಠರಿಂದ ಭೂಯಿಷ್ಟವಾಗಿದೆ" ಎಂದು ಇತ್ತೀಚೆಗೆ ಅವರ ದರ್ಶನವಾದಾಗ ಹೇಳಿದರು. ಇದರಿಂದ ಮನಸ್ಸಿಗೆ ವ್ಯಾಕುಲವಾಗಿದೆ. ದೇವದೇವ ! ಸರ್ವಜ್ಞರಾದ ತಮಗೆ ತಿಳಿದಿರುವುದನ್ನೇ ನಾವು ವಿಜ್ಞಾಪಿಸುತ್ತಿದ್ದೇವೆ. ಮಹಾಪ್ರಭು, ಹಿಂದೊಮ್ಮೆ ಕೆಲ ತಪಸ್ವಿಗಳು ತಮ್ಮನ್ನು ಯುಗಧರ್ಮಗಳ ವಿಚಾರವಾಗಿ ಪ್ರಶ್ನಿಸಿದಾಗ "ಕಲಿಯುಗದ ಪ್ರಥಮ ಪಾದದಲ್ಲಿಯೇ ಪಾಷಂಡಿಗಳು ಪ್ರಪಂಚದ ಧರ್ಮಸಾಗರವನ್ನು ಬಿರುಗಾಳಿಯಂತೆ ವಿಶ್ವಾಸಯೋಗ್ಯವೇಷಧರಿಸಿ ಕಲಕುತ್ತಾರೆ". ಎಂದು ಭವಿಷ್ಯನುಡಿದಿದ್ದಿರಿ. ಮಹಾಮಹಿಮರೇ, ಆದರೂ ಈಗಲೇ ಎಳೆನಾಗರದ ವಿಷದಂತೆ, ಅನೇಕ ಸಾಯಂಕಾಲೀನ ತಮಸ್ಸಿನಂತೆ, ಪ್ರಳಯಾಗ್ನಿಯ ಧೂಮದಂತೆ,ಅಧಾರ್ಮಿಕ ಅತಾತ್ವಿಕವಾದವು ಪ್ರಬಲಿಸಿ ವಿಜೃಂಭಿಸಲು ಕಾರಣವೇನು ? ಇದು ಯಾವಾಗ ಶಾಂತವಾಗುವುದು ? ಅಪ್ಪಣೆಕೊಡಿಸಬೇಕೆಂದು ಪ್ರಾರ್ಥಿಸುವೆವು.

ಭಗವಾನ್ ಶ್ರೀವೇದವ್ಯಾಸರು ಚಿಂದುಟಿಯಲ್ಲಿ ಕಿರುನಗೆಯನ್ನು ಹೊರಸೂಸುತ್ತಾ ಹೀಗೆ ಅಪ್ಪಣೆ ಕೊಡಿಸಿದರು : "ಮುನಿಪುಂಗವರೇ, ಪರಮಮಂಗಳಕರವಾದ ನಮ್ಮ ಚರಿತ್ರೆಯನ್ನು ಪಾಷಂಡಿಗಳು ಕಾಂತಿಗೆಡಿಸುವರೆಂದು ಭಯಾರ್ತರಾದ ನೀವು ಸಮಯೋಚಿತ ಪ್ರಶ್ನೆಯನ್ನೇ ಕೇಳಿರುವಿರಿ. ಯೋಚಿಸದಿರಿ. ಹಿಂದೊಮ್ಮೆ, ಪ್ರಾಣಾಪಹಾರಕ ದೈತ್ಯಾಧಿಪತಿಯಾದ ಮಣಿಮಂತನು ವಾಯುಪುತ್ರರಾದ ಭೀಮಸೇನ ದೇವರೊಡನೆ ಸೆಣಸಿ, ಯುದ್ಧದಲ್ಲಿ ಪರಾಜಿತನಾದನು. ಅದರಿಂದ ನೊಂದ ಮಣಿಮಂತನು ಜಗದ್ಗುರುಗಳಾದ ಶ್ರೀರುದ್ರದೇವರನ್ನು ಕುರಿತು ಉಗ್ರತಪಸ್ಸುಮಾಡಿ, ಪ್ರತ್ಯಕ್ಷರಾದ ಉಮಾಪತಿಗಳನ್ನು ಪೂಜಿಸಿ ಸಂತೋಷಪಡಿಸಿದನು. ಸುಪ್ರೀತರಾದ ಚಂದ್ರಶೇಖರರು : "ದೈತ್ಯವರ ! ನಿನ್ನ ತಪಸ್ಸಿನಿಂದ ಹರ್ಷಿತರಾಗಿದ್ದೇವೆ. ನೀನಗೇನು ವರಬೇಕೋ ಪ್ರಾರ್ಥಿಸು, ಅನುಗ್ರಹಿಸುವೆವು" ಎಂದರು, ಆಗ ಆ ದೈತ್ಯನು ಅಮಿತಬಲನೂ, ಜಗತ್ಪ್ರಾಣನೂ, ವಾಯುದೇವನ ಅವತಾರನೂ ಆದ ಭೀಮಸೇನರನ್ನು ಜಯಿಸಲಿಚ್ಛಿಸಿ "ಭೀಮಸೇನದೇವರನ್ನು ಜಯಿಸುವಂತೆ ನನಗೆ ವರವನ್ನು ಅನುಗ್ರಹಿಸಿರಿ" ಎಂದು ಬೇಡಿದನು.

ಹೀಗೆ ಕೊಡಲಶಕ್ಯವಾದ ವರವನ್ನು ಬೇಡುತ್ತಿರುವ, ಅತ್ಯಂತ ಮಾನಿಯಾದ ಆ ದೈತ್ಯನ ಪ್ರಾರ್ಥನೆಯನ್ನಾಲಿಸಿ ಮಂದಹಾಸದಿಂದ ಚಂಡಿಕಾಪತಿಯಾದ ರುದ್ರ

ದೇವನು "ದೈತ್ಯಶ್ರೇಷ್ಠ ! ಅಸಾಧ್ಯವರವನ್ನು ಯಾಚಿಸುತ್ತಿರುವೆ. ಷಡ್ಗುಣೈಶ್ವರ್ಯ ಸಂಪನ್ನರೂ, ಸಪ್ತಲೋಕಗಳಿಗೂ ಅಧಿಪತಿಗಳಾದ, ಶ್ರೀಮುರಾರಿಯ ಭಕ್ತಾಗ್ರಗಣ್ಯರಾದ ಮುಖ್ಯಪ್ರಾಣದೇವರನ್ನು ಜಯಿಸಲು ಸಾಧ್ಯವೇ ? ಆದರೆ ನೀನು ಶ್ರದ್ಧಾಭಕ್ತಿಗಳಿಂದ ತಪವೆಸಗಿ ನನ್ನನ್ನು ಮೆಚ್ಚಿಸಿರುವೆ. ವರಕೊಡುವುದಾಗಿ ನಾನೂ ವಚನವಿತ್ತಿದ್ದೇನೆ. ಆದರೆ ಬಲದಿಂದ ಆ ಮಹಾಮಹಿಮರನ್ನು ಜಯಿಸಲು ಯಾರಿಂದಲೂ ಸಾಧ್ಯವಿಲ್ಲ! ಉಪಾಯಾಂತರದಿಂದ ಅವರ ಪ್ರತಿಭೆಯನ್ನು ಕೆಲಕಾಲ ಮಾತ್ರ ಮರೆಮಾಡಲು ಯತ್ನಿಸಲು ಅನುಕೂಲವಾಗುವಂತೆ ವರವನ್ನು ಕೊಡುತ್ತೇನೆ. ಈ ನನ್ನ ವರದಿಂದ ನೀನು ಹೊಸದೊಂದು ಮಾಯಾಮತವನ್ನು ಆರಂಭಿಸಿ, ಕೆಲವು ಕಾಲ ಮಾತ್ರ ಆ ವಾಯುದೇವರ ತತ್ವಗಳನ್ನು ಮರೆಮಾಡುವ ಕಾರ್ಯದಿಂದ ತತ್ವಜ್ಞಾನವನ್ನು ಶಿಥಿಲಗೊಳಿಸು ! ಇಷ್ಟುಮಾತ್ರ ಮಾಡಲು ಅನುಕೂಲಿಸುವಂತೆ ವರಕೊಡಲು ನಾನು ಸಮರ್ಥ. ಇದರಿಂದಲೇ ತುಷ್ಟನಾಗು" ಎಂದಾಜ್ಞಾಪಿಸಿ ವರವಿತ್ತರು.

ಅನಂತರ ಅನೇಕ ಮಾಯಾ ವಿದ್ಯೆಗಳಿಂದ ಪರಿಪೂರ್ಣನಾದ ಮಣಿಮಂತನು ತ್ರಿಪುರಾಂತಕನಿಂದ ಪಡೆದ ವರಬಲದಿಂದ ತನ್ನ ಕಾರ್ಯವನ್ನು ಸಾಧಿಸಲು ವಿಪ್ರಕುಲದಲ್ಲಿ ಜನ್ಮತಾಳಿದನು, ಆ ಮಣಿಮಂತನೇ ಮಾಯಾವಾದ ರೂಪವಾದ, ವೈದಿಕ ತತ್ವವಿರುದ್ಧವಾದ ನೂತನ ಮತವನ್ನು ಪ್ರಾರಂಭಿಸಿದನು. ಅವನಿಂದಲೇ ವೇದ ಮಾರ್ಗವು ಖಂಡಿಸಲ್ಪಟ್ಟಿತು. ಅದರಿಂದ ಮುಕ್ತಿಯೋಗ್ಯಜನರು ಬಳಲ ತೊಡಗಿದರು.

ಪರಿಸ್ಥಿತಿ ಹೀಗಾದ್ದರಿಂದ, ಆ ಮಣಿಮಂತನ ಮಾಯಾವೈಖರಿಯನ್ನು ದಮನ ಮಾಡಲೋಸುಗ ವಾಯುದೇವರು ಅವತರಿಸಬೇಕಾಯಿತು. !

ಪೂರ್ವದಲ್ಲಿ ಅತ್ಯಂತ ಗರ್ವಿಷ್ಠನಾದ ರಾಕ್ಷಸಸಾರ್ವಭೌಮನಾದ ದಶಕಂಠನ ಕುಲನಾಶನ ಸಮರ್ಥನೂ, ಶ್ರೀರಾಮಚಂದ್ರನ ಸೇವಕನೂ ಆಗಿ ಆಂಜನೇಯನೆಂಬ ಹೆಸರಿನಿಂದ ಅವತಾರವನ್ನೂ, ಅದಾದ ಮೇಲೆ ನೂರುಜನ ಧೃತರಾಷ್ಟ್ರಪುತ್ರರನ್ನು ಸಂಹರಿಸುವ ದ್ವಾರಾ ಸುವರ್ಣಪಟ್ಟಿವಿಶೋಭಿತ ಮಹಾಭಯಂಕರ ಗದೆಯ ಮುಖವೆಂಬ ಪಾಯಸದಿಂದ ಪಾರಣೆಮಾಡಿಸಿ ಶ್ರೀಕೃಷ್ಣಪರಮಾತ್ಮನನ್ನು ಸಂತೋಷಗೊಳಿಸಿದ ಕುಂತಿಪುತ್ರ ಭೀಮಸೇನನ ರೂಪವನ್ನು ತಾಳಿದ್ದ ; ಕಡೆಯಲ್ಲಿ ವೇದೋಕ್ತ ಆಚರಣವಿಧಾನದಲ್ಲಿ ಒದ್ದಾದರವುಳ್ಳ ಶ್ರೀಮಧ್ವಮುನಿ ನಾಮ ಶೋಭಿತನಾದ, ಸಕಲ ಪ್ರಪಂಚಕ್ಕೂ ಶಕ್ತಿರೂಪನಾದ, ಶ್ರೀಮುಖ್ಯಪ್ರಾಣದೇವನು ನಮ್ಮ ಅಪ್ಪಣೆಯಂತೆ ಯಾವಾಗಲೂ ಇತರರಿಂದ ದೂಷಿಸಲು ಸಾಧ್ಯವಾಗದ ಬ್ರಹ್ಮಸೂತ್ರ ಭಾಷ್ಯವನ್ನು ರಚಿಸಿದನು.

ಮುನಿಗಳೇ, ಈ ವರೆವಿಗೂ ವಿಪತ್ಪ್ರಯೋಜಕವಾದ, ಮಾನ್ಯವಾದ ತ್ರಿಪುರಾರಿಯ ವರದಿಂದ ಮಾಯಾಮತವೆಂಬ ಭಯಂಕರ ರಾಹುವಿನಿಂದ ಕಣ್ತೆರೆಯಲು

ಅಸಾಧ್ಯವಾಗುವಂಥ ಆ ಬ್ರಹ್ಮಸೂತ್ರ ಭಾಷ್ಯವೆಂಬ ಪ್ರಚಂಡ ಸೂರ್ಯಮಂಡಲವು ಆಚ್ಛಾದಿತವಾಗಿತ್ತು.

ಅತಿಶೀಘ್ರವಾಗಿ ಮುಂದೆ ಕಾವೇರೀನದೀತೀರದಲ್ಲಿರುವ ಬನ್ನೂರು ಎಂಬ ಗ್ರಾಮದಲ್ಲಿ ವಾಸಿಸುತ್ತಿರುವ, ನನ್ನ ಉಪಾಸನೆಯಲ್ಲಿ ನಿರತರಾಗಿರುವ, ಭಾಗವತ ಶ್ರೇಷ್ಠರಾದ ಅಪರ ಅರುಂಧತಿ ವಸಿಷ್ಠರಂತಿರುವ, ಪುತ್ರಾಪೇಕ್ಷಿಗಳಾಗಿರುವ ಲಕ್ಷ್ಮೀದೇವಿ-ರಾಮಾಚಾರ್ಯ (ಬಲ್ಲಣಸುಮತಿ) ಎಂಬ ಹೆಸರಿನ ದಂಪತಿಗಳಿಗೆ ನಮ್ಮ ಉಪಾಸನೆಯ ಮಹಿಮೆಯಿಂದ ಅತಿಪವಿತ್ರಚರಿತ್ರೆಯಿಂದ ಸರ್ವರಿಗೂ ಮೀರಿದ ಜ್ಞಾನವಿಶೇಷದಿಂದ ಪರಿಶೋಭಿತನಾದ ಓರ್ವ ಕುಮಾರನು ಉದಯಿಸುವನು !

ಆ ಕುಮಾರನಲ್ಲಿಯೇ-ನಮ್ಮ ಆಜ್ಞೆಯನ್ನು ಚೂಡಾಮಣಿಯಂತೆ ಶಿರಸಾಧರಿಸಿರುವ ಆ ಶ್ರೀಮುಖ್ಯಪ್ರಾಣದೇವರೇ ಮತ್ತೆ ಆವೇಶರೂಪ ಅವತಾರದಿಂದ ಪರಿಶೋಭಿಸುತ್ತಾರೆ !

ಇಂತಹ ಮುಖ್ಯಪ್ರಾಣದೇವರ ಆವೇಶಭರಿತನಾದ ಕುಮಾರನು ಮನುಷ್ಯನಂತೆ ನಟಿಸುತ್ತಾ, ಶ್ರೀಬ್ರಹ್ಮಣ್ಯತೀರ್ಥರ ಮನೋರಥವನ್ನು ಪೂರೈಸುತ್ತಾ, ಅನೇಕಾನೇಕ ವಿಸ್ಮಯಕಾರಕ ಚರಿತ್ರೆಗಳಿಂದ ಸಕಲ ಪ್ರಪಂಚವನ್ನೂ ಆಶ್ಚರ್ಯಗೊಳಿಸುತ್ತಾ ಹಾವಾಡಿಗನಂತೆ ಮಂತ್ರದಿಂದ ಸರ್ಪವೇಗವನ್ನೂ, ಸೂರ್ಯನಂತೆ ಕಿರಣದಿಂದ ಕತ್ತಲೆಯ ಪ್ರಾಚುರ್ಯವನ್ನೂ, ಕಾಲಮೇಘದಂತೆ ವೃಷ್ಟಿಯಿಂದ ಬಿಸಲಿನ ತಾಪವನ್ನೂ, ವೈದ್ಯನಂತೆ ಔಷಧಿಯಿಂದ ರೋಗವನ್ನೂ, ಪೂರ್ವಜ್ಞಾತವಾದ ತನ್ನ ಭಾಷ್ಯದಿಂದ ಮಾಯಾಮತ ಪ್ರಚೋದಿತ ದುರ್ಮತವನ್ನೂ ಸಮೂಲ ನಾಶಮಾಡಿ, ಸರ್ವಧರ್ಮವನ್ನೂ ಪ್ರತಿಷ್ಠಾಪಿಸುವನು ! ಆದುದರಿಂದ ನೀವು ಭಯಪಡಬೇಕಾಗಿಲ್ಲ. ಶೀಘ್ರವಾಗಿ ಸನ್ಮತ ಪ್ರಚಾರವಾಗಿ, ಸಜ್ಜನರ ಉದ್ಧಾರವೂ ಧಾರ್ಮಿಕನಿಗೆ ಮಂಗಳಗಳೂ ಉಂಟಾಗುವವು" ಎಂದು ಶ್ರೀವೇದವ್ಯಾಸದೇವರು ಆ ತಾಪಸರನ್ನು ನಿಮಿತ್ತಮಾಡಿಕೊಂಡು ಸಮಸ್ತ ವೈದಿಕತತ್ವಾಭಿಮಾನಿಗಳಿಗೆ ಅಭಯ ಪ್ರದಾನಮಾಡಿದರು.

ಇಂತು ಅಭಯವಚನಗಳಿಂದ ಅನುಗ್ರಹಿಸಿದ ಭಗವಾನ್ ಶ್ರೀವೇದವ್ಯಾಸದೇವರಿಗೆ ನಮಸ್ಕಾರಮಾಡಿ ಆ ತಾಪಸರು ಸಂತೋಷದಿಂದ ಶ್ರೀವೇದವ್ಯಾಸರ ಅಪ್ಪಣೆ-ಆಶೀರ್ವಾದಗಳನ್ನು ಪಡೆದು ಸಫಲಮನೋರಥರಾಗಿ ತಮ್ಮ ತಮ್ಮ ಆಶ್ರಮಗಳಿಗೆ ಪ್ರಯಾಣ ಬೆಳೆಸಿದರು.

## ೨. ಶ್ರೀಬ್ರಹ್ಮಣ್ಯತೀರ್ಥರ ತಪಸ್ಸು-ವರಪ್ರಾಪ್ತಿ

ಬದರಿಕಾಶ್ರಮದಲ್ಲಿ ಋಷಿ-ಮುನಿಗಳಿಗೆ ಶ್ರೀಬಾದರಾಯಣರು ಅಭಯ ಪ್ರಧಾನಮಾಡಿದ ಮೇಲೆ ಕೆಲವರ್ಷಗಳು ಕಳೆದಿವೆ. ಶ್ರೀಹಂಸನಾಮಕ ಪರಮಾತ್ಮ

ನಿಂದ ಪ್ರವೃತ್ತವಾದ ಜ್ಞಾನಪರಂಪರೆಯಲ್ಲಿ ಅನೇಕ ಜ್ಞಾನಿಗಳು ಬಂದು ಅನಾದಿ ಸಿದ್ಧವಾದ ವೈದಿಕ ಸದ್ವೈಷ್ಣವ ತತ್ವಗಳನ್ನು ಪ್ರಸಾರಮಾಡಿ, ಆ ಮಹಾತತ್ವಗಳ ಉಪಾಸನೆಯಿಂದಲೇ ಸರ್ವಜೀವರ ಉದ್ಧಾರವೆಂದು ಉಪದೇಶಿಸುತ್ತಾ ಬಂದಿದ್ದರು.

ಇಂಥ ಸಾಕ್ಷಾತ್ ಹಂಸನಾಮಕ ಶ್ರೀಹರಿಯ ಜ್ಞಾನಪರಂಪರೆಯಲ್ಲಿ ವಿಖ್ಯಾತ ವಾದ ಶ್ರೀಮನ್ಮಧ್ವಾಚಾರ್ಯರ ವೇದಾಂತಸಾಮ್ರಾಜ್ಯ ವಿದ್ಯಾಸಿಂಹಾಸನವಲ್ಲಿ ಶ್ರೀಮದಾಚಾರ್ಯರ ಪಟ್ಟದ ಶಿಷ್ಯರಾದ ಶ್ರೀಪದ್ಮನಾಭತೀರ್ಥ-ನರಹರಿ-ಮಾಧವ ಅಕ್ಷೋಭ್ಯತೀರ್ಥ-ಜಯತೀರ್ಥ-ವಿದ್ಯಾರಾಜತೀರ್ಥರೆಂಬ ಜ್ಞಾನಿನಾಯಕರು ವಿರಾಜಿಸಿ, ಶ್ರೀವಿದ್ಯಾಧಿರಾಜರ ಕಾಲದಲ್ಲಿ ಆ ಮಹಾಸಂಸ್ಥಾನವು ಇಬ್ಭಾಗವಾಗಿ ಒಂದು ಮಹಾಪೀಠದಲ್ಲಿ ಶ್ರೀರಾಜೇಂದ್ರತೀರ್ಥರೂ,[1] ಮತ್ತೊಂದು ಮಹಾ ಸಂಸ್ಥಾನದಲ್ಲಿ ಶ್ರೀಕವೀಂದ್ರತೀರ್ಥರೂ [2] ವಿರಾಜಿಸಿ ಇವೆರಡೂ ಮಹಾಪೀಠಗಳು ಪೂರ್ವಾದಿಮಠ, ದಕ್ಷಿಣಾದಿಮಠಗಳೆಂದು ಪ್ರಖ್ಯಾತವಾದವು[3] ಈ ಕಥಾನಕವು ನಡೆಯುವ ವೇಳೆಗೆ ಶ್ರೀರಾಜೇಂದ್ರತೀರ್ಥರು ಅಲಂಕರಿಸಿದ್ದ ಪೀಠವಲ್ಲಿ ಶ್ರೀಬ್ರಹ್ಮಣ್ಯತೀರ್ಥರೆಂಬ ಶ್ರೇಷ್ಠಜ್ಞಾನಿಗಳೂ, ಶ್ರೀಕವೀಂದ್ರತೀರ್ಥರು ಅಲಂಕರಿಸಿದ್ದ ಪೀಠದಲ್ಲಿ ಶ್ರೀವಿಬುಧೇಂದ್ರತೀರ್ಥರೆಂಬ ಜ್ಞಾನಿಗಳೂ ವಿರಾಜಿಸಿ ಶ್ರೀಮದಾಚಾರ್ಯರ ವೇದಾಂತ ಸಾಮ್ರಾಜ್ಯವನ್ನಾಳುತ್ತಿದ್ದರು.

ಮಹಾತಪಸ್ವಿಗಳೂ, ವೈರಾಗ್ಯನಿಧಿಗಳೂ ಆದ ಶ್ರೀ ಬ್ರಹ್ಮಣ್ಯತೀರ್ಥರು ತೀರ್ಥ ಕ್ಷೇತ್ರಯಾತ್ರೆಯನ್ನು ಕೈಗೊಂಡು ಭಾರತಾದ್ಯಂತವಾಗಿ ಸಂಚರಿಸುತ್ತಾ ಶ್ರೀಬದರೀ ಕ್ಷೇತ್ರಕ್ಕೆ ದಯಮಾಡಿಸಿದರು. ಅಲ್ಲಿ ಶ್ರೀಬದರೀನಾರಾಯಣನ ದರ್ಶನ ದಿಂದ ಪ್ರಹೃಷ್ಟಾಂತಃಕರಣರಾಗಿ ದೇವರ ದರ್ಶನ ಸೇವಾದಿಗಳನ್ನು ನೆರವೇರಿ ಸುತ್ತಾ ಕೆಲಕಾಲವಾಸಮಾಡಿದರು. ಒಂದುದಿನ ಬದರಿನಾಥನ ದರ್ಶನಕ್ಕೆ ಹೋದಾಗ ಅಲ್ಲಿ ಶೈವಪಂಡಿತರೊಬ್ಬರು ಶಿವೋತ್ಕೃಷ್ಟತ್ವವನ್ನು ಪ್ರತಿಪಾದಿಸುತ್ತಾ ಇದ್ದುದನ್ನು ಕಂಡು ಬ್ರಹ್ಮಣ್ಯತೀರ್ಥರು ಆ ಪಂಡಿತರ ವಾದಸರಣಿಯ ಅವೈದಿಕತೆಯನ್ನು ಎತ್ತಿ ತೋರಿಸಿದಾಗ, ಅವರಿಬ್ಬರಲ್ಲಿ ದೊಡ್ಡ ವಾಕ್ಯಾರ್ಥವೇ ಪ್ರಾರಂಭವಾಯಿತು. ಬಿರುಸಿನಿಂದ ಜರುಗಿದ ವಾಕ್ಯಾರ್ಥದಲ್ಲಿ ಶೈವಪಂಡಿತರು ನಿರುತ್ತರರಾದರು. ಬ್ರಹ್ಮಣ್ಯ ತೀರ್ಥರು ಶ್ರೀಹರಿಸರ್ವೋತ್ತಮತ್ವ ಪ್ರತಿಪಾದಕವಾದ ಅನಾದ್ಯವಚ್ಛಿನ್ನ ಪರಂಪರಾ ಪ್ರಾಪ್ತ ವೈದಿಕ ವೈಷ್ಣವ ಸಿದ್ಧಾಂತವನ್ನು ಪ್ರತಿಷ್ಠಾಪಿಸಿ ಸರ್ವರನ್ನೂ ಆನಂದ

---

1. ಶ್ರೀರಾಜೇಂದ್ರರ ಪೀಠವು ಪೂರ್ವಾದಿಮಠವೆಂದು ಪ್ರಸಿದ್ಧವಾಯಿತು.

2. ಶ್ರೀಕವೀಂದ್ರರ ಪೀಠವು ದಕ್ಷಿಣಾದಿ ಮಠವೆಂದು ಪ್ರಸಿದ್ಧವಾಯಿತು.

3 ಶ್ರೀಹಂಸನಾಮಕ ಪರಮಾತ್ಮನ ಜ್ಞಾನಪರಂಪರೆ, ಶ್ರೀಮಧ್ವಾಚಾರ್ಯರ ಮಹಾ ಸಂಸ್ಥಾನ ಪರಂಪರೆಯು ಬೆಳೆದು ಬೇಗಿ ನಡೆದುಬಂದ ವಿಚಾರವನ್ನು ವಿಸ್ತಾರವಾಗಿ ತಿಳಿಯ ಬಯಸುವವರು ಈ ಗ್ರಂಥದ ಭೂಮಿಕೆಯನ್ನು ಪರಿಶೀಲಿಸಬೇಕು. —ಗ್ರಂಥಕರ್ತಾ

ಗೊಳಿಸಿದರು. ಅಲ್ಲಿ ನೆರೆದಿದ್ದ ಸಜ್ಜನರು ಗುರುಗಳ ತೇಜಸ್ಸು, ಪಾಂಡಿತ್ಯ, ವಾದಿದಿಗ್ವಿಜಯಾದಿಗಳನ್ನು ಕಂಡು ವಿಸ್ಮಿತರಾಗಿ ಶ್ರೀಗಳವರ ಗುಣಗಾನಮಾಡಿದರು.

ಬ್ರಹ್ಮಣ್ಯಮುನಿಗಳು ಶ್ರೀಮದಾಚಾರ್ಯರ ಸತ್ಸಿದ್ಧಾಂತವನ್ನು ಸ್ಥಾಪಿಸಿ, ಅದನ್ನು ವಿಶೇಷಾಕಾರವಾಗಿ ಪ್ರಸಾರಮಾಡಲು ಸಮರ್ಥನಾದ ಸತ್ಪುತ್ರ (ಶಿಷ್ಯ) ನನ್ನು ಶ್ರೀನರ-ನಾರಾಯಣರ ಅನುಗ್ರಹದಿಂದ ಸಂಪಾದಿಸಲೆಂದೇ ಬದರೀಕ್ಷೇತ್ರಕ್ಕೆ ಬಂದಿದ್ದರು. ಅದಕ್ಕೆ ಅಂದಿನ ವಾದಿವಿಜಯವು ಶುಭಸೂಚಕವೆಂದು ಭಾವಿಸಿದ ಅವರು ಮರುದಿನದಿಂದ ಕ್ಷೀರವ್ರತಾನುಷ್ಠಾನಪೂರ್ವಕವಾಗಿ ಶ್ರೀನರ-ನಾರಾಯಣ ರನ್ನು ಬಹು ಭಕ್ತಿ-ಶ್ರದ್ಧೆಗಳಿಂದ ಸೇವಿಸುತ್ತಾ ಜಗನ್ಮಾನ್ಯ ಶಿಷ್ಯನಿಗಾಗಿ ಶ್ರೀಹರಿ ಯನ್ನು ಕುರಿತು ತಪೋನಿರತರಾದರು.

ಶ್ರೀಹರಿಯ ಅನುಗ್ರಹಕಾಲ ಪ್ರಾಪ್ತವಾಯಿತು. ಒಂದು ದಿನ ಶ್ರೀಹರಿಯು ಅವರ ತಪಸ್ಸಿಗೆ ಮೆಚ್ಚಿ ಪ್ರಸನ್ನನಾಗಿ ನಿದ್ರೆಯೂ ಅಲ್ಲ, ಜಾಗೃದವಸ್ಥೆಯೂ ಅಲ್ಲ, ಇಂತಹ ಅವಸ್ಥೆಯಲ್ಲಿ ಶ್ರೀಬ್ರಹ್ಮಣ್ಯತೀರ್ಥರಿಗೆ ದರ್ಶನವಿತ್ತನು! ಜನಮೋಹನಾ ಕಾರನೂ, ಕೋಟಿಸೂರ್ಯಪ್ರಕಾಶನೂ, ಮಂದಹಾಸವದನಾರವಿಂದನೂ ಆಗ ಜಗ ದೊಡೆಯನು ಪ್ರಸನ್ನನಾಗಿ ಪ್ರೈದೋರಿದ್ದನ್ನು ಕಂಡು ಆನಂದ ಪುಳಕಿತಗಾತ್ರರಾಗಿ ಶ್ರೀನರ-ನಾರಾಯಣರಿಗೆ ಸಾಷ್ಟಾಂಗವೆರಗಿ ಭಕ್ತಿಯಿಂದ ಪ್ರಾರ್ಥಿಸಿದರು:

**ಬ್ರಹ್ಮಣ್ಯ :** ದೇವಾಧಿದೇವ ! ಜಗನ್ನಾಥ ! ರಮಾಬ್ರಹ್ಮರುದ್ರೇಂದ್ರಾದಿ ವೃಂದಾರಕವೃಂದವಂದ್ಯಪಾದಾರವಿಂದ! ಹಂಸನಾಮಕ ಪರಮಾತ್ಮಾ ! ಮತ್ಕುಲ ಸ್ವಾಮಿನ್, ನಮೋ ನಮಃ ಪ್ರಭು! ಅಕಿಂಚನನಾದ ಈ ದಾಸನ ತಪಸ್ಸಿಗೆ ಮೆಚ್ಚಿ ದರ್ಶನವಿತ್ತೆಯಾ, ರಮಾಕಾಂತ ? ಭಕ್ತರಲ್ಲಿ ನಿನಗೆಷ್ಟು ಕಾರುಣ್ಯ ಸ್ವಾಮಿ, ದಾಸನ ಮನೋಥವನ್ನು ಈಡೇರಿಸಿ ಅನುಗ್ರಹಿಸು ತಂದೆ.

ಅಭಯ ಮುದ್ರಾಂಕಿತನಾದ ಬದರೀನಾಥ ನಸುನಗುತ್ತಾ ಕಾರುಣ್ಯಪೂರ್ಣ ನಾಗಿ ಇಂತು ಮಾತನಾಡಿದನು—

**ಬದರೀನಾಥ :** ಯತಿಶ್ರೇಷ್ಠ ! ನಿನ್ನ ಭಕ್ತಿಯಿಂದ ತುಷ್ಟನಾಗಿ ವರವೀಯ ಲೆಂದೇ ಬಂದಿರುವೆನು. ನಿನ್ನ ಮನೋರಥವು ಅತಿ ಶೀಘ್ರವಾಗಿ ಕೈಗೂಡುವುದು. ನಾನು ನಿನಗೆ ಜಗತ್ತನ್ನೇ ಉದ್ಧರಿಸಬಲ್ಲ ಮಹಾಮಹಿಮೋಪೇತನೂ ನನ್ನ ಭಕ್ತರಲ್ಲಿ ಅಗ್ರ ಗಣ್ಯನೂ,ವಾಯುದೇವನ ವಿಶೇಷಾವೇಶ ವಿರಾಜಿತನೂ,ಆದ ಪ್ರಹ್ಲಾದರಾಜನನ್ನೇ ಶಿಷ್ಯನನ್ನಾಗಿ ಅನುಗ್ರಹಿಸಿದ್ದೇನೆ ! ತಪೋಧನ, ಚಿಂತಿಸದಿರು. ಪ್ರಹ್ಲಾದರಾಜನು ಅವತರಿಸಿ ನಿನಗೆ ಶಿಷ್ಯನಾಗಿ ನಿನ್ನ ಆಶೋತ್ತರಗಳನ್ನೆಲ್ಲಾ ಪೂರ್ಣಮಾಡುವನು. ಮಾತ್ರವಲ್ಲ, ದ್ವೈತಸಿದ್ಧಾಂತವು ಚಂದ್ರಸೂರ್ಯರಿರುವವರೆಗೆ ಸ್ಥಿರವಾಗಿ ನೆಲೆ ಗೊಳ್ಳುವಂತೆಮಾಡಿ, ಸಕಲ ದುರ್ವಾದಿನಿರಕರವನ್ನು ನಿರಾಕರಿಸಿ, ಜಗನ್ಮಾನ್ಯ ಗ್ರಂಥ ಗಳನ್ನು ರಚಿಸಿ,ಲೋಕವಂದ್ಯನಾಗಿ,ಎಲ್ಲ ಜ್ಞಾನಿಗಳಿಗೂ ನಾಯಕನಾಗಿ,ಭಾರತದೇಶದ

ತತ್ವ-ಧರ್ಮ-ಸಂಸ್ಕೃತಿಗಳ ರಕ್ಷಕನೆನಿಸಿ, ಜಗತ್ತಿನ ಜನತೆಯಿಂದ ಮಾನ್ಯನಾಗುವನು. ಅವನಿಂದ ಭಾರತಾವನಿಗೆ ಅಪೂರ್ವ ಕೀರ್ತಿಪೊರಕುವುದು, ರಾಜಾಧಿರಾಜರು ಅವನ ಆಜ್ಞೆಯನ್ನು ಶಿರಸಾಧರಿಸಿ ನೆರವೇರಿಸಲು ಟೊಂಕಕಟ್ಟಿ ನಿಲ್ಲುವರು. ಅವನಿಂದ ಸಮಸ್ತ ಜನರ ಕಲ್ಯಾಣವಾಗುವುದು. ಆ ಮಹನೀಯನ ಹೆಸರಿನ ಜೊತೆಗೆ ನಿನ್ನ ಹೆಸರೂ ಅಜರಾಮರವಾಗಿ ವಿರಾಜಿಸುವುದು. ನೀನಿನ್ನು ಇಲ್ಲಿಂದ ಹೊರಡು. ನಿನಗೆ ಮಂಗಳವಾಗಲಿ.[1]

ಜಾಗೃತರಾದ ಬ್ರಹ್ಮಣ್ಯತೀರ್ಥರು ಶ್ರೀಹರಿಯ ವರವನ್ನು ಸ್ಮರಿಸಿ ಆನಂದ ಪುಳಕಿತರಾಗಿ, ಹರಿಯನ್ನು ಪರಿಪರಿಯಾಗಿ ಸ್ತುತಿಸಿ, ಸ್ನಾನಾಹ್ನಿಕಾದಿಗಳನ್ನು ನೆರವೇರಿಸಿ ಶ್ರೀಬದರೀನಾಥನ ಸೇವೆಯನ್ನು ಪೂರೈಸಿ, ಶಿಷ್ಯಮಂಡಲಿಯೊಡನೆ ಇಷ್ಟಾರ್ಥಸಿದ್ಧಿಯಾದುದರಿಂದ ಆನಂದದಿಂದ ಬದರೀಯಿಂದ ಪ್ರಯಾಣ ಬೆಳೆಸಿ ಕರ್ನಾಟಕ ದೇಶದಲ್ಲಿ ಪವಿತ್ರ ಕ್ಷೇತ್ರವಾದ ಅಬ್ಬೂರು ಎಂಬ ಗ್ರಾಮಕ್ಕೆ ದಯ ಮಾಡಿಸಿ ಶ್ರೀಬದರೀನಾಥನ ವರವು ಎಂದು ಯಾವ ರೀತಿ ಫಲಿಸುವುದೋ ಎಂದು, ಆ ಸುದಿನವನ್ನು ನಿರೀಕ್ಷಿಸುತ್ತಾ ಕಾಲಕಳೆಯಹತ್ತಿದರು.

## ೩. ವಂಶಪರಂಪರೆ

ಸಕಲ ವಿದ್ಯೆಗಳಿಗೆ—ಸದ್ಗುಣಗಳಿಗೆ ಮಾತೃಸ್ಥಾನ ಪಾಟ್ಟಿಕವಂಶ. (ಅರವತ್ತೊಕ್ಕಲು ಮನೆತನ). ಸರಸ್ವತಿಯ ತವರುಮನೆಯೆನಿಸಿದ ಈ ಪಾಟ್ಟಿಕಮನೆತನವು ಭಾರತದಲ್ಲಿ ಅತ್ಯಂತ ಪ್ರಸಿದ್ಧವಾದುದು. ಕಲೆ, ಕಲಿತನ, ಜ್ಞಾನ, ಔದಾರ್ಯ, ಸೌಶೀಲ್ಯ ಪ್ರತಿಭೆಗಳ ಪ್ರಭಾವಳಿಯಿಂದ ಬೆಳಗುತ್ತಾ, ಅತಿ ಪ್ರಾಚೀನಕಾಲದಿಂದಲೂ ಅನಿತರ ಸಾಧಾರಣ ಜ್ಞಾನ-ಭಕ್ತಿ-ವೈರಾಗ್ಯ-ತಪಸ್ಸುಗಳ ಮಿಂಚಿನಗೊಂಚಲುಗಳನ್ನು ಎಲ್ಲೆಡೆ ತೂಗಿಬಿಡುತ್ತಾ ಇಂದಿನವರೆವಿಗೂ ತನ್ನ ಧೀಮಂತಿಕೆ ಶ್ರೀಮಂತಿಕೆಗಳಿಂದ ಜಗನ್ಮಾನ್ಯವಾದ ಮನೆತನವೆನಿಸಿದೆ.

ಈ ಮಹಾವಂಶವೆಂಬ ಅಂಬರದಲ್ಲಿ ತಮ್ಮ ಜ್ಞಾನಕಿರಣಗಳಿಂದ,ಅಮೃತಸ್ಯಂದಿ ವಾಕ್ಚಂದ್ರಿಕೆಯ ತಂಗಿರಣಗಳಿಂದ ಜಗತ್ತನ್ನು ಪರವಶಗೊಳಿಸಿದ ಅನೇಕ ಸೂರ್ಯ

---

ರಾಗ-ಸೌರಾಷ್ಟ್ರ ತಾಳ-ಛಾಪು

1. "ಗುರುವ್ಯಾಸರಾಯರ ಮಹಿಮೆಗಳ ಕೇಳಿ |
ಹರುಷದಿಂದ ಕೂಡಿದ ಜನರು ||
ಅಂದು ಬ್ರಹ್ಮಣ್ಯತೀರ್ಥರಿಗೆ ಬದರಿಯಲಿ |
ಮುದದಿಂದಲಿ ನರ-ನಾರಾಯಣರು ||
ಕಂದನಾ ಕೊಡುವೆನೆಂದು ಭಿಕ್ಷೆಯ ನೀಡೆ |
ತಂದೆ ಮಧ್ವೇಶ ನಿನ ದಯವಿರಲಿ ಎಂದೂ ||"

—ಶ್ರೀಪುರಂದರದಾಸರು

ಚಂದ್ರಮರಂತಹ ಕಾಂತಿಸಂಪನ್ನರು ಪ್ರಕಾಶಿಸಿದ್ದಾರೆ. ಈ ವಂಶೋದ್ಯಾನದಲ್ಲಿ ಸಕಲ ಕಲಾಪಾರೀಣ ಮಯೂರಗಳು ಗರಿಗೆದರಿ ನರ್ತಿಸಿವೆ. ಅಷ್ಟೇ ಏಕೆ; ಈ ಪಾಷ್ಟಿಕ ಸದ್ವಂಶಸಾರಸದಲ್ಲಿ ಜಗತ್ತನ್ನೇ ಪಾವನಗೊಳಿಸಿದ ಅನೇಕ ರಾಜಹಂಸಗಳು (ಪರಮ ಹಂಸರುಗಳು) ವಿಹರಿಸಿವೆ.

ಷಡ್ದರ್ಶನಗಳು ಈ ಮನೆತನದ ಅಂಗಣವಲ್ಲಿ ಅಂಬೆಗಾಲಿಟ್ಟು ನಲಿಯುತ್ತಿದ್ದವು. ವೇದ-ವೇದಾಂಗ-ಷಡ್ದರ್ಶನ-ಸಂಗೀತ-ಸಾಹಿತ್ಯ ಕಲಾಪಾರಂಗತರಾದ; ಸದಾಚಾರ, ಶೀಲ, ಔದಾರ್ಯ, ಪರಾಕ್ರಮ, ಪ್ರತಿಭೆಗಳಿಂದ ಕಂಗೊಳಿಸುವ ಬ್ರಹ್ಮನಿಷ್ಠ, ಶ್ರೋತ್ರಿಯರಾದ, ಯಜನ, ಯಾಜನ ಸಂಪನ್ನರಾದ ಮಹನೀಯರಿಂದ ಬೆಡಗು ಗೊಂಡ ಈ ಮನೆತನದ ಹಿರಿಮೆ-ಗರಿಮೆ-ವೈಶಿಷ್ಟ್ಯಗಳನ್ನು ಎಷ್ಟು ವರ್ಣಿಸಿದರೂ ಸ್ವಲ್ಪವೇ ಎನಿಸುವುದು.

ವಿಶ್ವಸಾರಸ್ವತ ಭವ್ಯ ಭಂಡಾರಕ್ಕೆ, ಧರ್ಮ, ಸಂಸ್ಕೃತಿ, ಸಭ್ಯತೆಗಳಿಗೆ ಈ ಮನೆ ತನದವರ ಕೊಡುಗೆ ಅಪಾರವಾದುದು. ಪ್ರಪಂಚ ಪ್ರಸಿದ್ಧ ಪರಾಕ್ರಮ ಇತಿಹಾಸ ದಲ್ಲಿಯೂ ಈ ಮನೆತನದ ಮಹನೀಯರ ಹೆಸರು ಸುವರ್ಣಾಕ್ಷರದಲ್ಲಿ ಬರೆದಿಡುವಂತ ಹುದೆಂದರೆ ತಪ್ಪಾಗಲಾರದು. ದೊರಕುವ ಅಲ್ಪಸ್ವಲ್ಪ ಆಧಾರಗಳಿಂದ ವಿವೇಚಿಸಿ ದಾಗ ಈ ಪಾಷ್ಟಕವಂಶವು ಸುಮಾರು ಮೂರು ನಾಲ್ಕನೆಯ ಶತಮಾನಗಳಿಂದಲೂ ಭಾರತದೇಶದಲ್ಲಿ ಅತ್ಯಂತ ಪ್ರಖ್ಯಾತವಾದ ಮನೆತನವಾಗಿತ್ತೆಂದು ವ್ಯಕ್ತವಾಗುವುದು.

ಕರ್ನಾಟಕದ ಕದಂಬಸಾಮ್ರಾಜ್ಯಸ್ಥಾಪಕನಾದ ಮಯೂರವರ್ಮ(ಶರ್ಮ)ನು ಆ ವೇಳೆಗೆ ಉತ್ತರ ಭಾರತದ ಪಂಜಾಬ್ ಪ್ರಾಂತ್ಯದ ಅಹಿಚ್ಛತ್ರದಲ್ಲಿ ವಾಸವಾಗಿದ್ದ ಈ ಪಾಷ್ಟಿಕವಂಶೀಕರನ್ನು ದಕ್ಷಿಣಾಪಥಕ್ಕೆ ಕರೆತಂದು ಅವರಿಗೆ ಅನೇಕ ಅಗ್ರಹಾರ ಗಳು. ಭೂಸ್ವಾಸ್ತಿ, ವೃತ್ತಿಗಳನ್ನು ದಾನವಾಗಿತ್ತು, ಅವರು ಈಗೀನ ಷಿಕಾರಿಪುರದ ತಾಳಗುಂದ ಗ್ರಾಮದಲ್ಲಿ ನೆಲೆಸುವಂತೆ ವ್ಯವಸ್ಥೆ ಮಾಡಿದನು. ಕರ್ಣಪಾರ್ಯನು ರಚಿ ಸಿದ "ಕದಂಬರಾಜವಿಜಯ"ದ ಆಧಾರದಂತೆ ಕ್ರಿಸ್ತಶಕ ನಾಲ್ಕನೆಯ ಶತಮಾನದಲ್ಲಿ ಈ ಪಾಷ್ಟಿಕರನ್ನು ತಾನು ಮಾಡಲಿರುವ ಅಶ್ವಮೇಧಯಾಗಕ್ಕಾಗಿ ಅಹಿಚ್ಛತ್ರದಿಂದ ಕದಂಬ ಸಾಮ್ರಾಜ್ಯದ ತ್ರಿಣೇತ್ರ ಕದಂಬನು ಕರೆಯಿಸಿಕೊಂಡು ಷಿಕಾರಿಪುರದ ತಾಳ ಗುಂದ ಗ್ರಾಮದಲ್ಲಿ ಅಗ್ರಹಾರ,ವೃತ್ತಿಗಳನ್ನು ಕಲ್ಪಿಸಿಕೊಟ್ಟು ಅವರು ಅಲ್ಲಿ ನೆಲೆಸಿ ಸಾಮ್ರಾಜ್ಯದ ಹಿತಚಿಂತನೆ ಮಾಡುತ್ತಾ ಸಹಾಯಕರಾಗಿರಲು ವ್ಯವಸ್ಥೆಮಾಡಿದ ನೆಂದು ತಿಳಿದುಬರುವುದು.

ಈ ಅರವತ್ತೊಕ್ಕಲು ಮನೆತನದವರು ಮೂಲತಃ ಅಚ್ಚಕನ್ನಡಿಗರು. ಕನ್ನಡ ನಾಡಿನಿಂದ ಅನೇಕ ಕನ್ನಡ ಕಲಿಗಳು ಭಾರತದ ವಿವಿಧ ಭಾಗಗಳಿಗೆ ವಲಸೆಹೋಗಿ ಅಲ್ಲಿ ತಮ್ಮ ಶೌರ್ಯೌದಾರ್ಯ ಪರಾಕ್ರಮಗಳಿಂದ ವಿಖ್ಯಾತರಾಗಿ, ರಾಜ್ಯಗಳನ್ನು ಕಟ್ಟಿ ಅಥವಾ ರಾಜರುಗಳಿಗೆ ಬೆಂಬಲರಾಗಿದ್ದು ಸ್ವತಃ ವಿವಿಧ ರಾಜ್ಯಗಳನ್ನಾಗಿ ಕನ್ನಡಿಗರ

ಪ್ರತಾಪವನ್ನು ತೋರಿಸಿಕೊಟ್ಟು ಕೀರ್ತಿ ಗಳಿಸಿದ ವಿಚಾರ ಇತಿಹಾಸದ ಅಧ್ಯಯನದಿಂದ ವ್ಯಕ್ತವಾಗುತ್ತದೆ. ಆದರಂತೆ ಮೂಲತಃ ಅಚ್ಚ ಕನ್ನಡಿಗರಾದ ಈ ಅರವತ್ತೊಕ್ಕಲು ಮನೆತನದವರು ಕನ್ನಡನಾಡಿನಿಂದ ವಲಸೆಹೋಗಿ ಮೂರು ನಾಲ್ಕನೆಯ ಶತಮಾನದ ಸುಮಾರಿಗೆ ಅಹಿಚ್ಛತ್ರದಲ್ಲಿ ನೆಲೆಸಿ ವಿವಿಧ ರಂಗಗಳಲ್ಲಿ ಪ್ರಖ್ಯಾತರಾಗಿದ್ದರು.

ಇದನ್ನು ಅರಿತೇ ಕದಂಬ ಸಾಮ್ರಾಟನು ಸ್ವತಃ ಶ್ರೋತ್ರಿಯ ಬ್ರಾಹ್ಮಣನಾಗಿದ್ದುದರಿಂದ ಆ ಅಭಿಮಾನದಿಂದ ಪ್ರಖ್ಯಾತರಾಗಿದ್ದ ಈ ಮನೆತನದವರನ್ನು ಕರೆತಂದು ತನ್ನ ಸಾಮ್ರಾಜ್ಯದಲ್ಲಿ ಶಿಕಾರಿಪುರದ ತಾಳಗುಂದ ಗ್ರಾಮದಲ್ಲಿ ಅವರಿಗೆ ಸಮಸ್ತ ಸೌಕರ್ಯಗಳನ್ನೇರ್ಪಡಿಸಿಕೊಟ್ಟು ನೆಲೆಗೊಳಿಸಿದನು.

ಮೂಲತಃ ಈ ಷಾಷ್ಟಿಕರ ಅರವತ್ನಾಲ್ಕು (64) ಮನೆತನಗಳಿದ್ದು ಮೂರು ಮನೆತನದವರು ಸಾಮ್ರಾಟನಿಗೆ ಯುದ್ಧದಲ್ಲಿ ಸಹಾಯಮಾಡಿ ಪೌರುಷದಿಂದ ಹೋರಾಡಿ ಸಂಗ್ರಾಮದಲ್ಲಿ ವೀರಸ್ವರ್ಗವನ್ನು ಪಡೆದರಾದ್ದರಿಂದಲೂ, ಒಂದು ಮನೆತನದ ಸಂತತಿಯು ನಷ್ಟವಾದ್ದರಿಂದಲೂ ಅರವತ್ತು ಮನೆತನ ಮಾತ್ರ ಉಳಿದು ಅರವತ್ತೊಕ್ಕಲು ಅಥವಾ ಷಾಷ್ಟಿಕರು ಎಂದು ಈ ಅರವತ್ತು ಮನೆತನವು ಪ್ರಖ್ಯಾತವಾಯಿತು. ಅಂದಿನಿಂದ ಈ ಗುಂಪಿನವರನ್ನು ಷಾಷ್ಟಿಕವಂಶೀಕರೆಂದು ಗೌರವದಿಂದ ಸಂಬೋಧಿಸುವ ಕ್ರಮಬಂದಿತು.

ಕದಂಬ ಸಾಮ್ರಾಜ್ಯದಲ್ಲಿ ಈ ಷಾಷ್ಟಿಕ ಮನೆತನದವರು ಆಸ್ಥಾನಸಚಿವರಾಗಿ, ಗೃಹಮಂತ್ರಿಗಳಾಗಿ, ಆರ್ಥಿಕಸಚಿವರಾಗಿ, ಸೈನ್ಯದ ಸರದಾರರುಗಳಾಗಿ, ಅಶ್ವದಳಾಧಿಪತಿಗಳಾಗಿ, ನ್ಯಾಯಮಂಡಲಿಯ ಮುಖ್ಯಸ್ಥರಾಗಿ, ರಾಜಭಂಡಾರದ ಮುಖ್ಯಾಧಿಕಾರಿಗಳಾಗಿ, ರಾಜ್ಯದ ವಿವಿಧ ಉನ್ನತ ಪದವಿಗಳಲ್ಲಿದ್ದು, ಪುರೋಹಿತರಾಗಿ, ಕವಿಗಳಾಗಿ, ಮಹಾಪಂಡಿತರುಗಳಾಗಿ, ಕಲೆಗಾರರಾಗಿ, ಸರ್ವಸಚಿವರಾಗಿ ಕನ್ನಡ ಸಾಮ್ರಾಜ್ಯದಲ್ಲಿ ಸೇವೆ ಸಲ್ಲಿಸುತ್ತಿದ್ದರು.

ಮುಂದೆ ಈ ಮನೆತನದವರು, ರಾಷ್ಟ್ರಕೂಟ, ಚಾಳುಕ್ಯ, ಕಳಿಂಗ, ದೇವಗಿರಿ, ವಿಜಯನಗರ, ಮಧುರೆ, ತಂಜಾವೂರು, ಮೈಸೂರು ಮುಂತಾದ ರಾಜ್ಯಗಳಲ್ಲಿ ವಿವಿಧ ಪದವಿ ಅಧಿಕಾರಗಳಲ್ಲಿದ್ದು, ನಾಡು-ನುಡಿಗಳಿಗೆ ಅಪಾರ ಸೇವೆಸಲ್ಲಿಸಿ ಖ್ಯಾತಿ ಗಳಿಸಿದರು.

ಶ್ರೀವ್ಯಾಸರಾಜ ಗುರುಸಾರ್ವಭೌಮರ "ಷಾಷ್ಟಿಕವಂಶಮುಕ್ತಾಕಲಾಪ", "ಷಾಷ್ಟಿಕ ಮಂಗಳಾಷ್ಟಕ", ಶ್ರೀವಿಜಯೀಂದ್ರತೀರ್ಥರ "ಶ್ರೀವ್ಯಾಸರಾಜಾಭ್ಯುದಯ," ಶ್ರೀ ಸುಧೀಂದ್ರತೀರ್ಥರ" ಶ್ರೀವ್ಯಾಸರಾಜವಿಜಯ", ಅಥವಾ "ಗುರುಗುಣರತ್ನಮಾಲಾ" ಮರಾಠೀಭಾಷೆಯ ಗಂಗಾಧರ ವಿರಚಿತ "ಷಾಷ್ಟಿಕವಂಶಾವಳಿ', ರುದ್ರಭಟ್ಟ ವಿರಚಿತ "ಆರಾಧ್ಯವಂಶಾವಳಿ", ಗಜಾನನ ಕವಿಯ "ಪಲ್ಲವರಾಜಮಿತ್ರ", ಕರ್ಣಪಾರ್ಯ ಕವಿಯ "ಕದಂಬರಾಜವಿಜಯ", ಶ್ರೀಸುಮತೀಂದ್ರತೀರ್ಥರ ಪೂರ್ವಾಶ್ರಮ ಸಹೋ

ದರರಾದ ಗರುಡವಾಹನ ಲಕ್ಷ್ಮೀನಾರಾಯಣ ವಿರಚಿತ "ಶ್ರೀವಿಭುದೇಂದ್ರವಿಜಯು". ಶ್ರೀ ಪಿನ್. ಜಿ. ಚಾಪೇಕರ್‌ರವರ ಮರಾಠಾ ಭಾಷೆಯ "ಚಿತ್‌ಪಾವನ", ರಾಘವೇಂದ್ರಪ್ಪ ಕವಿಯ "ಸಾರಸ್ವತ ಪರಿಣಯ", ಬೆಟ್ಟದ ಶ್ರೀ ಅನಂತಾಚಾರ್ಯರ "ಷಾಷ್ಟಿಕ ನಾಮಾವಳಿ" ಮತ್ತು "ಷಾಷ್ಟಿಕ ಮಹಾಪುರುಷರು", ಶಿಲಾಶಾಸನಗಳೇ ಮೊದಲಾದ ಆಧಾರಗಳಿಂದ ಷಾಷ್ಟಿಕ ಮನೆತನ ಮತ್ತು ಆ ವಂಶೀಯರ ವೈಶಿಷ್ಟ್ಯದಿಗಳು ಸ್ಪಷ್ಟವಾಗಿ ವ್ಯಕ್ತವಾಗುವುದು.

## ೪. ಷಾಷ್ಟಿಕ ಮಹಾಪುರುಷರು

ಈ ಅರವತ್ತೊಕ್ಕಲು ಮನೆತನದಲ್ಲಿ ಅನೇಕ ಮಹಾಪುರುಷರು ಅವತರಿಸಿ ವಿಶ್ವ ವಿಖ್ಯಾತರಾಗಿದ್ದಾರೆ.

ದ್ವೈತಸಿದ್ಧಾಂತ ಸ್ಥಾಪಕರಾದ ಶ್ರೀಮದಾಚಾರ್ಯರು, ಅವರ ಪಟ್ಟದಶಿಷ್ಯರೂ ಶ್ರೀಮದಾಚಾರ್ಯರ ವೇದಾಂತಸಾಮ್ರಾಜ್ಯವನ್ನಾಳಿದವರೂ ಆದ ಶ್ರೀ ಪದ್ಮನಾಭ ತೀರ್ಥ, ನರಹರಿತೀರ್ಥ. ಮಾಧವತೀರ್ಥ, ಅಕ್ಷೋಭ್ಯತೀರ್ಥ, ಜಯತೀರ್ಥ, ವಿದ್ಯಾಧಿರಾಜ, ರಾಜೇಂದ್ರ, ಕವೀಂದ್ರ, ಜಯಧ್ವಜತೀರ್ಥ, ವಾಗೀಶತೀರ್ಥ, ರಾಮಚಂದ್ರ, ವಿಭುದೇಂದ್ರ, ಜಿತಾಮಿತ್ರ, ರಘುನಂದನ, ಸುರೇಂದ್ರ, ಪುರುಷೋತ್ತಮತೀರ್ಥ, ಸ್ವರ್ಣವರ್ಣ, ಬ್ರಹ್ಮಣ್ಯ, ಲಕ್ಷ್ಮೀನಾರಾಯಣಮುನಿ, ವ್ಯಾಸರಾಜ, ವಿಜಯೀಂದ್ರ, ನಾರಾಯಣಯತಿ, ಸುಧೀಂದ್ರ, ರಾಘವೇಂದ್ರತೀರ್ಥ, ಸುಮತೀಂದ್ರತೀರ್ಥರಂತಹ ಜಗನ್ಮಾನ್ಯ ಮಹಾಮಹಿಮರೆಲ್ಲರೂ, ಮತ್ತು ಅಪರೋಕ್ಷಜ್ಞಾನಿಗಳಾದ ಕನ್ನಡನಾಡಿನ ಹರಿದಾಸರಾದ ಶ್ರೀ ಪುರಂದರದಾಸ, ವಿಜಯದಾಸ, ಗೋಪಾಲದಾಸ, ಜಗನ್ನಾಥದಾಸರುಗಳೂ ಸಹ ಈ ಷಾಷ್ಟಿಕವಂಶಭೂಷಣರೆಂದಮೇಲೆ ಈ ಪವಿತ್ರ ಮಹಾವಂಶದ ಬಗ್ಗೆ ಇನ್ನು ಹೆಚ್ಚು ವಿವರಣೆ ಬೇಕಿಲ್ಲವೆನಿಸುವುದು.

ಈ ಷಾಷ್ಟಿಕರಲ್ಲಿ ದ್ವೈತ,ಅದ್ವೈತ,ಭಾಗವತಸಂಪ್ರದಾಯದವರೂ ಇದ್ದಾರೆ. ಶ್ರೀವಿಷ್ಣುಸರ್ವೋತ್ತಮತ್ವವನ್ನು ಒಪ್ಪಿದವರು ಶ್ರೀ ಮಧ್ವಾಚಾರ್ಯರ ಕಾಲದಲ್ಲಿ ಅವರ ಶಿಷ್ಯತ್ವವಹಿಸಿ ಮಾಧ್ವರಾದರು. ಶಿವಸರ್ವೋತ್ತಮತ್ವವಾದಿಗಳಾಗಿದ್ದು ಶ್ರೀ ಶಂಕರಾಚಾರ್ಯರ ಅನುಯಾಯಿಗಳಾದ ಅದ್ವೈತಿಬ್ರಾಹ್ಮಣರು ಹಾಗೂ ಭಾಗವತ ಸಂಪ್ರದಾಯದವರೂ ಈ ಷಾಷ್ಟಿಕರೇ ಆಗಿ ಪ್ರಖ್ಯಾತರಾಗಿದ್ದಾರೆ. ಅದ್ವೈತಮತಾನುಯಾಯಿಗಳು ಶತಶತಮಾನಗಳಿಂದ ವಿಭಿನ್ನ ತತ್ತ್ವೋಪಾಸಕರಾಗಿದ್ದರೂ ತಾವು ಷಾಷ್ಟಿಕ ಮನೆತನದವರೆಂದು ಇಂದಿಗೂ ಹೆಮ್ಮೆಯಿಂದ ಹೇಳಿಕೊಳ್ಳುವುದು ಕಂಡು ಬಂದಿದೆ. ಇಂದು ಅಂತಾರಾಷ್ಟ್ರೀಯವಾಗಿ ಖ್ಯಾತರಾಗಿರುವ ಶ್ರೀ ಕಂಚೀ ಕಾಮಕೋಟಿಪೀಠಾಧೀಶ್ವರರಾದ ಹಿರಿಯ ಸ್ವಾಮಿಗಳು ಕನ್ನಡಿಗರಾಗಿದ್ದು, ಅವರು ತಾವು ಷಾಷ್ಟಿಕ ಮನೆತನದವರೆಂದು ಹೇಳಿಕೊಳ್ಳುವುದು ಗಮನಾರ್ಹವಾಗಿದೆ.

ಇದರಂತೆ ಇತಿಹಾಸ ಪ್ರಸಿದ್ಧರಾದ ಅನೇಕ ಮಹನೀಯರು ಈ ವಂಶದವರಾಗಿದ್ದಾರೆ. ವಿಷ್ಣುವರ್ಧನನ ಪೌತ್ರನಾದ ವೀರಬಲ್ಲಾಳನು ಕ್ರಿ.ಶ. 1173 ರಿಂದ 1220ರವರೆಗೆ ದ್ವಾರಸಮುದ್ರದಲ್ಲಿ ರಾಜ್ಯವಾಳುತ್ತಿದ್ದಾಗ ಪಾಷ್ಟಿಕವಂಶದ ರುದ್ರಭಟ್ಟನು ವೀರಬಲ್ಲಾಳನ ಮಂತ್ರಿಯಾಗಿದ್ದು. "ಜಗನ್ನಾಥ ವಿಜಯ" ಮಹಾಕಾವ್ಯವನ್ನು ರಚಿಸಿ ಜೈನಕವಿಗಳಿಂದಲೇ "ಕೃತಿಶಾರದಾಭ್ರಚಂದ್ರಾತಪರುದ್ರ" ಎಂಬ ಪ್ರಶಂಸೆಗಳಿಸಿದ್ದನು. ಬಹಮನೀ ರಾಜ್ಯಸ್ಥಾಪಕನಾದ ಗಂಗಾಧರಭಟ್ಟನೂ ಪಾಷ್ಟಿಕನು. ಇದರಂತೆ ಇನ್ನೂ ಅನೇಕರು ಪ್ರಖ್ಯಾತರಾಗಿದ್ದಾರೆ.

ಶ್ರೀಮಧ್ವಾಚಾರ್ಯರ ವೇದಾಂತಸಾಮ್ರಾಜ್ಯವಿದ್ಯಾಸಿಂಹಾಸನದಲ್ಲಿ ವಿರಾಜಿಸಿದ ಘಟ್ಟದ ಮೇಲಿನ ಬಹುಶಃ ಎಲ್ಲ ಪೀಠಾಧೀಶರೂ ಈ ಪಾಷ್ಟಿಕ ವಂಶದೀಪಕರೆಂದು ಹೇಳಬಹುದು. ಶ್ರೀಮದಾಚಾರ್ಯರ ಪಟ್ಟದ ಶಿಷ್ಯರಾದ ಶ್ರೀ ಪದ್ಮನಾಭತೀರ್ಥರಿಂದ ಆರಂಭಿಸಿ ಶ್ರೀ ಜಯತೀರ್ಥರ ಶಿಷ್ಯರಾದ ಶ್ರೀ ವಿದ್ಯಾಧಿರಾಜತೀರ್ಥರವರೆಗೆ ಅವಿಚ್ಛಿನ್ನವಾಗಿ ನಡೆದುಬಂದ ಶ್ರೀಮದಾಚಾರ್ಯರ ಮಹಾಸಂಸ್ಥಾನವು ಶ್ರೀವಿದ್ಯಾಧಿರಾಜರ ಕಾಲದಲ್ಲಿ, ಶ್ರೀಸರ್ವಜ್ಞರ ಸಂಕಲ್ಪದಂತೆ, ಅವರಿಂದ ಆಶ್ರಮಪಡೆದ ಶ್ರೀರಾಜೇಂದ್ರತೀರ್ಥರು ಮತ್ತು ಶ್ರೀಕವೀಂದ್ರತೀರ್ಥರಿಂದ ಎರಡುಮಹಾಸಂಸ್ಥಾನಗಳಾಗಿ ನಡೆದುಬಂದಿತು.

ಶ್ರೀರಾಜೇಂದ್ರತೀರ್ಥರು ವಿರಾಜಿಸಿದ ಮಹಾಸಂಸ್ಥಾನವು ಪೂರ್ವಾದಿಮಠ ಅಥವಾ ಶ್ರೀರಾಜೇಂದ್ರತೀರ್ಥರಮಹಾಸಂಸ್ಥಾನವೆಂದು ಖ್ಯಾತವಾಯಿತು ಈಮಹಾಸಂಸ್ಥಾನದಲ್ಲಿ ಮುಂದೆ ಜಗದ್ವಿಖ್ಯಾತರಾದ,ಕಥಾನಾಯಕರಾದ ಶ್ರೀವ್ಯಾಸರಾಜಗುರುಸಾರ್ವಭೌಮರವರು ವಿರಾಜಿಸಿದ್ದರಿಂದ ಅಂದಿನಿಂದ ಇದು ಶ್ರೀ ವ್ಯಾಸರಾಜಮಠವೆಂದು ಹೆಸರುಪಡೆಯಿತು. ಈ ಮಹಾಸಂಸ್ಥಾನದಲ್ಲಿ ಶ್ರೀಭಾಷ್ಯದೀಪಿಕಾಚಾರ್ಯರವರೆಗೆ ರಾಜಿಸಿದ ಎಲ್ಲ ಪೀಠಾಧೀಶ್ವರರೂ ಪಾಷ್ಟಿಕ ಮನೆತನದವರೇ ಆಗಿದ್ದು. ಮುಂದೆ ಕಾರಣಾಂತರದಿಂದ ಈ ಸಂಪ್ರದಾಯ ತಪ್ಪಿಹೋಯಿತು.

ಶ್ರೀ ಕವೀಂದ್ರತೀರ್ಥರ"ದಕ್ಷಿಣಾದಿಮಠ"ಅಥವಾ "ಶ್ರೀವಿಬುಧೇಂದ್ರ ಮಠ" "ವಿದ್ಯಾಮಠ" ಮುಂತಾಗಿ ಖ್ಯಾತವಾದ ಶ್ರೀಮದಾಚಾರ್ಯರ ಇನ್ನೊಂದು ಮುಖ್ಯ ಮಹಾಸಂಸ್ಥಾನದಲ್ಲಿ ಪದ್ಮನಾಭತೀರ್ಥರಿಂದಾರಂಭಿಸಿ ಈವರೆವಿಗೂ ಸಹ ಪಾಷ್ಟಿಕ ವಂಶೀಕರೇ ಪೀಠಾಧಿಪತಿಗಳಾಗಿ ಬರುತ್ತಿರುವುದು ಈ ಮಹಾಸಂಸ್ಥಾನದ ವೈಶಿಷ್ಟ್ಯವೂ ಅರವತ್ತೊಕ್ಕಲು ಮನೆತನದ ಮಹತ್ವದ್ಯೋತಕವೂ ಆಗಿರುತ್ತದೆ.

ಶ್ರೀಮದಾಚಾರ್ಯರ ಮಹಾಸಂಸ್ಥಾನಾಧೀಶ್ವರರಾಗಿದ್ದ ಶ್ರೀ ಪದ್ಮನಾಭತೀರ್ಥರೂ, ಶ್ರೀ ಮಾಧವತೀರ್ಥರೂ ಮತ್ತು ಶ್ರೀಮದಕ್ಷೋಭ್ಯತೀರ್ಥರುಗಳೂ ಸ್ಥಾಪಿಸಿದ, ಅವರ ಹೆಸರುಗಳಿಂದಲೇ ಖ್ಯಾತವಾದ ಶ್ರೀಪದ್ಮನಾಭತೀರ್ಥಸತ್ಪರಂಪರೆ ಶ್ರೀಪಾದರಾಜಮಠ· ಶ್ರೀ ಮಾಧವತೀರ್ಥರಸತ್ಪರಂಪರೆಯ ಶ್ರೀಮಾಧವತೀರ್ಥರ

ಮಠ, ಅಥವಾ ಮಜ್ಜಿಗೆಹಳ್ಳಿ ಮಠ, ಶ್ರೀಮದಕ್ಷೋಭ್ಯತೀರ್ಥರಿಂದ ಸ್ಥಾಪಿತವಾದ ಆ ಸತ್ಪರಂಪರೆಯ ಅಕ್ಷೋಭ್ಯತೀರ್ಥ ಮಠಗಳ ಹಾಗೂ ಶ್ರೀಮಾಧವತೀರ್ಥರ ಮಠದಲ್ಲೂ ಪಾಷ್ಟಿಕರೇ ಪೀಠಾಧಿಪತಿಗಳಾಗಿ ಬರುತ್ತಿದ್ದು ಇತ್ತೀಚೆಗೆ ಅಲ್ಲಿಯೂ ಪಾಷ್ಟಿಕ ವಂಶೀಕರು ಪೀಠಾಧಿಪತಿಗಳಾಗುವ ಸಂಪ್ರದಾಯವು ತಪ್ಪಿಹೋಗಿರುತ್ತವೆ ಎಂದು ತಿಳಿದುಬರುತ್ತದೆ.

ಶ್ರೀ ಅಕ್ಷೋಭ್ಯತೀರ್ಥರು ಸ್ಥಾಪಿಸಿದ ಆ ಪರಂಪರೆಯ ಪ್ರಥಮ ಪೀಠಾಧೀಶ ರಾದ ಶ್ರೀ ತ್ರೈಲೋಕ್ಯಭೂಷಣರ ಪ್ರಶಿಷ್ಯರಾದ ಶ್ರೀ ಲೋಕಪೂಜ್ಯರ ಕಾಲದಲ್ಲಿ ಇಬ್ಭಾಗವಾದ ಆ ಪೀಠದ ಒಂದು ಮಠದಲ್ಲಿ ಶ್ರೀ ಪುಣ್ಯಕೀರ್ತಿಗಳೆಂಬುವವರೂ, ಮತ್ತೊಂದು ಮಠದಲ್ಲಿ ಶ್ರೀ ರಘುಪುಂಗವರೂ ಪೀಠಾಧಿಪತಿಗಳಾದರು. ಶ್ರೀಪುಣ್ಯ ಕೀರ್ತಿಗಳ ಪರಂಪರೆಯೇ ಇಂದು ಶ್ರೀ ಅಕ್ಷೋಭ್ಯತೀರ್ಥರ ಮೂಲಸಂಸ್ಥಾನವಾದ ಬಾಳಗಾರು ಮಠವೆಂದು ಖ್ಯಾತಿಗಳಿಸಿದೆ. ಶ್ರೀ ರಘುಪುಂಗವರು ವಿರಾಜಿಸಿದ ಮಠವು ಶ್ರೀ ಕೂಡ್ಲಿಗಿ ಆರ್ಯ ಅಕ್ಷೋಭ್ಯತೀರ್ಥರ ಮಠವೆಂದು ಹೆಸರು ಪಡೆದಿದೆ.

ಈ ಮಠಗಳಲ್ಲಿ ಕೂಡ್ಲಗಿ ಶ್ರೀ ಅಕ್ಷೋಭ್ಯತೀರ್ಥರ ಮಠದಲ್ಲಿ ಈಗ ಐದಾರು ದಶಕಗಳವರೆಗೂ ಪಾಷ್ಟಿಕವಂಶೀಯರೇ ಅದರಲ್ಲೂ ಶ್ರೀರಾಘವೇಂದ್ರಸ್ವಾಮಿ ಗಳವರ ಮಠದ ಶಿಷ್ಯರುಗಳೇ ಪೀಠಾಧಿಪತಿಗಳಾಗುತ್ತಾ ಬರುತ್ತಿದ್ದರು. ಕಾರಣಾಂತರ ದಿಂದ ಮತ್ತು ಕೆಲವರ ಹಸ್ತಕ್ಷೇಪದಿಂದ ಆ ಪೀಠದಲ್ಲಿ ಪಾಷ್ಟಿಕರು ಪೀಠಾಧಿಪತಿ ಗಳಾಗುವ ಸಂಪ್ರದಾಯವು ನಿಂತುಹೋಗಿರುತ್ತದೆ. ಇನ್ನು ಶ್ರೀಬಾಳಗಾರು ಮಠದಲ್ಲಿಯೂ ಹಿಂದೆ ಕೆಲಕಾಲ ಪಾಷ್ಟಿಕರು ಮತ್ತೆಕೆಲಕಾಲ ಇತರರು ಪೀಠಾಧಿಪತಿ ಗಳಾಗುತ್ತಾ ಬಂದಿರುವುದು ಕಂಡು ಬಂದಿದೆ. ಈಗಿನ ಪೀಠಾಧೀಶರಾದ ಶ್ರೀರಘು ಮಾನ್ಯತೀರ್ಥರು ಪಾಷ್ಟಿಕ ವಂಶದ ದೌಹಿತ್ರರಾಗಿದ್ದಾರೆ.

ಶ್ರೀ ಪದ್ಮನಾಭತೀರ್ಥ ಸತ್ಪರಂಪರೆಯ ಶ್ರೀಪಾದರಾಜಮಠದಲ್ಲಿ ಅಂದಿನಿಂದ ಇಂದಿನವರೆಗೂ ಪಾಷ್ಟಿಕವಂಶದವರೇ ಪೀಠಾಧಿಪತಿಗಳಾಗುತ್ತಿದ್ದಾರೆ.

ಶ್ರೀಮದಾಚಾರ್ಯರ ಮಹಾಸಂಸ್ಥಾನದಲ್ಲಿ ದಕ್ಷಿಣಾದಿಮಠ ಅಂದರೆ ಶ್ರೀಕವೀಂದ್ರ ಶ್ರೀವಿಭುಧೇಂದ್ರ, ಅಥವಾ ರಾಘವೇಂದ್ರತೀರ್ಥರ ಮಠವೆಂದು ಖ್ಯಾತಿಗಳಿಸಿರುವ ಶ್ರೀಮದಾಚಾರ್ಯರ ಮಹಾಸಂಸ್ಥಾನದಲ್ಲಿ ಪ್ರಾರಂಭದಿಂದಲೂ ಇಂದಿನವರೆಗೂ ಪಾಷ್ಟಿಕಮನೆತನದವರೇ ಪೀಠಾಧಿಪತಿಗಳಾಗುತ್ತಿರುವುದರ ಜೊತೆಗೆ ಶ್ರೀರಾಘ ವೇಂದ್ರಸ್ವಾಮಿಗಳ ಕಾಲದಿಂದ ಪಾಷ್ಟಿಕಮನೆತನದ "ಬೀಗಮುದ್ರೆ" "ಗೌತಮ ಗೋತ್ರದವರೇ ಪೀಠಾಧಿಪತಿಗಳಾಗುತ್ತಿರುವುದೂ, ಶ್ರೀ ಶ್ರೀಪಾದರಾಜಮಠದಲ್ಲಿ ಅವರ ಕಾಲದಿಂದ ವಿಶ್ವಾಮಿತ್ರಗೋತ್ರ-ಹಾಗೂ ಗೌತಮಗೋತ್ರದ'ಬೀಗಮುದ್ರೆ' ಮನೆತನದವರು ಪೀಠಾಧಿಪತಿಗಳಾಗುತ್ತಿರುವುದು ದ್ವೈತಸಿದ್ಧಾಂತದಲ್ಲಿ ಒಂದು ಮಹತ್ವಪೂರ್ಣ ವಿಷಯವಾಗಿರುತ್ತದೆ.

ಇಂತು ವಿಖ್ಯಾತವಾದ ಪಾಷ್ಟಿಕಮನೆತನದಲ್ಲಿ ಕಾಶ್ಯಪಗೋತ್ರ ಸಂಜಾತರಾದ ವಲ್ಲಭದೇವ ಎಂಬುವರು ಕರ್ನಾಟಕದ ಈಗಿನ ತಿರುಮಕೂಡ್ಲು ತಾಲ್ಲೂಕಿಗೆ ಸೇರಿದ ವಹ್ನಿಪುರ ಅಥವಾ ಬನ್ನೂರು ಪ್ರಾಂತದ ರಾಜ್ಯ ಪ್ರತಿನಿಧಿಗಳಾಗಿ ಅಧಿಕಾರದಲ್ಲಿದ್ದರು. ಇವರು ಜಮಖಂಡಿಯ ಮಾಂಡಲಿಕರಾಗಿದ್ದ ಧುಂಡಿರಾಜರ ಅಳಿಯಂದಿರು. ಇವರಿಗೆ ನರಸಿಂಹ ರಾಮದೇವ ಎಂಬ ಪುತ್ರನೂ ಭಾರತೀ ಎಂಬ ಪುತ್ರಿಯೂ ಜನಿಸಿದರು. ವಲ್ಲಭದೇವನ ಮಗನಾದ ನರಸಿಂಹ ರಾಮದೇವನಿಗೆ ರುಕ್ಮಾಂಬೆ ಎಂಬ ಪತ್ನಿಯಿದ್ದಳು. ಇವರಿಗೆ ಶ್ರೀರಾಜೇಂದ್ರತೀರ್ಥರ ಸೋದರರಾದ ಶ್ರೀಜಯಧ್ವಜತೀರ್ಥರ ಅನುಗ್ರಹದಿಂದ ಆರುಜನ ಪುತ್ರರಾದರು. ಅವರಲ್ಲಿ ಕಿರಿಯರಾದ ರಾಮಾಚಾರ್ಯರು ರಾಜಕೀಯ ವಲಯದಲ್ಲಿ ವಲ್ಲಭಸುಮತಿ ಅಥವಾ ಬಲ್ಲಾಣಸುಮತಿ ಎಂಬ ಹೆಸರಿನಿಂದ ಖ್ಯಾತರಾಗಿದ್ದರು. 15ನೆಯ ಶತಮಾನದಲ್ಲಿ ತಲಕಾಡು ಮಂಡಲಕ್ಕೆ ಸೇರಿದ್ದ ಬನ್ನೂರು ಎಂಬ ಪಾಳೆಯಪಟ್ಟನ್ನು ವೆಂಕಟಗಿರಿ ನಾಯಕನೆಂಬ ರಾಜನು ಆಳುತ್ತಿದ್ದನು. ಅವನಿಗೆ ಮಂತ್ರಿಗಳೂ ರಾಜಪುರೋಹಿತರೂ ಆತ್ಮೀಯರೂ ಆಗಿದ್ದ ನರಸಿಂಹ ರಾಮದೇವನೇ ಬಲ್ಲಾಣಸುಮಂತ್ರಿಯೆಂದು ಪ್ರಖ್ಯಾತರಾದ ರಾಮಾಚಾರ್ಯರ ತಂದೆಗಳು, ರಾಮಾಚಾರ್ಯರ ತಂದೆ ನರಸಿಂಹ ರಾಮದೇವನ ತರುವಾಯ ಬನ್ನೂರು ಪ್ರಾಂತ್ಯದ ವೆಂಕಟಗಿರಿ ನಾಯಕನ ಮಂತ್ರಿಗಳಾಗಿ ರಾಜ್ಯಾಡಳಿತದ ಹೊಣೆಹೊತ್ತು ಅಧಿಕಾರಿಗಳಾಗಿ ಆಡಳಿತ ನಡೆಸುತ್ತಿದ್ದರು. ಈ ಅರವತ್ತೊಕ್ಕಲು ಮನೆತನದ ಈ ವಂಶವು ಬಹು ವೈಶಿಷ್ಟ್ಯಪೂರ್ಣವಾದುದು. ಶ್ರೀಮಧ್ವಾಚಾರ್ಯರರ ಸಾಕ್ಷಾತ್ ಶಿಷ್ಯರೂ ಆಚಾರ್ಯರ ವೇದಾಂತ ಸಾಮ್ರಾಜ್ಯಧೀಶರೂ ಆದ ಅಕ್ಷೋಭ್ಯತೀರ್ಥರು, ಜಯತೀರ್ಥರು, ವಿದ್ಯಾಧಿರಾಜರು, ರಾಜೇಂದ್ರ-ಕವೀಂದ್ರ-ಜಯಧ್ವಜ-ಪುರುಷೋತ್ತಮ-ಸ್ವರ್ಣವರ್ಣ ಬ್ರಹ್ಮಣ್ಯ-ಲಕ್ಷ್ಮೀನಾರಾಯಣಮುನಿಗಳೂ, ಅವರ ಸಮೀಪ ಬಂಧುಗಳಾದ ಶ್ರೀಸುರೇಂದ್ರತೀರ್ಥ-ವಿಜಯೀಂದ್ರ-ಸುಧೀಂದ್ರತೀರ್ಥರುಗಳು ರಾಮಾಚಾರ್ಯರ (ಬಲ್ಲಾಣಸುಮತಿಗಳ) ಬಾಂಧವರಾಗಿದ್ದ ಇವರೆಲ್ಲರೂ ಪಾಷ್ಟಿಕಕುಲಾವತಂಸರೇ ಆಗಿರುವುದರಿಂದ ಈ ಮನೆತನದ ಬಗ್ಗೆ ಸ್ವಲ್ಪ ವಿವರಿಸುವುದು ಅವಶ್ಯವೆಂದು ಭಾವಿಸುವೆವು.

ಈ ಪಾಷ್ಟಿಕ ಮನೆತನಕ್ಕೆ ಹದಿನಾಲ್ಕು ಗೋತ್ರಗಳಿವೆ. ಅವು ಹೀಗಿವೆ— 1) ಕಾಶ್ಯಪಗೋತ್ರ 2) ಆತ್ರೇಯಸಗೋತ್ರ 3) ಭಾರದ್ವಾಜಗೋತ್ರ 4) ವಿಶ್ವಾಮಿತ್ರಗೋತ್ರ 5) ಗೌತಮಗೋತ್ರ 6) ಜಾಮದಗ್ನಿಗೋತ್ರ 7) ವಸಿಷ್ಠಗೋತ್ರ 8) ಶಾಂಡಿಲ್ಯಗೋತ್ರ 9) ಅಗಸ್ತ್ಯಗೋತ್ರ 10) ಹರಿತಸಗೋತ್ರ 11) ಬಾದರಾಯಣಗೋತ್ರ 12) ಕೌಂಡಿಣ್ಯಗೋತ್ರ 13) ಕೌಶಿಕಗೋತ್ರ 14) ಶ್ರೀವತ್ಸಗೋತ್ರ. ಈ ಹದಿನಾಲ್ಕು ಗೋತ್ರಗಳಿಗೆ ಅರವತ್ನಾಲ್ಕು ಮನೆತನಗಳಿದ್ದು 3 ಮನೆತನದವರು ಯುದ್ಧದಲ್ಲಿ ವೀರಸ್ವರ್ಗ ಹೊಂದಿದ್ದರಿಂದಲೂ,

ಭಾರತ ಮನೆತನವು ಸಂತಾನವಿಲ್ಲದೆಯೂ 64 ಮನೆತನಗಳಲ್ಲಿ 4 ಮನೆತನವು ನಷ್ಟವಾಗಿ ಅರವತ್ತು ಮನೆತನಗಳು ಮಾತ್ರ ಉಳಿದು ಬೆಳೆದು ಬಂದಿತು. ಆದ್ದರಿಂದಲೇ ಇವರು ಅರವತ್ತೊಕ್ಕಲು ಅಥವಾ ಷಾಷ್ಟಿಕರೆಂದು ಪ್ರಖ್ಯಾತರಾದರು.

ಈ ಷಾಷ್ಟಿಕವಂಶದ ಭಾರದ್ವಾಜಗೋತ್ರದ. "ಸ್ವರ್ಣಭಂಡಾರಿ" ಅಥವಾ ಚಿನ್ನಭಂಡಾರಿ ಮನೆತನವು ವಿದ್ಯೆ. ಆಚಾರ-ಕಲಿತನಗಳಿಗೆ ಹೆಸರಾದುದು. ಈ ವಂಶದಲ್ಲಿ ಕೇಶವಭಟ್ಟ ಧುಂಡಿರಾಜರೆಂಬ ಅಣ್ಣತಮ್ಮಂದಿರಿದ್ದರು. ಹಿರಿಯರಾದ ಕೇಶವಭಟ್ಟರಿಗ ಗೋವಿಂದಭಟ್ಟರೆಂಬ ಪುತ್ರರಾದರು. ಈ ವಂಶದ ಪೂರ್ವಿಕರು ಕದಂಬ ಸಾಮ್ರಾಜ್ಯದ ಉನ್ನತಿಯ ಕಾಲದಲ್ಲಿ ಸಾಮ್ರಾಜ್ಯದ ಕೋಶಾಧ್ಯಕ್ಷ ಪದವಿಯಲ್ಲಿದ್ದರು. ಅಂತೆಯೇ ಅವರಿಗೆ "ಸ್ವರ್ಣಭಂಡಾರಿ" ಅಥವಾ ಚಿನ್ನಭಂಡಾರಿಗಳೆಂದು ಹೆಸರಾಯಿತು. ಇವರ ಪೂರ್ವಜರ ವಿದ್ಯೆ, ಆಚಾರ, ಪ್ರತಿಭೆ, ಶೀಲ, ಶೌರ್ಯಾದಿಗುಣಗಳು ಹಾಗೂ ಸಾಮ್ರಾಜ್ಯ ನಿಷ್ಠೆಗಳಿಂದ ಸುಪ್ರೀತನಾದ ತ್ರಿನೇತ್ರ ಕದಂಬನು ಇವರಿಗೆ ಈಗಿನ ಶಿವಮೊಗ್ಗ ಜಿಲ್ಲೆಗೆ ಸಮೀಪದಲ್ಲಿರುವ ಭಂಡಾರಕೇರಿ ಪ್ರಾಂತ್ಯವನ್ನು ಜಹಗೀರಾಗಿ ಕೊಟ್ಟು ಗೌರವಿಸಿದ್ದನು. ಈ ಮನೆತನದವರನ್ನು ಭಟ್ಟರು, ನಾಯಕರು, ಸ್ವರ್ಣಭಂಡಾರಿಗಳೆಂದು ಜನರು ಗೌರವಿಸುತ್ತಿದ್ದರು.

ಕದಂಬ ಸಾಮ್ರಾಜ್ಯದ ವಿಖ್ಯಾತ ಚಕ್ರವರ್ತಿಯಾದ ಮಯೂರವರ್ಮನ ಕಾಲದಲ್ಲಿ "ಅಶ್ವಮೇಧಯಾಗ"ಕ್ಕೆ ಸಂಬಂಧಿಸಿದ ಒಂದು ಮುಖ್ಯ ಧಾರ್ಮಿಕ ಪ್ರಶ್ನೆಯಿಂದ ಸಾಮ್ರಾಟನಿಗೂ ಷಾಷ್ಟಿಕರಿಗೂ ಭಿನ್ನಾಭಿಪ್ರಾಯವೇರ್ಪಟ್ಟು ಈ ಷಾಷ್ಟಿಕ ಮನೆತನದವರೆಲ್ಲಾ ಕದಂಬ ಸಾಮ್ರಾಜ್ಯವನ್ನೇ ತ್ಯಜಿಸಿ ತಮ್ಮ ಇತರ ಷಾಷ್ಟಿಕ ಬಂಧುಗಳೊಡನೆ ಚಾಲುಕ್ಯ ರಾಜಧಾನಿಯಾಗಿದ್ದ ದೇವರಿಗೆ ಹೋಗಿ ನೆಲೆಸಿದರು. ಈ ಷಾಷ್ಟಿಕರಿಗೆ ತಮ್ಮ ಸ್ಥಾನ, ಪದವಿ, ಸಂಪತ್ತುಗಳಿಗಿಂತ ಧಾರ್ಮಿಕ, ತಾತ್ವಿಕ ಭಾವನೆಗಳೇ ಹಿರಿದಾಗಿದ್ದು ತಮ್ಮ ಧರ್ಮ ಸಂರಕ್ಷಣೆಯ ಹೊಣೆಗಾರಿಕೆಗೆ ವ್ಯತ್ಯಯ ಬರುವುದೆಂದು ತಮ್ಮ ಸ್ಥಾನ ಪದವಿಗಳನ್ನೂ ಧಿಕ್ಕರಿಸಿ ಹೊರಟ ಧೀಮಂತರೆಂದು ಸರ್ವರಿಂದ ಶ್ಲಾಘನೆಗೆ ಪಾತ್ರರಾದ ಇವರ ಧರ್ಮನಿಷ್ಠೆ ಅಪೂರ್ವವಾದುದು.

ಹೀಗೆ ಕದಂಬ ಸಾಮ್ರಾಜ್ಯವನ್ನು ತ್ಯಜಿಸಿದ ಷಾಷ್ಟಿಕಮನೆತನದವರಲ್ಲಿ ಒಂದು ಪೀಳಿಗೆಯು ದಕ್ಷಿಣ ಕನ್ನಡ ಪ್ರಾಂತ್ಯಕ್ಕೂ ಮತ್ತೊಂದು ಪೀಳಿಗೆಯು ಕಳಿಂಗ ದೇಶಕ್ಕೂ, ಇನ್ನೊಂದು ಪೀಳಿಗೆಯು ಈಗಿನ ಮಹಾರಾಷ್ಟ್ರ ಪ್ರಾಂತ್ಯಕ್ಕೂ, ಮತ್ತೊಂದು ಪೀಳಿಗೆಯು ಶೃಂಗಗಿರಿಯ ಪ್ರಾಂತ್ಯಕ್ಕೂ, ಉಳಿದವರು ದೇವಗಿರಿಗೂ ಹೋಗಿ ನೆಲೆಸಿದರು.

ದಕ್ಷಿಣಕನ್ನಡ ಜಿಲ್ಲೆಗೆ ಹೋಗಿ ನೆಲಸಿದ ಷಾಷ್ಟಿಕ ಮನೆತನದಲ್ಲಿ ಮುಂದೆ ಶ್ರೀ ಮಧ್ಯಗೇಹಭಟ್ಟರು, ಅವರ ಪುತ್ರರಾದ ಶ್ರೀಮಧ್ವಾಚಾರ್ಯರು ಲೋಕವಿಖ್ಯಾತರಾದವರು. ಕಳಿಂಗದೇಶಕ್ಕೆ ಹೋದ ಷಾಷ್ಟಿಕರಲ್ಲಿ ಶ್ರೀಶೋಭನಭಟ್ಟ (ಶ್ರೀಪದ್ಮ

ನಾಭತೀರ್ಥರು), ಶ್ರೀಶಾಮಶಾಸ್ತ್ರಿ (ನರಹರಿತೀರ್ಥರು)ಗಳು ಮುಂದೆ ಪ್ರಖ್ಯಾತರಾದರು. ಮಹಾರಾಷ್ಟ್ರ ಪ್ರಾಂತ್ಯಕ್ಕೆ ಹೋಗಿ ನೆಲೆಸಿದ ಷಾಷ್ಟಿಕರೇ ಮುಂದೆ "ಚಿತ್‌ಪಾವನ"ರೆಂದು ವಿಖ್ಯಾತರಾದರು. ಈ ವಂಶದವರೇ ಮಹಾರಾಷ್ಟ್ರವನ್ನಾಳಿದ ಪೇಶ್ವೆಗಳು ಮತ್ತಿತರ ಪ್ರಖ್ಯಾತರು. ಶೃಂಗಗಿರಿಯತ್ತ ಹೋದ ಷಾಷ್ಟಿಕರೇ ಅದ್ವೈತ ವಿದ್ಯಾಚಾರ್ಯರೆನಿಸಿದ ಶ್ರೀವಿದ್ಯಾರಣ್ಯ ಸಹೋದರರ ವಂಶೀಕರು..

ದೇವಗಿರಿಗೆ ಹೋಗಿ ನೆಲೆಸಿದ ಈ ಷಾಷ್ಟಿಕ ಮನೆತನದ 'ಸ್ವರ್ಣಭಂಡಾರಿ' ವಂಶೀಕರ ವಿದ್ಯಾ-ಪ್ರತಿಭಾ-ಶೌರ್ಯ-ಸಾಹಸಾದಿಗಳನ್ನು ಕಂಡು ಚಾಲುಕ್ಯರಾಜರು ಈ ಮನೆತನದವರನ್ನು ತಮ್ಮ ಆಧಿಪತ್ಯಕ್ಕೆ ಸೇರಿದ್ದ ಜಮಖಂಡಿಯ ಮಾಂಡಲಿಕರನ್ನಾಗಿ ಮಾಡಿ ಗೌರವಿಸಿದರು. ಇದರಂತೆ ಇತರ ಷಾಷ್ಟಿಕರಿಗೆ ಚಾಲುಕ್ಯ ರಾಜ್ಯದಲ್ಲಿ ಗ್ರಾಮ ಭೂಮಿಗಳನ್ನಿತ್ತು, ಸಾಮ್ರಾಜ್ಯದ ವಿವಿಧ ಉನ್ನತ ಹುದ್ದೆಗಳನ್ನಿತ್ತು ಗೌರವಿಸಿದರು.

ಮೇಲೆ ಹೇಳಿದ 'ಸ್ವರ್ಣಭಂಡಾರಿ' ವಂಶದಲ್ಲಿಯೇ ಕೇಶವಭಟ್ಟ-ಧುಂಡಿರಾಜರು ಖ್ಯಾತರಾಗಿ ಜಮಖಂಡಿ ಪ್ರಾಂತ್ಯವನ್ನಾಳುತ್ತಿದ್ದರು. ಕೇಶವಭಟ್ಟರಿಗೆ ಕ್ರಿ. ಶ. 1282ರಲ್ಲಿ ಗೋವಿಂದಭಟ್ಟರು ಜನಿಸಿದರು. ಇವರು ಮಹಾದಿಗ್ದಂತಿ ಪಂಡಿತರಾಗಿದ್ದರು. ಕೇಶವಭಟ್ಟರ ತರುವಾಯ ಜಮಖಂಡಿ ಪ್ರಾಂತ್ಯವನ್ನು ಗೋವಿಂದಭಟ್ಟರು ಆಳುತ್ತಿದ್ದರು. ಆ ಕಾಲದಲ್ಲಿಯೇ ಅವರಿಗೆ ಶ್ರೀಮನ್ಮಧ್ವಾಚಾರ್ಯರ ಸಂದರ್ಶನವಾಗಿ ದರ್ಶನಮಾತ್ರದಿಂದಲೇ ಆಚಾರ್ಯರಲ್ಲಿ ಅಸದೃಶ ಭಕ್ತಿ ಗೌರವ ಯುಕ್ತರಾದ ಗೋವಿಂದಭಟ್ಟರು ಶ್ರೀಮಧ್ವಾಚಾರ್ಯರ ಮತಾನುಯಾಯಿಗಳಾದರು. ಮುಂದೆ ಇವರು ವಿರಕ್ತರಾಗಿ ಕ್ರಿ. ಶ. 1312ರ ಹಾಗೆ ತಮ್ಮ ಚಿಕ್ಕಪ್ಪಂದಿರಾದ ಧುಂಡಿರಾಜರಿಗೆ ಪ್ರಾಂತ್ಯಾಧಿಪತ್ಯವಹಿಸಿ ಶ್ರೀಮಧ್ವಾಚಾರ್ಯರಿಂದ ಪರಮಹಂಸಾಶ್ರಮವನ್ನು ಸ್ವೀಕರಿಸಿ ಶ್ರೀ ಅಕ್ಷೋಭ್ಯತೀರ್ಥರೆಂಬ ಹೆಸರಿನಿಂದ ಮಧ್ವಾಚಾರ್ಯರ ಶಿಷ್ಯರಾದರು. ಶ್ರೀ ಮಧ್ವಾಚಾರ್ಯರು ಕೊನೆಯಬಾರಿ ಅದೃಶ್ಯರಾಗಿ ಬದರಿಕಾಶ್ರಮಕ್ಕೆ ತೆರಳುವ ಮೊದಲೇ ವ್ಯವಸ್ಥೆ ಮಾಡಿದ್ದಂತೆ ಶ್ರೀಮಧ್ವಾಚಾರ್ಯರ ವೇದಾಂತಸಾಮ್ರಾಜ್ಯಕ್ಕೆ, ಅವರ ಪಟ್ಟದ ಶಿಷ್ಯರುಗಳಾದ ಶ್ರೀಪದ್ಮನಾಭತೀರ್ಥ-ನರಹರಿತೀರ್ಥ-ಮಾಧವತೀರ್ಥರು ಮತ್ತು ಕಿರಿಯವರಾದ ಶ್ರೀಅಕ್ಷೋಭ್ಯತೀರ್ಥರುಗಳು ಕ್ರಮವಾಗಿ ಒಬ್ಬರಾದ ಮೇಲೆ ಒಬ್ಬರು ಮಹಾಸಂಸ್ಥಾನಾಧಿಪತಿಗಳಾಗಿ ದ್ವೈತಸಾಮ್ರಾಜ್ಯವನ್ನು ಪರಿಪಾಲಿಸಿದ ವಿಚಾರ ಇತಿಹಾಸಪ್ರಸಿದ್ಧವಾಗಿದೆ.

ವಿಜಯನಗರ ಸಾಮ್ರಾಜ್ಯಸಂಸ್ಥಾಪಕರಾದ ಶ್ರೀವಿದ್ಯಾರಣ್ಯರು ಮತ್ತು ಶ್ರೀ ಅಕ್ಷೋಭ್ಯತೀರ್ಥರು ಪೂರ್ವಾಶ್ರಮದಲ್ಲಿ ಸಹಾಧ್ಯಾಯಿಗಳಾಗಿ, ಮಿತ್ರರೂ ಆಗಿದ್ದ ಷಾಷ್ಟಿಕ ಕುಲದೀಪಕರು, ಒಬ್ಬರು ಅದ್ವೈತಮತ ಸ್ಥಾಪಕರಾದರೆ ಮತ್ತೊಬ್ಬರು ದ್ವೈತಸಿದ್ಧಾಂತ ಸ್ಥಾಪಕರು. ತಾತ್ವಿಕಭಿನ್ನಾಭಿಪ್ರಾಯವಿದ್ದರೂ ಈರ್ವರೂ ಮಿತ್ರರಾಗಿಯೇ ಇದ್ದುದು ಗಮನಾರ್ಹವಾಗಿದೆ. ಅಂತೆಯೇ ಅಕ್ಷೋಭ್ಯತೀರ್ಥರು ಕೆಲಕಾಲ

ಅಭಿವೃದ್ಧಿಯ ಶೈಶವಾವಸ್ಥೆಯಲ್ಲಿದ್ದ ವಿಜಯನಗರದಲ್ಲಿದ್ದು ಮುಂದೆ ಸಾಮ್ರಾಟನ ಅಳಿಯ ಸೋಮಶೇಖರನ ಅಧರ್ಮ ವ್ಯಾಪಾರದಿಂದ ಕಡುನೊಂದು ವಿಜಯನಗರವನ್ನೇ ತ್ಯಜಿಸಿ ಮಾನ್ಯಖೇಟದಲ್ಲಿ ವಾಸಮಾಡಹತ್ತಿದರು. ಕೆಲಕಾಲನಂತರ ಮುಳಬಾಗಿಲಿನಲ್ಲಿ ವಿದ್ಯಾರಣ್ಯ-ಅಕ್ಷೋಭ್ಯತೀರ್ಥರಿಗೆ ದ್ವೈತಾದ್ವೈತವಾಕ್ಯಾರ್ಥವಾಗಿ ಅಕ್ಷೋಭ್ಯತೀರ್ಥರು "ತತ್ತ್ವಮಸಿ" ವಾಕ್ಯಾರ್ಥದಲ್ಲಿ ವಿದ್ಯಾರಣ್ಯರನ್ನು ಜಯಿಸಿ "ವಿಜಯಸ್ತಂಭ" ವನ್ನು ಸ್ಥಾಪಿಸಿದ ವಿಚಾರ ಇತಿಹಾಸ ಪ್ರಸಿದ್ಧವಾಗಿದೆ.[1]

ಜಮಖಂಡಿಯಲ್ಲಿ ರಾಜ್ಯಭಾರಮಾಡುತ್ತಿದ್ದ ಧುಂಡಿರಾಜರಿಗೆ ೧) ನರಹರಿನಾಯಕ, ೨) ಕೃಷ್ಣಪ್ಪನಾಯಕ, ೩) ರಘುನಾಥನಾಯಕ ಎಂಬ ಪುತ್ರರೂ, ೪-೫ ಮತ್ತು ಈರ್ವರು ಪುತ್ರಿಯರೂ ಜನಿಸಿ ಅಭಿವೃದ್ಧಿಸಿದರು. ಧುಂಡಿರಾಜರು ತಮ್ಮ ಜ್ಯೇಷ್ಠ ಪುತ್ರಿಯನ್ನು 'ಭಾರತ' ಮನೆತನದ ಸರ್ವೋತ್ತಮದೇವನಿಗೆ ಕೊಟ್ಟು ಮದುವೆ ಮಾಡಿದರು. ಎರಡನೆಯ ಮಗಳನ್ನು ಗಂಗರಾಜರ ಆಳ್ವಿಕೆಗೆ ಸೇರಿದ್ದ ಬನ್ನೂರು ಪ್ರಾಂತ್ಯವನ್ನಾಳುತ್ತಿದ್ದ ಪಾಷ್ಟಿಗವಂಶದ ಕಾಶ್ಯಪಗೋತ್ರದ ವಲ್ಲಭದೇವನಿಗೆ ಕೊಟ್ಟು ವಿವಾಹವಾಗಿದ್ದಿತು. ಇದೇ ಸಮಯದಲ್ಲಿ ಬಹುಮನಿ ರಾಜ್ಯದ ಅಲ್ಲಾವುದ್ದೀನನಿಗೂ ದೇವಗಿರಿಯವರಿಗೂ ವಿರೋಧ ಬೆಳೆದು ಯುದ್ಧವಾಯಿತು. ದೇವಗಿರಿಯ ಯಾದವರ ಮಾಂಡಲೀಕರಾಗಿದ್ದ ಜಮಖಂಡಿಯ ಧುಂಡಿರಾಜರು ಮತ್ತು ಅವರ ಅಳಿಯ ಸರ್ವೋತ್ತಮದೇವ ಮತ್ತು ಧುಂಡಿರಾಜರ ಕಿರಿಯ ಪುತ್ರ ರಘುನಾಥನಾಯಕ ಇವರು ಸೈನ್ಯದೊಡನೆ ಹೊರಟು ದೇವಗಿರಿಯವರ ಪಕ್ಷವಹಿಸಿ ಅಲ್ಲಾವುದ್ದೀನನೊಡನೆ ಯುದ್ಧಮಾಡಿದರು. ದುರ್ದೈವದಿಂದ ಯುದ್ಧದಲ್ಲಿ ಧುಂಡಿರಾಜರಿಗೆ ಬಹುಘಾಯಗಳಾಗಿ ಸರ್ವೋತ್ತಮದೇವನು ಮಡಿದು ವೀರಸ್ವರ್ಗಪಡೆದನು. ಮತ್ತೊಂದುಕಡೆ ಯುದ್ಧಮಾಡುತ್ತಿದ್ದ ರಘುನಾಥನಾಯಕರಿಗೆ ಈ ವಿಚಾರ ತಿಳಿದು ಸಹಾಯಕ್ಕೆ ಬರುವಷ್ಟರಲ್ಲಿ ಅನಾಹುತ ನಡೆದು ಹೋಗಿದ್ದಿತು. ಯುದ್ಧದಲ್ಲಿ ಬಹುಮನಿಯವರು ಜಯಿಸಿ ಜಮಖಂಡಿ ಪ್ರಾಂತ್ಯವು ಅವರ ವಶವಾಯಿತು. ಆದರೆ ಧುಂಡಿರಾಜರ ದೂರದ ಬಂಧುವೂ (ಪಾಷ್ಟಿಕ) ಬಹುಮನಿರಾಜ್ಯಸ್ಥಾಪಕನೂ ಮಹಾಮಂತ್ರಿಯೂ ಅಲ್ಲಾವುದ್ದೀನನ ಪಾಲಕನೂ ಆದ ಗಂಗಾಧರಭಟ್ಟನ ಆಜ್ಞೆಯಂತೆ ಅಲ್ಲಾವುದ್ದೀನನು ಧುಂಡಿರಾಜರು ವೃದ್ಧರಾಗಿದ್ದರಿಂದ ಅವರ ಪುತ್ರರಾದ ರಘುನಾಥನಾಯಕರಿಗೆ ಮತ್ತೆ ಜಮಖಂಡಿ ಪ್ರಾಂತ್ಯದ ಅಧಿಕಾರವನ್ನು ವಹಿಸಿಕೊಟ್ಟು ಗೌರವಿಸಿದನು.

---

1. ಅಸಿನಾ ತತ್ವಮಸಿನಾ ಪರಜೀವ ಪ್ರಭೇದಿನಾ ।
ವಿದ್ಯಾರಣ್ಯಮಹಾರಣ್ಯಂ ಅಕ್ಷೋಭ್ಯಮುನಿರಚ್ಛಿನತ್ ॥ (ವಿಜಯಸ್ತಂಭ)
ಈ ವಿಜಯಸ್ತಂಭವು ಅದ್ಯಾಪಿ ಮುಳಬಾಗಿಲಿನ ಗುಡ್ಡದಮೇಲೆ ವಿರಾಜಿಸಿದೆ.

ರಘುನಾಥನಾಯಕರು ವೈರಾಗ್ಯತಾಳಿ ಆಸ್ತಿಯನ್ನು ನಾಲ್ಕುಭಾಗಮಾಡಿ ಹಿರಿಯ ಸಹೋದರ ನರಹರಿನಾಯಕ ಎರಡನೆಯ ಕಿರಿಯ ಸಹೋದರ ಕೃಷ್ಣಪ್ಪ ನಾಯಕರಿಗೆ ಮಾನವೀ ಪ್ರಾಂತ್ಯ, ಈಗಿನ ಶಿವಮೊಗ್ಗಾ ಜಿಲ್ಲೆಗೆ ಸೇರಿದ್ದ ಪುರಂದರ (ಪುರ)ಗಡದ ಕೆಲಭಾಗ ಹೀಗೆ 2 ಭಾಗವನ್ನು ಕೊಟ್ಟು ಉಳಿದ ಎರಡು ಭಾಗವನ್ನು ಪಂಡಿತರಪೋಷಣೆ, ಯಾತ್ರಿಕರಿಗೆ ಅನ್ನದಾನಗಳಿಗಾಗಿ ವಿಶ್ವಸ್ಥಸಮಿತಿಗೆ ಒಪ್ಪಿಸಿ ಕೊಟ್ಟು ತಮ್ಮ ದೊಡ್ಡಪ್ಪನ ಪುತ್ರರೂ,ಆಚಾರ್ಯ ಮಹಾಸಂಸ್ಥಾನಾಧೀಶರೂ ಆದ ಶ್ರೀ ಅಕ್ಷೋಭ್ಯತೀರ್ಥರಿಂದ ಪರಮಹಂಸಾಶ್ರಮಪಡೆದು ಕ್ರಿ. ಶ. 1363-65ರ ಹಾಗೆ "ಶ್ರೀಜಯತೀರ್ಥ" ರೆಂಬ ಹೆಸರಿನಿಂದ ಶ್ರೀಮದಾಚಾರ್ಯರ ಸರ್ವಮೂಲ ಗ್ರಂಥಗಳಿಗೆ ವಿಖ್ಯಾತ ಟೀಕೆಗಳನ್ನು ರಚಿಸಿ "ಶ್ರೀಟೀಕಾಚಾರ್ಯ" ರೆಂದು ಜಗತ್ತಿನಲ್ಲಿ ವಿಖ್ಯಾತರಾಗಿ ಕೀರ್ತಿಗಳಿಸಿದರು.

ಪಾಷ್ಟಿಕ ವಂಶದ 'ಭಾರತ' ಮನೆತನದ ಸರ್ವೋತ್ತಮದೇವ (ಧುಂಡಿರಾಜರ ಹಿರಿಯ ಅಳಿಯ) ಯುದ್ಧಕಾಲದಲ್ಲಿ ಮಡಿದಾಗ ಅವನಿಗೆ ಸಣ್ಣವಯಸ್ಸಿನ ರಾಜದೇವ ಮತ್ತು ಜಯದೇವ ಎಂಬ ಇಬ್ಬರು ಪುತ್ರರಿದ್ದರು. ಹಿರಿಯನಾದ ರಾಜದೇವನೇ ಮುಂದ ಶ್ರೀ ರಾಜೇಂದ್ರರಾದರು. ಅವರ ತಮ್ಮ ಜಯದೇವನೇ ಶ್ರೀ ಜಯಧ್ವಜ ತೀರ್ಥರಾದರು. ಶ್ರೀ ವಿದ್ಯಾಧಿರಾಜರು ಆಶ್ರಮ ನೀಡಿದ ಹಿರಿಯರೇ ಶ್ರೀರಾಜೇಂದ್ರತೀರ್ಥರು. ಶ್ರೀವಾಗೀಶತೀರ್ಥರ ಅಣ್ಣನ ಪುತ್ರರೇ ಕಿರಿಯರಾದ ಶ್ರೀ ಕವೀಂದ್ರತೀರ್ಥರು. ಇವರಿಬ್ಬರೂ ಶ್ರೀ ವಿದ್ಯಾಧಿರಾಜರ ಶಿಷ್ಯರಾಗಿ ಶ್ರೀಮದಾಚಾರ್ಯರ ಮಹಾಸಂಸ್ಥಾನಾಧಿಪತಿಗಳಾದರು.ಶ್ರೀರಾಜೇಂದ್ರರ ತರುವಾಯ ಅವರ ಪೂರ್ವಾಶ್ರಮ ಸಹೋದರರಾದ ಜಯದೇವ, ಶ್ರೀರಾಜೇಂದ್ರರ ನಂತರ ಆ ಮಹಾಪೀಠದಲ್ಲಿ ಶ್ರೀ ಜಯಧ್ವಜತೀರ್ಥರೆಂಬ ಹೆಸರಿನಿಂದ ವಿರಾಜಿಸಿದರು.

ಅರವತ್ತೊಕ್ಕಲು ಮನೆತನದ 14 ಗೋತ್ರಗಳಲ್ಲಿ ವಿಶ್ವಾಮಿತ್ರಗೋತ್ರವೂ ಒಂದು. ಈ ಗೋತ್ರಕ್ಕೆ ಆರು ಮನೆತನಗಳಿದ್ದು ಅವರಲ್ಲಿ 'ಬೆಟ್ಟ' ದ ಮನೆತನವು ವಿಖ್ಯಾತವಾದುದು: ಈ ಮನೆತನದಲ್ಲಿ ತಿಮ್ಮಣ್ಣಭಟ್ಟರೆಂಬುವರು ಪಂಡಿತ ಪ್ರಕಾಂಡರೂ ತೇಜಸ್ವಿಗಳೂ ಆಗಿದ್ದರು. ಇವರು ಚಂದ್ರಗಿರಿಯ ರಾಜನಾಗಿದ್ದ ನರಹರಿವರ್ಮನೆಂಬ ರಾಜನಿಂದ ತಿರುಪತಿ ಶ್ರೀನಿವಾಸದೇವರ ದೇವಾಲಯದ ಆಡಳಿತ ಧಾರ್ಮಿಕ ವಿಚಾರಾದಿ ಅಧಿಕಾರಗಳನ್ನು ಪಡೆದಿದ್ದರು. ಆದ್ದರಿಂದಲೇ ತಿಮ್ಮಣ್ಣಭಟ್ಟರನ್ನು ಜನರು ಬೆಟ್ಟದ ಆಚಾರ್ಯರೆಂದು ಗೌರವಿಸುತ್ತಿದ್ದರು.

ಈ ಮನೆತನದಲ್ಲಿ ಶೇಷಗಿರಿಶರ್ಮ ಮತ್ತು ಭೀಮಶರ್ಮ ಎಂಬ ಇಬ್ಬರು ಸಹೋದರರು ಹೆಸರುಗಳಿಸಿದ್ದರು. ಹಿರಿಯರಾದ ಶೇಷಗಿರಿ ಶರ್ಮರಿಗೆ ಬನ್ನೂರಿನ ವಲ್ಲಭದೇವನ ಪುತ್ರಿಯಾದ ಭಾರತೀದೇವಿಯನ್ನು ಕೊಟ್ಟು ವಿವಾಹವಾಗಿದ್ದಿತು. ಈ ಶೇಷಗಿರಿಶರ್ಮ ಮತ್ತು ಭಾರತೀದೇವಿಯರಿಗೆ ಅನೇಕ ಪುತ್ರರಾದರು. ಅವರೇ

ವಿಖ್ಯಾತರಾದ ಶ್ರೀ ಪುರುಷೋತ್ತಮತೀರ್ಥರು, ಶ್ರೀಸ್ವರ್ಣವರ್ಣತೀರ್ಥರು ಶ್ರೀಬ್ರಹ್ಮಣ್ಯತೀರ್ಥರು ಮತ್ತು ಶ್ರೀಲಕ್ಷ್ಮೀನಾರಾಯಣಮುನಿಗಳು ಅಂದರೆ (ಶ್ರೀಪಾದರಾಜತೀರ್ಥರು.)[1]

ಶ್ರೀಪುರುಷೋತ್ತಮತೀರ್ಥರು ಶ್ರೀರಾಜೇಂದ್ರತೀರ್ಥರ ಶಿಷ್ಯರಾದ ಶ್ರೀಜಯಧ್ವಜ ತೀರ್ಥರಿಂದ ಆಶ್ರಮಪಡೆದು ಆ ಮಹಾಸಂಸ್ಥಾನಕ್ಕೆ ಅಧಿಪತಿಗಳಾದರು. ಅವರ ತರುವಾಯ ಪೀಠಕ್ಕೆ ಬಂದ ಮಹನೀಯರೇ ಶ್ರೀಬ್ರಹ್ಮಣ್ಯತೀರ್ಥರು. ಶ್ರೀಬ್ರಹ್ಮಣ್ಯತೀರ್ಥರು ಮತ್ತು ಲಕ್ಷ್ಮೀನಾರಾಯಣಮುನಿಗಳು ಶ್ರೀ ಪದ್ಮನಾಭ ತೀರ್ಥರಿಂದ ಸ್ಥಾಪಿತವಾಗಿ ಅವರ ಹೆಸರಿನಿಂದಲೇ ಖ್ಯಾತವಾದ ಶ್ರೀ ಪದ್ಮನಾಭ ತೀರ್ಥರ ಮಠದ ಅಧಿಪತಿಗಳಾದರು.

ಈ ಮಹನೀಯರ ವಂಶಬಂಧುಗಳೇ ಕಾಶ್ಯಪಗೋತ್ರದ ಸುರೇಂದ್ರತೀರ್ಥರು, ಚಿನ್ನಭಂಡಾರಿಯ ಮನೆತನದ ಶ್ರೀ ವಿಜಯೀಂದ್ರತೀರ್ಥರು ಹಾಗೂ ಶ್ರೀ ಸುಧೀಂದ್ರತೀರ್ಥರುಗಳು. ಈ ಮೂವರೂ ಶ್ರೀ ಕವೀಂದ್ರತೀರ್ಥರ ಸತ್ಪರಂಪರೆಯ ಶ್ರೀಮದಾಚಾರ್ಯರ ಮಹಾಸಂಸ್ಥಾನಾಧಿಪತಿಗಳಾಗಿ ಅಖಂಡ ಕೀರ್ತಿಗಳಿಸಿದರು. ಇವರ ಬಂಧುಗಳೇ ಕಾಶ್ಯಪ ಗೋತ್ರದ ಲಕ್ಷ್ಮೀನರಸಿಂಹಾಚಾರ್ಯರು. ಇವರು ಜಗನ್ಮಾನ್ಯರಾದ ಶ್ರೀ ರಾಘವೇಂದ್ರಸ್ವಾಮಿಗಳ ಪೂರ್ವಾಶ್ರಮ ಅಕ್ಕ ವೆಂಕಟಾಂಬಾ ದೇವಿಯ ಪತಿಗಳು.[2]

ಶ್ರೀಜಯತೀರ್ಥರ ಪೂರ್ವಾಶ್ರಮ ತಮ್ಮಂದಿರಾದ ಭಾರದ್ವಾಜಗೋತ್ರದ ನರಹರಿನಾಯಕರ ಪುತ್ರರ ಪ್ರಪೌತ್ರರೇ ಶ್ರೀವಿಜಯೀಂದ್ರತೀರ್ಥರು ಮತ್ತು ಅವರ ತಮ್ಮಂದಿರಾದ ಗುರುಪ್ರಸಾದರು. ನರಹರಿನಾಯಕರ ತಮ್ಮಂದಿರಾದ ಕೃಷ್ಣಪ್ಪ ನಾಯಕರ ಮರಿಮಕ್ಕಳ ಪುತ್ರರಾದ ವರದಪ್ಪನಾಯಕರ ಪುತ್ರರೇ ಶ್ರೀನಿವಾಸ ನಾಯಕರು. ಇವರೇ ಶ್ರೀದಾಸಕುಲಮುಕುಟಮಣಿಗಳಾದ ಶ್ರೀಪುರಂದರದಾಸರು, ಶ್ರೀಲಕ್ಷ್ಮೀನಾರಾಯಣಮುನಿಗಳ (ಶ್ರೀಪಾದರಾಜರು) ವಂಶಬಂಧುಗಳೇ ಗೌತಮ

---

1. ಶ್ರೀಪುರುಷೋತ್ತಮತೀರ್ಥರು, ಶ್ರೀಸ್ವರ್ಣವರ್ಣರು, ಶ್ರೀಬ್ರಹ್ಮಣ್ಯರು, ಶ್ರೀಲಕ್ಷ್ಮೀ ನಾರಾಯಣ ಮುನಿಗಳು ಅಕ್ಕತಂಗಿಯರ ಮಕ್ಕಳಾದ ಅಣ್ಣತಮ್ಮಂದಿರೆಂದೂ ಹೇಳುವರು. ರಾಘವೇಂದ್ರಷ್ಟಕವಿಯು ಸಾಕ್ಷಾತ್ ಸಹೋದರರೆಂದು ಹೇಳಿದ್ದಾನೆ.

2. ಶ್ರೀ ವಿಜಯೀಂದ್ರತೀರ್ಥರು ಬಾಲಸನ್ಯಾಸಿಗಳು, ಇವರ ತಮ್ಮ ಗುರುಪ್ರಸಾದರಿಗೆ ರಾಮಚಂದ್ರಾಚಾರ್ಯರೆಂಬ ಪುತ್ರರಾದರು. ಭಾರದ್ವಾಜಗೋತ್ರ ಸಂಭವರಾದ ರಾಮಚಂದ್ರಾಚಾರ್ಯರಿಗೆ ಕೃಷ್ಣಾಚಾರ್ಯರೆಂಬ ಮಕ್ಕಳಾದರು. ಈ ಕೃಷ್ಣಾಚಾರ್ಯರೇ ಶ್ರೀ ರಾಘವೇಂದ್ರಸ್ವಾಮಿಗಳ ವಿದ್ಯಾ ಶಿಷ್ಯರು. ಇವರು "ಸ್ಮೃತಿಮುಕ್ತಾವಳೀ" ಗ್ರಂಥ ರಚಿಸಿ ವಿಖ್ಯಾತರಾದರು. ಈ ಕೃಷ್ಣಾಚಾರ್ಯರ ವಂಶೀಕರೇ [illegible]ರಾಯರ ದೌಹಿತ್ರ ಸಂತತಿಯವರಾದ ರಿತ್ತಿಯ ಪರ್ಯಾಯಸ್ಥರು.

ಗೋತ್ರದ 'ಬೀಗಮುದ್ರೆ' ಮನೆತನದ ಶ್ರೀಕೃಷ್ಣಭಟ್ಟರು ಅಂದರೆ ಶ್ರೀರಾಘವೇಂದ್ರ ಸ್ವಾಮಿಗಳವರ ಮುತ್ತಾತಂದಿರು.

ಹೀಗೆ ವಿಖ್ಯಾತವಾದ ಷಾಷ್ಟಿಕರ ವಂಶದಲ್ಲಿ ನಮ್ಮ ಈ ಕಥಾನಕವು ಪ್ರಾರಂಭ ವಾಗುವ ಕಾಲದಲ್ಲಿ ಶ್ರೀ ರಾಜೇಂದ್ರರು ಅಲಂಕರಿಸಿದ್ದ ಶ್ರೀಮದಾಚಾರ್ಯರ ಮಹಾ ಸಂಸ್ಥಾನದಲ್ಲಿ ತಪೋನಿಧಿಗಳಾದ ಶ್ರೀಬ್ರಹ್ಮಣ್ಯತೀರ್ಥರು ಅಲಂಕರಿಸಿದ್ದರು.

## ೫. ರಾಮಾಚಾರ್ಯ–ಲಕ್ಷ್ಮೀದೇವಿ

ಷಾಷ್ಟಿಕಕುಲಲಲಾಮರೂ, ಕಾಶ್ಯಪಗೋತ್ರಭೂಷಣರೂ ಬನ್ನೂರು ಪ್ರಾಂತ್ಯಾಧಿಕಾರಿಗಳೂ ಆದ ಬಲ್ಲಣಸುಮತಿಗಳಿಗೆ (ರಾಮಾಚಾರ್ಯರಿಗೆ) ಲಕ್ಷ್ಮೀ ದೇವಿಯೆಂಬ ರೂಪಲಾವಣ್ಯ–ಸದ್ಗುಣಗಳಿಂದ ಕಂಗೊಳಿಸುವ, ಸಾಕ್ಷಾತ್ ಶ್ರೀ ಲಕ್ಷ್ಮೀದೇವಿಯ ಅನುಗ್ರಹಪಾತ್ರಳಾದ ಪತ್ನಿಯಿದ್ದಳು. ಅವಳಿಗೆ ಸಂತಾನ ವಿರಲಿಲ್ಲ. ಆದ್ದರಿಂದ ಅವಳ ಬಲಾತ್ಕಾರದಿಂದ ಬಲ್ಲಣಸುಮತಿಗಳು (ರಾಮಾಚಾರ್ಯರು) ಅಕ್ಕಮ್ಮ ಎಂಬ ಕನ್ಯೆಯನ್ನು ಮತ್ತೆ ಲಗ್ನವಾದರೂ ಅವಳಿಗೂ ಸಂತಾನವಾಗಿರಲಿಲ್ಲ. ಇದರಿಂದ ಆ ದಂಪತಿಗಳಿಗೆ ಬಹಳ ಚಿಂತೆ ಯಾಗಿದ್ದಿತು.

ಬಲ್ಲಣಸುಮತಿಗಳು ಪತ್ನಿಯಾದ ಲಕ್ಷ್ಮೀದೇವಿಯೊಡನೆ ತಮ್ಮ ಮಂದಿರದಲ್ಲಿ ಏಕಾಂತದಲ್ಲಿದ್ದಾರೆ. ಲಕ್ಷ್ಮೀದೇವಿಯು ಸಂತಾನವಾಗದಿದ್ದುದರಿಂದ ದುಃಖಿತಳಾಗಿ ತನ್ನ ಮನದಳಲನ್ನು ಪತಿಯಲ್ಲಿ ನಿವೇದಿಸುತ್ತಿದ್ದಾಳೆ. ಶ್ರೀಹರಿಯನ್ನು ಧ್ಯಾನಿ ಸುತ್ತಾ ಬಲ್ಲಣಸುಮತಿಗಳು ಅತಿಬಿಳುಪಾದ ಪರದೆಯಿಂದ ಆಚ್ಛಾದಿತವಾದ ಮಣಿಮಂಚದ ಮೇಲೆ ಪವಡಿಸಿದ್ದಾರೆ. ಬಹುದಿನವಾದರೂ ಮಕ್ಕಳಾಗದಿದ್ದುದ ರಿಂದ ಅವರೂ ದುಃಖಿತರಾಗಿದ್ದಾರೆ. ಬಳಲಿ ನಿಟ್ಟುಸಿರುಬಿಡುತ್ತಿದ್ದಾರೆ. ಆಗ ಲಕ್ಷ್ಮೀದೇವಿಯು ಪತಿಯನ್ನು ಕುರಿತು ಹೇಳಿದಳು—

---

1. ಸೋಮನಾಥ ಕವಿಯು ಶ್ರೀವ್ಯಾಸರಾಜರ ತಂದೆಯ ಹೆಸರನ್ನು 'ಬಲ್ಲಣ ಸುಮತಿ' ಎಂದು ಹೇಳಿದ್ದಾನೆ. ಶ್ರೀವಿದ್ಯಾರತ್ನಾಕರತೀರ್ಥ ಶ್ರೀಪಾದಂಗಳವರು ಶ್ರೀ ವ್ಯಾಸ ತೀರ್ಥರ ತಂದೆಯ ಹೆಸರು 'ರಾಮಾಚಾರ್ಯ' ರೆಂದು ಹೇಳಿದ್ದಾರೆ. ರಾಮಾ ಚಾರ್ಯರು ಲೌಕಿಕವರ್ತುಲದಲ್ಲಿ 'ವಲ್ಲಭಸುಮಂತ್ರಿ' ಎಂದು ವಿಖ್ಯಾತರಾಗಿದ್ದು ಅದು ಬಲ್ಲಣ ಸುಮತಿಯಾಗಿದೆಯೆಂದೂ ವಿಮರ್ಶಕರ ಅಭಿಪ್ರಾಯ. ಬಲ್ಲಣ ಸುಮತಿ ಅಥವಾ ರಾಮಾಚಾರ್ಯ ಎಂದು ನಮ್ಮೀ ಕಥಾನಕದಲ್ಲಿ ಬರುವಾಗಲೆಲ್ಲ ಓದುಗರು ಬಲ್ಲಣ ಸುಮತಿ ರಾಮಾಚಾರ್ಯರಿಬ್ಬರೂ ಒಂದೇ ವ್ಯಕ್ತಿಯೆಂದು ತಿಳಿಯಬೇಕಾಗಿ ಪ್ರಾರ್ಥನೆ.

ಲಕ್ಷ್ಮೀ : ವಸ್ತ್ರನಿಚಯ ಸುಗಂಧ ಧನಕನಕವಿದ್ದೇನು ?. ।
ಮಿತ್ರಬಾಂಧವರಿದ್ದೇನು ಎನ್ನರಸ ? ॥
ನಿತ್ಯ ರುಚಿಕರಭೋಜ್ಯ ಕ್ರೀಡಾವಿಲಾಸದಿಂ ।
ತೃಪ್ತಿಯೆನಿಪುದೆ ಪುತ್ರಹೀನದಂಪತಿಗಳಿಗೆ ॥[1]

ಸ್ವಾಮಿ, ಪುತ್ರಹೀನರಾದ ದಂಪತಿಗಳಿಗೆ ವಿಚಿತ್ರವಸ್ತ್ರಗಳಿಂದಾಗಲಿ, ಸುಗಂಧ, ಧನಕನಕಾಭರಣ ಸಂಪದಗಳಿಂದಾಗಲಿ, ಸ್ನೇಹಿತರು, ಬಂಧುಬಾಂಧವರಿಂದಾಗಲಿ, ಪ್ರತಿದಿನವೂ ಬಗೆಬಗೆಯ ರುಚಿಕರವಾದ ಭಕ್ಷ್ಯಭೋಜ್ಯಾದಿ ಆಹಾರ-ವಿಹಾರ ಗಳಿಂದಾಗಲಿ ಪ್ರಯೋಜನವೇನು ?

ರಾಮಾಚಾರ್ಯ (ಬಲ್ಲಣಸುಮತಿ):—ನಿಜ, ಲಕ್ಷ್ಮೀ. ಜಗತ್ತಿನಲ್ಲಿ ಮಕ್ಕಳಿಲ್ಲ ದಿರುವುದಕ್ಕಿಂತ ಮಿಗಿಲಾದ ಕಷ್ಟ ಬೇರಾವುದಿದೆ ? ಪ್ರಪಂಚದಲ್ಲಿ ಮಕ್ಕಳಿಲ್ಲ ದಿರುವ ದುಃಖವು ಐಹಿಕಾಮುಷ್ಮಿಕ ಸುಖಸಾಧನದ್ವಾರದ ಬಾಗಿಲಿನಂತೆ ಮುಚ್ಚಿ ಬಿಡುವುದು. ಪ್ರಿಯಳೇ, ಪುರುಷೋತ್ತಮನು ನಮ್ಮಾಸೆಯನ್ನು ಪೂರೈಸಲು ಅದೇಕೆ ತಡಮಾಡುತ್ತಿರುವನೋ ನಾನರಿಯೆ.

ಇಂತು ಪತ್ನಿಯನ್ನು ಮಧುರವಾಕ್ಯಗಳಿಂದ ಸಾಂತ್ವನಗೊಳಿಸುತ್ತಿರುವಾಗ ರಾಮಾಚಾರ್ಯ (ಬಲ್ಲಣಸುಮತಿ)ರ ಶರೀರದ ದಕ್ಷಿಣಭಾಗವು ಭರದಿಂದ ಹಾರ ಹತ್ತಿತು. ಆಗ ಅವರು ಆನಂದದಿಂದ "ಮಂಗಳಾಂಗಿ !, ಶೋಕಿಸದಿರು, ನನ್ನ ತೊಡೆಯ ಎಡಭಾಗವು ಹಾರುತ್ತಿದೆ. ನಿಜ, ಅರ್ಥವಾಯಿತು. ಆಶ್ರಿತರ ಭಯ ನಿವಾರಕನಾದ ಶ್ರೀಹರಿಯು ವ್ಯಾಕುಲಚಿತ್ತರಾದ ನಮಗೆ ಮಂಗಳವಾಗುವುದೆಂದು ಈ ಮೂಲಕ ಸೂಚಿಸುತ್ತಿರುವನು! ಶ್ರೀಹರಿಕೃಪೆಯಿಂದ ನಮಗೆ ನಿಜವಾಗಿ ಮಂಗಳ ವಾಗುವುದೆಂದು ನಾನು ಭಾವಿಸುತ್ತೇನೆ"ಎಂದು ಪತ್ನಿಯ ಮೈದಡವಿ, ಪ್ರಿಯವಾಕ್ಯ ಗಳಿಂದ ರಮಿಸಿ, ನಂತರ ಪತ್ನಿಯೊಡನೆ ಸುಷುಪ್ತಿಯಿಲ್ಲದ ನಿದ್ರಾಸುಖವನ್ನು ಅನುಭವಿಸಿದರು.

ಅಂದು ರಾತ್ರಿಕಳೆದು ಮರುದಿನ ಬೆಳಗಿನರುಣಾವವಾಗುತ್ತಿರಲು ಲಕ್ಷ್ಮೀ ದೇವಿಯು ಶುಭೋದಯಸೂಚಕ ಸ್ವಪ್ನವನ್ನುಕಂಡು, ಆನಂದಬಾಷ್ಪಹರಿಯು ತ್ತಿರಲು ಪತಿಗಿಂತ ಮೊದಲೇ ಜಾಗೃತಳಾಗಿ ಶಯ್ಯೆಯಿಂದ ಮೇಲೆದ್ದಳು. ಅದೇ ಸಮಯದಲ್ಲಿ ಎಚ್ಚರಗೊಂಡ ಬಲ್ಲಣಸುಮತಿಗಳು "ಮುಕುಂದ, ಮುರಾರೆ, ಶ್ರೀಹರಿ ರಕ್ಷಿಸು ಸ್ವಾಮಿ" ಎಂದು ಪ್ರಾರ್ಥಿಸುತ್ತಾ ಹಾಸಿಗೆಯಿಂದ ಮೇಲೇಳುತ್ತಿರಲು

---

1 "ಕಿಂ ವಸ್ತ್ರೈಃ ಕಿಂ ಪಿಟೀರೈರ್ವಾ ಕಿಂ ಧನೈಃ ಕಿಮು ಬಾಂಧವೈಃ ।
ಕಿಮಾಹಾರೈ ರ್ವಿಹಾರೈರ್ವಾ ದಂಪತ್ಯೋರನಪತ್ಯಯೋಃ ॥ "
ಶ್ರೀ ವ್ಯಾಸಯೋಗಿಚರಿತಮ್. P. 14

ಲಕ್ಷ್ಮೀದೇವಿಯು ಪತಿಗೆ ನಮಸ್ಕರಿಸಿ "ಮಂಗಳವು. ಇಂದಿನ ದಿನವೇ ಸುದಿನವು, ಸ್ವಾಮಿ. ಈಗತಾನೆ ಸ್ವಪ್ನದಲ್ಲಿ ಭಕ್ತಜನರ ಕಲ್ಪವೃಕ್ಷರೂ ಕರುಣಾಳುಗಳೂ ಆದ ಶ್ರೀವೇದವ್ಯಾಸದೇವರು ನನಗೆ ದರ್ಶನವಿತ್ತು "ಭದ್ರೆ! ನಿಮ್ಮೀರ್ವರ ತಪಸ್ಸಿನಿಂದ ಪ್ರಸನ್ನರಾಗಿದ್ದೇವೆ" ಎಂದು ಮಧುರವಚನದಿಂದ ಆನಂದಗೊಳಿಸಿ[1] ಬಹುಕಲಾ ಪೂರ್ಣನಾದ ಒಬ್ಬಾನೊಬ್ಬ ಚಂದ್ರನಿಂದಲಂಕೃತವಾದ ಒಂದು ಸುವರ್ಣಪಾತ್ರೆಯನ್ನು ನನ್ನ ಕರದಲ್ಲಿಟ್ಟು ಹೀಗೆಹೇಳಿದರು— "ಮಗಳೇ, ಮಹಾಮಹಿಮರಾದ ಶ್ರೀ ಬ್ರಹ್ಮಣ್ಯತೀರ್ಥರೆಂಬ ಯೋಗಿಗಳು ಬಂದು ನಿಮ್ಮ ಮನೋರಥವನ್ನು ಈಡೇರಿಸುತ್ತಾರೆ. ನೀವು ಅವರ ಅಪ್ಪಣೆಯಂತೆ ವರ್ತಿಸಿರಿ" ಎಂದು ಅನುಗ್ರಹಿಸಿ ಅಂತರ್ಧಾನ ಹೊಂದಿದರು.[2] ತರುವಾಯ ನಾನು ಕರದಲ್ಲಿರುವ ಚಂದ್ರವಿಭೂಷಿತ ಭಂಗಾರದ ಪಾತ್ರೆಯನ್ನು ಇದೇನೆಂದು ಕೌತುಕದಿಂದ ನೋಡುತ್ತಿರುವಾಗ ಎಚ್ಚರಗೊಂಡೆನು" ಎಂದು ಲಕ್ಷ್ಮೀದೇವಿಯು ತಾನು ಕಂಡ ಕನಸನ್ನು ಪತಿಗೆ ಹೇಳಿದಳು. ಅದರಿಂದ ಪುಳಕಿತಗಾತ್ರರಾದ ಬಲ್ಲಣಸುಮತಿಗಳು "ಪ್ರಿಯೆ! ನಿನ್ನೆ ರಾತ್ರಿ ಆನಂದದ ಹನಿಯಂತೆ ಇರುವ ವಾಕ್ಯಗಳಿಂದ ನಿನ್ನನ್ನು ಸಂತೈಸಿದೆ. ನೀನು ಆ ಆನಂದ ಬಿಂದುವನ್ನು ಸಮುದ್ರವನ್ನಾಗಿಸಿ ಆ ಹರ್ಷವಾರಿಧಿಯಲ್ಲಿ ನನ್ನನ್ನು ಓಲಾಡಿಸುತ್ತಿದ್ದೀಯೋ![3] ಆಹಾ, ಮಹನೀಯರ ವಾಕ್ಯವೆಂದಿಗೂ ಸಟೆಯಾಗುವುದಿಲ್ಲ. "ಜೀವನ್ ಭದ್ರಾಣಿ ಪಶ್ಯತಿ" ಎಂಬ ಸೂಕ್ತಿಯ ಫಲವನ್ನು ನಾನೀಗ ಕಂಡೆನು ! ನಾರಾಯಣನಲ್ಲಿನ ಶ್ರೇಷ್ಠ ಭಕ್ತಿಯೆಂಬ ಕಾಮಧೇನುವು ಏನನ್ನು ತಾನೇ ಕೊಡಲಾರದು ? ನಾವೀಗ ಧನ್ಯರಾದೆವು" ಎಂದು ಪ್ರಿಯಪತ್ನಿಯನ್ನು ಮೃದುಮಧುರ ವಚನಗಳಿಂದ ಆನಂದಗೊಳಿಸಿದರು.

---

1 "ಅಯೇ ಭದ್ರಂ ಭದ್ರಂ ! ಅಯಂ ಹಿ ಸುಪ್ರಭಾತೋ ದಿವಸಃ ಇದಾನೀಂತು ಸ್ವಪ್ನೇ ಪರಮ ಕಾರುಣಿಕೋ ಭಕ್ತಜನ ಪಾರಿಜಾತಃ ಸ ಭಗವಾನ್ ಪಾರಾಶರಿಃ ಸ್ವಯಮೇವಾಗತ್ಯ ಭದ್ರೇ ! ಪ್ರಸಾದಿತೋಸ್ಮಿ ಯುವಯೋಸ್ತಪಸಾ ದುಶ್ಚರೇಣೇತಿ ಮಧುರಸಾಸಾರಮುಚಾ ವಾಚಾ ವದನ್ನಯಮಾನಂದಯತ್ ॥"

ಶ್ರೀ ವ್ಯಾಸಯೋಗಿ ಚರಿತಮ್, ಪುಟ 10

2 "ಅನಂತರಂ ಚ ಕಶ್ಚಿದಗಣ್ಯಾನುಭಾವೋ ನಾಮ್ನಾ ಬ್ರಹ್ಮಣ್ಯಃ ಸದ್ಯ ಏವ ಯೋಗೀ ಸಮಾಗತ್ಯ ಮನೀಷಿತಂ ಯುವಯೋಃ ವರ್ಧಯಿಷ್ಯತಿ । ತದವಶ್ಯಂ ಯುವಾಭ್ಯಾಂ ತದನುಶಾಸನಾನುವರ್ತನಜಾಗರೂಕಾಭ್ಯಾಂ ಭವಿತವ್ಯಮಿತಿ ಅನುಗೃಹ್ಯ ಅಂತರ್ದಧೇ!"

ಶ್ರೀ ವ್ಯಾ. ಯೋ. ಚ. 17

3 "—ಪೂರ್ವಮಾಶ್ವಾಸಿತಂ ಯೇನ ಮಯಾ ಸಂಮೋದಬಿಂದುನಾ ।
ಅದ್ಯ ತಂ ಸಾಗರೀಕೃತ್ಯ ಮಾಂ ಮಜ್ಜಯಸಿ ಶೋಭನೇ ! ॥"

—ಶ್ರೀ ವ್ಯಾ. ಯೋ. ಚ. ಪುಟ17

ಅನಂತರ ರಾಮಾಚಾರ್ಯರು (ಬಲ್ಲಣಸುಮತಿ)[1] ಸ್ನಾನ ಸಂಧ್ಯಾದಿಗಳಿಂದ ಸೂರ್ಯದೇವನನ್ನು ಆರಾಧಿಸಿ,ಹೋಮಾದಿಗಳಿಂದ ಯಜ್ಞೇಶ್ವರನನ್ನು ಸಂತೋಷ ಗೊಳಿಸಿದರು. ತರುವಾಯ ಸಕಲವೇದಪಾರಂಗತರಾದ ದ್ವಿಜಶ್ರೇಷ್ಠರಿಂದ ಸಹಿತ ರಾಗಿ ತಮ್ಮ ಮಂದಿರದ ದೇವತಾಗೃಹದಲ್ಲಿ ಶ್ರೀ ಪುರುಷೋತ್ತಮನ ವಿಶೇಷ ಪೂಜಾಸಮಾರಂಭವನ್ನು ವೈಭವದಿಂದ ನೆರವೇರಿಸಲು ಪ್ರಾರಂಭಿಸಿದರು.

## ೬. ಶ್ರೀ ಬ್ರಹ್ಮಣ್ಯತೀರ್ಥರ ಅನುಗ್ರಹ

ಬದರಿಕಾಶ್ರಮದಲ್ಲಿ ಶ್ರೀನರ-ನಾರಾಯಣರನ್ನು ಸೇವಿಸಿ ಅವರಿಂದ "ಶ್ರೇಷ್ಠ ಶಿಷ್ಯನನ್ನು ಅನುಗ್ರಹಿಸುವೆವು" ಎಂದು ವರವನ್ನು ಪಡೆದು ಅಬ್ಬೂರಿಗೆ ಹಿಂದಿರು ಗಿದ ಕೆಲಕಾಲಾನಂತರ ಶ್ರೀಹರಿಯ ಪ್ರೇರಣೆಯಂತೆ ಸಂಚಾರ ಹೊರಟ ಶ್ರೀ ಬ್ರಹ್ಮಣ್ಯತೀರ್ಥರು ಬನ್ನೂರು ಪ್ರಾಂತ್ಯಕ್ಕೆ ಆಕಸ್ಮಿಕವಾಗಿ ದಯಮಾಡಿಸಿದರು. ಬನ್ನೂರಿಗೆ ಸೇರಿದಂತಿರುವ ಕಾವೇರಿ ನದಿಯನ್ನು ಕಂಡು ಹರ್ಷಿಸಿ ಅಲ್ಲಿ ಸ್ನಾನಮಾಡ ಬಯಸಿದರು.

ಅಮೃತರಸದಂತಿರುವ ಪುಣ್ಯತಮಜಲಗಳಿಂದ ಪರಿಶೋಭಿಸುವ ಆ ಪರಮ ಪವಿತ್ರವಾದ ಕಾವೇರೀನದಿಯಲ್ಲಿ ಸ್ನಾನಮಾಡಿಶ್ರೀಬ್ರಹ್ಮಣ್ಯತೀರ್ಥರು ಮಧ್ಯಾಹ್ನದ ಆಹ್ನೀಕ ಜಪ-ತಪಾನುಷ್ಠಾನಗಳನ್ನು ಪೂರೈಸಿ ಶಿಷ್ಯಮಂಡಲಿಯೊಡನೆ ಕಾವೇರೀ ನದಿಯ ಉತ್ತರಪ್ರದೇಶದಲ್ಲಿರುವ ಬನ್ನೂರು ಅಗ್ರಹಾರಕ್ಕೆ ದಯಮಾಡಿಸಿದರು.

ಬನ್ನೂರು ಅಗ್ರಹಾರವು ವಿವಿಧವಿದ್ಯಾಕೋವಿದರು, ವೇದವೇದಾಂತ ಪಾರಂ ಗತರೂ, ಯಜನಯಾಜನ ಧುರೀಣರೂ, ಕರ್ಮಠರೂ ಆದ ದ್ವಿಜಗಣಮಂಡಿತ ವಾಗಿದ್ದಿತು. ಆ ಅಗ್ರಹಾರದ ಗೃಹಸ್ಥರು ಪಾಷಂಡಮತಖಂಡನೆಗಾಗಿ ಭೂಮಂಡಲ ದಲ್ಲಿ ಅವತರಿಸಲಿರುವ ಭಾವಿಬ್ರಹ್ಮರಾದ ಮುಖ್ಯಪ್ರಾಣದೇವರ ಆವೇಶಾವತಾರ ರಾದ ಮಹನೀಯರ ಪರಿಚಯ ಮಾಡಿಸಲೋಸುಗ,ಮತ್ತು ಅವರ ಸೇವೆಯನ್ನು ಮಾಡಲು ಪೂರ್ವಭಾವಿಯಾಗಿಯೇ ಧರಾತಲದಲ್ಲಿ ಅವತರಿಸಿದ ಸತ್ಯಲೋಕದ ಕುಟುಂಬಿಗಳಂತೆ ಸಾತ್ವಿಕಗುಣಸಂಪನ್ನರಾಗಿ, ಉತ್ತಮ ಧರ್ಮಾಚರಣರತರಾಗಿ ಕಂಗೊಳಿಸುತ್ತಿದ್ದರು.

ಈ ಬನ್ನೂರು ಗ್ರಾಮವನ್ನು ಹಿಂದೇ ಶ್ರೀರಾಮಚಂದ್ರದೇವರೇ ನಿರ್ಮಿಸಿ ಅಲ್ಲಿ ಶ್ರೀರಾಮದೇವಾಲಯವನ್ನು ಸ್ಥಾಪಿಸಿದರೆಂದು ಇತಿಹಾಸವಿದೆ.[2]

---

1 ಇನ್ನು ಮುಂದೆ ಈ ಕಥಾನಕದಲ್ಲಿ ಬಲ್ಲಣಸುಮತಿ–ರಾಮಾಚಾರ್ಯರೆಂಬ ಹೆಸರಿನ ಶ್ರೀ ವ್ಯಾಸರಾಜರ ಪೂರ್ವಾಶ್ರಮದ ತಂದೆಗಳನ್ನು ರಾಮಾಚಾರ್ಯರೆಂದೇ ನಿರೂಪಿಸಲಾ ಗುವುದು.

2 ಬಲ್ಲಣಸುಮತಿ ಎಂದು ಪ್ರಸಿದ್ಧರಾದ ರಾಮಾಚಾರ್ಯರ ತಂದೆಗಳಾದ ನರಸಿಂಹ ರಾಮದೇವ ಶ್ರೀರಾಮದೇವಾಲಯದ ಜೀರ್ಣೋದ್ಧಾರ ಮಾಡಿದ್ದರೆಂದು ಹೇಳು ವರು.

ಇಂತು ಸುಜನವೃಂದಭೂಷಿತವಾದ ಬನ್ನೂರು ಅಗ್ರಹಾರವನ್ನು ಕಂಡು ಶ್ರೀ ಬ್ರಹ್ಮಣ್ಯತೀರ್ಥರು ಆನಂದಭರಿತರಾದರು.

ಇತ್ತ ಶ್ರೀ ರಾಮಾಚಾರ್ಯರು ತಮ್ಮ ಮನೋಭೀಷ್ಟ ಸಿದ್ಧಿಗಾಗಿ ಭಗವಂತನ ಪೂಜೆಯನ್ನು ವೈಭವದಿಂದ ನೆರವೇರಿಸಿ ದಕ್ಷಿಣಾ ಸಂಭಾವನಾದಿಗಳಿಂದ ಭೂಸುರರನ್ನು ಸಂತೋಷಗೊಳಿಸಿ ವಿಪ್ರಾಶೀರ್ವಾದಗಳನ್ನು ಶಿರದಲ್ಲಿ ಧರಿಸಿ ಸತೀಮಣಿ ಅಕ್ಕಮ್ಮ-ಲಕ್ಷ್ಮೀದೇವಿಯರೊಡನೆ ಶ್ರೀರಾಮದೇವರ ದರ್ಶನಾಕಾಂಕ್ಷಿಗಳಾಗಿ ಮನೆಯಿಂದ ಹೊರಟರು.

ಮಾರ್ಗಮಧ್ಯದಲ್ಲಿ ಸೂರ್ಯದೇವನ ಅಪರಾವತಾರರಂತೆ ತೇಜಸ್ಸಿನಿಂದ ಬೆಳಗುವ, ತಲೆಯಮೇಲೆ ಅನೇಕ ಸಚ್ಛಾಸ್ತ್ರಗ್ರಂಥಗಳನ್ನು ಹೊತ್ತುಬರುತ್ತಿರುವ ಶಿಷ್ಯಮಂಡಲಿಯಿಂದೊಡಗೂಡಿದ ತಮ್ಮ ಕುಲಗುರುಗಳೂ, ಪೂರ್ವಾಶ್ರಮವಂಶಬಂಧುಗಳೂ ಆದ ಶ್ರೀ ಬ್ರಹ್ಮಣ್ಯತೀರ್ಥರನ್ನು ಕಂಡು ರಾಮಾಚಾರ್ಯ ದಂಪತಿಗಳು ಪರಮಾನಂದಭರಿತರಾಗಿ ಗುರುಗಳತ್ತ ಭರದಿಂದ ಧಾವಿಸಿದರು.

ಆ ತಪೋನಿಧಿಗಳ ದರ್ಶನದಿಂದ ಪುಳಕಿತಗಾತ್ರರಾದ ರಾಮಾಚಾರ್ಯದಂಪತಿಗಳು ಶ್ರೀವೇದವ್ಯಾಸದೇವರು ಸ್ವಪ್ನದಲ್ಲಿ ಸೂಚಿಸಿದ ತೇಜಃಪುಂಜ ಬ್ರಹ್ಮಣ್ಯ ಶಬ್ದಕ್ಕೆ ಇವರೇ ಲಕ್ಷ್ಯರು(ಅಂದರೇ ಇವರಿಂದಲೇ ಮನೋರಥವು ಪೂರ್ಣವಾಗುವುದೆಂದು ಸ್ವಪ್ನದಲ್ಲಿ ಶ್ರೀವೇದವ್ಯಾಸರು ಸೂಚಿಸಿದ್ದಾರೆ ಎಂದು) ಮನಸ್ಸಿನಲ್ಲಿ ನಿಶ್ಚಯಿಸಿ ಅವರ ಅನುಗ್ರಹವನ್ನು ಪಡೆಯಲು ರಾಮಾಚಾರ್ಯರು ಪತ್ನೀ ಸಮೇತರಾಗಿ ಯತಿವರ್ಯರಿಗೆ ಸಾಷ್ಟಾಂಗವೆರಗಿ, ಅವರನ್ನು ಭಕ್ತ್ಯಾದರಗಳಿಂದ ತಮ್ಮ ಮಂದಿರಕ್ಕೆ ಕರೆದುಕೊಂಡು ಹೋದರು.

ರಾಮಾಚಾರ್ಯರು ತಮ್ಮ ಭವ್ಯಮಂದಿರದಲ್ಲಿ ಆಸನದಮೇಲೆ ಶ್ರೀಬ್ರಹ್ಮಣ್ಯ ಮುನಿವರರನ್ನು ಭಕ್ತಿಗೌರವಗಳಿಂದ ಕೂಡಿಸಿದರು. ಆನಂತರ ರಾಮಾಚಾರ್ಯರು ಗುರುಪಾದರಿಗೆ ಅರ್ಘ್ಯಪಾದ್ಯಾದಿಗಳಿಂದಲೂ, ವಿವಿಧ ಉಪಚಾರಗಳಿಂದಲೂ ಸತ್ಕರಿಸಿ ಗುರುಗಳಿಗೆ ಭಿಕ್ಷೆಯನ್ನರ್ಪಿಸಿ ಪೂಜಾರಾಧನೆಗಳಾದ ಮೇಲೆ ಯತಿಗಳಿಗೆ ಹಸ್ತೋದಕವನ್ನು ನೀಡಿ ಸಂತೋಷಪಡಿಸಿದರು. ಶ್ರೀಗಳು ಭಿಕ್ಷೆಯನ್ನು ಸ್ವೀಕರಿಸಿದ ಮೇಲೆ ತಾವೂ ಭೋಜನಮಾಡಿ ಗುರುಗಳ ಬಳಿಗೆ ಬಂದು ಕರಜೋಡಿಸಿ ನಿಂತು ಆನಂದಬಾಷ್ಪಸಿಕ್ತನಯನರಾಗಿ ಇಂತು ವಿಜ್ಞಾಪಿಸಿದರು.—

ರಾಮಾಚಾರ್ಯ :—ಪೂಜ್ಯರೇ, ಭಾವೀ ಮಂಗಳದ ಮುಂಬೆಳಕಿನ ಸಂದೇಶ ತಂದವರಂತೆ, ನನ್ನ ಪೂರ್ವಜನ್ಮ ಸುಕೃತಪರಿಪಾಕದಂತೆ, ಶೋಕನಿವಾರಕರಂತೆ ನೀವು ದಯಮಾಡಿಸಿದ್ದೀರಿ! ಮಹಾಸನ್ನಿಧಿಯಲ್ಲಿ ಕೆಲವಿಚಾರಗಳನ್ನು ಅರಿಕೆ ಮಾಡಲು ಆಶಿಸಿದ್ದೇನೆ.

ಶ್ರೀಬ್ರಹ್ಮಣ್ಯ :—ರಾಮಾಚಾರ್ಯ ! ನೀನು ನಮಗೆ ಹೊರಗಿನವನಲ್ಲವಷ್ಟೆ? ನಮ್ಮ ಕುಲಬಂಧುವೂ, ಸಂಸ್ಥಾನದ ಪ್ರಮುಖ ಶಿಷ್ಯನೂ ಅಭಿಮಾನಿಯೂ ಆದ

ನೀನು ನಿನ್ನ ಮನದಳಲನ್ನು ಹೇಳಲು ಸಂಕೋಚವೇಕೆ ? ನಿನ್ನ ಮನಸ್ಸಿನಲ್ಲಿರುವುದನ್ನು ಹೇಳು.

ರಾಮಾ:-ಗುರುದೇವ, ಸರ್ವಜ್ಞಚಿತ್ತಕ್ಕೆ ತಿಳಿಯದ್ದೇನಿದೆ ? ಆದರೂ ವಿಜ್ಞಾಪಿಸುತ್ತೇನೆ, ಕಾಶ್ಯಪಗೋತ್ರೋದ್ಭವರಾದ ನರಸಿಂಹ-ರಾಮಾಚಾರ್ಯರು ಜಗತ್ತಿನಲ್ಲಿ ನರಸಿಂಹ ರಾಮದೇವನೆಂದು ಪ್ರಸಿದ್ಧರಾದರು. ಅವರು ತಮ್ಮ ಪರಿಶುದ್ಧಚಾರಿತ್ರ್ಯ, ವಿದ್ಯೆ, ಶೌರ್ಯಾದಿ ಗುಣಮಂಡಿತರಾಗಿ ಈ ಪ್ರಾಂತ್ಯವನ್ನು ಆಳಿ ಕೀರ್ತಿಗಳಿಸಿದರು. ಅವರು ಪೂಜ್ಯ ಶ್ರೀಜಯಧ್ವಜತೀರ್ಥರ ಅನುಗ್ರಹದಿಂದ ಮೇಧಾವಿಗಳಾದ ಆರುಜನ ಪುತ್ರರನ್ನು ಪಡೆದರು.[1] ಅವರಲ್ಲಿ ನಾನು ಕೊನೆಯವನು. ದೈವಾನುಗ್ರಹ, ತಮ್ಮ ಆಶೀರ್ವಾದದ ಬಲದಿಂದ ನನಗೆ ಸಕಲ ವೈಭವಗಳಿದ್ದರೂ ಮಕ್ಕಳಿಲ್ಲದೆ, ಸುಂಟರಗಾಳಿಗೆ ಸಿಕ್ಕ ಹುಲ್ಲಿನಂತೆ ಕಳವಳಪಡುತ್ತಿದ್ದೆ. ನನ್ನ ಪತ್ನಿಯಾದ ಲಕ್ಷ್ಮೀದೇವಿಯು ಸಂತಾನಾರ್ಥವಾಗಿ,ಬಲಾತ್ಕಾರವಾಗಿ ಅಕ್ಕಮ್ಮನೆಂಬ ಈ ಮತ್ತೊಬ್ಬ ವಧುವನ್ನು ತಂದು ತಾನೇ ನಿಂತು ನನಗೆ ವಿವಾಹ ಮಾಡಿಸಿದಳು. ಆದರೆ ದುರ್ದೈವಿಯಾದ ನನಗೆ ಅವಳಲ್ಲಿಯೂ ವಂಶೋದ್ಧಾರಕ ಸಂತಾನವಾಗಲಿಲ್ಲ. ಆದುದರಿಂದ ನಾವು ದುಃಖಿಗಳಾಗಿದ್ದೇವೆ. ಮಹಾನುಭಾವರಾದ ದಯಾಳುಗಳಾದ ತಾವೇ ತಮ್ಮ ಮನೋರಥವನ್ನು ಪೂರ್ಣಗೊಳಿಸಿ ಅನುಗ್ರಹಿಸಬೇಕು.

ರಾಮಾಚಾರ್ಯರ ಮಾತುಕೇಳಿ ಬ್ರಹ್ಮಣ್ಯತೀರ್ಥರು ಕ್ಷಣಕಾಲ ಧ್ಯಾನಸ್ಥರಾದರು. ಅವರಿಗೆ ಬದರಿಯಲ್ಲಿ ಶ್ರೀಹರಿಯು ನೀಡಿದ ವರ ಸ್ಮರಣೆಗೆ ಬಂದಿತು. ಶ್ರೀಹರಿಯು ಅಪ್ಪಣೆ ಕೊಡಿಸಿದ ತಮಗೆ ಲಭಿಸಲರುವ ಶಿಷ್ಯನು ಈ ರಾಮಾಚಾರ್ಯರ ದಂಪತಿಗಳಿಗೆ ಜನಿಸಲಿರುವ ಪುತ್ರನೇ ಎಂಬುದು ಸ್ಪಷ್ಟವಾಗಿ ಗೋಚರಿಸಿತು ! ತಮ್ಮ ತಪಸ್ಸು ಫಲಿಸಿತೆಂಬ ಆನಂದದಿಂದ ಗುರುಗಳು ಇಂತೆಂದರು—

ಬ್ರಹ್ಮಣ್ಯ :-ರಾಮಾಚಾರ್ಯ ! ನೀನು ಮಹಾಭಾಗ್ಯಶಾಲಿ ! ನಿನಗೆ ಕ್ಷಿಪ್ರವಾಗಿ ಭಾಗವತಾಗ್ರೇಸರನಾದ ಸತ್ಪುತ್ರನು ಜನಿಸಲಿರುವನು ! ಅದಕ್ಕೆ ಅವಶ್ಯವಾಗಿ ಮಾಡಬೇಕಾದ ಕೆಲ ಹವನಾದಿಗಳನ್ನು ನಾಳೆಯೇ ನಾವು ಖುದ್ದುನಿಂತು ನಿನ್ನಿಂದ ಮಾಡಿಸುತ್ತೇವೆ. ಇದರಿಂದ ನಮ್ಮ ಮನೋರಥವೂ ಪೂರ್ಣವಾಗುವುದು.

ಗುರುವರರ ವಚನವನ್ನಾಲಿಸಿ ರಾಮಾಚಾರ್ಯದಂಪತಿಗಳಿಗೆ ಅಪಾರ ಆನಂದವಾಯಿತು. ಅವರು "ಅನುಗೃಹೀತರಾದೆವು" ಎಂದು ಗುರುಗಳಿಗೆ ನಮಸ್ಕರಿಸಿದರು.

---

1. ಶ್ರೀಕಾಶ್ಯಪಾನ್ವಯಮಣಿರ್ಮಮ ತಾತಪಾದಃ
ಶ್ರೀರಾಮದೇವ ಇತಿ ದೀಪ್ತಯಶಃ ಪ್ರಭಾವಃ ।
ಕಸ್ಮಾಪಿ ಮಸ್ಕರಮಣೇಃ ಕರುಣಾವಿಲಾಸಾತ್
ಪ್ರಾಸೋಷ್ಟ ಷಟ್ಸುಧಿಯಃ ಪ್ರಥಿತಾನ್ ಕುಮಾರಾನ್ ॥
ಶ್ರೀ ವ್ಯಾಸಯೋಗಿಚರಿತಮ್. P. 23

ಬ್ರಹ್ಮಣ್ಯತೀರ್ಥರು ಮಾಡಬೇಕಾದ ಕರ್ತವ್ಯಕರ್ಮವನ್ನು ವಿವರಿಸಿ. 'ನಾಳೆ ಪುನಃ ಬರುವುದಾಗಿ ಹೇಳಿ ರಾಮದೇವರ ಗುಡಿಗೆ ದಯಮಾಡಿಸಿದರು. ಅಂದು ರಾತ್ರಿ ಕಳೆಯಿತು.

ಮರುದಿನ ಸೂರ್ಯದೇವನು ಉದಯಿಸುತ್ತಿರಲು ಸಮಸ್ತವಸ್ತುಗಳನ್ನೂ ಸಂಗ್ರಹಿಸಿ ಸಿದ್ಧಪಡಿಸಿ ರಾಮಾಚಾರ್ಯರು ಶ್ರೀಬ್ರಹ್ಮಣ್ಯತೀರ್ಥರನ್ನು ವಾದ್ಯ ವೈಭವಗಳೊಡನೆ ಮನೆಗೆ ಕರೆತಂದರು. ಆಚಾರ್ಯರ ಮನೆಯು ತಳಿರುತೋರಣ ಗಳಿಂದ ಅಲಂಕರಿಸಲಾಗಿತ್ತು. ಮನೆಯಲ್ಲಿ ದಿವ್ಯಪೀಠದಲ್ಲಿ ಗುರುಗಳನ್ನು ಕೂಡಿಸಿ ರಾಮಾಚಾರ್ಯರು ನಮಸ್ಕರಿಸಿದರು.

ಅನಂತರ ಗುರುಗಳ ನೇತೃತ್ವದಲ್ಲಿ ವೇದಪಾರಂಗತರಾದ ಶಿಷ್ಯರು ಪುರೋಹಿತ ತಾದಿಗಳು ಸ್ವಾಹಾಸಮೇತನಾದ ಯಜ್ಞೇಶ್ವರನನ್ನು ಆಧಾನಗೊಳಿಸಿ ಯಜ್ಞಕುಂಡ ವನ್ನು ಹಸಿರುಹಸಿರಾದ ದರ್ಭೆಗಳಿಂದಲೂ ಪುಷ್ಪವಸ್ತ್ರಾದಿಗಳಿಂದಲೂ ಅಲಂಕರಿಸಿ ಪವಿತ್ರಮೂರ್ತಿಯೂ, ತ್ರಿಲೋಕಪೂಜ್ಯನೂ ಆದ ಶ್ರೀ ಯಜ್ಞೇಶ್ವರನನ್ನು ಕುಡಿ ಯಿಂದ ಕೂಡಿರುವ ಗೋಕರ್ಣ ಪರಿಮಾಣದ ಅನೇಕವಿಧ ಸಮಿತ್ತು, ಆಜ್ಯ, ಅರಳು, ಸಕ್ಕರೆ ಮದ್ದೆಯಾದ ತಿಲಗಳೇ ಮುಂತಾದವುಗಳಿಂದ ವಿಧ್ಯುಕ್ತವಾಗಿ ಪೂಜಿಸಿ ಸಂತೋಷಗೊಳಿಸಿದರು.

ಆಗ ಅಗ್ನಿಕುಂಡದಲ್ಲಿ ಪ್ರದಕ್ಷಿಣಾಕಾರವಾಗಿ ಜ್ವಾಲೆಗಳಿಂದ ಅಗ್ನಿದೇವನು ಕಂಗೊಳಿಸಿದನು. ಅದು ಅನುಗ್ರಹಸೂಚಕ ಹವಿಸ್ಸಿನ ಮಾಧುರ್ಯವನ್ನು ಯಜ್ಞೇಶ್ವರನು ಶ್ಲಾಘಿಸುತ್ತಿರುವಂತೆ ಕಂಡುಬರುತ್ತಿತ್ತು. ಅಂತಹ ಯಜ್ಞೇಶ್ವರನ ಸನ್ನಿಧಿಯಲ್ಲಿಯೇ ಸ್ಥಾಲೀಪಾಕಪಾತ್ರೆಯಲ್ಲಿ ಉಳಿದಿರುವ (ಅಭ್ಯಗ್ರವಾದ) ಹವಿಶ್ಶೇಷಪ್ರಸಾದವನ್ನು ಬ್ರಹ್ಮಣ್ಯಮುನಿಗಳು ತಾವೇ ಕರದಲ್ಲಿ ತೆಗೆದುಕೊಂಡು ಮೂರುಭಾಗವಾಗಿ ವಿಭಾಗಿಸಿ ಬಹಳಕಾಲ ಅದನ್ನು ಅಭಿಮಂತ್ರಿಸಿ ರಾಮಾಚಾರ್ಯರ ಹಸ್ತದಲ್ಲಿಟ್ಟು "ವತ್ಸ ! ಇದನ್ನು ಸ್ವೀಕರಿಸುವುದರಿಂದ ಪ್ರಕಾಶಮಾನವಾದ ಅರಣಿ ಯಲ್ಲಿ ಆವಿರ್ಭವಿಸುವ ತ್ರೇತಾಗ್ನಿಗಳಂತೆ ಅತಿ ಶೀಘ್ರವಾಗಿ ನಿನಗೆ ಮೂರು ಮಕ್ಕಳು ಜನಿಸುವರು.[1] ನಿನಗೆ ಪುಣ್ಯಪ್ರಾಪ್ತಿಗಾಗಿಯೂ. ಅತ್ಯಂತ ಯಶಸ್ಸಿ ಗೋಸ್ಕರವೂ ವಿಪುಲ ಸಂಪತ್ಪ್ರಾಪ್ತಿಗಾಗಿಯೂ ಸಹ ಪುರಾಣಪುರುಷನಾದ ಶ್ರೀಮನ್ನಾರಾಯಣನ ಪ್ರೀತ್ಯರ್ಥವಾಗಿ, ನಿನಗೆ ಜನಿಸುವ ಮೂವರು ಮಕ್ಕಳಲ್ಲಿ ಕಿರಿಯಪುತ್ರನನ್ನು ಸಪತ್ನೀಕನಾದ ನೀನು ನಮಗೆ, ನಮ್ಮ ಸಂಸ್ಥಾನಕ್ಕೆ ದಾನಮಾಡಿ

---

1. —"ಹವ್ಯಶೇಷಂ ಅಭಾತಯಾಮಂ ಸ್ವಯಮೇವಾಧಾಯ ತ್ರಿಧಾವಿಭಕ್ತಂ ಚಿರೇಣಾಭಿ ಮಂತ್ರಿತಂ ವಧೂಸಮಿಸ್ಯ ತಸ್ಯ ಗೃಹಮೇಧಿನೋ ಹಸ್ತೇ ಸಮರ್ಪಯನ್ ಇತ್ಥಮಭ್ಯ ಧಾತ್ । ಏತದುಪಯೋಗಾದೂರ್ಜಸ್ವಲಾಯಾಮರಣ್ಯಾಮಿವ ಪಾವಕಾನಾಮಚಿರಾ ದೇವ ಭವಿಷ್ಯತ್ಯಪತ್ಯಾನಾಂ ತ್ರಿತಯಮ್ ॥

ಶ್ರೀವ್ಯಾಸಯೋಗಿಚರಿತಮ್. ಪುಟ 25

ಶ್ರೇಯೋವಂತನಾಗಿ ಬಾಳು" ಎಂದಾಜ್ಞಾಪಿಸಿದರು.[1]

ಶ್ರೀಬ್ರಹ್ಮಣ್ಯತೀರ್ಥರು ಹೀಗೆ ಹೇಳುತ್ತಲೂ ರಾಮಾಚಾರ್ಯದಂಪತಿಗಳ ಮೈ ಪುಳುಕಿಸಿತು. ಆನಂದಶರಧಿಯುಕ್ಕೇರಿತು. ಗುರುಗಳ ಆಜ್ಞೆಯನ್ನು ಶಿರಸಾಧರಿಸಿದ ರಾಮಾಚಾರ್ಯರು ಲಕ್ಷ್ಮೀದೇವಿಯ ಮುಖವನ್ನವಲೋಕಿಸಿ ಸ್ವಪ್ನದಲ್ಲಿ ವೇದವ್ಯಾಸದೇವರು "ಬ್ರಹ್ಮಣ್ಯತೀರ್ಥರು ಹೇಳಿದಂತೆ ವರ್ತಿಸು" ಎಂದಾಜ್ಞಾಪಿಸಿದ್ದನ್ನು ಸ್ಮರಿಸಿ ಶ್ರೀವೇದವ್ಯಾಸದೇವರ ಅಪ್ಪಣೆಯನ್ನು ನೆರವೇರಿಸಲು ನಿಶ್ಚೈಸಿ "ಗುರದೇವ ! ತಮ್ಮ ಆಣತಿಯನ್ನು ಶಿರಸಾಧರಿಸಿದ್ದೇವೆ, ತಮ್ಮ ಆಜ್ಞೆಯಂತೆ ನಡೆಯುತ್ತೇವೆ"[2] ಎಂದು ಪತ್ನೀಸಹಿತರಾಗಿ ಪ್ರಮಾಣಪೂರ್ವಕವಾಗಿ ವಚನಬದ್ಧರಾದರು.

ಆನಂತರ ಸಂತುಷ್ಟರಾದ ಶ್ರೀಗಳವರು ಆಶೀರ್ವಾದಪೂರ್ವಕವಾಗಿ ಅನುಗ್ರಹಿಸಿದ ಹವಿಶ್ಶೇಷ ಪ್ರಸಾದವನ್ನು ಮೂರುತುತ್ತಾಗಿ ಪತ್ನಿಯುದು ಭುಂಜಿಸಿ ಗುರುಗಳಿಗೆ ನಮಸ್ಕಾರಮಾಡಿ ಆಶೀರ್ವಾದ ಪಡೆದು ಗುರುವರ್ಯರಿಗೆ ವಿಶೇಷ ಭಿಕ್ಷಾದಿಗಳನ್ನೂ ಪಾದಪೂಜೆ ಮುಂತಾದ ಗುರುಸೇವೆಯನ್ನೂಮಾಡಿ ಕೃತಾರ್ಥರಾದರು.

ಇದಾದಮೇಲೆ ಒಂದೆರಡುದಿನ ರಾಮಾಚಾರ್ಯದಂಪತಿಗಳು ಭಕ್ತಿಪೂರ್ವಕವಾಗಿ ಸಮರ್ಪಿಸಿದ ಆತಿಥ್ಯ-ಸೇವೆಗಳನ್ನು ಸ್ವೀಕರಿಸಿದ ಶ್ರೀಬ್ರಹ್ಮಣ್ಯತೀರ್ಥರು ಬನ್ನೂರಿನ ಸಮಸ್ತ ಶಿಷ್ಯ-ಭಕ್ತಮಂಡಲಿಯಿಂದ ಬೀಳ್ಕೊಂಡು ಅಬ್ಬೂರಿಗೆ ದಯಮಾಡಿಸಿದರು[3]

ಶ್ರೀಹರಿವಾಯುಗಳ ಅನುಗ್ರಹ ಮತ್ತು ಬ್ರಹ್ಮಣ್ಯತೀರ್ಥರ ಆಶೀರ್ವಾದ ಬಲದಿಂದ ಲಕ್ಷ್ಮೀದೇವಿಯು ಗರ್ಭಧರಿಸಿದಳು. ರಾಮಾಚಾರ್ಯರಿಗೆ, ಅವರ ಪಾಪ್ಟಿಕ ಬಂಧುಬಾಂದವರಿಗೆ ಮಹದಾನಂದವಾಯಿತು. ಕಾಲಕ್ರಮದಲ್ಲಿ ರಾಮಾಚಾರ್ಯರ ಪತ್ನಿಯಾದ ಲಕ್ಷ್ಮೀದೇವಿಯು, ಸಮುದ್ರವು ಶ್ರೀಲಕ್ಷ್ಮೀದೇವಿ ಮತ್ತು ಐರಾವತವನ್ನು ಪಡೆದಂತೆ "ಭೀಮಕ್ಕ" ನೆಂಬ ಓರ್ವ ಕನ್ಯಾಮಣಿಯನ್ನೂ, ಕಾಂತಿಸಂಪನ್ನನೂ, ಪ್ರತಿವಾದಿಭಯಂಕರನನೂ ಆದ "ಮಧ್ವಪತಿ" ಎಂಬ ಪುತ್ರನನ್ನೂ

---

1. ಪುಣ್ಯಾಯ ಭೂರಿಯಶಸೇ ತವ ಪುಷ್ಕಲಾಯೈ | ಭೂತ್ಯೈಮುದೇವಪುರುಷಸ್ಯ ಪುರಾತನಸ್ಯ ||
ತತ್ಪ್ರೋತ್ತರಸ್ಯ ತನಯಸ್ಯ ಚ ಸಂಪ್ರದಾನಾತ್ | ಸಂಪ್ರೀಣಯಿಷ್ಯಸಿ ಮನೋಮಮ ಸಪ್ರಿಯಾಕಃ ||"
—ಶ್ರೀವ್ಯಾಸಯೋಗಿಚರಿತಮ್. P. 25

2. —"ಇತ್ಯಭಿಹಿತಮಾತ್ರ ಏವ ಮೇಧಾಮೀಪ್ರಸಾದಸೂಚಿತಾನುಮತಿಃ ಪ್ರಿಯತಮಾವದನಮವಲೋಕ್ಯ ದುರ್ಲಂಘ್ಯಂ ಸಂಸ್ಮರನ್ ವಚನಂ ವ್ಯಾಸದೇವಸ್ಯ ತತ್ತಥೇತ್ಯುದಿತವಾನ್ || ಶ್ರೀ ವ್ಯಾ. ಯೋ. ಚ. P. 26

3. ಪೂಜನ್ನೈಃ ಪುಲಕಿತಸ್ತತೋ ಯಯೌ | ಚನ್ನಪಟ್ಟಣಮಭಿಸ್ವಮಾಲಯಮ್ ||"
—ಶ್ರೀ ವ್ಯಾ. ಘೋ. ಚ. P. 26

ಪ್ರಸವಿಸಿದಳು. ರಾಮಾಚಾರ್ಯರು ಮತ್ತು ಬಂಧು ಜನರು ಲಕ್ಷ್ಮೀದೇವಿಗೆ ಸಂತಾನ ಪ್ರಾಪ್ತಿಯಾದುದರಿಂದ ಪರಮಾನಂದ ತುಂದಿಲರಾದರು.*

## ೭. ಶ್ರೀಯತಿಸಾರ್ವಭೌಮನ ಅವತಾರ !

ರಾಮಾಚಾರ್ಯರ ಧರ್ಮಪತ್ನಿಯಾದ ಲಕ್ಷ್ಮೀದೇವಿಯು ಪೂರ್ವಾರ್ಜಿತ ಪುಣ್ಯ, ಶ್ರೀಹರಿಯ ಅನುಗ್ರಹ ಶ್ರೀಬ್ರಹ್ಮಣ್ಯತೀರ್ಥರ ಆಶೀರ್ವಾದಗಳ ಬಲದಿಂದ ಮತ್ತೆ ಗರ್ಭಿಣಿಯಾದಳು. ಜೀವೋತ್ತಮರಾದ ಶ್ರೀಮುಖ್ಯಪ್ರಾಣದೇವರ ವಿಶೇಷಾವೇಶಯುಕ್ತರಾದ ಶ್ರೀಪ್ರಹ್ಲಾದರಾಜರು ಗರ್ಭಸ್ಥರಾಗಿರಲಾಗಿ ವಾಯುದೇವರ ಶರೀರಭೂತವಾದ ಮಹತ್ತತ್ತ್ವದ ಮಹಿಮೆಯನ್ನು ಪ್ರಕಟಪಡಿಸಲೋ ಎಂಬಂತೆ ಲಕ್ಷ್ಮೀದೇವಿಯ ಉದರವೂ ಮಹತ್ತ್ವವನ್ನು ಹೊಂದಿತು. ಅಂದರೆ ಆ ತಾಯಿ ಪೂರ್ಣಗರ್ಭಿಣಿಯಾದಳೆಂದು ಭಾವ.[1]

ಶ್ರೀಬ್ರಹ್ಮಣ್ಯತೀರ್ಥರು ರಾಮಾಚಾರ್ಯದಂಪತಿಗಳಿಗೆ ಪುತ್ರೋತ್ಸವವಾಗುವ ಕಾಲವನ್ನು ಮೊದಲೇ ಅರಿತಿದ್ದರು. ಜ್ಞಾನಿಗಳಾದ ಅವರು ಜನಿಸುವ ಶಿಶುವು ಮಹಾಜ್ಞಾನಿಯೂ, ಭಾಗವತಾಗ್ರಣಿಯಾದ ಪ್ರಹ್ಲಾದರಾಜರ ಅವತಾರವೂ ಆಗಿರುವುದರಿಂದ ಹಿಂದೆ ಮಾತೃಗರ್ಭದಲ್ಲಿದ್ದ ಪ್ರಹ್ಲಾದರು ಶ್ರೀಹರಿತತ್ತ್ವಾಮೃತಪ್ರಾಶನದಿಂದ ವರ್ಧಿಸುವಂತೆ ನಾರದ ಮಹರ್ಷಿಗಳು ಅನುಗ್ರಹಿಸಿದ್ದನ್ನು ಸ್ಮರಿಸಿ, ಬ್ರಹ್ಮಣ್ಯತೀರ್ಥರು ಈಗ ಆ ಮಹನೀಯರೇ ಮತ್ತೆ ಅವತರಿಸುವುದರಿಂದ ಆ ಪವಿತ್ರಾತ್ಮರಿಗೆ ಭೂಸ್ಪರ್ಶವಾಗದಂತೆಯೂ, ಜನಿಸಿದ ಮಗುವು ತಾಯಿಯಹಾಲನ್ನು ಕುಡಿಯದೇ ಭಗವದರ್ಪಿತ ಕ್ಷೀರಪ್ರಾಶನದಿಂದಲೇ ಬೆಳೆಯುವಂತೆ ಮಾಡಬೇಕೆಂದು ಹರಿವಾಯುಗಳ ಪ್ರೇರಣೆಯಂತೆ ಸಂಕಲ್ಪಿಸಿದರು. ಮತ್ತು ಅತ್ಯಂತ ಭಕ್ತಿಯಿಂದ ಶ್ರೀಮೂಲ ಗೋಪಾಲಕೃಷ್ಣ-ಪಟ್ಟಾಭಿರಾಮ-ವೇದವ್ಯಾಸ ದೇವರಿಗೆ ಅರ್ಪಿಸಿದ ಗೋಕ್ಷೀರವನ್ನು ಅಭಿಮಂತ್ರಿಸಿ ಒಂದು ಸುವರ್ಣಪಾತ್ರೆಯಲ್ಲಿ ಹಾಕಿ ಮುಚ್ಚಿ ಕೆಲ ಅವಶ್ಯ ತಿಳುವಳಿಕೆರೂಪ ಸಂದೇಶದೊಡನೆ ತಮ್ಮ ಆತ್ಮೀಯರೊಡನೆ ರಾಮಾಚಾರ್ಯರಿಗೆ ಕೊಡಲು ಬನ್ನೂರಿಗೆ ಕಳುಹಿಸಿಕೊಟ್ಟರು.

---

* "ಕಾಲಕ್ರಮಾತ್ಕಲಿತ ದೌಹೃದಕಂದಲಶ್ರೀಃ ।
ಸಾ ಧೀಪ-ಮಧ್ವಮುನಿನಾಮಸಮೇಧಿತಾಶ್ವಾ ದ್ವಾ॥
ಕನ್ಯಾಮಸೂತ ಕಮಲಾಮಿವ ಸಿಂಧುವೇಲಾ ।
ದಂತಾವಲೇಂದ್ರ ಮಿವ ದೀಪ ರುಚಂ ಸುತಂ ಚ ॥"

ಶ್ರೀ ವ್ಯಾಸಯೋಗಿಚರಿತಮ್. ಪುಟ 26 ।

1 "ಅಥತ್ತ ಪುಣ್ಯೈರಥಗರ್ಭಸೇಪಾ ಪುಷ್ಯತ್ಪ್ರಭಾವಂ ಘನರಾಯತಾಕ್ಷೀ ।
ಸ್ಫುರನ್ಮಣಿಂ ಪುಂಡ್ರಕ ವರ್ತಿಕೇವ ಕವೇರಿವೋಕ್ತಿಃ ಕಮನೀಯಮರ್ಥಂ ॥
—ವ್ಯಾ. ಯೋ. ಚ. 26

ಗುರುಗಳ ಅಪ್ಪಣೆಯಂತೆ ಹೊರಟ ಮರದ ಆತ್ಮೀಯರು, ಶಿಶುವು ಜನಿಸಲಿರುವ ದಿನವೇ ಪ್ರಾತಃಕಾಲ ಬನ್ನೂರಿಗೆ ಬಂದು ಸೇರಿದರು ಮತ್ತು ಏಕಾಂತದಲ್ಲಿ ರಾಮಾಚಾರ್ಯದಂಪತಿಗಳಿಗೆ ಗುರುಗಳು ಕಳಿಸಿದ ಕ್ಷೀರಯುಕ್ತ ಸುವರ್ಣಪಾತ್ರೆಯನ್ನು ಕೊಟ್ಟು "ಪೂಜ್ಯ ಆಚಾರ್ಯರೇ, ಗುರುವರ್ಯರು ಭಗವದರ್ಪಿತ, ಮಂತ್ರಪೂತವಾದ ಕ್ಷೀರವನ್ನು ನಿಮಗೆ ಕಳಿಸಿದ್ದಾರೆ. ನಿಮಗೆ ಹುಟ್ಟುವ ಶಿಶುವು ಜ್ಞಾನಿಯಾದ ದೇವಾಂಶಸಂಭೂತನಾಗಿರುವುದರಿಂದ ಆ ಶಿಶುವು ಭೂಸ್ಪರ್ಶವಿಲ್ಲದೇ ಸುವರ್ಣ ಹರಿವಾಣದಲ್ಲಿ ಜನಿಸುವಂತೆ ಮಾಡಲು ಆಜ್ಞಾಪಿಸಿರುವುದು ಸರಿಯಷ್ಟೆ ? ಹುಟ್ಟುವ ಶಿಶುವು ಮಹಾತ್ಮನಾಗಲಿರುವುದರಿಂದ ಅವನ ಭವಿಷ್ಯದ ಅಭಿವೃದ್ಧಿಯ ದೃಷ್ಟಿಯಿಂದ ಪರಮಾತ್ಮನಿಗೆ ಸಮರ್ಪಿತವಾದ ಈ ಹಾಲನ್ನೇ ದಿನಕ್ಕೆ ನಾಲ್ಕಾರು ಉದ್ಧರಿಣೆಯಷ್ಟು ಪ್ರಾಶಸನಮಾಡಿಸಬೇಕು. ಇದು ಹತ್ತು ಹದಿನೈದು ದಿನಗಳಿಗೆ ಸಾಕಾಗುವುದು. ಮಾತ್ರವಲ್ಲ; ಹಾಲು ಇಂದಿನಂತೆಯೇ ಶುದ್ಧವಾಗಿಯೇ ಇರುತ್ತದೆ. ಇದರಿಂದ ಶಿಶುವು ಆರೋಗ್ಯಪೂರ್ಣವಾಗಿ, ಹೃಷ್ಟಪುಷ್ಟಾಂಗವಾಗಿ, ಪವಿತ್ರವಾಗಿ ಬೆಳೆಯುವುದು. ಈ ಬಗ್ಗೆ ಯೋಚಿಸಬೇಕಾಗಿಲ್ಲ. ಎಲ್ಲವೂ ಭಗವಂತನ ಪ್ರೇರಣೆಯಂತೆ ಈ ವ್ಯವಸ್ಥೆ ಮಾಡಲಾಗಿದೆ. ಮಗುವು ಜನಿಸಿದ ಹನ್ನೊಂದನೆಯದಿನ ಮಂಗಳಸ್ನಾನಾನಂತರ ಪುಣ್ಯಾಹಾದ್ಯಾಚರಣೆಗಳನ್ನು ನೇರವೇರಿಸಿಕೊಂಡು ಅಬ್ಬೂರಿಗೆ ನೀವೆಲ್ಲರೂ ಮಗುವಿನೊಡನೆ ಬಂದು ಅಲ್ಲಿಯೇ ಶ್ರೀಗಳವರ ನೇತೃತ್ವದಲ್ಲಿ ಜಾತಕರ್ಮ–ನಾಮಕರಣ ಮಹೋತ್ಸವಗಳನ್ನು ನೆರವೇರಿಸಬೇಕು-ಎಂದು ಗುರುಗಳು ಅಪ್ಪಣೆ ಮಾಡಿದ್ದಾರೆ" ಎಂದು ನಿವೇದಿಸಿದರು. ಅವರ ಮಾತು ಕೇಳಿ ಮೊದಲು ಸ್ವಲ್ಪ ಚಿಂತೆಯಾದರೂ ಅನಂತರ ರಾಮಾಚಾರ್ಯದಂಪತಿಗಳು ಜ್ಞಾನಿಗಳಾದ ಗುರುಗಳ ಅಣತಿಯಂತೆ ವರ್ತಿಸುವುದು ಶ್ರೇಯಸ್ಕರವೆಂದು ನಿರ್ಧರಿಸಿದರು.

ಕೆಲದಿನಗಳ ಹಿಂದೆ ಶ್ರೀ ಬ್ರಹ್ಮಣ್ಯತೀರ್ಥರು ರಾಮಾಚಾರ್ಯರ ಪತ್ನಿಯು ತುಂಬಿದ ಗರ್ಭಿಣಿಯಾಗಿರುವುದನ್ನು ತಿಳಿದು, ಜ್ಯೋತಿಷ್ಕರಿಂದ ಪ್ರಸವಕಾಲಾದಿಗಳನ್ನು ಮೊದಲೇ ಅರಿತಿದ್ದರು. ಭಾಗವತಾಗ್ರಣಿಯೂ, ಜ್ಞಾನಿಶ್ರೇಷ್ಠನೂ ಆದ ಪ್ರಹ್ಲಾದರಾಜನೇ ಜನಿಸುವವನೆಂದು ಶ್ರೀವೇದವ್ಯಾಸರ ವರದಿಂದ ತಿಳಿದಿದ್ದರು. ಆದ್ದರಿಂದಲೇ ಆ ಮಹಾನುಭಾವನಿಗೆ ಭೂಸ್ಪರ್ಶವಾಗದೆ ಜನಿಸುವಂತೆ ವ್ಯವಸ್ಥೆ ಮಾಡಲು ಶ್ರೀಹರಿವಾಯುಗಳ ಪ್ರೇರಣೆಯಿಂದ ನಿಶ್ಚಯಿಸಿ ಅದಕ್ಕಾಗಿ ಒಂದು ದೊಡ್ಡ ಚಿನ್ನದ ಹರಿವಾಣವನ್ನು ಆತ್ಮೀಯರೊಡನೆ ರಾಮಾಚಾರ್ಯರಿಗೆ ಕಳುಹಿಸಿಕೊಟ್ಟು ಅದರಲ್ಲಿಯೇ ಶಿಶುವಿನ ಜನನವಾಗುವಂತೆ ವ್ಯವಸ್ಥೆ ಮಾಡಿದ್ದರು.

ಶ್ರೀ ಶಾಲಿವಾಹನ ಶಕೆ ೧೩೯೯ನೇ ಪ್ರಭವ ಸಂವತ್ಸರದ ಅಧಿಕ ವೈಶಾಖ ಶುಕ್ಲ ಸಪ್ತಮೀ ಭಾನುವಾರ, ಬನ್ನೂರಿನಲ್ಲಿ ಮಹಾಸಂಭ್ರಮ, ನರಕಾಂತಕನಾದ ನಾರಾಯಣನ ನಾಭಿಕಮಲವು ವೇದಗಳಿಗೆ ಆಶ್ರಯನಾದ ಬ್ರಹ್ಮದೇವರನ್ನು ಪ್ರಸವಿಸಿದಂತೆ ರಾಮಾಚಾರ್ಯರ ಪತ್ನಿ ಲಕ್ಷ್ಮೀದೇವಿಯು ಪರಿಶುದ್ಧವಾದ, ಸಕಲ

ಗ್ರಹಗಳ ಶುಭವೀಕ್ಷಣದಿಂದ ಕೂಡಿ, ಮಹಾಮಹಿಮಾನ್ವಿತ, ಸಂಪದ್ಯುಕ್ತ ಶುಭ ಲಗ್ನದಲ್ಲಿ ಭೂಸ್ಪರ್ಶವಿಲ್ಲದಲೇ ಭಂಗಾರದ ಹರಿವಾಣದಲ್ಲಿ ಅನಾಯಾಸವಾಗಿ ಪುತ್ರರತ್ನವನ್ನು ಪ್ರಸವಿಸಿದಳು ![2]

ಶ್ರೀವೇದವ್ಯಾಸರ ಅಭಯ ವಚನದಂತೆ ಭಾಗವತ ಶಿರೋಮಣಿಗಳಾದ ಪ್ರಹ್ಲಾದರಾಜರು ಶ್ರೀಹರಿ ಸೇವೆಗಾಗಿ ಮತ್ತೆ ಜನಿಸಿದರು ! ಲೋಕಕಲ್ಯಾಣಭಾಗ್ಯ ರವಿಯ ಅವತಾರವಾಯಿತು ! !

ಅಖಂಡ ಬ್ರಹ್ಮಾಂಡವನ್ನು ಶಿರದಲ್ಲಿ ಹೊತ್ತು ರಕ್ಷಿಸುವ ಶ್ರೀಹರಿತಲ್ಪ ರೂಪನಾದ ಸಾಕ್ಷಾತ್ ಶೇಷಾಂಶಸಂಭೂತನಾದ ಪ್ರಹ್ಲಾದರಾಜನು ಹಿಂದೆ ನರಸಿಂಹ ದೇವರಲ್ಲಿ ತನ್ನ ಮುಂದಿನ ಮೂರು ಜನ್ಮಗಳಲ್ಲಿ ಹರಿಯ ದಾಸನಾಗಿ ಸೇವಿಸುವಂತೆ ಇಚ್ಛಿಸಿ ವರವನ್ನು ಪಡೆದಿದ್ದಂತೆ.[3] ಶ್ರೀರಾಮಾಚಾರ್ಯರ ಧರ್ಮಪತ್ನಿಯಾದ ಲಕ್ಷ್ಮೀದೇವಿಯಲ್ಲಿ ಶ್ರೀ ಬ್ರಹ್ಮಣ್ಯತೀರ್ಥಮುನಿಗಳ ಕಾರುಣ್ಯದಿಂದ ಶೇಷಾಂಶ ಶೋಭಿತನಾಗಿ ಶ್ರೀಶಾಲೀವಾಹನ ಶಕೆ ೧೩೬೯ನೇ ಪ್ರಭವ ಸಂವತ್ಸರದ ಅಧಿಕ ವೈಶಾಖ ಶುಕ್ಲ ಸಪ್ತಮೀ ಭಾನುವಾರದಂದು ಅವತರಿಸಿದನು.[4]

---

2 ಕ) "ಬನ್ನೂರು ಗ್ರಾಮದಲ್ಲಿ ಜನಿಸಿದನು ಭೂಸ್ಪರ್ಶವಿಲ್ಲದಲೇ......॥"

ಖ) ಅವತರಿಸಿದ ಆಂಗ್ಲದಿನಾಂಕ 22-4-1447. —ಶ್ರೀವಿಜಯದಾಸರು

ಗ) "ಸುತಮಜನಯದೇಷಾ ಶುದ್ಧತಾಭಾಜಿ ಲಗ್ನೇ । ಗ್ರಹಗಣಶುಭವೀಕ್ಷಾ ಗೌರವೋದ್ದಾಮಭಾಗ್ಯೇ । ವಿಧಿವಿದವನಿಪಾಯಾಂ ವಿಶ್ವಪಾಚಿಂ ನಿವಾಸಂ ನರಕದನುಜಹಂತುರ್ನಾರಸಿಂಹಾಲೀಕಪಾಲೇಃ ॥" —ಶ್ರೀ ವ್ಯಾಸಯೋಗಿ ಚರಿತಮ್-ಪುಟ-27

3 ಕ) ಶ್ರೀವ್ಯಾಸರಾಜರ ಉತ್ಪತ್ತಿಸುಳಾದಿ

ಧ್ರುವತಾಳ

ಒಂದುದಿನ ನಾರದಮುನೀಶ್ವರ..............।..................

ತ್ರಿಪುಟತಾಳ

ಹರಿಯುವಾದಕ್ಕೆರಗಿ ವರಪ್ರಹ್ಲಾದನು । ಎರಡೊಂದು ಮಾರ್ಗವಲ್ಲಿ ಕೃಷ್ಣನ್ನ ।
ಮೂರುತಿ ಮಹಿಮೆಯಲ್ಲಿ ಜನಿಸಿ ಧನ್ಯನಾಗುವೆನೆಂದು ॥
ಸುರಮುನಿಗೆರಗಿ ನಿಂದಿರಲಾಗಿ ನಾರದ । ಕರುಣದಿಂದಲಿ ಉತ್ತರವೇಳಿದ ।
ಧರೆಯೊಳು ಜನಿಸುವ ವರವಪಡೆದುಯಿಪ್ಪ । ಪರಮಭಾಗವತರಮಣಿಯು ನೀನು ॥
ಧಾರುಣಿಯೊಳಗವತರಿಸಿ ಅಧಿಕವಾದ । ಮಾರುತಮತದೊಳಗೆ ಚರಿಸಿ ಕೃಷ್ಣನಪೂಜೆ ।
ನಿರುತ ಬಿಡದೆಮಾಡಿ ಹರುಷಪಡೋದೆನಲು । ಕರುಣವಾರಿಧಿ ನರಹರಿ ವಿಜಯವಿಠಲನ್ನ ।
ಸ್ಮರಿಸಿ । ಶೇಷಾಂಶಧರಿಸಿ ದೇಹವತಾಳ್ದ ॥೩ —ಶ್ರೀವಿಜಯದಾಸರು

ಖ) "ದಾಸಸ್ತವಾಹಂ ಭೂಯಾಸಂ ದೇವ ಜನ್ಮಾಂತರೇಷ್ವಪಿ॥" —ಭಾಗವತ

4 ರಾಮಾಚಾರ್ಯಸುಧೀಮಣೇಃ ವರಯಿತಯಾ ಗರ್ಭೇಧೃತಃ ಶ್ರೀಮತೋ ।
ಬ್ರಹ್ಮಣ್ಯಸ್ಯ ಯತೀಶಿತುಃ ಕರುಣಯಾ ಸಂವತ್ಸರೇಷ್ವಾದಿಮೇ ॥
ವೈಶಾಖಾದಿಮ ಪಕ್ಷಕೇ ದಿನಮಣೇಃ ವಾರೇ ದಿನೇ ಸಪ್ತಮೇ ।
ಪ್ರಹ್ಲಾದೋಽವತತಾರ ಭೂಮಿವಲಯೇ ನಾಗಾಧಿಪಸ್ಯಾಂಶಭೃತ್ ॥೨॥
—ಶ್ರೀವಿದ್ಯಾರತ್ನಾಕರತೀರ್ಥರು

ಶಿಶುವು ಭಂಗಾರದ ಹರಿವಾಣದಲ್ಲಿ ಜನಿಸಿದ ಕೂಡಲೇ ಆ ಪ್ರಸೂತಿಕಾಗ್ರಹವು ಪ್ರಖರ ಕಾಂತಿಯಿಂದ ಬೆಳಗಿತು! ಮೇರುಪರ್ವತದ ಶೃಂಗಾಗ್ರದಲ್ಲಿ ಉದಯಿಸುತ್ತಿರುವ ದಿನಮಣಿಯ ಕಾಂತಿಯು ಹೇಗೆ ಕುಂಜೀಕೃತವಾಗಿ ಸರ್ವತ್ರ ವ್ಯಾಪಿಸಿ ಕಂಗೊಳಿಸುವುದೋ, ಅದರಂತೆಯೇ, ಜನಿಸಿದ ಈ ಶಿಶುವೂ ಸಹ ಎಲ್ಲೆಡೆ ಹರಡಿದ ತನ್ನ ಸಾಂಪ್ರದಾಯದ ಕಾಂತಿ ಸಂತತಿಯಿಂದ ಅತ್ಯಂತ ತೇಜಸ್ಸಿನಿಂದ ಆ ಪ್ರಸೂತಿಕಾ ಗೃಹವನ್ನು ಬೆಳಗಿಸಿ ತನ್ನ ಸ್ವಾಭಾವಿಕ "ಹಿರಣ್ಯಗರ್ಭತ್ವ"ವನ್ನು ಪ್ರಕಟಿಸಿತು.[5]

ಶ್ರೀಹರಿಯ ಪರಮಾನುಗ್ರಹಕ್ಕೆ ಪಾತ್ರರಾದ, ವೇದಪ್ರತಿಪಾದ್ಯ ಮಹಿಮೋಪೇತರೂ, ಜೀವೋತ್ತಮರೂ, ಜಗತ್ಪ್ರಾಣರೂ ಆದ ಶ್ರೀವಾಯುದೇವರ ವಿಶೇಷಾವೇಶಾವತಾರರಾದ ಶ್ರೀಪ್ರಹ್ಲಾದರಾಜರು ಶ್ರೀ ಹರಿಯ ಸಂಕಲ್ಪದಂತೆ ವೈದಿಕ ಸದ್ವೈಷ್ಣವ ಸಿದ್ಧಾಂತ ಸ್ಥಾಪನೆ, ಜಗತ್ ಕಲ್ಯಾಣ-ಶ್ರೀಕೃಷ್ಣ ಸೇವಾದಿಗಳಿಗಾಗಿ ಅವತರಿಸಿದ ಕೂಡಲೇ ದೇವದುಂದುಭಿಗಳು ಮೊಳಗಿದವು. ದೇವತೆಗಳು ಹರ್ಷ ನಿರ್ಭರರಾಗಿ ಪುಷ್ಪವೃಷ್ಟಿ ಮಾಡಿದರು. ಗಂಧರ್ವರು ಗಾನಮಾಡಿದರು. ಅಪ್ಸರಸ್ತ್ರೀಯರು ನರ್ತಿಸಿದರು. ರಾಮಾಚಾರ್ಯರ ಗೃಹದಲ್ಲಿ ಮಂಗಳವಾದ್ಯಗಳು ಭೋರ್ಗರೆದವು! ಮಧ್ವಮತಾಬ್ಧಿ ಚಂದ್ರಮನ ಉದಯದಿಂದ ಸದ್ವೈಷ್ಣವ ಕುಮುದಗಳು ಅರಳಿದವು. ಲೋಕಕಲ್ಯಾಣ ಮಂಗಳಗೀತೆಯು ತನ್ನ ಸುಮಧುರ ನಾದ ಲಹರಿಯಿಂದ ಜಗತ್ತಿನಲ್ಲೆಲ್ಲ ವ್ಯಾಪಿಸಿ ಸಹೃದಯ ಸುಜನರ ಮನಸ್ಸನ್ನು ಪರಮಾನಂದಗೊಳಿಸಿತು! ಜ್ಞಾನಿಗಳು ಈ ಅದ್ಭುತ ವ್ಯಾಪಾರವನ್ನು ಕಣ್ಣಾರೆ ಕಂಡರು. ಸಾಮಾನ್ಯ ಮಾನವರು ರಾಮಾಚಾರ್ಯರ ಮನೆಯಲ್ಲಿ ಘೋಷಿಸಿದ ಮಂಗಳ ವಾದ್ಯಗಳನ್ನು ಮಾತ್ರ ಕೇಳಿ ಮುದಿಸಿದರು.

ಸೂರ್ಯೋದಯದ ಕಾಂತಿಯಿಂದ ದಶದಿಕ್ಕುಗಳು ಪ್ರಸನ್ನವಾಗುವಂತೆ ಸಮಸ್ತ ಜನರ ಮನಸ್ಸುಗಳು ಆ ಶಿಶುವಿನ ಕಾಂತಿಯಿಂದ ಪ್ರಸನ್ನಗೊಂಡವು. ಮಂಗಳಸೂಚಕ ಶಂಖಧ್ವನಿಯನ್ನು ಅನುಸರಿಸಿ ಜನರ ಪ್ರೀತಿಯೂ ಹೊರಹೊಮ್ಮಿತು! ದೇವವೃಕ್ಷಗಳ ಪುಷ್ಪವೃಷ್ಟಿಯಂತೆ ಮಾತೆಯಾದ ಲಕ್ಷ್ಮೀದೇವಿಯ ಆನಂದಬಾಷ್ಪೋದಕಗಳು ಸಿಕ್ತವಾದವು. ಕಾಶ್ಯಪಕುಲಶ್ರೇಷ್ಠವಾದ ಆ ಶಿಶುವು

---

5 ಅ)"ಅಥಾವಭೀಷು ಪಕರ್ಶೈರಯಂ ಶಿಶುಃ ಸುಮೇರುಕುಂಜೀಕೃತ ಸೂತಿಕಾಗೃಹೈಃ ।
ಅಭೂತಪೂರ್ವೈರಮಲೈರಿವಾತ್ಮನೋ ಹಿರಣ್ಯಗರ್ಭತ್ವಮಿವ ಪ್ರದರ್ಶಯನ್ ॥
ಬಿ)ಶ್ರೀವ್ಯಾಸರಾಜರು ಭೂಸ್ಪರ್ಶವಿಲ್ಲದೆಭಂಗಾರದ ಹರಿವಾಣದಲ್ಲಿ ಜನಿಸಿದ ವಿಚಾರವು ಸೋಪಾನಾಥಕವಿಯ"ಹಿರಣ್ಯಗರ್ಭತ್ವ" ವಿಶೇಷಣದಿಂದ-ಹಿರಣ್ಮಯಪದಸಮಭಿವ್ಯಾಹಾರದಿಂದ ಇಲ್ಲಿ ಸೂಚಿತ(ಧ್ವನಿತ)ವಾಗಿದೆ. ಮತ್ತು ಅದೇ ವಿಶೇಷಣವು ಶ್ರಿ ಬ್ರಹ್ಮ ಸಮಾನರಾದ ವಾಯುದೇವರೇ ಅವತರಿಸಿದರೆಂಬುದನ್ನೂ ಸಹ ಸೂಚಿಸುವುದು
—ಗ್ರಂಥಕರ್ತ.

ಮರುಗದ ಎಳೆಯ ಚಿಗುರುಗಳಂತೆ ಸುಖಸ್ಪರ್ಶಿಯಹಾಗಿ ಸಕಲಜನರನ್ನು ಆನಂದ ಗೊಳಿಸಿತು.[6] ಸರ್ವಾಂಗಸುಂದರನಾದ ಆ ಅಪೂರ್ವ ಪುತ್ರನ ಮುಖಕಮಲವನ್ನು ಕಂಡು ರಾಮಾಚಾರ್ಯರು ಆನಂದಾಂಬುಧಿಯಲ್ಲಿ ನಲಿದಾಡಿದರು.[7*]

ಹತ್ತುದಿನಗಳು ಸಂತೋಷದಿಂದ ಕಳೆದವು, ಹನ್ನೊಂಡನೆಯ ದಿವಸ ಲಕ್ಷ್ಮೀ ದೇವಿಯು ಮಗುವಿನೊಂದಿಗೆ ಮಂಗಳಾಭ್ಯಂಜನವನ್ನು ಮುಗಿಸಿದ ಮೇಲೆ ಮಂಗಳ ಸ್ನಾನ ಮಾಡಿ ಶುಚಿರ್ಭೂತರಾದ ರಾಮಾಚಾರ್ಯರು ವೈದಿಕವಿಧಿಪೂರ್ವಕವಾಗಿ ಪತ್ನೀಪುತ್ರರೊಡನೆ ಹಸೆಮಣೆಯಮೇಲೆ ಕುಳಿತು ಮಂಗಳವಾದ್ಯಘೋಷವಾಗು ತ್ತಿರಲು ಪಾಷ್ಟಿಕವಂಶಾಗತ ಕ್ರಮದಂತೆ ಪುಣ್ಯಾಹ, ನವಗ್ರಹ ಪೂಜಾದಿಗಳನ್ನು ಶ್ರದ್ಧೆಯಿಂದಾಚರಿಸಿದರು. ವೃದ್ಧಸುಮಂಗಲೆಯರು ರತ್ನದಾರತಿ ಕದಲಾರತಿ ಗಳನ್ನು ಬೆಳಗಿದರು. ಭೂಸುರವೃಂದವು ವೇದಋಕ್ಕುಗಳನ್ನು ಪಠಿಸುತ್ತಾ ಶುಭಾಶಿರ್ವಾದಗಳನ್ನು ಮಾಡಿದರು,

ಅಂದು ಮಧ್ಯಾಹ್ನ ದೇವತಾರ್ಚನೆ, ನಿವೇದನಾದಿಗಳನ್ನು ಸಂಪ್ರದಾಯದಂತೆ ನೆರವೇರಿಸಿ ಬ್ರಾಹ್ಮಣ-ಸುವಾಸಿನಿಯರಿಗೆ ಮೃಷ್ಟಾನ್ನ ಭೋಜನ ಮಾಡಿಸಿ, ಉದಾರ ವಾಗಿ ದಕ್ಷಿಣೆ ಸಂಭಾವನೆಗಳನ್ನಿತ್ತು ಸಕಲರನ್ನೂ ಮುದಗೊಳಿಸಿ, ಬ್ರಾಹ್ಮಣರ ಅಪ್ಪಣೆ ಪಡೆದು ರಾಮಾಚಾರ್ಯ ದಂಪತಿಗಳು ಭೋಜನ ಮಾಡಿ ಪೂಜ್ಯರಾದ ಶ್ರೀಬ್ರಹ್ಮಣ್ಯ ಗುರುಗಳ ಆದೇಶದಂತೆ ಜೋಡೀ ಕುದುರೆಯ ಗಾಡಿಯಲ್ಲಿ ಸಂಸಾರ ಸಹಿತರಾಗಿ ಬನ್ನೂರಿನಿಂದ ಪ್ರಯಾಣ ಬೆಳೆಸಿ ಸುಖವಾಗಿ ಅಬ್ಬೂರಿಗೆ ಬಂದು ಸೇರಿದರು.

---

6 "..... ತದಾ ದಿಶಾಮುಖೈಸ್ಸಾಕಂ ಪ್ರಸನ್ನತಾಮಭಜಂತ ಮನಾಂಸಿ । ಮಂಗಲಶಂಖಧ್ವಾನೇನ ಸಹ ಸಮುದಜೃಂಭಂತ ಪ್ರೀತಯೋ ಬಾಂಧವಾನಾಂ । ಅಮರ ತರುಪ್ರಸೂನವೃಷ್ಟಿಭಿಸ್ಸಾರ್ಧಂ ಸಮವರ್ತಂತ ಮಾತುರಾನಂದ ಬಾಷ್ಪಸಲಿಲಾನಿ । ಸಮೀರಶಾಬಕೈಸ್ಸಮಂ ಕಾಶ್ಯಪಕುಲಾಧಿಪಃ ಸುಸ್ಪರ್ಶನಃ ಸಕಲಜನಾನಾನಂದ— ಯಾಮಾಸ॥"

7 "ಕನಕಾಂಬುಜ ಕುಂದಲೋಪಮಾಸಂ। ಮುಖಮಾಲೋಕಯತಃ ಸುತಸ್ಯ ತಸ್ಯ ॥ ನಯನಾತ್ಪಿತುರಶ್ರುವಾರಿಪೂರೋ। ನಿರಗಾದಂತರಮಾನಿವ ಪ್ರಮೋದಃ ॥"

—ಶ್ರೀ ವ್ಯಾಸಯೋಗಿಚರಿತಮ್—P. 27

* ಬನ್ನೂರಿನಲ್ಲಿ ಶ್ರೀವ್ಯಾಸರಾಜರು ಅವತರಿಸಿದ ಪವಿತ್ರಸ್ಥಾನದಲ್ಲಿ, ಶ್ರೀ ವ್ಯಾಸಮುನೀಂ ದ್ರರು ಮುಂದೊಮ್ಮೆ ಅಬ್ಬೂರಿಗೆ ಸಂಚಾರಕ್ರಮದಲ್ಲಿ ಬಂದಾಗ ತಾವು ಜನಿಸಿದ ಶುಭ ಸ್ಥಳದಲ್ಲಿ ತಾವು ಜನಿಸಿದ ಜ್ಞಾಪಕಾರ್ಥವಾಗಿ ಶ್ರೀ ಆಂಜನೇಯನನ್ನು ಪ್ರತಿಷ್ಠಿಸಿದರು. ಇಂದಿಗೂ ಬನ್ನೂರಿನಲ್ಲಿ "ಜನ್ಮಾಂಜನೇಯ" ನೆಂಬ ಶ್ರೀಪ್ರಾಣದೇವರು ಪ್ರಖ್ಯಾತಿಗಳಿಸಿ ಸುಜನರಿಂದ ಸೇವ್ಯರಾಗಿದ್ದಾರೆ.

## ೮. ಜಾತಕರ್ಮ-ನಾಮಕರಣ

ಆಚ್ಯೂರಿಗೆ ಆಗಮಿಸಿದ ರಾಮಾಚಾರ್ಯದಂಪತಿಗಳು, ಮತ್ತು ಬಂಧುಗಳಿಗೆ ಒಳ್ಳೇ ಸ್ವಾಗತದೊರಕಿತು. ಗುರುಗಳು ರಾಮಾಚಾರ್ಯದಂಪತಿಗಳ ಯೋಗಕ್ಷೇಮ ವಿಚಾರಿಸಿದರು. ದಂಪತಿಗಳು ಶ್ರೀಗಳವರಿಗೆ ಸಾಷ್ಟಾಂಗವೆರಗಿ ಸುವರ್ಣಹರಿವಾಣ ದಲ್ಲಿ ರಾಜಿಸುವ ಶಿಶುವನ್ನು ಸ್ವಾಮಿಗಳ ಮುಂದಿಟ್ಟು ಕರಜೋಡಿಸಿ, "ಗುರುದೇವ ! ಇಕೋ ತಮ್ಮ ಅನುಗ್ರಹದಿಂದ ಜನಿಸಿದ ಬಾಲಕನಿವನು. ನಿಮ್ಮ ಅಪ್ಪಣೆಯಂತೆಯೇ ವರ್ತಿಸಿ ಮಗುವಿನೊಡನೆ ಬಂದಿದ್ದೇವೆ. ಮುಂದಿನ ಕರ್ತವ್ಯವನ್ನು ತಿಳಿಸಬೇಕು" ಎಂದರು.

ಶ್ರೀಪಾದಂಗಳವರಿಗೆ ಅವರ ಮಾತಿನಿಂದ ಸಮಾಧಾನವಾಯಿತು. ಸುವರ್ಣ ಹರಿವಾಣದಲ್ಲಿ ಸುವರ್ಣಚ್ಛವಿಯಿಂದ ಮಗುವು ಸಕಲರ ಮನಸ್ಸನ್ನು ತನ್ನತ್ತಆಕರ್ಷಿಸುತ್ತಾ ಕಿಲಕಿಲನೆ ನಗುತ್ತಾ ವಿಲಕ್ಷಣತೇಜಸ್ಸು, ಲಾವಣ್ಯಗಳಿಂದ ಕಂಗೊಳಿಸುತ್ತಿತ್ತು. ಶಿಶುವನ್ನು ಕಂಡು ಬ್ರಹ್ಮಣ್ಯತೀರ್ಥರ ಹೃದಯ ತುಂಬಿಬಂದಿತು. ಆನಂದಪರವಶರಾದ ಮುನಿವರ್ಯರು ಮೈಮರೆತು ಮಗುವನ್ನು ಮಾತೆಯಂತೆ ಎತ್ತಿ ಮಡಿಲಲ್ಲಿ ಮಲಗಿಸಿಕೊಂಡು ತಬ್ಬಿಮುದ್ದಾಡಿ "ಬಂದೆಯಾ, ಭಕ್ತವರ! ಜಗತ್ತಿನ ಅಜ್ಞಾನಾಂಧಕಾರವನ್ನು ಕಳೆದು ಜ್ಞಾನಜ್ಯೋತಿಯನ್ನು ಬೆಳಗಿಸಿ, ಕಾರುಣ್ಯದಿಂದ ಜಗತ್ತನ್ನು ಪೊರೆಯಲು ಬಂದೆಯಾ?" ಎಂದು ಬಡಬಡಿಸಿದರು. ರಾಮಾಚಾರ್ಯದಂಪತಿಗಳು ಗುರುಗಳ ಪರವಶತೆಯನ್ನುಕಂಡು ವಿಸ್ಮಿತರಾದರು. ಅವರು ಸ್ವಲ್ಪ ಹೊತ್ತಾದಮೇಲೆ ಮಗುವನ್ನು ಮತ್ತೆ ಹರಿವಾಣದಲ್ಲಿ ಮಲಗಿಸಿ "ರಾಮಾಚಾರ್ಯ! ನಾಳೆ ಜಾತಕರ್ಮ ನಾಮಕರಣ ಸಮಾರಂಭಕ್ಕೆ ಪ್ರಶಸ್ತವಾಗಿದೆ. ನಾಳೆ ಆ ಮಂಗಳಕಾರ್ಯವನ್ನು ನೆರವೇರಿಸೋಣ" ಎಂದಾಜ್ಞಾಪಿಸಿ,ದೇವತಾರ್ಚನೆ ಮಾಡಲು ಸ್ನಾನಕ್ಕೆ ತೆರಳಿದರು.

o o o o

ಬ್ರಹ್ಮಣ್ಯತೀರ್ಥರ ಮಠದ ಸಮೀಪದ ವಿಸ್ತಾರವಾದ ಒಂದು ಮಂದಿರದಲ್ಲಿಂದು ಬಹುಸಂಭ್ರಮ. ಮಂದಿರವನ್ನು ತಳಿರುತೋರಣ ರಂಭಾಸ್ತಂಭಗಳಿಂದ ಅಲಂಕರಿಸಲಾಗಿದೆ. ಮಂಗಳವಾದ್ಯಗಳು ಮೊಳಗುತ್ತಿವೆ. ಮಠದ ಪಂಡಿತರು ವಿದ್ಯಾರ್ಥಿಗಳು ಸುಸ್ವರವಾಗಿ ವೇದಪಾರಾಯಣ ಮಾಡುತ್ತಿದ್ದಾರೆ.ಮಠದ ಪುರೋಹಿತರುಗಳು ವಿಧ್ಯುಕ್ತರೀತಿಯಲ್ಲಿ ಪುಣ್ಯಾಹ, ನಾಂದಿ, ನವಗ್ರಹಪೂಜೆ, ಜಾತಕರ್ಮಾಂಗ ಹವನಹೋಮಾದಿಗಳನ್ನು ಶ್ರೀಪಾದಂಗಳವರಸಮಕ್ಷ ನೆರವೇರಿಸಿದರು. ಜಾತಕರ್ಮವು ಸಕ್ರಮವಾಗಿ ನೆರವೇರಿತು.

ರಾಮಾಚಾರ್ಯರು ಶಿಶುವಿಗೆ ಏನು ಹೆಸರಿಡಬೇಕು ಎಂದು ಶ್ರೀಯವರನ್ನು ಕೇಳಿದರು. ಶ್ರೀಗಳವರು "ಆಚಾರ್ಯ! ಈ ಶಿಶುವು ಮುಂದೆ ಶ್ರೀಹಂಸನಾಮಕಪರ

ಮಾತ್ಮನ ಜ್ಞಾನಪೀಠದಲ್ಲಿ ಮಂಡಿಸಿ ಯತಿಚಕ್ರವರ್ತಿಯಾಗಿ ಲೋಕಮಾನ್ಯವಾಗುವುದು! ಈ ಮಗುವು ಚಂದ್ರನಂತೆ ನಮ್ಮೆಲ್ಲರಿಗೂ ಆನಂದಪ್ರದವಾಗಿದೆ! ಆದುದರಿಂದ ಶ್ರೀಹರಿವಾಯುಗಳು ಈ ಶಿಶುವಿಗೆ "ಯತಿರಾಜ"ನೆಂದು ನಾಮಕರಣಮಾಡುವಂತೆ ನಮಗೆ ಪ್ರೇರಣೆಮಾಡಿದ್ದಾರೆ! "ಯತಿರಾಜ"ನೆಂದೇ ನಾಮಕರಣಮಾಡಿರಿ ಎಂದರು.[1]

ಮುಂದುವರೆದು ಶ್ರೀಬ್ರಹ್ಮಣ್ಯತೀರ್ಥರು "ರಾಮಾಚಾರ್ಯರೇ ! ನಿಮ್ಮ ಸಹಧರ್ಮಿಣಿಯ ಸ್ವಪ್ನದಲ್ಲಿ ಭಗವಾನ್ ಶ್ರೀವೇದವ್ಯಾಸರು ದರ್ಶನವಿತ್ತು ಬಂಗಾರದ ತಟ್ಟೆಯಲ್ಲಿ ಚಂದ್ರನನ್ನಿರಿಸಿ ದಯಪಾಲಿಸಿದ್ದು ಸರಿಯಷ್ಟೇ ? ಬ್ರಹ್ಮಾಂಡದಂತಿರುವ ಹೊಳೆಯುವ ಸುವರ್ಣಪಾತ್ರೆಯಲ್ಲಿ ಚಂದ್ರನನ್ನಿಟ್ಟು ಅನುಗ್ರಹಿಸಿರುವುದು ಸುವರ್ಣಚ್ಛವಿಯಂತೆ ಬ್ರಹ್ಮಾಂಡವನ್ನೆಲ್ಲಾ ಬೆಳಗುವ ಕೀರ್ತಿಕಿರಣಗಳಿಂದ ಚಂದ್ರನಂತಿರುವ ಈ ಮಗುವು ವಿಖ್ಯಾತವಾಗುವುದೆಂಬುದನ್ನು ಸೂಚಿಸುವುದು. ಅದನ್ನು ನೀಡಿದವರು ಶ್ರೀವೇದವ್ಯಾಸರು. ಸಕಲಯತಿಗಳಿಗೆ ಪ್ರಭುಗಳವರು. ಆದ್ದರಿಂದ ಅವರು ಯತಿಗಳು. ಚಂದ್ರನಿಗೆ ರಾಜನೆಂಬ ಹೆಸರಿದೆ. ಹೀಗೆ "ಯತಿ"ಗಳಿಂದ (ವೇದವ್ಯಾಸರಿಂದ) ವರರೂಪವಾಗಿ ಕೊಡಲ್ಪಟ್ಟ "ರಾಜ" (ಚಂದ್ರ) ಈ ಮಗುವಾದ್ದರಿಂದ ಆ ಅರ್ಥವನ್ನು ಸೂಚಿಸುವ ಮಹಿಮೋಪೇತವಾದ "ಯತಿರಾಜ"ನೆಂದೇ ಈ ಮಗುವಿಗೆ ಹೆಸರಿಡುವುದು ಅತ್ಯಂತ ಸಮಂಜಸವಾಗಿದೆ. ಈ ಶಿಶುವಿಗೆ "ಯತಿರಾಜ"[2] ನೆಂದೇ ನಾಮಕರಣಮಾಡಿರಿ" ಎಂದು ನಸುನಗುತ್ತಾ ಆಜ್ಞಾಪಿಸಿದರು.

ಶ್ರೀಯವರ ಮಾತನ್ನಾಲಿಸಿ ಸಜ್ಜನರು ಆಶ್ಚರ್ಯಾನಂದಪುಳಕಿತಗಾತ್ರರಾದರು. ಶ್ರೀಯವರ ಆಣತಿಯಂತೆ ಮಗುವಿಗೆ 'ಯತಿರಾಜ'ನೆಂದು ನಾಮಕರಣವಾಯಿತು. ಆರಕ್ಷತೆಯು ವೈಭವದಿಂದ ಜರುಗಿತು. ಆನಂತರ ಸರ್ವರಿಗೂ ಗಂಧ, ಪುಷ್ಪ, ಫಲ

---

1. ಭವಿತ್ರೈಷ ಯತೀಶಿತೇತಿ ಸೂನುಃ ಪರಮಾರ್ಥೇನ ವಿಜಾನತೇವ ವಾಲಃ |
ಗುರುಣಾ ಸ ಗುರೋರ್ಮುದಂ ದದತ್ಯಾ| ಯತಿರಾಜಾಭಿದಯಾ ಪ್ರಸಾದಿತೋಽಭೂತ್ ||
—ಶ್ರೀವ್ಯಾಸಯೋಗಿಚರಿತಮ್–ಪುಟ27

2. ಯಾವ ಅರ್ಥಸೂಚಕವೆಂದು ಶ್ರೀಬ್ರಹ್ಮಣ್ಯತೀರ್ಥರು ಶಿಶುವಿಗೆ "ಯತಿರಾಜ"ನೆಂದು ನಾಮಕರಣಮಾಡಿದರೋ ಅದೇ ಅರ್ಥಸೂಚಕವಾಗಿ ಮುಂದೆ ಪರಮಹಂಸಾಶ್ರಮ ಪ್ರದಾನ ಮಾಡಿ ನಾಮಕರಣಮಾಡಿದಾಗಲೂ ಶ್ರೀಬ್ರಹ್ಮಣ್ಯತೀರ್ಥರು ಶಿಷ್ಯನಿಗೆ "ವ್ಯಾಸರಾಜ" ಎಂಬ ಅದೇ ಅರ್ಥದ ಅನ್ವರ್ಥಕನಾಮವನ್ನಿರಿಸಿದರು ಎಂದು ಹೇಳಬಹುದು. ಶ್ರೀವೇದವ್ಯಾಸರಿಂದ ದತ್ತರಾದ ಚಂದ್ರರಾದ್ದರಿಂದಲೂ, ವೇದವ್ಯಾಸರ ಜ್ಞಾನಪೀಠದ ರಾಜರಾದ್ದರಿಂದಲೂ, ಅಥವಾ ತತ್ವಜ್ಞಾನವೆಂಬ ಸಮುದ್ರವನ್ನು ಉಕ್ಕಿಸುವವರಾದ್ದರಿಂದಲೂ, ವ್ಯಾಸದತ್ತರಾಜರಾದ್ದರಿಂದಲೂ ಇವರಿಗೆ "ವ್ಯಾಸರಾಜ"ರೆಂದೇ ನಾಮಕರಣಮಾಡಿದರೆಂದು ಭಾವಿಸಬಹುದು. —ಗ್ರಂಥಕರ್ತ

ತಾಂಬೂಲ-ದಕ್ಷಿಣಾಪ್ರದಾನಮಾಡಿ ರಾಮಾಚಾರ್ಯರು ಸರ್ವರನ್ನೂ ಸಂತೋಷ ಗೊಳಿಸಿದರು.

ಅಂದು ಮಧ್ಯಾಹ್ನ ಶ್ರೀಯವರು ಶ್ರೀಮೂಲಗೋಪಾಲಕೃಷ್ಣದೇವರ ಪೂಜಾ ರಾಧನೆಯನ್ನು ನೆರವೇರಿಸಿ ಸರ್ವರಿಗೂ ತೀರ್ಥಪ್ರಸಾದವನ್ನು ಅನುಗ್ರಹಿಸಿದ ತರು ವಾಯ ಸಕಲಬ್ರಾಹ್ಮಣ ಸುವಾಸಿನಿಯರಿಗೆ ಭೂರಿಭೋಜನ-ದಕ್ಷಿಣಾಪ್ರದಾನಗಳಾದ ಮೇಲೆ ಸಮಾರಂಭವು ಯಶಸ್ವಿಯಾಗಿ ಪರಿಪೂರ್ಣವಾಯಿತು.

## ೯. ಪುತ್ರದಾನ

ಯತಿರಾಜನ ನಾಮಕರಣವಾಗಿ ಹತ್ತಾರು ದಿನಗಳು ಕಳೆದಿವೆ. ಒಂದು ದಿನ ರಾಮಾಚಾರ್ಯ ದಂಪತಿಗಳು, ಬಂಧು ಬಾಂಧವರಿಂದೊಡಗೂಡಿ ಬನ್ನೂರಿಗೆ ಪ್ರಯಾಣಬೆಳೆಸಲು ಸಿದ್ಧರಾಗಿ ಶ್ರೀಗಳವರಿಗೆ ನಮಸ್ಕರಿಸಿ, "ಪೂಜ್ಯರೇ,ಯತಿರಾಜನ ನಾಮಕರಣಸಮಾರಂಭವನ್ನು ಬಹಳ ವೈಭವದಿಂದ ನೆರವೇರಿಸಿಕೊಟ್ಟು ಶಿಷ್ಯನಲ್ಲಿ ಪರಮಾನುಗ್ರಹಮಾಡೋಣವಾಯಿತು. ಇನ್ನು ಬನ್ನೂರಿಗೆ ತೆರಳಲು ಅಪ್ಪಣೆ ದಯಪಾಲಿಸಬೇಕು" ಎಂದು ಪ್ರಾರ್ಥಿಸಿದರು.

ಬ್ರಹ್ಮಣ್ಯಮುನಿಗಳು "ವತ್ಸ! ನೀನು ವಚನವಿತ್ತಂತೆ ಚಿರಂಜೀವ ಯತಿರಾಜ ನನ್ನು ನಮಗೆ ಸಮರ್ಪಿಸುವುದೇ ನೀನು ಮಾಡಬಹುದಾದ ಮಹೋಪಕಾರವೆಂದು ತಿಳಿ" ಎಂದರು.

ಗುರುಗಳ ವಚನವನ್ನಾಲಿಸಿ ರಾಮಾಚಾರ್ಯ ದಂಪತಿಗಳಿಗೆ ಭಯವಾಯಿತು. ರಾಮಾಚಾರ್ಯರು ಸ್ವಲ್ಪಕಾಲ ಮೌನವಾಗಿದ್ದು ನಂತರ ಹೇಗೋ ಉಕ್ಕಿಬರುತ್ತಿ ರುವ ದುಃಖ, ಕಣ್ಣೀರುಗಳನ್ನು ತಡೆದುಕೊಂಡು "ಸ್ವಾಮಿ,! ಕುಮಾರನನ್ನು ತಮಗೆ ಸಮರ್ಪಿಸುವುದಾಗಿ ನಾವು ನೀಡಿದ ವಚನವನ್ನು ಮರೆತಿಲ್ಲ ! ಆದರೆ ಗುರುದೇವ ಶಿಶುವಾಗಿರುವ ಇವನನ್ನು ತಾವು ಸ್ವೀಕರಿಸಲು ಅರ್ಹನಾಗುವಂತೆ, ಪೋಷಿಸಿ, ದೊಡ್ಡವನಾದ ಮೇಲೆ ತಮಗೆ ಸಮರ್ಪಿಸಲು ನಾವು ಆಲೋಚಿಸಿದ್ದೆವು. ಮೇಲಾಗಿ ಸರ್ವಸಂಗಪರಿತ್ಯಾಗಿಗಳೂ, ಜ್ಞಾನಿನಾಯಕರೂ ಆದ ತಾವು ಈ ಶಿಶುವನ್ನು ಹೇಗೆ ಪೋಷಿಸಲು ಸಾಧ್ಯ ? ಪರಿಚಾರಕರ ಪೋಷಣೆಯು ತಂದೆ ತಾಯಿಗಳ ಪೋಷಣೆಗೆ ಸಮವಾದೀತೆ ? ಆದ್ದರಿಂದ ಯತಿರಾಜನು ಪ್ರಾಪ್ತವಯಸ್ಕನಾದಮೇಲೆ ಸನ್ನಿಧಿಗೆ ತಂದೊಪ್ಪಿಸಲು ಅನುಮತಿ ನೀಡಬೇಕೆಂದು ವಿನಯಪೂರ್ವಕವಾಗಿ ಪ್ರಾರ್ಥಿಸು ತ್ತೇನೆ" ಎಂದರು.

ಬ್ರಹ್ಮಣ್ಯತೀರ್ಥರು ನಸುನಕ್ಕು "ಆಚಾರ್ಯ ! ನೀನು ಹೇಳಿದ ಮಾತೆಲ್ಲವೂ ಸತ್ಯ. ಅದು ಜಗತ್ತಿನ ಸಂಸಾರಿಗಳಾದ ಸಾಮಾನ್ಯ ಜನರಿಗೆ ಅನ್ವಯಿಸುವ ಮಾತು. ಆದರೆ ಈ ಶಿಶುವು ಜಗದ್ವಿಲಕ್ಷಣವಾದುದು. ದೇವಾಂಶಸಂಶೋಭಿತವಾದುದು, ಇದರ ಲಾಲನೆ- ಪಾಲನೆ-ಎಲ್ಲವೂ ಸರ್ವಸಂಗಪರಿತ್ಯಾಗಿಗಳಾದ ನಮ್ಮಂಥವರಿಂದಲೇ

ಜರುಗಬೇಕೆಂಬುದು ಶ್ರೀಹರಿ ಸಂಕಲ್ಪ. ಜಗತ್ತಿನ ಕಲ್ಯಾಣಕ್ಕಾಗಿಯೇ ವಿರಕ್ತರಾಗಿ ಶ್ರಮಿಸುತ್ತಿರುವ ನಾವು ಆ ಮಹೋದ್ದೇಶಕ್ಕಾಗಿ ಸಂಸಾರಿಗಳಂತೆ ವರ್ತಿಸುವುದೂ ಒಂದು ಮಹಾಸೌಭಾಗ್ಯ. ಈ ಶಿಶುವು ನಮ್ಮಂತಹ ವಿರಕ್ತರ ಸಹವಾಸದಲ್ಲಿ ಸಾತ್ವಿಕ ವಾತಾವರಣ-ಪರಿಸರಗಳಲ್ಲಿಯೇ ಬೆಳೆಯಬೇಕಲ್ಲವೇ? ಈಗಿನಿಂದಲೇ ಅದಕ್ಕೆ ಭೂಮಿಕೆಯನ್ನು ರಚಿಸಿಕೊಡಬೇಕಾಗಿದೆ. ವತ್ಸ! ನೀವು ಯತಿರಾಜನನ್ನು ನಮಗೆ ಈಗಲೇ ಒಪ್ಪಿಸಿಕೊಟ್ಟು ನಿರಾಲೋಚನೆಯಿಂದ ಪ್ರಯಾಣಬೆಳೆಸಿರಿ. ಶ್ರೀಹರಿವಾಯುಗಳು ನಿಮಗೆ ಸೌಶಿಲ್ಯಾದಿಗುಣಸಂಪನ್ನಳಾದ ಪುತ್ರಿ ಭೀಮಕ್ಕನನ್ನೂ, ವಂಶೋದ್ಧಾರಕನಾದ ಸತ್ಪುತ್ರ ಮಧ್ವಪತಿಯನ್ನೂ ಅನುಗ್ರಹಿಸಿರುವರು. ಅವರ ಪಾಲನ-ಪೋಷಣೆಗಳಲ್ಲಿ ಆಸಕ್ತರಾಗಿ ಯತಿರಾಜನ ವಿರಹವನ್ನು ಮರೆಯಿರಿ" ಎಂದಾಜ್ಞಾಪಿಸಿದರು.

ಶ್ರೀಗಳವರ ಮಾತು ಕೇಳಿ ಅಲ್ಲಿದ್ದ ಬಂಧು-ಬಾಂಧವಾದಿ ಸರ್ವರಿಗೂ ಯತಿರಾಜನ ಭವ್ಯ ಭವಿಷ್ಯದ ಬಗ್ಗೆ ಒಂದು ರೀತಿಯ ಕೌತುಕ-ಸಮಾಧಾನಗಳುಂಟಾದರೂ ಪಾಪ, ರಾಮಾಚಾರ್ಯ ದಂಪತಿಗಳಿಗೆ ಮನಸ್ಸಿನಲ್ಲಿ ಒಂದು ಬಗೆಯ ಆಂದೋಳನ, ವ್ಯಾಕುಲಗಳುಂಟಾದವು. ದಂಪತಿಗಳಿಬ್ಬರ ಕಣ್ಣಿನಿಂದಲೂ ದುಃಖಾಶ್ರು ಹರಿಯಹತ್ತಿತು, ವಚನಬದ್ಧರಾಗಿದ್ದಾರೆ, ಅದಕ್ಕೆ ವ್ಯತಿರಿಕ್ತವಾಗಿ ನಡೆಯುವಂತಿಲ್ಲ, ಆದರೆ ಒಂದು ಮಾಸವೂ ಪೂರ್ಣವಾಗದ ಶಿಶುವನ್ನು ಬಿಟ್ಟು ಅಗಲಿರಲು ಮನಸ್ಸು ಒಪ್ಪುತ್ತಿಲ್ಲ. ಹಾಗೆ ಸ್ಪಷ್ಟವಾಗಿ ಹೇಳಲೂ ಬಾಯಿಬರದಂತಾಗಿದೆ. ಪಾಪ, ಲಕ್ಷ್ಮೀದೇವಿಗೆ ಹೆತ್ತಕರುಳನ್ನು ಬಿಟ್ಟುಹೋಗಲು ಸಾಧ್ಯವಾಗದಂತಾಗಿದೆ. ಕೊನೆಗೊಮ್ಮೆ ತಮ್ಮ ಎಲ್ಲ ದುಃಖ-ದುಮ್ಮಾನಗಳನ್ನು ಹತ್ತಿಕ್ಕಿಕೊಂಡು ಗುರುಗಳ ಆಜ್ಞೆಯಂತೆ ವರ್ತಿಸಲು ಆ ದಂಪತಿಗಳು ನಿಶ್ಚಯಿಸಿದರು.

ಕಣ್ಣೀರು ಹರಿಯುತ್ತಿರಲು, ಹೃದಯ ತುಂಬಿಬಂದು, ಯಾತನಾಪೂರ್ಣಸ್ವರದಲ್ಲಿ ರಾಮಾಚಾರ್ಯ ದಂಪತಿಗಳು ಯತಿರಾಜನನ್ನು ಎತ್ತಿ ಶ್ರೀಬ್ರಹ್ಮಣ್ಯತೀರ್ಥರ ಕರದಲ್ಲಿರಿಸಿ "ಗುರುದೇವ! ಇಕೋ ನಮ್ಮ ಸುಕುಮಾರನನ್ನು, ಹೆತ್ತಕರುಳನ್ನು ತಮಗೆ ಒಪ್ಪಿಸುತ್ತಿದ್ದೇವೆ, ಇಂದಿನಿಂದ ಈ ಯತಿರಾಜನು ನಿಮ್ಮ ಪುತ್ರನು. ಇವನನ್ನು ಸಂರಕ್ಷಿಸುವ ಹೊಣೆ ತಮಗೆ ಸೇರಿದೆ. ನಾವಿಂದು ನಮ್ಮ ವಚನದಂತೆ ನಡೆದು ಧನ್ಯರಾದೆವು. ಸ್ವಾಮಿ, ನಮ್ಮನ್ನು ಆಶೀರ್ವದಿಸಿರಿ" ಎಂದು ಪ್ರಾರ್ಥಿಸಿ ನಮಸ್ಕರಿಸಿದರು.

ಮನಕರಗುವ ಆ ದೃಶ್ಯವನ್ನು ಕಂಡು ಎಲ್ಲರ ಕಣ್ಣಿನಿಂದಲೂ ನೀರು ಹರಿಯಿತು. ಸರ್ವಸಂಗಪರಿತ್ಯಾಗಿಗಳಾದ ಶ್ರೀಬ್ರಹ್ಮಣ್ಯತೀರ್ಥರ ಕಣ್ಣಿನಿಂದಲೂ ನೀರು ಹರಿಯಹತ್ತಿತು. ಆದರದು ಇತರರ ಕಣ್ಣೀರಿನಂತೆ ದುಃಖಾಶ್ರುವಾಗಿರದೆ, ಆನಂದಾಶ್ರುವಾಗಿತ್ತು!

ರಾಮಾಚಾರ್ಯ-ಲಕ್ಷ್ಮೀದೇವಿಯರ ಉದಾರ ಮನಸ್ಸು, ಸತ್ಯಸಂಧತೆಗಳನ್ನು ಕಂಡು ಮೆಚ್ಚಿ ಸುಪ್ರೀತರಾದ ಶ್ರೀಬ್ರಹ್ಮಣ್ಯತೀರ್ಥರ ಮುಖದಿಂದ ಹೀಗೆ ಉದ್ಗಾರ ಹೊರಟಿತು—

**ಬ್ರಹ್ಮಣ್ಯ :** ಅಯಿ ಭದ್ರ ! ಪುರಾ ಬಭೂವುಸ್ತ್ರೈಶಂಕವಾದಯೋ ಮಹಾಪುರುಷಾಃ ಸತ್ಯಸಂಧಾಃ

ಅಪಿ ತೇಷು ಮಹಾನುಭಾವಭಾಕ್ಷು
ಸ್ವಯಶಃ ಪೂರವಲಕ್ಷ ಸರ್ವದಿಕ್ಷು ।
ಸ್ವಯಮೇವ ವಿತೀರ್ಣಸಂವಿದಬ್ಧಿಂ
ಕಮಪಿ ತ್ವಾಮಿವ ನಾವಲೋಕಯಾಮಃ ॥*

ಮಂಗಳಕರನೆ ! ಹಿಂದೆ ಸತ್ಯಸಂಧರಾದ ಹರಿಶ್ಚಂದ್ರನೇ ಮೊದಲಾದವರು ಅನೇಕರು ಆಗಿಹೋದರು. ಆ ಮಹಾನುಭಾವರು ಸತ್ಯಸಂಧರೆಂದು ತಮ್ಮ ಕೀರ್ತಿಯಿಂದ ಸಕಲದಿಕ್ಕುಗಳನ್ನೂ ಬೆಳಗಿಸಿದರು. ಅಂಥ ಸ್ವಯಂಪ್ರಜ್ಞಾಪಾರಂಗತರಾದ ಆ ಮಹನೀಯರಲ್ಲಿಯೂ ನಿನ್ನಂಥವರನ್ನು ನಾವು ಕಾಣಲಿಲ್ಲ !"

ಮುಂದುವರೆದು ಬ್ರಹ್ಮಣ್ಯತೀರ್ಥರು "ವತ್ಸ, ನೀನು ಇಂದು ನೀಡಿರುವ ಈ ಪುತ್ರದಾನವು ಅತ್ಯಂತ ಶ್ರೇಷ್ಠವಾದುದು, ಇದು ಅಖಂಡಭಾರತದ ತತ್ವ, ಧರ್ಮ, ಸಂಸ್ಕೃತಿಗಳಿಗೆ ನೀಡಿದ ದಾನವಾಗಿದೆ ! ಸಾಕ್ಷಾತ್ ಹಂಸನಾಮಕಪರಮಾತ್ಮನ ಜ್ಞಾನ ಪರಂಪರೆಗೆ, ಶ್ರೀಮದಾಚಾರ್ಯರ ಮಹಾಸಂಸ್ಥಾನಕ್ಕೆ, ನೀಡಿರುವ ಅನಿತರ ಸಾಧಾರಣ ಕೊಡುಗೆಯಾಗಿದೆ ! ಇದರಿಂದ ಜಗತ್ತಿನ ಜನತೆಯು, ತತ್ವ–ಧರ್ಮ-ಸಂಸ್ಕೃತಿಗಳ ಅಭ್ಯುದಯವಾಗಿ ಲೋಕಕಲ್ಯಾಣವಾಗುವುದು. ಈ ಅಖಂಡಕೀರ್ತಿ ಮಂಡಲದೊಡನೆ ಯತಿರಾಜನ, ನಮ್ಮ ಮತ್ತು ನಿನ್ನ ಹೆಸರುಗಳೂ ಅಜರಾಮರವಾಗುವುದು" ಎಂದು 'ರಾಮಾಚಾರ್ಯರನ್ನು ಶ್ಲಾಘಿಸಿ, ಗುರುವರರು ಅವರಿಗೆ ಫಲಮಂತ್ರಾಕ್ಷತೆಗಳನ್ನಿತ್ತು ಹರಸಿ ಕಳಿಸಿಕೊಟ್ಟರು.

## ೧೦. ಬಾಲಲೀಲೆ

ಶ್ರೀಬ್ರಹ್ಮಣ್ಯತೀರ್ಥರ ಲಾಲನೆ ಪಾಲನೆಗಳಲ್ಲಿ ಯತಿರಾಜನು ಅಭಿವೃದ್ಧಿಸಹತ್ತಿದನು. ಶ್ರೀಮಠದ "ಪುರುಷೋತ್ತಮಗುಹೆ"ಯೇ ಅವನ ಆವಾಸಸ್ಥಾನವಾಯಿತು. ಅಲ್ಲಿ ಬ್ರಹ್ಮಣ್ಯತೀರ್ಥರು ಮಗುವಿಗಾಗಿ ಮೆತ್ತೆ, ಬಿಳಿಯ ಮಗ್ಗುಲು ಹಾಸಿಗೆ, ಮೇಲ್ಭಾಗದಲ್ಲಿ ವಿವಿಧವರ್ಣರಂಜಿತ ಮಣಿಮಯ ಗುಂಡು, ಗೊಂಡೆ, ರನ್ನ ಗನ್ನಡಿಗಳಿಂದಲಂಕೃತವಾದ ಗಿಳಿಚಪ್ಪರ, ಮೇಲು ಪರದೆಗಳಿಂದ ಶೋಭಿಸುವ ಸುಂದರವಾದ ತೊಟ್ಟಿಲನ್ನು ಕಟ್ಟಿಸಿದರು. ಬ್ರಹ್ಮಣ್ಯತೀರ್ಥರು ಪ್ರತಿದಿನ ತೊಟ್ಟಿಲು

---

*. ಶ್ರೀ ವ್ಯಾಸಯೋಗಿಚರಿತಮ್–ಪುಟ–35.

ತೂಗುತ್ತಾ ಭಗವಂತನ ಸ್ತುತಿರೂಪ ಶ್ಲೋಕ-ಪದಗಳನ್ನು ಹಾಡುತ್ತಾ ಯತಿರಾಜನನ್ನು ಆನಂದಗೊಳಿಸುವರು.

ಪ್ರತಿದಿನವೂ ಗುರುಗಳು ಸೂರ್ಯೋದಯವಾದಕೂಡಲೇ ಶಿಶುವಿಗೆ ಹಿತ–ಮಿತವಾದ ಬೀಸಿನೀರಿನಲ್ಲಿ ಮುಖಮಾರ್ಜನ-ಸ್ನಾನಗಳನ್ನು ಸ್ವಹಸ್ತದಿಂದ ಮಾಡಿಸಿ ಅಲಂಕರಿಸಿ, ಹಣೆಯಲ್ಲಿ ತಿಲಕವಿಟ್ಟು ತೊಡೆಯಮೇಲೆ ಮಲಗಿಸಿಕೊಂಡು ಅವನ ಸುಂದರವಾದ ಬಾಯಿಯಲ್ಲಿ ತಮ್ಮ ಬೆರಳುಗಳನ್ನಿಡುವರು. ಆಗ ಶಿಶುವು ಸ್ತನ್ಯಪಾನಮಾಡುವಂತೆ ಗುರುಗಳ ಬೆರಳನ್ನು ಚೀಪಲಾರಂಭಿಸಿ ಆನಂದದಿಂದ ಮೈಮರೆಯುವುದು, ತಾಯಿಯ ಸ್ತನ್ಯಪಾನಕಾರ್ಯಗಳನ್ನು ಬ್ರಹ್ಮಣ್ಯತೀರ್ಥರ ಕರಾಂಗುಲಿಗಳೇ ಯಶಸ್ವಿಯಾಗಿ ನೇರವೇರಿಸುವುದನ್ನು ಕಂಡು ಪರಿವಾರದವರು ವಿಸ್ಮಯಗೊಂಡು "ಇದೇನಾಶ್ಚರ್ಯ ! ಈ ಶಿಶುವು ಸ್ವಾಮಿಗಳವರ ಬೆರಳನ್ನು ಚೀಪುತ್ತಾ ಮಾತೆಯ ಎದೆಹಾಲನ್ನು ಕುಡಿಯುವುದಕ್ಕಿಂತ ಹೆಚ್ಚಿನ ತೃಪ್ತಿ–ಆನಂದಗಳಿಂದ ನಲಿಯುವುದಲ್ಲ !" ಎಂದು ಉದ್ಗಾರ ತೆಗೆಯುತ್ತಿದ್ದರು.

ಜನಸಾಮಾನ್ಯರಿಗೆ ತಾಯಿಯ ಸ್ತನ್ಯಪಾನ, ಲಾಲನೆ ಪೋಷಣೆಗಳಿಲ್ಲದೆ ಶಿಶುವು ಬೆಳೆಯುವುದೆಂದರೇನು ? ಎಂದೆನಿಸುವುದು ಸ್ವಾಭಾವಿಕ. ನಿಜ, ಅದು ಸಾಮಾನ್ಯ ಲೌಕಿಕಶಿಶುಗಳಿಗೆ ಅನ್ವಯಿಸುವ ಮಾತು. ಆದರೆ ಸಾಕ್ಷಾತ್ ನಾರಾಯಣಾವತಾರಿಗಳಾದ ಶ್ರೀವೇದವ್ಯಾಸದೇವರ ವರಪ್ರಸಾದರೂಪವಾದ ಶಿಶು ನಮ್ಮ ಯತಿರಾಜ. ದೇವತಾಕಾರ್ಯಕ್ಕಾಗಿ ಬ್ರಹ್ಮಣ್ಯತೀರ್ಥರ ತಪಸ್ಸಿನ ಫಲವಾಗಿ ಅವತರಿಸಿದ ಮಗುವಲ್ಲವೇ ಅವನು ? ಜನತೆಯ ಐಹಿಕಾಮುಷ್ಮಿಕ ಅಭ್ಯುದಯ–ಕಲ್ಯಾಣಗಳಿಗಾಗಿ, ಮುಖ್ಯವಾಗಿ ಅನಾದಿಕಾಲದಿಂದ ಅವಿಚ್ಛಿನ್ನವಾಗಿ ನಡೆದುಬಂದಿರುವ ವೈದಿಕವೈಷ್ಣವ ಸತ್ತತ್ವಗಳನ್ನು ಎತ್ತಿಹಿಡಿದು, ಭಾಗವತಧರ್ಮಪ್ರಸಾರಮಾಡಿ, ಭಗವಂತನ, ವಾಯುದೇವರ ಜ್ಞಾನಕಾರ್ಯದಲ್ಲಿ ನೇಪಸಲ್ಲಿಸಿ, ಮತ್ತೊಮ್ಮೆ ಭಗವದ್ಭಕ್ತಿಯ, ಶ್ರೀಹರಿಭಕ್ತರ ಮಹತ್ವಗಳನ್ನು ಸಜ್ಜನರ ಹೃದಯಗನ್ನಡಿಯಲ್ಲಿ ಸ್ಪಷ್ಟವಾಗಿ ಒಡಮೂಡುವಂತೆ ಮಾಡಲೆಂದು ಅವತರಿಸಿದ ಭಾಗವತಾಗ್ರೇಸರನಾದ ಪ್ರಹ್ಲಾದರಾಜನೇ ನಮ್ಮ ಯತಿರಾಜನಾದುದರಿಂದ ದೇವಾಂಶಸಂಜಾತನಾದ ಅವನು ಇತರ ಲೌಕಿಕಶಿಶುಗಳಂತೆ ಸ್ತನ್ಯಪಾನಾದಿಗಳಿಂದ ಬೆಳೆಯಲು ಸಾಧ್ಯವೆ ? ಮೇಲಾಗಿ ಯತಿರಾಜನನ್ನು ಪೋಷಿಸುತ್ತಿರುವ ಶ್ರೀಬ್ರಹ್ಮಣ್ಯತೀರ್ಥರೂ ಸಾಮಾನ್ಯ ಯತಿಗಳಲ್ಲ ! ಅವರು ಮಹಾ ಜ್ಞಾನಿಗಳು, ಇದರ ಮೇಲೆ ಬ್ರಹ್ಮಣ್ಯತೀರ್ಥರು, ಜಗತ್ತಿಗೆ ಬೆಳಕನ್ನೂ ಆರೋಗ್ಯ ಭಾಗ್ಯವನ್ನೂ, ಜೀವನವನ್ನೂ ನೀಡುವ ಸೂರ್ಯದೇವನ ಅಂಶಸಂಭೂತರು ! ಸಕಲ ಔಷಧಗಳಿಗೆ ಪ್ರಭು ಸೂರ್ಯದೇವ. ಅವನಕರ (ಕಿರಣ)ಗಳು ಅಮೃತಮಯವಾದವು. 'ಆರೋಗ್ಯಂ ಭಾಸ್ಕರಾದಿಚ್ಛೇತ್' ಎಂಬಂತೆ ಸೂರ್ಯಾಂಶರಾದ ಯತಿಗಳ ಪಾಲನೆಯಲ್ಲಿ ಮಗುವು ಆರೋಗ್ಯಪೂರ್ಣವಾಗಿ

ಬೆಳೆದುದು ಆಚ್ಚರಿಯಲ್ಲ ! ಧ್ಯೇಯಸ್ಸದಾ ಸವಿತೃಮಂಡಲ ಮಧ್ಯವರ್ತೀ ನಾರಾಯಣಸ್ಸರಸಿಜಾಸನ ಸನ್ನಿವಿಷ್ಟಃ । ಕೇಯೂರವಾನ್ ಮಕರಕುಂಡಲವಾನ್ ಕಿರೀಟೀಹಾರೀ ಹಿರಣ್ಮಯವಪುಃ ಧೃತಶಂಖಚಕ್ರಃ ॥" ಎಂದು ಪ್ರತಿದಿನವೂ ಸರ್ವ ಭೂಸುರವೃಂದವು ಸೂರ್ಯಮಂಡಲ ಮಧ್ಯವರ್ತಿಯಾದ ಯಾವ ಜಗಜ್ಜನ್ಮಾದಿ ಕಾರಣನೂ, ಸರ್ವೋತ್ತಮನೂ ಆದ ಶ್ರೀಮನ್ನಾರಾಯಣನನ್ನು ಧ್ಯಾನಿಸುವುದೋ ಅಂಥಾ ಮಹಾಪ್ರಭುವನ್ನು ತನ್ನ ಹೃನ್ಮಂಡಲದಲ್ಲಿ ಧರಿಸಿರುವ ಮಹಾಭಾಗ್ಯಶಾಲಿಯಾದ ಭಾಸ್ಕರನ ಅಂಶಸಂಭೂತರಾದ ಶ್ರೀಬ್ರಹ್ಮಣ್ಯತೀರ್ಥರೇ ಯತಿರಾಜನ ಪೋಷಣೆಯ ಹೊಣೆಯನ್ನು ಹೊತ್ತಿರುವಾಗ, ಅಮೃತಮಯವಾದ ಅವರ ಕರಾಂಗುಲಿಗಳು ಸ್ತನ್ಯದಂತೆ ಯತಿರಾಜನಿಗೆ ಅಮೃತವನ್ನು ಉಣಿಸುವಂತಾದುದು ಆಶ್ಚರ್ಯವಲ್ಲವಷ್ಟೆ ! ಆದ್ದರಿಂದ ತಾಯಿಯ ಸ್ತನ್ಯಪಾನವಿಲ್ಲದೆ ಯತಿರಾಜನು ಬೆಳೆದುದು ಯುಕ್ತವೇ ಆಗಿದೆ.[1]

ಇದರಂತೆ ಪ್ರತಿದಿನವೂ · ಕಾಲಕಾಲಕ್ಕೆ ಶ್ರೀಮೂಲಗೋಪಾಲಕೃಷ್ಣ-ಪಟ್ಟಾಭಿರಾಮ-ವೇದವ್ಯಾಸದೇವರಿಗೆ ನಿವೇದಿತವಾದ ಶುದ್ಧಕ್ಷೀರವನ್ನು ಅಭಿಮಂತ್ರಿಸಿ ಯತಿರಾಜನಿಗೆ ಸ್ವಹಸ್ತದಿಂದ ಕುಡಿಸುವರು. ಇದಕ್ಕಿಂತ ಮಗುವಿನ ಪೋಷಣೆಗೆ ಮತ್ತೇನಾಗಬೇಕು ? ಅಂತೆಯೇ ಯತಿರಾಜನು ಗುರುವರರ ಲಾಲನೆ,ಪೋಷಣೆಯಲ್ಲಿ ಹೃಷ್ಟಪುಷ್ಟಾಂಗನಾಗಿಬೆಳೆದು ತನ್ನ ಲೀಲೆಗಳಿಂದ ಎಲ್ಲರನ್ನೂ ಸಂತೋಷಪಡಿಸಹತ್ತಿದನು.[2]

ಬ್ರಹ್ಮಣ್ಯತೀರ್ಥರು ಸ್ನಾನ–ಆಹ್ನೀಕ–ಜಪತಪಾನುಷ್ಠಾನ, ದೇವತಾರ್ಚನೆ, ಭಿಕ್ಷಾಸ್ವೀಕಾರಾದಿಕಾಲವನ್ನು ಬಿಟ್ಟು ಉಳಿದ ತಮ್ಮೆಲ್ಲಾ ಕಾಲವನ್ನು ಯತಿರಾಜನೊಡನೆ ಕಳೆಯುವರು. ಬೆಳಗಿನರಷಾವ, ದೇವತಾರ್ಚನೆಯಕಾಲಗಳಲ್ಲಿ ಮಠದ ವೇದವಿದ್ಯಾವಿಶಾರದರು ಮಾಡುವ ಸುಸ್ವರ ವೇದಪಾರಾಯಣ ಮಂತ್ರಪಠನೆ ಪೂಜಾಕಾಲದ ಘಂಟಾನಾದ, ಜಾಗಟೆ, ಜಯ್ಘಾಳಿ, ಶಂಖಧ್ವನಿಗಳ ನಿನಾದವನ್ನಾಲಿಸಿ ಯತಿರಾಜನು ಮುದಿಸುವನು. ಬ್ರಹ್ಮಣ್ಯತೀರ್ಥರು ಪೂಜಾದಿಗಳಲ್ಲಿ ಮಗ್ನರಾಗಿರುವಾಗ ಮಗುವಿನ ಹೊಳೆಯುವ ಕಣ್ಣುಗಳು ಅವರನ್ನು ಕಾಣಲು ಕಾತರಿಸುವುದು. ಗುರುಗಳ ಮಧುರಾಲಿಂಗನಕ್ಕಾಗಿ ಅವನ ದೇಹ, ಮನಸ್ಸು ತವಕಿಸುವುದು. ಅವರ

---

1. ವ್ಯಾಸರಾಯರ ಪಾದಕಮಲವನು ಸೇವಿಸುವ ಭಕುತರಿಗೆ । ಏಸುಜನ್ಮದ ಸುಕೃತ ಒದಗಿ ಬಂದಿದ್ದವಗೆ । ಈ ಸೇವೆ ದೊರಕುವುದು ಸಾಸಿಪೆಸಾದರು ॥ ಪ ॥ ಪನ್ನಗಶಯನನ ಪರಮ ಆಜ್ಞದಿ ತಾನು । ಇನ್ನು ಅವತರಿಸಿ ಇತ್ತ ಬನ್ನೂರುಗ್ರಾಮದಲಿ । ಬೆಳೆದು ಮತ್ತೆ ಸ್ತನ್ಯಪಾನಗಳಿಲ್ಲದೆ । ಚೆನ್ನಾಗಿ ಬ್ರಾಹ್ಮಣ್ಯತೀರ್ಥರ ಸುತರೆನಿಸಿ ॥

—ಶ್ರೀಗೋಪಾಲದಾಸರು

2. ......ಬೆಳೆದು ಶುದ್ಧಮುನಿ ಸುಬ್ರಹ್ಮಣ್ಯರನ್ನು ಪಾಲಿಸುತ । ಪರಮಾನುಚಭರಿತ ಬ್ರಹ್ಮಣ್ಯತೀರ್ಥರ ಕರದಿ । ಚೆನ್ನಾಗಿ ಪೋಷಿಸಿಕೊಂಡು...॥

—ಶ್ರೀವಿಜಯದಾಸರು

ಧ್ವನಿಯನ್ನಾಲಿಸಲು ಕಿವಿಗಳು ಹಂಬಲಿಸುವುದು. ಪೂಜಾದಿಗಳನ್ನು ಪೂರೈಸಿಬಂದ ಗುರುಗಳನ್ನು ಕಂಡೊಡನೆ ಯತಿರಾಜ ಆನಂದದಿಂದ ಜಿಗಿದಾಡಿ, ತನ್ನೆರಡು ಪುಟ್ಟ ಕರಗಳನ್ನು ಚಾಚಿ ಆಹ್ವಾನಿಸುವನು. ಹರ್ಷಪುಳಕಿತಗಾತ್ರರಾಗಿ ಗುರುಗಳು ಮಗುವನ್ನೆತ್ತಿ ತೊಡೆಯಮೇಲೆ ಕೂಡಿಸಿಕೊಂಡಾಗ ಯತಿರಾಜ ತನ್ನ ಚಿತ್ರವಿಚಿತ್ರ ಲೀಲೆಗಳಿಂದ ಅವರನ್ನು ಸಂತೋಷಗೊಳಿಸುವನು. ಹೀಗೆ ಅವರೀರ್ವರಲ್ಲಿ ಅಗಾಧ ಪ್ರೇಮವು ವರ್ಧಿಸಿ ಪರಸ್ಪರ ಅವ್ಯಕ್ತಮಧುರಭಾವನೆಗಳು ವಿಜೃಂಭಿಸಿ ಪರಸ್ಪರ ಆಕರ್ಷಿತರಾಗಿ ನಲಿಯುವರು. ಯತಿರಾಜನು ಉದಯಕಾಲೀನ ಹೊಂಗಿರಣಗಳಿಂದ ಬೆಳಗುವ ಭಾಸ್ಕರನಂತೆಯೂ ಆಹುತಿಯಿಂದ ದೇದಿಪ್ಯಮಾನನಾದ ಅಗ್ನಿದೇವ ನಂತೆಯೂ ಶರತ್ಕಾಲೀನ ತಂಗಿರಣನಂತೆಯೂ ಅಂಕವಿಲಸಿತಲಕ್ಷ್ಮಿಯಿಂದೊಡ ಗೂಡಿದ ಶ್ರೀಕೇಶವನಂತೆಯೂ ಕೂಡಿದ ಅವ್ಯಕ್ತ ಮಧುರ-ಮನೋಜ್ಞತೆಯಿಂದ ಶೋಭಿಸುತ್ತಿದ್ದನು.

ಯತಿರಾಜನ ಮೈ ಬಣ್ಣವು ಗುಲಾಬಿ ವರ್ಣದಿಂದ ರಮಣೀಯವಾಗಿತ್ತು. ವಿಮಾನಾಕಾರದ ತೊಟ್ಟಿಲಿನ ಮೃದುಶಯ್ಯೆಯಲ್ಲಿ ಮಲಗಿದ್ದ ದೃಶ್ಯವು ಅವನ ಕಮಲಾಸನತ್ವವನ್ನು ಪ್ರಕಟಿಸುತ್ತಿತ್ತು. ಅವನು ಶಮದಮಾದಿಸಂಪನ್ನ ಸಜ್ಜನ ರಂತೆಯೂ ಉದಯಿಸುತ್ತಿರುವ ಸೂರ್ಯಸಪ್ರಭೆಯ ಮಂಗಳಾವತಾರವಂತೆಯೂ ಅಗ್ನಿಯ ಕಾಂತಿಯನ್ನು ಅಣಕಿಸುವಂತೆಯೂ, ಸುವರ್ಣಗಿರಿಯ ಕಾಂತಿಸಾಗರ ದಂತೆಯೂ ಕಂಗೊಳಿಸುತ್ತಿದ್ದನು. ಅವನಕೊರಳಿನಲ್ಲಿ ಸುವರ್ಣಮಯವಾದ ಪೀತ ವರ್ಣದರಕ್ಷಾಮಣಿಗಳಿಂದ ರಚಿತವಾದ ಹಾರವು ರಾಜಿಸುತ್ತಿತ್ತು ಆ ಹಾರದ ಮಧ್ಯ ಭಾಗದಲ್ಲಿ ಕನಕಕವಚಿತ ಹುಲಿಯುಗುರಿನ ಪದಕವು ಅಲಂಕೃತವಾಗಿತ್ತು. ಯತಿರಾಜನು ತನ್ನ ಪಾದಾಂಗುಷ್ಠವನ್ನು ಚೀಪುತ್ತಿದ್ದನು, ಅದು ವಾಕ್ಯಾರ್ಥದಲ್ಲಿ ಪರಮತೀಯ ಪಂಡಿತರನ್ನು ಜಯಿಸಿ, ಆಗವರು ಸೇವಿಸುವ ತನ್ನ ಚರಣದಾರ್ಢ್ಯಸಹಿಷ್ಣುತೆಯನ್ನು ಅಭ್ಯಾಸಮಾಡುವಂತೆ ಕಾಣುತ್ತಿತ್ತು. ಅವನು ತನ್ನ ಕಾಲುಗಳನ್ನು ಮೇಲೆತ್ತಿ ಕ್ರೀಡಿಸುತ್ತಿದ್ದನು. ಅದು ಮುಂದೆ ರತ್ನಖಚಿತಕಿರೀಟಧಾರಿಗಳಾದ ರಾಜಾಧಿರಾಜರು ತನ್ನ ಪಾದದಮೇಲೆ ಶಿರವಿಟ್ಟು ನಮಿಸುವಾಗ ಪಾದಗಳು ಕಿರೀಟಕ್ಕೆತಾಕುವುದಷ್ಟೇ? ಅದನ್ನು ಈಗಿನಿಂದ ಅಭ್ಯಾಸಮಾಡುವಂತೆ ತೋರುತ್ತಿತ್ತು. ತನ್ನ ಕರದ ಕಮಲ ದಳದಂತಿರುವ ಹೆಬ್ಬೆಟ್ಟನ್ನು ಅವನು ಆಗಾಗ್ಗೆ ತನ್ನ ಮುಖಕಮಲದಲ್ಲಿಟ್ಟು ಕೊಳ್ಳುತ್ತಿದ್ದನು. ಅದು ಮುಂದೆ ತಾನು ಪರಮಹಂಸಪದಾರೂಢನಾಗುವುದನ್ನು ತೋರುವಂತ್ತಿತ್ತು. ಯತಿರಾಜನು ಒಮ್ಮೊಮ್ಮೆ ಕಮಲದ ಮೊಗ್ಗೆನಂತಿರುವ ಮುಷ್ಟಿಯನ್ನು ತೋರುವುದನ್ನು ನೋಡಿದರೆ ತಾನು ಸಕಲಶಾಸ್ತ್ರಸಿದ್ಧಾಂತಗಳನ್ನು ಕರಗತಮಾಡಿಕೊಂಡಿದ್ದೇನೆ-ಎಂದು ತಿಳಿಸುವಂತಿತ್ತು.

ಯತಿರಾಜನು ಒಮ್ಮೊಮ್ಮೆ ಮೇಘಗರ್ಜನೆಯಂತೆ ಗಂಭೀರಧ್ವನಿಯಿಂದ ಅಳು ತ್ತಿದ್ದನು. ಅದು ಅವನು ಸಕಲಪಾಷಂಡಮತಗಳನ್ನು ಬೆದರಿಸುತ್ತಿರುವಂತೆ ಕಂಡು ಬರುತ್ತಿತ್ತು. ಅವನು ಪವಡಿಸಿದ ತೊಟ್ಟಿಲಿನ ಮೇಲ್ಭಾಗದಲ್ಲಿ ಬೆಳದಿಂಗಳಿನಂತೆ ಬಿಳು

ಪಾದ ರೇಶ್ಮೆಯುಪರದೆಯನ್ನು ಇಳಿಬಿಟ್ಟಿದ್ದರು. ಅವರಕೆಳಗೆ ಮನೋಹರವಾದ ಗಿಳಿ ಚಪ್ಪರವನ್ನು ಕಟ್ಟಿದ್ದರು. ಅದರ ಚೌಕಟ್ಟಿನ ಅಂಚಿನಲ್ಲಿ ಪಚ್ಚೆಮಣಿಮಯಸರಪಳಿಯನ್ನು ಹೆಣೆದು ಅದಕ್ಕೆ ಪದ್ಮರಾಗಾದಿ ವಿವಿಧವರ್ಣಗಳ ಮಣಿಗುಂಡು ರಸಗುಂಡು ರನ್ನಗನ್ನಡಿಗಳನ್ನು ತೂಗುಬಿಟ್ಟಿದ್ದರು. ಯತಿರಾಜನು ಅದನ್ನು ನೋಡಿ ಕಿಲಕಿಲನೆ ನಗುತ್ತಿದ್ದನು. ಇಂತು ಶೈಶವಾವಸ್ಥೆಯನ್ನು ಅವನು ಮನೋರಂಜನೆ–ಆನಂದಗಳಿಂದ ಕಳೆದನು.

ಈಗ ಯತಿರಾಜನು ಎರಡನೆಯವರ್ಷದಲ್ಲಿ ಪದಾರ್ಪಣಮಾಡಿದ್ದನು. ಶ್ರೀಮಠದ ಜನರೆಲ್ಲರೂ ಅವನು ಪ್ರಾಣಪದಕವಾಗಿದ್ದನು. ಸುವರ್ಣವರ್ಣದ ದೇಹಕಾಂತಿ, ಹೃಷ್ಟಪುಷ್ಟಾಂಗಗಳು ಆಕರ್ಷಕ ಮೈಮಾಟ, ವಿಸ್ತಾರವಾದ ಫಾಲಪ್ರದೇಶ, ನೀಲವರ್ಣದ ಉಂಗುರುಂಗುರಾದ ಕೇಶಸಮುದಾಯ, ಕಾಮನ ಬಿಲ್ಲಿನಂತಹ ಹುಬ್ಬುಗಳು, ಪುಟ್ಟಕಿವಿಗಳು; ಮಿಂಚಿನಂತೆ ಬೆಳಗುವ ಕಣ್ಣುಗಳು, ನೀಟಾದ ನಾಸಿಕ, ಗುಲಾಬಿಬಣ್ಣದ ತುಂಬಿದ ತುಟಿಗಳು ಇವೆಲ್ಲವೂ ಅವನ ಭಾವೀತಾರುಣ್ಯಕಾಲೀನ ಸೌಂದರ್ಯಸಾರಸೂಚಕವಾಗಿ ಶೋಭಿಸುತ್ತಿದ್ದವು. ಇಂತಹ ಸೌಂದರ್ಯಸಾರವೇ ಧರೆಗಿಳಿದು-ಬಂದಂತಿರುವ ಬಾಲಕ ಯತಿರಾಜನನ್ನು ಎಲ್ಲರೂ ಮುದ್ದಿಸುತ್ತಿದ್ದುದು ಆಶ್ಚರಿಯೇನಲ್ಲ !

ಬ್ರಹ್ಮಣ್ಯತೀರ್ಥರು ತಾವು ಪೂಜಾದಿಕಾರ್ಯಾಸಕ್ತರಾಗಿ ಮಡಿಯಲ್ಲಿದ್ದಾಗ ಯತಿರಾಜನನ್ನು ಸರಿಯಾಗಿ ನೋಡಿಕೊಳ್ಳುವಂತೆ ಮಠದ ಆತ್ಮೀಯಜನರಿಗೆ ಕಟ್ಟಪ್ಪಣೆ ಮಾಡಿದ್ದರು, ಅದರಂತೆ ಅವರು ಮಗುವನ್ನು ಎತ್ತಿಕೊಂಡು ಆಡಿಸುತ್ತಿದ್ದರು, ಯತಿರಾಜನು ಕಮಲದಿಂದ ಕಮಲಕ್ಕೆಸಂಚರಿಸುವ ಹಂಸಪಕ್ಷಿಯಂತೆಯೂ ರಾಶಿಯಿಂದರಾಶಿಗೆ ಸಂಚರಿಸುವ ಚಂದ್ರನಂತೆಯೂ ಮುಗ್ಧಮಂದಹಾಸ ಬೀರುತ್ತಾ ಲೀಲೆಯಿಂದಲೋ ಎಂಬಂತೆ ಒಬ್ಬರ ತೊಡೆಯಿಂದ ಮತ್ತೊಬ್ಬರ ತೊಡೆಗೆ ಸಂಚರಿಸುತ್ತಿದ್ದನು.[1] ಗಜ-ಸಿಂಹ ಸದೃಶವಾದ ಮಂದೆಯಿಂದ ಮೆಲ್ಲನೆ ಆ ಬಾಲಕನು ಪುರುಷೋತ್ತಮಗುಹೆಯ ಅಂಗಳದಲ್ಲಿ ಸಂಚರಿಸುತ್ತಿರುವುದನ್ನು (ಅಂಬೆಗಾಲಿಡುವುದನ್ನು) ಗಮನಿಸಿದರೆ ಸನಿಹದಲ್ಲೇ ಹರಡಲಿರುವ ತನ್ನ ಕಾಂತಿಕಾಸಾರದಲ್ಲಿ ತರಣಕ್ರೀಡೆ (ಈಜುವುದು)ಯನ್ನು ಅಭ್ಯಾಸಿಸುವಂತೆ ಪ್ರಕಾಶಿಸುತ್ತಿದ್ದನು.[2]

ಯತಿರಾಜನ ಸುಂದರಮುಖಾರವಿಂದದಲ್ಲಿ ಚಂದ್ರಬಿಂಬದಲ್ಲಿನ ಸುಧಾರಸಬಿಂದು ಹಾಗೂ ಲಾವಣ್ಯಪೂರ್ಣ ಮುತ್ತುಗಳಸಾಲಿನಂತೆ ರಮ್ಯಕಾಂತಿಯುಕ್ತದಂತ–

---

1. ಅಂಕಾದಂಕಂ ಸಂಚರನ್ನರ್ಭಕೋಽಸೌ ತತ್ರತ್ಯಾದೃಕ್ಷಃ ಪ್ರಾಪಸಲ್ಲೀಲಯೈವ ।
ಪದ್ಮಾತ್ಪದ್ಮಂ ಪರ್ಯಟಂತಂ ಮರಾಲಂ ರಾಶೇ ರಾಶಿಂ ರಂಜಯಂತಂ ವಿಧುಂ ಚ ॥
—ಶ್ರೀವ್ಯಾಸಯೋಗಿಚರಿತಮ್-P—೨೮

2. ಲಾಲ್ಯೇನ ದ್ವಿಪಮೃಗರಾಜಶಾಬಕಾಭ್ಯಾಂ ಮಂದೇನಾಜಿರಭುವಿ ಜಾನುಚಂಕ್ರಮೇಣ ।
ಪರ್ಯಂತಪ್ರಸೃತನಿಜಪ್ರಭಾಸರಸ್ಯಾಮಭ್ಯಸ್ಯ ಪ್ಲವಮಿವ ವ್ಯರಾಜತಾಸೌ ॥

ಪಂಕ್ತಿಗಳು ಮೊಳಕೆಯೊಡೆದವು. ಅದು ಆವನ ವದನದಲ್ಲಿ ನಲಿಯುವ ವಾಗ್ದೇವಿಯ ಧವಳಕೀರ್ತಿಯ ಪ್ರಥಮಾಂಕುರದಂತೆ ಅಸದೃಶವಾಗಿ ಶೋಭಿಸುತ್ತಿತ್ತು.[1] (ಮಗುವು ತೊದಲುನುಡಿಯಲು ಪ್ರಾರಂಭಿಸಿತು), ತನ್ನ ಹೆಚ್ಚಾದ "ಗುರುತ್ವ"ವನ್ನು ಈ ಭೂಮಿಯು ಸಹಿಸಲು ಅಸಮರ್ಥಳೆಂದು ತೋರಲೋ ಎಂಬಂತೆ ಯತಿರಾಜನು ಗುರುಗಳ ಕರಾಂಗುಲಿಯನ್ನು ಭದ್ರವಾಗಿ ಹಿಡಿದು ಮೆಲ್ಲಮೆಲ್ಲನೆ ಹೆಜ್ಜೆಯನ್ನಿಡ ಹತ್ತಿದನು. ಯತಿರಾಜನು ನಿಪುಣತರ ವಾಕ್ಯಪ್ರಯೋಗಸಮರ್ಥನಾಗಿದ್ದರೂ, ಬ್ರಹ್ಮಣ್ಯತೀರ್ಥರು ಹೇಳಿಕೊಟ್ಟ ರಾಮ, ಕೃಷ್ಣ, ಹರಿಮುಂತಾದ ಪದ (ಪದಾತು) ಗಳನ್ನಾಡುತ್ತಾ ತಾನು ಬಾಲ್ಯದಿಂದಲೂ ಗುರುವಾಕ್ಯಪರಿಪಾಲಕನೆಂಬುವನ್ನು ಪ್ರಕಟಿಸುತ್ತಿದ್ದನು. ಶ್ರೀಗಳವರು ರಾತ್ರಿಹೊತ್ತು ಅಂಗಳದಲ್ಲಿ ಮಗುವನ್ನೆತ್ತಿ ಕೊಂಡು ಅತ್ತಿಂದಿತ್ತ ಓಡಾಡುತ್ತಾ, ರಮಿಸುತ್ತಿರುವಾಗ ಯತಿರಾಜನು ಅಂಬರ ದಲ್ಲಿ ರಾಜಿಸುವ ಚಂದ್ರನನ್ನು ಹಿಡಿದು ತನ್ನಕೀರ್ತಿಚಂದ್ರನೊಡನೆ ಸ್ಪರ್ಧಿಸಲೋ ಎಂಬಂತೆ "ಚಂದ್ರನನ್ನು ನನಗೆ ಕೊಡು" ಎಂದು ಗುರುಗಳನ್ನು ಪೀಡಿಸುತ್ತಿದ್ದನು. ಹೀಗೆ ಯತಿರಾಜನು ತನ್ನ ವಿಚಿತ್ರ ಲೀಲೆಗಳಿಂದ ಎರಡನೆಯ ವರ್ಷದಲ್ಲಿ ಅಭಿ ವೃದ್ಧಿಸಹತ್ತಿದನು.

## ೧೦. ಕ — ಚೌಲ—ಅಕ್ಷರಾಭ್ಯಾಸ

ಯತಿರಾಜನು ಎರಡನೆಯ ವರ್ಷದಲ್ಲಿ ಕಾಲಿಟ್ಟಿದ್ದನ್ನು ಗಮನಿಸಿ ಗುರುಗಳು ಅವನಿಗೆ ಚೌಲ, ಅಕ್ಷರಾಭ್ಯಾಸ ಸಮಾರಂಭವನ್ನು ನೆರವೇರಿಸಲು ನಿಶ್ಚಯಿಸಿ ರಾಮಾಚಾರ್ಯ ದಂಪತಿಗಳಿಗೆ ಸಮಾರಂಭಕ್ಕೆ ಬರಲು ನಿರೂಪಬರೆಸಿ ಕಳಿಸಿದರು.

ರಾಮಾಚಾರ್ಯ ಲಕ್ಷ್ಮೀದೇವಿಯರಿಗೆ ಪರಮಾನಂದವಾಯಿತು. ಸಂಭ್ರಮ-ಸಡಗರ-ಸಂತೋಷಗಳಿಂದ ರಾಮಾಚಾರ್ಯ ದಂಪತಿಗಳು ಆತ್ಮೀಯ ಬಂಧು ಬಾಂಧವ ರೊಂದಿಗೆ ಬನ್ನೂರಿನಿಂದ ಹೊರಟು ಅಬ್ಬೂರಿಗೆ ಬಂದುಸೇರಿದರು.

ಬ್ರಹ್ಮಣ್ಯಮುನಿಗಳು ಅವರನ್ನು ಸ್ವಾಗತಿಸಿ ಯತಿರಾಜನಿಂದ ನಮಸ್ಕಾರ ಮಾಡಿಸಿದರು. ಅತ್ಯಂತ ಸುಂದರನಾಗಿ, ಕಾಂತಿಯಿಂದ ಬೆಳಗುತ್ತಿರುವ ಕುಮಾರ ನನ್ನು ಕಂಡು ಆ ಮಾತಾಪಿತೃಗಳಿಗೆ ಹಿಡಿಸಲಾರದಷ್ಟು ಹರುಷವಾಯಿತು. ಶ್ರೀಗಳವರು ಅವರೊಡನೆ ಕುಳಿತುಮಾತನಾಡುತ್ತಿರುವಾಗ ಯತಿರಾಜ ಓಡಿಬಂದು ಗುರುಗಳ ತೊಡೆಯೇರಿ ತನ್ನ ಕರಗಳಿಂದ ಅವರನ್ನಪ್ಪಿ ನಗಹತ್ತಿದನು. ಆಗ ಗುರು ಗಳು ನಸುನಕ್ಕು "ಯತಿರಾಜ, ನಿನ್ನ ಅಪ್ಪ ಯಾರು ಹೇಳು" ಎಂದೆನಲು ತನ್ನ ಪುಟ್ಟ

1. ವಾಣೀ ಯಃಪ್ರರೋಹಾಂಕುರಸಮೀ ಮಹನೀಯಶೋಭಾ ತಸ್ಯಾನನೇ ಸಮಮೃಶದ್ಯತ ದಂತರಾಜಿಃ।
ಬಿಂಬೇ ವಿಧೋರಿವ ಸುಧಾರಸಬಿಂದುರೇಖಾ ಪಂಕ್ತಿಸ್ಸರೋಜ ಇವ ಭಾಸುರ-
ಮೌಕ್ತಿಕಾನಾಮ್ ॥
—ಶ್ರೀವ್ಯಾಸಯೋಗಿಚರಿತಮ್-P-೨೯

ತೋರಬೆರಳಿನಿಂದ ಗುರುಗಳ ಎದೆಯನ್ನು ಮುಟ್ಟಿ "ನೀನು" ಎಂದು ಹೇಳಿದನು. ಅದನ್ನು ಕೇಳಿ ಎಲ್ಲರೂ ನಗಹತ್ತಿದರು. ಶ್ರೀಗಳವರಿಗೆ ಅಪಾರ ಆನಂದವಾಯಿತು. ಒಂದುಬಗೆಯ ಹೃದಯುಮಿಡಿತ, ಅವ್ಯಕ್ತಭಾವನೆಗಳಿಂದ ಲಕ್ಷ್ಮೀದೇವಿ ರಾಮಾ ಚಾರ್ಯರ ಕಣ್ಣಿನಲ್ಲಿ ನೀರು ಮಿಡಿಯಿತು. ಗುರುಗಳು ಅದನ್ನು ಕಂಡು, "ಆಚಾರ್ಯ, ಕುಮಾರನು ನಮ್ಮನ್ನೇ ತಂದೆಯೆಂದು ಭಾವಿಸಿದ್ದಾನೆ. ಸನ್ಯಾಸಿಯ ಪೋಷಣೆಯಲ್ಲಿ ಬೆಳೆಯುತ್ತಿರುವ ಇವನಿಗೆ ನಾವೇ ತಂದೆ,ತಾಯಿ ಎಲ್ಲವೂ ಆಗಿದ್ದೇವೆ. ಪಾಪ, ನಿಮ್ಮ ಮಾನಸಿಕ ತುಮುಲ-ನೋವುಗಳನ್ನು ನಾವು ಅರಿತಿದ್ದೇವೆ. ಇಲ್ಲಿರುವವರೆಗಾದರೂ ಮಗುವು ನಿಮ್ಮ ಜತೆಯಲ್ಲೇ ಇರಲಿ.ಹಡೆದ ಕರುಳಿಗೆ ಸ್ವಲ್ಪವಾದರೂ ಸಮಾಧಾನ ಸಂತೋಷಗಳು ಲಭಿಸಲಿ" ಎಂತೆಂದು ಮಗುವನ್ನು ಅವರ ಕೈಗೆ ಕೊಟ್ಟು, ಆಚಾರ್ಯ ದಂಪತಿಗಳನ್ನು ಯತಿರಾಜನಿಗೆ ತೋರಿಸಿ "ಮಗು ಇವರೇ ನಿನ್ನ ತಂದೆ ತಾಯಿ ಗಳಪ್ಪಾ" ಎಂದು ಹೇಳಿದರು. ಮಗುವು ವಿಶಾಲವಾದ ತನ್ನ ಕಣ್ಣುಗಳನ್ನು ಮತ್ತಷ್ಟು ಅರಳಿಸಿ ಆಶ್ಚರಿಯಿಂದ ಅವರನ್ನು ನೋಡಿ,ತಲೆಯನ್ನು ಅಲ್ಲಾಡಿಸುತ್ತಾ "ಇವರು ಅಲ್ಲ, ನೀನು ಅಪ್ಪ" ಎಂದು ಮುದ್ದಾಗಿ ಹೇಳಿ ಗುರುಗಳತ್ತ ತಿರುಗಿ ಕಿಲ ಕಿಲನೆ ನಕ್ಕನು. ಈ ಹೃದಯಂಗಮ ದೃಶ್ಯವನ್ನು ಕಂಡು ಎಲ್ಲರೂ ನಸುನಕ್ಕು ಮುದಿಸಿದರು.

ಶಾಲಿವಾಹನಶಕೆ ೧೩೭೦ ಶುಕ್ಲ ಸಂವತ್ಸರದ ವೈಶಾಖ ಶುಕ್ಲ ಸಪ್ತಮಿ (ಕ್ರಿಸ್ತಶಕೆ 1448ನೇ ಮೇ ಮಾಹೆ) ಶುಭದಿನ ಶ್ರೀ ಬ್ರಹ್ಮಣ್ಯತೀರ್ಥರ ಮಠದಲ್ಲಿ ಬಾಲಕ ಯತಿರಾಜನ ಚೌಲ-ಅಕ್ಷರಾಭ್ಯಾಸ ಸಮಾರಂಭ ಪ್ರಯುಕ್ತ ನೂರಾರು ಜನರು ಸೇರಿದ್ದಾರೆ. ಎಲ್ಲೆಲ್ಲಿಯೂ ಸಂಭ್ರಮದ ವಾತಾವರಣ. ರಾಮಾಚಾರ್ಯ ದಂಪತಿಗಳು, ಬಾಂಧವರು-ಶ್ರೀಮಠೀಯರ ಸಡಗರ ವರ್ಣಿಸಲಸದಳ.

ಪ್ರಾತಃಕಾಲ ರಾಮಾಚಾರ್ಯ-ಲಕ್ಷ್ಮೀದೇವಿ, ಯತಿರಾಜರು ಮಂಗಳ ಅಭ್ಯಂಜನ ಮುಗಿಸಿ ಅಲಂಕೃತರಾಗಿ ಹಸೆಮಣೆಯಮೇಲೆ ಕುಳಿತಿದ್ದಾರೆ. ಮಂಗಳವಾದ್ಯ, ವೇದ ಘೋಷವಾಗುತ್ತಿರಲು ಮಠದ ಪುರೋಹಿತರು ಪಂಡಿತರು ಪಾಷ್ಟಿಕ ಮನೆತನದ ಸಂಪ್ರದಾಯ ಮತ್ತು ವೇದೋಕ್ತಕ್ರಮದಂತೆ ಪುಣ್ಯಾಹ, ನಾಂದಿ, ನವಗ್ರಹ ಪೂಜೆ, ಹವನಹೋಮಾದಿಗಳನ್ನು ರಾಮಾಚಾರ್ಯರದ್ವಾರಾ ವಿಜೃಂಭಣೆಯಿಂದ ನೆರ ವೇರಿಸುತ್ತಿದ್ದಾರೆ. ತತ್ಕಾಲದಲ್ಲಿ ಜರುಗಬೇಕಾದ ಕಾರ್ಯಗಳೆಲ್ಲವೂ ಮುಗಿದ ಮೇಲೆ ಮಠದ ಹೊರಜಗಲಿಯಮೇಲೆ ಹಾಕಿರುವ ಹಸೆಮಣೆಯಮೇಲೆ ಪುತ್ರನೊಡನೆ ಕುಳಿತು ರಾಮಾಚಾರ್ಯರು ಚೂಡಾಕರ್ಮ (ಜಂಡಿಕೆಯನ್ನು ಬಿಡಿಸುವುದು) ಶಾಸ್ತ್ರ ವನ್ನು ನೆರವೇರಿಸಿದಮೇಲೆ ಯತಿರಾಜನಿಗೆ ಮಂಗಳಸ್ನಾನ ಮಾಡಿಸಿ,ತಾವೂ ಮಾಡಿ, ಪಟ್ಟೇಪೀತಾಂಬರಾದಿಗಳಿಂದಲಂಕೃತರಾಗಿ ದೇವರಿಗೆ-ಗುರುಗಳಿಗೆ ನಮಸ್ಕರಿಸಿ,ಪತ್ನೀ ಪುತ್ರ ಸಮೇತರಾಗಿ ಹಸೆಮಣೆಯಮೇಲೆ ಕುಳಿತರು. ತತ್ಕಾಲದಲ್ಲಿ ಮಾಡಬೇಕಾದ

ವೇದೋಕ್ತ ಕರ್ಮಗಳಾದ ಮೇಲೆ ರಾಮಾಚಾರ್ಯರು ಬ್ರಹ್ಮಣ್ಯತೀರ್ಥರ ತೊಡೆಯ ಮೇಲೆ ಯತಿರಾಜರನ್ನು ಕೂಡಿಸಿ ಶ್ರೀಪಾದಂಗಳವರೇ ಅಕ್ಷರಾಭ್ಯಾಸ ಮಾಡಿಸಬೇಕೆಂದು ಪ್ರಾರ್ಥಿಸಿದರು.

ಬ್ರಹ್ಮಣ್ಯತೀರ್ಥರು ತಮ್ಮ ಎದುರುಭಾಗದಲ್ಲಿ ದೊಡ್ಡ ರಜತ ತಾಂಬಾಣದಲ್ಲಿ ಶುಭ್ರವಾದ ಮರಳನ್ನು ತುಂಬಿಸಿಟ್ಟು, ಅದರ ಮೇಲೆ ಓಂಕಾರವನ್ನೂ ಶ್ರೀಕಾರವನ್ನೂ ಬರೆದು ಯತಿರಾಜನಿಂದ ಹರಿದ್ರಾಕುಂಕುಮಚೂರ್ಣ ಮಂತ್ರಾಕ್ಷತೆ ಪುಷ್ಪಗಳಿಂದ ಪೂಜೆಮಾಡಿಸಿ, ಫಲಸಮರ್ಪಣಮಾಡಿ, ಮಂಗಳಾರತಿ ಮಾಡಿಸಿದರು. ಆ ತರುವಾಯ ಬ್ರಹ್ಮಣ್ಯಮುನಿಗಳು ಯತಿರಾಜನ ಬೆರಳುಗಳಿಂದ ತಾಳಪತ್ರದ ವೇಷ್ಟನವನ್ನು ಹಿಡಿಸಿ ತಾವೂ ಹಿಡಿದುಕೊಂಡು ಮರಳಿನ ಮೇಲೆ "ಓಂ ನಮೋ ನಾರಾಯಣಾಯ" ಎಂದು ಬರೆದು ತಿದ್ದಿಸಿದರು.

ಅಕ್ಷರಾಭ್ಯಾಸವು ಮುಗಿದ ಮೇಲೆ ಫಲಪೂಜೆಯಶಾದಮೇಲೆ ಸುಮಂಗಲಿಯರು ಆರತಿಮಾಡಿದರು. ಭೂಸುರವೃಂದವು ವೇದಮಂತ್ರೋಚ್ಚಾರಪೂರ್ವಕವಾಗಿ ಬಾಲಕ ಯತಿರಾಜಾದಿಗಳಿಗೆ ಮಂತ್ರಾಕ್ಷತೆಯನ್ನು ಹಾಕಿ ಆಶೀರ್ವದಿಸಿದರು. ಗುರುಪೂಜಾನಂತರ ಸಕಲ ಬ್ರಾಹ್ಮಣಸುವಾಸಿನಿಯರಿಗೆ ಗಂಧ, ಪುಷ್ಪ, ಫಲ ತಾಂಬೂಲ, ದಕ್ಷಿಣಾ ಪ್ರದಾನಮಾಡಿ ರಾಮಾಚಾರ್ಯ ದಂಪತಿಗಳು ಎಲ್ಲರನ್ನೂ ಸಂತೋಷಗೊಳಿಸಿದರು. ಮಧ್ಯಾಹ್ನ ಗುರುಗಳು ಮಹಾಸಂಸ್ಥಾನ ಪೂಜೆಮಾಡಿ ತೀರ್ಥಪ್ರಸಾದವನ್ನು ಅನುಗ್ರಹಿಸಿದರು. ಆ ತರುವಾಯ ಸರ್ವರಿಗೂ ಭೂರಿ ಭೋಜನವಾಗಿ ಸಮಾರಂಭವು ವೈಭವದಿಂದ ಮುಕ್ತಾಯವಾಯಿತು.

ಸಮಾರಂಭವು ಮುಗಿದಮೇಲೆ ರಾಮಾಚಾರ್ಯದಂಪತಿಗಳು ಹತ್ತಾರುದಿವಸ ಅಬ್ಬೂರಿನಲ್ಲಿದ್ದು ನಂತರ ಶ್ರೀಯವರಿಂದ ಅಪ್ಪಣೆ ಪಡೆದು ಬನ್ನೂರಿಗೆ ತೆರಳಿದರು.

## ೧೧. ಉಪನಯನ–ವಿದ್ಯಾಭ್ಯಾಸ

ಯತಿರಾಜನು ಶುಕ್ಲಪಕ್ಷದ ಚಂದ್ರನಂತೆ ಕಾಂತಿಯುಕ್ತನಾಗಿ ಬೆಳೆಯುತ್ತಿದ್ದಂತೆಯೇ ಸಕಲ ಕಲೆಗಳಿಂದಲೂ(ವಿದ್ಯೆ) ಅಭಿವೃದ್ಧಿಸಿದನು. ಪ್ರತಿಭಾಶಾಲಿಯೂ ಕುಶಾಗ್ರಮತಿಯೂ ಆದನು. ಆ ಕುಮಾರನು ಅಕ್ಷರಾಭ್ಯಾಸವಾದ ಕೆಲವೇ ದಿವಸಗಳಲ್ಲಿ ಸಕಲ ಅಕ್ಷರಗಳು, ಕಾಗುಣಿತಾದಿಗಳನ್ನು ಕಲಿತುಬಿಟ್ಟನು. ಶ್ರೀಬ್ರಹ್ಮಣ್ಯತೀರ್ಥರೇ ಸ್ವತಃ ಪ್ರೀತಿಯಿಂದ ಯತಿರಾಜನಿಗೆ ಪಾಠಹೇಳುತ್ತಿದ್ದರು. ಗುರುಗಳು ಒಮ್ಮೆ ಹೇಳಿದರೆ ಸಾಕು, ಅದನ್ನೆಲ್ಲಾ ಸುಲಭವಾಗಿ ಗ್ರಹಿಸಿ ಕಲಿತುಬಿಡುತ್ತಿದ್ದನು. ಆ ಕುಮಾರನು ತನ್ನ ಎರಡನೆಯ ವಯಸ್ಸಿನಿಂದ್ಲ ಐದನೆಯ ವಯಸ್ಸಿನೊಳಗಾಗಿ ಅಮರ ಮುಂತಾದ ಕೋಶಗಳು, ಶಬ್ದಗಳು, ಧಾತುರೂಪಗಳು, ಸಮಾಸಚಕ್ರ ಮುಂತಾದುದನ್ನೆಲ್ಲಾ ಅಭ್ಯಾಸಮಾಡಿದ್ದಲ್ಲದೆ, ಸಂಸ್ಕೃತ ಮತ್ತು ಕನ್ನಡ ಭಾಷೆಗಳಲ್ಲಿ ವಯಸ್ಸಿಗೆ ಮೀರಿದ ಪ್ರಭುತ್ವವನ್ನು ಪಡೆದು ಸಕಲರನ್ನೂ ಆಶ್ಚರ್ಯಗೊಳಿಸಿದನು.

ಹೀಗೆ ಯತಿರಾಜನು ಶ್ರೀಬ್ರಹ್ಮಣ್ಯತೀರ್ಥರಿಂದ ಬಾಲ್ಯಪಾಠಗಳನ್ನು ಕಲಿತು ಅದರಲ್ಲಿ ಪ್ರಗತಿಯನ್ನು ಸಾಧಿಸಿ, ತಳಿರುತೋರಣಾಲಂಕಾರಗಳಿಂದ ನಗರವೂ, ದಾನ

ದಿಂದ ಕೀರ್ತಿಯೂ, ಸತ್ಕರ್ಮದಿಂದ ಪುಣ್ಯವೂ ಮಹೋತ್ಸವದಿಂದ ಪ್ರಮೋದವೂ, ಸೋಪಾನಪಂಕ್ತಿಯಿಂದ ಉಪ್ಪರಿಗೆ ಮಂದಿರವೂ, ವೀರ್ಯದಿಂದ ವಿಜಯವೂ ಶೋಭಿಸುವಂತೆ ಅತಿಶಯವಾಗಿ ಪ್ರಕಾಶಿಸಿದನು.

ಂ ಂ ಂ ಃ ಂ ಂ

ಯತಿರಾಜರಿಗೆ ಐದುವರ್ಷ ವಯಸ್ಸಾಯಿತು. ಶ್ರೀಬ್ರಹ್ಮಣ್ಯತೀರ್ಥರು ಅವನ ಚುರುಕುಬುದ್ಧಿ, ಗ್ರಹಣಸಾಮರ್ಥ್ಯ, ಪ್ರತಿಭಾದಿಗಳನ್ನು ಕಂಡು ಅವನೀಗ ವೇದ-ಶಾಸ್ತ್ರಾಭ್ಯಾಸಯೋಗ್ಯನಾಗಿರುವನೆಂದು ತಿಳಿದು ಅವನಿಗೆ ಉಪನಯನ ಸಂಸ್ಕಾರವನ್ನು ನೆರವೇರಿಸಲು ನಿಶ್ಚಯಿಸಿದರು.

ಜ್ಯೋತಿಷಶಾಸ್ತ್ರವಿಶಾರದಿಂದ ಬ್ರಹ್ಮೋಪದೇಶಕ್ಕೆ ಒಂದು ಶ್ರೇಷ್ಠವಾದ ಮುಹೂರ್ತವನ್ನು ನಿಶ್ಚಯಮಾಡಿಸಿ, ಉಪನಯನಕ್ಕೆ ಸಕಲ ಸಿದ್ಧತೆಗಳನ್ನೂ ಮಾಡಿಕೊಂಡು ಬನ್ನೂರಿನಿಂದ ರಾಮಾಚಾರ್ಯರ-ಲಕ್ಷ್ಮೀದೇವಿ, ಬಂಧು-ಬಾಂಧವರನ್ನು ಕರೆಯಿಸಿಕೊಂಡರು. ಕುಮಾರನ ಉಪನಯನ ವಿಚಾರವನ್ನರಿತು, ಅದೊಂದೇ ತಂದೆತಾಯಿಗಳಾದ ತಾವು ಹಸೆಯ ಮೇಲೆ ಕುಳಿತು ಜರುಗಿಸುವ ಕೊನೆಯ ವೈದಿಕ ಸಂಸ್ಕಾರವಾದ್ದರಿಂದ ರಾಮಾಚಾರ್ಯ-ಲಕ್ಷ್ಮೀದೇವಿಯರಿಗೆ ಅಪಾರ ಆನಂದವಾಯಿತು. ಆ ಮಂಗಳಕರ ಸಮಾರಂಭವನ್ನು ನೆರವೇರಿಸಲು ಆ ಮಾತಾಪಿತೃಗಳ ಹೃದಯ ತವಕಿಸಿತು. ಸಂಭ್ರಮ-ಸಡಗರಗಳಿಂದ ಅದನ್ನು ನಿರ್ವಹಿಸಲು ಅವರು ಉತ್ಸುಕರಾದರು.

ಶಾಲಿವಾಹನಶಕೆ ೧೩೭೩ನೇ ಪ್ರಜೋತ್ಪತ್ತಿ ಸಂವತ್ಸರದ ವೈಶಾಖಶುಕ್ಲ ಪಂಚಮಿ, (ಕ್ರಿಸ್ತಶಕೆ 1451ನೇ ಮೇ ಮಾಹೆ) ಶ್ರೀಬ್ರಹ್ಮಣ್ಯತೀರ್ಥರ ಮಠದಲ್ಲಿ ಅಸಾಧ್ಯ ಜನಸಂದಣಿ.

ಶ್ರೀಪಾದಂಗಳವರ ಮೇಲ್ವಿಚಾರಣೆಯಲ್ಲಿ ಯತಿರಾಜನಿಗೆ ಐದನೆಯ ವರ್ಷದಲ್ಲಿ ಉಪನಯನ ಸಮಾರಂಭವು ಶಾಸ್ತ್ರೋಕ್ತವಾಗಿ. ಸಾಂಗವಾಗಿ ನೆರವೇರಿತು.[1] ರಾಮಾಚಾರ್ಯರು ಕುಮಾರನಿಗೆ ಬ್ರಹ್ಮೋಪದೇಶಮಾಡಿದರು. ಅನಂತರ ರಾಮಾಚಾರ್ಯರ ದಂಪತಿಗಳು ವಟುವಿನಿಂದ ಗುರುಗಳಿಗೆ ಪಾದಪೂಜೆ ಮಾಡಿಸಿದರು. ಶ್ರೀಗಳವರು ರಾಮಾಚಾರ್ಯ ದಂಪತಿಗಳಿಗೆ ಮತ್ತು ಯತಿರಾಜನಿಗೆ ಮಂತ್ರಮುದ್ರಾಧಾರಣಮಾಡಿ ಫಲಮಂತ್ರಾಕ್ಷತೆ ಅನುಗ್ರಹಿಸಿದರು, ಅನಂತರ ವಟುವಿಗೆ ಗುರೂಪದೇಶಮಾಡಿ ಆಶೀರ್ವದಿಸಿದರು. ಅದಾದಮೇಲೆ ಸರ್ವರಿಗೂ ಫಲತಾಂಬೂಲ ದಕ್ಷಿಣಾಪ್ರದಾನವಾಯಿತು. ತರುವಾಯ ಮಧ್ಯಾಹ್ನ ದೇವರಪೂಜೆಯಾದ ಮೇಲೆ ಸರ್ವರೂ ಶ್ರೀಯವರ ಅಮೃತಹಸ್ತದಿಂದ ತೀರ್ಥಪ್ರಸಾದಸ್ವೀಕರಿಸಿ ವೃಷ್ಟಾನ್ನ ಭೋಜನಮಾಡಿ ತೃಪ್ತರಾದರು.

---

1. ಅಬ್ದೇ ಪಂಚಮತಾಯಾತೇ ವಟು ರಭೂತ್"—ಶ್ರೀ ವಿದ್ಯಾರತ್ನಾಕರರು
2. "ಪಂಚಮೇಬ್ದೇ ತತ್ರವಿಪ್ರೈರುಪನೀತವಾನ್"—ಶ್ರೀಬ್ರಹ್ಮಣ್ಯತೀರ್ಥವಿಜಯ
3. "ಉಪನೀತನಾಗಿ"—ಶ್ರೀವಿಜಯದಾಸರು

ಹೀಗೆ ಮೂರುದಿನಗಳ ಕಾಲ ಸಮಾರಂಭವು ಯಶಸ್ವಿಯಾಗಿ ಜರುಗಿದ ಮೇಲೆ ಸಮಾರಂಭಕ್ಕಾಗಿ ಆಗಮಿಸಿದ್ದ ಸಕಲರೂ ತೆರಳಿದರು. ರಾಮಾಚಾರ್ಯ-ಲಕ್ಷ್ಮೀದೇವಿ ಬಾಂಧವರು ಹಲವಾರು ದಿನ ಅಬ್ಬೂರಿನಲ್ಲಿದ್ದು ಫಲಮಂತ್ರಾಕ್ಷತೆ ಪಡೆದು ಗುರುಗಳು ಮತ್ತು ಪುತ್ರನಿಂದ ಬೀಳ್ಕೊಂಡು ಬನ್ನೂರಿಗೆ ಪ್ರಯಾಣ ಬೆಳೆಸಿದರು.

ಬ್ರಹ್ಮಣ್ಯತೀರ್ಥರು ಒಂದು ಶುಭಮುಹೂರ್ತದಲ್ಲಿ ಯತಿರಾಜನಿಗೆ ಶ್ರೀಮಠದ ಗುರುಕುಲದಲ್ಲಿ ವೇದಾಧ್ಯಯನವನ್ನು ಪ್ರಾರಂಭಮಾಡಿಸಿದರು. ಮತ್ತು ತಾವೇ ಸ್ವತಃ ಉಪನಿಷತ್ತುಗಳು, ಕಾವ್ಯ, ನ್ಯಾಯ-ವ್ಯಾಕರಣ ಶಾಸ್ತ್ರಗಳ ಸಣ್ಣಪುಟ್ಟ ಗ್ರಂಥಗಳ ಪಾಠವನ್ನೂ ಪ್ರಾಂಭಿಸಿದರು. ಕುಶಾಗ್ರಮತಿಯೂ, ಏಕಸಂಧಿಗ್ರಾಹಿಯೂ, ಆದ ಯತಿರಾಜನು ಹಗಲಿರುಳೂ ಪಾಠಗಳನ್ನು ಶ್ರದ್ಧೆಯಿಂದ ಓದುತ್ತಾ, ಚಿಂತನೆ ಮಾಡುತ್ತಾ, ಅಧ್ಯಯನ ಮಾಡಲಾರಂಭಿಸಿದರು. ಹೀಗೆ ಎರಡುಮೂರು ವರ್ಷಗಳಲ್ಲಿಯೇ ನ್ಯಾಯ-ವೇದಾಂತ-ಸಾಹಿತ್ಯ, ವ್ಯಾಕರಣ ಶಾಸ್ತ್ರಗಳಲ್ಲಿ ಹೆಚ್ಚಾದ ಪರಿಣತಿ ಪಡೆದು ಅಸಾರಣಧೀಶಕ್ತಿಯನ್ನು ಪ್ರದರ್ಶಿಸಲಾರಂಭಿಸಿದನು. ಅವನ ಪ್ರಗತಿಯನ್ನು ಕಂಡು ಗುರುಗಳಿಗೆ ಪರಮಾನಂದವಾಯಿತು.

ಸ್ವಶಾಖಾ ವೇದಾಧ್ಯಯನ ಮಾತ್ರವಲ್ಲದೆ ವೇದತ್ರಯಗಳಲ್ಲಿ ಪ್ರತಿಭೆತೋರಿ ಅವುಗಳನ್ನು ಸ್ವಾಧೀನಪಡಿಸಿಕೊಳ್ಳಹತ್ತಿದನು. ಸುಸ್ವರವಾಗಿ ಅವನು ಮಂದ್ರ-ಮಧ್ಯಮೋಚ್ಚಸ್ವರದಲ್ಲಿ ವೇದಾಧ್ಯಯನ ಮಾಡುತ್ತಿದ್ದರೆ ಎಂಥ ಘನಪಾಠಿಗಳೂ ಸಹ ಅದನ್ನು ಕೇಳಿ "ಸಾಧು, ಸಾಧು, ಇದು ಈ ಜನ್ಮದ ಕಲಿಕೆಯಲ್ಲ; ಈ ಬಾಲಕನು ಸಕಲ ಶಾಸ್ತ್ರಗಳನ್ನು ಪೂರ್ವಜನ್ಮದಲ್ಲಿ ಅಧ್ಯಯನಮಾಡಿ, ಮಹಾಜ್ಞಾನಿಯಾಗಿದ್ದಿರಬೇಕು ! ಇಲ್ಲದಿದ್ದರೆ ಇಂತಹ ಪ್ರಗತಿ-ಪ್ರತಿಭೆ ಸಾಧ್ಯವೇ ?" ಎಂದು ನಿಬ್ಬೆರಗಾಗುತ್ತಿದ್ದರು. ಯತಿರಾಜನು ಎರಡುಮೂರು ವರ್ಷಗಳಲ್ಲಿಯೇ ಹತ್ತಾರು ವರ್ಷ ಅಧ್ಯಯನ ಸಾಧ್ಯವಾದ ಉಪನಿಷತ್ತುಗಳು, ವೇದಗಳು, ಕಾವ್ಯಾದಿಗಳು, ನ್ಯಾಯ, ವ್ಯಾಕರಣ ಶಾಸ್ತ್ರಗಳಲ್ಲಿ ಪರಿಣತನಾಗಿ ತನ್ನ ಅಗಾಧ ಪ್ರಜ್ಞಾತಾಂಡವದಿಂದ ಆಪಂಡಿತ ಪಾಮರರನ್ನು ಬೆರಗುಗೊಳಿಸಲಾರಂಭಿಸಿದನು.

ಅಖಂಡಬ್ರಹ್ಮಚರ್ಯವೆಂಬ ನಿರುಪಮ ತಪಶ್ಚರ್ಯದಿಂದ ಬ್ರಹ್ಮವರ್ಚಸ್ಸು ಕಾಂತಿಗಳಿಂದ ಮಿನುಗುತ್ತಾ ದೇವಾಂಶಸಂಭೂತನಾದ ಯತಿರಾಜನು, ಪ್ರಾಚೀನ ಪರಂಪರೆಯಿಂದ ಬಂದ ಪದ್ಧತಿಯನ್ನು ಅನುಸರಿಸಲೆಂದು ಗುರುಕುಲವಾಸ ಮಾಡಿದನೇ ವಿನಃ ಅಭ್ಯಾಸಾಪೇಕ್ಷೆಯಿಂದಲ್ಲ, ಲೋಕಾಚಾರಕ್ಕಾಗಿ ಗುರುವಿಧೇಯ ಚರಿತನಾದನೇ ಹೊರತು ಪ್ರಮಾದ-ಭಯದಿಂದಲ್ಲ, ಪ್ರಾಚೀನಮಾರ್ಗವೆಂದು ವೇದಾಂಗವಾದ ಶಿಕ್ಷಾಕ್ರಮವನ್ನು ಗೌರವದಿಂದ ಅಧ್ಯಯನ ಮಾಡಿದನೇ ಹೊರತು ಲಕ್ಷಣಾನಭಿಜ್ಞತೆಯಿಂದಲ್ಲ. ಹೀಗೆ ಯತಿರಾಜನು ವಿದ್ಯೆಯ ಪ್ರತಿಯೊಂದು ವಿಭಾಗಗಳನ್ನೂ ವ್ಯಾಸಂಗಮಾಡಿ ಅವುಗಳಲ್ಲಿ ಪಾರಂಗತನಾದನು.

## ೧೨. ಶ್ರೀಬ್ರಹ್ಮಣ್ಯತೀರ್ಥರ ಉಪದೇಶ-ಸನ್ಯಾಸಕ್ಕೆ ಕರೆ

ಪೂಜ್ಯರಾದ ಶ್ರೀಬ್ರಹ್ಮಣ್ಯಮುನಿಗಳು ವಟುವಾದ ಯತಿರಾಜನ ನಿರ್ದುಷ್ಟ ವಿದ್ಯಾವೈಭವ, ಪ್ರತಿಭೆ, ಸಾಕ್ಷಾತ್ ವಿದ್ಯಾದೇವಿಯನ್ನು ಅನುಕರಿಸುವ ವಾಕ್ಪಟುತ್ವ, ಅಸ್ಖಲಿತಬ್ರಹ್ಮಚರ್ಯ, ತೇಜಃಪುಂಜ ಮುಖಮುದ್ರೆ, ಶಮ-ದಮ-ಶೀಲಾದಿ ಸಂಪತ್ತು, ಸದಾಚಾರ, ಗುರುವಿಧೇಯಚಾರಿತ್ರ್ಯ, ಸೌಂದರ್ಯಪೂರ್ಣ ಆಕರ್ಷಕ ಶರೀರ, ವಿನಯಗಾಂಭೀರ್ಯಾದಿ ಸದ್ಗುಣಗಳೇ ಮೊದಲಾದ ಲಕ್ಷಣಗಳನ್ನೂ ಕಂಡು ಹಿಗ್ಗುತ್ತಿದ್ದರು.

"ಯತಿರಾಜನು ವಯಸ್ಸಿಗೆ ಮೀರಿದ ಬುದ್ಧಿಶಕ್ತಿ-ಜ್ಞಾನ-ಪ್ರತಿಭಾನ್ವಿತನಾಗಿದ್ದಾನೆ. ವೇದವ್ಯಾಸರ ವರಪ್ರಸಾದಜನ್ಯನಾದ ಅವನ ಅವತಾರದ ಯಶಸ್ಸಿಗೆ ಅಭ್ಯುದಯಗಳಿಗೆ ಭೂಮಿಕೆಯನ್ನು ರಚಿಸಿ ಆವೊಂದು ವರ್ತುಲದಲ್ಲಿ ಅವನ ಸರ್ವಾಂಗೀಣ ಪ್ರಗತಿಸಾಧಿಸಲು ಇದೀಗ ಸರಿಯಾದ ಸಮಯವಾಗಿದೆ. ನಾವೀಗ ಯತಿರಾಜನಿಗೆ ನಮ್ಮ ಮನದಳಲನ್ನು ನಿವೇದಿಸಿ ಆ ಮಹತ್ಕಾರ್ಯಕ್ಕೆ ಅವನನ್ನು ಸಿದ್ಧಗೊಳಿಸಬೇಕು" ಎಂದು ಯೋಚಿಸಿದ ಬ್ರಹ್ಮಣ್ಯತೀರ್ಥರು ಆ ಕಾರ್ಯದಲ್ಲಿ ಪ್ರವೃತ್ತರಾದರು,

ಒಂದು ದಿನ ಯತಿರಾಜನೊಡನೆ ಮಾತನಾಡುತ್ತಿರುವಾಗ ಬ್ರಹ್ಮಣ್ಯಮುನಿಗಳು ತಮ್ಮ ಪೀಠದ ಮಹತ್ವವನ್ನು ವಿವರಿಸುತ್ತಾ ಶ್ರೀ ಹಂಸನಾಮಕ ಪರಮಾತ್ಮನಿಂದ ಪ್ರವೃತ್ತವಾದ ಜ್ಞಾನಪರಂಪರೆಯಲ್ಲಿ ಆಗಿಹೋದ ಜ್ಞಾನಿಗಳು, ಅವರ ವೈಶಿಷ್ಟ್ಯ, ಭಗವತ್ಪ್ರಸಾದ ಪಡೆದು ಮೋಕ್ಷಸುಖವನ್ನು ಪಡೆಯಲು ಏಕೈಕ ಸಾಧನವಾದ ಜ್ಞಾನ, ಭಕ್ತಿಗಳ ಪಾತ್ರ, ಆ ಜ್ಞಾನಸಾಧನೆಗೆ ಸಹಾಯಕವೂ, ಶ್ರೇಷ್ಠವೂ ಆದ ಪರಮಹಂಸಾಶ್ರಮದ ಮಹತ್ವ, ಹಂಸಪರಂಪರೆಯಲ್ಲಿ ಬಂದ ತಮ್ಮ ಪೂರ್ವಿಕರು ಎಂತು ಯತ್ಯಾಶ್ರಮದಲ್ಲಿ ಧರ್ಮಾನುಷ್ಠಾನಪೂರ್ವಕವಾದ ಉಪಾಸನೆಯಿಂದ, ಪರಮಾತ್ಮನ ವಿಶೇಷಾನುಗ್ರಹಕ್ಕೆ ಪಾತ್ರರಾಗಿ ಕೀರ್ತಿಗಳಿಸಿದರು ಮುಂತಾದ ವಿಚಾರಗಳನ್ನೂ ಪರಮಹಂಸಾಶ್ರಮ ಹಾಗು ಅದರ ಧರ್ಮಗಳನ್ನೂ ವಿಸ್ತಾರವಾಗಿ ನಿರೂಪಿಸಿದರು. ಗುರುಗಳ ವಿವರಣೆಯನ್ನಾಲಿಸಿ, ಯತಿರಾಜ ಬಹುವಾಗಿ ಪ್ರಭಾವಿತನಾದ. ಅದನ್ನು ಕಂಡು ಗುರುಗಳು ಮನದಲ್ಲಿ ಹಿಗ್ಗಿದರು.

ಒಂದು ದಿನ ಮಧ್ಯಾಹ್ನ ಹತ್ತಿರಕೂಡಿಸಿಕೊಂಡು ಗುರುಗಳು ಹೀಗೆ ಹೇಳಿದರು "ಯತಿರಾಜ ! ಅನಾದಿಕಾಲದಿಂದ ನಡೆದುಬಂದಿರುವ ನಮ್ಮ ವೈದಿಕಸದ್ವೈಷ್ಣವ ದ್ವೈತಸಿದ್ಧಾಂತವೇ ಸಕಲ ವೇದ, ಉಪನಿಷತ್ತುಗಳು, ಸೂತ್ರ, ಗೀತಾ, ಪುರಾಣ, ಭಾರತಾದಿಶಾಸ್ತ್ರ ಪ್ರತಿಪಾದ್ಯವಾದ ಸತ್ಸಿದ್ಧಾಂತವಾಗಿದೆ. ಇಂತಹ ಪವಿತ್ರ ಸಿದ್ಧಾಂತಕ್ಕೀಗ ಗಂಡಾಂತರ ಬಂದಿದೆ. ನ್ಯಾಯ-ಮೀಮಾಂಸಾದಿಶಾಸ್ತ್ರಗಳ ಬಲದಿಂದ ಪರಮತದ ಪಂಡಿತರು ಹೊಸದೊಂದು ಬಗೆಯಲ್ಲಿ ತಮ್ಮ ತತ್ವಗಳನ್ನು ಪ್ರತಿಪಾದಿಸುತ್ತಾ ನಮ್ಮ ಸಿದ್ಧಾಂತದ ಮೇಲೆ ಕುತ್ಸಿತ ದೋಷಾಭಾಸಗಳನ್ನು ಹೇರಿ,

ಗ್ರಂಥರಚನೆಮಾಡಿ ಮೋಕ್ಷಯೋಗ್ಯ ಸಜ್ಜನರ ಮನಸ್ಸನ್ನು ವಿಭ್ರಮಗೊಳಿಸು ತ್ತಿದ್ದಾರೆ. ಇದು ಹೀಗೆಯೇ ಮುಂದುವರೆದರೆ ನಮ್ಮ ಪರಮಸಿದ್ಧಾಂತವು ನಾಮಾವಶೇಷವಾಗುವುದೇನೋ ಎಂಬ ಭಯವು ನಮಗುಂಟಾಗಿದೆ.

ಆದ್ದರಿಂದ ಕುಮಾರ! ಪ್ರಬಲರಾದ ಪರಮತೀಯರ ಈ ಆಕ್ರಮಣವನ್ನೆದುರಿಸಿ, ಅವರೊಡನೆ ವಾದಮಾಡಿ ಜಯಿಸಿ, ಸಿದ್ಧಾಂತರಕ್ಷಕಗಳಾದ ಅಸದೃಶಗ್ರಂಥರಚನೆ-ಪಾಠಪ್ರವಚನಗಳಿಂದ ಬಂದಿರುವ ವಿಪತ್ತನ್ನು ಪರಿಹರಿಸಿ, ಮತ್ತೆ ನಮ್ಮ ಸಿದ್ಧಾಂತವು ನಿರ್ಬಾಧವಾಗಿ ಬೆಳಗುವಂತೆ ಮಾಡಬಲ್ಲ ದೇವಾಂಶಸಂಭೂತನಾದ ಮಹನೀಯನ ಅವಶ್ಯಕತೆ ಈಗ ಉಂಟಾಗಿದೆ. ನಾವು ಹೇಳಿದ ದೇವಾಂಶಸಂಭೂತನಾದ ಆ ಮಹನೀಯ ನೀನೇ ಆಗಿದ್ದೀಯೇ ! ಈ ವಿಚಾರವನ್ನು ನಿನಗೆ ತಿಳಿಸಿ ತತ್ಕಾರ್ಯಾಸಕ್ತನಾಗುವಂತೆ ಮಾಡಬೇಕೆಂಬ ಹಂಬಲ ನಮಗೆ ಬಹುದಿನಗಳಿಂದಲೂ ಇದ್ದಿತು. ಇಂದು ನಮ್ಮ ಮನದಾಸೆಯನ್ನು ನಿನಗೆ ತಿಳಿಸಿದ್ದೇವೆ. ವತ್ಸ, ನಮ್ಮ ಮನೋರಥವನ್ನು ನೀನು ಪೂರ್ಣಗೊಳಿಸಿ ಆನಂದಗೊಳಿಸಬೇಕು ಕಂಡೆಯಾ" ಎಂದು ಹೇಳಿದರು.

ಗುರುಗಳ ಮಾತು ಕೇಳಿ ಯತಿರಾಜನಿಗೆ ಸಂತೋಷ ಸಂಭ್ರಮಾಶ್ಚರ್ಯಗಳುಂಟಾದವು. ದೇಹ ರೋಮಾಂಚಿತವಾಯಿತು. ವಿನಯದಿಂದ ಕರಜೋಡಿಸಿ ಯತಿರಾಜನು "ಗುರುದೇವ ! ಇದೇನು ಹೀಗೆ ಹೇಳುತ್ತಿರುವಿರಿ ? ನನ್ನನ್ನು ಸಾಕಿ, ಸಲಹಿ, ಬೆಳೆಸಿ, ವಿದ್ಯಾದಾನಮಾಡಿ ಅನುಗ್ರಹಿಸುತ್ತಿರುವ ನಿಮಗೆ, ಶಿಷ್ಯನಾದ ನನ್ನಲ್ಲಿ ಸಂಕೋಚವೇಕೆ ಸ್ವಾಮಿ ? ನನ್ನ ಮೇಲೆ ಸರ್ವವಿಧವಾದ ಅಧಿಕಾರವೂ ಇದೆ, ನಿಮ್ಮಮನಸ್ಸಿನಲ್ಲಿರುವುದನ್ನು ಹೇಳೋಣವಾಗಲಿ. ತಮ್ಮ ಆಜ್ಞೆಯಂತೆ ವರ್ತಿಸಿ ನಿಮ್ಮ ಮನಸ್ಸಿಗೆ ಸಂತೋಷವಾಗುವಂತೆ ಮಾಡುವುದಕ್ಕಿಂತ ಹೆಚ್ಚಿನ ಸೌಭಾಗ್ಯ ಬೇರಾವುದಿದೆ ?" ಎಂದು ವಿಜ್ಞಾಪಿಸಿದನು.

ಯತಿರಾಜನ ವಿನಯಪೂರ್ಣವಾದ ನುಡಿಗಳನ್ನಾಲಿಸಿ ಹರುಷಗೊಂಡ ಶ್ರೀ ಬ್ರಹ್ಮಣ್ಯತೀರ್ಥರು ಹಿಂದೆ ತಾವು ಬದರಿಯಲ್ಲಿ ಮಾಡಿದ ತಪಸ್ಸು, ಭಗವಂತನ ವರ ಪ್ರದಾನದಿಂದಾರಂಭಿಸಿ ಈ ವರೆಗಿನ ಸಮಸ್ತ ವಿಚಾರಗಳನ್ನೂ ವಿವರಿಸಿದರು.

ಅನಂತರ ಬ್ರಹ್ಮಣ್ಯತೀರ್ಥರು "ಯತಿರಾಜ, ನಮ್ಮ ಸಿದ್ಧಾಂತವನ್ನು ಸಕಲ ವಿಧದಿಂದ ಸಂರಕ್ಷಿಸಿ ಪೋಷಿಸಿಕೊಂಡು ಬರಲು ನೀನೊಬ್ಬನೇ ಸಮರ್ಥನೆಂದು ನಾವು ನಂಬಿದ್ದೇವೆ. ಈ ಪರಮ ಪವಿತ್ರ ಕಾರ್ಯವನ್ನು ನೆರವೇರಿಸಲು ಪರಮಹಂಸಾಶ್ರಮಿಯೇ ಶ್ರೇಷ್ಠ ಅಧಿಕಾರಿ ! ಆದುದರಿಂದ ನೀನು ಮೊದಲು ನಮ್ಮಿಂದ ಆಶ್ರಮ ಸ್ವೀಕರಿಸಿ ಸನ್ಯಾಸಿಯಾಗಿ ನಮ್ಮ ಶಿಷ್ಯನಾಗಬೇಕು. ತರುವಾಯ ಷಡ್ದರ್ಶನಗಳಲ್ಲಿ, ಮುಖ್ಯವಾಗಿ ದ್ವೈತವೇದಾಂತ ಶಾಸ್ತ್ರವನ್ನು ಸಮಗ್ರವಾಗಿ ಅಧ್ಯಯನಮಾಡಿ ಪ್ರಕಾಂಡ ಪಂಡಿತನಾಗಬೇಕು. ಆಗ ನೀನು ಈ ಮಹತ್ವಪೂರ್ಣ ಕಾರ್ಯವನ್ನು ಯಶಸ್ವಿಯಾಗಿ ನೇರವೇರಿಸಲು ಸಮರ್ಥನಾಗುತ್ತೀಯೆ, ಆದುದರಿಂದ ನೀನು ನಮ್ಮ ಶಿಷ್ಯನಾಗಿ ಶ್ರೀಮದಾಚಾರ್ಯರ ಮಹಾಸಂಸ್ಥಾನಕ್ಕೆ ಉತ್ತರಾಧಿಕಾರಿಯಾಗಬೇಕು" ಎಂದು ಕಳಕಳಿಯಿಂದ ಹೇಳಿದರು.

ಅದುವರೆಗೆ ಗುರುಗಳು ಹೇಳುತ್ತಿದ್ದ ವಿಚಾರವನ್ನು ಆಸಕ್ತಿಯಿಂದ ಕೇಳುತ್ತಿದ್ದ ಯತಿರಾಜನಿಗೆ ಗುರುಗಳು "ಸನ್ಯಾಸವನ್ನು ಸ್ವೀಕರಿಸಿ ನಮ್ಮ ಶಿಷ್ಯನಾಗಬೇಕು" ಎಂದು ಹೇಳಿದೊಡನೆಯೇ ಅವನ ಉತ್ಸಾಹವೆಲ್ಲವೂ ಮಾಯವಾಯಿತು. ದೊಡ್ಡ ಆಘಾತವಾದಂತಾಯಿತು, ಮನದಲ್ಲಿ ಒಂದು ಬಗೆಯ ಹೆದರಿಕೆ, ತಳಮಳ ಪ್ರಾರಂಭವಾಯಿತು. ಗುರುಗಳಿಗೆ ಏನೂ ಉತ್ತರ ಕೊಡದೆ ಗಂಭೀರ ಮುಖಮುದ್ರೆಯಿಂದ ಚಿಂತಾಪರನಾಗಿ ತಲೆತಗ್ಗಿಸಿ ಕುಳಿತುಬಿಟ್ಟನು. ಯತಿರಾಜನಲ್ಲಾದ ಮಾರ್ಪಾಟನ್ನು ಗಮನಿಸಿದ ಬ್ರಹ್ಮಣ್ಯತೀರ್ಥರು "ವತ್ಸ, ಸಾವಧಾನವಾಗಿ ವಿಚಾರಮಾಡಿ ನಿನ್ನ ಅಭಿಪ್ರಾಯವನ್ನು ತಿಳಿಸು" ಎಂದು ಹೇಳಿ ಅಲ್ಲಿಂದ ತೆರಳಿದರು.

ಗುರುಗಳು ಅತ್ತ ತೆರಳಿದ ಮೇಲೆ ಯತಿರಾಜನ ಮನಸ್ಸಿನಲ್ಲಿ ವಿಚಾರತರಂಗ ಏದ್ದಿತು. "ಸನ್ಯಾಸಿಯಾಗಬೇಕು" ಎಂಬ ಗುರುಗಳ ವಚನದಿಂದ ಅವನು ಅಧೀರನಾದನು. ಅಲ್ಲಿಯವರೆಗೆ ಅವನಲ್ಲಿದ್ದ ಸ್ಥೈರ್ಯ, ಉತ್ಸಾಹಗಳೆಲ್ಲವೂ ಉಡುಗಿಹೋಯಿತು. ಒಂದು ಬಗೆಯ ಭೀತಿಯುಂಟಾಗಿ ಹೃದಯವು ಕಂಪಿಸಿತು. ಅವ್ಯಕ್ತ ವೇದನೆ, ಮಾನಸಿಕ ತಳಮಳಗಳಿಂದ ಯತಿರಾಜನ ಮನಶ್ಶಾಂತಿಯೇ ಕದಡಿದಂತಾಯಿತು.

ಇಲ್ಲಿದ್ದರೆ ಗುರುಗಳ ಮಾತನ್ನು ನೆರವೇರಿಸಬೇಕಾಗುತ್ತದೆ. ಆದ್ದರಿಂದ ತಾನು ಆದಷ್ಟು ಬೇಗ ಶ್ರೀಮಠದಿಂದ ಹೊರಟುಬಿಡಬೇಕೆಂದು ಅವನು ಬಯಸಿದನು. ಹೀಗೆ ನಿರ್ಧರಿಸಿದ ಯತಿರಾಜನ ಹೃದಯ ಏಕಾಂತವನ್ನು ಆಶಿಸಿತು. ಮಾನಸಿಕ ತುಮುಲದಿಂದ ಅಸಹಾಯನಾದ ಅವನು ಏನೂ ಮಾಡಲು ತೋಚದೆ.ಸದಸದ್ವಿವೇಕ ಬುದ್ಧಿಯುಳ್ಳವನಾಗಿದ್ದರೂ ಬಾಲ್ಯಚಾಪಲ್ಯದಿಂದ, ಮನಶ್ಶಾಂತಿಗಾಗಿ ಯಾರಿಗೂ ತಿಳಿಸದೇ ಮಠವನ್ನು ಬಿಟ್ಟು ಹೊರಟುಬಿಟ್ಟನು !

ವಿಚಾರಪರವಶನಾದ ಯತಿರಾಜನಿಗೆ ತಾನೆತ್ತ ಹೋಗುತ್ತಿರುವೆನೆಂಬ ಪರಿವೇ ಇರಲಿಲ್ಲ. ಏನನ್ನೂ ಗಮನಿಸದೆ ತಲೆತಗ್ಗಿಸಿಕೊಂಡು ಭರದಿಂದ ಸಾಗಿದ್ದಾನೆ ಯತಿರಾಜ. ಚಿಂತಾಕ್ರಾಂತನಾದ ಆತ ಮಠದಿಂದ ಬಹುದೂರ ಬಂದುಬಿಟ್ಟಿದ್ದಾನೆ. ಮಾನಸಿಕ ತಳಮಳ, ಪ್ರಯಾಣದ ಬಳಲಿಕೆಗಳಿಂದ ಅವನು ಆಯಾಸಗೊಂಡಿದ್ದಾನೆ. ಆಗ ಇದ್ದಕ್ಕಿದ್ದಂತೆ ನಿಂತು ತಾನೆತ್ತ ಬಂದಿರುವೆನೆಂದು ಒಮ್ಮೆ ಸುತ್ತಲೂ ನಿರೀಕ್ಷಿಸಿದ. ಅವನ ದೃಷ್ಟಿಗೆ ಬಿದ್ದ ದೃಶ್ಯ ಬಹು ರಮಣೀಯವಾಗಿತ್ತು.

ಅದೊಂದು ಸುಂದರವನ, ಪರಿಸರವೆಲ್ಲಾ ಹಚ್ಚಹಸುರಾದ ತರು-ಲತಾ-ವೃಕ್ಷಗಳಿಂದ ಶೋಭಿಸುತ್ತಿದೆ. ಪ್ರಶಾಂತವಾತಾವರಣ. ಸೂರ್ಯನು ಅಸ್ತಂಗತನಾಗಲು ಇನ್ನೂ ಬಹಳ ಕಾಲವಿದೆ,ಸೂರ್ಯನ ಹೊಂಗಿರಣಗಳ ಪ್ರಕಾಶದಿಂದ ವನವು ಮನೋಹರವಾಗಿ ಕಂಗೊಳಿಸುತ್ತಿದೆ. ಅಲ್ಲೊಂದು ಜಲಭರಿತವಾದ ವಿಶಾಲವಾದ ಸರೋವರವು ಯತಿರಾಜನಿಗೆ ಗೋಚರಿಸಿತು. ಆ ಪರಿಸರ ಅವನಿಗೆ ಪ್ರಶಾಂತವೆನಿ

ಸಿತು. ಮನಸ್ಸಿಗೆ ಸ್ವಲ್ಪ ಶಾಂತಿಯೇರ್ಪಟ್ಟಿತು. ಯತಿರಾಜ ಆ ದಿವ್ಯ ಸರೋವರ ದತ್ತ ನಡೆದ; ಅದರ ಸ್ವಚ್ಛವಾದ ಜಲರಾಶಿಯನ್ನು ಕಂಡು ಸರಸ್ಸಿನಲ್ಲಿಳಿದು ಕೈಕಾಲು ಗಳನ್ನು ತೊಳೆದುಕೊಂಡು ಆನಂತರ ಸಾಯಂಸಂಧ್ಯಾವಂದನೆ– ಜಪಾದಿಗಳನ್ನು ಪೂರೈಸಿ, ನೀರು ಕುಡಿದು ಮೇಲೆಬಂದು ಸುತ್ತನೋಡಿದ. ಸರೋವರಕ್ಕೆ ಹೊಂದಿ ಕೊಂಡು ಶಾಖೋಪಶಾಖೆಗಳಿಂದ ವಿಸ್ತಾರವಾಗಿ ಹರಡಿದ್ದ ಒಂದು ಆಲದಮರವನ್ನು ಕಂಡು ಅತ್ತಬಂದ ಯತಿರಾಜನು ಅದರಬುಡಭಾಗದಲ್ಲಿ ದೇಹಾಯಾಸವನ್ನು ಪರಿ ಹರಿಸಿಕೊಳ್ಳಲು ಮರದಬುಡಕ್ಕೊರಗಿ ಕುಳಿತ, ಬಹುದೂರ ಪ್ರಯಾಣಮಾಡಿದ ಆಯಾಸದಿಂದ ಕಣ್ಣುಗಳು ಮಂಪರು ಮಂಪರಾದಂತಾಯಿತು. ಕನಸೂ ಅಲ್ಲ, ನನಸೂ ಅಲ್ಲ, ಅಂತಹ ಒಂದು ಅವಸ್ಥೆಯಲ್ಲಿದ್ದಾನೆ ಯತಿರಾಜ. ಆಗ ಅವನ ಮುಂದೆ ಮಿಂಚೊಂದು ಮಿನುಗಿದಂತಾಗಿ ದಿವ್ಯಪ್ರಕಾಶವುಂಟಾಯಿತು ! ಆ ಪ್ರಶಾಂತಕಾಂತಿ ಪುಂಜವನ್ನು ಭೇದಿಸಿಕೊಂಡು ಮೇಲೆದ್ದುನಿಂತ ತೇಜೋಮೂರ್ತಿಗಳಾದ ಮಹ ನೀಯರೊಬ್ಬರು ಯತಿರಾಜನ ದೃಷ್ಟಿಗೆ ಗೋಚರಿಸಿದರು !

ದರ್ಶನಮಾತ್ರದಿಂದ ಪೂಜ್ಯಭಾವವನ್ನು ಹುಟ್ಟಿಸಿದ ಆ ತೇಜೋಮೂರ್ತಿ ಗಳನ್ನು ಕಂಡು ಯತಿರಾಜನ ಮೈಪುಳಕಿಸಿತು. ಭವ್ಯಾಕಾರ, ತಲೆಯಮೇಲೆ ಜಟೆ, ಕಪೋಲ–ಗದ್ದಗಳಲ್ಲಿ ಅದಭ್ರಶುಭ್ರವಾದ ಕೇಶರಾಶಿ, ವಿಸ್ತಾರವಾದ ಮುಖದಲ್ಲಿ ಮಿಂಚಿನಂತೆ ಮಿನುಗುವ ನೇತ್ರಗಳು, ಸುಂದರವಾದ ನೀಲನೀರದ ಕಾಂತಿಯಿಂದ ಬೆಳ ಗುವ ಶರೀರ, ಫಾಲಪ್ರದೇಶದಲ್ಲಿ ವಿರಾಜಿಸುವ ಊರ್ಧ್ವಪುಂಡ್ರ ಗಂಧಾಕ್ಷತೆ, ದ್ವಾದಶನಾಮಗಳು, ಕೊರಳಲ್ಲಿ ಶೋಭಿಸುವ ಯಜ್ಞೋಪವೀತ, ಕಮಲಾಕ್ಷ– ತುಳಸೀ ಮಾಲೆಗಳು, ತರುಣಾರುಣವರ್ಣದ ಕಾಷಾಯಾಂಬರ, ಕರಗಳಲ್ಲಿ ಹಿಡಿದಿ ದಿರುವ ದಂಡಕಮಂಡಲುಗಳು, ಟೊಂಕಕ್ಕೆ ಬಿಗಿದಿರುವ ಭಂಗಾರವರ್ಣದ ಮೌಂಜಿ– ಇಂತು ವೇಷಭೂಷಣಗಳಿಂದ ರಾಜಿಸುವ ಆ ಮಹನೀಯರ ಮುಖ ಮುದ್ರೆಯು ಅತ್ಯಂತ ಪ್ರಶಾಂತವಾಗಿದೆ. ಹೊಳೆಯುವ ಕಣ್ಣುಗಳು ಕರುಣಾ ರಸಪೂರ್ಣವಾಗಿವೆ. ಆಗ ಯತಿರಾಜ ನೋಡುತ್ತಿರುವಂತೆಯೇ ಗರುಢಾ ರೂಢನಾದ, ಶ್ರೀಲಕ್ಷ್ಮೀಸಹಿತನಾದ, ದೇವತೆಗಳಿಂದ ಸ್ತುತ್ಯನಾದ ಶ್ರೀಮನ್ನಾ ರಾಯಣನು ದರ್ಶನವಿತ್ತಂತಾಯಿತು.[1] ಮರುಕ್ಷಣವೇ ಮೊದಲಿನಂತೆ ಜಟಾ ಜೂಟ ಪರಿಶೋಭಿತರಾದ ತೇಜೋಮೂರ್ತಿಗಳು ಅಭಯಹಸ್ತದಿಂದ ಮಂದ ಹಾಸ ಬೀರುತ್ತ ನಿಂತಿರುವುದನ್ನು ಕಂಡನು. ತನ್ನ ಮುಂದೆ ನಿಂತಿರುವ ಆ ಮಹನೀಯರೇ ಮಧ್ವವಿಜಯದಲ್ಲಿ ವರ್ಣಿಸಿರುವಂತೆ ಬದರಿಯಲ್ಲಿ ಶ್ರೀಮಧ್ವಾ

1. "ತತ್ಕ್ಷಣೇ ವಟಪತ್ರಪುಟಾದಿವ ಗಗನಪಥಾದವತೀರ್ಣೇನ ಸುಪರ್ಣೋಪಸ್ಥಾ ಧಿರೂಢೇನ...... ಭಗವತಾ ಲಕ್ಷ್ಮೀಸಹಾಯೇನ ಬೋಧಿತನಿಜಾವತಾರಕರಣೀಯಃ ...ಹರ್ಷಾಶ್ರು ವಾರಿಶೀಕರೈಃ ಕೋರಕಿತವಿಲೋಚನೋ ವಿಸ್ಮಯಪುಲಕಿತ ಚೇತಾಃ...॥

——ಶ್ರೀವ್ಯಾಸಯೋಗಿಚರಿತೆ ಪುಟ—36.

ಚಾರ್ಯರಿಗೆ ದರ್ಶನವಿತ್ತ ಸಾಕ್ಷಾತ್ ಲಕ್ಷ್ಮೀಕಾಂತನಾರಾಯಣಾಭಿನ್ನರಾದ ಶ್ರೀವೇದ ವ್ಯಾಸದೇವರೆಂದು ಯತಿರಾಜನಿಗೆ ಅರಿವಾಯಿತು.

ಅವರ ದರ್ಶನಮಾತ್ರದಿಂದ ಯತಿರಾಜನನ್ನು ಆವರಿಸಿದ್ದ ಚಿಂತೆ, ಕಳವಳ, ಆಯಾಸ ಎಲ್ಲವೂ ಸೂರ್ಯಪ್ರಕಾಶದಿಂದ ಮಂಜುಕರಗುವಂತೆ ಕರಗಿಹೋಯಿತು. ಅದಾವುದೋ ಒಂದು ದಿವ್ಯಶಕ್ತಿ ಅವನ ನರನಾಡಿಗಳಲ್ಲಿ ಹರಿದಂತಾಯಿತು. ರೋಮಹರ್ಷಣದಿಂದ ದೇಹಕಂಪಿಸಿತು. ಯತಿರಾಜನ ಹೃದಯದಲ್ಲಿ ಭಕ್ತಿ ಯೊರತೆ ಪುಟಿದೆದ್ದಿತು. ತನಗರಿವಾಗದಂತೆಯೇ ಯತಿರಾಜ ಭಗವಾನ್ ಶ್ರೀವೇದ ವ್ಯಾಸದೇವರಿಗೆ ಸಾಷ್ಟಾಂಗವೆರಗಿ ಕರಜೋಡಿಸಿ ನಿಂತನು.

ಭಗವಾನ್ ವೇದವ್ಯಾಸರು ಹತ್ತಿರಬಂದು ಯತಿರಾಜನ ಶಿರದಮೇಲೆ ತಮ್ಮ ಅಮೃತಹಸ್ತವನ್ನಿರಿಸಿದರು. ಕೂಡಲೇ ಯತಿರಾಜನ ದೇಹದಲ್ಲಿ ವಿದ್ಯುತ್ಸಂಚಾರ ವಾದಂತಾಯಿತು. ತದೇಕದೃಷ್ಟಿಯಿಂದ ಭಗವಾನರನ್ನು ನೋಡುತ್ತಿರುವಂತೆಯೇ ಚಂದ್ರಿಕೆಯ ಬೆಡಗನ್ನು ನಾಚಿಸುವ ಮಂದಹಾಸಬೀರುತ್ತಾ ಅವರು ಮೃದು ಮಧುರ ವಚನಗಳಿಂದ ಇಂತೆಂದರು.

"ಮಗು! ಇದೇನು ನಿನ್ನ ಚಿಂತೆ? ಧೀರನಾದ ನಿನಗೆ ಈ ಕಳವಳವು ಶೋಭಿಸು ವುದೇ? ಕುಮಾರ, ನಮ್ಮ ಜ್ಞಾನಕಾರ್ಯವನ್ನು ನೆರವೇರಿಸಲು ನಾವೇ ನಿನ್ನನ್ನು ಈ ಧರೆಗೆ ಕಳಿಸಿದ್ದೇವೆ. ಪಾಷಂಡಿಗಳು ನಾವು ಉಪದೇಶಿಸಿದ ಅನಾದಿಯಾದ ವೈದಿಕಸದ್ವೈಷ್ಣವ ಸಿದ್ಧಾಂತವನ್ನು ಅಪಲಾಪಮಾಡಿ ಅಪಸಿದ್ಧಾಂತವನ್ನು ಪ್ರಸಾರ ಮಾಡುತ್ತಿರುವರು. ಹಿಂದೊಮ್ಮೆ ಇಂಥ ಪರಿಸ್ಥಿತಿಯೊದಗಿದ್ದಾಗ ದೇವತೆಗಳ ಪ್ರಾರ್ಥನೆಯಂತೆ ನಮಗೆ ಅತ್ಯಂತ ಪ್ರಿಯನೂ, ಜಗತ್ಪ್ರಾಣನೂ ಆದ ವಾಯುದೇವ ನನ್ನು ನಮ್ಮ ಸಿದ್ಧಾಂತ ತತ್ವಗಳನ್ನು ಹಿಡಿದೆತ್ತಿ ಮುಕ್ತಿಯೋಗ್ಯಜನರಿಗೆ ಸನ್ಮಾರ್ಗ ಪ್ರದರ್ಶನಮಾಡಲು ಕಳಿಸಿದ್ದೆವು. ಭಾರತೀರಮಣನಾದ ಮುಖ್ಯಪ್ರಾಣನು ನಮ್ಮ ಆದೇಶದಂತೆ ಮಧ್ವಾಭಿಧಾನದಿಂದ ಅವತರಿಸಿ ಬ್ರಹ್ಮಸೂತ್ರಗಳಿಗೆ ನಮಗೆ ಪರಮ ಸಮ್ಮತವಾದರೀತಿಯಲ್ಲಿ ಭಾಷ್ಯಗಳನ್ನು ರಚಿಸಿ ವೈಷ್ಣವಸಿದ್ಧಾಂತವನ್ನು ಪ್ರತಿ ಷ್ಠಾಪಿಸಿ ಸುಜನರಿಗೆ ಮಹೋಪಕಾರಮಾಡಿದನು.

ವತ್ಸ, ನಮ್ಮ ಪ್ರಿಯರಾದ ಆನಂದತೀರ್ಥರು ಸ್ಥಾಪಿಸಿದ ಪರಮಸಿದ್ಧಾಂತದ ಮೇಲೆ ಈಗ ಮತ್ತೆ ದಾಳಿಮಾಡಿ ವೈದಿಕ ಸತ್ಸಿದ್ಧಾಂತವನ್ನು ಅಪಭ್ರಂಶಗೊಳಿಸಿ ಪರವಾದಿಗಳು ವೈದಿಕೋಪದೇಶಗಳನ್ನು ಅಲ್ಲಗಳೆಯುತ್ತಿದ್ದಾರೆ. ಕಲಿಯುಗದ ಸಜ್ಜನರ ಉದ್ಧಾರಕ್ಕಾಗಿ ಮತ್ತೆ ಆ ಸತ್ಸಿದ್ಧಾಂತವನ್ನು ಮೇಲೆತ್ತಿಹಿಡಿದು ನಮ್ಮ ಉಪದೇಶವನ್ನು ಪ್ರಸಾರಮಾಡಲೆಂದೇ ನಮ್ಮ ಪರಮಭಕ್ತನಾದ ನಿನ್ನನ್ನು ಬ್ರಹ್ಮಣ್ಯತೀರ್ಥರ ತಪಸ್ಸಿಗೆ ಮೆಚ್ಚಿ ವರರೂಪವಾಗಿ ಕರುಣಿಸಿದ್ದೇವೆ.

ಯತಿರಾಜ! ಈಗ ನಿನ್ನ ಅವತಾರದ ಉದ್ದೇಶ್ಯ ನೆರವೇರವಕಾಲ ಸನ್ನಿಹಿತವಾಗಿದೆ! ಇವೆಲ್ಲವೂ ನಮ್ಮ ಸಂಕಲ್ಪ, ಇಚ್ಛೆಗಳಿಂದಲೇ ಜರುಗಿವೆ, ಮಗು, ನೀನು ಸನ್ಯಾಸಿಯಾಗಿ, ಪಾಷಂಡಿಗಳನ್ನು ಖಂಡಿಸಿ, ನಮ್ಮ ಪರಮಸಿದ್ಧಾಂತವನ್ನು ಎಲ್ಲ ಕಂಟಕಗಳಿಂದ ದೂರಮಾಡಿ ರಕ್ಷಿಸಿ, ವಾದಿದಿಗ್ವಿಜಯ, ಗ್ರಂಥರಚನೆ, ಪಾಠಪ್ರವಚನ ತತ್ವ-ಧರ್ಮಪ್ರಸಾರ, ಸಜ್ಜನೋದ್ಧಾರ, ಲೋಕಕಲ್ಯಾಣಗಳನ್ನು ಮಾಡಬೇಕಪ್ಪಾ, ಜಾಗೃತನಾಗು, ನೀನಾರೆಂಬುದನ್ನು ಅರಿತುಕೋ ಕುಮಾರ, ನೀನೀಗ ಬ್ರಹ್ಮಣ್ಯತೀರ್ಥರ ಆಶಯದಂತೆ ಪರಮಹಂಸಾಶ್ರಮವನ್ನು ಸ್ವೀಕರಿಸು, ನಿನ್ನ ಅವತಾರ ಕಾರ್ಯವನ್ನು ಯಶಸ್ವಿಯಾಗಿ ನೇರವೇರಿಸು! ನಾವು ಸದಾ ನಿನ್ನಲ್ಲಿ ಸನ್ನಿಹಿತರಾಗಿದ್ದು ಈ ಮಹತ್ಕಾರ್ಯವನ್ನು ಮಾಡಿಸಿ ನಿನಗೆ ಅಜರಾಮರ ಕೀರ್ತಿಯನ್ನು ತಂದೀಯುತ್ತೇವೆ. ನಿನ್ನಿಂದ ಭಾಗವತಧರ್ಮ ಪ್ರಸಾರವು ಅಖಂಡವಾಗಿ ನಡೆದು ಭರತವರ್ಷದಲ್ಲಿ ಮತ್ತೊಮ್ಮೆ ಆಸ್ತಿಕಮತವು ನೆಲೆನಿಲ್ಲಬೇಕಾಗಿದೆ. ಕೇಳು, ಕುಮಾರ! ಈ ಕಾರ್ಯನಿರ್ವಹಣೆಯು ಯಶಸ್ವಿಯಾಗಲು ನಿನಗೆ ನಮ್ಮ ಹೆಸರನ್ನೇ ಇಡಲು ಬ್ರಹ್ಮಣ್ಯತೀರ್ಥರಿಗೆ ಪ್ರೇರಣೆಮಾಡಿದ್ದೇವೆ. ನಮ್ಮ ಹೆಸರಿನಿಂದ ಲೋಕಕಲ್ಯಾಣ ಮಾಡಿ, ಸುಜೀವಿಗಳನ್ನು ,ಉದ್ಧರಿಸು. ಬ್ರಹ್ಮಣ್ಯತೀರ್ಥರ ಅಪ್ಪಣೆಯಂತೆ ವರ್ತಿಸು, ವತ್ಸ, ನಿನಗೆ ಜಯವಾಗಲಿ" ಎಂದು ಉಪದೇಶಿಸಿ ಭಗವಾನ್ ವೇದವ್ಯಾಸದೇವರು ಕಣ್ಮರೆಯಾದರು.

ಶ್ರೀವೇದವ್ಯಾಸದೇವರ ಭವ್ಯಸ್ವರೂಪದರ್ಶನಜನಿತಾನಂದ ಮಗ್ನನಾಗಿದ್ದ ಯತಿರಾಜನಿಗೆ ಭಗವಾನರು ಅದೃಶ್ಯರಾದೊಡನೆ ಅದಾವುದೋ ಒಂದು ಲೋಕದಿಂದ ಧರೆಗಿಳಿದು ಬಂದಂತಾಯಿತು. ಪಕ್ಕನೆ ಕಣ್ಣುತೆರೆದು ಇದೇನು ಕನಸೋ ನನಸೋ ಎಂದು ಆಶ್ಚರಿಗೊಂಡನು. ಆಗವನು "ಓಹ್, ನಾನೆಂಥ ಭಾಗ್ಯಶಾಲಿ ! ಷಡ್ಗುಣೈಶ್ವರ್ಯಸಂಪನ್ನರಾದ ಸಾಕ್ಷಾತ್ ವೇದವ್ಯಾಸದೇವರು ದರ್ಶನವಿತ್ತು ನನ್ನ ಅವತಾರರಹಸ್ಯವನ್ನೂ, ಕರ್ತವ್ಯವನ್ನೂ ಬೋಧಿಸಿದರಲ್ಲ! ತಮ್ಮ ಭಕ್ತರಲ್ಲಿ ಆ ಮಹನೀಯರಿಗೆ ಅದೆಷ್ಟು ವಾತ್ಸಲ್ಯ! ತಮ್ಮ ಪರಮಸಿದ್ಧಾಂತವನ್ನು ಧರೆಯೊಳಗೆ ಸುಭದ್ರಗೊಳಿಸುವ ಗುರುತರ ಹೊಣೆಯನ್ನು ನನಗೆ ವಹಿಸಿಕೊಟ್ಟಿರಲ್ಲ!! ನಾನೇ ಧನ್ಯ" ಎಂದು ಉದ್ಗರಿಸಿದನು.

ಯತಿರಾಜನಿಗೆ ಅದುವರೆಗೆ ಕವಿದಿದ್ದ ಕತ್ತಲು ಪರಿಹಾರವಾಗಿ ದಿವ್ಯಪ್ರಕಾಶವು ಕಂಡುಬಂದು ಮನಸ್ಸು ನಿಚ್ಚಳವಾಯಿತು. ಭಗವಾನ್ ವೇದವ್ಯಾಸದೇವರ ಪವಿತ್ರಕರ ಸ್ಪರ್ಶದಿಂದ ತನ್ನ ಸ್ವರೂಪದಮೇಲೆ ಮುಸುಕಿದ್ದ ಮಾಯೆಯ ತೆರೆಯು ಸರಿದು ಸ್ವರೂಪದರ್ಶನವಾಯಿತು! ಬ್ರಹ್ಮದೇವರಶಾಪ, ಪ್ರಹ್ಲಾದಾವತಾರಾದಿ ಸಮಸ್ತ ಘಟನೆಗಳೂ ಒಂದಾದಮೇಲೊಂದರಂತೆ ಸಮಸ್ತ ವಿಚಾರಗಳೂ ಅವನ ಹೃದಯ ಪಟಲದಲ್ಲಿ ಸ್ಪಷ್ಟವಾಗಿ ಒಡಮೂಡಿ ಮಾಯವಾದಂತಾಯಿತು!

ಯತಿರಾಜನ ಚಿಂತೆ-ಕಳವಳಗಳೆಲ್ಲವೂ ದೂರವಾಯಿತು. ಮನದಲ್ಲಿ ಆನಂದದ ಹೊನಲು ಹರಿಯಹತ್ತಿತು. ಅವನ ನರನಾಡಿಗಳಲ್ಲಿ ಅದಾವುದೋ ಒಂದು ಮಹಾ

ಶಕ್ತಿ ಪ್ರವಹಿಸಿದಂತಾಗಿ ನೂತನೋತ್ಸಾಹವುಂಟಾಯಿತು. ಶ್ರೀವೇದವ್ಯಾಸದೇವರ ಆಜ್ಞೆಯಂತೆ ಗುರುಗಳ ಮನೋಕಾಮನೆಗಳನ್ನು ಪೂರ್ಣಮಾಡಿ ಶ್ರೀಹರಿಸೇವೆ ಮಾಡಲು ಯತಿರಾಜನು ಕೃತಸಂಕಲ್ಪನಾಗಿ ಸಂತೋಷಸಡಗರದಿಂದ ತಾನು ಹಿಂದೆ ಬಂದ ದಾರಿಯಲ್ಲಿಯೇ ಹಿಂದುರುಗಿ ಅಬ್ಬೂರಿನ ಮಠಕ್ಕೆ ಕಾರ್ಯಾಂತರದಿಂದ ಹೊರಗೆ ಹೋಗಿಬಂದವನಂತೆ ಬಂದು ಸೇರಿದನು.[1]

ಇತ್ತ ಬ್ರಹ್ಮಣ್ಯತೀರ್ಥರು ಚಿಂತಾಕ್ರಾಂತನಾಗಿದ್ದ ಯತಿರಾಜನನ್ನು ಕಾಣದೆ ಚಿಂತೆಯಿಂದ ಚಟಪಟಿಸಹತ್ತಿದರು. ಮಠದಲ್ಲೆಲ್ಲಾ ಹುಡುಕಿಸಿದರು. ಊರಿನಲ್ಲಿ ಹುಡುಕಿಕರೆತರಲು ಸೇವಕರನ್ನು ಅಟ್ಟಿದರು. ಮಠದ ಸೇವಕರು ಅಬ್ಬೂರಿನಲ್ಲಿ ಎಲ್ಲ ಕಡೆ ಹುಡುಕಿ ಯತಿರಾಜನನ್ನು ಎಲ್ಲಿಯೂ ಕಾಣದೆ ಆ ವಿಚಾರವನ್ನು ಗುರುಗಳಿಗೆ ತಿಳಿಸಿದರು. ಯತಿರಾಜನು ಎಲ್ಲಿಗೆ ಹೋದನೆಂದು ತಿಳಿಯದೆ ಬ್ರಹ್ಮಣ್ಯತೀರ್ಥರು ವ್ಯಾಕುಲಗೊಂಡು ಅತ್ತಿಂದಿತ್ತ ಶತಪಥ ತಿರುಗಹತ್ತಿದರು.

ಅದೇ ಸಮಯದಲ್ಲಿ ಮಠದ ವಿದ್ಯಾರ್ಥಿಯೊಬ್ಬನು ಧಾವಿಸಿಬಂದು "ಮಹಾಸ್ವಾಮಿ, ಯತಿರಾಜ ಬರುತ್ತಿದ್ದಾನೆ" ಎಂದು ಶ್ರೀಗಳವರಲ್ಲಿ ಅರಿಕೆಮಾಡಿದ. ಅದನ್ನು ಕೇಳಿ ಗುರುಗಳಿಗೆ ಅಮೃತಪ್ರಾಶನ ಮಾಡಿದಂತಾಯಿತು. ಪ್ರಿಯಶಿಷ್ಯನನ್ನು ಕಾಣಲು ತವಕಗೊಂಡು ಹೊರಗೆ ಧಾವಿಸಿ, ಬರುತ್ತಿರುವ ಯತಿರಾಜನನ್ನು ಅವಲೋಕಿಸಿದರು. ಯತಿರಾಜನ ಮುಖವು ಅಲೌಕಿಕ ತೇಜಸ್ಸಿನಿಂದ ಕಂಗೊಳಿಸುತ್ತಿದೆ, ಹರ್ಷಭರಿತನಾಗಿದ್ದಾನೆ. ನಗೆಮುಖದಿಂದ ಉತ್ಸಾಹದಿಂದ ತಮ್ಮತ್ತಲೇ ಧಾವಿಸಿಬರುತ್ತಿರುವ ಯತಿರಾಜನನ್ನು ಬ್ರಹ್ಮಣ್ಯತೀರ್ಥರು ಭರದಿಂದಪ್ಪಿ ತಲೆಯನ್ನು ನೇವರಿಸುತ್ತಾ, "ಮಗು, ಎಲ್ಲಿಗೆ ಹೊರಟುಹೋಗಿದ್ದೆಯಪ್ಪಾ ? ನಿನ್ನನ್ನು ಕಾಣದೆ ನಾವೆಷ್ಟು ಕಳವಳಗೊಂಡಿದ್ದೆವೋ ಗೊತ್ತೇ? ಬಾ ಯತಿರಾಜ" ಎಂದು ಅವನನ್ನು ಮತ್ತೆ ಅಪ್ಪಿದರು.

ಯತಿರಾಜನು ಗುರುಗಳು ತನ್ನಲ್ಲಿಟ್ಟಿರುವ ಪ್ರೀತಿ, ವಾತ್ಸಲ್ಯ, ತಾನು ಕಾಣದಾದಾಗ ಅವರು ಅನುಭವಿಸಿದ ದುಃಖವನ್ನು ಊಹಿಸಿದಾಗ ಅವನ ಕಣ್ಣಿನಲ್ಲಿಯೂ ನೀರು ಮಿಡಿಯಿತು. "ಕ್ಷಮಿಸಿ, ಗುರುದೇವ" ಎಂದು ಹೇಳಿ ಅವರೊಡನೆ ಶ್ರೀಮಠಕ್ಕೆ ಬಂದನು. ಬ್ರಹ್ಮಣ್ಯತೀರ್ಥರು ತಮ್ಮ ಏಕಾಂತ ಮಂದಿರದಲ್ಲಿ ಅವನೊಡನೆ ಕುಳಿತು "ಕುಮಾರ! ನಾವು ಮಧ್ಯಾಹ್ನ ನಿನಗೆ ಹೇಳಿದ ವಿಚಾರದಿಂದ ನಿನ್ನ ಮನಸ್ಸಿಗೆ ನೋವಾಯಿತೇ ? ಬೇಜಾರಾಯಿತೇನಪ್ಪಾ ?" ಎಂದು ಪ್ರಶ್ನಿಸಿದರು.

ಯತಿರಾಜನು "ನನ್ನನ್ನು ಕ್ಷಮಿಸಿ ಗುರುವರ್ಯ, ತಮ್ಮ ವಚನವನ್ನಾಲಿಸಿ ಕಳವಳಗೊಂಡು ಬಾಲ್ಯಚಾಪಲ್ಯದಿಂದ ಹೆದರಿ ಏಕಾಂತವನ್ನರಸಿ ಹೊರಟುಬಿಟ್ಟೆನು.

---

2. ಉತ್ಥಾಯ ಶೀಘ್ರಮುರರೀಕೃತಭಿಕ್ಷುಭಾವಃ ಸಂಪ್ರೃಜ್ಯ ನೇತ್ರಯುಗಲೀಂ ಸಲಿಲೇನ ಕುಂಡ್ಯಾಃ । ಅಭ್ಯಾಗಮತ್ಸವಿನಯೇನ ಗುರೋಸ್ಸಕಾಶಂ । ಕಾರ್ಯಾಂತರಾದಿವ ವಿನಿರ್ಗತ ಏವ ಭೂಯಃ ॥ ಶ್ರೀನಿವಾಸಯೋಗಿಚರಿತೆ ಪುಟ 36.

ಈಗ ನನ್ನ ಮನಸ್ಸು ಸ್ಥಿಮಿತಕ್ಕೆ ಬಂದಿದೆ. ತಮ್ಮ ಆಜ್ಞೆಯಂತೆ ವರ್ತಿಸುತ್ತೇನೆ" ಎಂದು ವಿಜ್ಞಾಪಿಸಿ ತಾನು ಹೊರಟಲಾಗಾಯಿತು ನಡೆದ ಸಮಸ್ತ ವೃತ್ತಾಂತವನ್ನೂ ನಿವೇದಿಸಿದನು.

ಯತಿರಾಜನ ಮಾತನ್ನು ಕೇಳಿ ಬ್ರಹ್ಮಣ್ಯತೀರ್ಥರಿಗೆ ಆಶ್ಚರ್ಯ, ಆನಂದಗಳು ಏಕಕಾಲದಲ್ಲಿ ಉಂಟಾದವು. ಅವರ ಕಣ್ಣಿನಿಂದ ಆನಂದಾಶ್ರು ಹರಿಯಿತು. ಗದ್ಗದ ಕಂಠದಿಂದ "ಕುಮಾರ, ಭಗವಾನ್ ವೇದವ್ಯಾಸರ ದರ್ಶನ ಪಡೆದ ನೀನು ಪರಮ ಧನ್ಯ, ಭಾಗ್ಯಶಾಲಿ ! ನಿನಗೆ ಕರ್ತವ್ಯವನ್ನು ಬೋಧಿಸಿ, ನಮ್ಮ ಮನೋರಥವು ಸಫಲವಾಗುವಂತೆ ಮಾಡಿದ್ದಾರೆ. ನಿಜವಾಗಿ ನಾವಿಬ್ಬರೂ ಪುಣ್ಯಶಾಲಿಗಳು !" ಎಂದು ಹೇಳಿದರು.

ಅಂದು ಸಾಯಂದೀಪಾರಾಧನಾದಿಗಳು ಮುಗಿದ ಮೇಲೆ ಯತಿರಾಜನೊಡನೆ ಅನೇಕ ವಿಷಯಗಳನ್ನು ಚರ್ಚಿಸಿ "ವತ್ಸ, ನಮಗೀಗ ಪರಮಾನಂದವಾಗಿದೆ. ನಮ್ಮ ಬಹುದಿನದ ತಪಸ್ಸು ಇಂದಿಗೆ ಫಲಿಸಿದಂತಾಯಿತು. ಆದಷ್ಟು ಬೇಗ ನಿನಗೆ ಯತ್ಯಾಶ್ರಮವನ್ನು ಕೊಟ್ಟು ನಮ್ಮ ಕರ್ತವ್ಯವನ್ನು ಪೂರೈಸುತ್ತೇವೆ" ಎಂದು ಹೇಳಲು ಯತಿರಾಜನು ವಿನೀತನಾಗಿ "ಮಹದಾಜ್ಞಾ" ಎಂದು ನಿವೇದಿಸಿದನು, ಅನಂತರ ಗುರುಶಿಷ್ಯರು ವಿಶ್ರಾಂತಿಗೆ ತೆರಳಿದರು.

o o o o o

ಇಲ್ಲಿ ಕೆಲ ವಿಚಾರಗಳನ್ನು ವಿವೇಚಿಸುವುದು ಉಚಿತವೆಂದು ಭಾವಿಸುತ್ತೇವೆ.

ಯತಿರಾಜನು ಶ್ರೀ ವೇದವ್ಯಾಸದೇವರ ಅನುಗ್ರಹದಿಂದ ಜ್ಞಾನಪ್ರಸಾರ, ಲೋಕಕಲ್ಯಾಣಗಳಿಗಾಗಿಯೇ ಅವತರಿಸಿದ ಸಾಕ್ಷಾತ್ ಪ್ರಹ್ಲಾದರಾಜ! ಶ್ರೀವಾಯುದೇವರು ಸದಾ ಅವನಲ್ಲಿ ವಿಶೇಷ ಸನ್ನಿಧಾನದಿಂದ ರಾಜಿಸುತ್ತಿರುವುದರಿಂದ ಅವನು ಯುಗಯುಗಗಳಿಂದ ಮಹಾಜ್ಞಾನಿಯಾಗಿದ್ದಾನೆ, ಶ್ರೀ ಬ್ರಹ್ಮಣ್ಯತೀರ್ಥರ ಲಾಲನೆ-ಪೋಷಣೆಯಲ್ಲಿ, ಪವಿತ್ರ ವಾತಾವರಣದಲ್ಲಿ ಬೆಳೆದ ಮಹಾನುಭಾವ. ಇಂಥವನು ಶೋಕ-ಮೋಹ-ಭಯ-ಚಿಂತಾಕುಲಿತನಾಗಿ ಸಾಮಾನ್ಯ ಮಾನವನಂತೆ ಗುರುಗಳಿಗೂ ತಿಳಿಸದೆ ಮಠವನ್ನು ತ್ಯಜಿಸಿ ಹೊರಟುಹೋದುದು, ಸನ್ಯಾಸಿಯಾಗಲು ಹೆದರಿದ್ದು ಸಮಂಜಸವೇ? ಭಾವಿ ಜಗದ್ಗುರುವಾಗಿ ಲೋಕಕಲ್ಯಾಣ ಮಾಡಲಿರುವ ಯತಿರಾಜನ ಭವ್ಯಜೀವನದಲ್ಲಿ ಈ ಪ್ರಕರಣವೊಂದು ಕಳಂಕವಾಗಿ ಉಳಿಯುವುದಿಲ್ಲವೇ ? ಎಂಬ ಸಂದೇಹವುಂಟಾಗುವುದು ಸ್ವಾಭಾವಿಕವಾಗಿದೆ. ಆದುದರಿಂದ ಈ ವಿಚಾರವನ್ನು ಇಲ್ಲಿ ಸ್ವಲ್ಪ ವಿವೇಚಿಸುವುದು ಅಪ್ರಕೃತವಾಗಲಾರದು.

"ಮಾನುಷಂ ಮಾನುಷೋ ಧರ್ಮೋ ದೇವಾ ಅಪಿ ಹಿ ಮಾನುಷೇ ।
ಮನುಷ್ಯವತ್ಪ್ರವರ್ತಂತೇ ನೈವೇಶ್ವರ್ಯ ಪ್ರಕಾಶಿನಃ ॥"— ದೇವತೆಗಳು ಭೂಮಿಯಲ್ಲಿ ಮನುಷ್ಯರಾಗಿ ಅವತರಿಸಿದಾಗ ಮಾನವರಂತೆಯೇ ವರ್ತಿಸುವರು. ತಮ್ಮ

ಧೀಮಂತಿಕೆ ಶ್ರೀಮಂತಿಕೆ ಮುಂತಾದುವನ್ನು ಪ್ರಕಟಗೊಳಿಸುವುದಿಲ್ಲ—ಎಂದು ಪ್ರಮಾಣವಿದೆ.

"ಪ್ರಜಾಯತೇ ಹಿ ಯತ್ಕುಲೇ ಯಥಾಯುಗಂ ಯಥಾವಯಃ। ತಥಾ ಪ್ರವರ್ತನಂ ಭವೇದ್ದಿವೌಕಸಾಂ ಸಮುದ್ಭವೇ॥"—ದೇವತೆಗಳು ಭೂಮಿಯಲ್ಲಿ ಅವತರಿಸಿದಾಗ, ಯಾವ ಯುಗ, ಯಾವರೂಪ, ಯಾವವಯಸ್ಸು, ಯಾವಕುಲದಲ್ಲಿ ಜನಿಸುತ್ತಾರೋ ಅದಕ್ಕೆ ತಕ್ಕಂತೆ ಆಯಾ ಕುಲ,ಯುಗ, ವಯಸ್ಸುಗಳಿಗೆ ಅನುರೂಪವಾಗಿ ನಡೆಯುವುದು ಅವರಿಗೆ ಸ್ವಧರ್ಮವೆಂದೂ, ಅದೇ ತನಗೆ ಪ್ರೀತಿಕರವಾದ ಧರ್ಮವೆಂದೂ ಪರಮಾತ್ಮನ ಅನುಶಾಸನವಿದೆ, ಅಂತೆಯೇ ಲೋಕಶಿಕ್ಷಾರ್ಥವಾಗಿ, ಯಾವ ವಿಧಿ–ನಿಯಮಗಳಿಗೆ ಬದ್ಧನಲ್ಲದೆ,ಸರ್ವಸ್ವತಂತ್ರನೂ ಸರ್ವೋತ್ತಮನೂ ಆಗಿದ್ದರೂ ಶ್ರೀಜನಾರ್ದನನು ಅಧರ್ಮ ಕರ್ಮಗಳನ್ನು ದಹಿಸುವ ಅಗ್ನಿಯಾಗಿದ್ದರೂ,ಯಾದವ ಕುಲದಲ್ಲಿ ಶ್ರೀಕೃಷ್ಣರೂಪದಿಂದ ಅವತರಿಸಿದಾಗ ಅದಕ್ಕೆ ತಕ್ಕಂತೆ ನಟನೆ ಮಾಡಿ ದೇವತೆಗಳಿಗೆ ಮಾರ್ಗದರ್ಶನ ಮಾಡಿದ್ದಾನೆ—ಎಂದು ಶ್ರೀಮಧ್ವಾಚಾರ್ಯರು ಶ್ರೀಮಹಾಭಾರತತಾತ್ಪರ್ಯ ನಿರ್ಣಯದಲ್ಲಿ ಅಪ್ಪಣೆ ಕೊಡಿಸಿದ್ದಾರೆ.

ಇದೂ ಅಲ್ಲದೆ-"ಧರ್ಮೋಹಿ ಸರ್ವವಿದುಷಾಮಪಿ ದೇವತಾನಾಂ। ಪ್ರಾಪ್ತೇ ನರೇಷು ಜನನೇ ನರವತ್ಪ್ರವೃತ್ತಿಃ॥"ಎಂಬ ಪ್ರಮಾಣವು ಜ್ಞಾನಿಗಳಾಗಿ ಎಲ್ಲವನ್ನೂ ಬಲ್ಲವರಾಗಿದ್ದರೂ ದೇವತೆಗಳು ನರಜನ್ಮದಲ್ಲಿ ಜನಿಸಿದಾಗ ಮಾನವರಂತೆಯೇ ನಡೆಯಬೇಕು–ಎಂದು ನಿರೂಪಿಸುವುದು. ಆದುದರಿಂದ ಭಗವಂತನ ಆಜ್ಞೆ,ಮಾರ್ಗದರ್ಶನ. ಮತ್ತು ಮೇಲಿನ ಪ್ರಮಾಣಗಳೂ ಇದನ್ನೇ ಸಮರ್ಥಿಸುವುವು. ಯದ್ಯಪಿ ಯತಿರಾಜನು ಜ್ಞಾನ-ಭಕ್ತಿ-ವೈರಾಗ್ಯ ಪೂರ್ಣನಾದಪ್ರಹ್ಲಾದನಅವತಾರಿಯೇಆಗಿದ್ದರೂ, ತಾನು ಯತಿಯಾಗಿ ಜ್ಞಾನಪ್ರಸಾರದ್ವಾರಾ ಭಗವಂತನನ್ನು ಸೇವಿಸಲೆಂದೇ ಜನಿಸಿದ್ದರೂ, ಜ್ಞಾನಿಯಾದ ಅವನಿಗೆ ಶೋಕ-ಮೋಹ-ಚಿಂತೆ ಭಯಾದಿಗಳಿಲ್ಲದಿದ್ದರೂ ಈಗ ಮಾನವನಾಗಿ ಜನಿಸಿರುವುದರಿಂದ ಇನ್ನೂ ಬಾಲ್ಯಾವಸ್ಥೆಯಲ್ಲಿರುವುದರಿಂದ ಸಾಮಾನ್ಯ ಮಾನವನಂತೆ ವರ್ತಿಸುವುದೇ ಶ್ರೀಹರಿಗೆ ಪ್ರೀತಿಕರವಾದ ಧರ್ಮವೆಂದು ತಿಳಿದು ಸಾಮಾನ್ಯ ಮಾನವ ಬಾಲಕನು ಆ ಸಂದರ್ಭದಲ್ಲಿ ಹೇಗೆ ನಡೆಯಬೇಕಾಗಿದ್ದಿತೋ ಅದರಂತೆ ನಡೆದಿದ್ದಾನೆ. ಆದಕಾರಣ ಮುಂದೆ ಶ್ರೀವ್ಯಾಸರಾಜರಾಗಿ ಜಗನ್ಮಾನ್ಯನಾಗಲಿರುವ ಯತಿರಾಜನು ಸರಿಯಾಗಿಯೇ ವರ್ತಿಸಿರುವುದರಿಂದ ಅವನ ಭವ್ಯ ಜೀವನದಲ್ಲಿ ಯಾವುದೇಬಗೆಯಾದ ಕಳಂಕಾದಿಗಳಿಗೆ ಅವಕಾಶವಿಲ್ಲವೆಂದು ತಿಳಿಯಬೇಕು.

ಶ್ರೀ ವ್ಯಾಸರಾಜರಾಗಲಿರುವ ಯತಿರಾಜ ಮತ್ತು ಅವರ ಮುಂದಿನ ಅವತಾರವಾದ ಶ್ರೀರಾಘವೇಂದ್ರಸ್ವಾಮಿಗಳವರ ಪೂರ್ವಾಶ್ರಮದ ವೆಂಕಟನಾಥರ ಜೀವನದಲ್ಲಿ ಒಂದೇ ಬಗೆಯಾದ ಅನೇಕ ಪ್ರಕರಣಗಳು ಜರುಗಿರುವುದನ್ನು ನಾವು ಮನಗಾಣಬಹುದಾಗಿದೆ. ಪ್ರಕೃತಸಂದರ್ಭಕ್ಕೆ ಸಂಬಂಧಿಸಿದಂತೆ ಒಂದೇ ಬಗೆಯಾಗಿ ಜರುಗಿದ ಪ್ರಕರಣವೊಂದನ್ನು ಇಲ್ಲಿ ನಿರೂಪಿಸುವುದು ಯುಕ್ತವಾಗಿದೆ.

ನಮ್ಮಲ್ಲಿ ಸನ್ಯಾಸ ಸ್ವೀಕರಿಸಲು ಪೂಜ್ಯರಾದವರು, ದೊಡ್ಡವರು ಅಪ್ಪಣೆ ಮಾಡಬೇಕು. ಪೂಜ್ಯರಾದವರ ಆಜ್ಞೆ ಪಡೆದು ಪರಮಹಂಸಾಶ್ರಮವನ್ನು ಸ್ವೀಕರಿಸ ಬೇಕೆಂಬ ಪದ್ಧತಿ. ಸಂಪ್ರದಾಯಗಳಿವೆ.

ಶ್ರೀಬ್ರಹ್ಮಣ್ಯತೀರ್ಥರು "ಯತಿರಾಜ, ನೀನು ಪರಮಹಂಸಾಶ್ರಮವನ್ನು ಸ್ವೀಕರಿಸಿ ನನ್ನ ಶಿಷ್ಯನಾಗಿ ಮಹಾಸಂಸ್ಥಾನಾಧಿಪತಿಯಾಗಬೇಕು"ಎಂದು ಅಪ್ಪಣೆ ಮಾಡಿದರು. ಯತಿರಾಜನಿಗೆ ಕಳವಳವಾಯಿತು. "ಇಲ್ಲಿದ್ದರೆ ಗುರುಗಳು ಸನ್ಯಾಸ ಕೊಡುತ್ತಾರೆ. ನಾನು ಸನ್ಯಾಸಿಯಾಗಲಿಚ್ಛಿಸುವುದಿಲ್ಲ.ಆದ್ದರಿಂದ ಇಲ್ಲಿಂದ ಹೊರಟು ಬಿಡಬೇಕು"ಎಂದು ಯತಿರಾಜನು ಮಠದಿಂದ ಹೊರಟುಬಿಟ್ಟಂತೆ ಭಾಸವಾಗುತ್ತದೆ.

ಬ್ರಹ್ಮಣ್ಯತೀರ್ಥರು ಜ್ಞಾನಿಗಳು, ಪೂಜ್ಯರು. ಅವರು ಸನ್ಯಾಸವನ್ನು ಸ್ವೀಕರಿ ಸುವಂತೆ ಯತಿರಾಜನಿಗೆ ಆಜ್ಞಾಪಿಸಿದರು. ಅದು ಯುಕ್ತವೇ ಆಗಿದೆ, ಹೀಗಿದ್ದರೂ ಯತಿರಾಜ ಏಕೆ ಅವರ ಮಾತಿನಂತೆ ನಡೆಯುವೆ ಮಠವನ್ನು ತ್ಯಜಿಸಿ ಹೊರಟ ? ಎಂಬ ಪ್ರಶ್ನೆಯೇಳುವುದು ಸಹಜವಾಗಿದೆ. ಅದಕ್ಕೆ ಸಮಾಧಾನವನ್ನು ಹೇಳುವುದು ಅವಶ್ಯಕವಾಗಿದೆ.

ಯದ್ಯಪಿ ಶ್ರೀ ಬ್ರಹ್ಮಣ್ಯತೀರ್ಥರು ಪೂಜ್ಯರು, ಸೂರ್ಯಾಂಶಸಂಭೂತರಾದ ಜ್ಞಾನಿಗಳು. ದೊಡ್ಡವರಾದ ಅವರ ಆಜ್ಞೆಯನ್ನು ಮೀರಿ ಯತಿರಾಜನು ಮಠ ವನ್ನು ಬಿಟ್ಟುಹೋದುದು ಸರಿಯಲ್ಲವೆಂದು ಮೇಲ್ನೋಟಕ್ಕೆ ಕಂಡುಬಂದರೂ ಯತಿ ರಾಜನು ಮಠವನ್ನು ಬಿಟ್ಟುಹೋದುದಕ್ಕೆ ಕಾರಣವಿಲ್ಲದಿಲ್ಲ. ಬ್ರಹ್ಮಣ್ಯತೀರ್ಥರು ಸೂರ್ಯಾಂಶಸಂಭೂತರಾದ ಪೂಜ್ಯರಾದರೂ, ಪ್ರಹ್ಲಾದಾಂಶನಾದ ಯತಿರಾಜನಲ್ಲಿ ಸರ್ವದಾ ಸಾಕ್ಷಾತ್ ವಾಯುದೇವರು ವಿರಾಜಿಸಿರುವುದರಿಂದ ಅವನಿಗೆ ಸನ್ಯಾಸವನ್ನು ಸ್ವೀಕರಿಸುವಂತೆ ಶ್ರೀ ವಾಯುದೇವರಕಿಂತ ಶ್ರೇಷ್ಠರಾದವರೇ ಆಜ್ಞೆಮಾಡ ಬೇಕಲ್ಲವೇ? ಸನ್ಯಾಸಿಯಾಗಲೆಂದೇ ಅವತರಿಸಿದ್ದ ಯತಿರಾಜನು ಇದನ್ನು ಬಲ್ಲವ ನಾದ್ದರಿಂದ ಅವನು ಮೇಲ್ನೋಟಕ್ಕೆ ಸಾಮಾನ್ಯ ಮಾನವನಂತೆ ಸನ್ಯಾಸಕ್ಕೆ ಹೆದರಿ ಮಠಬಿಟ್ಟು ಹೊರಟಂತೆ ಕಂಡುಬಂದರೂ ಅವನು ಸನ್ಯಾಸಕ್ಕೆ ಭಗವಂತನ ಆಜ್ಞೆ ಯನ್ನು ಪಡೆಯಲೆಂದೇ ಮಠವನ್ನು ಬಿಟ್ಟುಹೋದನೆಂದು ತಿಳಿಯುವುದೇ ಯುಕ್ತ ವಾಗಿದೆ. ಮುಂದಿನ ಘಟನೆಯೂ ಇದನ್ನು ಸಮರ್ಥಿಸುವುದು. ಯತಿರಾಜನು ಮಠ ಬಿಟ್ಟು ಹೊರಟಮೇಲೆ ವಿಶ್ರಾಂತಿಗಾಗಿ ಮರದ ಬುಡದಲ್ಲಿ ಕುಳಿತಾಗ ಶ್ರೀನಾರಾಯ ಣಾವತಾರಿಗಳಾದ, ಪರಮಹಂಸ ಕುಲಸೇವ್ಯರಾದ ಶ್ರೀವೇದವ್ಯಾಸರು ಅವನಿಗೆ ಮೈದೋರಿ ಅವನ ಅವತಾರ ರಹಸ್ಯವನ್ನು ತಿಳಿಸಿ ಪರಮಹಂಸಾಶ್ರಮವನ್ನು ಸ್ವೀಕರಿಸುವಂತೆ ಆಜ್ಞಾಪಿಸಿದರು. ತಾನು ಮಠದಿಂದ ಹೊರಟ ಉದ್ದಿಶ್ಯ ಸಫಲ ವಾದ್ದರಿಂದ ಯತಿರಾಜನು ಶ್ರೀಮಠಕ್ಕೆ ಮರಳಿ ಬಂದು ಶ್ರೀಬ್ರಹ್ಮಣ್ಯತೀರ್ಥರಲ್ಲಿ ಸನ್ಯಾಸ ಸ್ವೀಕರಿಸಲು ತನ್ನ ಸಮ್ಮತಿಯನ್ನು ತಿಳಿಸಿದನು. ಈ ಪ್ರಕರಣದ ಎಲ್ಲ ಸಂದೇಹಗಳು ಮೇಲಿನ ವಿವರಣೆಯಿಂದ ಪರಿಹಾರವಾಗುವುದೆಂದು ಧೈರ್ಯವಾಗಿ ಹೇಳಬಹುದು

ಇಂತಹುದೇ ಒಂದು ಪ್ರಕರಣವು ಶ್ರೀರಾಘವೇಂದ್ರಸ್ವಾಮಿಗಳ ಜೀವನದಲ್ಲಿಯೂ ಕಂಡುಬರುತ್ತದೆ.

ಜ್ಞಾನಿನಾಯಕರಾದ ಶ್ರೀಸುಧೀಂದ್ರತೀರ್ಥರು ಶ್ರೀಮೂಲರಾಮ-ಶ್ರೀವೇದವ್ಯಾಸದೇವರು ಮತ್ತು ಶ್ರೀಮದಾಚಾರ್ಯರು ಸ್ವಪ್ನದಲ್ಲಿ "ವೆಂಕಟನಾಥನಿಗೆ ಆಶ್ರಮವಿತ್ತು ಶ್ರೀರಾಘವೇಂದ್ರತೀರ್ಥರೆಂದು ನಾಮಕರಣಮಾಡಿ ವೇದಾಂತ ಸಾಮ್ರಾಜ್ಯದಲ್ಲಿ ಪಟ್ಟಾಭಿಷೇಕಮಾಡಬೇಕು" ಎಂದು ಆಜ್ಞಾಪಿಸಿದ್ದಂತೆ ವೆಂಕಟನಾಥಾಚಾರ್ಯರಿಗೆ ಸನ್ಯಾಸ ಸ್ವೀಕರಿಸಿ ನಮ್ಮ ಶಿಷ್ಯರಾಗಬೇಕು ಎಂದು ಆಜ್ಞಾಪಿಸಿದಾಗ ವೆಂಕಟನಾಥರು "ಬಾಲಾ ಭಾರ್ಯಾ ಬಾಲಕೋ ನೋಪನೀತಃ। ಬಾಲಶ್ಚಾಹಂ ನಾಶ್ರಮೇ ಮೇಽಸ್ತಿ ವಾಂಛಾ ॥........ನಿರ್ಬಂಧಶ್ಚೇನ್ನಿರ್ಗಮಿಷ್ಯಾಮಿ ನೂನಂ"—ನನ್ನ ಪತ್ನಿ ಇನ್ನೂ ಸಣ್ಣವಳು,ಮಗನಿಗಿನ್ನೂ ಉಪನಯನ ಮಾಡಿಲ್ಲ, ನಾನಿನ್ನೂ ಬಾಲಕನಾಗಿದ್ದೇನೆ, ನನಗೆ ಸನ್ಯಾಸದಲ್ಲಿ ಇಚ್ಛೆ ಇಲ್ಲ....ನೀವು ಬಲಾತ್ಕರಿಸಿದರೆ ಖಂಡಿತವಾಗಿ ಮಠವನ್ನು ತ್ಯಜಿಸಿ ಹೊರಟುಹೋಗುತ್ತೇನೆ"—ಎಂದು ಸಾಮಾನ್ಯ ಮಾನವರಂತೆ ಹೇಳಿ ಮನೆಗೆ ಹೊರಟುಹೋಗುತ್ತಾರೆ. ಮನೆಗೆ ಹೋದಮೇಲೆ ಅವರಲ್ಲಿ ವೈಚಾರಿಕ ಕ್ರಾಂತಿಯುಂಟಾಗುತ್ತದೆ. ಗುರುಗಳು ಹೇಳಿದ ವಿಚಾರವನ್ನೇ ಯೋಚಿಸುತ್ತಾ ಚಿಂತಾಕ್ರಾಂತರಾಗಿ ಕುಳಿತಿದ್ದಾಗ ಬೆಳಗಿನ ಝಾವ ಸಾಕ್ಷಾತ್ ವಿದ್ಯಾಲಕ್ಷ್ಮಿಯು ಪ್ರತ್ಯಕ್ಷಳಾಗಿ ವೆಂಕಟನಾಥರಿಗೆ ಅವರ ಅವತಾರದ ರಹಸ್ಯವನ್ನು ಉಪದೇಶಿಸಿ, ಪರಮಹಂಸಾಶ್ರಮವನ್ನು ಸ್ವೀಕರಿಸಬೇಕೆಂದು ಆಜ್ಞಾಪಿಸಿ, ತನ್ನ ಮಂತ್ರವನ್ನು ಉಪದೇಶಿಸಿ ಅಂತರ್ಧಾನಹೊಂದುತ್ತಾಳೆ, ಕೂಡಲೇ ವೆಂಕಟನಾಥರ ವರ್ತನೆಯೇ ಬದಲಾಗುತ್ತದೆ. ಅದುವರೆಗೂ ಸನ್ಯಾಸ ಬೇಡವೆಂದು ಹೇಳುತ್ತಿದ್ದ ವೆಂಕಟನಾಥರು ವಿದ್ಯಾದೇವಿಯ ಉಪದೇಶವಾದ ಕೂಡಲೇ ತಾವಾಗಿ ಶ್ರೀಸುಧೀಂದ್ರತೀರ್ಥರಲ್ಲಿಗೆ ಬಂದು ವಾಗ್ದೇವಿಯ ಉಪದೇಶಾದಿಗಳನ್ನು ಅರುಹಿ ಸನ್ಯಾಸವನ್ನು ಸ್ವೀಕರಿಸಲು ಸಮ್ಮತಿ ನೀಡುತ್ತಾರೆ !

ಯತಿರಾಜ-ವೆಂಕಟನಾಥರಿಬ್ಬರೂ ಮೊದಲು ಸನ್ಯಾಸಿಗಳಾಗಲು ಸಮ್ಮತಿಸದೆ ನಂತರ ಶ್ರೀವೇದವ್ಯಾಸದೇವರ ಉಪದೇಶದಿಂದ ಯತಿರಾಜನೂ, ವಿದ್ಯಾಲಕ್ಷ್ಮಿಯ ಉಪದೇಶದಿಂದ ವೆಂಕಟನಾಥರೂ ಪರಮಹಂಸಾಶ್ರಮವನ್ನು ಸ್ವೀಕರಿಸಲು ಒಪ್ಪಿ ಶ್ರೀವ್ಯಾಸತೀರ್ಥ-ಶ್ರೀರಾಘವೇಂದ್ರತೀರ್ಥರಾಗಿ ವೇದಾಂತ ಸಾಮ್ರಾಜ್ಯವನ್ನಾಳಿದ್ದು ಅವರವರ ಚರಿತ್ರೆಗಳಿಂದ ಸ್ಪಷ್ಟವಾಗುವುದು. ಹೀಗೆ ಶ್ರೀವ್ಯಾಸರಾಜ-ರಾಘವೇಂದ್ರ ಅವತಾರಗಳಲ್ಲಿ ಒಂದೇ ಬಗೆಯಾದ ಅನೇಕ ಘಟನೆಗಳು ನಡೆದಿರುವುದು ಚರಿತ್ರೆಗಳಿಂದ ತಿಳಿದುಬರುತ್ತದೆ, ಈ ಒಂದು ಸಂದರ್ಭವು ಇವರಿಬ್ಬರೂ ಶ್ರೀವಾಯುದೇವರ ಸತತ ಸನ್ನಿಧಾನೋಪೇತರಾದ ಭಾಗವತಾಗ್ರೇಸರರಾದ ಶ್ರೀಪ್ರಹ್ಲಾದರಾಜರ ಅವತಾರವೆಂಬುವುದು ದೃಢವಾಗುತ್ತದೆ. ಇದನ್ನು ವಿಚಾರಮಾಡಿದಂತೆಲ್ಲಾ ಸಜ್ಜನರಿಗೆ ಪರಮಾನಂದವುಂಟಾಗುವುದು ಅಚ್ಚರಿಯೇನಲ್ಲ.

## ೧೩. ಸನ್ಯಾಸ-ವೇದಾಂತಸಾಮ್ರಾಜ್ಯಾಭಿಷೇಕ

ಶ್ರೀಶಾಲಿವಾಹನಶಕೆ ೧೩೭೭ನೇ ಶ್ರೀಮುಖ ನಾಮಸಂವತ್ಸರದ (ಕ್ರಿಸ್ತಶಕೆ 1455) ಒಂದು ಮಂಗಳಕರವಾದ ದಿವಸ, ಅಬ್ಬೂರಿನ ಶ್ರೀಮಠದಲ್ಲಿ ಅಪೂರ್ವ ಸಂಭ್ರಮ. ಪಾಷ್ಟಿಕ ಕುಲಭೂಷಣನೂ, ತಮ್ಮ ವಂಶಬಂಧುವೂ ಆದ ಯತಿರಾಜನಿಗೆ ಶ್ರೀಬಹ್ಮಣ್ಯತೀರ್ಥ ಶ್ರೀಪಾದಂಗಳವರು ವೇದಾಂತ ಸಾಮ್ರಾಜ್ಯಾಭಿಷೇಕ ಮಾಡಲಿರುವ ವಿಚಾರ ತಿಳಿದು ಸಹಸ್ರಾರು ಜನ ಶಿಷ್ಯರು, ಭಕ್ತರು, ಧರ್ಮಾಭಿಮಾನಿಗಳು, ಪಂಡಿತರು ಅಬ್ಬೂರಿಗೆ ಬಂದಿದ್ದಾರೆ, ಶ್ರೀಬ್ರಹ್ಮಣ್ಯತೀರ್ಥರ ವಿಶೇಷ ಆಹ್ವಾನದಂತೆ ಯತಿರಾಜನ ತಂದೆ ತಾಯಿಗಳಾದ ರಾಮಾಚಾರ್ಯರು-ಲಕ್ಷ್ಮೀದೇವಿ ಮತ್ತು ಬಾಂಧವರೂ ಬಂದು ಪವಿತ್ರ ಸಮಾರಂಭದಲ್ಲಿ ಭಾಗವಹಿಸಿದ್ದಾರೆ.

ಹಿಂದಿನ ದಿನ ಶ್ರೀಬ್ರಹ್ಮಣ್ಯತೀರ್ಥರು ಸರ್ವಜನರ ಸಮಕ್ಷ ಯತಿರಾಜನನ್ನು ತಮ್ಮ ಉತ್ತರಾಧಿಕಾರಿಯೆಂದು ಘೋಷಿಸಿ ಪರಮಹಂಸಾಶ್ರಮ ಸ್ವೀಕರಿಸಲು ಫಲಮಂತ್ರಾಕ್ಷತೆಯನ್ನು ಕೊಟ್ಟು ಆಶೀರ್ವದಿಸಿದ್ದು, ಶ್ರೀಮಠದ ಪಂಡಿತರು, ಪುರೋಹಿತರು, ವೇದವಿದ್ಯಾವಿಶಾರದರು ಶ್ರೀಗಳವರ ಆಣತಿಯಂತೆ ಸನ್ಯಾಸಸ್ವೀಕಾರಾಂಗವಾದ ಎಲ್ಲ ವೈದಿಕ ವಿಧಿಗಳನ್ನೂ ಹವನ-ಹೋಮಾದಿಗಳನ್ನೂ ಯತಿರಾಜನಿಂದ ಪೂರೈಸಿದ್ದಾರೆ.

ಇಂದು ಯತಿರಾಜರು ವೈದಿಕವಿಧಿ-ಸಂಪ್ರದಾಯಗಳಂತೆ ಪರಮಹಂಸಾಶ್ರಮವನ್ನು ಸ್ವೀಕರಿಸಿ, ಕಾಷಾಯವಸ್ತ್ರ, ದಂಡಕಮಂಡಲು ಧಾರಿಯಾಗಿ ಪಾದುಕೆಗಳನ್ನು ಮೆಟ್ಟಿ ಶ್ರೀಮಠದ ಬಿರುದಾವಳಿಗಳು, ಮಂಗಳವಾದ್ಯ, ವೇದಘೋಷಗಳೊಡನೆ ಶ್ರೀಮಠಕ್ಕೆ ದಯಮಾಡಿಸಿದರು. ಬಾಲಸೂರ್ಯನಂತೆ ತೇಜಸ್ವಿಗಳಾದ ಬಾಲಯತಿಗಳನ್ನು ಕಂಡು ಸರ್ವರ ಕಣ್ಮನಗಳು ಪರಮಾನಂದದಿಂದ ತಣಿದವು. ಆಪಂಡಿತಪಾಮರರು ನೂತನಯತಿಗಳ ಜಯಜಯಕಾರಮಾಡಿದರು.

ಅನಂತರ ಸಂಪ್ರದಾಯಾನುಸಾರವಾಗಿ ಬಾಲಯತಿಗಳು ಶ್ರೀಬ್ರಹ್ಮಣ್ಯತೀರ್ಥರಿಗೆ ಗುರುಪಾದಪೂಜೆಮಾಡಿ ನಮಸ್ಕರಿಸಿದರು. ಶ್ರೀಬ್ರಹ್ಮಣ್ಯಮುನಿಗಳು ಅವರಿಗೆ ಮಂತ್ರ ಮುದ್ರಾಧಾರಣೆ, ಗುರೂಪದೇಶ, ಪ್ರಣವ,ಹಂಸಮಂತ್ರಗಳು ಮತ್ತು ಸಕಲ ಮಹಾಮಂತ್ರಗಳನ್ನೂ ಉಪದೇಶಮಾಡಿ, ಮೊದಲೇ ಸಿದ್ಧಪಡಿಸಲಾಗಿದ್ದ ಅಲಂಕೃತ ಭದ್ರಾಸನದಲ್ಲಿ ನೂತನಯತಿಗಳನ್ನು ಮಂಡಿಸಿ. ಅವರ ಶಿರದಮೇಲೆ ಬಂಗಾರದ ತಟ್ಟೆಯಲ್ಲಿ ಶಾಲಿಗ್ರಾಮ, ಶ್ರೀರಾಮ-ಕೃಷ್ಣ-ವೇದವ್ಯಾಸ ಪ್ರತಿಮೆಗಳನ್ನಿಟ್ಟು ಪಂಚಾಮೃತಾಭಿಷೇಕಮಾಡಿ, ತರುವಾಯ ಪವಿತ್ರತೀರ್ಥಗಳಿಂದ ತರಿಸಿದ ಶುದ್ಧೋದಕ, ಮುತ್ತು-ನವರತ್ನಗಳನ್ನು ಶಂಖಗಳಲ್ಲಿ ತುಂಬಿ,ಮಂಗಳವಾದ್ಯಗಳು ಭೋರ್ಗರೆಯುತ್ತಿರಲು, ವೇದಘೋಷವಾಗುತ್ತಿರಲು. ಸಕಲಸಜ್ಜನರು ಹರ್ಷಧ್ವನಿಗೈಯ್ಯುತ್ತಿ

ರಲು ಶಾಲಿವಾಹನಶಕೆ ೧೩೭೫ನೇ ಶ್ರೀಮುಖಸಂವತ್ಸರದ ಶುಭದಿನದಂದು ಶ್ರೀ ಬ್ರಹ್ಮಣ್ಯತೀರ್ಥರು ತಮ್ಮ ಪ್ರಿಯಶಿಷ್ಯರಿಗೆ ಶ್ರೀಮದಾಚಾರ್ಯರ ವೇದಾಂತ ಸಾಮ್ರಾಜ್ಯ ಪಟ್ಟಾಭಿಷೇಕವನ್ನು ನೆರವೇರಿಸಿ, ಅವರಿಗೆ, ಶ್ರೀವೇದವ್ಯಾಸದೇವರು ತಮ್ಮ ಹೆಸರನ್ನೇ ಇಡಬೇಕೆಂದು ಆಜ್ಞಾಪಿಸಿದ್ದಂತೆ ಶ್ರೀವೇದವ್ಯಾಸದೇವರೇ ಪ್ರಭು ವಾಗುಳ್ಳವರು (ಶ್ರೀವ್ಯಾಸ ಏವ ರಾಜೋ ಯಸ್ಯ ಸಃ-ಶ್ರೀವ್ಯಾಸರಾಜಃ) ಎಂಬರ್ಥ ಸೂಚಕವಾದ "ಶ್ರೀವ್ಯಾಸರಾಜತೀರ್ಥರು"ಎಂದು ನಾಮಕರಣಮಾಡಿ ಆಶೀರ್ವದಿ ಸಿದರು.[1]

ಉದಯಕಾಲೀನನಾದ, ಹೊಂಗಿರಣಗಳಿಂದ ಕಂಗೊಳಿಸುವ ಸೂರ್ಯನಂತೆ ವಿಲ ಕ್ಷಣತೇಜಸ್ವಿಗಳಾಗಿ ಅಪೂರ್ವಕಾಂತಿಯಿಂದ ಬೆಳಗುತ್ತಿರುವ ವಿದ್ಯಾಸಿಂಹಾಸನಸ್ಥರಾದ ಶ್ರೀವ್ಯಾಸತೀರ್ಥರನ್ನು ಕಂಡು ಸಹಸ್ರಾರುಜನ ಧರ್ಮಾಭಿಮಾನಿಗಳು ಹರ್ಷಪುಳಕಿತ ಗಾತ್ರರಾಗಿ "ಶ್ರೀವ್ಯಾಸತೀರ್ಥರಿಗೆ ಜಯವಾಗಲಿ, ಶ್ರೀಮದಾಚಾರ್ಯ ಮಹಾ ಸಂಸ್ಥಾನಾಧೀಶರಿಗೆ ಜಯವಾಗಲಿ" ಎಂದು ಜಯಘೋಷಮಾಡಿದರು.

ಶ್ರೀಬ್ರಹ್ಮಣ್ಯತೀರ್ಥರು ಶ್ರೀವ್ಯಾಸತೀರ್ಥರಿಗೆ ವೇದಾಂತ ಸಾಮ್ರಾಜ್ಯಾಧಿ ಪತಿತ್ವದ್ಯೋತಕವಾದ ಛತ್ರ, ಚಾಮರ, ಆಂದೋಳಿಕಾ, ಶಾಸ್ತ್ರಗ್ರಂಥಗಳು. ಮತ್ತಿ ತರ ಬಿರುದಾವಳಿಗಳು, ತಾಳಸ್ತುತಿ ಪಾಠಕರು, ವಾದ್ಯವೈಭವಾದಿಗಳನ್ನು ಕೊಟ್ಟು ಆಶೀರ್ವದಿಸಿದರು. ಆಗ ಶ್ರೀಮಠದ ವಂದಿ-ಮಾಗಧರು ಮಹಾಸಂಸ್ಥಾನದ ಬಿರು ದಾವಳಿಗಳನ್ನು ಘೋಷಿಸಿ ಪರಾಕು ಹೇಳಿದರು. ತರುವಾಯ ವಿಶೇಷ ಆಹ್ವಾನದಿಂದ ಆಗಮಿಸಿದ್ದ ಆಚಾರ್ಯರ ವಿವಿಧ ಮಠಗಳ ಪ್ರತಿನಿಧಿಗಳು, ಶ್ರೀಮಠದ ಪ್ರಮುಖ ಶಿಷ್ಯರು, ಆತ್ಮೀಯರು, ಅಭಿಮಾನಿಗಳು, ಭಕ್ತರು ಧಾರ್ಮಿಕರುಗಳು ನೂತನ ಜಗದ್ಗುರುಗಳಿಗೆ ಕಾಣಿಕೆಗಳನ್ನು ಸಮರ್ಪಿಸಿದರು. ಆ ಸಂಭ್ರಮ, ವೈಭವ, ಜನರ ಸಂತೋಷ ಅವರ್ಣನೀಯ ! ಆ ಪರಮಪಾವನಕರ ದೃಶ್ಯವನ್ನು ನೋಡಿ ಆನಂದಿ ಸಿದ ಸುಜನರೇ ಭಾಗ್ಯಶಾಲಿಗಳು.

ಅಂದು ಶ್ರೀಬ್ರಹ್ಮಣ್ಯತೀರ್ಥರ ಅಪ್ಪಣೆಯಂತೆ ಅವರ ಮಾರ್ಗದರ್ಶನದಲ್ಲಿ ಶ್ರೀಸರ್ವಜ್ಞರ ಮಹಾಸಂಸ್ಥಾನವಾದ ಶ್ರೀರಾಜೇಂದ್ರತೀರ್ಥರ ವಿದ್ಯಾಮಠದ ಆರಾಧ್ಯಪ್ರತಿಮೆಗಳಾದ ಶ್ರೀಪಟ್ಟಾಭಿರಾಮ, ಶ್ರೀಮೂಲಗೋಪಾಲಕೃಷ್ಣ-ವೇದ ವ್ಯಾಸದೇವರ (ವ್ಯಾಸಮುಷ್ಟಿ) ಪೂಜಾರಾಧನೆಯನ್ನು ನೂತನಪೀಠಾಧೀಶರಾದ ಶ್ರೀವ್ಯಾಸರಾಜಯತಿವರರೇ ಬಹುವರ್ಷಗಳಿಂದ ಪೂಜೆಮಾಡಿ ಪರಿಣತರಾದವರಂತೆ ಭಕ್ತಿಶ್ರದ್ಧೆಗಳಿಂದ ವೈಭವಪೂರ್ವಕವಾಗಿ ನೆರವೇರಿಸಿದರು. ಆ ವೈಭವವನ್ನು ಕಂಡು

---

1. "ತುರ್ಯಾಶ್ರಮಂ ಶ್ರೀಮುಖೇ । ಜಗ್ರಾಹಾಥ ಯತೀಶಿತುರ್ವಚನತೋ ಬ್ರಹ್ಮಣ್ಯ ನಾಮ್ನೋ ಗುರೋಃ। ಶ್ರೀವಿದ್ಯಾರತ್ನಾಕರರು.

2. ...ಚ ಸಪ್ತಮೇ । ಸನ್ಯಾಸಭಾಗಿನಂ ತೋಷಾದ್ವ್ಯಾಸನಾಮಾನಮಾತನೋತ್ ॥ —ಶ್ರೀಬ್ರಹ್ಮಣ್ಯತೀರ್ಥವಿಜಯ.

ಸಹಸ್ರಾರುಜನ ಧರ್ಮಾಭಿಮಾನಿಗಳು ವಿಸ್ಮಯಾನಂದ ತುಂದಿಲರಾಗಿ ನೂತನ ಗುರುವರರನ್ನು ಕೊಂಡಾಡಿದರು.

ಮಧ್ಯಾಹ್ನ ಸಾವಿರಾರುಜನ ಬ್ರಾಹ್ಮಣ ಸುವಾಸಿನಿಯರಿಗೆ ಗುರುಗಳು ತೀರ್ಥ ಪ್ರಸಾದಗಳನ್ನು ಕರುಣಿಸಿದಮೇಲೆ ಮೃಷ್ಟಾನ್ನಭೋಜನವೂ, ರಾತ್ರಿ ದೀಪಾರಾಧನೆ ಫಲಮಂತ್ರಾಕ್ಷತಾ ಪ್ರದಾನ, ಪಂಡಿತರ ಉಪನ್ಯಾಸ, ಉಭಯ ಗುರುಗಳ ಉಪದೇಶ ಭಾಷಣಗಳಾಗಿ ವೇದಾಂತಸಾಮ್ರಾಜ್ಯಾಭಿಷೇಕ ಮಹೋತ್ಸವವು ವೈಭವ ಸಂಭ್ರಮ ಗಳೊಡನೆ ಪೂರ್ಣವಾಯಿತು. ಈ ಎಲ್ಲ ಸಮಾರಂಭಗಳಲ್ಲಿ ಪಾಲ್ಗೊಂಡು ನೂತನ ಯತಿಗಳ ಪೂರ್ವಾಶ್ರಮ ತಂದೆ-ತಾಯಿಗಳಾದ ರಾಮಾಚಾರ್ಯ-ಲಕ್ಷ್ಮೀದೇವಿ-ಬಂಧುಬಾಂಧವರು ಹರ್ಷಪುಳಕಿತಗಾತ್ರರಾಗಿ ಆ ಅಭೂತಪೂರ್ವ ಚಾರಿತ್ರಿಕ ಸಮಾರಂಭದಲ್ಲಿ ಭಾಗವಹಿಸಿದ ತಮ್ಮ ಜೀವನವು ಸಾರ್ಥಕವಾಯಿತೆಂದು ಭಾವಿಸಿದರು.

ಮಾರನೆಯದಿನದಿಂದ ಶ್ರೀಬ್ರಹ್ಮಣ್ಯತೀರ್ಥರ ಮಾರ್ಗದರ್ಶನದಲ್ಲಿ ಶ್ರೀವ್ಯಾಸ ತೀರ್ಥರು ಯತ್ಯಾಶ್ರಮಧರ್ಮಗಳನ್ನು ಶ್ರದ್ಧಾದರಗಳಿಂದ ನೆರವೇರಿಸಹತ್ತಿದರು. ಬ್ರಹ್ಮಣ್ಯತೀರ್ಥರು ಪ್ರಿಯ ವಟುಕುಮಾರಕರಿಗೆ ಪ್ರತಿದಿವಸ ವೇದಾಂತಾದಿ ಶಾಸ್ತ್ರ ಗ್ರಂಥಗಳ ಪಾಠವನ್ನು ಪ್ರಾರಂಭಿಸಿದರು.

ವ್ಯಾಸತೀರ್ಥರಿಗೆ ಮಧ್ವಸಿದ್ಧಾಂತಸಾರವನ್ನು ಪರಿಚಯಮಾಡಿಕೊಡುವ ಆಶಯದಿಂದ ಶ್ರೀಬ್ರಹ್ಮಣ್ಯತೀರ್ಥರು ಅವರಿಗೆ ಪ್ರಕರಣಗಳು, ಸೂತ್ರಭಾಷ್ಯ ಉಪನಿಷದ್ಭಾಷ್ಯಗಳ ಪಾಠವನ್ನು ಪ್ರಾರಂಭಿಸಿದರು. ಅವ್ಯಾಹತವಾಗಿ ವ್ಯಾಸ ತೀರ್ಥರ ಅಧ್ಯಯನ ಸಾಗಿತು. ಇದರಿಂದ ಶ್ರೀವ್ಯಾಸತೀರ್ಥರಿಗೆ ದ್ವೈತಸಿದ್ಧಾಂತದ ಪ್ರಮುಖತತ್ವಗಳು, ಅದರ ರೂಪರೇಷೆಗಳ ಪರಿಚಯವಾದಂತಾಯಿತು. ಬ್ರಹ್ಮಣ್ಯ ತೀರ್ಥರು ಶಿಷ್ಯರಿಗೆ ವಿದ್ಯಾರ್ಜನೆಯಲ್ಲಿರುವ ಶ್ರದ್ಧೆ, ಗ್ರಹಣಶಕ್ತಿ, ಪ್ರತಿಭೆಗಳನ್ನು ಕಂಡು ಶ್ರೀವ್ಯಾಸತೀರ್ಥರಿಗೆ ಸಮಗ್ರವೇದಾಂತವ ಶಾಸ್ತ್ರಗಳನ್ನು ಸಕ್ರಮವಾಗಿ ಅಧ್ಯಯನ ಮಾಡಲು ಸಮರ್ಥರಾಗಿದ್ದಾರೆಂದು ಅರಿತು ಆನಂದಿಸಿದರು.

ಇಂತು ಒಂದೆರಡುವರ್ಷಗಳ ಕಾಲ ಶ್ರೀವ್ಯಾಸತೀರ್ಥರು ಪ್ರತಿದಿನ ಸ್ನಾನ, ಆಹ್ನಿಕ ಜಪತಪಾದ್ಯನುಷ್ಠಾನ, ಪೂಜಾರಾಧನೆ, ಗುರುಶುಶ್ರೂಷಾ, ಸತತಾಧ್ಯಯನ, ಚಿಂತನ, ಬರುವ ಶಿಷ್ಯಭಕ್ತರೊಡನೆ ಮಾತುಕಥೆ, ಪಂಡಿತವರ್ಗದೊಡನೆ ತಾತ್ವಿಕ ವಿಚಾರವಿನಿಮಯಗಳನ್ನು ಮಾಡುತ್ತಾ, ಗುರುಗಳಿಂದ- ಅನೂಚಾನಾಗತ ಮಹಾ ಸಂಸ್ಥಾನದ ಸಂಪ್ರದಾಯ, ಪದ್ಧತಿಗಳ ಉಪದೇಶ ಪಡೆಯುತ್ತಾ ತಮ್ಮ ಚಟುವಟಿಕೆ ಕಾರ್ಯದಕ್ಷತೆ ವಿದ್ಯೆ, ಪ್ರತಿಭೆ, ತೇಜಸ್ಸು, ಕಾಂತಿಗಳಿಂದ ಸರ್ವರ ಗೌರವಾದರ ಗಳಿಗೂ ಗುರುಗಳ ವಿಶೇಷಾನುಗ್ರಹಕ್ಕೂ ಪಾತ್ರರಾದರು.

## ೧೪. ಅಶ್ರುತಪ್ರತಿಭೆ

ಒಂದು ದಿನ ಮಧ್ಯಾಹ್ನ ಗುರುಶಿಷ್ಯರು ಪಾಠಮುಗಿದ ಮೇಲೆ ಶ್ರೀಮಠದ ಪಂಡಿತರು, ವಿದ್ಯಾರ್ಥಿಗಳೊಡನೆ ಅಂದಿನ ಪಾಠದ ವಿಚಾರವಾಗಿ ಮಾತನಾಡುತ್ತಾ

ಕುಳಿತಿದ್ದಾರೆ. ಆಗ ಶ್ರೀಮಠದ ಪಂಡಿತರೊಬ್ಬರು "ಮಹಾಸ್ವಾಮಿ, ನಮ್ಮ ದ್ವೈತಸಿದ್ಧಾಂತವು ಜ್ಞಾನಿನಾಯಕರಾದ ಶ್ರೀಪದ್ಮನಾಭತೀರ್ಥರೇ ಮೊದಲಾದವರಿಂದ ಬೆಳೆದು, ಇಂದ್ರಾಂಶರಾದ ಶ್ರೀಟೀಕಾಕೃತ್ಪಾದರ ಟೀಕೆಗಳಿಂದ ಚೆನ್ನಾಗಿ ಸಂವರ್ಧಿಸಲ್ಪಟ್ಟು, ಶ್ರೀರಾಜೇಂದ್ರ-ಶ್ರೀಕವೀಂದ್ರ- ಶ್ರೀರಾಮಚಂದ್ರತೀರ್ಥರಿಂದ ಪ್ರಸಾರಗೊಂಡು ಈಗ ಮಾನನೀಯರಾದ ಶ್ರೀವಿಬುಧೇಂದ್ರತೀರ್ಥ—ಶ್ರೀಲಕ್ಷ್ಮೀ ನಾರಾಯಣ ಮುನಿವರ್ಯರಿಂದ ಪರಮತನಿರಾಕರಣಪೂರ್ವಕವಾಗಿ ಬೆಡಗುಗೊಂಡು ಎಲ್ಲೆಡೆ ಮೆರೆಯುವಂತಾಗಿದೆ. ಇದು ನಮ್ಮ ಸುದೈವ" ಎಂದು ಬ್ರಹ್ಮಣ್ಯತೀರ್ಥರಲ್ಲಿ ವಿಜ್ಞಾಪಿಸಿದರು.

ಬ್ರಹ್ಮಣ್ಯತೀರ್ಥರು "ನಿಜ, ಪಂಡಿತರೇ, ಆದರೆ ಇಂತಹ ಜ್ಞಾನಿಗಳೆಲ್ಲರೂ ನಮ್ಮ ಸಿದ್ಧಾಂತವನ್ನು ಪೋಷಿಸಿಕೊಂಡು ಬಂದಿದ್ದಾರೆ. ಅವರಲ್ಲಿ ಯಾರಾದರೂ ನಮ್ಮ ಪರಮಸಿದ್ಧಾಂತ ಪ್ರಮೇಯವನ್ನು ಒಂದೆಡೆಸೇರಿಸಿ ನಿರೂಪಿಸುವ ಸಾಹಿತ್ಯ ರಚಿಸಿದ್ದರೆ ಸಜ್ಜನರಿಗೆ ಬಹಳ ಉಪಕಾರವಾಗುತ್ತಿತ್ತು. ಆವೊಂದು ಕಾರ್ಯ ಯಾವ ಮಹನೀಯರು ಮಾಡುವರೋ ತಿಳಿಯದು. ಹಾಗಾದಲ್ಲಿ ಅದರಿಂದ ದ್ವೈತಸಿದ್ಧಾಂತ ಪ್ರಮೇಯಗಳು ತತ್‌ಕ್ಷಣವೇ ಸಾಮಾನ್ಯರೀತಿಯಲ್ಲಾದರೂ ಅಪಂಡಿತಪಾಮರಿಗೂ ತಿಳಿಯುವಂತಾಗಿ ಮಹೋಪಕಾರವಾಗುವುದು. ಮಾತ್ರವಲ್ಲ, ಅಂತಹ ಸಾಹಿತ್ಯವು ಸಾರ್ವಕಾಲಿಕವಾಗಿ ರಾಜಿಸಿ ಜನರಿಗೆ ಸಿದ್ಧಾಂತ ಪ್ರಮೇಯಗಳನ್ನು ರಘಟಿತಿ ತಿಳಿಸಿ ಕೊಟ್ಟು. ಸಿದ್ಧಾಂತವು ಹೆಚ್ಚು ಪ್ರಸಾರವಾಗುವುದು" ಎಂದರು.

ಅದುವರೆಗೆ ಸುಮ್ಮನೆ ಕುಳಿತಿದ್ದ ಶ್ರೀವ್ಯಾಸರಾಜರು ಉತ್ಸಾಹಿತರಾಗಿ ಗುರುಗಳಿಗೆ ನಮಸ್ಕರಿಸಿ "ಪೂಜ್ಯ ಗುರುವರ್ಯರೇ ! ತಮ್ಮ ವಚನವನ್ನಾಲಿಸಿ ನನಗೆ ಸ್ಫೂರ್ತಿ ಬಂದಂತಾಗಿದೆ. ನೀವು ಹೇಳಿದ ಸಾಹಿತ್ಯರಚನೆಮಾಡುವಂತೆ ಪ್ರೇರಣೆಯಾಗುತ್ತಿದೆ. ಅಪ್ಪಣೆಯಾದರೆ ವಿಜ್ಞಾಪಿಸುತ್ತೇನೆ" ಎಂದರು.

ಬಾಲಯತಿಗಳ ಮಾತುಕೇಳಿ ಶ್ರೀಗಳವರು ಪಂಡಿತರು ಅಚ್ಚರಿಗೊಂಡರು. ಬ್ರಹ್ಮಣ್ಯತೀರ್ಥರು ಅವರ ಮುಖವನ್ನು ನೋಡಿದರು. ಅಲ್ಲಿ ಅವರಿಗೆ ವಿಲಕ್ಷಣ ತೇಜಸ್ಸು ಕಾಂತಿಗಳು ಬೆಳಗುತ್ತಿರುವುದು ಗೋಚರಿಸಿತು. ಮನದಲ್ಲಿ ಏನೋ ಹೊಳೆದಂತಾಯಿತು. ಸಂತೋಷದಿಂದ ನಗುತ್ತಾ "ಪ್ರಿಯಶಿಷ್ಯರೇ, ಸಂತೋಷ" ಎಂದರು. ಆಗ 8 ವಯಸ್ಸಿನ ಬಾಲಯತಿಗಳ ಮುಖಾರವಿಂದದಿಂದ ದ್ವೈತಸಿದ್ಧಾಂತ ಪ್ರಮೇಯಸಾರಭೂತವಾದ ಅಪೂರ್ವಶ್ಲೋಕವೊಂದು ಹೊರಹೊಮ್ಮಿತು !

**ಶ್ರೀಮನ್ಮಧ್ವಮತೇ ಹರಿಃ ಪರತರಃ ಸತ್ಯಂ ಜಗತ್ತತ್ತ್ವತೋ**
**ಭೇದೋ ಜೀವಗಣಾ ಹರೇರನುಚರಾಃ ನೀಚೋಚ್ಚಭಾವಂಗತಾಃ ।**
**ಮುಕ್ತಿರ್ನೈಜಸುಖಾನುಭೂತಿರಮಲಾ ಭಕ್ತಿಶ್ಚ ತತ್ಸಾಧನಮ್**
**ಹ್ಯಕ್ಷಾದಿತ್ರಿತಯಂ ಪ್ರಮಾಣಮಖಿಲಾಮ್ನಾಯೈಕವೇದ್ಯೋ ಹರಿಃ ॥**

ಬಾಲಯತಿಗಳ ಮುಖದಿಂದ ಹೊರಹೊರಟ, ದ್ವೈತಸಿದ್ಧಾಂತ ಪ್ರಮೇಯ ನವರತ್ನಮಾಲಾ ರೂಪವಾದ ಆಶುಕವಿತೆಯನ್ನು ಆಲಿಸಿ, ಶ್ರೀಪಾದಂಗಳವರು, ಪಂಡಿತರು ಅಶ್ರುತಪ್ರತಿಭೆಯನ್ನು ತೋರಿದ ಶ್ರೀವ್ಯಾಸತೀರ್ಥರು ದೇವಾಂಶ ಸಂಭೂತರಾದ ಮಹನೀಯರೆಂದು ಸಂತೋಷಿಸಿ ಅವರನ್ನು ಶ್ಲಾಘಿಸಿದರು.[1]

ಶ್ರೀವ್ಯಾಸತೀರ್ಥರ ನಡೆನುಡಿ, ಆಚಾರ, ಭಗವದ್ಭಕ್ತಿ, ಸತ್ತತ್ತ್ವನಿಷ್ಠೆ, ಭಾವುಕತನ, ಸ್ಥೈರ್ಯ, ಶೀಲಾದಿಗಳನ್ನು ಕಂಡಾಗ ಅನೇಕವೇಳೆ ಬ್ರಹ್ಮಣ್ಯ ತೀರ್ಥರಿಗೆ ಶ್ರೀ ಪ್ರಹ್ಲಾದರಾಜರನ್ನು ನೆನಪಿಗೆ ತರುತ್ತಿದ್ದವು. ಈಗ ಅವರು ತೋರಿದ ಅಶ್ರುತಪೂರ್ವಪ್ರತಿಭೆಯನ್ನು ಕಂಡು ಶ್ರೀವೇದವ್ಯಾಸದೇವರು ಅಪ್ಪಣೆ ಕೊಡಿಸಿದ್ದಂತೆ ಇವರು ಶ್ರೀಪ್ರಹ್ಲಾದರಾಜರ ಅವತಾರಿಗಳೇ ಎಂಬುದು ಮತ್ತಷ್ಟು ದೃಢವಾಗಿ ಪರಮಾನಂದವಾಯಿತು.

---

1 "ಅಶ್ರುತಪ್ರತಿಭಾ ಯಸ್ಯ ಪ್ರತಿಸ್ಮೃತ್ಯವಿರೋಧಿನೀ ।
ವಿಸ್ಮೃತಂ ನರಜಾತಂ ಚ ತಂ ವಿದ್ಯಾದ್ದೇವಸತ್ತಮಮ್ ॥" ಎಂಬ ಪ್ರಮಾಣವು ಇದು ವರೆಗೆ ಕೇಳರಿಯದ (ಅಶ್ರುತ) ಪ್ರತಿಭೆಯನ್ನು ತೋರಿದವರು ಮಾನವರಾಗಿ ಜನಿಸಿದ್ದರೂ ಅಂಥ ವರನ್ನು ಶ್ರೇಷ್ಠದೇವತೆಗಳೆಂದು ತಿಳಿಯಬೇಕೆಂದು ಸಾರುವುದು. ಎಂಟುವರ್ಷದ ಬಾಲಕರಾದ ವ್ಯಾಸತೀರ್ಥರು "ಶ್ರೀಮನ್ಮಧ್ವಮತೇ" ಎಂಬ ಪದ್ಯವನ್ನು ರಚಿಸುವ ಮೂಲಕ ಅಶ್ರುತಪ್ರತಿಭೆ ಯನ್ನು ಪ್ರದರ್ಶಿಸಿರುವುದರಿಂದ ಅವರು ಉತ್ತಮದೇವತೆಗಳೆಂಬುದು ಸ್ಪಷ್ಟವಾಗುವುದು. ಮತ್ತು ಶ್ರೀಪ್ರಹ್ಲಾದರಾಜರ ಅವರೆಂದು ದೃಢವಾಗುವುದು. ಕೆಳಗಿನ ವಿವರಣೆಯಿಂದ, ಮೂರು ಅವತಾರ ಗಳಲ್ಲಿಯೂ ಅವರು ಹೀಗೆ ಅಶ್ರುತಪ್ರತಿಭೆಯನ್ನು ಪ್ರದರ್ಶಿಸುವುದರಿಂದ ಶ್ರೀಪ್ರಹ್ಲಾದ-ವ್ಯಾಸ ರಾಜ ರಾಘವೇಂದ್ರರು ಒಬ್ಬರೇ ಎಂಬುದು ಮನದಟ್ಟಾಗುವುದು !

೫ ವರ್ಷಬಾಲಕರಾಗಿದ್ದಾಗ ಪ್ರಹ್ಲಾದರು ದೈತ್ಯಬಾಲಕರಿಗೆ ಮಾಡಿದ ಉಪದೇಶ, ತಂದೆಯ ಪ್ರಶ್ನೆಗೆ "ವನಂಗತೋಯದ್ಧರಿ ಮಾಶ್ರಯೇತ" ಎಂದಾಗಿ ಹೇಳಿ ಅಶ್ರುತಪ್ರತಿಭೆ ತೋರಿರುವುದು ಭಾಗವತಾದಿಗಳಿಂದ ತಿಳಿದುಬರುತ್ತದೆ. ಎಂಟುವರ್ಷದ ಬಾಲಯತಿಗಳಾದ ವ್ಯಾಸತೀರ್ಥರು "ಶ್ರೀಮನ್ಮಧ್ವಮತೇ" ಎಂಬ ಆಶುಕವಿತೆಯನ್ನು ರಚಿಸಿ ಅಶ್ರುತಪ್ರತಿಭೆಯನ್ನು ತೋರಿರುವರು. ಇದರಂತೆ ಮುಂದೆ ಶ್ರೀರಾಘವೇಂದ್ರಾವತಾರದಲ್ಲೂ ಮೂರುವರ್ಷದ ಬಾಲಕರಾಗಿರುವಾಗ ವೆಂಕಟನಾಥರು ಅಕ್ಷರಾಭ್ಯಾಸಕಾಲದಲ್ಲಿ ತಿಮ್ಮಣ್ಣಾಚಾರ್ಯರು ಮರಳಿನಲ್ಲಿ ಓಂಕಾರ ಬರೆದು ಇವನ್ನು ಓಂ ಎಂದು ಹೇಳುತ್ತಾ ತಿದ್ದು ಎಂದು ಹೇಳಿದಾಗ "ಅಲ್ಪೇ ಕಥಂ ಸಾ ಗುಣಪೂರ್ಣ ಸಂಜ್ಞಾ ?" ಅಲ್ಪರೇಖೆಯ ಈ ಓಂಕಾರವು ಶ್ರೀಹರಿಯ ಅನಂತಕಲ್ಯಾಣಗುಣಪೂರ್ಣತ್ವವನ್ನು ಎಂತು ಬೋಧಿಸುವುದು ? ಎಂದು ಪ್ರಶ್ನಿಸಿ ಓಂಕಾರಾರ್ಥವನ್ನು ವಿವರಿಸಿ ಅಶ್ರುತಪ್ರತಿಭೆ ತೋರಿಸುವುದು ಶ್ರೀರಾಘವೇಂದ್ರವಿಜಯದಿಂದ ತಿಳಿದುಬರುತ್ತದೆ. ಹೀಗೆ ಪ್ರಹ್ಲಾದ–ವ್ಯಾಸರಾಜ ರಾಘವೇಂದ್ರಾವತಾರಗಳಲ್ಲಿ ಅಶ್ರುತಪ್ರತಿಭೆಯನ್ನು ತೋರಿರುವುದರಿಂದಲೂ, ಒಂದೇ ಬಗೆಯಾದ ಅನೇಕ ಘಟನೆಗಳು ಮೂರವತಾರದಲ್ಲಿ ಕಂಡುಬರುವುದರಿಂದಲೂ ಪ್ರಹ್ಲಾದ-ವ್ಯಾಸರಾಜ– ರಾಘವೇಂದ್ರರು ಒಂದೇ ದೇವತೆಯ ಅವತಾರವೆಂದು ದೃಢವಾಗಿ ಸುಜನರಿಗೆ ಭಕ್ತರಿಗೆ ಪರಮಾನಂದವಾಗುವುದು——

——ಗ್ರಂಥಕರ್ತ

ಆಗ ಅಲ್ಲಿ ಉಪಸ್ಥಿತರಾಗಿದ್ದ ಶ್ರೀಮಠದ ಹಿರಿಯ ಪಂಡಿತರೊಬ್ಬರು "ಗುರುದೇವ ! ಪೂಜ್ಯ ಕಿರಿಯ ಶ್ರೀಪಾದಂಗಳವರ ಈ ಅಪೂರ್ವ ಕವಿತೆಯು ಅಸಾಧಾರಣವಾಗಿದೆ. ಶ್ರೀಯವರು ಅಭಿಪ್ರಾಯಪಟ್ಟಂತೆ ಶ್ರೀಮಧ್ವಮತದ ಪರಮ ಪ್ರಮೇಯಗಳ ಸಾರವೇ ಇದಾಗಿದೆ. ಇದಕ್ಕೆ ನನಗೆ ತೋರಿದ ಅರ್ಥವನ್ನು ನಾನು ಉಭಯ ಗುರುಗಳ ಮುಂದೆ ವಿಜ್ಞಾಪಿಸಲು ಆಶಿಸಿದ್ದೇನೆ. ಈ ಭಾಗ್ಯವನ್ನು ನನಗೆ ದಯಪಾಲಿಸಬೇಕಾಗಿ ಕಿರಿಯ ಶ್ರೀಪಾದಂಗಳವರನ್ನು ಪ್ರಾರ್ಥಿಸುತ್ತೇನೆ" ಎಂದರು.

ಶ್ರೀವ್ಯಾಸತೀರ್ಥರು ಮಂದಹಾಸಬೀರುತ್ತಾ "ಸಂತೋಷ, ಆಗಬಹುದು" ಎಂದು ಹೇಳಲು ಹಿರಿಯ ಪಂಡಿತರು ಉತ್ಸಾಹದಿಂದ ಶ್ಲೋಕಾಭಿಪ್ರಾಯವನ್ನು ಹೀಗೆ ವಿವರಿಸಲಾರಂಭಿಸಿದರು :—

"ಗುರುವರ್ಯರೇ, ಈ ಪದ್ಯದಲ್ಲಿ ಶ್ರೀಮಧ್ವಮತದ ಮುಖ್ಯ ಪ್ರಮೇಯಸಾರ ಅಡಗಿದೆ. 'ಶ್ರೀಮನ್ಮಧ್ವಮತೇ' ಎಂಬಲ್ಲಿ ಶ್ರೀಮತ್ವ ವಿಶೇಷಣವು ವೈಶಿಷ್ಟ್ಯಪೂರ್ಣವಾಗಿದೆ. ವೇದಪ್ರತಿಪಾದ್ಯಮಹಿಮೋಪೇತತ್ವವೇ ಶ್ರೀಮತ್ವವು ! ಇತರ ಮತಗಳಿಕಿಂತ ಮಧ್ವಮತವೇ ಶ್ರೇಷ್ಠವೆಂದು ಸಮರ್ಥಿಸಲು ಇಲ್ಲಿ ಕಿರಿಯ ಗುರುಗಳು ಶ್ರೀಮತ್ವ ವಿಶೇಷಣವನ್ನು ಕೊಟ್ಟಿದ್ದಾರೆ. ಈ ಶ್ರೀಮತ್ವವು ಮಧ್ವಾಚಾರ್ಯರಲ್ಲಿಯೂ, ಅವರ ಮತದಲ್ಲಿಯೂ ವಿವಕ್ಷಿತವಾಗಿದೆ. ಆಚಾರ್ಯರಾಯರು ವೇದ ಪ್ರತಿಪಾದ್ಯ ಮಹಿಮೋಪೇತಪವಮಾನಾಂಶ ಸಂಭೂತರಾದ್ದರಿಂದ ಅವರು ಶ್ರೀಮತ್ವವುಳ್ಳವರಾಗಿದ್ದಾರೆ. "ಮಧ್ವೋ ವೇ ಪ್ರೋ ನಾಮುಷಾರುತಂ ಯಜತ್ರಾಃ", "ವಿಷ್ಣೋಃ ಪದೇ ಪರಮೇ ಮಧ್ವ ಉತ್ಸಃ", "ತೃತೀಯಮಸ್ಯ ವೃಷಭಸ್ಯ ದೋಹಸೇ ದಶಪ್ರಮತಿಂ ಜನಯಂತ ಯೋಷಣಃ" ಮುಂತಾದ ಶ್ರುತಿಗಳು ಅವರು ವಾಯುದೇವರೆಂದು ಸಾರುವುದರಿಂದ ಶ್ರೀಮತ್ವವಿಶೇಷಣವು ಸಾರ್ಥಕವಾಗಿದೆ.

ಶ್ರೀಮದಾಚಾರ್ಯರು ಪ್ರತಿಪಾದಿಸಿದ ಮತವೇ (ದ್ವೈತಸಿದ್ಧಾಂತವೇ) ವೇದ ಪ್ರತಿಪಾದ್ಯವಾದ ಸತ್ಸಿದ್ಧಾಂತವೆಂದು ಅದೇ ಶ್ರೀಮತ್ವವು ನಿರೂಪಿಸುವುದು. ಶ್ರೀಮಧ್ವಾಚಾರ್ಯರು ಬ್ರಹ್ಮಮೀಮಾಂಸಾ ಶಾಸ್ತ್ರಪ್ರಣೇತೃಗಳಾದ, ಶ್ರೀಮನ್ನಾರಾಯಣಾಭಿನ್ನರಾದ, ಶ್ರೀವೇದವ್ಯಾಸದೇವರಿಂದಲೇ ಸಾಕ್ಷಾತ್ತಾಗಿ ಉಪದೇಶ ಪಡೆದು "ಕುರುಸೂತ್ರಭಾಷ್ಯಮವಿಲಂಬಿತಂ ವ್ರಜೇಃ" ಎಂದು ಶ್ರೀಬಾದರಾಯಣರ ಆಜ್ಞೆಯಂತೆ ಸೂತ್ರಭಾಷ್ಯಾದಿ ಸಚ್ಛಾಸ್ತ್ರಗಳನ್ನು ರಚಿಸಿರುವುದರಿಂದ ಶ್ರೀವೇದವ್ಯಾಸದೇವರಿಗೆ ಸಮ್ಮತವಾದ ಭಾಷ್ಯವೇ ಶ್ರೀಮಧ್ವಭಾಷ್ಯವಾದ್ದರಿಂದ ಸೂತ್ರಗಳ ನಿಜವಾದ ಭಾವವನ್ನು ಶ್ರೀಸರ್ವಜ್ಞರ ಭಾಷ್ಯವೊಂದೇ ತಿಳಿಸುವುದರಿಂದ ಸನಾತನವೂ ವೈದಿಕವೂ ಆದ ದ್ವೈತಸಿದ್ಧಾಂತವೇ ಸರ್ವಶ್ರೇಷ್ಠವಾದುದೆಂದು 'ಶ್ರೀಮನ್ಮಧ್ವಮತೇ' ಎಂಬುದರಿಂದ ಕಿರಿಯ ಶ್ರೀಪಾದಂಗಳವರು ಸಾಧಿಸಿದ್ದಾರೆ !

ಶ್ರೀಮದಾಚಾರ್ಯರು ಪರಮಮಂಗಳಕರವಾದ ಭಾಷ್ಯದಲ್ಲಿ ವೈದಿಕ ಸತ್ತತ್ತ್ವಗಳನ್ನು ಹೃದಯಂಗಮವಾಗಿ ನಿರೂಪಿಸಿ ಮುಮುಕ್ಷುಗಳಿಗೆ ಮಹೋಪಕಾರ ಮಾಡಿದ್ದಾರೆ. "ವ್ಯಾಸದೇವಹೃದಯಾತಿವಲ್ಲಭಂ ವಾಸುದೇವಗುಣಗಣೇಯಸಮರ್ಪಣಂ। ಸಾಧಯತ್ಸಕಲದೋಷವರ್ಜಿತಂ ಜ್ಞಾನಭಕ್ತಿದಮನಂತಸೌಖ್ಯದಮ್॥" ಎಂದು ಶ್ರೀಸುಮಧ್ವವಿಜಯದಲ್ಲಿ ವರ್ಣಿಸಿರುವಂತೆ ಶ್ರೀಮಧ್ವಾಚಾರ್ಯರು ಸೂತ್ರಭಾಷ್ಯದಲ್ಲಿ—ಶ್ರೀಮನ್ನಾರಾಯಣನು ಅನಂತಕಲ್ಯಾಣಗುಣಪೂರ್ಣನೆಂದೂ, ಈ ಪರಮತತ್ತ್ವವೇ ಸಕಲ ಶಾಸ್ತ್ರಗಳ ಸಾರಭೂತವೆಂದೂ ನಿರೂಪಿಸಿರುವುದರಿಂದ, ಯಾವ ದೋಷವೂ ಇಲ್ಲದಿರುವ ಆಚಾರ್ಯರ ಭಾಷ್ಯವು ಭೂತ-ಭಾವಿ-ವರ್ತಮಾನ ಜನರಿಂದ ದೂಷಿಸಲು ಅಶಕ್ಯವಾಗಿರುವುದರಿಂದ ಜ್ಞಾನ-ಭಕ್ತಿಗಳನ್ನು ಕರುಣಿಸಿ ನಿತ್ಯಸುಖವಾದ ಮೋಕ್ಷವನ್ನು ಕೊಡಿಸಲು ಸಮರ್ಥವಾಗಿರುವುದು - ಮುಂತಾದ ವಿಚಾರಗಳು ಶ್ರೀಮತ್ತ್ವವಿಶೇಷಣದಿಂದ ಸಿದ್ಧವಾಗುವುದು. ಶ್ರೀಮದಾಚಾರ್ಯರು ವಾಯ್ವಂಶಸಂಭೂತರಾದ್ದರಿಂದ ಅವರು ನಮಗೆ ಪರಮ ಆಪ್ತರು. ವೇದಮೂಲಕವೂ, ಯುಕ್ತಿಗರ್ಭಿತವೂ ಆದ ಆಚಾರ್ಯರ ಭಾಷ್ಯವು ಶ್ರೇಷ್ಠವೂ, ಆಪ್ತ, ಶ್ರುತಿ, ಯುಕ್ತಿಮೂಲವಾದ್ದರಿಂದ ಪ್ರಮಾಣತಮವಾಗಿರುವುದರಿಂದ ಅದು ಜಗನ್ಮಾನ್ಯವಾಗಿ ಮುಮುಕ್ಷುಗಳಿಂದ ಸೇವ್ಯವಾಗಿದೆ ಮುಂತಾದವಿಚಾರವನ್ನು ಶ್ರೀಮತ್ತ್ವವಿಶೇಷಣದಿಂದ ಸಾಧಿಸಿದ್ದಾರೆಂದು ನಿವೇದಿಸಲು ನನಗೆ ಅತೀವ ಹರ್ಷವಾಗುತ್ತಿದೆ.

ಶ್ರೀಮದಾನಂದತೀರ್ಥ ಭಗವತ್ಪಾದರು ದ್ವೈತಸಿದ್ಧಾಂತದಲ್ಲಿ ಪ್ರತಿಪಾದಿಸುವ ಪ್ರಮುಖ ನವಪ್ರಮೇಯಗಳನ್ನು ಇಲ್ಲಿ ವರ್ಣಿಸಿರುವುದು ಹೃದಯಂಗಮವಾಗಿದೆ. ಆಚಾರ್ಯರು ಸಿದ್ಧಾಂತದಲ್ಲಿ ಶ್ರೀಹರಿಯೇ ಪರತರನೆಂದು ಪ್ರಥಮ ಪ್ರಮೇಯವಾಗಿ ನಿರೂಪಿಸಿರುವುದನ್ನು ಇಲ್ಲಿ "ಹರಿಃ ಪರತರಃ" ಎಂಬುದರಿಂದ ವಿವರಿಸಲಾಗಿದೆ. ಅನೇಕ ಉತ್ತಮದೇವತೆಗಳಿರುವುದರಿಂದ ಅವರನ್ನು ಬಿಟ್ಟು ಶ್ರೀಹರಿಯನ್ನೇ ಪರಾತ್ಪರನೆಂದು ಏಕೆ ಒಪ್ಪಬೇಕು? ಅದಕ್ಕೆ ಪ್ರಮಾಣವೇನು ಎಂಬ ಶಂಕೆಬಂದರೆ ಶ್ರೀಹರಿ ಸರ್ವೋತ್ತಮತ್ವವನ್ನು ಆಚಾರ್ಯರು ತಮ್ಮ ಭಾಷ್ಯದಲ್ಲಿ ಅನೇಕ ಪ್ರಮಾಣಗಳಿಂದ ಸಾಧಿಸಿರುವುದನ್ನು ಸ್ಪಷ್ಟಪಡಿಸಲು ಇಲ್ಲಿ 'ಹರಿಃಪರತರಃ' ಎಂಬುದಾಗಿ ಹೇಳಿದ್ದಾರೆ.

"ಯತೋ ವಾ ಇಮಾನಿ ಭೂತಾನಿ ಜಾಯಂತೆ" "ತದ್ಬ್ರಹ್ಮ, ತದ್ವಿಜಿಜ್ಞಾಸಸ್ವ" ಎಂಬ ಶ್ರುತಿಯು ಒಬ್ಬ ಪರಬ್ರಹ್ಮನನ್ನು ಜಿಜ್ಞಾಸ್ಯನೆಂದು ಪ್ರತಿಪಾದಿಸಿದೆ. ಆ ಪರಬ್ರಹ್ಮನೇ ಶ್ರೀನಾರಾಯಣನೆಂದು ಆಚಾರ್ಯರು ಸಾಧಿಸಿದ್ದಾರೆ. "ಅಥ ಕಸ್ಮಾದುಚ್ಯತೇ ಬ್ರಹ್ಮೇತಿ" ಇತ್ಯಾದಿವೇದಪ್ರತಿಪಾದ್ಯ ಬ್ರಹ್ಮಶಬ್ದಾರ್ಥವೂ, ಶ್ರೀನಾರಾಯಣಶಬ್ದಾರ್ಥವೂ ಒಂದೇ ಆದುದರಿಂದ ಶ್ರೀಮನ್ನಾರಾಯಣನು ಜಿಜ್ಞಾಸ್ಯನು. ಇದಕ್ಕೆ ಪುಷ್ಟಿಯಾಗಿ ಸೂತ್ರಕಾರರು, ಇದಕ್ಕೆ ಪೂರ್ವಸೂತ್ರಗಳಾದ "ಸ ವಿಷ್ಣುರಾಹ ಹಿ" "ತಂ ಬ್ರಹ್ಮೇತ್ಯಾಚಕ್ಷತೇ" ಎಂಬ ದೈವೀಮೀಮಾಂಸೆಯ ಕೊನೆಯ ಸೂತ್ರಗಳಿಂದ

ಬ್ರಹ್ಮನೇ ನಾರಾಯಣನು ಎಂದು ಹೇಳಿರುವ ಪ್ರಮಾಣವಿರುವುದರಿಂದಲೂ "ತದೇವ ಬ್ರಹ್ಮ ಪರಮಂ ಕವೀನಾಂ" ಎಂಬ ಶ್ರುತಿಯು ಸಮುದ್ರಶಾಯಿ ಯಾದವನು ಬ್ರಹ್ಮನೆಂದು ಸಾರುವುದರಿಂದ, "ಆಪೋ ನಾರಾ ಇತಿ ಪ್ರೋಕ್ತಾಃ ಆಪೋ ವೈ ನರಸೂನವಃ । ಅಯನಂ ತಸ್ಯ ತಾಃ ಪೂರ್ವಂ ತಸ್ಮಾನ್ನಾರಾಯಣಃ ಸ್ಮೃತಃ ॥", "ಮಮಯೋನಿರಪ್ಸ್ವಂತಸ್ಸಮುದ್ರೇ ॥"—ಮುಂತಾದ ವೇದವಾಕ್ಯ ಗಳಿಂದ ನಾರಾಯಣನೇ ಅಂಥ ಸಮುದ್ರಶಾಯಿಯೆಂದು ವ್ಯಕ್ತವಾಗುವುದರಿಂದ ಬ್ರಹ್ಮಶಬ್ದವಾಚ್ಯನು ಶ್ರೀ ನಾರಾಯಣನಾದುದರಿಂದ ಅವನೇಜಿಜ್ಞಾಸ್ಯನು. ಮತ್ತು ಸರ್ವೋತ್ತಮನು. ಸಕಲ ವೇದಪ್ರತಿಪಾದ್ಯವಾದ ವಸ್ತುವೇ ಸರ್ವೋತ್ತಮವಾದುದರಿಂದ "ನಾಮಾನಿ ಸರ್ವಾಣಿ ಯಮಾವಿಶಂತಿ", "ವೇದೈಶ್ಚ ಸರ್ವೈರಹಮೇವ ವೇದ್ಯಃ" ಇತ್ಯಾದಿ ಪ್ರಮಾಣಗಳಿಂದ ನಾರಾಯಣನೇ ಸರ್ವವೇದಪ್ರತಿಪಾದ್ಯನೆಂದು ತಿಳಿಯುವುದರಿಂದಲೂ "ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವ ಚ" ಎಂದು ಭಗವಾನ್ ಶ್ರೀಕೃಷ್ಣನು ಕಂಠರವೇಣ ತಾನೇ ಸರ್ವೋತ್ತಮನೆಂದು ಗೀತೆಯಲ್ಲಿ ಹೇಳಿರುವುದರಿಂದಲೂ ಸಹ ಶ್ರೀಹರಿಯೇ ಸರ್ವೋತ್ತಮನೆಂದು ಆಚಾರ್ಯರು ತಮ್ಮ ಸಿದ್ಧಾಂತದ ಪ್ರಥಮ ಪ್ರಮೇಯವನ್ನು ಭಾಷ್ಯದಲ್ಲಿ ವೇದ-ಗೀತಾವಾಕ್ಯಗಳಿಂದ ಸಾಧಿಸಿರುವುದರಿಂದ ಸಕಲ ವೇದಾದಿಶಾಸ್ತ್ರ ಗಳಿಂದ ಗೇಗೀಯಮಾನ ಮಹಾಮಹಿಮನಾದ ಶ್ರೀಮನ್ನಾರಾಯಣನೇ ಸರ್ವೋತ್ತಮನೆಂದು ಸಿದ್ಧಿಸಿದೆ ಎಂದು ಇಲ್ಲಿ "ಹರಿಃ ಪರತರಃ" ಎಂಬುದರಿಂದ ಸ್ಪಷ್ಟಪಡಿಸಲಾಗಿದೆ.

ಇಲ್ಲಿ ಆಚಾರ್ಯರು ಹೇಳಿರುವ ಎರಡನೆಯ ಪ್ರಮೇಯವನ್ನು "ಸತ್ಯಂ ಜಗತ್" ಎಂದು ತಿಳಿಸಿದ್ದಾರೆ.

ಜಗತ್ತು ಮಿಥ್ಯೆಯಾದ್ದರಿಂದ ಬ್ರಹ್ಮಭಿನ್ನವಾದ (ಹರಿಯಿಂದ ಭಿನ್ನವಾದ) ವಸ್ತುವೇ ಇಲ್ಲದಿರುವಾಗ ಹರಿಯು ಪರತರನೆಂದು ಹೇಳಿದ್ದು ಅಸಂಗತವೆಂಬ ಶಂಕೆಗೆ ಉತ್ತರವಾಗಿ ಹೇಳಿರುವ "ಸತ್ಯಂ ಜಗತ್" ಎಂದು ಇಲ್ಲಿ ಎರಡನೆಯ ಪ್ರಮೇಯ ವನ್ನಾಗಿ ನಿರೂಪಿಸಿದ್ದಾರೆ.

ಜಗತ್ತು ಮಿಥ್ಯೆ (ಸುಳ್ಳು) ಎಂದು ಹೇಳುವ ಪರವಾದಿಗಳ ಆಶಯವಿಂತಿದೆ, ಮಿಥ್ಯೆಯೆಂದರೆ ವ್ಯಾವಹಾರಿಸತ್ವವುಳ್ಳದ್ದೆಂದು ಅರ್ಥ. ಪರಬ್ರಹ್ಮವು ಪಾರಮಾರ್ಥಿಕ ಸತ್ಯವು. ಕಪ್ಪೆಚಿಪ್ಪಿನಲ್ಲಿ ತೋರುವ ಬೆಳ್ಳಿಯು (ಇದಂ ರಜತ ಮಿತ್ಯತ್ರ ಇದಂತ್ವಾಧಿಷ್ಠಾನೇ ಶುಕ್ತೌ ಭಾಸಮಾನರಜತತ್ವನಿಶ್ಚಯಃ ಪ್ರಾತಿಭಾಸಿಕಃ) ಪ್ರಾತಿಭಾಸಿಕ ಸತ್ಯವು. ತದ್ಭಿನ್ನವಾದ ಪ್ರಪಂಚವು ವ್ಯಾವಹಾರಿಕ ಸತ್ಯ [ಮಿಥ್ಯೆ] ಎಂದೆನಿಸುವುದು ಎಂದು ಪರವಾದಿಗಳ ಅಭಿಪ್ರಾಯ.

ಶ್ರೀಮದಾಚಾರ್ಯರು ಇದನ್ನು ಒಪ್ಪುವುದಿಲ್ಲ ಆಚಾರ್ಯರು ಪರಬ್ರಹ್ಮ ನಂತೆ ಜಗತ್ತು ಪಾರಮಾರ್ಥಿಕ ಸತ್ಯವು. ಪ್ರತ್ಯಕ್ಷ, ಅನುಮಾನ, ಆಗಮಗಳೇ

ಇದಕ್ಕೆ ಪ್ರಮಾಣಗಳು. "ಘಟಸ್ಸನ್" "ಪಟಸ್ಸನ್" ಮುಂತಾದ ಪ್ರತ್ಯಕ್ಷವು ಅರ್ಥಕ್ರಿಯಾ ಕಾರಿಯಾದುದರಿಂದ ಘಟಾದಿಗಳು ಸತ್ಯವೆಂಬ ಯುಕ್ತಿಗಳು, "ವಿಶ್ವಂ ಸತ್ಯಂ ಮಘವಾ ನಾಯವ್ಯೋ" "ಯಾಥಾತಥ್ಯತೋಽರ್ಥಾನ್ ವ್ಯದಧಾಚ್ಛಾಶ್ವತೀಭ್ಯಃ ಸಮಾಭ್ಯಃ" ಇತ್ಯಾದಿ ಆಗಮ ಪ್ರಮಾಣಗಳಿಂದ ಜಗತ್ತು ಪಾರಮಾರ್ಥಿಕ ಸತ್ಯ ವೆಂದು ಆಚಾರ್ಯರು ಸಾಧಿಸುವರು.

ಜಗತ್ತು ಮಿಥ್ಯೆಯೆಂದರೆ ಅಸತ್ತು ಎಂದಾಯಿತು. ಜಗತ್ತು ಅಸತ್ತಲ್ಲ ವಾದುದರಿಂದ ಸತ್ಯವೆಂದು ಹೇಳಬೇಕು. ಪರರು ವ್ಯಾವಹಾರಿಕಸತ್ತ್ವವನ್ನು ಒಪ್ಪಿರುವರಲ್ಲ ? ಅದಕ್ಕೆ ಏನು ಹೇಳಬೇಕು ? ಎಂಬ ಶಂಕೆ ಬರಬಹುದು. ವ್ಯಾವಹಾರಿಕಸತ್ತ್ವವೆಂದರೂ ಮಿಥ್ಯೆಯೆಂದರೂ ಒಂದೇ ಆಗಿರುವುದರಿಂದ ಜಗತ್ತಿಗೆ ಅಸತ್ತ್ವವು ಪ್ರಮಾಣತ್ರಯ ಬಾಧಿತವಾದ ಕಾರಣ ಜಗತ್ತು ಮಿಥ್ಯೆ ಎಂದು ಹೇಳ ಬಾರದು. ಏತೇನ ಜಗತ್ತು ಸತ್ಯವೆಂಬ ಆಚಾರ್ಯರು ಹೇಳಿರುವ ಎರಡನೆಯ ಪ್ರಮೇಯವು ವೇದಾದಿಶಾಸ್ತ್ರಸಿದ್ಧವಾಗಿದೆಯೆಂದು ನಿರೂಪಿಸಲು ಇಲ್ಲಿ "ಸತ್ಯಂಜಗತ್" ಎಂದು ಹೇಳಿರುವುದು ಯುಕ್ತವಾಗಿದೆ !

ಜಗತ್ತು ಸತ್ಯವೆಂದು ಹೇಳಿದ್ದು ಅಸಂಗತ, "ತತ್ತ್ವಮಸಿ" ಎಂಬ ವಾಕ್ಯವು ಜೀವ-ಬ್ರಹ್ಮರಿಗೆ ಐಕ್ಯವನ್ನು ಹೇಳುವುದು, ಸರ್ವಜ್ಞ ಮತ್ತು ಅಲ್ಪಜ್ಞನಾದ ಬ್ರಹ್ಮ-ಜೀವರಿಗೆ ಐಕ್ಯ ಕೂಡುವುದಿಲ್ಲವಾದ್ದರಿಂದ "ತತ್ತ್ವಮಸಿ" ಎಂಬ ವಾಕ್ಯವು ಅಪ್ರಮಾಣವಾಗಬೇಕಾದೀತು ಎಂಬ ಶಂಕೆ ಬಂದರೆ, ಮೂರನೆಯ ಪ್ರಮೇಯ ವಾದ "ತತ್ತ್ವತೋ ಭೇದಃ" ಎಂಬುದಾಗಿ ಆಚಾರ್ಯರು ಹೇಳಿದ್ದಾರೆ. ಐಕ್ಯವಾದಿ ಗಳು ಜೀವಬ್ರಹ್ಮರಿಗೆ ವ್ಯಾವಹಾರಿಕ ಭೇದವನ್ನು ಒಪ್ಪಿರುವುದರಿಂದ ತದ್ವೈಲಕ್ಷಣ್ಯಕ್ಕಾಗಿ "ತತ್ತ್ವತಃ" ಎಂದು ಹೇಳಿರುವರು. ಇದರಿಂದ ಜೀವೇಶ್ವರರಿಗೆ ಪಾರಮಾರ್ಥಿಕಭೇದವೆಂದು ಹೇಳಿದಂತಾಯಿತು.

೧] ಜೀವೇಶ್ವರರಿಗೆ, ೨] ಜಡೇಶ್ವರರಿಗೆ, ೩] ಜೀವಜಡಗಳಿಗೆ, ೪ ಜೀವ ಜೀವರಿಗೆ, ೫] ಜಡಜೀವಗಳಿಗೆ ಭೇದವೆಂದು ಆಚಾರ್ಯರು ಸಿದ್ಧಾಂತದಲ್ಲಿ ಪಂಚ ಭೇದಗಳನ್ನು ಹೇಳಿದ್ದಾರೆ. ಈ ಭೇದಗಳನ್ನು ಹೀಗೆ ಸಾಧಿಸಬಹುದು—

ಚೈತ್ರನಿಂದ ಮೈತ್ರ ಬೇರೆಯಾಗಿದ್ದಾನೆ, ದೇವದತ್ತ ಮೈತ್ರನಿಂದ ಭಿನ್ನ ನಾಗಿದ್ದಾನೆ, ಯಜ್ಞದತ್ತ ದೇವದತ್ತನಿಂದ ಭಿನ್ನನಾಗಿದ್ದಾನೆ. ಈ ಪ್ರತ್ಯಕ್ಷಗಳೇ ಪ್ರಮಾಣವಾಗಿವೆ. ಇದರಂತೆ ಜಗತ್ತಿನಲ್ಲಿ ಒಬ್ಬ ಶ್ರೀಮಂತ-ಮತ್ತೊಬ್ಬ ಕುರೂಪಿ ಒಬ್ಬ ಭೋಗಿ ಮತ್ತೊಬ್ಬ ರೋಗಿಗಳಾಗಿರುವುದು ಕಂಡುಬಂದಿದೆ. ಐಕ್ಯವಿದ್ದಲ್ಲಿ ಎಲ್ಲರೂ ಒಂದೇ ರೀತಿ ಇರಬೇಕಾಗಿತ್ತು. ವಸ್ತುತಃ ಹಾಗಿಲ್ಲದಿರುವುದು ಪ್ರತ್ಯಕ್ಷ ಸಿದ್ಧವಾಗಿದೆ. ಮೇಲಾಗಿ ಒಬ್ಬನ ಸುಖಾನುಸಂಧಾನವು ಮತ್ತೊಬ್ಬನಿಗಿಲ್ಲದಿರು

ವುದು ಸಾಮಾನ್ಯವಾಗಿ ತಿಳಿದಿರುವ ವಿಷಯ. ಇವರ ಮೇಲೆ "ಭಿನ್ನಶ್ಚಿಂತ್ಯೋ ಪರಮೋ ಜೀವಸಂಘಾತ್". "ನಿತ್ಯೋ ನಿತ್ಯಾನಾಂ ಚೇತನಶ್ಚೇತನಾನಾಂ" ಇವೇ ಮುಂತಾದ ಶ್ರುತಿಗಳು ಭೇದಕ್ಕೆ ಪ್ರಮಾಣವಾಗಿವೆ. ಭೇದವನ್ನು ಒಪ್ಪದಿದ್ದಲ್ಲಿ ಸುರಾ ಪಯಸ್ಸು. ಅನ್ನ-ಅಸನ್ನ, ತಾಯಿ-ಹೆಂಡತಿ, ಇವುಗಳಿಗೆ ಭೇದವೇ ಇಲ್ಲದೇ ಹೋದೀತಾದ್ದರಿಂದ ಭೇದವನ್ನು ಒಪ್ಪಲೇಬೇಕು.

ಕೆಲವು ಶ್ರುತಿಗಳು ಐಕ್ಯವನ್ನು ಬೋಧಿಸುವುವು. ಕೆಲವು ಶ್ರುತಿಗಳು ಭೇದವನ್ನು ತಿಳಿಸುವುವು. ಹೀಗೆ ವೇದಗಳು ಐಕ್ಯ-ಭೇದಗಳನ್ನು ನಿರೂಪಿಸುವುದರಿಂದ ಯಾವುದು ಗ್ರಾಹ್ಯ? ಎಂಬ ಸಂದೇಹ ಉಂಟಾಗುವುದು ಸಹಜ. ಅಂತಹ ಸಂದೇಹ ಕಾಲದಲ್ಲಿಯೂ ಭೇದೋಪಾಸನೆಯೇ ಶ್ರೇಯಸ್ಕರವಾದುದರಿಂದ ಭೇದವನ್ನು ಒಪ್ಪುವುದೇ ತಾರಕವಾಗಿದೆ.

ಹಾಗಾದರೆ "ತತ್ವಮಸಿ" ಎಂಬ ಶ್ರುತಿವಾಕ್ಯವು ಅಪ್ರಮಾಣವಾಗಬೇಕಾದೀತೆಂಬ ಆಕ್ಷೇಪಕ್ಕೆ ಗತಿಯೇನು ? ಎಂಬ ಪ್ರಶ್ನೆ ಉದ್ಭವಿಸುವುದರಿಂದ ಅದಕ್ಕೆ ಸಮಾಧಾನ ಹೇಳಲೇಬೇಕಾಗಿದೆ. ಸಾವಕಾಶ -ನಿರವಕಾಶ ವಾಕ್ಯಗಳಲ್ಲಿ ನಿರವಕಾಶ ವಾಕ್ಯವೇ ಪ್ರಬಲವೆಂಬುದನ್ನು ಸಕಲಶಾಸ್ತ್ರಕಾರರೂ ಅಂಗೀಕರಿಸಿರುವರು. "ತತ್ವಮಸಿ"ಎಂಬ ಶ್ರುತಿಗೆ ಭೇದಪರವಾಗಿಯೂ ಅರ್ಥಮಾಡಬಹುದಾಗಿದೆ."ಬ್ರಾಹ್ಮಣೋಽಸ್ಯ ಮುಖಮಾಸೀತ್" ಎಂದು ಭಗವಂತನ ಮುಖದಿಂದ ಹುಟ್ಟಿದ ಬ್ರಾಹ್ಮಣರಲ್ಲಿ "ಮುಖಂ" ಎಂದು ಪ್ರಯೋಗವಿರುವುದರಿಂದ "ತತ್ವಮಸಿ" ಎಂಬಲ್ಲಿಯೂ ತ್ವಂ-ನೀನುತತ್-ಆ ಪರಬ್ರಹ್ಮನಿಂದ ಹುಟ್ಟಿದವನು,ಅಸಿ-ಇರುತ್ತೀಯೆ ಎಂದು ಅರ್ಥಹೇಳಬಹುದು. ಈ"ತತ್ವಮಸಿ"ವಾಕ್ಯದ ಹಿಂದುಮುಂದಿನ ವಾಕ್ಯಗಳು. ಪ್ರಕರಣ, ಸಂದರ್ಭಗಳನ್ನು ವಿವೇಚಿಸಿದರೆ-ವಿದ್ಯಾಮದದಿಂದ ಗರ್ವಿತನಾಗಿರುವ ಮಗನಾದ ಶ್ವೇತಕೇತುವಿನ ಗರ್ವ ಪರಿಹಾರಮಾಡಿ ಸತ್ತತ್ತ್ವವನ್ನು ಉಪದೇಶಿಸಲು ಹೇಳಿದ ಮಾತಿದಾದ್ದರಿಂದ ತಂದೆಯಾದ ಉದ್ದಾಲಕರು ಮೊದಲೇ ಗರ್ವಿಷ್ಠನಾದ ಶ್ವೇತಕೇತುವಿಗೆ "ತತ್ವಮಸಿ" -ನೀನೇ ಪರಬ್ರಹ್ಮನೆಂದು ಹೇಳುವುದು ಸರಿಯೆನಿಸಲಾರದು. ಮತ್ತು"ಏತತ್ವಮಸಿ" "ತಸ್ಮಾತ್ತ್ವಮಸಿ" ಮುಂತಾಗಿ "ತತ್ವಮಸಿ" ವಾಕ್ಯಕ್ಕೆ ಅರ್ಥಮಾಡುವುದೇ ಯುಕ್ತವಾಗಿದೆ. ಅದೇ ಉದ್ದಾಲಕರ ಅಭಿಪ್ರಾಯವೂ ಆಗಿದೆ. ಮೇಲಾಗಿ ಸಾವಕಾಶವಾದ ಅಭೇದವಾಕ್ಯದಕಿಂತ ನಿರವಕಾಶವಾದ ಭೇದವಾಕ್ಯವು ಪ್ರಬಲವಾದ ಕಾರಣ ಭೇದವು ಪಾರಮಾರ್ಥಿಕವೆಂದು ಅಂಗೀಕರಿಸಲೇಬೇಕು.

ಪಾರಮಾರ್ಥಿಕ ಭೇದವನ್ನು ಒಪ್ಪಿದಲ್ಲಿ ಅನೇಕ •ಸ್ವತಂತ್ರ ವಸ್ತುಗಳನ್ನು ಒಪ್ಪಬೇಕಾಗುವುದೆಂಬ ಶಂಕೆಗೆ ಉತ್ತರವಾಗಿ "ಜೀವಗಣಾಃ ಹರೇರನುಚರಾಃ" ಎಂದು ಸಮಸ್ತ ಜೀವರೂ ಹರಿಯ ಕಿಂಕರರು ಎಂದು ಆಚಾರ್ಯರು ಹೇಳಿರುವ ನಾಲ್ಕನೆಯ ಪ್ರಮೇಯವನ್ನು ಇಲ್ಲಿ ನಿರೂಪಿಸಿದ್ದಾರೆ.

ಅನೇಕ ಸ್ವತಂತ್ರ ವಸ್ತುಗಳನ್ನು ಒಪ್ಪಿದಲ್ಲಿ ನಿತ್ಯಸುಖಿಯು ಒಬ್ಬನಾಗದೆ ಸಕಲರೂ ಪೂರ್ಣಶಕ್ತಿಯುಳ್ಳವರಾದ್ದರಿಂದ ಪರಬ್ರಹ್ಮನಂತೆ ಎಲ್ಲರೂ ನಿತ್ಯಸುಖಿಗಳಾಗ ಬೇಕಾದೀತು. ಪ್ರತ್ಯಕ್ಷವಾಗಿ ದುಃಖಾದಿಗಳ ಅನುಭವವು ಕಂಡುಬರುತ್ತಿರುವುದರಿಂದ ಒಂದೇ ವಸ್ತುವು ಸ್ವತಂತ್ರವಾಗಿರಬೇಕೆಂಬುದು ಯುಕ್ತವಾಗಿದೆ. ಇದನ್ನೇ ಶ್ರೀಮದಾಚಾರ್ಯರು 'ದ್ವಾದಶ ಸ್ತೋತ್ರ'ದಲ್ಲಿ "ಯದಿ ನಾಮ ನ ತಸ್ಯ ವಶೇ ಸಕಲಂ ಕಥಮೇವ ತು ನಿತ್ಯಸುಖಂ ನ ಭವೇತ್?"— ಸ್ವತಂತ್ರನಾದ ಪರಬ್ರಹ್ಮನ ವಶದಲ್ಲಿ ತದ್ಭಿನ್ನವಾದ ಸಕಲವೂ ಅಧೀನವಾಗಿಲ್ಲದಿದ್ದ ಪಕ್ಷದಲ್ಲಿ ಎಲ್ಲರಿಗೂ ಏಕೆ ನಿತ್ಯ ಸುಖವು ದೊರಕುವುದಿಲ್ಲ ? ಎಂದೂ; "ತತ್ತ್ವಸಂಖ್ಯಾನ"ದಲ್ಲಿ "ಸ್ವತಂತ್ರ ಮಸ್ವತಂತ್ರಂ ಚ ದ್ವಿವಿಧಂ ತತ್ತ್ವಮಿಷ್ಯತೇ। ಸ್ವತಂತ್ರೋ ಭಗವಾನ್ ವಿಷ್ಣುಃ॥" ಸ್ವತಂತ್ರ ಅಸ್ವತಂತ್ರ ಭೇದದಿಂದ ತತ್ತ್ವಗಳು ಎರಡು ವಿಧ, ಅವುಗಳಲ್ಲಿ ಷಡ್ಗುಣೈಶ್ವರ್ಯ ಸಂಪನ್ನನಾದ ಶ್ರೀಹರಿಯು ಸ್ವತಂತ್ರನು— ಎಂದು ಹೇಳಿದ್ದಾರೆ. ಆದ್ದರಿಂದ ಶ್ರೀಹರಿಯೊಬ್ಬನೇ ಸ್ವತಂತ್ರನು. ಉಳಿದ ಸಕಲಜೀವರೂ ಅವನ ಕಿಂಕರರು ಎಂದು ಒಪ್ಪಲೇಬೇಕು. "ಹರೇ ರನುಚರಾಃ" ಎಂದರೆ ಜೀವರು ಪರಮಾತ್ಮಾಧೀನ ಕರ್ತೃತ್ವವುಳ್ಳವರೆಂದು ತಾತ್ಪರ್ಯ. "ಸಾಧನಾನಾಂ ಸಾಧನತ್ವಂ ಯದಾತ್ಮಾಧೀನಮಿಷ್ಯತೇ" ಮುಂತಾದ ವಾಕ್ಯಗಳು ಜೀವರು ಶ್ರೀಹರಿಯ ಅನುಚರರೆಂದು ಹೇಳಲು ಪ್ರಮಾಣವಾಗಿರುವುದರಿಂದ ಪರಮಾತ್ಮನಿಂದ ಭಿನ್ನರಾದ ಸಕಲಜೀವರೂ ಭಗವಂತನ ಸೇವಕರು ಎಂಬುದು "ಹರೇರನುಚರಾಃ" ಎಂಬುದರಿಂದ ಸಿದ್ಧವಾಗುವುದು.

"ಹರೇರನುಚರಾಃ" ಎಂದು ಹೇಳಿರುವುದರಿಂದ ಎಲ್ಲಾ ಜೀವರಿಗೂ ಒಂದೇ ರೀತಿಯ ಆನಂದವನ್ನೊಪ್ಪುವಿರಾ ? ಎಂಬ ಶಂಕೆಗೆ ಉತ್ತರವಾಗಿ ಜೀವರೆಲ್ಲರೂ ತಾರತಮ್ಯೋಪೇತರು ಎಂದು ಆಚಾರ್ಯರು ಹೇಳಿದ ಐದನೆಯ ಪ್ರಮೇಯವನ್ನು ತಿಳಿಸಲು "ನೀಚೋಚ್ಚಭಾವಂಗತಾಃ" ಎಂದು ಹೇಳಿರುವುದು ಯುಕ್ತವಾಗಿದೆ.

ಆನಂದದಲ್ಲಿ ತಾರತಮ್ಯವಿಲ್ಲವೆಂದು ವಿಶಿಷ್ಟಾದ್ವೈತವಾದಿಗಳು ಹೇಳುವರು, ಅವರ ಆಶಯ ಹೀಗಿದೆ:—"ನಿರಂಜನಃ ಪರಮಂಸಾಮ್ಯಮುಪೈತಿ" ಎಂಬ ಶ್ರುತಿಯು ಆನಂದ ತಾರತಮ್ಯವಿಲ್ಲವೆಂದು ಸಾರುವುದರಿಂದಲೂ ಮತ್ತು ಒಬ್ಬರ ಆನಂದಕ್ಕಿಂತ ಮತ್ತೊಬ್ಬರ ಆನಂದವು ಅಧಿಕವಾಗುವಂತಿದ್ದರೆ— ಸ್ವರ್ಗಸುಖದಂತೆ ಮೋಕ್ಷ ಸುಖವೂ ಅನಿತ್ಯವಾಗಬೇಕಾಗುವುದರಿಂದಲೂ ಮತ್ತು ಅಲ್ಲಿ ದ್ವೇಷಾಸೂಯಾದಿಗಳು ಬರುವುದರಿಂದ ಸಕಲರ ಆನಂದವೂ ಒಂದೇ ಎಂದು ಹೇಳುವರು.

ಶ್ರೀಮದಾಚಾರ್ಯರು ಸ್ವತಂತ್ರನೂ ಆನಂದಮಯನೂ ಸರ್ವೋತ್ತಮನೂ ಆದ ಪರಮಾತ್ಮನ ಆನಂದವೂ ಅವನ ಅನುಚರರಾದ ಜೀವರ ಆನಂದವೂ ಒಂದೇ ಎಂದು ಹೇಳುವುದು ಸರಿಯಲ್ಲ, ಎಂದಿದ್ದಾರೆ. ಆನಂದದಲ್ಲಿ ತಾರತಮ್ಯವಿದೆಯೆಂದು ಹೇಳಿರುವ ಪ್ರಮೇಯವನ್ನು ಎತ್ತಿಹಿಡಿಯಲು ಇಲ್ಲಿ "ನೀಚೋಚ್ಚಭಾವಂಗತಾಃ" ಎಂದು ಹೇಳಿದ್ದಾರೆ.

"ನೈಷಾನಂದಸ್ಯ ಮೀಮಾಂಸಾ ಭವತಿ । ತೇ ಶತಂ ಮಾನುಷಾ ಆನಂದಾಃ, ಸ ಏಕೋ ಮನುಷ್ಯಗಂಧರ್ವಾಣಾಮಾನಂದಃ, ಶ್ರೋತ್ರಿಯಸ್ಯಚಾಕಾಮಹತಸ್ಯ ॥" ಇತ್ಯಾದಿ ತೈತ್ತಿರೀಯ ಶ್ರುತಿ ಮತ್ತು ವಾಜಸನೇಯ ಶ್ರುತಿಗಳು, "ಸ್ವಪಾದ್ಯಾ ಶತಧೃತ್ಯಂತಾ, ಮುಕ್ತಿಗಾ ಉತ್ತರೋತ್ತರಂ । ಸರ್ವೈರ್ಗುಣೈಃ ಶತಗುಣಾ ಮೋದಂತೇ ಇತಿ ಹಿ ಶ್ರುತಿಃ ॥" ಎಂಬ ಶ್ರುತಿಯೂ, "ಓಂ ವೃದ್ಧಿಹ್ರಾಸ ಭಾಕ್ತ್ವ ಮಂತರ್ಭಾವಾದುಭಯ ಸಾಮಂಜಸ್ಯಾದೇವಂ ಓಂ" ಎಂಬ ಸೂತ್ರವೂ ಜೀವರಿಗೆ ಪರಸ್ಪರ ಆನಂದತಾರತಮ್ಯವಿದೆಯೆಂದು ಸಾರುತ್ತಿದೆ. ಮುಕ್ತಿಯಲ್ಲಿ ಅಪರೋಕ್ಷ ಜ್ಞಾನಿಗಳಾದ ಸಜ್ಜೀವರಿಗೆ ದ್ವೇಷಾಸೂಯಾದಿ ಪ್ರಸಕ್ತಿಯಿಲ್ಲವಾದ್ದರಿಂದ ಪರರು ಹೇಳುವ ದೋಷವು ಬರುವುದಿಲ್ಲ. ಮೋಕ್ಷವಲ್ಲಿ ಆನಂದತಾರತಮ್ಯವನ್ನು ಹೇಳಿದ್ದರಿಂದ ಬಾಧಕವಿಲ್ಲವೆಂದು ಸಾಧಿಸುತ್ತಾರೆ.

ಹಿಂದೆ ಹೇಳಿದ ಐದು ಪ್ರಮೇಯ ಜ್ಞಾನದಿಂದ ಉಂಟಾಗುವ ಫಲವೇ ಸರ್ವ ಸುಜೀವರ ನಿಜಗುರಿಯಾದ ಮೋಕ್ಷವೆಂದೂ, ಅದುಜೀವರ ಸ್ವರೂಪಾನಂದಾವಿರ್ಭಾವ ರೂಪವೆಂದೂ ಆಚಾರ್ಯರು ಹೇಳಿದ ಆರನೆಯ ಪ್ರಮೇಯವನ್ನು ತಿಳಿಸಲು ಇಲ್ಲಿ "ಮುಕ್ತಿರ್ನೈಜ ಸುಖಾನುಭೂತಿಃ" ಎಂದು ಹೇಳಲಾಗಿದೆ.

ಅನೇಕ ದಾರ್ಶನಿಕರು ಅನೇಕ ವಿಧವಾಗಿ ಮುಕ್ತಿಯನ್ನು ನಿರೂಪಿಸುವರು. ಸಿದ್ಧಾಂತರೀತ್ಯಾ ಮೋಕ್ಷಸ್ವರೂಪವು ಹೀಗಿದೆ :— ಮುಕ್ತಿಯೆಂದರೆ—"ಮುಕ್ತಿರ್ಹಿತ್ವಾನ್ಯಥಾಜ್ಞಾನಂ ಸ್ವರೂಪೇಣ ವ್ಯವಸ್ಥಿತಿಃ" ಎಂಬ ಪ್ರಮಾಣಾನುಸಾರವಾಗಿ ವಿರಿಜಾನದೀ ಸ್ನಾನದಿಂದ ಲಿಂಗದೇಹ ಭಂಗವಾದಮೇಲೆ ಆಗತಕ್ಕ ಜೀವನ ಸ್ವರೂಪಾನಂದಾನುಭವವೇ ಮೋಕ್ಷವೆಂದು ಆಚಾರ್ಯರು ಅಪ್ಪಣೆಕೊಡಿಸಿರುವುದನ್ನೂ ಅದೇ ಸಕಲಜೀವರ ಗುರಿಯೆಂದೂ ಸ್ಪಷ್ಟಪಡಿಸಲು ಇಲ್ಲಿ "ಮುಕ್ತಿರ್ನೈಜ ಸುಖಾನು-ಭೂತಿಃ" ಎಂದು ತಿಳಿಸಲಾಗಿದೆ.

"ಯಸ್ಯ ಪ್ರಸಾದಾತ್ಪರಮಾರ್ತಿ ರೂಪಾದಸ್ಮಾತ್ಸಂಸಾರಾನ್ಮುಚ್ಯತೇ ನಾಪರೇಣ ।" ಅಂದರೆ ಪರಮಾತ್ಮನ ಪ್ರಸಾದದಿಂದಲೇ ಮೋಕ್ಷವಾಗುತ್ತದೆ, ಬೇರೆ ಯಾವುದರಿಂದಲೂ ಸಾಧ್ಯವಿಲ್ಲವೆಂದು ಮೇಲಿನ ಶ್ರುತಿಯು ಸಾರುತ್ತದೆ. "ಏಸಂ ಮೋಚಯಾಮಿ"ಎಂಬ ಭಗವಂತನ ಇಚ್ಛಾರೂಪ ಪ್ರಸಾದದಿಂದಲೇ ಮೋಕ್ಷವೆಂದು ಈ ಪ್ರಮಾಣವು ಹೇಳುವುದು. "ನಾನ್ಯಃ ಪಂಥಾ ಅಯನಾಯ ವಿದ್ಯತೇ"–ಭಗವದಪರೋಕ್ಷಜ್ಞಾನವಾಗದ ವಿನಃ ಮೋಕ್ಷಕ್ಕೆ ಬೇರೆ ದಾರಿಯಿಲ್ಲವೆಂದು ಮೇಲಿನ ಶ್ರುತಿಯು ನಿರೂಪಿಸುವುದು. "ಮಾಹಾತ್ಮ್ಯಜ್ಞಾನಪೂರ್ವಸ್ತು ಸುದೃಢಸ್ಸರ್ವತೋಧಿಕಃ । ಸ್ನೇಹೋ ಭಕ್ತಿರಿತಿ ಪ್ರೋಕ್ತೋ ತಯಾಮುಕ್ತಿರ್ನಚಾನ್ಯಥಾ॥" ಅಂದರೆ ಪರಮಾತ್ಮನಲ್ಲಿ ಮಾಡುವ ಭಕ್ತಿಯಿಂದಲೇ ಮೋಕ್ಷವೆಂದು ಈ ಪ್ರಮಾಣದಿಂದ ವಿದಿತವಾಗುವುದು. ಮೋಕ್ಷಕ್ಕೆ ಪರಮಾತ್ಮ ಪ್ರಸಾದವೂ, ಭಗವದಪರೋಕ್ಷಜ್ಞಾನ ಮತ್ತು

ಭಕ್ತಿಗಳು ಕಾರಣವೆಂದು ಅನೇಕ ಪ್ರಮಾಣಗಳು ಜಾಗರೂಕವಾಗಿರುವುದರಿಂದ, ಭಗವತ್ಪ್ರಸಾದವು ಮಹಾತ್ಮ್ಯ ಜ್ಞಾನಸಹಕೃತವಾದ, ನವವಿಧ ದ್ವೇಷರಹಿತವಾದ ನವವಿಧ ಭಕ್ತಿಯಿಂದ ಮಾತ್ರ ಸಾಧ್ಯವೆಂದು ಶ್ರೀಮದಾಚಾರ್ಯರು ಹೇಳಿರುವ ಏಳನೆಯ ಪ್ರಮೇಯವನ್ನು ತಿಳಿಸಲು ಇಲ್ಲಿ "ಅಮಲಾ ಭಕ್ತಿಶ್ಚ ತತ್ಸಾಧನಂ" ಎಂದು ಸಿದ್ಧಾಂತದ ಏಳನೆಯ ಪ್ರಮೇಯವನ್ನು ನಿರೂಪಿಸಿದ್ದಾರೆ.

ಹಿಂದೆ ನಿರೂಪಿಸಿದ ಪ್ರಮುಖ ಪ್ರಮೇಯಗಳನ್ನು ಸಾಧಿಸುವ ಪ್ರಮಾಣಗಳಾವುವು? ಎಂದು ಶಿಷ್ಯರಿಗೆ ತಿಳಿಸಲು ಪ್ರತ್ಯಕ್ಷ, ಅನುಮಾನ ಮತ್ತು ಆಗಮಗಳೇ ಆ ಪ್ರಮಾಣಗಳೆಂದೂ.ಈ ಮೂರು ಪ್ರಮಾಣಗಳಲ್ಲಿಯೇ ಪರರು ಹೇಳುವ ಎಲ್ಲಾ ಪ್ರಮಾಣಗಳೂ ಅಡಕವಾಗಿವೆ ಎಂದು ಆಚಾರ್ಯರು ಅಪ್ಪಣೆ ಕೊಡಿಸಿರುವುದನ್ನು "ಅಕ್ಷಾದಿ ತ್ರಿತಯಂ ಪ್ರಮಾಣಂ"ಎಂದು ಇಲ್ಲಿ ಸ್ಪಷ್ಟಪಡಿಸಿದ್ದಾರೆ.

ಶ್ರೀಹರಿಯು ಸರ್ವೋತ್ತಮನೆಂದು ಹೇಳಿದ್ದು ಸರಿಯಲ್ಲ; "ಏಕೋ ರುದ್ರೋ ನ ದ್ವಿತೀಯೋಽವತಸ್ಥೇ" ಮುಂತಾದ ಪ್ರಮಾಣಗಳಿಂದ ರುದ್ರ-ಬ್ರಹ್ಮಾದಿಗಳು ಸರ್ವೋತ್ತಮರೆಂದು ವ್ಯಕ್ತವಾಗುವುದರಿಂದ ಶ್ರೀಹರಿಯೇ ಸರ್ವೋತ್ತಮನೆಂದು ಹೇಗೆ ಹೇಳುವಿರಿ ? ಮುಂತಾಗಿ ಪರಮತೀಯರು ಶಂಕೆ ಮಾಡುತ್ತಾರೆ. ಅದಕ್ಕೆ ಉತ್ತರಕೊಟ್ಟು ಸಕಲ ವೇದಗಳಿಂದ ಶ್ರೀಹರಿಯೊಬ್ಬನೇ ವೇದ್ಯನೆಂದು ಶ್ರೀಮದಾಚಾರ್ಯರು ಸಾಧಿಸಿದ್ದಾರೆ.ವೇದಗಳಲ್ಲಿ ಅಲ್ಲಲ್ಲಿ ಪ್ರತಿಪಾದ್ಯವಾದ ರುದ್ರ-ಬ್ರಹ್ಮಾದಿ ಶಬ್ದಗಳಿಂದ ಪರಮಮುಖ್ಯ ವೃತ್ತಿಯಿಂದ ಶ್ರೀಹರಿಯೇ ಪ್ರತಿಪಾದ್ಯನು."ನಾಮಾನಿ ಸರ್ವಾಣಿ ಯಮಾವಿಶಂತಿ ತಂ ವೈ ವಿಷ್ಣುಂ ಪರಮ ಮುದಾಹರಂತಿ" ಇತ್ಯಾದಿ ಪ್ರಮಾಣಗಳು ಎಲ್ಲಾ ನಾಮಗಳೂ ಪರಮಾತ್ಮವಾಚಕಗಳೆಂದು ಹೇಳುವುದರಿಂದ ಶ್ರೀಹರಿಯೇ ಸರ್ವೋತ್ತಮನೆಂದು ಶ್ರೀಮದಾಚಾರ್ಯರು ಹೇಳಿರುವುದು ಸಮಂಜಸವೆಂದು ತಿಳಿಸಲು ಇಲ್ಲಿ "ಅಖಿಲಾಮ್ನಾಯೈಕ ವೇದ್ಯೋ ಹರಿಃ"ಎಂಬ ಶ್ರೀಸರ್ವಜ್ಞ ಸಿದ್ಧಾಂತದ ಪರಮಪ್ರಮೇಯನಾದ ಶ್ರೀಹರಿಯ ಸರ್ವೋತ್ತಮತ್ವವನ್ನು ಘೋಷಿಸಲಾಗಿದೆ.

ಹೀಗೆ ಶ್ರೀಮದಾಚಾರ್ಯರ ದ್ವೈತಸಿದ್ಧಾಂತದ ಪ್ರಮೇಯಗಳನ್ನು ಈ ಒಂದೇ ಪದ್ಯದಲ್ಲಿ ಅಡಗಿಸಿ ಪ್ರಮಾಣಪೂರ್ವಕವಾಗಿ ನಿರೂಪಿಸಿ ಕಿರಿಯ ಶ್ರೀಪಾದಂಗಳವರು ಸುಜನವೃಂದಕ್ಕೆ ಮಹೋಪಕಾರ ಮಾಡಿದ್ದಾರೆ, ನನ್ನ ಯೋಗ್ಯತಾನುಸಾರವಾಗಿ ಈ ಪದ್ಯದ ಭಾವವನ್ನು ವಿಜ್ಞಾಪಿಸಿದ್ದೇನೆ—ಎಂದು ಶ್ರೀಮಠದ ಪಂಡಿತರು ಹೇಳಿದರು, ಸಕಲರೂ ಪರಮಾನಂದ ಭರಿತರಾದರು.

ಶ್ರೀಬ್ರಹ್ಮಣ್ಯತೀರ್ಥರಿಗೆ ಬಹು ಸಂತೋಷವಾಗಿತ್ತು. ಅವರು ಶ್ರೀವ್ಯಾಸತೀರ್ಥರನ್ನು ಭರದಿಂದ ಆಲಿಂಗಿಸಿ "ಪ್ರೀತ್ಯಾಸ್ಪದ ಶಿಷ್ಯರೇ! ನೀವು ಅಸದೃಶ ಪ್ರತಿಭಾಸಂಪನ್ನರು. ಸಾಹಿತ್ಯ ಶಾಸ್ತ್ರದಲ್ಲಿ ಅದರಲ್ಲೂ ಕವನರಚನೆಯಲ್ಲಿ ನೀವು

ಇಂದು ಅಶ್ರುತ ಪ್ರತಿಭೆಯನ್ನು ತೋರಿದ್ದೀರಿ. ನಮ್ಮ ಮನದಾಸೆಯನ್ನು ನಿಮ್ಮ ಕವಿತೆಯು ಪೂರ್ಣಮಾಡಿದೆ. ಇದು ನಿಮ್ಮಲ್ಲಿ ಶ್ರೀಹರಿ-ವಾಯುಗಳಿಗಿರುವ ಅನುಗ್ರಹ ದ್ಯೋತಕವಾಗಿದೆ. ಶ್ರೀಮದಾಚಾರ್ಯರ ಪರಮಸಿದ್ಧಾಂತ ಸಾರವನ್ನು ಒಂದೇ ಪದ್ಯದಿಂದ ನಿರೂಪಿಸಿರುತ್ತೀರಿ. ಇದು ಮಾತ್ರವಲ್ಲ: ಸೂರ್ಯಚಂದ್ರರಿರುವವರೆಗೆ ಶಾಶ್ವತವಾಗಿ ಉಳಿವ ಸಿದ್ಧಾಂತವನ್ನು ಉಪನ್ಯಾಸಮಾಡುವ ಪಂಡಿತರಿಗೆ ಸುಜನರಿಗೆ ಮಹೋಪಕಾರವಾಗಿ ನಿಮ್ಮ ಕೀರ್ತಿ ಬೆಳಗುವುದು" ಎಂದು ಹೇಳಿದರು. ಪಂಡಿತರತ್ತ ತಿರುಗಿ "ವಿದ್ವನ್ಮಣಿಗಳೇ!, ನಮ್ಮ ವ್ಯಾಸತೀರ್ಥರ ಕವಿತೆಯ ಭಾವವನ್ನು ನೀವು ಪ್ರಮಾಣ ಪುರಸ್ಸರವಾಗಿ ಬಹುಸುಂದರವಾಗಿ ನಿರೂಪಿಸಿ ನಮಗೆ ಆನಂದವನ್ನುಂಟು ಮಾಡಿದ್ದೀರಿ, ಇದಕ್ಕಾಗಿ ನಿಮ್ಮನ್ನು ನಾವು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇವೆ" ಎಂದು ಹೇಳಿ ಆ ನಂತರ ಶ್ರೀವ್ಯಾಸತೀರ್ಥರೊಡನೆ ಸಾಯಂ ದೀಪಾರಾಧನೆಗೆ ದಯಮಾಡಿಸಿದರು.

## ೧೫. ಶ್ರೀಲಕ್ಷ್ಮೀನಾರಾಯಣಮುನಿಗಳು

ಹಿಂದಿನ ಪ್ರಕರಣವು ಜರುಗಿ ನಾಲ್ಕಾರು ದಿನಗಳಾಗಿವೆ. ಒಂದು ದಿನ ರಾತ್ರಿ ದೀಪಾರಾಧನೆಗಳು ಮುಗಿದು ಗುರು ಶಿಷ್ಯರು ವಿಶ್ರಾಂತಿಯಲ್ಲಿದ್ದಾಗ ಬ್ರಹ್ಮಣ್ಯತೀರ್ಥರು ಇಂತೆಂದರು :—

"ಶ್ರೀಹರಿವಾಯುಗಳ ಪ್ರೇರಣೆಯಂತೆ ನಾವು ನಿಮಗೆ ಕಲಿಸಬಹುದಾದುದನ್ನೆಲ್ಲಾ ಕಲಿಸಿದ್ದೇವೆ. ನೀವೀಗ ಷಡ್ದರ್ಶನಗಳನ್ನು, ಮುಖ್ಯವಾಗಿ ದ್ವೈತಶಾಸ್ತ್ರದ ಮೌಲಿಕಗ್ರಂಥಗಳ ಅಧ್ಯಯನ ಮಾಡಲು ಅಧಿಕಾರಿಗಳಾಗಿದ್ದೀರಿ, ಅದೊಂದು ಕಾರ್ಯ ಸಫಲವಾದರೆ ನಮ್ಮ ಶ್ರಮ ಸಾರ್ಥಕವಾಗಿ ನಮಗೆ ತೃಪ್ತಿಸಂತೋಷಗಳುಂಟಾಗುವವು"

ಗುರುಗಳ ಮಾತುಕೇಳಿ ವ್ಯಾಸತೀರ್ಥರು ವಿನೀತರಾಗಿ "ಗುರುವರ್ಯ! ತಮ್ಮ ಆಜ್ಞೆಯಂತೆ ನಡೆಯಲು ನಾನು ಸಿದ್ಧನಾಗಿದ್ದೇನೆ. ಇತರ ಶಾಸ್ತ್ರಗ್ರಂಥಗಳು ಮತ್ತು ವೇದಾಂತಶಾಸ್ತ್ರಗ್ರಂಥಗಳ ಪಾಠಪ್ರವಚನವನ್ನು ಜಾಗ್ರತೆಯಾಗಿ ಪ್ರಾರಂಭಿಸಿ ಅನುಗ್ರಹಿಸೋಣವಾಗಲಿ" ಎಂದು ಪ್ರಾರ್ಥಿಸಿದರು.

ಶ್ರೀಬ್ರಹ್ಮಣ್ಯತೀರ್ಥರು ನಸುನಕ್ಕು "ನಾವು ನಿಮಗೆ ಹೇಳಬೇಕಾದ ಪಾಠಕ್ರಮ ಮುಗಿದಿದೆ. ನಿಮಗೆ ಸಕಲಶಾಸ್ತ್ರ ಪಾಠಪ್ರವಚನಮಾಡಿಸಿ ಶ್ರೇಷ್ಠಪಂಡಿತರನ್ನಾಗಿ ಮಾಡುವವರು ಬೇರೊಬ್ಬ ಮಹನೀಯರಿದ್ದಾರೆ" ಎಂದು ಹೇಳಿದರು.

ಆಗ ವ್ಯಾಸತೀರ್ಥರು "ಆ ಮಹನೀಯರಾರು ಗುರುದೇವ ?" ಎಂದರು. ಬ್ರಹ್ಮಣ್ಯತೀರ್ಥರು "ಅವರು ಹೊರಗಿನವರೇನಲ್ಲ ! ನಮ್ಮ ಪೂರ್ವಾಶ್ರಮದ ಸಹೋದರರು,ಅವರ ಹೆಸರು ಲಕ್ಷ್ಮೀನಾರಾಯಣಮುನಿಗಳೆಂದು ಅವರು ನಿಮಗೂ ಬಂಧುಗಳೇ ! ನಿಮ್ಮ ತಂದೆಗಳಾದ ರಾಮಾಚಾರ್ಯರ ಸೋದರತ್ತೆಯವರಾದ

ಭಾರತೀದೇವಿಯರೇ ನಮಗೂ ಲಕ್ಷ್ಮೀನಾರಾಯಣಮುನಿಗಳಿಗೂ ಮಾತೃಶ್ರೀಯವರು*!" ಎಂದು ಹೇಳಲು ಶ್ರೀವ್ಯಾಸತೀರ್ಥರು ಸಂತೋಷದಿಂದ 'ಪೂಜ್ಯರೇ, ಈ ವಿಚಾರ ನನಗೆ ತಿಳಿದಿರಲಿಲ್ಲ. ದಯವಿಟ್ಟು ಪೂಜ್ಯ ಶ್ರೀಲಕ್ಷ್ಮೀನಾರಾಯಣ ಯೋಗಿಗಳ ವಿಚಾರ ಸ್ವಲ್ಪ ವಿವರವಾಗಿ ತಿಳಿಸಬೇಕಾಗಿ ಕೋರುತ್ತೇನೆ' ಎಂದರು.

ಬ್ರಹ್ಮಣ್ಯತೀರ್ಥರು ಲಕ್ಷ್ಮೀನಾರಾಯಣಮುನಿಗಳ ವಿಚಾರವನ್ನು ಹೀಗೆ ಹೇಳಹತ್ತಿದರು ;—

"ನಾವು ನಾಲ್ವರು ಅಣ್ಣತಮ್ಮಂದಿರು. ಹಿರಿಯರಾದ ಶ್ರೀಪುರುಷೋತ್ತಮತೀರ್ಥರು ಮತ್ತು ನಾವು ಈ ಮಹಾಸಂಸ್ಥಾನಾಧಿಪತಿಗಳಾದೆವು. ನಮ್ಮ ಎರಡನೆಯ ಅಣ್ಣಂದಿರಾದ ಶ್ರೀಸ್ವರ್ಣವರ್ಣತೀರ್ಥರು ಶ್ರೀಮದಾಚಾರ್ಯರ ಪಟ್ಟದ ಶಿಷ್ಯರಾದ ಶ್ರೀಪದ್ಮನಾಭತೀರ್ಥರು ಸ್ಥಾಪಿಸಿದ ವಿದ್ಯಾಪೀಠದ ಅಧಿಪತಿಗಳಾದವರು. ನಮ್ಮೆಲ್ಲರ ಕಿರಿಯ ಸಹೋದರರಾದ ಶ್ರೀಲಕ್ಷ್ಮೀನಾರಾಯಣಮುನಿಗಳಿಗೆ ಅವರೇ ಪರಮಹಂಸಾಶ್ರಮವಿತ್ತು, ನಾವು ನಿಮಗೆ ಪಾಠಪ್ರವಚನಮಾಡಿಸಿದಂತೆ ಲಕ್ಷ್ಮೀನಾರಾಯಣಮುನಿಗಳಿಗೆ ಪಾಠಹೇಳಿ, ತಮ್ಮ ಪೀಠದ ಉತ್ತರಾಧಿಕಾರಿಗಳನ್ನಾಗಿ ಮಾಡಿದರು. ಶ್ರೀಸ್ವರ್ಣವರ್ಣತೀರ್ಥರಿಗೆ ಈಗ ನಮಗಿರುವಂತೆಯೇ ತಮ್ಮ ವರಕುಮಾರರಾದ ಲಕ್ಷ್ಮೀನಾರಾಯಣಮುನಿಗಳು ಜಗದ್ವಿಖ್ಯಾತಪಂಡಿತರಾಗಿ ಶ್ರೀಮದಾಚಾರ್ಯರ ಸಿದ್ಧಾಂತವನ್ನು ಚೆನ್ನಾಗಿ ಬೆಳೆಸಿಕೊಂಡು ಬರುವಂತಾಗಬೇಕೆಂದು ಬಹಳ ಆಶೆಯಿದ್ದಿತು. ದೈವಾನುಗ್ರಹದಿಂದ ಅವರ ಮನೋರಥವು ನೆರವೇರುವ ಯೋಗ ತಾನಾಗಿ ಒದಗಿಬಂದಿತು.

ಶ್ರೀಮದಾಚಾರ್ಯರ ಎರಡು ಮಹಾಸಂಸ್ಥಾನಗಳಲ್ಲಿ ಒಂದಾದ ದಕ್ಷಿಣಾದಿ ಮಠದ ಶ್ರೀಕವೀಂದ್ರತೀರ್ಥರ ವಿದ್ಯಾಸಿಂಹಾಸನಾಧಿಪತಿಗಳೂ, ನಮ್ಮ ಪೂರ್ವಾಶ್ರಮವಂಶಬಂಧುಗಳೂ ಆದ ಶ್ರೀವಿಬುಧೇಂದ್ರತೀರ್ಥ ಶ್ರೀಪಾದಂಗಳವರು ಸಂಚಾರ

---

* ಕವಿ ರಾಘವೇಂದ್ರಪ್ಪನ "ಸಾರಸ್ವತಪರಿಣಯ"ದಂತೆ ಶ್ರೀಟೀಕಾರಾಯರ ತಂದೆ ಧುಂಡಿರಾಜರ ಎರಡನೆಯ ಪುತ್ರಿಯ ಪತಿಗಳಾದ ವಲ್ಲಭದೇವರಪುತ್ರಿ ಭಾರತೀದೇವಿಯ (ಶ್ರೀವ್ಯಾಸರಾಜರ ತಂದೆಯ ಸೋದರತ್ತೆಯ) ಮಕ್ಕಳೇ ಶ್ರೀಪುರುಷೋತ್ತಮತೀರ್ಥ, ಶ್ರೀಸ್ವರ್ಣವರ್ಣತೀರ್ಥ, ಶ್ರೀಬ್ರಹ್ಮಣ್ಯತೀರ್ಥರು ಮತ್ತು ಶ್ರೀಲಕ್ಷ್ಮೀನಾರಾಯಣಮುನಿಗಳು—ಎಂದು ತಿಳಿಯಬರುವುದು. ಇನ್ನು ಕೆಲವರು ಈ ನಾಲ್ವರೂ ನಾಲ್ಕುಜನ ಅಕ್ಕತಂಗಿಯರ ಪುತ್ರರೆಂದು ಹೇಳುತ್ತಾರೆ. ಒಟ್ಟಿನಲ್ಲಿ ಸಹೋದರರು ಎಂಬುದರಲ್ಲಿ ಸಂದೇಹವಿಲ್ಲ.

—"ಧುಂಡಿರಾಜರಿಗೆಳೆಯ ಸರ್ವೋತ್ತಮರ ಜಾಮಾತರಲ್ಲಿ ಕಿರಿಯ ಗುರುವ್ಯಾಸರಾಯರ ತಂದೆಯ ತಾತ ವಲ್ಲಭದೇವನೆಂಬುವರು॥ ವಲ್ಲಭರ ಜಾಮಾತ ಶೇಷಗಿರಿಪ್ರವರ ಪ್ರಖ್ಯಾತರುವರದಿ ಜನಿಸಿದರು......ವಿಶ್ವಾಮಿತ್ರಗೋತ್ರೋದ್ಭವರು ಕ್ಷಾತ್ರಧರ ಷಾಷ್ಟಿಕೋತ್ತಮರು॥ ವರಯುಧಿಷ್ಠಿರನವತಾರಿಗಳು ಪುರುಷೋತ್ತಮರು ನಕುಲನೇ ಸ್ವರ್ಣವರ್ಣರು ಭಾಸ್ಕರದೇವನೇ ಬ್ರಹ್ಮಣ್ಯಯತಿವರರು। ಧ್ರುವನು ಶ್ರೀಪಾದಾರ್ಯಲಕ್ಷ್ಮೀನಾರಾಯಣರು ॥ ರಾಘವೇಂದ್ರಪ್ಪಕವಿ.

ಕ್ರಮದಿಂದ ಶ್ರೀ ಸ್ವರ್ಣವರ್ಣತೀರ್ಥರಿದ್ದ ಶ್ರೀರಂಗಕ್ಷೇತ್ರಕ್ಕೆ ದಯಮಾಡಿಸಿದರು. ಈ ವಿಚಾರ ತಿಳಿದು ಸ್ವರ್ಣವರ್ಣತೀರ್ಥರಿಗೆ ಪರಮಾನಂದವಾಯಿತು. ಅವರು ಶ್ರೀಮದಾಚಾರ್ಯರ ಮಹಾಸಂಸ್ಥಾನಾಧೀಶರೂ ತಮ್ಮ ಬಂಧುಗಳೂ ಆದ ಶ್ರೀವಿಬುಧೇಂದ್ರತೀರ್ಥರನ್ನು ಗೌರವಾದರಗಳಿಂದ ಸ್ವಾಗತಿಸಿ ತಮ್ಮ ಮಠದಲ್ಲಿ ಬಿಡಾರಮಾಡಿಸಿ ವೈಭವದಿಂದ ಸತ್ಕರಿಸಿದರು. ಮತ್ತು ತಮ್ಮ ಮನದಾಳೆಯನ್ನು ಅವರಲ್ಲಿ ನಿವೇದಿಸಿ, ಲಕ್ಷ್ಮೀನಾರಾಯಣಮುನಿಗಳಿಗೆ ಸಕಲಶಾಸ್ತ್ರಪಾಠಹೇಳಿ ಅವರು ಶ್ರೇಷ್ಠಪಂಡಿತರಾಗುವಂತೆ ಮಾಡಬೇಕೆಂದು ಕೋರಿ, ಅವರ ಮನವೊಲಿಸಿ, ಒಪ್ಪಿಸಿದರು. ಆ ಶ್ರೀವಿಬುಧೇಂದ್ರತೀರ್ಥರಲ್ಲಿಯೇ ಸಮಸ್ತಶಾಸ್ತ್ರಗಳನ್ನೂ, ದ್ವೈತ ಸಿದ್ಧಾಂತವನ್ನೂ ಅಧ್ಯಯನಮಾಡಿ, ಅವರ ಅನುಗ್ರಹದಿಂದಲೇ ಶ್ರೀ ಲಕ್ಷ್ಮೀ ನಾರಾಯಣಮುನಿಗಳು ಲೋಕವಿಖ್ಯಾತ ಪಂಡಿತರಾದರು.

**ಶ್ರೀವ್ಯಾಸ :–** ಗುರುವರ್ಯ, ಪೂಜ್ಯ ಲಕ್ಷ್ಮೀನಾರಾಯಣಮುನಿಗಳು ಶ್ರೀವಿಬುಧೇಂದ್ರತೀರ್ಥರಲ್ಲೇ ವ್ಯಾಸಂಗಮಾಡಿ ಜಗದ್ವಿಖ್ಯಾತಪಂಡಿತರಾದರೆಂದು ಹೇಳೋಣವಾಯಿತು. ಅಂತಹ ಮಹನೀಯರು ಅಸಾಮಾನ್ಯರೇ ಆಗಿರಬೇಕು. ಅವರ ವಿಚಾರ ತಿಳಿಯಲು ನನಗೆ ಕುತೂಹಲವಾಗಿದೆ. ದಯವಿಟ್ಟು ತಿಳಿಸಬೇಕು.

**ಬ್ರಹ್ಮಣ್ಯ :–** ಶ್ರೀವಿಬುಧೇಂದ್ರತೀರ್ಥರ ವಿಚಾರವನ್ನು ನಿರೂಪಿಸುತ್ತೇವೆ, ಸಾವಧಾನವಾಗಿ ಕೇಳಿರಿ. ಶ್ರೀಕವೀಂದ್ರತೀರ್ಥರ ತರುವಾಯ ಪೀಠವಾಳಿದವರು, ಅವರ ಸಮೀಪದ ವಾಷ್ಟಿಕ ಬಂಧುಗಳಾದ ಶ್ರೀ ವಾಗೀಶತೀರ್ಥರು. ಅವರು ಶ್ರೀ ವಿದ್ಯಾಧಿರಾಜರ ಅಣ್ಣಂದಿರ ಪುತ್ರರೂ ಷಾಷ್ಟಿಕಕುಲಾವತಂಸರೂ ಆದ ಶ್ರೀರಾಮಚಂದ್ರತೀರ್ಥರನ್ನು ಮಹಾಸಂಸ್ಥಾನಾಧಿಪತಿಗಳನ್ನಾಗಿ ಮಾಡಿದರು. ಶ್ರೀ ರಾಮಚಂದ್ರತೀರ್ಥರು ಮೊದಲು ಶ್ರೀಕವೀಂದ್ರತೀರ್ಥರಲ್ಲಿಯೂ ಅನಂತರ ಶ್ರೀ ವಾಗೀಶತೀರ್ಥರಲ್ಲಿಯೂ, ಸಕಲಶಾಸ್ತ್ರ-ಸಮಗ್ರದ್ವೈತವೇದಾಂತವನ್ನು ಅಧ್ಯಯನ ಮಾಡಿ ಅದ್ವಿತೀಯ ಪಂಡಿತರಾಗಿ ಕೀರ್ತಿಗಳಿಸಿದರು. ಶ್ರೀರಾಮಚಂದ್ರತೀರ್ಥರು ತಮ್ಮಲ್ಲಿಯೇ ಸಕಲಶಾಸ್ತ್ರಗಳು ಮತ್ತು ದ್ವೈತಸಿದ್ಧಾಂತವನ್ನು ಶ್ರೀಮದಾಚಾರ್ಯ ಪರಂಪರಾಗತ ಪಾಠಪ್ರವಚನ ಸತ್ಸಂಪ್ರದಾಯದಂತೆ ಅಧ್ಯಯನಮಾಡಿದ, ತಮ್ಮ ಸೋದರಳಿಯಂದಿರೂ, ಷಾಷ್ಟಿಕಕುಲಭೂಷಣರೂ ಆದ ರಘುನಾಥಭಟ್ಟರಿಗೆ ಪರಮ ಹಂಸಾಶ್ರಮವಿತ್ತು "ಶ್ರೀವಿಬುಧೇಂದ್ರತೀರ್ಥ"ರೆಂಬ ಅಭಿಧಾನದಿಂದ ಅವರನ್ನು ಶ್ರೀಮದಾಚಾರ್ಯರ ವೇದಾಂತಸಾಮ್ರಾಜ್ಯರಲ್ಲಿ ಮಂಡಿಸಿ ಪಟ್ಟಾಭಿಷೇಕಮಾಡಿ ಅವರಿಗೆ ಸಮಸ್ತ ಬಿರುದಾವಳಿ-ವೈಭವಗಳೊಡನೆ ಶ್ರೀಮದಾಚಾರ್ಯರ ಮಹಾಸಂಸ್ಥಾನವನ್ನು ಒಪ್ಪಿಸಿಕೊಟ್ಟು ಕೃತಾರ್ಥರಾಗಿ, ತಾವು ಕೇವಲ ಜಪತಪಾದ್ಯನುಷ್ಠಾನ, ಶ್ರೀಹರಿತತ್ವಚಿಂತನ-ಧ್ಯಾನಾದಿಗಳಲ್ಲಿ ಕಾಲಕಳೆಯುತ್ತಿದರು.

ಶ್ರೀವಿಬುಧೇಂದ್ರತೀರ್ಥರು ಮಹಾಸಂಸ್ಥಾನಾಧಿಪತ್ಯವನ್ನು ವಹಿಸಿಕೊಂಡು ಒಂದೆರಡುವರ್ಷ ಗುರುಗಳ ಸನ್ನಿಧಿಯಲ್ಲಿಯೇ ಇದ್ದು ಭಕ್ತಿ-ಶ್ರದ್ಧಾದಿಗಳಿಂದ ಗುರು

ಸೇವಾರತರಾಗಿ ಗುರುಗಳ ಪರಮಾನುಗ್ರಹಪಾತ್ರರಾದರು. ಅದೇ ಸಮಯದಲ್ಲಿ ಪರಮತೀಯಪಂಡಿತರು ಪ್ರಬಲಿಸಿ ನ್ಯಾಯಮೀಮಾಂಸಾಶಾಸ್ತ್ರಗಳಬಲದಿಂದ ದ್ವೈತಸಿದ್ಧಾಂತದಮೇಲೆ ಕುತ್ಸಿತದೋಷಾಭಾಸಗಳನ್ನುಹೇರಿ ದ್ವೈತಮತದ ಸಿದ್ಧಾಂತತತ್ವಗಳನ್ನು ಅಲ್ಲಗಳೆಯಲಾರಂಭಿಸಿದರು. ಈ ವಿಚಾರವರಿತ ಶ್ರೀರಾಮಚಂದ್ರತೀರ್ಥರು ಪರಮತನಿರಾಕರಣಪೂರ್ವಕವಾಗಿ ದ್ವೈತಸಿದ್ಧಾಂತಪ್ರತಿಷ್ಠಾಪನ, ಪ್ರಸಾರಕಾರ್ಯ ಮಾಡಿ, ಬಂದೊದಗಿರುವ ವಿಪತ್ತಿನಿಂದ ಸಿದ್ಧಾಂತವನ್ನು ಸಂರಕ್ಷಿಸಲು ಶ್ರೀ ವಿಬುಧೇಂದ್ರತೀರ್ಥರು ದಿಗ್ವಿಜಯ ಯಾತ್ರೆ ಕೈಗೊಂಡು ಹೊರಡಬೇಕೆಂದು ಆಜ್ಞಾಪಿಸಿದರು. ಶ್ರೀವಿಬುಧೇಂದ್ರತೀರ್ಥರು ಗುರುವರ್ಯರ ಅಪ್ಪಣೆಯಂತೆ ದಿಗ್ವಿಜಯಯಾತ್ರೆಯನ್ನು ಕೈಗೊಂಡು ಹೊರಟರು.

ಶ್ರೀವಿಬುಧೇಂದ್ರತೀರ್ಥರು ಸಾಮಾನ್ಯರಲ್ಲ. ಇಂದು ಜಗತ್ತಿನಲ್ಲಿ ದ್ವೈತಸಿದ್ಧಾಂತವು ಉಳಿದು, ಬೆಳೆದು ಬರಲು ಆ ಮಹನೀಯರೇ ಕಾರಣರಾಗಿದ್ದಾರೆ. ಅವರು ಜಗಜ್ಜೇತಾರರಾದ ವಾದಮಲ್ಲರಾಗಿದ್ದು, ಷಡ್ದರ್ಶನಾಚಾರ್ಯಸಾರ್ವಭೌಮರೆಂದು ಅಖಂಡವಿದ್ವನ್ಮಂಡಲಿಯಿಂದಗೇಗೀಯಮಾನರಾಗಿದ್ದಾರೆ. ಶ್ರೀಮದಾಚಾರ್ಯರ ದ್ವೈತಸಿದ್ಧಾಂತತತ್ವವಿಜಯವಾಹಿನಿಯ ಸೇನಾನಾಯಕರ ಸಾಲಿನಲ್ಲಿ ಅಗ್ರಸ್ಥಾನದಲ್ಲಿ ಮೆರೆಯುತ್ತಿರುವ ಮಹಾಮೇಧಾವಿ ಜ್ಞಾನಿಗಳವರು. ಶ್ರೀಮದಾಚಾರ್ಯಪರಂಪರಾ ಪ್ರಾಪ್ತ ಸಚ್ಛಾಸ್ತ್ರಪಾಠಪ್ರವಚನ ಸಂಪ್ರದಾಯ ವಿಚಕ್ಷಣರೂ, ಸೈವಾದ್ವೈತಮತ ನಿರಾಕರಣ ಧುರಂಧರರೂ, ದ್ವೈತಸಿದ್ಧಾಂತ ಸಂಸ್ಥಾಪಕ ಸಾರ್ವಭೌಮರೂ ಎಂದು ವಿಶ್ವದ ವಿದ್ವನ್ಮಂಡಲಿಯಿಂದ ಸ್ತುತ್ಯರಾಗಿ ವಿಖ್ಯಾತಕೀರ್ತಿಯಿಂದ ರಾರಾಜಿಸುತ್ತಿರುವ ಅವರ ಮಹಿಮೆ ಅನಿತರಸಾಧಾರಣವಾದುದು.[1]

ಶ್ರೀಮದಾಚಾರ್ಯರ ಸಿದ್ಧಾಂತಗ್ರಂಥಗಳ ಪಾಠಪ್ರವಚನ ಸಂಪ್ರದಾಯವು ಶ್ರೀಪದ್ಮನಾಭ-ನರಹರಿ-ಮಾಧವ-ಅಕ್ಷೋಭ್ಯ-ಜಯತೀರ್ಥ-ವಿದ್ಯಾಧಿರಾಜರವರೆಗೆ ಅವಿಚ್ಛಿನ್ನವಾಗಿನಡೆದುಬಂದು ಮುಂದೆ ಶ್ರೀರಾಜೇಂದ್ರ-ಕವೀಂದ್ರ-ವಾಗೀಶತೀರ್ಥರು ಆ ಪರಿಶುದ್ಧ ಪರಂಪರೆಯನ್ನು ಚೆನ್ನಾಗಿ ಬೆಳೆಸಿಕೊಂಡು ಬಂದರು. ಆ ಪಾಠ ಪ್ರವಚನ ಸಂಪ್ರದಾಯವು ಶ್ರೀವಾಗೀಶರಿಂದ ಶ್ರೀ ರಾಮಚಂದ್ರರಿಗೂ ಅವರಿಂದ ಶ್ರೀ ವಿಬುಧೇಂದ್ರತೀರ್ಥರಿಗೆ ಲಭಿಸಿ ಆ ಸತ್ಸಂಪ್ರದಾಯ ಪಾಠಪ್ರವಚನಕ್ಕೆ ವಿಬು

---

1. ಶ್ರೀಮತ್ಪೂರ್ಣಪ್ರಮೋದ ಪ್ರಕಟಿತ ಪದವೀಧಾವಿಮೇಧಾವಿಧೀಮಾ —
ತ್ರೈನಾನಾಸೀರಸೀಮಾ ಸಮುದಿತವಿದಿತಾಬಾಧಯೋಧಾಧಿನೇತಾ ।
ಮಾಯಾಸಿದ್ಧಾಂತದೀಕ್ಷಾವಿಘಟನಘಟನಾ ಸರ್ವತಂತ್ರಸ್ವತಂತ್ರಃ ।
ಶ್ರೀರಾಮವ್ಯಾಸದಾಸೋ ವಿಲಸತಿ ವಿಬುಧೇಂದ್ರಾಭಿಧಸ್ಸಂಯಮೀಂದ್ರಃ ॥
ಶ್ರೀಗುರುಗುಣಸ್ತವನಮ್

ಧೇಂದ್ರರೇ ಏಕೈಕ ಧುರೀಣರಾಗಿದ್ದು, ಸಂಪ್ರದಾಯಾರ್ಥಕೋವಿದರೆಂದು ಅವರು ಸರ್ವಮಾಧ್ವಮಂಡಲಿಯಿಂದ ಮಾನ್ಯರಾದರು.

ಈ ಸಮಯದಲ್ಲಿಯೇ ಪರಮತೀಯ ಪಂಡಿತರು ಪ್ರಬಲಿಸಿ ದ್ವೈತಸಿದ್ಧಾಂತದ ಮೇಲೆ ನಾಲ್ಕು ನಿಟ್ಟಿನಿಂದ ಧಾಳಿಮಾಡಲಾರಂಭಿಸಿದ್ದರು. ಮಧ್ವಸಿದ್ಧಾಂತಕ್ಕೆ ಅದೊಂದು ವಿಪತ್ಕಾಲವಾಗಿತ್ತು, ಅದರ ಅಳಿವು ಉಳಿವಿನ ಪ್ರಶ್ನೆ ಬೃಹದಾಕಾರ ತಾಳಿ ಎಲ್ಲ ಪೀಠಾಧೀಶರನ್ನು ಚಿಂತೆಗೀಡುಮಾಡಿತ್ತು. ಇಂಥ ಒಂದು ಸಂಕ್ರಾಂತಿ ಕಾಲದಲ್ಲೇ ಪರಿಸ್ಥಿತಿಯನ್ನರಿತು ಜ್ಞಾನಿಗಳಾದ ಶ್ರೀರಾಮಚಂದ್ರತೀರ್ಥರು ತಮ್ಮ ಪಟ್ಟದ ಶಿಷ್ಯರಾದ ಶ್ರೀವಿಬುಧೇಂದ್ರತೀರ್ಥರನ್ನು ಆ ಕಾರ್ಯದಲ್ಲಿ ನಿಯೋಜಿಸಿ ಪರಮತ ನಿರಾಕರಣಪೂರ್ವಕವಾಗಿ ಅನಾದ್ಯವಿಚ್ಛಿನ್ನವಾಗಿ ಬೆಳೆದುಬಂದ ವೈದಿಕ ಸದ್ವೈಷ್ಣಸಿದ್ಧಾಂತವನ್ನು ಸ್ಥಾಪಿಸಿ, ಅದಕ್ಕೆ ಬಂದಿದ್ದ ಕಂಟಕವನ್ನು ಪರಿಹರಿಸಿ ಸಂರಕ್ಷಿಸಲು ದಿಗ್ವಿಜಯಯಾತ್ರೆಗೆ ಕೊಟ್ಟು ಕಳುಹಿಸಿದರು.

ಶ್ರೀವಿಬುಧೇಂದ್ರತೀರ್ಥರು ಗುರುಗಳ ಅಪ್ಪಣೆಯನ್ನು ಶಿರಸಾಧರಿಸಿ ವಿಜಯಯಾತ್ರೆಗೆ ಹೊರಟರು. ಹೋದಹೋದಲ್ಲಿ ಅವರು ಷಡ್ದರ್ಶನಗಳಲ್ಲಿ ಪ್ರಬಲರೂ, ವಾದಕೋವಿದರೂ ಆದ ನೂರಾರು ಜನ ಪಂಡಿತಾಗ್ರಣಿಗಳನ್ನು ಎದುರಿಸಬೇಕಾಗಿ ಬಂದಿತು. ಶ್ರೀಹರಿವಾಯುಗಳ ಪರಮಾನುಗ್ರಹಕ್ಕೆ ಮುಖ್ಯ ಪಾತ್ರರಾಗಿದ್ದ ವಿಬುಧೇಂದ್ರ ಗುರುಗಳು ಧೈರ್ಯದಿಂದ ನ್ಯಾಯ, ವ್ಯಾಕರಣ, ಮೀಮಾಂಸಾದಿಶಾಸ್ತ್ರಕೋವಿದರೊಡನೆ ವಾಕ್ಯಾರ್ಥಕ್ಕಿಳಿದರು. ಶ್ರೀವಿಬುಧೇಂದ್ರರ ಸರ್ವತಂತ್ರಸ್ವಾತಂತ್ರ್ಯ, ವಾದಕೌಶಲ, ಪ್ರತಿಭೆ, ತೇಜಸ್ಸು, ವಾಗ್ವೈಖರಿಯ ಮುಂದೆ ಅಗ್ನಿಗೆ ಆಹುತಿಯಾಗುವ ಪತಂಗಗಳಂತೆ ಪರವಾದಿಗಳು ಬೀಳಹತ್ತಿದರು. ನಿರುತ್ತರರಾಗಹತ್ತಿದರು. ಶ್ರೀಯವರು ಮುಖ್ಯವಾಗಿ ಶೈವಾದ್ವೈತವಾದಿಗಳ ಎಲ್ಲ ದುರ್ವಾದಗಳನ್ನೂ ಶತಶಃ ಖಂಡಿಸಿ. ವೇದೋಕ್ತ ತತ್ವಜ್ಞಾನ ಮತವನ್ನು ಎತ್ತಿ ಹಿಡಿದು, ನೂರಾರು ಪರವಾದಿಗಳನ್ನು ಜಯಿಸಿ ಸಿದ್ಧಾಂತವನ್ನು ಸ್ಥಾಪಿಸುತ್ತಾ ಭಾರತದ ಉದ್ದಗಲಗಳಲ್ಲಿಯೂ ದ್ವೈತವಿಜಯದುಂದುಭಿಯನ್ನು ಮೊಳಗಿಸುತ್ತಾ ತಮ್ಮ ಅಪ್ರತಿಹತ ತೇಜಸ್ಸಿನಿಂದ ಬೆಳಗುತ್ತಾ ಜಗಜ್ಜೇತಾರರೆಂದು ಅಖಂಡ ಕೀರ್ತಿ ಗಳಿಸಿ ಸರ್ವಮಾನ್ಯರಾದರು.

ಶ್ರೀವಿಬುಧೇಂದ್ರರು ನೂರಾರು ಜನ ಪ್ರಬಲ ಪಂಡಿತರನ್ನು ಗೆದ್ದು ಅವರು ಬರೆದುಕೊಟ್ಟ 'ಜಯಪತ್ರಿಕೆ'ಗಳನ್ನು ನೂರೆಂಟು ಸುವರ್ಣಕಮಲಗಳಲ್ಲಿ ಕೆತ್ತಿಸಿ, ಆ ಅಪೂರ್ವ ಕನಕಕಮಲವಿಜಯಮಾಲಿಕೆಯನ್ನು ತಮ್ಮ ಕುಲದೇವನಾದ ತಿರುಪತಿಯ ಶ್ರೀನಿವಾಸದೇವನಿಗೆ ಸಮರ್ಪಿಸಿ ದ್ವೈತಸಿದ್ಧಾಂತ ಸ್ಥಾಪನಾಚಾರ್ಯ ಸಾರ್ವಭೌಮ

ರೆಂಬ ತಮ್ಮ ಬಿರುದನ್ನು ಸಾರ್ಥಕಗೊಳಿಸಿದರು.[2]

ಶ್ರೀವಿಬುಧೇಂದ್ರತೀರ್ಥರು ಶ್ರೀಸ್ವರ್ಣವರ್ಣತೀರ್ಥರ ಕೋರಿಕೆಯಂತೆ ಶ್ರೀ ಲಕ್ಷ್ಮೀನಾರಾಯಣ ಮುನಿಗಳನ್ನು ತಮ್ಮ ವಿದ್ಯಾಶಿಷ್ಯನನ್ನಾಗಿ ಸ್ವೀಕರಿಸಿ, ತಮ್ಮ ಪ್ರಿಯವರಕುಮಾರಕರ ಜೊತೆಗೆ ಲಕ್ಷ್ಮೀನಾರಾಯಣಯೋಗಿಗಳಿಗೆ ಷಡ್ದರ್ಶನಗಳು, ಮುಖ್ಯವಾಗಿ ಆಚಾರ್ಯರವೇದಾಂತ ದರ್ಶನ ಗ್ರಂಥಗಳನ್ನು ಪಾಠಹೇಳುತ್ತಾ ಶ್ರೀರಂಗದಲ್ಲಿ ಬಹುಕಾಲ ವಾಸಮಾಡಿದರು.

ನಮ್ಮ ಲಕ್ಷ್ಮೀನಾರಾಯಣ ಮುನಿಗಳು ವಿಬುಧೇಂದ್ರರಲ್ಲಿ ವ್ಯಾಸಂಗಮಾಡಲು ಪ್ರಾರಂಭಿಸುವ ಹೊತ್ತಿಗಾಗಲೇ ಶ್ರೀಸರ್ವಜ್ಞಸಿದ್ಧಾಂತ ಪಾಠಪ್ರವಚನ, ಸಂಪ್ರದಾಯದಲ್ಲಿ ಏರುಪೇರುಗಳಾಗಹತ್ತಿದ್ದು, ಸಿದ್ಧಾಂತದಲ್ಲಿ ಸಂಪ್ರದಾಯಭೇದಗಳು ತಲೆದೋರಲಾರಂಭಿಸಿದ್ದವು. ಇದರಿಂದ ಅವಿಚ್ಛಿನ್ನವಾಗಿ ನಡೆದುಬಂದಿದ್ದ ಪಾಠಕ್ರಮದಲ್ಲಿ ವ್ಯತ್ಯಾಸವಾಗಿ ಶ್ರೀಮದಾಚಾರ್ಯ-ಟೀಕಾರಾಯರುಗಳ ಗ್ರಂಥಭಾವವು ಮರೆಯಾಗಲಾರಂಭಿಸಿತ್ತು. ಆದುದರಿಂದ ಶ್ರೀಸರ್ವಜ್ಞ-ಟೀಕಾಕೃತ್ಪಾದರ ಗ್ರಂಥಗಳ ಪಾಠಪ್ರವಚನ ಸಂಪ್ರದಾಯವನ್ನು ಯಥಾವತ್ತಾಗಿ ಮುಂದುವರೆಸಿಕೊಂಡುಬಂದು ಆ ಮಹನೀಯರ ಗ್ರಂಥಭಾವವನ್ನು ಯಶಸ್ವಿಯಾಗಿ ಉಪದೇಶಿಸುತ್ತಾ ದ್ವೈತ ಸಿದ್ಧಾಂತವು ತಮ್ಮ ತರುವಾಯ ಅಜರಾಮರವಾಗಿ ಬೆಳಗುವಂತೆ ಮಾಡಬಲ್ಲ, ಅತ್ಯಂತ ಸಮರ್ಥರಾದ, ಜ್ಞಾನಿಗಳ ಆವಶ್ಯಕತೆ ಅಂದು ಬಹಳವಾಗಿರುವುದನ್ನು ಮನಗಂಡ ವಿಬುಧೇಂದ್ರತೀರ್ಥರು ಆ ಮಹತ್ಕಾರ್ಯಕ್ಕಾಗಿ ತಮ್ಮ ವರಕುಮಾರಕರಾದ ಶ್ರೀ ಜಿತಾಮಿತ್ರರನ್ನು ತಯಾರುಮಾಡುತ್ತಾ, ಮತ್ತೊಬ್ಬ ಮಹಾಪ್ರಜ್ಞಾಶಾಲಿಗಳಾದ ಶಿಷ್ಯರಿಗಾಗಿ ಅರಸುತ್ತಿದ್ದರು. ಅದೇ ಸಮಯದಲ್ಲಿ ಶ್ರೀಲಕ್ಷ್ಮೀನಾರಾಯಣಮುನಿಗಳು ಅವರಿಗೆದೊರಕಿದ್ದು ಅವರ ಸಂತೋಷಕ್ಕೆ ಕಾರಣವಾಯಿತು.

ಮೊದಲು ನೋಟದಲ್ಲಿಯೇ ತಾವು ಅಪೇಕ್ಷಿಸಿದ ಶಿಷ್ಯರಿವರೇ ಎಂದು ಅವರು ಅರಿತರು. ಲಕ್ಷ್ಮೀನಾರಾಯಣಮುನಿಗಳ ಪ್ರತಿಭೆ, ಅಸಾಧಾರಣ ಗ್ರಹಣಶಕ್ತಿ, ಮುಖದಲ್ಲಿ ರಾಜಿಸುವ ಅಪೂರ್ವ ತೇಜಸ್ಸುಗಳನ್ನು ಕಂಡು ಮಾರುಹೋಗಿದ್ದ ವಿಬು

---

2) "ವಿಜಿತ್ಯ ಸರ್ವಾನ್ ವಿಬುಧೇಂದ್ರಯೋಗೀ ಬಭೌ ಹರೇರರ್ಪಿತ ಜೈತ್ರಪತ್ರಃ ॥"
—ಶ್ರೀರಾಘವೇಂದ್ರವಿಜಯಃ —ಸ. ೩. ಶ್ಲೋ.೧೯.

ಶ್ರೀಹರೇಃ ಶ್ರೀವೆಂಕಟೇಶ್ವರಸ್ಯ । ಅರ್ಪಿತಾಃ ಸಮರ್ಪಿತಾಃ ಜೈತ್ರಪತ್ರಾಃ ಜಯ ಪತ್ರಿಕಾಃ ಯೇನ ಸ । ಪ್ರತಿವಾದ್ಯುಕ್ತ ಶ್ಲೋಕೋಪೇತಾ ಅಷ್ಟೋತ್ತರಶತ ಸುವರ್ಣ ಪತ್ರಿಕಾಃ ಸಮರ್ಪಿತವಾನ್, ತಾ ಅದ್ಯಾಪಿ ಶ್ರೀವೆಂಕಟೇಶ್ವರೇ ದೃಶ್ಯಂತೇ । ಏತಾದೃಶಃ ಶ್ರೀವಿಬುಧೇಂದ್ರಯೋಗೀ ಬಭೌ ಇತ್ಯರ್ಥಃ ॥

—ಶ್ರೀರಾಮಾಚಾರ್ಯಃ,ಬಾಲಬೋಧಿನೀ, ನ್ಯಾಯವಾದೀ ರಾಘವೇಂದ್ರಾಚಾರ್ಯ: ರಾಘವೇಂದ್ರವಿಜಯವ್ಯಾಖ್ಯಾ—ಗುರುಪಾದಸೇವಾ

ಧೇಂದ್ರತೀರ್ಥರು, ಲಕ್ಷ್ಮೀನಾರಾಯಣ ಮುನಿಗಳು ವಿದ್ಯಾಶಿಷ್ಯರಾಗಿ ದೊರಕಿದ್ದರಿಂದ ಆನಂದನಿರ್ಭರರಾಗಿ, ಶ್ರೀಮದಾಚಾರ್ಯ–ಪದ್ಮನಾಭ-ಟೀಕಾಕೃತ್ಪಾದರೇ ಈ ಒಂದು ಸುಸಂದರ್ಭವನ್ನು ಒದಗಿಸಿಕೊಟ್ಟರೆಂದು ಭಾವಿಸಿ,ಶ್ರೀರಂಗ ಕ್ಷೇತ್ರದಲ್ಲಿದ್ದಾಗ ಮತ್ತೆ ಸಂಚಾರಕಾಲವಲ್ಲಿಯೂ ಸಹ ಹನ್ನೆರಡು ವರ್ಷಗಳ ಕಾಲ ಲಕ್ಷ್ಮೀನಾರಾಯಣ ಮುನಿಗಳನ್ನು ಎಡಬಿಡದೆ ಅತ್ಯಂತ ಆದರಾಭಿಮಾನ, ಪ್ರೀತಿವಿಶ್ವಾಸಗಳಿಂದ ಸಕಲ ಶಾಸ್ತ್ರಗಳನ್ನು ಪಾಠಹೇಳಿ, ತಮ್ಮ ಸಮಸ್ತ ಪಾಂಡಿತ್ಯ, ವಾದವಿದ್ಯಾನಿಪುಣತೆ, ಪರವಾದಿ ದಿಗ್ವಿಜಯ ಚಾತುರ್ಯ, ಗ್ರಂಥರಚನಾಕೌಶಲ, ಸಿದ್ಧಾಂತಸ್ಥಾಪನ ವಿಚಕ್ಷಣತೆಗಳೆಲ್ಲವನ್ನೂ ಲಕ್ಷ್ಮೀನಾರಾಯಣಮುನಿಗಳಿಗೆ ಹೃತ್ಪೂರ್ವಕವಾಗಿ ಧಾರೆಯೆರೆದು ಶ್ರೀಮದಾಚಾರ್ಯಸಿದ್ಧಾಂತ ಪಾಠಪ್ರವಚನ ಸತ್ಸಂಪ್ರದಾಯ ರಹಸ್ಯಗಳೆಲ್ಲವನ್ನೂ ಅವರಿಗೆ ಅರೆದು ಕುಡಿಸಿ, ಅವರು ಅನಿತರಸಾಧಾರಣ ಪಂಡಿತಾಗ್ರಣಿಗಳಾಗಿ, ಜಗಜ್ಜೇತಾರರಾಗುವಂತೆಮಾಡಿ ಪರಮಾನುಗ್ರಹವಮಾಡಿದರು.[3]

ಶ್ರೀಲಕ್ಷ್ಮೀನಾರಾಯಣಮುನಿಗಳಂತೆ ಅನೇಕ ಪೀಠಾಧಿಪತಿಗಳು, ಗೃಹಸ್ಥಾಶ್ರಮಿಗಳು ನೂರಾರುಜನರು ಶ್ರೀವಿಬುಧೇಂದ್ರರಲ್ಲಿ ವ್ಯಾಸಂಗಮಾಡಿ ಪ್ರಕಾಂಡ ಪಂಡಿತರಾದರು.[4] ಈ ಎಲ್ಲ ವಿದ್ಯಾಶಿಷ್ಯರಲ್ಲಿ ಶ್ರೀಲಕ್ಷ್ಮೀನಾರಾಯಣ ಮುನಿಗಳು ಸರ್ವವಿಧದಲ್ಲೂ ಶ್ರೀವಿಬುದೇಂದ್ರರ ಪ್ರತಿರೂಪರೆನಿಸಿ ಖ್ಯಾತರಾದರು,

ಶ್ರೀವಿಬುಧೇಂದ್ರತೀರ್ಥರ ಈ ಅನುಗ್ರಹ, ಸತತಪರಿಶ್ರಮಗಳ ಫಲವಾಗಿಯೇ ನಮ್ಮ ಶ್ರೀಲಕ್ಷ್ಮೀನಾರಾಯಣಮುನಿಗಳು ಷಡ್ದರ್ಶನಾಚಾರ್ಯರೆಂದೂ, ದ್ವೈತ ಸಿದ್ಧಾಂತಪಾಠಪ್ರವಚನ-ತತ್ವಪ್ರಸಾರಗಳ ಏಕೈಕ ನಾಯಕರೆಂದೂ ವಿಖ್ಯಾತಿಗಳಿಸಿ ಸಂಪ್ರದಾಯಾರ್ಥವಿಶಾರದರೆಂದು ಸಕಲಪಂಡಿತರು, ರಾಜಮಹಾರಾಜರು, ಸಜ್ಜನರು, ಧರ್ಮಾಭಿಮಾನಿಗಳ ಅಗಾಧ ಗೌರವಮನ್ನಣೆ ಹಾಗೂ ಭಕ್ತಿ ಶ್ರದ್ಧೆಗಳಿಗೆ ಮುಖ್ಯ ಪಾತ್ರರಾಗಿ ಇಂದು ದಿಗಂತವಿಶ್ರಾಂತ ಕೀರ್ತಿಗಳಿಸಿ, ರಾಜಸನ್ಮಾನಿತರಾಗಿ ಕಂಗೊಳಿಸುತ್ತಿದ್ದಾರೆ !

ಪ್ರಿಯಶಿಷ್ಯರೇ ! ಈ ಮಹನೀಯರೇ ನಿಮಗೆ ಪಾಠಹೇಳಿ ಸಕಲಶಾಸ್ತ್ರ ಪಾರಂಗತರನ್ನಾಗಿ ಮಾಡಲು ಸಮರ್ಥರೆಂದು ನಾವು ಭಾವಿಸಿದ್ದೇವೆ.

---

3. ಲಕ್ಷ್ಮೀನಾರಾಯಣಮುನಿಃ ವ್ಯಾಸದೇಶಿಕದೇಶಿಕಃ |
ಯಸ್ಮಾತ್ ಶ್ರೀಪಾದರಾಜಾಖ್ಯೋ ಹ್ಯಧ್ಯಗೀತ್ಸಕಲಾಗಮಾನ್ ||

—ಅರ್ಚಾಗತಿಕ್ರಮಃ

ಅಮೀ ಲಕ್ಷ್ಮೀನಾರಾಯಣಮುಖಾಶೇಷಯತಯೋ
ಯತೋ ವಿದ್ಯಾಮೃದ್ಧಾಮಧಿಜಗುರುಧಿಷ್ಣಾನಪತಯಃ |
ಮುಹುರ್ಮೋಹೋದಂಚತ್ಪರಮತಪರೀಭಾವಚತುರಃ
ಸ ಮೇ ಭೂಯಶ್ರೇಯೋ ದಿಶತು ವಿಬುಧೇಂದ್ರವ್ರತಿಪತಿಃ ||

—ಶ್ರೀಗುರುಗುಣಸ್ತವನ

ಗುರುಗಳ ಮಾತುಕೇಳಿ ಶ್ರೀವ್ಯಾಸತೀರ್ಥರ ಹೃದಯವರಳಿತು, ಮೈರೋಮಾಂಚನಗೊಂಡಿತು. ಆನಂದ ಪರವಶರಾಗಿ "ಗುರುದೇವ! ಮಹಾಮಹಿಮರಾದ ಶ್ರೀಲಕ್ಷ್ಮೀನಾರಾಯಣ ಯೋಗಿಗಳಲ್ಲಿ ವ್ಯಾಸಂಗ ಮಾಡುವುದು ನನ್ನ ಭಾಗ್ಯವೆಂದು ಭಾವಿಸಿದ್ದೇನೆ. ಧನ್ಯನಾದೆ. ಸ್ವಾಮಿ, ಶ್ರೀರಂಗದಲ್ಲಿದ್ದ ಗುರುಗಳು ಮುಳಬಾಗಿಲಿಗೆ ಹೇಗೆ ಬಂದು ನೆಲೆಸಿದರು ? ಕೃಪೆಯಿಂದ ತಿಳಿಸಬೇಕಾಗಿ ಪ್ರಾರ್ಥಿಸುತ್ತೇನೆ" ಎಂದರು.

ಬ್ರಹ್ಮಣ್ಯ :—ಲಕ್ಷ್ಮೀನಾರಾಯಣಮುನಿಗಳನ್ನು ಮುಳಬಾಗಲಿಗೆ ಕರತಂದವನು ಮುಳಬಾಗಿಲು-ಪೆನಗೊಂಡೆ ಮಂಡಲಗಳ ರಾಜ್ಯಪಾಲನೂ, ಮಾಂಡಲೀಕನೂ ಚಂದ್ರಗಿರಿಯ ರಾಜನೂ ಆದ ಸಾಳುವ ನರಸಿಂಹನು !

ಸಾಳುವ ನರಸಿಂಹನು ಮಹಾಪರಾಕ್ರಮಿಯೂ, ಸಾಮ್ರಾಜ್ಯ ಹಿತಚಿಂತಕನೂ, ದೈವದ್ವಿಜಪೂಜಕನೂ, ಧರ್ಮಾಭಿಮಾನಿಯೂ, ವಿದ್ಯಾಪಕ್ಷಪಾತಿಯೂ ಆಗಿದ್ದಂತೆ ಪ್ರಜಾವತ್ಸಲನಾದ ಅಧಿಕಾರಿಯೆಂದು ಹೆಸರು ಗಳಿಸಿದ್ದನು, ರಾಜಕಾರಣ ವಿಚಕ್ಷಣನೂ ಪ್ರಜಾಹಿತಚಿಂತಕನೂ ಆದ ಸಾಳುವ ನರಸಿಂಹರಾಜನು ಸಾಮ್ರಾಜ್ಯಹಿತಕ್ಕಾಗಿ ಅನೇಕ ಯುದ್ಧಗಳಲ್ಲಿ ನಾಯಕನಾಗಿದ್ದು ಶತ್ರುಭಯಂಕರನೆನಿಸಿ ವಿಜಯ ಗಳಿಸಿದ್ದನು. ಪ್ರಜರು ಅವನನ್ನು ಮಹಾಮಂಡಲೇಶ್ವರ, ಮಹಾರಾಜ, ಪೃಥ್ವಿವಲ್ಲಭ ಮುಂತಾದ ಬಿರುದುಗಳಿಂದ ಗೌರವಿಸುತ್ತಿದ್ದರು. ನರಸಿಂಹನು ರಾಜಕಾರಣ ನಿಮಿತ್ತವಾಗಿ ಅನೇಕಬಾರಿ ಶ್ರೀರಂಗಕ್ಕೆ ಹೋಗಿಬರುತ್ತಿದ್ದನು. ಶ್ರೀರಂಗಕ್ಕೆ ಅವನು ಅನೇಕ ಸಲ ಬರುತ್ತಿದ್ದುದಕ್ಕೆ ಕಾರಣವೂ ಇತ್ತು. ನರಸಿಂಹ ಭೂಪಾಲನು ತಿರುಪತಿ ಶ್ರೀನಿವಾಸ ದೇವರ ಅವಿಚ್ಛಿನ್ನ ಭಕ್ತನಾಗಿದ್ದನು. ಅಂತೆಯೇ ಅವನು ವಿಷ್ಣುಕ್ಷೇತ್ರವಾದ ಶ್ರೀರಂಗಕ್ಕೆ ಬಂದು ಶ್ರೀರಂಗನಾಥನ ದರ್ಶನಮಾಡಿ ಅನುಗೃಹೀತನಾಗುತ್ತಿದ್ದನು.

ಸಾಳುವ ನರಸಿಂಹನು ಶ್ರೀರಂಗಕ್ಕೆ ಬಂದಾಗಲೆಲ್ಲಾ ಅಲ್ಲಿ ಪ್ರಕಾಂಡಪಂಡಿತರೆಂದೂ ಜ್ಞಾನ-ಭಕ್ತಿ-ವೈರಾಗ್ಯ ಸಂಪನ್ನರಾದ ಮಹಾಮಹಿಮಾಶಾಲಿಗಳೆಂದೂ ಪ್ರಖ್ಯಾತರಾಗಿದ್ದ ನಮ್ಮ ಶ್ರೀಲಕ್ಷ್ಮೀನಾರಾಯಣ ಮುನಿಗಳ ವಿಚಾರವರಿತು ಅಚ್ಚ ಕನ್ನಡಿಗರೆಂದು ವಿಶೇಷ ವಿಶ್ವಾಸದಿಂದ ಅವರ ದರ್ಶನಮಾಡಿ ಆಶೀರ್ವಾದ ಪಡೆಯುತ್ತಿದ್ದನು. ಪ್ರಥಮ ದರ್ಶನದಲ್ಲಿಯೇ ಗುರುಗಳಲ್ಲಿ ಅವನಿಗೆ ವಿಶೇಷ ಭಕ್ತಿ ಶ್ರದ್ಧೆಗಳುಂಟಾದವು. ಸ್ವತಃ ಭಗವದ್ಭಕ್ತನಾದ ಅವನು ಭಾಗವತಾಗ್ರಣಿಗಳೂ, ಜ್ಞಾನಿನಾಯಕರೂ ಆದ ಶ್ರೀಲಕ್ಷ್ಮೀನಾರಾಯಣ ಮುನಿಗಳು ಕರ್ನಾಟಕ ಸಾಮ್ರಾಜ್ಯದಲ್ಲಿ ಅದರಲ್ಲಿಯೂ ತನ್ನ ರಾಜ್ಯದಲ್ಲಿದ್ದರೆ, ಸಾಮ್ರಾಜ್ಯದ ಕಲ್ಯಾಣ, ಧರ್ಮಪ್ರಸಾರಗಳಾಗುವುದರ ಜೊತೆಗೆ ತನಗೊಬ್ಬ ಶ್ರೇಷ್ಠ ಗುರುಗಳ ಉಪದೇಶವು ಪದೇ ಪದೇ ಲಭಿಸುವುದೆಂದು ಅವನು ಯೋಚಿಸಿದನು. ಇದರ ಜೊತೆಗೆ ಕರ್ನಾಟಕದಲ್ಲಿ ಒಂದು ಶ್ರೇಷ್ಠ ವಿದ್ಯಾಪೀಠವನ್ನು ಸ್ಥಾಪಿಸಿ, ಶ್ರೀಲಕ್ಷ್ಮೀನಾರಾಯಣ ಮುನಿಗಳನ್ನು ಅದರ ಕುಲಪತಿಗಳನ್ನಾಗಿ ಮಾಡಿದರೆ, ಭಾರತೀಯ ವಿದ್ಯೆಗಳ ಪಾಠಪ್ರವಚನವು

ಸುವ್ಯವಸ್ಥಿತ ರೀತಿಯಲ್ಲಿ ನೆರವೇರಿ, ಕರ್ನಾಟಕವು ಸಕಲ ವಿದ್ಯೆಗಳಿಗೆ ತೌರೂರೆನಿಸಿ ಕರ್ನಾಟಕ ರಾಜ್ಯಕ್ಕೆ ಜಗತ್ತಿನಲ್ಲಿ ಕೀರ್ತಿಯುಂಟಾಗುವುದೆಂದು ಭಾವಿಸಿದ ಆ ವಿದ್ಯಾಪಕ್ಷಪಾತಿಯು ಈಗ್ಗೆ ಹತ್ತಾರು ವರ್ಷಗಳ ಹಿಂದೆ ಒಮ್ಮೆ ಶ್ರೀರಂಗಕ್ಕೆ ಹೋದಾಗ ಶ್ರೀಲಕ್ಷ್ಮೀನಾರಾಯಣ ಮುನಿಗಳಲ್ಲಿ ತನ್ನ ಮನದಾಸೆಯನ್ನು ನಿವೇದಿಸಿ ಅವರ ಮನ ಒಲಿಸಿ ಸಕಲ ರಾಜಗೌರವಗಳೊಡನೆ ಅವರನ್ನು ಮುಳಬಾಗಿಲಿಗೆ ಕರತಂದನು, ಮತ್ತು ಅಲ್ಲಿ ಶ್ರೀಗಳವರಿಗೆ ಗ್ರಾಮ, ಭೂಸ್ವಾಸ್ಥ್ಯ, ಮಹಾಶಾಸನ, ತಸ್ತೀಕು, ವಸತಿ ಸೌಕರ್ಯ, ವಿದ್ಯಾಪೀಠಕ್ಕೆ ಕಟ್ಟಡಗಳೇ ಮುಂತಾದುವುಗಳನ್ನು ಏರ್ಪಡಿಸಿಕೊಟ್ಟು ವಿದ್ಯಾಪೀಠದ ನಿರ್ವಹಣೆಗೆ ಬೇಕಾದ ಧನಕನಕಾದಿ ಸೌಕರ್ಯಗಳನ್ನು ಮಾಡಿಕೊಟ್ಟನು.

ಮುಳಬಾಗಿಲು ಮೊದಲಿನಿಂದಲೂ ಪಂಡಿತರುಗಳ ಮತ್ತು ಧಾರ್ಮಿಕ ಮಠೀಕರ ನೆಲೆವೀಡಾಗಿದ್ದುದರಿಂದ ಇವೆಲ್ಲವನ್ನೂ ಪರಿಶೀಲಿಸಿ ತಾವು ಸ್ಥಿರವಾಗಿ ವಾಸಿಸಲು ಮುಳಬಾಗಿಲು ಉತ್ತಮ ಸ್ಥಳವೆಂದು ನಿರ್ಧರಿಸಿ ಶ್ರೀಲಕ್ಷ್ಮೀನಾರಾಯಣಮುನಿಗಳು ಸಾಳುವ ನರಸಿಂಹರಾಯನ ಪ್ರಾರ್ಥನೆಯಂತೆ ಮುಳಬಾಗಿಲಿನಲ್ಲಿ ನೆಲೆಸಿ ಅಲ್ಲಿ ಶ್ರೇಷ್ಠ ವಿದ್ಯಾಪೀಠವನ್ನು ಪ್ರಾರಂಭಿಸಿ ತಾವೇ, ಅದರ ಕುಲಪತಿಗಳಾಗಿದ್ದು ನೂರಾರು ಜನ ವಿದ್ಯಾರ್ಥಿಗಳಿಗೆ ಸಕಲಶಾಸ್ತ್ರ ಪಾಠಪ್ರವಚನವನ್ನು ಮಾಡಿಸುತ್ತಾ, ಸ್ವಲ್ಪಕಾಲದಲ್ಲಿಯೇ ಅದೊಂದು ವಿಖ್ಯಾತ ವಿದ್ಯಾಕೇಂದ್ರವಾಗುವಂತೆ ಮಾಡಿದರು. ಈ ವಿದ್ಯಾಪೀಠವು ಸರ್ವವಿಧದಿಂದ ಪ್ರವೃದ್ಧಮಾನಕ್ಕೇರಲು ನರಸಿಂಹನು ಸಮಸ್ತ ಸೌಲಭ್ಯಗಳನ್ನು ಏರ್ಪಡಿಸಿಕೊಡುತ್ತಾ ಆಗಿಂದಾಗ್ಗೆ ಮುಳಬಾಗಿಲಿಗೆ ಬಂದು ಗುರುಗಳಿಂದ ಅಧ್ಯಾತ್ಮ ತತ್ವ-ಧರ್ಮೋಪದೇಶಗಳನ್ನು ಪಡೆಯುತ್ತಾ, ಅವರ ಉಪದೇಶ-ಸಲಹೆಗಳಂತೆ ರಾಜ್ಯಭಾರ ಮಾಡುತ್ತಾ ಪ್ರಜಾರಂಜಕ ರಾಜನೆಂದು ಖ್ಯಾತಿಗಳಿಸಿದನು.

ಹೀಗೆ ವಿದ್ಯಾಪಕ್ಷಪಾತಿಯೂ, ಭಗವದ್ಭಕ್ತನೂ ಆದ ಸಾಳುವ ನರಸಿಂಹ ರಾಯನ ಪ್ರಯತ್ನದ ಪರಿಣಾಮವಾಗಿ ನಮ್ಮ ಲಕ್ಷ್ಮೀನಾರಾಯಣ ಮುನಿಗಳು ಮುಳಬಾಗಿಲಿನಲ್ಲಿ ನೆಲೆಸಿ ದ್ವೈತಸಿದ್ಧಾಂತ ಪ್ರಸಾರಕರಾಗಿ, ನೂರಾರು ಜನ ವಿದ್ಯಾರ್ಥಿಗಳಿಗೆ ವಿದ್ಯಾದಾನ ಮಾಡುತ್ತ ಸಾಳುವ ನರಸಿಂಹಭೂಪಾಲನ ಉಪದೇಶಕ ಗುರುಗಳಾಗಿದ್ದು ಪ್ರಖ್ಯಾತರಾಗಲು ಕಾರಣವಾಯಿತು.

ಗುರುಗಳು ಹೇಳಿದ ವಿಚಾರಕೇಳಿ ಆನಂದಪರವಶರಾದ ಶ್ರೀವ್ಯಾಸತೀರ್ಥರು "ಪರಮಾನಂದವಾಯಿತು ಗುರುವರ್ಯ. ಮುಳಬಾಗಿಲಿಗೆ ಹೋಗಿ ಶ್ರೀಲಕ್ಷ್ಮೀನಾರಾಯಣ ಯೋಗಿಗಳಲ್ಲಿ ವ್ಯಾಸಂಗಮಾಡಲು ಅಪ್ಪಣೆಕೊಟ್ಟರೆ ನಾನು ಹೊರಡಲು ಸಿದ್ಧನಾಗಿದ್ದೇನೆ" ಎಂದು ವಿಜ್ಞಾಪಿಸಿದರು.

ಶ್ರೀಬ್ರಹ್ಮಣ್ಯತೀರ್ಥರು "ಪ್ರೀತ್ಯಾಸ್ಪದರೇ, ಇದೊಂದು ಪರಮ ಪವಿತ್ರವಾದ ಕಾರ್ಯವಾಗಿದೆ. ಆದ್ದರಿಂದಲೇ, ನಾವೇ ನಿಮ್ಮನ್ನು ಮುಳಬಾಗಿಲಿಗೆ ಕರೆದುಕೊಂಡು ಹೋಗಿ ನಿಮ್ಮನ್ನು ಲಕ್ಷ್ಮೀನಾರಾಯಣ ಮುನಿಗಳಿಗೆ ಒಪ್ಪಿಸಿ ನಿಮ್ಮ ವಿದ್ಯಾಭ್ಯಾಸದ

ಭಾರವನ್ನೂ ವಹಿಸಿಕೊಟ್ಟು, ಬರುತ್ತೇವೆ. ನಾಲ್ಕಾರು ದಿನಗಳಲ್ಲಿ ಮುಳಬಾಗಿಲಿಗೆ ಹೊರಡಲು ವ್ಯವಸ್ಥೆ ಮಾಡುತ್ತೇವೆ" ಎಂದು ಹೇಳಿದರು.

## ೧೬. ಶ್ರೀ ಪಂಢರಾಪುರ ಯಾತ್ರೆ

ಶ್ರೀ ಶಾಲಿವಾಹನಶಕೆ ೧೩೪೭ನೇ ಧಾತುಸಂ। ವೈಶಾಖ ಶುಕ್ಲ ಪಾಡ್ಯ (ಕ್ರಿ.ಶ. 1455). ಮುಳಬಾಗಿಲಿನ ಶ್ರೀಪದ್ಮನಾಭತೀರ್ಥರ ಸತ್ಪರಂಪರೆಯ ವಿದ್ಯಾಮಠದಲ್ಲಿ ಶ್ರೀಲಕ್ಷ್ಮೀನಾರಾಯಣಮುನಿಗಳು ಮೀಮಾಂಸಾಶಾಸ್ತ್ರ ಪಾಠಹೇಳುತ್ತಿದ್ದಾರೆ. ಅನೇಕ ಪಂಡಿತರು, ನೂರಾರುಜನ ವಿದ್ಯಾರ್ಥಿಗಳು ಶ್ರೀಯವರ ವಿದ್ವತ್ಪೂರ್ಣ ಪಾಠವನ್ನು ಆಲಿಸುತ್ತಾ ಆನಂದಿಸುತ್ತಿದ್ದಾರೆ.

ಅದೇ ಸಮಯದಲ್ಲಿ ಶ್ರೀಬ್ರಹ್ಮಣ್ಯತೀರ್ಥರ ಶಿಷ್ಯರೂ, ಮಠದ ಪಂಡಿತರೂ ಆದ ವೆಂಕಟರಮಣಾಚಾರ್ಯರು ಬಂದು ಶ್ರೀಪಾದಂಗಳವರಿಗೆ ಸಾಷ್ಟಾಂಗ ನಮಸ್ಕಾರಮಾಡಿದರು. ಅವರನ್ನು ಕಂಡು ಶ್ರೀಗಳವರು "ವೆಂಕಟರಮಣಾಚಾರ್ಯ, ಇದೇನು, ಬಹಳ ಅಪರೂಪವಾಗಿ ಬಂದಿರುವಿರಿ ? ಎಲ್ಲವೂ ಕುಶಲವಷ್ಟೇ ? ಎಂದು ಕೇಳಿದರು. ವೆಂಕಟರಮಣಾಚಾರ್ಯರು ವಿನಯದಿಂದ "ಗುರುದೇವರ ಅನುಗ್ರಬಲದಿಂದ ಎಲ್ಲವೂ ಕುಶಲ. ಹಿರಿಯ ಶ್ರೀಪಾದಂಗಳವರು ವರಕುಮಾರನೊಡನೆ ತಮ್ಮ ದರ್ಶನಕ್ಕಾಗಿ ದಯಮಾಡಿಸುತ್ತಿದ್ದಾರೆ. ಶ್ರೀಯವರು ಪೂರ್ವಭಾವಿಯಾಗಿ ತಮಗೆ ಈ ವಿಚಾರವನ್ನು ವಿಜ್ಞಾಪಿಸುವಂತೆ ಆಜ್ಞಾಪಿಸಿದ್ದರಿಂದ ಬಂದಿದ್ದೇನೆ" ಎಂದು ತಿಳಿಸಿದರು.

ಅದನ್ನು ಕೇಳಿ ಶ್ರೀಗಳವರಿಗೆ ಬಹಳ ಆನಂದವಾಯಿತು. "ಏನು ? ಹಿರಿಯ ಗುರುಗಳು, ಪ್ರಿಯಶಿಷ್ಯರೊಡನೆ ಆಗಮಿಸುತ್ತಿರುವರೆ? ಇದೆಂತಹ ಸೌಭಾಗ್ಯ! ಶ್ರೀಯವರು ಯಾವಾಗ ದಯಮಾಡಿಸುವರು ?" ಎಂದು ಪ್ರಶ್ನಿಸಲು ವೆಂಕಟರಮಣಾಚಾರ್ಯರು "ಗುರುವರ್ಯ ! ಇನ್ನೇನು ಹಿರಿಯಗುರುಗಳು ಬರುವ ಸಮಯವಾಯಿತು" ಎಂದರುಹಿದರು.

ಶ್ರೀಗಳವರು ಗಡಿಬಿಡಿಯಿಂದ ಮೇಲೆದ್ದು ಶ್ರೀಮಠದ ಬಿರುದಾವಳಿ, ವಾದ್ಯ ವೈಭವ,ಪಂಡಿತರವೇದಘೋಷ ಪೂರ್ಣಕುಂಭಗಳೊಡನೆ ಶ್ರೀಬ್ರಹ್ಮಣ್ಯತೀರ್ಥರನ್ನು ಸ್ವಾಗತಿಸಲು ಸಿದ್ಧವಾಗುತ್ತಿದ್ದಂತೆಯೇ ಶ್ರೀಪಾದಂಗಳವರು ಮಂಡಿಸಿದ್ದ ಮೇನೆಯು ಶ್ರೀಮಠದಮುಂದೆ ಬಂದುನಿಂತಿತು. ಶ್ರೀಬ್ರಹ್ಮಣ್ಯತೀರ್ಥರು ಶ್ರೀವ್ಯಾಸತೀರ್ಥರೊಡನೆ ಮೇನೆಯಿಂದಿಳಿದರು.ಶ್ರೀಲಕ್ಷ್ಮೀನಾರಾಯಣಮುನಿಗಳು ಶ್ರೀಗಳವರತ್ತ ಧಾವಿಸಿದರು. ಬ್ರಹ್ಮಣ್ಯತೀರ್ಥರೂ ಸ್ನೇಹಾತಿಶಯದಿಂದ ಮುಂದೆ ಬಂದರು. ಈರ್ವರೂ ಪರಸ್ಪರ ಆಲಂಗಿಸಿದರು. ಇಬ್ಬರಕಣ್ಣೀನಲ್ಲಿಯೂ ಆನಂದಬಾಷ್ಪಹರಿಯುತ್ತಿದೆ. ಶ್ರೀವ್ಯಾಸತೀರ್ಥರು ಮುಂದೆಬಂದು ಶ್ರೀಲಕ್ಷ್ಮೀನಾರಾಯಣಮುನಿಗಳಿಗೆ ನಮಸ್ಕರಿಸಿ

ದರು. ಅವರನ್ನು ಕಂಡು ಹರ್ಷಭರಿತರಾದ ಗುರುಗಳು ಅವರನ್ನು ಆಲಿಂಗಿಸಿ ಶಿರದ ಮೇಲೆ ಕರವಿರಿಸಿ, ಆಶೀರ್ವದಿಸಿ, ಉಭಯಗುರುಗಳನ್ನೂ ಪೂರ್ಣಕುಂಭ, ಮಂಗಳ ವಾದ್ಯ–ವೇದಘೋಷಗಳೊಡನೆ ಸ್ವಾಗತಿಸಿ ಶ್ರೀಮಠಕ್ಕೆ ಕರೆತಂದು ಸಿದ್ಧಪಡಿಸಲಾದ ಆಸನಗಳಲ್ಲಿ ಕೂಡಿಸಿ ತಾವೂ ಆಸೀನರಾದರು.

ಕುಶಲಪ್ರಶ್ನೆಗಳಾದಮೇಲೆ ಲಕ್ಷ್ಮೀನಾರಾಯಣಯತಿಗಳು ಇದೆಂಥ ಅಲಭ್ಯ ಲಾಭ ! ಪೂಜ್ಯರ ದರ್ಶನವಾಗಿ ಅದೆಷ್ಟು ವರ್ಷಗಳಾದವು ! ಹಿರಿಯರ ದರ್ಶನ ದಿಂದ ಪರಮಾನಂದವಾಯಿತು. ಇವರೇ ತಮ್ಮ ವರಕುಮಾರರಲ್ಲವೇ ? ದ್ವೈತ ಸಿದ್ಧಾಂತದ ಭಾಗ್ಯರವಿಯಂತೆ ಕಂಗೊಳಿಸುತ್ತಿರುವರು, ಶ್ರೀವೇದವ್ಯಾಸದೇವರೇ ನಿಮಗೆ ಒಲಿದು ಅನುಗ್ರಹಿಸಿದ ವರಕುಮಾರಕರೆಂದಮೇಲೆ ಹೇಳುವುದೇನು? ಇವರು ಶ್ರೀಮದಾಚಾರ್ಯರ ಸಿದ್ಧಾಂತ ಸ್ಥಾಪನೆಗಾಗಿಯೇ ಅವತರಿಸಿರುವರೆಂದು ನಮಗೆ ಭಾಸವಾಗುತ್ತಿದೆ. ಇವರನ್ನು ನೋಡಿ ಪರಮಾನಂದವಾಯಿತು" ಎಂದು ಹೇಳಲು ಶ್ರೀಬ್ರಹ್ಮಣ್ಯತೀರ್ಥರು ನಸುನಗುತ್ತಾ "ನೀವು ಹೇಳಿದ ಭವಿಷ್ಯವನ್ನು ಕಾರ್ಯ ರೂಪಕ್ಕೆ ತರುವಭಾರ ನಿಮಗೇ ಸೇರಿದೆ" ಎಂದರು.

ಶ್ರೀಲಕ್ಷ್ಮೀನಾರಾಯಣಮುನಿಗಳು ಆನಂತರ "ಇದೇನು ಅಪರೂಪವಾಗಿ ಚಿತ್ತೈಸೋಣವಾಗಿದೆಯಲ್ಲ" ಎನಲು ಶ್ರೀಬ್ರಹ್ಮಣ್ಯಮುನಿಗಳು ನಗುತ್ತಾ "ಮಹಾ ಸಂಸ್ಥಾನದ ಒಂದು ಮಹತ್ವಪೂರ್ಣಕಾರ್ಯಸಾಧನೆಗಾಗಿ ನಿಮ್ಮಲ್ಲಿಗೆ ಬಂದಿದ್ದೇವೆ. ಶ್ರೀಹರಿವಾಯುಗಳಪ್ರೇರಣೆಯಾಯಿತು,ಕೂಡಲೇಹೊರಟುಬಿಟ್ಟೆವು.ಆದ್ದರಿಂದಲೇ ನಿಮಗೆ ಪೂರ್ವಭಾವಿಯಾಗಿ ತಿಳಿಸಲು ಸಾಧ್ಯವಾಗಲಿಲ್ಲ". ಎಂದುಹೇಳಿದರು.

ಅಪೂರ್ವಸಹೋದರರೂ, ಜ್ಞಾನಿಗಳೂ, ಮಹಾಪೀಠಾಧೀಶ್ವರರೂಆದ ಆ ಮಹನೀಯರ ಸಮಾಗಮದಿಂದ ಸಕಲರೂ ಆನಂದತುಂದಿಲರಾದರು. ಅನಂತರ ಉಭಯ ಶ್ರೀಪಾದಂಗಳವರು ದೇವರಪೂಜೆಯನ್ನು ನೆರವೇರಿಸಿ, ಸರ್ವರಿಗೂ ತೀರ್ಥ ಪ್ರಸಾದವಿನಿಯೋಗಮಾಡಿದಮೇಲೆ ಭಿಕ್ಷಾಸ್ವೀಕಾರಮಾಡಿದರು.

ಮಧ್ಯಾಹ್ನ ವಿಶ್ರಾಂತಿಯಲ್ಲಿರುವಾಗ ಶ್ರೀಬ್ರಹ್ಮಣ್ಯತೀರ್ಥರು ಶ್ರೀವ್ಯಾಸರಾಜ ರಿಂದ ಶ್ರೀಲಕ್ಷ್ಮೀನಾರಾಯಣಮುನಿಗಳಿಗೆ ನಮಸ್ಕಾರಮಾಡಿಸಿ ಅವರ ಕರವನ್ನು ಮುನಿಗಳ ಕರದಲ್ಲಿಟ್ಟು "ನಮ್ಮ ಈ ಶಿಷ್ಯರನ್ನು ನಿಮಗೆ ಒಪ್ಪಿಸುತ್ತಿದ್ದೇವೆ. ಇವರಿಗೆ ಸಕಲ ಶಾಸ್ತ್ರಗಳು ಮುಖ್ಯವಾಗಿ ದ್ವೈತಸಿದ್ಧಾಂತಗ್ರಂಥಗಳನ್ನು ಶ್ರೀಮದಾಚಾರ್ಯ ಪರಂಪರಾಗತಸಂಪ್ರದಾಯದಂತೆ ಪಾಠಹೇಳಿ ಇವರನ್ನು ಶ್ರೇಷ್ಠಪಂಡಿತರನ್ನಾಗಿ ಮಾಡುವ ಭಾರವನ್ನು ನಿಮಗೆ ವಹಿಸುತ್ತಿದ್ದೇವೆ. ನಮ್ಮ ಮನೋಭಿಲಾಷೆಯನ್ನು ನೀವು ಪೂರ್ಣಗೊಳಿಸಿ ಇವರು ಶ್ರೀಮದಾಚಾರ್ಯಸಿದ್ಧಾಂತಸ್ಥಾಪಕರಾಗಿ ಮಹಾ ಸಂಸ್ಥಾನವನ್ನು ಮುಂದುವರೆಸಿಕೊಂಡುಹೋಗಲು ಸಮರ್ಥರಾಗುವಂತೆಮಾಡಿ ನಮ್ಮಲ್ಲಿಗೆ ಕಳಿಸಿಕೊಡಬೇಕು" ಎಂದುತಿಳಿಸಿದರು.

ಆನಂದಬಾಷ್ಪಸಿಕ್ತನಯನರಾದ ಶ್ರೀಲಕ್ಷ್ಮೀನಾರಾಯಣಮುನಿಗಳು "ದೊಡ್ಡ ಮಾತನಾಡೋಣವಾಯಿತು, ನಿಮ್ಮ ಆಶೆಯನ್ನು ಸಫಲಗೊಳಿಸಲು ಶ್ರೀಹರಿವಾಯು ಗಳು ಸಮರ್ಥರಿದ್ದಾರೆ. ಈ ವಿಚಾರದಲ್ಲಿ ಸಂಶಯವಿಲ್ಲ; ತಾವು ನಮಗೆ ಒಪ್ಪಿಸಿದ ಭಾರವನ್ನು ಯಶಸ್ವಿಯಾಗಿ ಸಫಲಗೊಳಿಸುತ್ತೇವೆಂದು ನಾವು ನಿಮಗೆ ವಚನಕೊಡು ತ್ತೇವೆ. ಆದರೆ......." ಎಂದು ಅರ್ಧೋಕ್ತಿಯಿಂದ ಸುಮ್ಮನಾಗಲು, ಬ್ರಹ್ಮಣ್ಯ ತೀರ್ಥರು ಕಾತರದಿಂದ "ಆದರೇನು?" ಎಂದು ಪ್ರಶ್ನಿಸಿದರು.

ಆಗ ಲಕ್ಷ್ಮೀನಾರಾಯಣಯತಿಗಳು ನಸುನಕ್ಕು "ಪೂಜ್ಯರೇ, ಮತ್ತೇನಿಲ್ಲ. ನಾವೀಗ ಶ್ರೀಹರಿಯ ಪ್ರೇರಣೆಯಂತೆ ಪಂಢರಾಪುರಯಾತ್ರೆಗೆ ಹೊರಡಲಿದ್ದೇವೆ. ಪಂಚಮೀದಿವಸ ಹೊರಡಲು ಮುಹೂರ್ತವಿಡಿಸಿದ್ದೇವೆ. ನಮಗೊಂದು ವಿಚಾರ ಸ್ಫುರಿಸುತ್ತಿದೆ. ಇದು ಭಗವಂತನಪ್ರೇರಣೆಯೆಂದೇ ಹೇಳಬಹುದು. ವ್ಯಾಸತೀರ್ಥರಿಗೆ ಪಾಠಪ್ರವಚನಮಾಡಿಸಲು ನೀವು ಅವರನ್ನು ಕರೆತಂದಿರುವಾಗಲೇ ನಾವು ಯಾತ್ರೆ ಹೊರಡುತ್ತಿರುವುದೂ ಒಂದುಯೋಗ ಮತ್ತು ಇವರ ಅಭ್ಯುದಯದ ಮುನ್ಸೂ ಚನೆಯೆಂದು ನಾವು ಭಾವಿಸುತ್ತೇವೆ. ಶ್ರೀಮದಾಚಾರ್ಯರ ಶಾಸ್ತ್ರಾಧ್ಯಯನಮಾಡುವ ಮುಂಚೆ ಶ್ರೀಪಾಂಡುರಂಗನ ದರ್ಶನಮಾಡಿ ಅನುಗ್ರಹಸಂಪಾದಿಸುವುದು ಮಂಗಳಕರ ವಾದುದು. ಹೇಗಿದ್ದರೂ ತಾವು ಮಿತಪರಿವಾರದೊಡನೆ ಬಂದಿರುವಿರಿ. ತಾವೂ ಶ್ರೀವ್ಯಾಸತೀರ್ಥರೂ ನಮ್ಮಜತೆಗೆ ಪಂಢರಾಪುರಯಾತ್ರೆಗೆ ದಯಮಾಡಿಸಿದರೆ ಅನಾಯಾಸವಾಗಿ ನಮ್ಮೆಲ್ಲರಿಗೂ ಶ್ರೀವಿಠಲನದರ್ಶನವೂ ಅನುಗ್ರಹವೂ ಲಭಿಸಿ ನಮಗೆ ನೀವೊಪ್ಪಿಸಿದ ಜ್ಞಾನಕಾರ್ಯವು ನಿರ್ವಿಘ್ನವಾಗಿ ಜರುಗುವುದೆಂದು ನಾವು ನಂಬಿದ್ದೇವೆ. ನಾಳೆ ದ್ವಿತೀಯಾ ಶುಭದಿನವಾಗಿದೆ. ನಾಳೆಯಿಂದಲೇ ವ್ಯಾಸತೀರ್ಥರಿಗೆ ಪಾಠವನ್ನು ಪ್ರಾರಂಭಿಸಿಬಿಡುತ್ತೇವೆ. ಯಾತ್ರಾಕಾಲದಲ್ಲಿಯೂ ಪಾಠಪ್ರವಚನವನ್ನು ನೆರವೇರಿಸೋಣ. ಇದು ನಮ್ಮ ಅಭಿಪ್ರಾಯ, ಇದಕ್ಕೆ ತಾವು ಸಮ್ಮತಿಸಬೇಕು. ನಮ್ಮ ಸಾಳುವ ನರಸಿಂಹರಾಯ ಈ ಯಾತ್ರೆ ಯಶಸ್ವಿಯಾಗಲು ಎಲ್ಲ ಅನುಕೂಲ ಗಳನ್ನೂ ಏರ್ಪಡಿಸಿದ್ದಾನಾದ್ದರಿಂದ ಯಾತ್ರೆಯು ಸುಗಮವಾಗಿ ನೆರವೇರುವುದು" ಎಂದು ತಿಳಿಸಿದರು.

ಶ್ರೀಬ್ರಹ್ಮಣ್ಯತೀರ್ಥರು ಸ್ವಲ್ಪಕಾಲಯೋಚಿಸಿ ಅನಂತರ ಸಂತೋಷದಿಂದ "ಶ್ರೀಹರಿಚಿತ್ತ. ಅನಾಯಾಸವಾಗಿ ಶ್ರೀಹರಿದರ್ಶನಲಭಿಸುವುದೂ ಒಂದುಯೋಗ. ನಿಮ್ಮ ಇಚ್ಛೆಯಂತೆಯೇ ಆಗಲಿ" ಎಂದು ತಮ್ಮ ಸಮ್ಮತಿಯನ್ನು ಸೂಚಿಸಿದರು. ಇದರಿಂದ ಲಕ್ಷ್ಮೀನಾರಾಯಣಮುನಿಗಳಿಗೆ ಸಂತೋಷವಾಯಿತು.

ಮೊದಲೇ ನಿಶ್ಚಯಿಸಿದ್ದಂತೆ ಮಿತಪರಿವಾರರಾಗಿ ಶ್ರೀಲಕ್ಷ್ಮೀನಾರಾಯಣಮುನಿ ಗಳು, ಶ್ರೀಬ್ರಹ್ಮಣ್ಯತೀರ್ಥರು ಮತ್ತು ಶ್ರೀವ್ಯಾಸತೀರ್ಥರೊಡನೆ ಪಂಚಮಿದಿವಸ ಪಂಢರಾಪುರಯಾತ್ರೆಯನ್ನು ಕೈಗೊಂಡು ಮುಳಬಾಗಲಿನಿಂದ ಪ್ರಯಾಣಬೆಳೆಸಿದರು

## ೧೭. ಶ್ರೀರಂಗವಿಠಲ

ಯತಿತ್ರಯರು ಸಂಚಾರಕ್ರಮದಲ್ಲಿ ಪಂಢರಪುರಯಾತ್ರೆಗೆ ಹೊರಟರಷ್ಟೆ! ನರಸಿಂಹ ರಾಜನು ಮೊದಲೇ ಏರ್ಪಡಿಸಿದ್ದ ವ್ಯವಸ್ಥೆಯಿಂದಾಗಿ ಶ್ರೀಲಕ್ಷ್ಮೀನಾರಾಯಣಮುನಿಗಳು ಹೋದಹೋದಲ್ಲಿ ಒಳ್ಳೇಸ್ವಾಗತದೊರಕುತ್ತಿತ್ತು. ಶ್ರೀಪಾದತ್ರಯರ ಯಾತ್ರೆ ಸಂತೋಷದಿಂದ ಮುಂದುವರೆಯಿತು. ಪ್ರತಿದಿನ ಶ್ರೀಲಕ್ಷ್ಮೀನಾರಾಯಣಮುನಿಗಳು ಶ್ರೀವ್ಯಾಸತೀರ್ಥರಿಗೆ ನ್ಯಾಯ-ಮೀಮಾಂಸಾದಿ ಶಾಸ್ತ್ರಗಳು ಶ್ರೀಮದಾಚಾರ್ಯರ ದ್ವೈತಶಾಸ್ತ್ರಗಳ ಪಾಠಪ್ರವಚನವನ್ನು ನೆರವೇರಿಸುತ್ತಿದ್ದರು. ಸ್ನಾನ-ಆಹ್ನಿಕ, ಜಪ ತಪಾದ್ಯನುಷ್ಠಾನ, ದೇವಪೂಜಾ, ಪಾಠಪ್ರವಚನ, ಭಕ್ತಜನರಿಗೆ ತತ್ವೋಪದೇಶಾದಿ ಕಾರ್ಯಾಸಕ್ತರಾಗಿ ಲೋಕಕಲ್ಯಾಣವನ್ನೆಸಗುತ್ತಾ ಶ್ರೀಗಳವರು ಸ್ವಲ್ಪದಿನಗಳಲ್ಲಿ ಪಂಡರಪುರವನ್ನು ತಲುಪಿದರು. ಪಂಢರಪುರದಲ್ಲಿ ಆಷಾಢ ಶುಕ್ಲ ಏಕಾದಶಿಯು ಒಂದುಮಹಾ ಪರ್ವಕಾಲವಿದ್ದಂತೆ! ಹತ್ತಾರು ಸಹಸ್ರಜನರು ಅಂದು ಪಾಂಡುರಂಗನ ದರ್ಶನಮಾಡಿ ಸೇವಿಸಲು ಪಂಢರಪುರಕ್ಕೆ ಪ್ರತಿವರ್ಷವೂ ಬರುವುದು ವಾಡಿಕೆ. ಈ ಮಹೋತ್ಸವ ಸಂದರ್ಭದಲ್ಲೇ ಶ್ರೀಲಕ್ಷ್ಮೀನಾರಾಯಣಮುನಿಗಳು ದಯಮಾಡಿಸಿ ದ್ದುದು ಒಂದು ವಿಶೇಷವಾಗಿತ್ತು. ಅಲ್ಲಿ ಯತಿತ್ರಯರಿಗೆ ಅಭೂತಪೂರ್ವ ಸ್ವಾಗತ ದೊರಕಿತು. ಶ್ರೀಪಾದತ್ರಯರು ಪ್ರತಿದಿನ ಭೀಮರಥೀ(ಚಂದ್ರಭಾಗ) ನದೀಸ್ನಾನ, ಶ್ರೀಪಾಂಡುರಂಗನ ದರ್ಶನ, ಸೇವೆಗಳನ್ನುಮಾಡಿ ಪುನೀತರಾದರು.

ಪಂಢರಾಪುರದ ಭಕ್ತಜನರು, ಶ್ರೀಮಠದ ಶಿಷ್ಯರುಗಳ ಪ್ರಾರ್ಥನೆಯಂತೆ ಶ್ರೀಗಳವರು ಅಲ್ಲಿ ಕೆಲಕಾಲ ವಾಸಮಾಡಿ ಪ್ರತಿದಿನ ಪಾಠಪ್ರವಚನ, ದೇವರದರ್ಶನ, ತೀರ್ಥಪ್ರಾಸಾದ, ತತ್ವ-ಧರ್ಮವಿಷಯಕ ಉಪದೇಶಗಳಿಂದ ಅಲ್ಲಿನ ಸಕಲ ಸಜ್ಜನ ರನ್ನು ಸಂತೋಷಪಡಿಸುತ್ತಿದ್ದರು,

ಒಂದು ದಿನ ಶ್ರೀಲಕ್ಷ್ಮೀನಾರಾಯಣಮುನಿಗಳಿಗೆ ಒಂದು ವಿಚಿತ್ರಕನಸಾಯಿತು, ಸ್ವಪ್ನದಲ್ಲಿ ಶ್ರೀಪಾಂಡುರಂಗ ಶ್ರೀಯುವರಿಗೆ ದರ್ಶನವಿತ್ತು, ನಗೆಮೊಗದಿಂದ ಅಪ್ಪಣೆ ಕೊಡಿಸಿದ—"ಭಕ್ತರಾಜ! ನಿನ್ನ ಸೇವೆಯಿಂದ ಸುಪ್ರಸನ್ನನಾಗಿದ್ದೇನೆ.ಹಿಂದೆ ನೀನು ತಂದೆಯ ತೊಡೆಯಮೇಲೆ ಕೂಡಬಯಸಿ ನನ್ನನ್ನು ಕುರಿತು ತಪಸ್ಸುಮಾಡಿ ಒಲಿಸಿ ಕೊಂಡಾಗ ನಿನ್ನನ್ನು ನನ್ನ ತೊಡೆಯಮೇಲೆ ಕೂಡಿಸಿಕೊಂಡು ಅನುಗ್ರಹಿಸಿದ್ದೆ! ನನ್ನ ದರ್ಶನದಿಂದ ನಿನ್ನ ಆ ಹಿಂದಿನ ಆಶಾ, ಪಾಶಾ, ಮೋಹ-ಮಮತೆಗಳು ಸಂಪೂರ್ಣವಾಗಿ ತೊಲಗಿ ನೀನು ನನ್ನ ಅಂತರಂಗಭಕ್ತನಾಗಿ ನನ್ನನ್ನು ವಿಧವಿಧವಾಗಿ ಸೇವಿಸಿ ನನ್ನ ಭಕ್ತಾಗ್ರಣಿಗಳ ಸಾಲಿಗೆಸೇರಿ ಕೀರ್ತಿಗಳಿಸಿದೆ.

ವತ್ಸ! ಇಂದು ನೀನು ನನಗೆ ಅತಿಪ್ರಿಯವಾದ ಜ್ಞಾನಕಾರ್ಯವನ್ನು ಅವಿಚ್ಛಿನ್ನ ವಾಗಿ ನೆರವೇರಿಸುತ್ತಾ ಅನೇಕ ಜ್ಞಾನಿಗಳು ನನ್ನ ತೊಡೆಯಮೇಲೆ ಆಡುವಂತೆ ಮಾಡಿರುವೆ. ಇನ್ನು ಅತಿ ಶೀಘ್ರವಾಗಿ ನನ್ನಭಕ್ತರಲ್ಲಿ ಅಗ್ರಗಣ್ಯನಾಗಿ ಹಿಂದೆ ನನ್ನ

ತೊಡೆಯಮೇಲೆ ರಾಜಿಸಿದ ಮಹನೀಯನನ್ನು ಮತ್ತೆ ನನ್ನ ತೊಡೆಯಮೇಲಾಡುವಂತೆ ಮಾಡುವ ಭಾಗ್ಯಶಾಲಿಯಾಗಿರುವೆ. ಇವೆಲ್ಲದರಿಂದ ನಾನು ನಿನಗೆ ಒಲಿದು ನಿನ್ನನ್ನು ಇಲ್ಲಿಗೆ ಕರೆಸಿಕೊಂಡಿದ್ದೇನೆ. ನಿನ್ನಂಥ ಜ್ಞಾನಿಗಳು ವೇದಾದಿಶಾಸ್ತ್ರಗಳಲ್ಲಿ ಉಕ್ತವಾಗಿರುವ ನನ್ನ ಸಂಬಂಧಿಯಾದ ಸತ್ತತ್ವಗಳನ್ನು ಅಧಿಕಾರಿಗೆ ಬೋಧಿಸಿ ಅವರು ನನ್ನ ಅನುಗ್ರಹಪಾತ್ರರಾಗುವಂತೆ ಮಾಡುತ್ತಿದ್ದೀರಿ! ಆದರೆ ಸಂಸ್ಕೃತಜ್ಞಾನವಿಲ್ಲದೆ, ತತ್ವಜ್ಞಾನವನ್ನರಿಯದೇ, ಸಾಧನಮಾರ್ಗಗೊತ್ತಿಲ್ಲದೆ ಬಳಲುತ್ತಾ ನನ್ನ ಅನುಗ್ರಹ ವಿಮುಖರಾಗಿರುವ ಜನಸಾಮಾನ್ಯರ ಉದ್ಧಾರವಾಗಬೇಕಾಗಿದೆ. ಆ ಮಹತ್ಕಾರ್ಯ ನಿನ್ನಿಂದಲೇ ನೆರವೇರಬೇಕಾಗಿದೆ. ಅದಕ್ಕೆ ನೀನೇ ಸಮರ್ಥ !

ಯತೀಶ! ವೇದಾದಿಶಾಸ್ತ್ರಗಳಲ್ಲಿ ಉಕ್ತವಾಗಿರುವ ಸತ್ತತ್ವಸಾರಗಳನ್ನೂ, ನನ್ನ ಲೀಲಾವಿಲಾಸಗಳನ್ನೂ, ಸಾಧನೆಮಾರ್ಗವನ್ನೂ, ನೀನು ಪ್ರಾಕೃತಭಾಷೆಯಲ್ಲಿ ಉಪದೇಶಿಸಿ, ಪದಗಳನ್ನುರಚಿಸಿ ಜನಸಾಮಾನ್ಯರ ಉದ್ಧಾರಕ್ಕೆ ಸಹಾಯಕವಾದ, ಶ್ರೀವಾಯುದೇವನ ಅವತಾರರಾದ ಶ್ರೀಮಧ್ವಾಚಾರ್ಯರು ಉಪದೇಶಿಸಿದ ಸದ್ವೈಷ್ಣವ ಸಿದ್ಧಾಂತರಹಸ್ಯಗಳನ್ನು ಪಾಕೃತಭಾಷೆಯ ಮೂಲಕ ಪ್ರಸಾರಮಾಡಿ ಶ್ರೀಹರಿದಾಸಮತದ ಸಂಸ್ಥಾಪಕನೆಂದು ಖ್ಯಾತಿಗಳಿಸಿ ಲೋಕಕಲ್ಯಾಣವನ್ನು ಮಾಡು.

ಭಕ್ತವರ! ಈ ಮಹತ್ಕಾರ್ಯವನ್ನು ನಾನು ನಿನಗೆ ವಹಿಸುತ್ತಿದ್ದೇನೆ. ಇದಕ್ಕೆ ಪ್ರೇರಕಶಕ್ತಿಯಾಗಿರಲು ನಿನ್ನಲ್ಲಿ ನಾನು ಇನ್ನೊಂದು ವಿಶೇಷಾನುಗ್ರಹಮಾಡುತ್ತಿದ್ದೇನೆ. ಶ್ರೀಭೀಮರಥೀ ಮತ್ತುಪುಷ್ಪಾವತಿ ನದಿಗಳ ಸಂಗಮಸ್ಥಳದಲ್ಲಿ,ನದಿಯತೀರದಲ್ಲಿ ಪಾಂಡವ ವಂಶೀಯನಾದ ಕ್ಷೇಮಕಾಂತರಾಜನು ಪೂಜಿಸಿದ ನನ್ನ ಪ್ರತಿಮೆಗಳಿರುವ ಎರಡು ದೇವರಪೆಟ್ಟಿಗೆಗಳು ಭೂಸ್ಥಾಪಿತವಾಗಿವೆ. ಆ ಪೆಟ್ಟಿಗೆಗಳಿರುವ ಸ್ಥಳದ ಮೇಲೊಂದು ಸಣ್ಣ ಕಟ್ಟೆಯಿದೆ. ಅದನ್ನು ಒಡೆದು ಭೂಖನನಮಾಡಿಸು. ನಿನಗೆ ಎರಡು ದೇವರ ಪೆಟ್ಟಿಗೆಗಳು ದೊರಕುವವು.

ಆ ಎರಡು ಪೆಟ್ಟಿಗೆಗಳಲ್ಲಿ-ಒಂದರಲ್ಲಿ ಜಾಂಬುವತಿ ಮತ್ತು ಅರ್ಜುನರಿಂದ ಪೂಜೆಗೊಂಡ ರುಕ್ಮಿಣೀ ಸತ್ಯಭಾಮಾ ಸಮೇತನಾದ ಶ್ರೀರಂಗವಿಠಲನ (ನನ್ನ) ಪ್ರತಿಮೆಗಳಿವೆ! ಅದನ್ನು ನೀನು ಪೂಜಿಸು....ನೀನು ಪ್ರಾಕೃತಭಾಷೆಯಲ್ಲಿ ರಚಿಸುವ ಕೃತಿಗಳಿಗೆ "ಶ್ರೀರಂಗವಿಠಲ"ನೆಂದೇ ಅಂಕಿತಮಾಡು. ಭಕ್ತರಾಜ! ಭಾವೀ ಕರ್ನಾಟಕ ಹರಿದಾಸವಾಙ್ಮಯ ಪರಂಪರೆಗೆ ಪ್ರೇರಕಶಕ್ತಿಯಾಗಿ, ಅಧಿದೈವವಾಗಿರುವಂತೆ,"ಶ್ರೀರಂಗವಿಠಲ" ಎಂಬ ಅಂಕಿತದಿಂದ ಸಾಹಿತ್ಯವನ್ನು ನಿರ್ಮಿಸಿ ನೀನು ಕನ್ನಡ ಹರಿದಾಸ ಪಂಥ ಪಿತಾಮಹನೆಂಬ ಕೀರ್ತಿಗೆ ಪಾತ್ರನಾಗು' "ವಿಠಲ" ಎಂಬ ಅಂಕಿತದಿಂದಲೇ ಸತ್ತತ್ವಸಾರಗರ್ಭಿತವಾದ ಹರಿದಾಸವಾಙ್ಮಯವು ಅವಿಚ್ಛಿನ್ನವಾಗಿ, ವ್ಯಾಪಕವಾಗಿ ಹೊರಹೊಮ್ಮುವಂತೆ ಮಾಡಿ ಭಾವಿ ಹರಿದಾಸಪರಂಪರೆಯ ಆಚಾರ್ಯಪುರುಷನಾಗಿ ವಿಖ್ಯಾತನಾಗು! ಇದು ನನ್ನ ಆಜ್ಞೆ!" ಎಂದು ಹೇಳಿ ಮತ್ತೆ ಮುಂದುವರೆದು "ವತ್ಸ,

ನಿನಗೆ ದೊರಕುವ ಮತ್ತೊಂದು ಪೆಟ್ಟಿಗೆಯಲ್ಲಿಯೂ ನನ್ನ ಒಂದು ಪವಿತ್ರ ಪ್ರತಿಮೆಯಿದೆ. ಮುಂದೆ ನಾನು ನನ್ನ ಪರಮಭಕ್ತನಿಗೆ ಪ್ರಸನ್ನನಾಗಿ ಅವನಿಗೆ ಒಲಿದು ಬರುವೆನು. ಅದೂ ನಿನಗೆ ಮುಂದೆ ವೇದ್ಯವಾಗುವುದು. ನಿನ್ನ ಮನೋರಥವು ಫಲಿಸಲಿ. ಅಖಂಡವಾಗಿ ಜ್ಞಾನಕಾರ್ಯವನ್ನು ನೆರವೇರಿಸಿ ಕೀರ್ತಿಶಾಲಿಯಾಗು" ಎಂದು ಆಜ್ಞಾಪಿಸಿ ಶ್ರೀಹರಿಯು ಅದೃಶ್ಯನಾದನು.

ಬೆಳಗಿನಝಾವ ಸ್ವಪ್ನದಿಂದೆಚ್ಚರಗೊಂಡ ಶ್ರೀಲಕ್ಷ್ಮೀನಾರಾಯಣಮುನಿಗಳು ಸ್ವಪ್ನಾರ್ಥವನ್ನು ಸ್ಮರಿಸಿ ಆನಂದಪುಳಕಿತಗಾತ್ರರಾಗಿ ಶ್ರೀಪಾಂಡುರಂಗನನ್ನು ವಿವಿಧ ರೀತಿಯಿಂದ ಸ್ತುತಿಸಿದರು. ಭಗವಂತನ ಅನುಗ್ರಹ-ಕಾರುಣ್ಯ, ಆದೇಶಗಳನ್ನು ಶ್ರೀಗಳವರು ಶ್ರೀಬ್ರಹ್ಮಣ್ಯತೀರ್ಥರು ಮತ್ತು ಶ್ರೀವ್ಯಾಸತೀರ್ಥರಿಗೆ ತಿಳಿಸಿದರು. ಅವರು ಪರಮಾಶ್ಚರ್ಯಾನಂದ ತುಂದಿಲರಾಗಿ ಶ್ರೀಹರಿಯ ವಿಶೇಷ ಕೃಪೆಗೆ ಪಾತ್ರರಾದ ಲಕ್ಷ್ಮೀನಾರಾಯಣಮುನಿಗಳನ್ನು ಶ್ಲಾಘಿಸಿದರು.

ಅನಂತರ ಸೂರ್ಯೋದಯವಾಗುತ್ತಿದ್ದಂತೆಯೇ ಗುರುತ್ರಯರು ಶ್ರೀಮಠದ ನಾಲ್ಕಾರು ಜನರೊಡನೆ ಭೀಮರಥೀ–ಪುಷ್ಪಾವತೀ ಸಂಗಮ ಸ್ಥಳಕ್ಕೆ ಹೋಗಿ ಸ್ನಾನಮಾಡಿ, ಸ್ವಪ್ನದಲ್ಲಿ ವಿಠಲನು ಸೂಚಿಸಿದ ಸ್ಥಳಕ್ಕಾಗಿ ಸುತ್ತಲೂ ಪರೀಕ್ಷಿಸುತ್ತಿರುವಾಗ ನದೀತೀರದ ಅನತಿ ದೂರದಲ್ಲೊಂದು ಹುತ್ತಿಕಟ್ಟೆಯನ್ನು ಕಂಡು ಎಲ್ಲರೂ ಅಲ್ಲಿಗೆ ಬಂದು ಸೇರಿದರು. ಶ್ರೀಗಳವರ ಅಪ್ಪಣೆಯಂತೆ ಮಠದ ಪರಿವಾರದವರು ಆ ಕಟ್ಟೆಯನ್ನು ಒಡೆದು ಭೂಖನನ ಮಾಡುತ್ತಿರುವಾಗ ಎರಡು ದೊಡ್ಡ ದೇವರ ಪೆಟ್ಟಿಗೆಗಳು ಲಭಿಸಿದವು! ಆಗ ಶ್ರೀಲಕ್ಷ್ಮೀನಾರಾಯಣಾದಿ ಯತಿಗಳಿಗಾದ ಆನಂದ, ಸಂಭ್ರಮ ಅವರ್ಣನೀಯ! ಗುರುತ್ರಯರು ದೇವರಪೆಟ್ಟಿಗೆಗಳೊಡನೆ ತಾವು ಬಿಡಾರಮಾಡಿದ ಸ್ಥಳಕ್ಕೆ ಬಂದರು.

ಮಧ್ಯಾಹ್ನ ಸ್ನಾನ, ಆಹ್ನಿಕ, ಜಪತಪಾದ್ಯನುಷ್ಠಾನಗಳಾದ ಮೇಲೆ ಸಂಭ್ರಮ-ಸಂತೋಷಗಳಿಂದ ಶ್ರೀಲಕ್ಷ್ಮೀನಾರಾಯಣಮುನಿಗಳು ಭಕ್ತಿಪೂರ್ವಕವಾಗಿ ಒಂದು ದೇವರಪೆಟ್ಟಿಗೆಯನ್ನು ತೆರೆದರು! ಅದೇನಾಶ್ಚರ್ಯ!! ಆ ಪೆಟ್ಟಿಗೆಯಲ್ಲಿ ಶ್ರೀಪಾಂಡುರಂಗನು ಅಪ್ಪಣೆಮಾಡಿದಂತೆ ತಳತಳನೆ ಹೊಳೆಯುವ ಸರ್ವಾಭರಣಭೂಷಿತನಾದ, ರುಕ್ಮಿಣೀ ಸತ್ಯಭಾಮಾ ಸಮೇತನಾದ ಶ್ರೀರಂಗವಿಠ್ಠಲನು ಶ್ರೀಯವರ ಕಣ್ಣಿಗೆ ಹಬ್ಬವನ್ನುಂಟುಮಾಡುತ್ತಾ ದರ್ಶನವಿತ್ತನು! ಸರ್ವರೂ ರೋಮಾಂಚಿತರಾಗಿ "ಜಯಜಯ ವಿಠಲ" ಎಂದು ಜಯಜಯಕಾರ ಮಾಡಿದರು. ಆನಂದಪರವಶರಾದ ಶ್ರೀಯವರು ಸಂಪ್ರದಾಯಪ್ರಕಾರವಾಗಿ ಶ್ರೀವಿಠಲನನ್ನು ಶ್ರೀಗೋಪಿನಾಥ ದೇವರಜತೆಗೆ ಮಂಡಿಸಿದರು. ಅನಂತರ ದೇವರಲ್ಲಿ ಆವಾಹನ ಮಾಡಲುದ್ಯುಕ್ತರಾಗಿ ತಮ್ಮ ಹೃದಯಕಮಲದಲ್ಲಿರುವ ಬಿಂಬರೂಪಿ ಹರಿಯನ್ನು ಧ್ಯಾನಮಾಡಿದಾಗ ಅಲ್ಲಿ ಅವರಿಗೆ ಶ್ರೀಪಾಂಡುರಂಗನ ಅಪ್ಪಣೆಯಂತೆ ದೊರಕಿದ ಶ್ರೀವಿಠಲನೇ

ಗೋಚರನಾದ. ಶ್ರೀಗಳವರ ಮೈ ಪುಳಕಿಸಿತು. ಭಕ್ತ್ಯತಿಶಯದಿಂದ ಕಣ್ಣೀರು ಮಿಡಿಯಿತು. ಲಕ್ಷ್ಮೀನಾರಾಯಣಮುನಿಗಳು ಆ ಮಂಗಳಮೂರ್ತಿಯನ್ನೇ ನೂತನ ವಿಠಲನ ಪ್ರತಿಮೆಯಲ್ಲಿ ಆವಾಹನ ಮಾಡಿದರು. ಬಿಂಬಮೂರ್ತಿ ವಿಠಲನ ಪ್ರತಿಮೆಯಲ್ಲಿ ನಿಂತು ತಮ್ಮನ್ನು ಕಂಡು ನಸುನಕ್ಕು ಅಭಯಪ್ರಧಾನ ಮಾಡಿದಂತೆ ಕಂಡಿತು. ಈ ದೃಶ್ಯ ಯತಿತ್ರಯರಿಗೂ ಗೋಚರಿಸಿತು, ಯತಿತ್ರಯರ ನೇತ್ರಗಳಿಂದ ಆನಂದ ಬಾಷ್ಪ ಹರಿಯತೊಡಗಿತು. ಶ್ರೀಲಕ್ಷ್ಮೀನಾರಾಯಣಮುನಿಗಳು ಭಾವಪರವಶರಾಗಿ ತಮಗೆ ಗೋಚರಿಸಿದ ಶ್ರೀರಂಗವಿಠಲನನ್ನು ವರ್ಣಿಸಿ ಸ್ತುತಿಸಹತ್ತಿದರು. ಅವರ ಮುಖಾರವಿಂದದಿಂದ ಕನ್ನಡ ಹರಿದಾಸವಾಙ್ಮಯದ ಭಕ್ತಿಗೀತೆಯೊಂದು ಹೊರಹೊಮ್ಮಿತು :

ರಾಗ :- ನಾಟಿ ತಾಳ :- ಖಂಡಛಾಪು

ಶ್ರೀರಂಗವಿಠಲನ ಮಕುಟಕೆ ಶರಣು ॥ ಪ ॥
ಒರದಲೊಪ್ಪುವ ನೀಲಕುಂತಲಕೆ ಶರಣು ।
ಸಿರಿಸಹೋದರನರ್ಧದವಳಿಗೆ ಶರಣು ॥ ಅ ॥
ಸಂಪುನೋಟದ ಚೆಲುವ ಸೋಗಗಣ್ಣಿಗೆ ಶರಣು !
ಸಂಪಿಗೆಯ ಕುಸುಮಸಮ ನಾಸಿಕಕೆ ಶರಣು ॥
ಗುಂಪುರತ್ನದ ಕರ್ಣಕುಂಡಲಗಳಿಗೆ ಶರಣು ।
ಇಂಪ್ಪದರ್ಪಣ ನಿಭ ಕಪೋಲಗಳಿಗೆ ಶರಣು ॥ ೧ ॥
ಕುಂದುಕುಟ್ಮಲಪೋಲ್ವ ದಂತಪಂಕ್ತಿಗೆ ಶರಣು ।
ಅಂದವಾಗಿರುವ ಬಿಂಬೋಷ್ಠಕೆ ಶರಣು ॥
ಚಂದ್ರಿಕಾನಿಭ ಮುದ್ದು ಮಂದಹಾಸಕೆ ಶರಣು ।
ನಂದಗೋಪನಿಗೆ ಶರಣು ॥ ೨ ॥
ಅಬ್ಜನಾಭನ ದಿವ್ಯ ಕಂಬುಕಂಠಕೆ ಶರಣು ।
ಅಬ್ಜಮುಖಿಯು ಇರುವ ವಕ್ಷಸ್ಥಳಕ್ಕೆ ಶರಣು ॥
ಕುಬ್ಜೆಯನು ಡೊಂಕ ತಿದ್ದಿದ ಭುಜಕೆ ಶರಣು ।
ಅಬ್ಜಜಾಸನನ ಪೆತ್ತ ನಾಭಿಗೆ ಶರಣು ॥ ೩ ॥
ರನ್ನಗಂಟೆಗಳಿರುವ ನಿನ್ನ ಕಟಿಗೆ ಶರಣು ।
ಪೊನ್ನಕದಳೀ ಪೋಲ್ವ ತೊಡೆಗಳಿಗೆ ಶರಣು ॥
ಪುನ್ನಾಗಕರಗೆತ್ತದ್ವಯನಿತಂಬಕೆ ಶರಣು ।
ಚೆನ್ನಾಗಿ ಕುಣಿವ ಸಮಜಾನುವಿಗೆ ಶರಣು ॥ ೪ ॥
ಮಂಗಳ ವೈಭೋಗಂಗಳ ಅಂಘ್ರಿದ್ವಯಕೆ ಶರಣು ।
ತುಂಗ ಕುಚಗಳ ಪಿಡಿದ ಕರಗಳಿಗೆ ಶರಣು ॥

1) ಸಿರಿಸಹೋದರನರ್ಧ-ಅರ್ಧಚಂದ್ರ ದವಳಿಗೆ-ಲಲಾಟಕ್ಕೆ

ಪೊಂಗೊಳಲನೂದುವ ಅಂಗುಲಿಗಳಿಗೆ ಶರಣು ।
ರಂಗವಿಠಲನ ಸರ್ವಾಂಗಕೆ ಶರಣು ॥ ೫ ॥

ಶ್ರೀಯವರ ಮುಖದಿಂದ ಹೊರಹೊಮ್ಮಿದ ಕನ್ನಡ ಹರಿದಾಸ ಸಾಹಿತ್ಯಕ್ಕೆ ಗುರುಗಳ ಮೊದಲ ಕಾಣಿಕೆಯಾದ ಆ ಭವ್ಯವಾದ ಶ್ರೀ ಭಗವಂತನ ಸರ್ವಾಂಗ ವರ್ಣನ ಪರವಾದ ಸ್ತುತಿಯನ್ನಾಲಿಸಿ ಸರ್ವರೂ ಆನಂದದಿಂದ ಮೈಮರೆತರು. ಸ್ವಲ್ಪ ಹೊತ್ತಾದಮೇಲೆ ಶ್ರೀಗಳವರು ಪಂಚಾಮೃತ ಸಾಮಗ್ರಿಗಳನ್ನು ತರಿಸಿ ಭಕ್ತಿಯಿಂದ ಶ್ರೀರುಕ್ಮಿಣೀ-ಸತ್ಯಭಾಮಾ ಸಹಿತನಾದ ಶ್ರೀರಂಗವಿಠಲನಿಗೆ ಪಂಚಾಮೃತ ಶುದ್ಧೋದಕಾಭಿಷೇಕಗಳನ್ನು ಮಾಡಿ, ತಮ್ಮ ಸಂಸ್ಥಾನ ಪ್ರತಿಮೆಗಳೊಡನೆ ಮಂಡಿಸಿ, ಮಂತ್ರ ಶಾಸ್ತ್ರೋಕ್ತಕ್ರಮದಲ್ಲಿ ಆವಾಹನಾದಿಗಳಿಂದ ಪೂಜಿಸಿ, ನಿವೇದನವನ್ನು ಸಮರ್ಪಿಸಿ ಮಂಗಳಾರತಿ ಮಾಡಿ ಮಂತ್ರಪುಷ್ಪಗಳನ್ನು ಅರ್ಪಿಸಿದರು. ಅಂದಿನಿಂದ ಶ್ರೀಯವರ ಮಠದಲ್ಲಿ ಸಂಸ್ಥಾನದ ಆರಾಧ್ಯದೇವನಾದ ಶ್ರೀ ಗೋಪಿನಾಥನೊಡನೆ ಶ್ರೀಪಾಂಡುರಂಗನ ಅನುಗ್ರಹದಿಂದ ದೊರೆತ ಶ್ರೀಜಾಂಬುವತೀ-ಅರ್ಜುನ ಕರಾರ್ಚಿತನಾದ ಶ್ರೀರುಕ್ಮಿಣೀಸತ್ಯಭಾಮಾ ಸಮೇತನಾದ ಶ್ರೀರಂಗವಿಠಲನೂ ಶ್ರೀಯವರ ಅಮೃತ ಹಸ್ತದಿಂದ ಪೂಜೆಗೊಳ್ಳಲಾರಂಭಿಸಿದನು.[1]

ಲಕ್ಷ್ಮೀನಾರಾಯಣ ಮುನಿಗಳಿಗೆ ಶ್ರೀರಂಗವಿಠಲನು ಒಲಿದ ವಿಚಾರವು ಪಂಢರಪುರದಲ್ಲೆಲ್ಲಾ ಹರಡಿ ಸಹಸ್ರಾರು ಜನ ಭಕ್ತಜನರು ಶ್ರೀಮಠಕ್ಕೆ ಬಂದು ದೇವರ ದರ್ಶನಮಾಡಿ, ಪರಮಾನಂದಭರಿತರಾಗಿ ಶ್ರೀಗುರುಗಳ ಭಾಗ್ಯವನ್ನು ಕೊಂಡಾಡಹತ್ತಿದರು.

ಹೀಗೆ ನಾಲ್ಕಾರು ದಿನಗಳು ಕಳೆದಮೇಲೆ ತಮ್ಮ ಯಾತ್ರೆಯು ಸಫಲವಾಗಿ, ಭಗವದನುಗ್ರಹದಿಂದ ಶ್ರೀರಂಗವಿಠಲನು ಒಲಿದು ಬಂದು, ಅವನ ಆದೇಶದಂತೆ ಕನ್ನಡ ಹರಿದಾಸಸಾಹಿತ್ಯದ ಉಗಮವೂ ಆಗಿ "ರಂಗವಿಠಲ" ಅಂಕಿತದಿಂದ ಕೃತಿ ರಚನೆಯಾದ್ದರಿಂದ ಆನಂದಭರಿತರಾದ ಮುನಿತ್ರಯರು ಶ್ರೀಪಾಂಡುರಂಗ ದೇವರಿಗೆ ಸೇವಾದಿಗಳನ್ನು ನೆರವೇರಿಸಿ, ಅಪ್ಪಣೆ ಪಡೆದು ಪಂಢರಾಪುರದಿಂದ ಹೊರಟು ಸಂಚಾರ ಕ್ರಮದಿಂದ ಕುಲಸ್ವಾಮಿಯಾದ ಶ್ರೀತಿರುಪತಿಯ - ಶ್ರೀನಿವಾಸದೇವರ ದರ್ಶನಮಾಡಿಕೊಂಡು ಮುಳಬಾಗಿಲಿಗೆ ಬಂದು ಸೇರಿದರು.

ಶ್ರೀಬ್ರಹ್ಮಣ್ಯತೀರ್ಥರು ಮುಳಬಾಗಿಲಿನಲ್ಲಿ ಹತ್ತಾರು ದಿನಗಳಿದ್ದು, ಶ್ರೀವ್ಯಾಸತೀರ್ಥರಿಗೆ ಯುಕ್ತರೀತಿಯಲ್ಲಿ ಹಿತೋಕ್ತಿಗಳನ್ನು ಹೇಳಿ ಉಭಯ ಶ್ರೀಪಾದಂಗಳವ

---

1) "ಶ್ರೀಪಾದರಾಜ" ಬಿರುದಾಂಕಿತರಾದ ಶ್ರೀ ಲಕ್ಷ್ಮೀನಾರಾಯಣ ಮುನಿಗಳ ಸಂಸ್ಥಾನದಲ್ಲಿ ಇಂದಿಗೂ ಸಂಸ್ಥಾನದ ಆರಾಧ್ಯದೇವನಾದ ಶ್ರೀ ಗೋಪಿನಾಥನೊಡನೆ ಕನ್ನಡ ಹರಿದಾಸ ಪಂಥದ ಆರಾಧ್ಯ ದೇವನೂ, ಪ್ರೇರಕ ಶಕ್ತಿಯೂ ಆದ ಶ್ರೀ ರುಕ್ಮಿಣೀ ಸತ್ಯಭಾಮಾ ಸಹಿತ ಶ್ರೀರಂಗವಿಠಲನನ್ನು ಪೀಠಾಧಿಪತಿಗಳು ಪೂಜಿಸುವುದನ್ನು ಕಾಣಬಹುದಾಗಿದೆ.

ರಿಂದ ಬೀಳ್ಕೊಂಡು ತಮ್ಮ ಪರಿವಾರದೊಡನೆ ಹೊರಟು ಅಬ್ಬೂರಿಗೆ ಬಂದು ಸೇರಿ ಮಹಾ ಸಂಸ್ಥಾನದ ಕಾರ್ಯಗಳಲ್ಲಿ ಆಸಕ್ತರಾದರು.

## ೧೮. ಲಕ್ಷ್ಮೀನಾರಾಯಣಮುನಿಗಳಲ್ಲಿ ವಿದ್ಯಾಭ್ಯಾಸ

ಪಂಢರಾಪುರಯಾತ್ರೆಯನ್ನು ಮುಗಿಸಿಕೊಂಡು, ಶ್ರೀಪಾಂಡುರಂಗನ ಅನುಗ್ರಹ ವನ್ನು ಸಂಪಾದಿಸಿ, ಅವನ ಆದೇಶದಂತೆ ಜಾಂಬವತೀ ಅರ್ಜುನ ಕರಾರ್ಚಿತ ಶ್ರೀರುಕ್ಮಿಣೀ-ಸತ್ಯಭಾಮಾ ಸಮೇತನಾದ ಶ್ರೀರಂಗವಿಠಲನ ಪ್ರತಿಮೆಯನ್ನೂ[2] ಮತ್ತೊಂದು ಭಗವನ್ಮೂರ್ತಿವಿರಾಜಿತ ದೇವರ ಪೆಟ್ಟಿಗೆಯನ್ನೂ ಪಡೆದು ಮುಳಬಾಗಿಲಿಗೆ ಹಿಂದಿರುಗಿದ ಮೇಲೆ ಶ್ರೀಲಕ್ಷ್ಮೀನಾರಾಯಣಮುನಿಗಳು ಶ್ರೀವ್ಯಾಸ ತೀರ್ಥರಿಗೆ ಸಕ್ರಮವಾಗಿ ಸಕಲ ಶಾಸ್ತ್ರಗಳ ಪಾಠಪ್ರವಚನವನ್ನು ಪ್ರಾರಂಭಿಸಿದರು. ವ್ಯಾಸತೀರ್ಥರು ಗುರುಗಳನ್ನು ಒಂದು ಕ್ಷಣವೂ ಬಿಟ್ಟಿರದೆ ಅವರ ಸೇವೆಮಾಡುತ್ತಾ ವಿಧೇಯರಾಗಿ ಭಕ್ತಿ ಶ್ರದ್ಧೆಗಳಿಂದ ಸಕಲಶಾಸ್ತ್ರಗ್ರಂಥಗಳನ್ನೂ ಅವರಿಂದ ಅಧ್ಯಯನ ಮಾಡಲಾರಂಭಿಸಿದರು. ಶ್ರೀಗಳವರು ಅಹೋರಾತ್ರಿ, ಅಂದು ವ್ಯಾಸಾಂಗಮಾಡಿದ ವಿಷಯಗಳನ್ನು ಚಿಂತನ ಮಂಥನಗಳಿಂದ ಸ್ವಾಧೀನಪಡಿಸಿ ಕೊಂಡು ಅಗಾಧವಾದ ವಿದ್ವತ್ತನ್ನು ಸಂಪಾದಿಸುತ್ತಿದರು.

ಶ್ರೀವ್ಯಾಸರಾಜರು ನಿಶಿತಬುದ್ಧಿಯುಳ್ಳವರಾಗಿದ್ದರು. ಅವರ ಗ್ರಹಣಶಕ್ತಿ ಅಪೂರ್ವವಾಗಿತ್ತು. ನವನವೋನ್ಮೇಷಶಾಲಿ ಪ್ರತಿಭಾವಂತರಾದ ಅವರು ಎಂಥ ಕ್ಲಿಷ್ಟವಾದ ಶಾಸ್ತ್ರಪ್ರಮೇಯಗಳನ್ನೂ ಅತಿಸುಲಭವಾಗಿ ಕಲಿತುಬಿಡುತ್ತಿದ್ದರು. ಒಮ್ಮೆ ಒಂದು ವಿಷಯ ಕೇಳಿದರೆ ಸಾಕು, ಅದು ಅವರ ಬುದ್ಧಿಯಲ್ಲಿ ಶಾಶ್ವತವಾಗಿ ನೆಲೆಸಿಬಿಡುತ್ತಿತ್ತು. ಅವರದು ಅಂಥ ಅಸಾಧಾರಣ ಜ್ಞಾಪಕಶಕ್ತಿ.

ನಿಜವಾಗಿ ವಿಚಾರಮಾಡಿದಾಗ ವ್ಯಾಸರಾಜರು ಹೊಸದಾಗಿ ಏನನ್ನೂ ಕಲಿಯ ಬೇಕಾಗಿರಲಿಲ್ಲವೆನಿಸುವುದು. ಯುಗಯುಗಳ ಹಿಂದೆಯೇ ಅವರು ಸಕಲಶಾಸ್ತ್ರಾರ್ಥ ಗಳನ್ನು ಬಲ್ಲ ಜ್ಞಾನಿಗಳಾಗಿದ್ದರು. ಸತ್ಯಲೋಕದ ಕರ್ಮಜದೇವತೆ, ಶಂಕುಕರ್ಣ ನಾಮಾಂಕಿತರಾದ ಶ್ರೀಸರಸಿಜಾಸನರ ಪ್ರೀತಿಯ ಸೇವಕರಾದ ಅವರು ಪ್ರಹ್ಲಾದ ರಾಜರಾಗಿ ಅವತರಿಸಿದಾಗ ಮಾತೃಗರ್ಭದಲ್ಲಿರುವಾಗಲೇ ಜ್ಞಾನನಿಧಿಗಳಾದ ದೇವರ್ಷಿ

---

2) ಶ್ರೀಪಾಂಡುರಂಗನ ಸ್ವಪ್ನಸೂಚಿತ ಅಣತಿಯಂತೆ ದೊರೆತ ಶ್ರೀವಿಠಲನ ಪ್ರತಿಮೆಗೆ ಶ್ರೀ ಲಕ್ಷ್ಮೀನಾರಾಯಣಮುನಿಗಳು ತಾವು ಬಹುಕಾಲ ವಾಸಮಾಡಿದ ಶ್ರೀರಂಗದ ಶ್ರೀರಂಗ ನಾಥ ಹಾಗೂ ಪಂಢರಾಪುರದ ಶ್ರೀ ಪಾಂಡುರಂಗವಿಠಲನ ಸ್ಮರಣೆಯು ಪ್ರತಿದಿನವೂ ತಮಗಾಗುತ್ತಿರಬೇಕೆಂದು "ಶ್ರೀರಂಗ-ವಿಠಲ" ನೆಂದು ನಾಮಕರಣಮಾಡಿ "ರಂಗವಿಠಲ" ನೆಂಬ ಅಂಕಿತದಿಂದಲೇ ಕೃತಿಗಳನ್ನು ರಚಿಸಿದರೆಂದು ಹರಿದಾಸಪಂಥದವರು ಅಭಿಪ್ರಾಯ ಪಡುತ್ತಾರೆ. ಇನ್ನು ಕೆಲವರು ಅವರಿಗೆ ದೊರೆತ ಪ್ರತಿಮೆಯ ಹೆಸರೇ ರಂಗವಿಠಲ ನೆಂದೂ ಅದೇ ಅಂಕಿತದಿಂದ ಕೃತಿ ರಚಿಸಿದರೆಂದೂ ಹೇಳುವರು.

ನಾರದರಿಂದ ತತ್ತ್ವಜ್ಞಾನದ ಉಪದೇಶವನ್ನು ಪಡೆದ ಭಾಗ್ಯಶಾಲಿಗಳು. ಅವರದು ವಾಗಾಡಂಬರ-ಪ್ರದರ್ಶನಗಳಿಗಾಗಿ ಕಲಿತಜ್ಞಾನವಾಗಿರಲಿಲ್ಲ. ಅದು ಸಕಲಶಾಸ್ತ್ರಗಳ ಅಚ್ಚುಕಟ್ಟಿನಲ್ಲಿ ವಿಚಾರ-ವಿಮರ್ಶೆಗಳ ವರೆಗಲ್ಲಿಗೆ ಹಚ್ಚಿ, ಪ್ರಮಾಣಗಳ ಹೊಳು ಪಿನಲ್ಲಿ ಜಳಪಿಸಿ ಸಂಪಾದಿಸಿದ ಶ್ರೀವಿಷ್ಣು ಸರ್ವೋತ್ತಮತ್ವಪ್ರತಿಪಾದಕವಾದ ನಿಕೃಷ್ಟ ಜ್ಞಾನವಾಗಿದ್ದಿತು. ಅದು ಪರಿಪೂರ್ಣವೂ ಆಗಿದ್ದಿತು. ಅದು ಕೇವಲ ಕಲಿಕೆಗೆ ಉಪದೇಶಕ್ಕೆ ಮಾತ್ರವಾಗಿರದೆ, ಅನುಭವದಿಂದ ಅವರು ಕಂಡುಕೊಂಡ, ಜೀವನ ದಲ್ಲಿ ಆಚರಣೆಗೆ ತಂದ ದೃಢವಾದ, ಪರಿಪಕ್ವವಾದ ಜ್ಞಾನವಾಗಿತ್ತು. ಅದು ಪ್ರಹ್ಲಾದರ ಜೀವನದ ಪ್ರತಿಹಂತದಲ್ಲಿಯೂ ತಾನೇತಾನಾಗಿ ವಿಜೃಂಭಿಸುತ್ತಿತ್ತು. ಜ್ಞಾನವು ಸಾಧಕನ ಜೀವನದುಸಿರಾಗಿರಬೇಕು. ಅದನ್ನು ಜೀವನದಲ್ಲಿ ಅಳವಡಿಸಿ ಕೊಂಡು, ಅನುಭವಕ್ಕೆ ತಂದುಕೊಂಡು, ಆದರಿಂದಲೇ ಆತ್ಮೋದ್ಧಾರವೆಂದರಿತು, ನಿರ್ದುಷ್ಟವಾದ ಆ ಜ್ಞಾನಾಮೃತಕ್ಕೆ ನಿರ್ವ್ಯಾಜವೂ ಕಾಮನಾರಹಿತವೂ ಆದ ಭಕ್ತಿಯೆಂಬ ಸಕ್ಕರೆಯನ್ನು ಬೆರೆಸಿ, ಆ ಭಕ್ತಿಸಹಕೃತ ಜ್ಞಾನಾಮೃತವಾಹಿನಿಯನ್ನು ಪರಾತ್ಪರನಾದ ಶ್ರೀಮನ್ನಾರಾಯಣನ ಪಾದಾರವಿಂದಗಳಿಗೆ ಅವ್ಯಾಹತವಾಗಿ ಭರದಿಂದ ಹರಿಸಿದಾಗಮಾತ್ರ ಅದು ಸಾರ್ಥಕವಾಗುವುದು, ಭಗವತ್ಪ್ರಸಾದಜನಕ ವಾಗುವುದು. ಜೀವನ ನಿಜಗುರಿಯಾದ ಆತ್ಯಂತಿಕದುಃಖನಿವೃತ್ತಿಪೂರ್ವಕ ಶಾಶ್ವ ತಾನಂದ ಪ್ರಾಪಕವಾಗುವುದು ! ಭಗವಂತನಿಗೆ . ಅತಿ ಪ್ರೀತಿಜನಕವಾದ ಭಕ್ತಿಸಹ ಕೃತವಾದ ಇಂಥ ಜ್ಞಾನವು ಶ್ರೀಪ್ರಹ್ಲಾದರಾಜರಿಗೆ ಜನ್ಮದಿಂದಲೇ ಇದ್ದು ಪ್ರವೃದ್ಧವಾಗಿ ಪರಾಕಾಷ್ಠತೆಯನ್ನು ಮುಟ್ಟಿ, ಶ್ರೀಹರಿಯ ಅನುಗ್ರಹವನ್ನು ದೊರಕಿಸಿಕೊಟ್ಟುದು ಅವರ ಜೀವನದ ವಿವೇಚನೆಯಿಂದ ಸ್ಪಷ್ಟವಾಗುವುದು.

ಇಂತು ಅನುಭವ-ಚಿಂತಾಮಂಥನಗಳಿಂದ ಕಂಡುಕೊಂಡ ನಿತ್ಯಸತ್ಯಭೂತವಾದ ಮಹಾತತ್ತ್ವಾರ್ಥಗರ್ಭಿತವಾದ ಆ ಜ್ಞಾನವು ತನ್ನೊಬ್ಬನ ಸ್ವತ್ತಾಗಿ ಉಳಿದರೆ ಅದಷ್ಟು ಶೋಭಿಸದು. ಅದು ಪರರ ಉಪಕಾರಕ್ಕೆ ಉಪಯುಕ್ತವಾಗಬೇಕು.. ಆ ಜ್ಞಾನವು ಸರ್ವಸುಜನರ ಉದ್ಧಾರಕ್ಕೆ ಕಾರಣವಾದಾಗ, ಸರ್ವರ ಅಭ್ಯುದಯಕ್ಕಾಗಿ ಅದನ್ನು ವಿನಿಯೋಗಿಸಿದಾಗ,ಆ ಜ್ಞಾನಾಮೃತವನ್ನು ಇತರರಿಗೂ ಹಂಚಿಕೊಟ್ಟಾಗ ಅಂತಹ ಜ್ಞಾನವನ್ನು ಪಡೆದುದು ಸಾರ್ಥಕವಾಗುವುದು. "ಸರ್ವೇಜನಾಸ್ಸುಖಿನೋ ಭವಂತು" ಎಂಬ ಈ ಬಗೆಯ ಮಹಾಔದಾರ್ಯವು ಶ್ರೀಪ್ರಹ್ಲಾದರಾಜರ ಜೀವ ನದ ಉದ್ದಗಲಕ್ಕೂ ವ್ಯಾಪಿಸಿದ್ದನ್ನು ಮನಗಾಣಬಹುದಾಗಿದೆ.

ಶ್ರೀಪ್ರಹ್ಲಾದರಾಜರಾಗಿ ಅವತರಿಸಿದ್ದಾಗ ಅವರು ನಾರದರ ಅನುಗ್ರಹೋಪ ದೇಶದಿಂದ ಸಂಪಾದಿಸಿ ಬೆಳೆಸಿಕೊಂಡುಬಂದು ಪರರಿಗೂ ಹಂಚಿಕೊಟ್ಟ ಆ ಪರಿ ಶುದ್ಧಜ್ಞಾನವು ಅವರಿಗೆ ಅತಿ ಶೀಘ್ರವಾಗಿಯೇ ಫಲವನ್ನೂ ಕೊಟ್ಟುಬಿಟ್ಟಿತು ! ವೇದಾದಿಶಾಸ್ತ್ರಗಳೆಲ್ಲವೂ ಪರಾತ್ಪರರಾದ ಭಗವಂತನನ್ನು ಒಲಿಸಿಕೊಂಡು ಅವನ

ಪ್ರಸಾದವನ್ನು ಸಂಪಾದಿಸಲೆಂದೇ ಪ್ರವೃತ್ತವಾಗಿದೆ, ಆ ಪರಮಜ್ಞಾನದ ಬಲದಿಂದ ನಮ್ಮ ಪ್ರಹ್ಲಾದರು ಪರಮೇಶ್ವರನಾದ ಶ್ರೀನರಸಿಂಹರೂಪೀಶ್ರೀಮನ್ನಾರಾಯಣನ ಸಾಕ್ಷಾತ್ಕಾರ, ಪ್ರಸಾದ, ಅನಿತರಸಾಧಾರಣ ಅನುಗ್ರಹರೂಪ ವರಗಳನ್ನು ಪಡೆದುದು ಭಾಗವತಾದಿಶಾಸ್ತ್ರಗಳಿಂದ ವ್ಯಕ್ತವಾಗುವುದು.

ಇಂತು ಮಹಾಜ್ಞಾನಿಗಳಾದ ಪ್ರಹ್ಲಾದರಾಜರೇ ಭಗವತ್ಸಂಕಲ್ಪದಂತೆ ಜ್ಞಾನ ಪ್ರಸಾರ-ಲೋಕಕಲ್ಯಾಣಗಳಿಗಾಗಿ ಶ್ರೀವ್ಯಾಸರಾಜರಾಗಿ ಅವತರಿಸಿರುವುದರಿಂದ ಅವರು ಈಗ ಹೊಸದಾಗಿ ಶಾಸ್ತ್ರಜ್ಞಾನವನ್ನು ಸಂಪಾದಿಸಬೇಕಾದ ಅವಶ್ಯಕತೆಯಿರಲಿಲ್ಲ. ಆದರೂ "ನರಜನ್ಮೇ ನರವತ್ಪ್ರವೃತ್ತಿಃ ಮಾನುಷೇ ಮಾನುಷಾಚಾರಃ" ಎಂದು ಪರಮಾತ್ಮನೇ ಆಜ್ಞಾಪಿಸಿರುವುದರಿಂದ ಜ್ಞಾನಿಗಳಾಗಿದ್ದರೂ ಮಾನವರಾಗಿರುವುದರಿಂದ ಅದಕ್ಕೆ ತಕ್ಕಂತೆ ಸಕಲಶಾಸ್ತ್ರಗಳನ್ನೂ ಅಧ್ಯಯನಮಾಡಿ ಜ್ಞಾನಿಗಳಾದಂತೆ ತೋರಿದ್ದಾರೆಂದು ತಿಳಿಯಬೇಕು,

ಇಲ್ಲಿ ನಾವು ಮತ್ತೊಂದು ವಿಚಿತ್ರಸಂಗತಿಯನ್ನು ಮನಗಾಣಬಹುದಾಗಿದೆ. ಶ್ರೀವ್ಯಾಸರಾಜರು ವ್ಯಾಸಂಗಮಾಡುತ್ತಿರುವುದು, ಶ್ರೀಲಕ್ಷ್ಮೀನಾರಾಯಣಯೋಗಿಗಳಲ್ಲಿ, ಅವರು ಸಾಕ್ಷಾತ್ ಧ್ರುವರಾಜರ ಅವತಾರರಾಗಿದ್ದಾರೆ. ಶ್ರೀವ್ಯಾಸರಾಜರಾದರೋ ಪ್ರಹ್ಲಾದರಾಜಾವತಾರಿಗಳು. ಧ್ರುವ-ಪ್ರಹ್ಲಾದರಿಬ್ಬರೂ ಶ್ರೀನಾರದರ ಉಪದೇಶದಿಂದಲೇ ಪರಮಾತ್ಮನ ಸಾಕ್ಷಾತ್ಕಾರವನ್ನು ಪಡೆದ ಜ್ಞಾನಿಗಳು. ನಾರದರೂ ಶಿಷ್ಯರಾದ ಈ ಮಹನೀಯರೂ ಕಲಿಯುಗದಲ್ಲಿ ಮತ್ತೆ ಅವತರಿಸುವಂತೆ ಮಾಡಿ, ಒತ್ತಟ್ಟಿಗೆ ಸೇರಿಸಿ, ಗುರುಶಿಷ್ಯರನ್ನಾಗಿ ಮಾಡಿದ್ದು ಶ್ರೀಹರಿಯ ಲೀಲಾಸವಿಲಾಸ ದ್ಯೋತಕವೆಂದು ಹೇಳಬಹುದು. ಮನುಷ್ಯಜನ್ಮದಲ್ಲಿ ಶ್ರೀಪ್ರಹ್ಲಾದರಾಜರು ವ್ಯಾಸರಾಜರಾಗಿ ಜನಿಸಿದ್ದಾರೆ. ಈಗ ಅವರು ಅಧ್ಯಯನದಿಂದ ಜ್ಞಾನವನ್ನು ಸಂಪಾದಿಸಿದಂತೆ ತೋರಬೇಕಾಗಿದೆ. ಅದು ಸಾಮಾನ್ಯರಿಂದ ಕಲಿತಂತಾಗಬಾರದು. ನಾರದರಿಂದ ಅವರಾವ ಜ್ಞಾನವನ್ನು ಪಡೆದರೋ ಅದೇ ನಾರದರ ಉಪದೇಶದಿಂದ ಜ್ಞಾನಿಗಳಾದ, ಭಗವದ್ಭಕ್ತ ಶ್ರೀಧ್ರುವರಾಜರಿಂದಲೇ ಉಪದೇಶಪಡೆಯಬೇಕೆಂಬುದು ಶ್ರೀಹರಿ ಸಂಕಲ್ಪವೆಂದು ತೋರುತ್ತದೆ. ಅಂತೆಯೇ ಪ್ರಹ್ಲಾದರು ವ್ಯಾಸರಾಜರಾಗಿ ಅವತರಿಸುವ ಮೊದಲೇ ಅವರಿಗೆ ಗುರುಗಳಾಗಿ ಜ್ಞಾನೋಪದೇಶಮಾಡಲು ಶ್ರೀಹರಿಯು ಧ್ರುವರಾಜನನ್ನು ಲಕ್ಷ್ಮೀನಾರಾಯಣಮುನಿಗಳಾಗಿ ಅವತರಿಸುವಂತೆ ಮಾಡಿ ತನ್ನ ಅಘಟಿತಘಟನಾಪಟುತ್ವ, ಲೀಲಾವಿಲಾಸಗಳನ್ನು ತೋರಿಸಿದ್ದಾನೆ! ಇದು ಮನಸ್ಸಿಗೆ ಮನವರಿಕೆಯಾದಾಗ ಸಜ್ಜನರಿಗೆ ಪರಮಾನಂದವಾಗುವುದು.

ವ್ಯಾಸತೀರ್ಥರು ಲಕ್ಷ್ಮೀನಾರಾಯಣ ಯೋಗಿಗಳಲ್ಲಿ ವೇದ, ವೇದಾಂಗಗಳು, ನಿರುಕ್ತ, ಛಂದಸ್ಸು, ಜ್ಯೋತಿಷಾದಿಶಾಸ್ತ್ರಗಳು, ಸ್ಮೃತಿ—ಪುರಾಣ ಇತಿಹಾಸಾದಿಗಳು, ಚಾರ್ವಾಕ,ಬೌದ್ಧ,ಜೈನಾದಿನಾಸ್ತಿದರ್ಶನಗಳು,ಪ್ರಾಚೀನ-ನವೀನನ್ಯಾಯ,ವೈಶೇಷಿಕ

ವ್ಯಾಕರಣ, ಭಾಟ್ಟ–ಗೌರವಮೀಮಾಂಸಾ, ಯೋಗಶಾಸ್ತ್ರ, ಅದ್ವೈತ–ವಿಶಿಷ್ಟಾದ್ವೈತಾದಿಪೂರ್ವಪಕ್ಷದರ್ಶನಗಳು, ದ್ವೈತಸಿದ್ಧಾಂತ ಹಾಗೂ ಮಂತ್ರಶಾಸ್ತ್ರಾದಿಗಳೆಲ್ಲವನ್ನೂ ನಿಷ್ಠೆಯಿಂದ ಅಧ್ಯಯನಮಾಡಿದರು. ಇದರ ಜೊತೆಗೆ ಅರ್ಥಶಾಸ್ತ್ರ, ಗಣಿತಶಾಸ್ತ್ರ-ಸಂಗೀತ-ಚಿತ್ರಕಲೆ ಮುಂತಾದ ವಿದ್ಯೆಗಳನ್ನೂ, ಸಾಹಿತ್ಯಶಾಸ್ತ್ರವನ್ನೂ ಸಹ ವಿಶೇಷಾಕಾರವಾಗಿ ಕಲಿತರು. ಇವೆಲ್ಲವನ್ನೂ ಶ್ರೀವ್ಯಾಸಭಿಕ್ಷುಗಳು ಸುಮಾರು ಕ್ರಿ.ಶ.1455ರಿಂದ 1466ರವರೆಗೆ ಹನ್ನೆರಡು ವರ್ಷಗಳಲ್ಲೇ ಕಲಿತು ಅಸಾಧಾರಣ ಪಾಂಡಿತ್ಯವನ್ನು ಸಂಪಾದಿಸಿ, ಅದ್ವಿತೀಯಪ್ರತಿಭಾಶಾಲಿಗಳಾಗಿ ಮಿಂಚಿದರು.*

ಲಕ್ಷ್ಮೀನಾರಾಯಣ ಮುನಿಗಳ ಪಾಠಕ್ರಮವು ವೈಶಿಷ್ಟ್ಯಪೂರ್ಣವಾಗಿತ್ತು. ಅವರು ಪ್ರಥಮತಃ ತಾವು ಬೋಧಿಸುವ ಶಾಸ್ತ್ರವು ಏತಕ್ಕಾಗಿ ಪ್ರವೃತ್ತವಾಯಿತೆಂಬುದನ್ನು ತಿಳಿಸಿ, ಆಯಾ ಶಾಸ್ತ್ರಗ್ರಂಥಗಳ ಮಹತ್ವವನ್ನು ಮನಸದಟ್ಟುಮಾಡಿಕೊಟ್ಟು, ಗ್ರಂಥಸ್ಥ ವಿಷಯಗಳೆಲ್ಲವನ್ನೂ ಎಳೆ ಎಳೆಯಾಗಿ ಬಿಡಿಸಿತೋರಿಸಿ, ಅವುಗಳ ಮೇಲೆ ಬರುವ ಪೂರ್ವಪಕ್ಷ, ಸಂದೇಹಗಳನ್ನು ಪರಿಹರಿಸಿ, ಉಪಪಾದಿಸುವ ವಿಷಯಗಳನ್ನು ಪ್ರಮಾಣೋದಾಹರಣಪೂರ್ವಕವಾಗಿ ಶಿಷ್ಯರಬುದ್ಧಿಗೆ ಸುಲಭವಾಗಿ ಅವಗತವಾಗುವಂತೆ ಸರಸ ಸುಂದರ ಪ್ರೌಢಶೈಲಿಯಲ್ಲಿ ನಿರೂಪಿಸುವುದು ಅವರ ಪಾಠದ ವೈಶಿಷ್ಟ್ಯವಾಗಿತ್ತು. ಶ್ರೀವಿಬುಧೇಂದ್ರತೀರ್ಥರಿಂದ ಈ ಕಲೆಯು ಅವರಿಗೆ ಕರಗತವಾಗಿತ್ತು. ಅಂತೆಯೇ ಅಂದಿನ ಕಾಲದಲ್ಲಿ ಸಮಗ್ರಭಾರತಾವನಿಯಲ್ಲಿ ಶ್ರೀಲಕ್ಷ್ಮೀನಾರಾಯಣಮುನಿಗಳಂತೆ ಪಾಠ ಹೇಳುವವರು ಮತ್ತೊಬ್ಬರಿಲ್ಲವೆಂದು ವಿದ್ವಜ್ಜನರು ಪ್ರಶಂಸಿಸುತ್ತಿದ್ದರು. ಶ್ರೀಮದಾಚಾರ್ಯ-ಜಯತೀರ್ಥ ಪರಂಪರಾ

---

1. "ವಿದ್ಯಾಪ್ರಾಪ್ತಿಕೃತೇ ಯತೀಶಮಗಮಚ್ಛ್ರೀಪಾದರಾಜಾಭಿಧಮ್ ।
ಅಬ್ದಾನ್ ದ್ವಾದಶ ತತ್ರ ವಾಸಮಕರೋತ್ಶೃಣ್ವನ್ಸ್ವಹೇಕ್ಷಾಗಮಾನ್ ॥"
—ಶ್ರೀವಿದ್ಯಾರತ್ನಾಕರತೀರ್ಥರು.
2. "ತಂ ವ್ಯಾಸತೀರ್ಥಂ ವಿದ್ಯಾರ್ಥಂ ಸ್ವಮಾತುರ್ಭಗಿನೀಸುತಮ್ ।
ಶ್ರೀಪಾದರಾಜನಾಮಾನಂ ಪ್ರಾಹಿಣೋದ್ಗುರುಪುಂಗವಃ ॥"
— ಶ್ರೀಬ್ರಹ್ಮಣ್ಯತೀರ್ಥವಿಜಯ.
3. "...ಧರ್ಮದಂಡಲಿ ಸ|ತ್ಸ್ವಣ್ಯ ಶ್ರೀಪಾದರಾಜರಲಿ ।
ವಿದ್ಯೆಯ ನೋದಿ । ಘನ್ನ ಕೀರ್ತಿಯಲಿ ಮೆರೆದ ॥"
—ಶ್ರೀವಿಜಯದಾಸರು.
4. "...ಲಕ್ಷ್ಮೀನಾರಾಯಣಾಖ್ಯಾಮಲಹರಿಚರಣಾಸೇವಕಾತ್ಪ್ರಾಪ್ತವಿದ್ಯಾ ।
ಭಿಕ್ಷಾಂ ಪೂರ್ಣಾಮಥಾಸೌ ದ್ವಿಜವರಗಣಸನ್ಮಾನ್ಯಕಾಮಾಜಗಾಮ ॥"
5. ತತ್ರಾಧೀತ್ಯದ್ವಾದಶಾಬ್ದಂ ಯತೀಶಃ । ಸಂಪೂರ್ಣವಿದ್ಯಾಕಲಯಾಭಿಪೂರ್ಣಃ ॥
ಶ್ರೀವ್ಯಾಸರಾಜಾಭಿಧಪೂರ್ಣಚಂದ್ರಃ । ಕೃತಾಂಜಲಿಃ ಪ್ರಾಹ ಗುರುಂ ಸುಭಕ್ತ್ಯಾ ॥"

ಗತ ಸತ್ಸಂಪ್ರದಾಯದಂತೆ ಅವರು ಹೇಳುವ ದ್ವೈತವೇದಾಂತ ಪಾಠಕ್ರಮವಂತೂ ಅಸಾಧಾರಣವಾಗಿದ್ದಿತು. ಇಂಥ ಲಕ್ಷ್ಮೀನಾರಾಯಣಯೋಗಿಗಳಲ್ಲಿ ವ್ಯಾಸಂಗ ಮಾಡಿದ ವ್ಯಾಸರಾಜರಿಗೆ ಗುರ್ವನುಗ್ರಹೋಪದೇಶಗಳಿಂದ ಶ್ರೀಮದಾಚಾರ್ಯರ ಸಿದ್ಧಾಂತ ಮತ್ತಿತರಶಾಸ್ತ್ರಗಳು, ಅವುಗಳ ಪಾಠಪ್ರವಚನ ಸತ್ಸಂಪ್ರದಾಯಗಳು ಕರತಲಾಮಲಕವಾಗಲು ಕಾರಣವಾಯಿತು.

ವಿಶೇಷವಿದ್ಯಾರ್ಜನಾಕಾಂಕ್ಷಿಗಳೂ, ಕುಶಾಗ್ರಮತಿಗಳೂ ಆದ ಶ್ರೀವ್ಯಾಸ ರಾಜರು ಪರ್ವತಪ್ರಾಯವಾದ ಷಡ್ದರ್ಶನಗಳನ್ನು ಭೋಜನಕಾಲದ ಪ್ರಾಣಾಹುತಿ ರೂಪವಾದ ಮೊದಲತುತ್ತಿನಂತೆ ಶೀಘ್ರವಾಗಿ ಮತ್ತು ನಿರಾಯಾಸವಾಗಿ ಸ್ವಾಧೀನ ಪಡಿಸಿಕೊಂಡರು.[1]

ಶಿಷ್ಯರ ಕುಶಾಗ್ರಬುದ್ಧಿ, ಪ್ರತಿಭಾದಿಗಳನ್ನು ಕಂಡು ವಿಸ್ಮಿತರಾದ ಲಕ್ಷ್ಮೀ-ನಾರಾಯಣ ಮುನಿಗಳು ಪ್ರಿಯಶಿಷ್ಯರಿಗೆ ಸಾಮೂಹಿಕಪಾಠವಾದ ಮೇಲೆ ಏಕಾಂತ ವಾಗಿ ವಿಶೇಷಶ್ರದ್ಧೆಯಿಂದ ಪಾಠಹೇಳಲು ಪ್ರಾರಂಭಿಸಿದ್ದರು. ಶ್ರೀವಿಬುಧೇಂದ್ರ ತೀರ್ಥರು ದ್ವೈತಸಿದ್ಧಾಂತ ವಿದ್ಯೆಗೆ ತಮ್ಮನ್ನು ಹೇಗೆ ಏಕಮೇವಾದ್ವಿತೀಯರ ನ್ನಾಗಿಮಾಡಿ ಅನುಗ್ರಹಿಸಿದರೋ ಅದರಂತೆ ತಾವೂ ಶ್ರೀವ್ಯಾಸರಾಜರನ್ನು ದ್ವೈತ ಸಿದ್ಧಾಂತಕ್ಕೆ ಏಕಮೇವಾದ್ವಿತೀಯರನ್ನಾಗಿ ಮಾಡಲು ಆಶಿಸಿ ಶ್ರೀಮದಾಚಾರ್ಯ-ಟೀಕಾಕೃತ್ಪಾದ-ವಿಬುಧೇಂದ್ರತೀರ್ಥಪರಂಪರಾಪ್ರಾಪ್ತಪಾಠಪ್ರವಚನ ಸತ್ಸಂಪ್ರ ದಾಯದಂತೆ ಪಾಠಹೇಳಲಾರಂಭಿಸಿದರು. ಆ ಪಾಠಸಂಪ್ರದಾಯರಹಸ್ಯಗಳನ್ನು ಉಪ ದೇಶಿಸದಂತೆ ಹತ್ತಿದರು, ವ್ಯಾಸತೀರ್ಥರು ಗುರುಗಳು ಹೇಳಿದ್ದನ್ನು ತಕ್ಷಣಗ್ರಹಿಸಿ ಅನು ವಾದಮಾಡಿ ಗುರುಗಳಿಗೊಪ್ಪಿಸುತ್ತಿದ್ದರು. ಹೀಗೆ ಅವರ ವಿದ್ಯಾರ್ಜನೆ ಸಾಗಿತು.

ಈ ಅಪೂರ್ವ ಗುರುಶಿಷ್ಯರು ಬರುಬರುತ್ತಾ ಒಬ್ಬರಿಗೊಬ್ಬರು ತುಂಬಾ ಹತ್ತಿರವಾಗಹತ್ತಿದರು. ಒಬ್ಬರನ್ನೊಬ್ಬರುಬಿಟ್ಟು ಕ್ಷಣಕಾಲವೂ ಇರುತ್ತಿರಲಿಲ್ಲ. ಲಕ್ಷ್ಮೀನಾರಾಯಣಮುನಿಗಳಿಗೆ ಶಿಷ್ಯರಲ್ಲಿ ಅಪಾರಪ್ರೇಮ,ಪುತ್ರವಾತ್ಸಲ್ಯ ! ವ್ಯಾಸ ರಾಜರಿಗೆ ಗುರುಗಳಲ್ಲಿ ಅಸಾಧಾರಣ ಗುರುಭಕ್ತಿ-ಶ್ರದ್ಧೆ-ಗೌರವಗಳು ! ಶ್ರೀವ್ಯಾಸ ರಾಜರು ಗುರುಗಳನ್ನು ಎಡಬಿಡದೆ, ಅವರಿಗೆ ಶುಶ್ರೂಷೆಮಾಡುತ್ತಾ, ಅವರ ಪ್ರತಿ ಯೊಂದು ಕಾರ್ಯಕಲಾಪಗಳಲ್ಲಿಯೂ ನೆರವಾಗಿ ಸೇವಿಸುತ್ತಾ, ಗುರುಗಳ ವಿಶೇಷಾ ನುಗ್ರಹಕ್ಕೆ ಪಾತ್ರರಾದರು. ಈ ಅಪರೂಪದ ಗುರುಶಿಷ್ಯರನ್ನುಕಂಡು ವಿದ್ವಜ್ಜನರು ಶಿಷ್ಯ-ಭಕ್ತಜನರು "ಗುರುಗಳೆಂದರೆ ಶ್ರೀಲಕ್ಷ್ಮೀನಾರಾಯಣಯೋಗೀಂದ್ರರು, ಶಿಷ್ಯ

---

1. "ವ್ಯಾಸ್ಯಸ್ಯ ತಸ್ಯ ಮಹತೋ ಮಹತಾಂಸಕಾಶೇ | ಷಡ್ದರ್ಶನಾನ್ಯಪಿ ದರಾಧರಸನ್ನಿಭಾನಿ |
ವಿದ್ಯಾಬುಭುಕ್ಷಿತವತೋ ಧಿಷಣಾ ಮಹಿಮ್ನೋ | ಪ್ರಾಣಾದಿಹೂಹುತಿದಿಶಾಂ
ಪ್ರಥಮಂ ಪ್ರೆಜಗ್ಮುಃ ||"
—ಶ್ರೀವ್ಯಾಸಯೋಗಿಚರಿತಮ್ P.-38.

ರೆಂದರೆ ಶ್ರೀವ್ಯಾಸರಾಜಯತಿಪುಂಗವರು !" ಎಂದು ಮುಕ್ತಕಂಠದಿಂದ ಸ್ತೋತ್ರ ಮಾಡುತ್ತಿದ್ದರು.

## ೧೯. ಬಾಲಕೃಷ್ಣ ಒಲಿದು ನರ್ತಿಸಿದ !

ಸಕಲ ಶಾಸ್ತ್ರಗಳ ಪಾಠಪ್ರವಚನ ದೇವಪೂಜಾದಿಗಳ ಜೊತೆಗೆ ಶ್ರೀಲಕ್ಷ್ಮೀನಾರಾಯಣ ಮುನಿಗಳು ಶ್ರೀವಿಠಲನ ಆಜ್ಞೆಯಂತೆ "ಶ್ರೀರಂಗವಿಠಲ"ಎಂಬ ಅಂಕಿತದಿಂದ ಕನ್ನಡ ಹರಿದಾಸಸಾಹಿತ್ಯ ರಚನೆಯಲ್ಲಿಯೂ ಆಸಕ್ತರಾಗಿ ನೂರಾರು ದೇವರನಾಮಗಳನ್ನು ರಚಿಸಹತ್ತಿದರು. ಬರಬರುತ್ತಾ ಅವರು ಅಂತರ್ಮುಖಿಗಳಾಗಹತ್ತಿದರು. ಅಪರೋಕ್ಷಜ್ಞಾನಿಗಳಾದ ಅವರ ಮುಖದಲ್ಲಿ ಅಲೌಕಿಕ ತೇಜಸ್ಸು ಬೆಳಗುತ್ತಿತ್ತು. ಅವರ ದರ್ಶನ-ಆಲಾಪನ-ಉಪದೇಶಾದಿಗಳಿಂದ ಸುಜನವೃಂದ ಕೃತಾರ್ಥವಾಗುತ್ತಿತು. ಜನರು ತಮ್ಮ ಪಾಪ ಪರಿಹಾರಪೂರ್ವಕ ಇಷ್ಟಾರ್ಥಗಳನ್ನು ಪಡೆದು ಮುದಿಸುತ್ತಿದ್ದರು.

ವೇದಾದಿಶಾಸ್ತ್ರಗಳಲ್ಲಿ ಅಡಗಿದ್ದ ಸತ್ತತ್ವಸಾರಗಳನ್ನೂ. ಭಗವಂತನ ಲೀಲಾವಿಲಾಸಗಳನ್ನೂ,ಪ್ರಮೆಯಗಳನ್ನೂ ಜನಸಾಮಾನ್ಯರಿಗೆ ತಿಳಿಸಿಕೊಟ್ಟು ಅವರೆಲ್ಲರೂ ಉದ್ಧೃತರಾಗುವಂತೆ ಮಾಡುವ ಮಹೋದ್ದೇಶದಿಂದ ಅವರು ಕನ್ನಡ ಭಾಷೆಯಲ್ಲಿ ನೂರಾರು ಪದ-ಪದ್ಯಗಳನ್ನೂ ಕಾವ್ಯಗಳನ್ನೂ ರಚಿಸಿದರು. ಅವರ ಕೃತಿಗಳೆಲ್ಲವೂ ವಿವಿಧ ರಾಗ-ತಾಳ ಬದ್ಧವಾಗಿದ್ದು ಸಂಗೀತಮಾಧ್ಯಮದಿಂದ ಕೂಡಿರುತ್ತಿದ್ದುದರಿಂದ ಅವು ಆಪಂಡಿತ ಪಾಮರರ ಮನಸ್ಸನ್ನಾಕರ್ಷಿಸಿ ಬಹುಬೇಗ ಜನಪ್ರಿಯವಾದವು. ಶ್ರೀನರಹರಿತೀರ್ಥರಿಂದ ಪ್ರಾರಂಭವಾಗಿ ಸುಪ್ತವಾಗಿದ್ದ ಕನ್ನಡ ಹರಿದಾಸಸಾಹಿತ್ಯ ಶ್ರೀ ಲಕ್ಷ್ಮೀನಾರಾಯಣ ಮುನಿಗಳಿಂದ ಮತ್ತೆ ಚಿಗುರೊಡೆಯಿತು. ಇದರಿಂದ ಅವರಿಗೆ ಕನ್ನಡ ಹರಿದಾಸಸಾಹಿತ್ಯ ಪಿತಾಮಹರೆಂಬ ಕೀರ್ತಿ ಪ್ರಾಪ್ತವಾಯಿತು. ಇಂದಿಗೂ ಹರಿದಾಸ ಪರಂಪರೆಯಲ್ಲಿ ಅವರನ್ನು ದಾಸವಾಙ್ಮಯದ ಪಿತಾಮಹರೆಂದು ಜ್ಞಾನಿಗಳು ಗೌರವಿಸುತ್ತಿದ್ದಾರೆ.

ಶ್ರೀ ಲಕ್ಷ್ಮೀನಾರಾಯಣ ಮುನಿಗಳು ತಮ್ಮ ಪೂಜಾದಿಸಕಲಕಾರ್ಯಗಳಲ್ಲಿಯೂ ವ್ಯಾಸರಾಜರು ಪಾಲ್ಗೊಳುವಂತೆ ಮಾಡುತ್ತಿದ್ದರು. ವ್ಯಾಸತೀರ್ಥರು ಪೂಜಾಕಾಲದಲ್ಲಿ ಗುರುಗಳಿಗೆ ಸಹಾಯಮಾಡುವುದರ ಜೊತೆಗೆ ಆ ಕಾಲದಲ್ಲಿ ಗುರುಗಳು ರಚಿಸಿದ ಕೀರ್ತನೆಗಳನ್ನು ಹಾಡುತ್ತಿದ್ದರು. ಪೂಜಾ, ರಾತ್ರಿದೀಪಾರಾಧನೆ ಸಮಯಗಳಲ್ಲಿ ವ್ಯಾಸರಾಜರು ಸುಮಧುರಕಂಠದಿಂದ ತಮ್ಮ ಕೃತಿಗಳನ್ನು ಹಾಡಿ ಸರ್ವರನ್ನೂ ಪರವಶಗೊಳಿಸುತ್ತಿದ್ದುದನ್ನು ಕಂಡು ಲಕ್ಷ್ಮೀನಾರಾಯಣ ಮುನಿಗಳೂ ಆನಂದದಿಂದ ಮೈಮರೆಯುತ್ತಿದ್ದರು. ಹೀಗೆ ಕಾಲಚಕ್ರ ಉರುಳಿತು....

ಂ ಂ ಂ ಂ ಂ

ಒಂದು ದಿನ ಬೇರೆ ಬೇರೆ ಊರುಗಳಿಂದ ಬಂದಿದ್ದ ಶಿಷ್ಯರು-ಭಕ್ತರುಗಳೊಡನೆ ಲಕ್ಷ್ಮೀನಾರಾಯಣ ಯತಿಗಳು ಮಾತನಾಡುತ್ತಾ ಕುಳಿತಿರುವಾಗ ಪಾರುಪತ್ತೇದಾರರು ಬಂದು ಪೂಜೆಗೆ ವೇಳೆಯಾಯಿತೆಂದು ವಿಜ್ಞಾಪಿಸಿದರು. ಗುರುಗಳು ತಮ್ಮ ಪಕ್ಕದಲ್ಲಿ ಕುಳಿತಿದ್ದ ವ್ಯಾಸರಾಜರನ್ನು ನೋಡಿ "ನೀವು ಸ್ನಾನಾಹ್ನಿಕಾದಿಗಳನ್ನು ಮುಗಿಸಿ ನಿರ್ಮಾಲ್ಯವಿಸರ್ಜನೆ ಮಾಡಿ, ಪೂಜೆಗೆ ಅಣಿಮಾಡಿರಿ. ನಾವು ಬೇಗಬಂದು ದೇವತಾರಾಧನೆ ನೆರವೇರಿಸುತ್ತೇವೆ" ಎಂದಾಜ್ಞಾಪಿಸಿದರು.

ಶ್ರೀವ್ಯಾಸರಾಜರು ಗುರುಗಳ ಅಪ್ಪಣೆಯಂತೆ ಸ್ನಾನಾಹ್ನಿಕಾದಿಗಳನ್ನು ಪೂರೈಸಿ ದೇವರ ಮಂಟಪದ ಮುಂದೆ ಕುಳಿತು ಮಂದಾಸನದಲ್ಲಿದ್ದ ದೇವರ ಪೆಟ್ಟಿಗೆಯನ್ನು ಬಿಚ್ಚಿ ಶ್ರೀಗೋಪಿನಾಥ-ರಂಗವಿಠಲಾದಿ ಸಂಸ್ಥಾನ ಪ್ರತಿಮೆಗಳನ್ನು ಮಂದಾಸನದಲ್ಲಿ ಮಂಡಿಸಿ ಪೂಜೆಗೆ ಪ್ರಾರಂಭಿಸಿದರು.

ಮೊದಲು ಶಾಲಿಗ್ರಾಮಗಳನ್ನು ಸೋಮಸೂತ್ರದಲ್ಲಿಟ್ಟು ನಿರ್ಮಾಲ್ಯವಿಸರ್ಜನೆ ಮಾಡಲು ಸಿದ್ಧರಾದರು. ಆಗ ಅವರಿಗೇನೋ ಪ್ರೇರಣೆಯಾದಂತಾಗಿ ಗುರುಗಳಿಗೆ ಪಂಢರಪುರದಲ್ಲಿ ರಂಗವಿಠಲನ ಪೆಟ್ಟಿಗೆಯೊಡನೆ ದೊರಕಿದ್ದ ಮತ್ತೊಂದು ದೇವರ ಪೆಟ್ಟಿಗೆಯನ್ನೂ ಬಿಚ್ಚಿ ಅದರಲ್ಲಿದ್ದ ಸಂಪುಟವನ್ನು ಕರದಲ್ಲಿ ಹಿಡಿದರು. ಆಗವರ ಮನದಲ್ಲಿ ಒಂದು ಬಗೆಯ ಭಾವೋದ್ವೇಗವುಂಟಾಯಿತು ಅವರ ನರನಾಡಿಗಳಲ್ಲಿ ಅವುದೋ ಒಂದು ವಿಚಿತ್ರಶಕ್ತಿ ಪ್ರವಹಿಸಿದಂತಾಗಿ ರೋಮಾಂಚನಗೊಂಡರು ! ಅವರಿಗರಿವಾಗದಂತಯೇ ಅವರ ಕರಗಳು ಅದುವರೆಗೂ ತೆರೆಯಲಾಗದಿದ್ದ ಸಂಪುಟದ ಮುಚ್ಚಳವನ್ನು ತೆಗೆದುಬಿಟ್ಟವು ! ಕೂಡಲೇ ಸಂಪುಟದಿಂದ ದಿವ್ಯವಾದ ಪ್ರಕಾಶವೊಂದು ಬೆಳಗಿದಂತಾಯಿತು. ಕುತೂಹಲ, ಆಶ್ಚರ್ಯ, ಸಂಭ್ರಮಾನಂದಗಳಿಂದ ತೆರೆದ ಸಂಪುಟವನ್ನೊಮ್ಮೆ ಈಕ್ಷಿಸಿದರು. ಏನಾಶ್ಚರ್ಯ ! ಸಂಪುಟದಲ್ಲಿ ವಿರಾಜಿಸಿದ್ದ ಶುದ್ಧತಾಮ್ರಮಯ ಗೋಪಾಲಕೃಷ್ಣನ ಸುಂದರ ಮುಖವು ಗೋಚರಿಸಿತು. ಭಕ್ತಿಯಿಂದ ನಿಟ್ಟಿಸಿ ನೋಡುತ್ತಿರುವಾಗ ಶ್ರೀ ಬಾಲಗೋಪಾಲನು ತಮ್ಮನ್ನು ನೋಡಿ ಕಿಲಕಿಲನೆ ನಕ್ಕಂತಾಯಿತು ! ಜಗತ್ತನ್ನೇ ಮರಳುಗೊಳಿಸುವ ಶ್ರೀಬಾಲಗೋಪಾಲನ ಮಂದಹಾಸರಂಜಿತವಾದ ಮುಖವು ವ್ಯಾಸತೀರ್ಥರ ಹೃದಯದಲ್ಲಿ ಅಚ್ಚಳಿಯದೆ ನೆಲೆನಿಂತಿತು! ಬಾಲಗೋಪಾಲನ ವಿಗ್ರಹವನ್ನು ಭಕ್ತಿಯಿಂದ ಕರದಲ್ಲಿ ಪಿಡಿದು ದೇವನ ಪಾದಗಳ ಮೇಲೆ ಶಿರವಿರಿಸಿ ಸ್ತುತಿಸಿ ಸೋಮಸೂತ್ರದಲ್ಲಿರಿಸಿದರು.

ಶ್ರೀವ್ಯಾಸರಾಜರಿಗೆ ಬಾಲಗೋಪಾಲನ ಸುಂದರವದನವನ್ನು ಮತ್ತೆ ನೋಡುವ ಬಯಕೆಯಾಯಿತು. ದೇವದೇವನನ್ನು, ಸುಂದರವದನವನ್ನು ತೊರುತ್ತಾಬಾರೆಂದು ಕರೆಯಬೇಕೆನಿಸಿತು. ಆ ಮುರುಳೀಮೋಹನನ ವದನಾರವಿಂದದಲ್ಲಿ ಸ್ವಲ್ಪಹೊತ್ತಿನ ಮುಂಚೆ ತಾವು ಕಂಡ ಮುಗುಳು ನಗೆಯನ್ನು ಮತ್ತೊಮ್ಮೆ ವೀಕ್ಷಿಸುವ ತವಕವುಂಟಾಯಿತು, "ನನ್ನನ್ನು ಕರೆ" ಎಂದು ಭಗವಂತ ಕಿವಿಯಲ್ಲಿ ಹೇಳಿದಂತಾಯಿತು ! ಆಗ

ಇದ್ದಕ್ಕಿದಂತೆ ಶ್ರೀ ವ್ಯಾಸರಾಜರ ಮುಖದಿಂದ ಭಕ್ತಿಗೀತೆಯೊಂದು ತಾನೇ ತಾನಾಗಿ ಹೊರಹೊಮ್ಮಿತು !

ರಾಗ-ಯಮುನಕಲ್ಯಾಣಿ ತಾಳ-ಆದಿ

"ಕೃಷ್ಣಾ ನೀ ಬೇಗನೆ ಬಾರೋ ॥ ಪ ॥
ಕೃಷ್ಣಾ ನೀ ಬೇಗನೇ ಬಾರೋ ಮುಖವನ್ನೇ ತೋರೋ ॥ಅ । ಪ ॥
ಕಾಲಲ್ಲಂದುಗೆ ಗೆಜ್ಜೆ ಘಲುಘಲುರೆನುತಿರೆ ।
ನೀಲವರ್ಣನೇ ನಾಟ್ಯವಾಡುತ ಬಾರೋ ॥ ೧ ॥
[1]ವರ ಉಡಿಯೊಳುಡಿಗೆಜ್ಜೆ ನೀಲದ ಬಾವುಲಿ ।
ಕೊರಳೊಳು ಹಾಕಿದ ವೈಜಯಂತೀಮಾಲಾ ॥ ೨ ॥
ಮೊಗದೊಳು ತಾಯಿಗೆ[2] ಜಗವನ್ನೇ ತೋರಿದ ।
ಜಗದೋದ್ಧಾರಕ ನಮ್ಮ ಉಡುಪಿ ಶ್ರೀಕೃಷ್ಣಾ" ॥ ೩ ॥

ಆಶ್ಚರ್ಯ. ಪರಮಾಶ್ಚರ್ಯ ! ಸೋಮಸೂತ್ರದಲ್ಲಿ ಮಂಡಿಸಿದ್ದ ಶ್ರೀ ಬಾಲಗೋಪಾಲ ಚಲಿಸಿದಂತಾಯಿತು. ಇದೇನೆಂದು ಅಚ್ಚರಿಯಿಂದ ವ್ಯಾಸರಾಜರು ನೋಡುತ್ತಿರುವಂತೆಯೇ ಶುದ್ಧ ತಾಮ್ರಮಯವಾದ ಗೋಪಾಲ ಕೃಷ್ಣನ ಪ್ರತಿಮೆಯು ಸೋಮಸೂತ್ರದಿಂದ ಕೆಳಕ್ಕೆ ಹಾರಿ ಆಕಾರ ತಾಳಿ ಐದು ವರ್ಷ ವಯಸ್ಸಿನ ಬಾಲಕೃಷ್ಣನಾಗಿ ನಸುನಗುತ್ತಾ ನಿಂತಿರುವುದು ಅವರಿಗೆ ಗೋಚರಿಸಿತು !

ಅಬ್ಬಾ, ಅದೆಂಥಾ ಸೌಂದರ್ಯ ! ನೀಲನೀರದ ಕಾಂತಿಯಿಂದ ಸಕಲಲೋಕ ಸೌಂದರ್ಯಸಾರವೆಲ್ಲಾ ರೂಪತೊಳೆದು ನಿಂತಿರುವಂತೆ ಭಾಸವಾಗುತ್ತಿದೆ. ಪೀತಾಂಬರ ಧಾರಿಯಾಗಿ ನಿಲುವಾಭರಣಭೂಷಿತನಾಗಿದ್ದಾನೆ. ಆ ಸ್ವಾಮಿ! ಮನೋಹರವಾದ ಶಿರದ ಮೇಲೆ ಕೇಶವನ್ನು ಗಂಟಿಕ್ಕಿ ಕಟ್ಟಿದ್ದಾನೆ. ರತ್ನಮಯ ಸರಪಳಿಯನ್ನು ಅದಕ್ಕೆ ಸುತ್ತಿದ್ದಾನೆ, ಶಿಖೆಯ ಮೇಲೆ ನವಿಲುಗರಿ ಶೋಭಿಸುತ್ತಿದೆ. ನೀಲವರ್ಣದ ಉಂಗುರ-ಉಂಗುರವಾಗಿ ಕಂಗೊಳಿಸುವ ಕೇಶಗಳು ಭುಜಬೆನ್ನುಗಳ ಮೇಲೆ ಹಾರಾಡು ತ್ತಿವೆ. ಕರ್ಣಗಳಲ್ಲಿ ಮಕರಕುಂಡಲಗಳು, ಕಂಠದಲ್ಲಿ ಮುತ್ತು ಮಾಣಿಕ್ಯ, ರತ್ನಖಚಿತ ಹಾರಗಳು, ಭುಜಕರಗಳಲ್ಲಿ ನವರತ್ನಮಯವಾದ ನಾಗಮುರಿಗೆ-ಕಂಕಣಗಳು,ಬೆರಳು ಗಳಲ್ಲಿ ವಜ್ರ, ನೀಲಮಯ ಉಂಗುರಗಳು, ಕಾಲುಗಳಲ್ಲಿ ಸುವರ್ಣಮಯ ಕಾಲಂದಿಗೆ ಗೆಜ್ಜೆ,ರತ್ನಮಯ ಪಾಲ್ಗಡಗಗಳು, ಟೊಂಕದಲ್ಲಿ ಮುತ್ತು-ಪಚ್ಚೆ-ರತ್ನಗಳಿಂದ ಶೋಭಿಸುವ ಕನಕಮಯ ನಡುಪಟ್ಟಿ, ನಡುಪಟ್ಟಿಯಲ್ಲಿ ಸುವರ್ಣಮಯವಾದ ಕೊಳಲು ರಾರಾಜಿಸುತ್ತಿದೆ. ಸುಂದರ ಮುಖದಲ್ಲಿ ವಿಸ್ತಾರವಾದ, ಚಂಚಲ ನಯನ

1. ಪಾಠಾಂತರ—ಉಡಿಯಲ್ಲಿ ಉಡಿಗೆಜ್ಜೆ ।
2. " ತಾಯಿಗೆ ಬಾಯಲ್ಲಿ

ಗಳು ಮಿಂಚಿನ ಕಾಂತಿಯಿಂದ ಬೆಳಗುತ್ತಿದೆ. ಮನಮೋಹಕ ಮುಖದಲ್ಲಿ ಕಂಗೊಳಿಸುತ್ತಿರುವ ಮಂದಹಾಸ ಬೆಳದಿಂಗಳ ಕಾಂತಿಯನ್ನು ನಾಚಿಸುತ್ತಿದೆ. ಇಂತು ಸಾಕ್ಷಾತ್ ಮನ್ಮಥಮನ್ಮಥನೂ, ಜಗನ್ಮೋಹನಾಕಾರನೂ ಆದ ನಂದನಂದನನಾದ ಆ ಬಾಲ ಗೋಪಾಲನು ಶ್ರೀ ವ್ಯಾಸತೀರ್ಥರನ್ನು ನೋಡಿ ಕಿಲಕಿಲನೆ ನಗುತ್ತಾ ನಾಟ್ಯವಾಡಲಾರಂಭಿಸಿದನು.

ಆಗ ಶ್ರೀವ್ಯಾಸಯತಿಗಳು ಶ್ರೀಕೃಷ್ಣನು ಕಾಳಿಂಗಮರ್ದನ ಮಾಡಿ ನರ್ತಿಸಿದ ಪರಮದೃಶ್ಯವನ್ನು ಮನದಲ್ಲಿ ಚಿಂತಿಸಹತ್ತಿದ್ದರು. ಶ್ರೀ ಬಾಲಕೃಷ್ಣ ತನ್ನ ಪ್ರಿಯ ಭಕ್ತರಾದ ಶ್ರೀ ವ್ಯಾಸರಾಜ ಮುನಿಪುಂಗವರಿಗೆ ಕಾಳಿಂಗಮರ್ದನ ನಾಟ್ಯವನ್ನೇ ತೋರಲಾರಂಭಿಸಿದನು.

ಶ್ರೀ ವ್ಯಾಸರಾಜರು ಇದೇನು ಸ್ವಪ್ನವೋ ಜಾಗೃದವಸ್ಥೆಯೋ ಎಂದು ಸುತ್ತಲೂ ಪರಿಕಿಸಿ, ತಾವು ಕಾಣುತ್ತಿರುವ ಅದ್ಭುತ ಮನೋಹರವಾದ ದೃಶ್ಯವು ಸತ್ಯ ಭೂತವಾದುದೆಂದು ಮನಗಂಡರು. ಆಗ ಅವರ ಹೃದಯದಲ್ಲಿ ಭಕ್ತಿ ಭಾಗೀರಥಿಯು ಪ್ರಟಿದೆದ್ದಳು. ಮೈರೋಮಾಂಚಿತವಾಯಿತು. ಹೃದಯ ತುಂಬಿ ಬಂದಿತು. ಕಣ್ಣುಗಳಲ್ಲಿ ಆನಂದಾಶ್ರು ಮಿಡಿಯಿತು. ಪ್ರೇಮರೆತು ಗುರುಗಳ ಕರಗಳು ಸೋಮಸೂತ್ರದಲ್ಲಿದ್ದ ಶಾಲಿಗ್ರಾಮಗಳನ್ನು ಹಿಡಿದವು, ಶಾಲಿಗ್ರಾಮ ಗಳಿಂದ ತಾಳಹಾಕುತ್ತಾ ತಮಗೆ ದರ್ಶನವಿತ್ತು ನರ್ತಿಸುತ್ತಿರುವ ಶ್ರೀ ಬಾಲ ಗೋಪಾಲನ ಕಾಳಿಂಗಮರ್ದನ ನಾಟ್ಯವನ್ನು ವರ್ಣಿಸಿ ಹಾಡಲಾರಂಭಿಸಿದರು! ಶ್ರೀ ಬಾಲಗೋಪಾಲ ಅವರ ಗಾನ-ತಾಳಗಳಿಗೆ ತಕ್ಕಂತೆ ವಿಚಿತ್ರ ರೀತಿಯಲ್ಲಿ ನರ್ತಿಸಲಾರಂಭಿಸಿದ.

ರಾಗ-ಸೌರಾಷ್ಟ್ರ ಅಟ ತಾಳ

ಕಾಳಿಂಗನ ಮೆಟ್ಟಿ ನಾಟ್ಯವಾಡಿದ ಕಂಜನಾಭ ಕೃಷ್ಣನು ॥ ಪ ॥
ಕಾಳಿಂಗನ ಮೆಟ್ಟಿ ಆಡಿದ ಭರದಲ್ಲಿ
ಶ್ರೀವತ್ಸ ಉರದಲ್ಲಿ ಕೊರಳಲ್ಲಿ ವನಮಾಲೆ
ತರಳತನದಲ್ಲಿ ಯಮುನೆಯ ಮಡುವಿನಲ್ಲಿ ಆಡುತ್ತ ಪಾಡುತ್ತ ॥ ಅ ॥
ಕಾಲಲಿ ಗೆಜ್ಜೆ ಘಲುಘಲುಘಲುರೆನ್ನೆ
ಫಾಲಾದಿ ತಿಲಕವು ಹೊಳೆಹೊಳೆ ಹೊಳೆಯುತ್ತ
ಜ್ವಲಿತ ಮಣಿಮಯ ಲಲಿತಪದಕಹಾರ
ಜ್ವಲಿತಕಾಂತಿ ಬೆಳಗುತ ದಿಕ್ಕುಗಳಲ್ಲಿ ॥ ೧ ॥
ಸುರರು ದುಂದುಭಿಯ ಢಣಢಣ ಢಣರೆಂದು
ಮೊರೆಯ ತಾಳಗಳು ಝಣಝಣ ಝಣಾರೆಂದು
ಹರ ಬ್ರಹ್ಮ ಸುರರು ತಥೈ ತಥೈಯೆನ್ನಲು

ನಾರದ ತುಂಬರ ಸಿದ್ಧರು ವಿದ್ಯಾ-
ಧರರು ಅಂಬರದಲ್ಲಿ ಆಡುತ್ತ ಪಾಡಲು ॥ ೨ ॥
ಯೋಗಿಗಳೆಲ್ಲ ಜಯಜಯ ಜಯವೆನ್ನೆ
ಭೋಗಿಗಳೆಲ್ಲ ಭಯಭಯ ಭಯವೆನ್ನೆ
ನಾಗಕನ್ಯೆಯರು ಅಭಯ ಅಭಯವೆನ್ನೆ
ನಾಗಶಯನ ಸಿರಿಕೃಷ್ಣ ಜನನಿಯು ಕಂಡು
ಬೇಗನೆ ಬಿಗಿದಪ್ಪಿ ಮುದ್ದನ್ನು ತೋರಿದ ॥ ೩ ॥

ಇತ್ತ ಶ್ರೀಲಕ್ಷ್ಮೀನಾರಾಯಣ ಮುನಿಗಳು ಧಾರ್ಮಿಕ ನಿಯೋಗದವರೊಡನೆ ಮಾತನಾಡಿ ಪದ್ಧತಿಯಂತೆ ಅಭ್ಯಂಜನ ಸ್ನಾನಕ್ಕೆ ತೆರಳಿದರು. ಶ್ರೀಮಠದ ಪರಿಚಾರಕನೊಬ್ಬ ಪೂಜೆಗೆ ಹೂವು ತುಳಸಿಗಳನ್ನು ತೆಗೆದುಕೊಂಡು ಬಂದು ಅದನ್ನು ದೇವಗೃಹದಲ್ಲಿಡಲು ಹೋದನು. ಅಲ್ಲಿ ಶ್ರೀವ್ಯಾಸರಾಜರು ಸಾಲಿಗ್ರಾಮಗಳಿಂದ ತಾಳ ಹಾಕುತ್ತಾ ಮೈಮರೆತು ಗಾನಮಾಡುತ್ತಿರುವುದು ಕಣ್ಣಿಗೆ ಬಿದ್ದಿತು. ಅದನ್ನು ಕಂಡು ಅವನು ಗಾಬರಿಯಾಗಿ ಶ್ರೀವ್ಯಾಸತೀರ್ಥರಿಗೆ ಹುಚ್ಚು ಹಿಡಿಯಿತೆಂದು ಭ್ರಮಿಸಿ ಈ ವಿಚಾರವನ್ನು ಲಕ್ಷ್ಮೀನಾರಾಯಣ ಮುನಿಗಳಿಗೆ ತಿಳಿಸಲು ಓಡಿದನು.

ಶ್ರೀಗಳವರು ಅಭ್ಯಂಜನವನ್ನು ಮುಗಿಸಿ ಮಡಿನೀರಿನಿಂದ ಸ್ನಾನಮಾಡಿ ಕರ ವಸ್ತ್ರವನ್ನುಟ್ಟು ಮೈವರೆಸಿಕೊಳ್ಳುತ್ತಿರಲು ಪರಿಚಾರಕನು ಓಡಿಬಂದು "ಸ್ವಾಮಿ, ಶ್ರೀವ್ಯಾಸತೀರ್ಥರಿಗೆ ಹುಚ್ಚು ಹಿಡಿದಿದೆ. ಕೈಯಲ್ಲಿ ಸಾಲಿಗ್ರಾಮಗಳನ್ನು ಹಿಡಿದು ಕುಟ್ಟುತ್ತಾ ಭ್ರಾಂತರಾಗಿ ಹಾಡುತ್ತಿದ್ದಾರೆ" ಎಂದು ವಿಜ್ಞಾಪಿಸಿದನು.

ಪರಿಚಾರಕನ ಮಾತುಕೇಳಿ ಲಕ್ಷ್ಮೀನಾರಾಯಣಮುನಿಗಳಿಗೆ ಒಂದು ಬಗೆಯ ಭಯವಾಯಿತು. ಕೂಡಲೇ ಶಿಷ್ಯಾಭಿಮಾನದಿಂದ ಒದ್ದೆಯ ಕರವಸ್ತ್ರವನ್ನುಟ್ಟೇ ದೇವಗೃಹದತ್ತ ಧಾವಿಸಿದರು. ಹತ್ತಿರ ಹೋಗುತ್ತಿದ್ದಂತೆ ಅವರಿಗೆ "ಘಲ್, ಘಲ್, ಘಲಿರ್" ಎಂಬ ಮಂಜುಳವಾದ ಗೆಜ್ಜೆಯ ನಾದ ಕೇಳಿಸಿತು ! ಯಾರೋ ನರ್ತಿಸುತ್ತಿರುವಂತೆ ಭಾಸವಾಯಿತು. ಕುತೂಹಲದಿಂದ ಅವರು ದೇವ ಮಂದಿರದ ಕಿಟಕಿಯಿಂದ ಇಣಕಿ ನೋಡಿದರು. ಅಲ್ಲಿ ಅವರು ಕಂಡ ಅಪೂರ್ವದೃಶ್ಯ ಅವರನ್ನು ದಿಗ್ಭ್ರಮೆಗೊಳಿಸಿತು ! ಪರಾತ್ಪರನಾದ ಬಾಲಗೋಪಾಲನ ಸುರ ಮನೋಹರ ಸುಂದರರೂಪ ಅವರ ನಯನಗಳಿಗೆ ಗೋಚರಿಸಿತು ! ಪ್ರಿಯಶಿಷ್ಯ ರಾದ ಶ್ರೀವ್ಯಾಸರಾಜರು ಭಕ್ತಿಪರವಶರಾಗಿ ಗಾನಮಾಡುತ್ತಿದ್ದಾರೆ, ಅವರ ನೇತ್ರ ಗಳಿಂದ ಆನಂದಾಶ್ರು ಹರಿಯುತ್ತಿದೆ, ಮೈಮರೆತ ಅವರು ಸಾಲಿಗ್ರಾಮಗಳಿಂದ ತಾಳಹಾಕುತ್ತಿದ್ದಾರೆ ! ಅವರ ಮುಂದೆ ನಂದನಂದನನು ಆನಂದದಿಂದ ಕಾಳಿಂಗ ನಾಟ್ಯವಾಡುತ್ತಿದ್ದಾನೆ ! !

ದೇವಾನುದೇವತೆಗಳಿಗೂ ಅಲಭ್ಯವಾದ ಪರಮಪವಿತ್ರದೃಶ್ಯ ! ಸಹಸ್ರಾರು ವರ್ಷಗಳ ಕಾಲ ತಪಸ್ಸನ್ನೆಸಗಿದರೂ ಋಷಿಮುನಿಗಳಿಗೆ ದರ್ಶನವೀಯದ

ಸಾಕ್ಷಾತ್ ಪರಬ್ರಹ್ಮಸ್ವರೂಪನಾದ ಶ್ರೀಬಾಲಕೃಷ್ಣನು ಪ್ರಿಯಶಿಷ್ಯರಿಗೆ ತಾನಾಗಿ ಒಲಿದುಬಂದು ತನ್ನ ಲೀಲಾತಾಂಡವನ್ನು ಪ್ರದರ್ಶಿಸುತ್ತಾ ಆನಂದಗೊಳಿಸು ತ್ತಿದ್ದಾನೆ ! ಅದನ್ನು ಕಂಡು ಶ್ರೀಲಕ್ಷ್ಮೀನಾರಾಯಣ ಮುನಿಗಳು ಪುಳಕಿತ ಗಾತ್ರರಾದರು. ಅವರ ಕಣ್ಣುಗಳಿಂದ ಧಾರಾಕಾರವಾಗಿ ಆನಂದಾಶ್ರು ಪ್ರವಹಿಸಿತು. ಮೈಯಲ್ಲಿ ವಿದ್ಯುತ್ಸಂಚಾರವಾಯಿತು. ಆನಂದಪರಧಿಯುಕ್ಕಿಹರಿಯಿತು ! ಗದ್ಗದ ಕಂಠದಿಂದ "ಕೃಷ್ಣಾ, ಪ್ರಭು, ಗೋಪಾಲ" ಎನ್ನುತ್ತಾ ಭಕ್ತಿಯ ಆವೇಗದಿಂದ ಮುಚ್ಚಿ ಹಿಡಿದವರಂತೆ ದೇವಮಂದಿರದೊಳಗೆ ಧಾವಿಸಿಬಂದರು. ಶ್ರೀಗಳವರು ಒಳಗೆಬಂದಕೂಡಲೇ ಬಾಲಕೃಷ್ಣ ಅವರತ್ತ ಮಂದಹಾಸಬೀರಿ ಅಭಯಪ್ರದಾನ ಮಾಡಿ ಅದೃಶ್ಯನಾದನು ! ಅವನ ಸ್ಥಾನದಲ್ಲಿ ಹೊಸದಾದ, ತಾವು ಆವರೆಗೂ ಕಾಣದ ಶುದ್ಧತಾಮ್ರಮಯವಾದ ಶ್ರೀಗೋಪಾಲ ಕೃಷ್ಣಪ್ರತಿಮೆಯು ರಾಜಿಸು ತ್ತಿದೆ ! ಅದನ್ನು ಕಂಡು ಅವರ ಮನದಲ್ಲಿ ಮಿಂಚೊಂದು ಮಿನುಗಿದಂತಾಗಿ ಒಂದು ವಿಚಾರವು ಸ್ಫುರಿಸಿತು.

ಹಿಂದೆ ಪಂಢರಾಪುರದಲ್ಲಿ ಸ್ವಪ್ನದಲ್ಲಿ ಶ್ರೀಪಾಂಡುರಂಗವಿಠಲನು ಎರಡು ದೇವರ ಪೆಟ್ಟಿಗೆಗಳ ವಿಚಾರ ಹೇಳಿ ಒಂದರಲ್ಲಿ "ಶ್ರೀರಂಗವಿಠಲ" ಸ್ವರೂಪನಾದ ತಾನು, ತಮಗೊಲಿದಿರುವುದಾಗಿಯೂ ಅದನ್ನು ಸಂಸ್ಥಾನದ ಆರಾಧ್ಯಮೂರ್ತಿ ಗಳೊಂದಿಗೆ ಪೂಜಿಸಬೇಕೆಂದೂ ಹೇಳಿ ಇನ್ನೊಂದು ಪೆಟ್ಟಿಗೆಯಲ್ಲಿರುವ ತಾನು ಬೇರೊಂದು ಪ್ರತಿಮಾರೂಪನಾಗಿದ್ದು, ಮುಂದೆ ತನ್ನ ಪ್ರಿಯಭಕ್ತನಿಗೊಲಿಯುವು ದಾಗಿಯೂ ಅಪ್ಪಣೆ ಕೊಡಿಸಿದ್ದು ಶ್ರೀಲಕ್ಷ್ಮೀನಾರಾಯಣ ಮುನಿಗಳಿಗೆ ನೆನಪಾಯಿತು. ಅಂದು ಶ್ರೀಹರಿಯು ಹೇಳಿದ ಮತ್ತೊಬ್ಬ ಪರಮಭಕ್ತರೇ ಶ್ರೀವ್ಯಾಸರಾಜರೆಂದೂ ಈಗ ಶ್ರೀವ್ಯಾಸತೀರ್ಥರಿಗೊಲಿದು ದರ್ಶನವಿತ್ತು ನರ್ತಿಸಿದ ಬಾಲಕೃಷ್ಣನೇ ಈ ಮತ್ತೊಂದು ಭಗವನ್ಮೂರ್ತಿಯೆಂದು ಅವರಿಗೆ ಈಗ ಸ್ಪಷ್ಟ ವಾಯಿತು. "ಧನ್ಯ, ಪ್ರಿಯಶಿಷ್ಯರೇ ಪರಮಧನ್ಯರು ನೀವು ! ನಿಮ್ಮ ಭಾಗ್ಯವೆಷ್ಟು ದೊಡ್ಡದು ! ಶ್ರೀಬಾಲಕೃಷ್ಣನನ್ನು ಪ್ರಸನ್ನೀಕರಿಸಿಕೊಂಡು ಕುಣಿಸಿದ ನೀವು ಸಾಮಾನ್ಯರಲ್ಲ ! ಲೋಕಕಲ್ಯಾಣಕ್ಕಾಗಿಯೇ ಅವತರಿಸಿದ ಮಹಾನುಭಾವರು" ಎನ್ನುತ್ತ ಹಾಗೆಯೇ ಹೋಗಿ ವ್ಯಾಸರಾಜರನ್ನು ಭರದಿಂದ ಅಪ್ಪಿಬಿಟ್ಟರು !

ಶ್ರೀವ್ಯಾಸತೀರ್ಥರಿಗೆ ಆಗ ಮನವರಿಕೆಯಾಯಿತು, ಶ್ರೀಬಾಲಗೋಪಾಲ ಅದೃಶ್ಯನಾದ ವಿಚಾರ ! ಅದನ್ನು ಗುರುಗಳು ಕಂಡು ಪ್ರೇಮಭರದಿಂದ ತಮ್ಮನ್ನು ಆಲಿಂಗಿಸಿರುವರೆಂಬುದೂ ಸ್ಪಷ್ಟವಾಯಿತು. ಶ್ರೀವ್ಯಾಸರಾಜರು ಕರಗಳಲ್ಲಿದ್ದ ಶಾಲಿಗ್ರಾಮಗಳನ್ನು ಸೋಮಸೂತ್ರದಲ್ಲಿರಿಸಿ ವಿನಯದಿಂದ ಮೇಲೆದ್ದು ಗುರುಗಳಿಗೆ ಸಾಷ್ಟಾಂಗವೆರಗಿದರು.

ಶ್ರೀಲಕ್ಷ್ಮೀನಾರಾಯಣ ಮುನಿಗಳು ನಸುನಗುತ್ತಾ "ನನ್ನ ಪ್ರೀತ್ಯಾಸ್ಪದ ಶಿಷ್ಯರೇ ! ನೀವು ಪರಮಪುಣ್ಯಶಾಲಿಗಳು. ನಾನು ತೆರೆಯಲಾಗದ ಸಂಪುಟದ

ಮುಚ್ಚಳವನ್ನು ತೆರೆದು ಶ್ರೀಮುರಳೀ ಮಾಧವನನ್ನು ಕುಣಿಸಿಬಿಟ್ಟರಿ ! ಆಹಾ. ಆ ಪರಮಾತ್ಮನ ದಿವ್ಯಮಂಗಳರೂಪವೆಷ್ಟು ಮನೋಹರ ! ಆ ಜಗದೊಡೆಯನ ಲೀಲಾತಾಂಡವವೆಷ್ಟು ಸೊಗಸು ! ಆ ಪವಿತ್ರನೋಟವನ್ನು ನಾನೆಂತು ವರ್ಣಿಸಲಿ ? ಗೋಪಾಲಕೃಷ್ಣ ನಿಮಗೆ ಪ್ರಸನ್ನನಾಗಿ ಒಲಿದುಬಂದಿದ್ದಾನೆ, ನಾವಿಂದು ಧನ್ಯ ರಾದೆವು ! ನಿಮಗೆ ಒಲಿದ ಈ ಬಾಲಕೃಷ್ಣನನ್ನು ಇನ್ನು ಮುಂದೆ ನೀವೇ ಪೂಜಿಸಿರಿ ! ಇಕೋ ನಮ್ಮ ಪ್ರಿಯಶಿಷ್ಯರಿಗೆ ನಮ್ಮ ಪ್ರೀತಿಯ ಕಾಣಿಕೆ-ಸ್ವೀಕರಿಸಿರಿ" ಎಂದು ಬಾಲಗೋಪಾಲ ಕೃಷ್ಣನ ಪ್ರತಿಮೆಯನ್ನು ವ್ಯಾಸರಾಜರ ಕರಗಗಳ್ಲಿಟ್ಟು ಅವರನ್ನು ಆಲಂಗಿಸಿ ಮತ್ತೆ ಹೇಳಿದರು—

"ಬಹುದಿನದಿಂದಿದ್ದ ನಮ್ಮ ಮನೋರಥವು ಇಂದು ಫಲಿಸಿತು. ಪಂಢರಾಪುರದಲ್ಲಿ ವಿಠ್ಠಲನು ಕನ್ನಡಹರಿದಾಸಪಂಥವನ್ನು ಪ್ರಾರಂಭಿಸಿ, ಕನ್ನಡಹರಿದಾಸ ವಾಙ್ಮಯವನ್ನು ಬೆಳಸಿ ಆಪಂಡಿತಪಾಮರರು ಅದರಿಂದ ತನ್ನ ಪ್ರಸಾದ-ಅನುಗ್ರಹ ಗಳಿಗೆ ಪಾತ್ರರಾಗಲು ಮಾರ್ಗದರ್ಶನ ಮಾಡಬೇಕೆಂದು ಆಜ್ಞಾಪಿಸಿದ್ದನು. ಅವನ ಆಣತಿಯಂತೆ "ಶ್ರೀರಂಗವಿಠಲಾಂಕಿತ" ದಿಂದ ವೇದಾದಿಶಾಸ್ತ್ರಗಳ ಸಾರವನ್ನು ಕನ್ನಡಭಾಷೆಯಲ್ಲಿ ಪದಪದ್ಯಸುಳಾದಿಗಳ ರೂಪವಾಗಿ ರಚಿಸಲು ಪ್ರಾರಂಭಿಸಿದೆವು. ಶ್ರೀಹರಿಯು ನಮ್ಮಿಂದ ಪ್ರವರ್ತನಗೊಳಿಸಿದ ಈ ಕನ್ನಡ ಹರಿದಾಸಪಂಥವನ್ನು ನಮ್ಮ ತರುವಾಯ ಮುಂದುವರೆಸಿಕೊಂಡು ಹೋಗಿ ಸಾಹಿತ್ಯರಚನೆಮಾಡಿ, ಹರಿ ದಾಸಪಂಥಕ್ಕೊಂದು ಸ್ವರೂಪವನ್ನುಕೊಟ್ಟು ತನ್ಮೂಲಕ ಜನಸಾಮಾನ್ಯರ ಉದ್ಧಾರ-ಜಗತ್ಕಲ್ಯಾಣಗಳಾಗುವಂತೆ ಯಾರು ಮಾಡುವರೆಂದು ನಾವು ಚಿಂತಿಸು ತ್ತಿದ್ದೆವು. ಇಂದು ನಮ್ಮ ಆ ಚಿಂತೆ ದೂರವಾಯಿತು ! ನಿಮ್ಮ ಬಾಯಿಯಿಂದ ಹೊರಹೊಮ್ಮಿದ ಅಪೂರ್ವ, ಸುಂದರ ದೇವರನಾಮವನ್ನಾಲಿಸಿ ಪರಮಾನಂದ ತುಂದಿಲರಾದೆವು. ಇದು ಭಗವಂತನ ಸಂಕಲ್ಪದಂತೆ ಜರುಗಿದ ಅಪೂರ್ವಘಟನೆ. ಅಂದು ನಮ್ಮಿಂದ "ಶ್ರೀರಂಗವಿಠಲಾಂಕಿತ" ದಿಂದ ಕನ್ನಡ ಹರಿದಾಸಸಾಹಿತ್ಯದ ರಚನೆಗೆ ಪ್ರೇರಕಶಕ್ತಿಯಾದ ಶ್ರೀಹರಿಯೇ ಇಂದು ನಿಮಗೆ ಪ್ರೇರಣೆಮಾಡಿ "ಶ್ರೀಕೃಷ್ಣಾಂಕಿತ" ದಿಂದ ನಿಮ್ಮಿಂದ ಈ ಉತ್ತಮ ಕೃತಿರಚನೆಮಾಡಿಸಿರುವುದು ನಿಜವಾಗಿ ಒಂದು ಮಹಾಯೋಗ ! ನಮ್ಮಿಂದ ಪ್ರಾರಂಭವಾಡಿಸಿದ ಕಾರ್ಯವನ್ನು ನಿಮ್ಮಿಂದ ಮುಂದುವರೆಸುವುದಾಗಿ ಶ್ರೀಹರಿಯು ಈ ಘಟನೆಯಿಂದ ಸೂಚಿಸಿದ್ದಾನೆ ! ಜಗನ್ನಾಟಕ ಸೂತ್ರಧಾರಿಯಾದ ಶ್ರೀರಮಾರಮಣನು ಕನ್ನಡಹರಿದಾಸಪಂಥ, ವಾಙ್ಮಯಗಳ ಅಭಿವೃದ್ಧಿ, ಲೋಕಕಲ್ಯಾಣಗಳು ಗುರುಶಿಷ್ಯರಾದ ನಮ್ಮಿಬ್ಬರಿಂದ ನೆರವೇರಬೇಕೆಂದು ಸಂಕಲ್ಪಿಸಿದ್ದಾನೆ ! ಅದನ್ನು ಅವನು ತನ್ನ ಅಗಾಧವಾದ ಈ ಲೀಲೆಯಿಂದ ನಮ್ಮಿಬ್ಬರಿಗೂ ಆಜ್ಞಾಪಿಸಿದಂತಿದೆ. ನಿಜವಾಗಿಯೂ ನಾವಿಬ್ಬರೂ ಭಾಗ್ಯಶಾಲಿಗಳು. ಇನ್ನು ಮುಂದೆ ಈ ಹರಿದಾಸಪಂಥದ ನಾಯಕರು ನೀವಾಗಬೇಕು. ನಿಮ್ಮ ಅಧ್ವರ್ಯುತನದಲ್ಲಿ ಕನ್ನಡ ಹರಿದಾಸವಾಙ್ಮಯವು ಅಗಾಧವಾಗಿ ಬೆಳೆದು

ಅವ್ಯಾಹತವಾಗಿ ಮುಂದುವರೆಯುವಂತಾಗಬೇಕೆಂಬ ನಮ್ಮ ಹಿರಿಯಾಶೆಯನ್ನು ನೆರವೇರಿಸುವುದಾಗಿ ನಮಗೆ ನೀವು ವಚನವನ್ನು ನೀಡಿರಿ" ಎಂದು ಹೇಳಿದರು.

ಶ್ರೀವ್ಯಾಸತೀರ್ಥರು ಗುರುಗಳ ವಚನಗಳನ್ನಾಲಿಸಿ ಪರಮಹರುಷನಿರ್ಭರರಾಗಿ "ಗುರುದೇವ! ಇದೆಲ್ಲವೂ ತಮ್ಮ ವಾತ್ಸಲ್ಯ ಅನುಗ್ರಹಫಲವೆಂದೇ ನಾನು ಭಾವಿಸಿರುತ್ತೇನೆ. ಬಾಲಕನಾಗಿದ್ದ ನನಗೆ ಸಕಲಶಾಸ್ತ್ರಜ್ಞಾನವನ್ನೂ ಉಪದೇಶಿಸಿದಿರಿ. ನಿಮ್ಮ ವಾತ್ಸಲ್ಯದ ಫಲವಾಗಿ ಇಂದು ಶ್ರೀಹರಿಯ ಪ್ರಸಾದ ಅನುಗ್ರಹಗಳು ನನಗೆ ಲಭಿಸಿ ದವು! ನಾನು ಯೋಚಿಸಲೂ ಸಾಧ್ಯವಾಗದರೀತಿಯಲ್ಲಿ ತಮ್ಮ ಆಶೀರ್ವಾದದಿಂದ ಕನ್ನಡದಲ್ಲಿ "ಶ್ರೀಕೃಷ್ಣಾಂಕಿತ"ದಿಂದ ಭಗವಂತನ ಮೇಲೆ ಕೃತಿಗಳು ರಚನೆಯಾಗಿವೆ! ತಮ್ಮ ಅಪ್ಪಣೆಯನ್ನು ಶಿರಸಾಧರಿಸಿದ್ದೇನೆ. ತಮ್ಮ ಮಾರ್ಗದರ್ಶನ ದಲ್ಲಿ ಮುಂದುವರೆದು ತಮ್ಮ ಮನದಾಶೆಯನ್ನು ನನ್ನ ಕೈಲಾದಮಟ್ಟಿಗೂ ಪೂರ್ಣ ಗೊಳಿಸಲು ಪ್ರಯತ್ನಿಸುತ್ತೇನೆ. ಇದೇ ನಾನು ನಿಮಗೆ ನೀಡುವ ವಚನ" ಎಂದು ಗುರುಗಳ ಕರದಮೇಲೆ ತಮ್ಮ ಕರವಿಟ್ಟು ಪ್ರಮಾಣಮಾಡಿ ನಮಸ್ಕರಿಸಿದರು.

ಶ್ರೀಲಕ್ಷ್ಮೀನಾರಾಯಣಯೋಗಿಗಳಿಗೆ ಪರಮಾನಂದವಾಯಿತು, ಸಂತೋಷ-ಸಂಭ್ರಮದಿಂದ ಶಿಷ್ಯರೊಡನೆ ಸಂಸ್ಥಾನಪೂಜೆಯನ್ನು ಭಕ್ತಿಯಿಂದ ನೆರವೇರಿಸಿ, ಸರ್ವರಿಗೂ ತೀರ್ಥಪ್ರಸಾದ ವಿನಿಯೋಗಾನಂತರ ಭಿಕ್ಷಾಸ್ವೀಕಾರಮಾಡಿದರು.

## ೨೦. ಶೇಷದೇವರ ಆಶೀರ್ವಾದ

ಒಂದು ದಿನ ಶ್ರೀವ್ಯಾಸತೀರ್ಥರು ತಮ್ಮ "ವ್ಯಾಸಗುಹೆ"ಯಲ್ಲಿ ಪದ್ಮಾಸನಾಸೀನ ರಾಗಿ ಕುಳಿತು ಪರಮಾತ್ಮನನ್ನು ಹೃದಯಪೀಠದಲ್ಲಿ ನೆಲೆನಿಲ್ಲಿಸಿ ಧ್ಯಾನಾಸಕ್ತರಾಗಿದ್ದಾರೆ. ಯೋಗನಿಷ್ಠರಾದ ಆ ಮಹನೀಯರು ಹೊರಗಿನ ಪರಿವೆಯಿಲ್ಲದೆ ಭಗವಂತನ ಪಾದಗಳಲ್ಲಿ ಮನಸ್ಸನ್ನು ಸಲ್ಲಗ್ನಗೊಳಿಸಿ ಸಮಾಧ್ಯವಸ್ಥೆಯಲ್ಲಿದ್ದಾರೆ. ಆಗ ಒಂದು ಅದ್ಭುತ ವ್ಯಾಪಾರವು ನಡೆದುಹೋಯಿತು! ಎಲ್ಲಿಂದಲೋ ಒಂದು ಘಟಸರ್ಪವು ಬಂದು ಅಸಂಪ್ರಜ್ಞಾತಸಮಾಧಿಯಲ್ಲಿರುವ ಶ್ರೀವ್ಯಾಸರಾಜರ ದೇಹವನ್ನು ಆಕ್ರಮಿಸಿ ಸುತ್ತಿಕೊಂಡು ಹೆಡೆಯನ್ನು ಶಿರಸ್ಸಿನ ಮೇಲಿಟ್ಟು ಫೂತ್ಕರಿಸಹತ್ತಿತು! ಇದೊಂದರ ಪರಿಜ್ಞಾನವೂ ಇಲ್ಲದ ಶ್ರೀಗಳವರು ಭಗವದ್ಧ್ಯಾನದಲ್ಲಿ ತಲ್ಲೀನರಾಗಿದ್ದಾರೆ !

ಆಗ ಆಕಸ್ಮಿಕವಾಗಿ ಶ್ರೀಗಳವರನ್ನು ನೋಡಲು ಬಂದ ಶ್ರೀಮಠದ ಪಂಡಿತ ರೊಬ್ಬರ ದೃಷ್ಟಿಗೆ ಈ ದೃಶ್ಯಗೋಚರಿಸಿತು! ಅವರು ಅದನ್ನು ಕಂಡು ಭಯಗೊಂಡು ಹೊರಗೆ ಓಡಿದರು. ಪಾಪ, ಪಂಡಿತರು ಭಯಾಕ್ರಾಂತರಾಗಿ ಬೆವತುಹೋಗಿದ್ದಾರೆ. ಮಾತನಾಡಲೂ ಬಾರದಂತಾಗಿದೆ, "ಸರ್ಪ, ಸರ್ಪ, ಸಣ್ಣಗುರುಗಳು" ಎಂದು ತೊದಲುತ್ತಿದ್ದಾರೆ. ವಿದ್ವಾಂಸರು ದೇವರ ಆರಾಧನೆಗೆ ಸಿದ್ಧರಾಗುತ್ತಿದ್ದ ಲಕ್ಷ್ಮೀ

ನಾರಾಯಣಮುನಿಗಳಲ್ಲಿಗೆ ಬಂದು "ಸ್ವಾಮಿ, ವಿಪತ್ತು, ಸರ್ಪ, ಸಣ್ಣ ಗುರುಗಳು" ಎಂದು ಏನೇನೋ ಬಡಬಡಿಸಿದರು.

ಶ್ರೀಗಳವರಿಗೆ ಅವರ ಒಂದು ಮಾತೂ ಅರ್ಥವಾಗಲಿಲ್ಲ. ಅವರು "ಪಂಡಿತರೇ ಇದೇಕೆ ಹೀಗೆ ನಡುಗುತ್ತಿದ್ದೀರಿ ? ವಿಷಯವೇನು ? ಸ್ಪಷ್ಟವಾಗಿ ತಿಳಿಸಿರಿ" ಎಂದು ಹೇಳಲು, ಸ್ವಲ್ಪ ಸುಧಾರಿಸಿಕೊಂಡು ಪಂಡಿತರು ತಾವು ಕಂಡ ವಿಚಾರವನ್ನು ವಿವರಿಸಿ "ಸಣ್ಣ ಗುರುಗಳನ್ನು ಕಾಪಾಡಿ ಸ್ವಾಮಿ"ಎಂದರು.ಅವರ ಮಾತುಕೇಳಿ ಶ್ರೀಗಳವರಿಗೆ ಭಯ-ಕೌತುಕ-ಚಿಂತೆಗಳು ಏಕಕಾಲದಲ್ಲುಂಟಾದವು. ಅವರು ಕೂಡಲೇ ವ್ಯಾಸರಾಜರಿರುವಡೆಗೆ ಧಾವಿಸಿದರು. ಮಠದ ಜನರು "ಮಹಾಸ್ವಾಮಿ, ತಾವು ಹೋಗಬೇಡಿ" ಎಂದು ತಡೆಯುತ್ತಿದ್ದರೂ ಶಿಷ್ಯರಿಗೆ ಬಂದೊದಗಿರುವ ವಿಪತ್ತಿನಿಂದ ಭಯಗೊಂಡು ಅವರನ್ನು ಹೇಗಾದರೂ ಪಾರುಮಾಡಬೇಕೆಂಬ ಶಿಷ್ಯವಾತ್ಸಲ್ಯದಿಂದ, ಗುರುಗಳು ಅಡ್ಡಗಟ್ಟಿದ ಜನರನ್ನು ಒಂದು ಕಡೆ ತಳ್ಳಿ ಓಡಿದರು. ಮಠದ ಪರಿವಾರದವರೂ ಕೈಗೆಸಿಕ್ಕ ಕೋಲು,ಕಟ್ಟಿಗೆ ಮುಂತಾದವನ್ನು ಹಿಡಿದು ಗುರುಗಳನ್ನು ಹಿಂಬಾಲಿಸಿದರು.

ಗುರುಗಳು ವ್ಯಾಸರಾಜರಿದ್ದೆಡೆಗೆ ಬಂದರು. ಒಳಗಿನ ದೃಶ್ಯವನ್ನು ಕಂಡು ಭಯ-ಆಶ್ಚರ್ಯಚಕಿತರಾದರು. ಕೌತುಕವೆಂದರೆ ಶ್ರೀವ್ಯಾಸರಾಜರು ಹೊರಪ್ರಪಂಚವನ್ನೇ ಮರೆತು ನಿರಾಲೋಚನೆಯಿಂದ ಧ್ಯಾನಾಸಕ್ತನಾಗಿರುವಂತೆ ಕಂಡುಬರುತ್ತಿದೆ. ಮುಖದಲ್ಲಿ ಮಂದಸ್ಮಿತ ವಿರಾಜಿಸುತ್ತಿದೆ ! ಪರಿಸ್ಥಿತಿಯನ್ನು ಸೂಕ್ಷ್ಮವಾಗಿ ಪರಿಶೀಲಿಸಿದರು, ಶ್ರೀಲಕ್ಷ್ಮೀನಾರಾಯಣಮುನಿಗಳು. ಅವರಿಗೆ ಸರ್ಪವು ಆನಂದದಿಂದ ವ್ಯಾಸರಾಜರ ಶಿರಸ್ಸಿನ ಮೇಲೆ ಹೆಡೆಯಾಡಿಸುತ್ತಾ ನಲಿಯುತ್ತಿದೆ. ಯಾವ ಅಪಾಯವನ್ನೂ ಮಾಡುತ್ತಿಲ್ಲವೆಂಬುದು ಮನದಟ್ಟಾಯಿತು.

ಇದೇನು ವಿಚಿತ್ರವೆಂದು ಶ್ರೀಗಳವರು ಯೋಚಿಸಹತ್ತಿದರು. ಆ ನಂತರ ಧ್ಯಾನಮಗ್ನರಾಗಿ ಜ್ಞಾನದೃಷ್ಟಿಯಿಂದ ಅವಲೋಕಿಸಿದಾಗ ಅವರಿಗೆ ಎಲ್ಲವೂ ಕರತಲಾಮಲಕದಂತೆ ವೇದ್ಯವಾಗಿ ಪರಮಾನಂದವಾಯಿತು, ಆ ಘಟಸರ್ಪವು ಬೇರಾರೂ ಆಗಿರದೆ ತಮ್ಮ ಪೀಠದ ಮೂಲಪುರುಷರಾದ ಸಾಕ್ಷಾತ್ ಶ್ರೀಪದ್ಮನಾಭತೀರ್ಥರೆಂಬುದನ್ನವರು ಕಂಡುಕೊಂಡರು ! [1] ಶ್ರೀಗಳವರ ಹೃದಯ ಹರ್ಷಗೊಂಡಿತು. ಭಕ್ತಿ ಸಮ್ರಾಂಗರಾದ ಸ್ವಾಮಿಗಳು ಸರ್ಪಕ್ಕೆ ನಮಸ್ಕಾರ ಮಾಡಿ ಸರ್ಪಭಾಷೆಯಲ್ಲಿ ಮಾತನಾಡಿದರು. ಸರ್ಪ-ಶ್ರೀಗಳವರಲ್ಲಿ ಮಾತುಕಥೆ ಪ್ರಾರಂಭವಾಯಿತು !

ಶ್ರೀಗಳವರು :— ಪರಮಪೂಜ್ಯ ಗುರುವರ್ಯ ! ತಮ್ಮ ದರ್ಶನದಿಂದ ಧನ್ಯನಾದೆ, ಈ ಘೋರರೂಪವನ್ನೇಕೆ ಧರಿಸಿ ಬಂದಿರುವಿರಿ? ನಮ್ಮ ವ್ಯಾಸತೀರ್ಥರು ತಮಗೇನು ಅಪಚಾರವಮಾಡಿದರೆಂದು ಅವರನ್ನು ಪೀಡಿಸುತ್ತಿರುವಿರಿ ?

---

1) ಶ್ರೀಪದ್ಮನಾಭತೀರ್ಥರು ಶೇಷಾಂಶ ಸಂಭೂತರೆಂದು ಜ್ಞಾನಿಗಳು ಅವರನ್ನು ಸ್ತುತಿಸುವರು.

ಸರ್ಪ :—ನಮ್ಮ ಸದ್ವಂಶದೀಪಕರೇ ! ನಿಮ್ಮನ್ನು ಕಂಡು ನಮಗೂ ಸಂತೋಷವಾಯಿತು. ನಮ್ಮ ಮೂಲರೂಪವೇ ಇದಲ್ಲವೆ ? ನಿಮ್ಮ ಶಿಷ್ಯರು ನಮಗಾವ ಅಪಚಾರವನ್ನೂ ಮಾಡಿಲ್ಲ !

ಶ್ರೀಗಳವರು :—ಹಾಗಾದರೆ ಅವರನ್ನೇಕೆ ಸುತ್ತುಗಟ್ಟಿರುವಿರಿ ?

ಸರ್ಪ :—ನಾವು ಇವರನ್ನು ಆಲಿಂಗಿಸಿದ್ದೇವೆ, ಅಷ್ಟೇ ! ಇವರಲ್ಲಿ ಅನುಗ್ರಹಿಸಲೆಂದೇ ನಾವು ಬಂದಿದ್ದೇವೆ.

ಶ್ರೀಗಳವರು :—ಮಹಾಸ್ವಾಮಿ, ತಮ್ಮ ಅಭಿಪ್ರಾಯ ನನಗೆ ಅರ್ಥವಾಗಲಿಲ್ಲ. ಅನುಗ್ರಹಿಸಿ ಸ್ಪಷ್ಟಪಡಿಸಬೇಕಾಗಿ ಪ್ರಾರ್ಥಿಸುತ್ತೇನೆ.

ಸರ್ಪ :—ಪ್ರೀತ್ಯಾಸ್ಪದರೇ, ಹಾಗಾದರೆ ಕೇಳಿ. ಶ್ರೀ ವಾಯುದೇವರ ಅವತಾರರಾದ ಶ್ರೀಸರ್ವಜ್ಞಾಚಾರ್ಯರ ಸಚ್ಛಾಸ್ತ್ರವನ್ನು ಅವರಿಂದಲೇ ಅಧ್ಯಯನ ಮಾಡಲೂ, ಅದನ್ನು ವಿವರಿಸಲೂ ಗರುಡಶೇಷಾದಿಗಳೇ ಅಧಿಕಾರಿಗಳು ! ಅಂತೆಯೇ ಹಿಂದೆ ನಾವು ಶ್ರೀಸರ್ವಜ್ಞರ ಉಪದೇಶ ಪಡೆಯಲು ಶ್ರೀಪದ್ಮನಾಭತೀರ್ಥರೂಪದಿಂದ ಅವರ ಶಿಷ್ಯರಾಗಿ ಅವರಿಂದಲೇ ದ್ವೈತಶಾಸ್ತ್ರದ ಉಪದೇಶಪಡೆದು ಕೃತಾರ್ಥರಾದೆವು. ಆಚಾರ್ಯರಾಯರ ಶಾಸ್ತ್ರವನ್ನು ವಿವರಿಸುವ ಅಧಿಕಾರ ನಮ್ಮದೆಂದು ಶ್ರೀಹರಿಯ ಆಜ್ಞೆ. ಅಂತೆಯೇ ನಾವು ಸರ್ವಜ್ಞರ ಭಾಷ್ಯಗಳಿಗೆ ಟೀಕೆಯನ್ನು ರಚಿಸಿ ಪ್ರಥಮ ಟೀಕಾಕಾರರೆಂದು ಗೌರವಾನ್ವಿತರಾದೆವು, ನಾವು ಶ್ರೀಮದಾಚಾರ್ಯರನ್ನು ಅವರ ಎಲ್ಲ ಗ್ರಂಥಗಳಿಗೆ ಟೀಕೆ ರಚಿಸುವ ಭಾಗ್ಯಶಾಲಿಗಳಾರೆಂದು ಪ್ರಾರ್ಥಿಸಿದಾಗ ಅವರು "ವ್ಯಾಖ್ಯಾಸ್ಯತ್ಯೇಷ ಗೋರಾಟ್" ಗೋರೂಪದಿಂದ ನಮ್ಮ ಸೇವೆ ಮಾಡುತ್ತಿರುವ ಈ ಇಂದ್ರದೇವರೇ ಆ ಮಹತ್ಕಾರ್ಯ ಮಾಡುವರು. ಅದರಲ್ಲಿ ನೀವೂ ಪಾಲ್ಗೊಳ್ಳಬೇಕು" ಎಂದಾಜ್ಞಾಪಿಸಿದರು.

ಮುಂದೆ ಇಂದ್ರದೇವರು ಶ್ರೀವಿಜಯತೀರ್ಥರೆಂಬ ಅಭಿಧಾನದಿಂದ ಅವತರಿಸಿದಾಗ ಶ್ರೀಹರಿವಾಯುಗಳ ಪ್ರೇರಣೆಯಂತೆ ನಾವು ಅವರಲ್ಲಿ ಆವಿಷ್ಟರಾಗಿದ್ದು ಶ್ರೀಮದಾಚಾರ್ಯರ ಭಾಷ್ಯಗಳಿಗೆ ಅವರು ಟೀಕೆಗಳನ್ನು ರಚಿಸುವ ಕಾರ್ಯದಲ್ಲಿ ಸಹಾಯಕರಾಗಿದ್ದು ಶ್ರೀಹರಿವಾಯುಗಳ ಸೇವೆಯನ್ನು ಮಾಡಿದೆವು.

ಪ್ರಿಯಮುನೀಂದ್ರರೇ, ಈಗ ಪರಮತೀಯರು ಶ್ರೀಮದಾಚಾರ್ಯರ ಭಾಷ್ಯ-ಶ್ರೀಜಯತೀರ್ಥರ ಟೀಕೆಗಳಮೇಲೆ ಕುತ್ಸಿತದೋಷಾಭಾಸಗಳನ್ನು ಹೇರಿ ವೈದಿಕ ಸದ್ವೈಷ್ಣಸಿದ್ಧಾಂತವನ್ನು ಅಪಲಾಪಮಾಡುತ್ತಿರುವುದನ್ನು ಪರಿಹರಿಸಲು ಶ್ರೀಹರಿಯ ಪರಮಭಕ್ತರಾದ ಶ್ರೀಪ್ರಹ್ಲಾದರಾಜರೇ ನಿಮ್ಮೀಶಿಷ್ಯರಾದ ಶ್ರೀವ್ಯಾಸತೀರ್ಥ ರೂಪದಿಂದ ಶ್ರೀವಾಯುದೇವರ ವಿಶೇಷ ಸನ್ನಿಧಾನಯುಕ್ತರಾಗಿ ಅವತರಿಸಿದ್ದಾರೆ! ಅವರು ಶ್ರೀಮದಾಚಾರ್ಯರ ಗ್ರಂಥಾಭಿಪ್ರಾಯವನ್ನು ಚೆನ್ನಾಗಿ ನಿರೂಪಿಸುವ ಟೀಕೆಗಳ ನೈಜಾಭಿಪ್ರಾಯವನ್ನು ಎತ್ತಿ ಹಿಡಿದು ಪರಮತ ನಿರಾಕರಣಪೂರ್ವಕವಾಗಿ

ದ್ವೈತಸಿದ್ಧಾಂತಕ್ಕೆ ಬಂದಿರುವ ಎಲ್ಲ ವಿಪತ್ತುಗಳನ್ನೂ ಪರಿಹರಿಸಿ, ಅಸದೃಶ ಟಿಪ್ಪಣಿಗಳನ್ನು ಸ್ವತಂತ್ರ ಗ್ರಂಥಗಳನ್ನು ರಚಿಸಿ ತತ್ವವಾದಮತದ ವಿಜಯ ವೈಜಯಂತಿಯನ್ನು ಎಲ್ಲೆಡೆ ಮೆರೆಸಿ ಪ್ರಥಮ ಟಿಪ್ಪಣಿಕಾರರೆಂಬ ಅಸಾಧಾರಣ ಕೀರ್ತಿಗೆ ಪಾತ್ರರಾಗುವಕಾಲ ಸನ್ನಿಹಿತವಾಗಿದೆ. ಈ ಮಹತ್ಕಾರ್ಯದಲ್ಲಿ ನಮ್ಮ ಮಹಾ ಸಂಸ್ಥಾನಾಧೀಶ್ವರರಾದ ಶ್ರೀವ್ಯಾಸರಾಜರಲ್ಲಿ ನಾವು ಆವಿಷ್ಟರಾಗಿದ್ದು ತನ್ನ-ಮತ್ತು ಶ್ರೀವಾಯುದೇವನ ಸೇವೆಮಾಡಬೇಕೆಂಬುದು ಶ್ರೀಹರಿಯ ಸಂಕಲ್ಪ ! ಅಂತೆಯೇ ನಾವು ಇವರಲ್ಲಿ ಅನುಗ್ರಹಮಾಡಿ ಆಶೀರ್ವದಿಸಲು ಆಗಮಿಸಿದ್ದೇವೆ. ಇವರಿಂದಾಗಿ ದ್ವೈತಸಿದ್ಧಾಂತವು ನಿಷ್ಕಂಟಕವಾಗಿ ಆಚಂದ್ರಾರ್ಕಸ್ಥಾಯಿಯಾಗಿ ಬೆಳಗಲಿದೆ, ಈ ಮಹತ್ಕಾರ್ಯವು ಸುಗಮವಾಗಿ ನೆರವೇರುವಂತೆ ಆಶೀರ್ವದಿಸಿದ್ದೇವೆ. ಇವರಿಗೆ ದುಷ್ಟಮೃಗ.ಗ್ರಹಾದಿಗಳಬಾಧೆ, ವಿಷಬಾಧೆಗಳುಂಟಾಗದಂತೆ ಮಾಡಲು ನಾವಿವರನ್ನು ಆಲಿಂಗಿಸಿ ಆಶೀರ್ವದಿಸುತ್ತಿದ್ದೇವೆ. ದ್ವೈತಸಿದ್ಧಾಂತವು ವಿರಾಜಿಸಿರುವವರೆಗೆ ನಿಮ್ಮ ಮತ್ತು ನಿಮ್ಮ ಶಿಷ್ಯರಾದ ವ್ಯಾಸತೀರ್ಥರ ಹೆಸರು ಅಜರಾಮರವಾಗಿ ವಿರಾಜಿಸುವುದು.

ಶ್ರೀಗಳವರು "ತಮ್ಮ ಅನುಗ್ರಹದಿಂದ ನಾವು ಮತ್ತು ನಮ್ಮ ಶಿಷ್ಯರು ಕೃತಾರ್ಥರಾದೆವು. ಮಹಾಸ್ವಾಮಿ, ನಿಮಗೆ ನಮ್ಮ ಅನಂತ ನಮಸ್ಕಾರಗಳು" ಎಂದು ಹೇಳಿ ನಮಸ್ಕರಿಸಿದರು. ಅನಂತರ ಶ್ರೀಗಳವರು ನೋಡುತ್ತಿರುವಂತೆಯೇ ಸರ್ಪ ರೂಪದ ಶ್ರೀಪದ್ಮನಾಭತೀರ್ಥರು ಅದೃಶ್ಯರಾದರು !

ಅನಂತರ ಪರಮಾನಂದತುಂದಿಲರಾದ ಶ್ರೀಲಕ್ಷ್ಮೀನಾರಾಯಣಮುನಿಗಳು ಓಡಿಹೋಗಿ ಪ್ರಿಯಶಿಷ್ಯರನ್ನಪ್ಪಿದರು. ಆ ಹೊತ್ತಿಗೆ ಶ್ರೀವ್ಯಾಸರಾಜರು ಅಸಂಪ್ರಜ್ಞಾತ ಸಮಾಧಿಯಿಂದೆಚ್ಚೆತ್ತರು. ಕಣ್ಣು ತೆರೆದು ಗುರುಗಳು ತಮ್ಮನ್ನು ಆಲಿಂಗಿಸಿ ಆನಂದಬಾಷ್ಪ ಸುರಿಸುತ್ತಾ ತಮ್ಮ ಮೈಕೈ ಸವರುತ್ತಿರುವುದನ್ನು ಕಂಡು ದಿಗ್ಗನೆ ಮೇಲೆದ್ದು ಗುರುಗಳಿಗೆ ವಂದಿಸಿದರು.

ಶ್ರೀಮಠದ ಜನರಿಗೆ ಜರುಗಿದ ವಿಚಾರಗಳಾವುದೂ ತಿಳಿಯದಿದ್ದರೂ ಶ್ರೀ ವ್ಯಾಸರಾಜರಿಗೆ ಯಾವ ಅಪಾಯವೂ ಆಗದೆ ಅವರು ಸುಖವಾಗಿರುವುದನ್ನು ಕಂಡು ಸಂತೋಷದಿಂದ ಶ್ರೀವ್ಯಾಸಮುನಿಗಳಮೇಲೆ ಶ್ರೀಹರಿವಾಯುಗಳ ಸಂಪೂರ್ಣಾನು ಗ್ರಹವಿದೆಯೆಂದು ಮನಗಂಡು ಸಮಾಧಾನತಾಳಿದರು. ಶ್ರೀಗಳವರು ತಾವು ವ್ಯಾಸ ತೀರ್ಥರ ಜೊತೆಗೆ ಬರುವುದಾಗಿ ಹೇಳಿ ಮಠದ ಜನರನ್ನು ಕಳಿಸಿ ಬಿಟ್ಟರು. ಅಲ್ಲಿ ಆಗ ಗುರು-ಶಿಷ್ಯರಿಬ್ಬರೇ ಉಳಿದರು.

ಶ್ರೀಲಕ್ಷ್ಮೀನಾರಾಯಣಯೋಗಿಗಳು ಪ್ರಿಯಶಿಷ್ಯರನ್ನು ಅಭಿಮಾನ ಪ್ರೀತಿ ವಾತ್ಸಲ್ಯಗಳಿಂದ ನೋಡುತ್ತಾ ಅವರಿಗೆ ನಡೆದ ವಿಚಿತ್ರ ಘಟನೆಯನ್ನು ತಿಳಿಸಿ, ಶ್ರೀಪದ್ಮನಾಭತೀರ್ಥರು ಅವರಲ್ಲಿ ಮಾಡಿದ ಅನುಗ್ರಹ, ವ್ಯಾಸತೀರ್ಥರಿಂದ ಜರುಗಬೇಕಾದ ಮಹತ್ಕಾರ್ಯಗಳ ಬಗೆಗೆ ಅವರಿತ್ತ ಆದೇಶಾದಿಗಳನ್ನೆಲ್ಲಾ ವಿವರವಾಗಿ

ತಿಳಿಸಿ, "ಪ್ರಿಯಶಿಷ್ಯರೇ ! ನೀವು ನಾವೂ ಮಹಾ ಸುಕೃತ ಶಾಲಿಗಳು, ನಮ್ಮ ನಿಮ್ಮ ಪೀಠಗಳ ಮೂಲಪುರುಷರೂ, ಶ್ರೀಶೇಷಾಂಶರೂ, ಶ್ರೀಮದಾಚಾರ್ಯರ ಪಟ್ಟದಶಿಷ್ಯರೂ ಆದ ಶ್ರೀಪದ್ಮನಾಭತೀರ್ಥರ ಅನುಗ್ರಹಕ್ಕೆ ಪಾತ್ರರಾದೆವು. ನೀವಿನ್ನು ನಮ್ಮಲ್ಲಿ ಅಧ್ಯಯನ ಮಾಡಬೇಕಾದುದೆಲ್ಲವೂ ಪೂರ್ಣವಾಗಿದೆಯೆಂದು ನಾವು ಭಾವಿಸುತ್ತೇವೆ. ಆದರೆ ಇನ್ನು ಕೆಲದಿನಗಳಲ್ಲಿ ನಾವು ನಮ್ಮ ಗುರುಪಾದರಾದ ಶ್ರೀವಿಬುಧೇಂದ್ರತೀರ್ಥ ಶ್ರೀಪಾದಂಗಳವರಿಂದ ಅರಿತ. ಶ್ರೀಟೀಕಾಕೃತ್ಪಾದ ಪರಂಪರೆಯಿಂದ ಬಂದ ಶ್ರೀಸರ್ವಜ್ಞಶಾಸ್ತ್ರ ಪಾಠಪ್ರವಚನ ಸಂಪ್ರದಾಯರಹಸ್ಯಗಳೆಲ್ಲವನ್ನೂ ನಿಮಗೆ ಉಪದೇಶಿಸಿಬಿಡುತ್ತೇವೆ. ಅನಂತರ ನಿಮ್ಮ ದಿಗ್ವಿಜಯ ಪ್ರಾರಂಭವಾಗಬೇಕಾಗಿದೆ. ನೀವು ದುರ್ವಾದಿಗಳನ್ನು ಜಯಿಸಿ ದ್ವೈತಸಿದ್ಧಾಂತ ಪ್ರತಿಷ್ಠಾಪನೆ ಮಾಡಿ ಅಸದೃಶಗ್ರಂಥ ರಚನೆಗಳಿಂದ ಸಿದ್ಧಾಂತವನ್ನು ರೂಢಮೂಲಗೊಳಿಸಿ, ವ್ಯಾಸಪಂಥ-ಹರಿದಾಸಪಂಥಗಳ ನಾಯಕರಾಗಿ ಅಖಂಡ ಭಾರತದೇಶದ ಕಲ್ಯಾಣ ಕಾರ್ಯಾಸಕ್ತರಾಗುವುದನ್ನು ಕಂಡಾನಂದಿಸಲು ನಾವು ಆಶಿಸುತ್ತಿದ್ದೇವೆ. ಆ ಕಾಲವೂ ಸನ್ನಿಹಿತವಾಗುತ್ತಿದೆಯೆಂದು ಶ್ರೀಹರಿವಾಯುಗಳು ಈ ವಿಚಿತ್ರ ಘಟನೆಯಿಂದ ನಮಗೆ ಸೂಚಿಸಿದ್ದಾರೆ" ಎಂದು ತಿಳಿಸಿದರು.

ಗುರುಗಳ ವಚನವನ್ನು ವಿಸ್ಮಯಾನಂದಗಳಿಂದ ಕೇಳುತ್ತಿದ್ದ ಶ್ರೀವ್ಯಾಸರಾಜರು ಗುರುಗಳ ಪಾದಸ್ಪರ್ಶಮಾಡಿ, "ಮಹಾಸ್ವಾಮಿ, ಇದೆಲ್ಲವೂ ತಮ್ಮ ಪಾದಾನುಗ್ರಹ ಬಲದಿಂದ ಜರುಗಿದೆ ಎಂದು ನಾನು ನಂಬಿದ್ದೇನೆ. ನಮ್ಮ ಮೂಲಗುರುಗಳ ಅನುಗ್ರಹವನ್ನು ದೊರಕಿಸಿಕೊಟ್ಟ ತಮಗೆ ನಾನು ಅತ್ಯಂತ ಕೃತಜ್ಞನಾಗಿದ್ದೇನೆ" ಎಂದು ಬಿನ್ನವಿಸಿದರು.

ಆ ತರುವಾಯ ಗುರುಶಿಷ್ಯರು ಉತ್ಸಾಹಭರಿತರಾಗಿ ಶ್ರೀಸಂಸ್ಥಾನದ ಮಹಾಪೂಜಾರಾಧನೆಗಾಗಿ ಚಿತ್ತೈಸಿದರು.

## ೨೧. ಕಂಚಿಯಲ್ಲಿ ದಿಗ್ವಿಜಯ

ಶ್ರೀವ್ಯಾಸತೀರ್ಥರು ಗುರುಗಳ ಜತೆಗೆ ಭಗವಂತನನ್ನು ಒಲಿಸಿಕೊಳ್ಳಲು ಸಾಧನವಾದ ಭಕ್ತಿ-ಜ್ಞಾನ ವಿಚಾರವಾಗಿ ವಿಚಾರ ವಿನಿಮಯ ಮಾಡುತ್ತಿದ್ದಾರೆ, ಆಗ ಕೆಲ ಮಾಧ್ವರು ಬಂದು ಉಭಯ ಶ್ರೀಪಾದಂಗಳವರಿಗೆ ಅಭಿವಂದಿಸಿದರು. ಅವರಲ್ಲೊಬ್ಬರಾದ ಗೋವಿಂದ ಕೃಷ್ಣಾಚಾರ್ಯರು "ಶ್ರೀಗಳವರಲ್ಲಿ ಒಂದು ಮಹತ್ವ ವಿಚಾರವನ್ನರುಹಿ ಅಭಯವನ್ನು ಪಡೆಯಲು ಬಂದಿದ್ದೇವೆ" ಎಂದು ವಿಜ್ಞಾಪಿಸಿದರು.

ಶ್ರೀಲಕ್ಷ್ಮೀನಾರಾಯಣಮುನಿಗಳು "ಬಹಳ ಸಂತೋಷ. ಹೇಳಿ" ಎಂದರು.

ಗೋವಿಂದಕೃಷ್ಣಾಚಾರ್ಯರು "ಮಹಾಸ್ವಾಮಿ ಮಾಧ್ವರು ಕಂಚಿಯಲ್ಲಿ ಬಾಳುವುದೇ ದುಸ್ತರವಾಗುವಂತಿದೆ, ಈಗ ನಾಲ್ಕಾರು ವರ್ಷಗಳಿಂದ ಅಲ್ಲಿನ ನಮ್ಮ

ಮಾಧ್ವ ಪಂಡಿತರೊಡನೆ ಅದ್ವೈತಿಗಳು ವಾದಹೂಡಿ ದ್ವೈತಸಿದ್ಧಾಂತವನ್ನು ಖಂಡಿಸುತ್ತಾ ಮೆರೆಯುತ್ತಿದ್ದಾರೆ.

ನವೀನನ್ಯಾಯ-ವಿಾಮಾಂಸಾದಿ ದರ್ಶನಗಳಲ್ಲಿ ಹೆಚ್ಚಿನ ಪರಿಚಯವಿಲ್ಲದ ನಮ್ಮ ಮಾಧ್ವಪಂಡಿತರು ಪರವಾದಿಗಳ ವಾದಶೈಲಿಗೆ ಎದುರು ನಿಲ್ಲಲಾಗದೆ ನಿರುತ್ತರರಾಗುತ್ತಿದ್ದಾರೆ. ಈಗ ಪರವಾದಿಗಳು ದ್ವೈತಮತವು ಅವೈದಿಕವೆಂದೂ, ಸೂತ್ರಕಾರರಿಗೆ ಸಮ್ಮತವಲ್ಲದ ಮತವೆಂದೂ ಪ್ರಚಾರಮಾಡುತ್ತಾ ಸಿದ್ಧಾಂತದ ಮೇಲೆ ದೋಷಗಳನ್ನು ಹೇರಿ ದ್ವೈತಮತಕ್ಕೆ ಕಂಟಕರಾಗಿದ್ದಾರೆ. ಇದರಿಂದಾಗಿ ಮಾಧ್ವರು ತಲೆಯೆತ್ತಿ ಬಾಳದಂತಾಗಿದೆ. ಶ್ರೀಮದಾಚಾರ್ಯರ ಪರಮಸಿದ್ಧಾಂತಕ್ಕಾಗುತ್ತಿರುವ ಈ ಅಪಚಾರಗಳನ್ನು ಕಂಡು ಕಡುನೊಂದು ಇದಕ್ಕೆ ಪರಿಹಾರ ಹುಡುಕಲೂ, ಕಂಚಿಯಲ್ಲಿ ಮಾಧ್ವರು ಮತ್ತೆ ತಲೆಯೆತ್ತಿ ಗೌರವದಿಂದ ಬಾಳುವಂತೆ ಮಾಡಬೇಕೆಂದು ತಮ್ಮಲ್ಲಿ ವಿಜ್ಞಾಪಿಸಲೂ ನಾವು ಬಂದಿದ್ದೇವೆ. ಪೂಜ್ಯಪಾದರು ಕಂಚಿಯ ಮಾಧ್ವ ಜನತೆಯಲ್ಲಿ ಕೃಪೆದೋರಿ, ಅಲ್ಲಿಗೆ ದಯಮಾಡಿಸಿ, ಮಧ್ವಮತದ ಗೌರವವನ್ನು ಕಾಪಾಡಬೇಕಾಗಿ ಪ್ರಾರ್ಥಿಸುತ್ತೇನೆ" ಎಂದರು.

ಗೋವಿಂದ ಕೃಷ್ಣಾಚಾರ್ಯರ ಮಾತುಕೇಳಿ ಶ್ರೀಗಳವರು "ಚಿಂತಿಸಬೇಡಿ ಪಂಡಿತರೇ, ನಿಮ್ಮ ಮನೋಭೀಷ್ಟವು ಬೇಗ ಪೂರ್ಣವಾಗುವುದು" ಎಂದು ಅಭಯವಿತ್ತು, ಶ್ರೀವ್ಯಾಸತೀರ್ಥರತ್ತ ಮಂದಹಾಸಬೀರಿ 'ಪ್ರಿಯಶಿಷ್ಯರೇ, ಕಂಚಿಯ ಸಜ್ಜನರ ಪ್ರಾರ್ಥನೆಯನ್ನು ಕೇಳಿದಿರಷ್ಟೆ? ನೀವು ದಿಗ್ವಿಜಯಯಾತ್ರೆಗೆ ಹೊರಡುವಕಾಲವೀಗ ಪ್ರಾಪ್ತವಾಗಿದೆ! ವಿಜಯಯಾತ್ರೆಗೆ ಸಿದ್ಧರಾಗಿರಿ' ಎಂದು ಆಜ್ಞಾಪಿಸಿದರು.

ಗುರುಗಳವರ ಆಜ್ಞೆಗಾಗಿ ಬಹುದಿನದಿಂದ ನಿರೀಕ್ಷಿಸುತ್ತಿದ್ದ ಶ್ರೀವ್ಯಾಸರಾಜರು "ಪೂಜ್ಯಗುರುಪಾದರ ಆಜ್ಞೆಯನ್ನು ಶಿರಸಾಧರಿಸಿದ್ದೇನೆ" ಎಂದು ಬಿನ್ನವಿಸಿದರು.

ಕಂಚಿಯಿಂದ ಬಂದಿದ್ದ ಪಂಡಿತರು-ಧರ್ಮಾಭಿಮಾನಿಗಳಿಗೆ ತಮ್ಮ ನಿಯೋಗವು ಯಶಸ್ವಿಯಾಯಿತೆಂದು ಹರ್ಷವಾಯಿತು. ಶ್ರೀಲಕ್ಷ್ಮೀನಾರಾಯಣಮುನಿಗಳ ಆದೇಶದಂತೆ ಕಂಚಿದಿಗ್ವಿಜಯಕ್ಕೆ ಹೊರಡಲು ಸಕಲ ಸಿದ್ಧತೆಗಳಾಗಹತ್ತಿದವು.

ಒಂದು ಶುಭದಿನ ಶ್ರೀವ್ಯಾಸರಾಜರು ಶ್ರೀಮಠದ ಹತ್ತಾರು ಜನಪಂಡಿತರು, ವಿದ್ಯಾರ್ಥಿಗಳು, ಮಿತಪರಿವಾರದೊಡನೆ, ಕಂಚಿಯಿಂದ ಬಂದಿದ್ದ ಮಾಧ್ವಜನರೊಡನೆ ಮುಳಬಾಗಿನಲ್ಲಿ ಪ್ರಖ್ಯಾತವಾದ ಶ್ರೀನರಸಿಂಹದೇವರ ದರ್ಶನಮಾಡಿ, ಪ್ರಾರ್ಥನೆ ಸಲ್ಲಿಸಿ, ಗುರುಗಳಿಗೆ ನಮಸ್ಕರಿಸಿ ಆಶೀರ್ವಾದಪಡೆದು ಉತ್ಸಾಹದಿಂದ ದಿಗ್ವಿಜಯ ಯಾತ್ರೆಯನ್ನು ಕೈಕೊಂಡು ಪ್ರಯಾಣಬೆಳೆಸಿದರು.

o o o o o

ದಕ್ಷಿಣಭಾರತದ ವಿದ್ಯಾಕೇಂದ್ರಗಳಲ್ಲಿ ಕಂಚಿಯೂ ಒಂದು ಉತ್ತಮ ವಿದ್ಯಾಕೇಂದ್ರ, ಉತ್ತರಭಾರತದಲ್ಲಿ ವಿಖ್ಯಾತವಾದ ಕಾಶಿ, ಮಿಥಿಲಾ, ನವದ್ವೀಪಗಳಂತೆ

ಕಾಂಚೀನಗರ ವಿದ್ಯೆಯ ಕೇಂದ್ರವೆನಿಸಿ ಹೆಸರುಗಳಿಸಿತ್ತು. ಅಲ್ಲಿ ದೊಡ್ಡದೊಂದು ವಿದ್ಯಾಪೀಠವಿದ್ದು ಕಂಚಿಯ ರಾಜನಾದ ಸಂಭವರಾಯನ ಆಶ್ರಯದಲ್ಲಿ ಬಹುವಾಗಿ ಅಭಿವೃದ್ಧಿಸಿದ್ದಿತು. ಯಜನ-ಯಾಜನವಿಶಾರದರೂ, ಕರ್ಮಠರೂ ಆದ ಅನೇಕ ಶ್ರೋತ್ರಿಯರಿಂದ ವಿರಾಜಿಸಿದ್ದ[1] ತುಂಡೀರಮಂಡಲವು ದಕ್ಷಿಣಭಾರತದ ಪ್ರಮುಖ ಆಕರ್ಷಣೆಯಾಗಿದ್ದಿತು.

ಕಂಚಿಯರಾಜ ಸಂಭವರಾಯನು ಅದ್ವೈತಪಕ್ಷಪಾತಿಯಾಗಿದ್ದರೂ ತನ್ನ ರಾಜ್ಯದಲ್ಲಿ ಅದ್ವೈತ-ವಿಶಿಷ್ಟಾದ್ವೈತ-ದ್ವೈತಮತಗಳಿಗೆ ವಿಶೇಷ ಪ್ರೋತ್ಸಾಹನೀಡುತ್ತಾ ವಿದ್ಯಾಪಕ್ಷಪಾತಿಯೆಂದು ಹೆಸರುಗಳಿಸಿದ್ದನು ಶ್ರೀವ್ಯಾಸತೀರ್ಥರು ದಯಮಾಡಿಸಿದ ವಿಚಾರವರಿತು ರಾಜನು ಗೌರವದಿಂದ ಅವರಿಗೆ ಸ್ವಾಗತನೀಡಿದನು.

ಕಂಚಿಯ ಧರ್ಮಾಭಿಮಾನಿಗಳು ಶ್ರೀಪಾದಂಗಳವರನ್ನು ವಾದ್ಯವೈಭವ ವೇದಘೋಷ ಪೂರ್ಣಕುಂಭಗಳೊಡನೆ ಸ್ವಾಗತಿಸಿ ಪಾಲಕಿಯಲ್ಲಿ ಗುರುಗಳನ್ನು ಕೂಡಿಸಿ ಮೆರವಣಿಗೆಯೊಡನೆ ಕರೆತಂದು, ಭವ್ಯಮಠದಲ್ಲಿ ಬಿಡಾರಮಾಡಿಸಿದರು.

ಶ್ರೀಗಳವರು ಮರುದಿನವೇ ಮಿತಪರಿವಾರದೊಡನೆ ಶ್ರೀವರದರಾಜಸ್ವಾಮಿ, ಶ್ರೀಏಕಾಂಬರೇಶ್ವರಸ್ವಾಮಿ ಕಾಮಾಕ್ಷೀದೇವಿಯರದರ್ಶನಮಾಡಿ ಪ್ರಾರ್ಥಿಸಿಬಂದರು ನಾಲ್ಕಾರುದಿನಗಳು ಕಳೆದಮೇಲೆ ಕಂಚಿಯರಾಜ ಶ್ರೀಗಳವರು ವಿದ್ಯಾಪೀಠಕ್ಕೆ ಭೇಟಿ ನೀಡಬೇಕೆಂದು ಆಹ್ವಾನವನ್ನು ಕಳುಹಿಸಿದನು. ಶ್ರೀಗಳವರು ಸಂತೋಷದಿಂದ ವಿದ್ಯಾಪೀಠಕ್ಕೆ ಭೇಟಿನೀಡಿದರು. ಆಗ ಅವರಿಗೆ ಅಲ್ಲಿನ ಪಂಡಿತರ ಪರಿಚಯವಾಯಿತು. ಶ್ರೀಯವರನ್ನು ಮಹಾರಾಜರು ಆಹ್ವಾನಿಸಿದ್ದು, ಗೌರವ ಸಲ್ಲಿಸಿದ್ದು ಅಲ್ಲಿನ ಪಂಡಿತ ಮಂಡಲಿಗೆ ಅಷ್ಟಾಗಿ ಹಿಡಿಸಿರಲಿಲ್ಲ. ಅದು ಅವರ ನಡುವಳಿಕೆಗಳಿಂದ ಸ್ಪಷ್ಟವಾಯಿತು. ತಮ್ಮ ವಿದ್ಯಾಪೀಠದ ಗೌರವವನ್ನು, ಶ್ರೀಗಳವರು ತಮ್ಮ ವಿದ್ಯೆಯ ಮಹತ್ವವನ್ನು ಪ್ರದರ್ಶಿಸಿ ಪಡೆಯಲಿ ಎಂಬ ಅಭಿಪ್ರಾಯ ಅಲ್ಲಿನ ಪಂಡಿತರಿಗಿರುವುದೆಂಬುದನ್ನು ಜಾಣಾಕ್ಷರಾದ ಶ್ರೀವ್ಯಾಸತೀರ್ಥರು ಮನಗಂಡರು. ಅದು ಒಂದು ಸವಾಲೆನಿಸಿತು, ಗುರುಗಳು ಅವರ ಆಹ್ವಾನವನ್ನು ಸ್ವೀಕರಿಸಿದರೋ ಎಂಬಂತೆ ಎಲ್ಲ ಪಂಡಿತರಿಗೂ ಶ್ರೀಮಠಕ್ಕೆ ಬರಲು ಆಹ್ವಾನನೀಡಿದರು. "ಪಂಡಿತಶ್ರೇಷ್ಠರೇ, ನಮ್ಮ ಮಠದಲ್ಲಿ ಎಲ್ಲಾ ಶಾಸ್ತ್ರಗಳಿಗೂ ಗೌರವವಿದೆ. ಯಾರುಬೇಕಾದರೂ, ಯಾವುದೇ ಶಾಸ್ತ್ರದಲ್ಲಾದರೂ ತಮ್ಮ ಪಾಂಡಿತ್ಯವನ್ನು ಪ್ರದರ್ಶಿಸಿ ಶ್ರೀಮಠದಿಂದ ಗೌರವ ಬಹುಮಾನಗಳನ್ನು ಪಡೆಯಬಹುದು. ನಾವು ವಿಖ್ಯಾತರಾದ, ಸಕಲಶಾಸ್ತ್ರಕೋವಿದರಾದ ಕಂಚಿಯ ಪಂಡಿತರುಗಳ ಪರಿಚಯಮಾಡಿಕೊಳ್ಳಲೆಂದೇ ಇಲ್ಲಿಗೆ ಬಂದಿದ್ದೇವೆ, ಶ್ರೀಮದಾಚಾರ್ಯರ ಮಹಾಸಂಸ್ಥಾನಾಧಿಪತಿಗಳಾದ ನಮಗೆ ದ್ವೈತಸಿದ್ಧಾಂತ

---

1. ಗ್ರಾಮೇಗ್ರಾಮೇ ಪಂಡಿತಾ ಏವ ಸರ್ವೇ । ಗೇಹೇ ಗೇಹೇಽಧ್ಯಾಪಕಾ ಜಾತಮಾತ್ರಾಃ ॥
—ಶ್ರೀರಾಘವೇಂದ್ರವಿಜಯ

ಪ್ರತಿಷ್ಠಾಪನೆಯು ಆದ್ಯಕರ್ತವ್ಯವಲ್ಲವೇ? ನೀವೆಲ್ಲರೂ ಬರುತ್ತೀರಿ ಎಂದು ನಾವು ನಂಬಿದ್ದೇವೆ" ಎಂದು ಸೂಚ್ಯವಾಗಿಹೇಳಿ ಆಹ್ವಾನಿಸಿ ಶ್ರೀಮಠಕ್ಕೆ ಮರಳಿ ಬಂದರು.

ವಿದ್ಯಾಮದದಿಂದ ಉನ್ಮತ್ತರಾಗಿದ್ದ ವಿದ್ಯಾಪೀಠದ ವಿದ್ವಜ್ಜನರಿಗೆ ತಮ್ಮ ಅಂತರ್ಯವನ್ನರಿತೇ ಶ್ರೀಗಳವರು ತಮ್ಮ ವಿದ್ಯಾಪ್ರೌಢಿಮೆಯನ್ನು ಪರೀಕ್ಷಿಸಲು ಶ್ರೀಮಠಕ್ಕೆ ಆಹ್ವಾನಿಸಿದ್ದಾರೆಂಬುದು ವಿದಿತವಾಯಿತು. ಅವರಿಗೆ ಶ್ರೀವ್ಯಾಸರಾಜರು ಆಹ್ವಾನವಿತ್ತಿದ್ದು ತಮ್ಮ ಮನೋಭಿಷ್ಟಸಿದ್ಧಿಗೆ ದಾರಿಯಾಯಿತೆಂದೂ, ಈ ತರುಣ ಸನ್ಯಾಸಿಗಳನ್ನು ಜಯಿಸಿಬಿಟ್ಟರೆ, ಕಂಚಿಯಲ್ಲಿ ಮಧ್ವಸಿದ್ಧಾಂತದ ಇತಿಶ್ರೀಯಾಗುವು ದೆಂದೂ ಭಾವಿಸಿದ ಆ ಗರ್ವಿಷ್ಟ ಪಂಡಿತರು ಉಬ್ಬಿದರು. ಸರಿ, ಪ್ರಾರಂಭವಾಯಿತು ವಿವಿಧ ವಿದ್ಯಾವಿಶಾರದರ ಪಾಂಡಿತ್ಯಪ್ರದರ್ಶನ !

ಶ್ರೀವ್ಯಾಸರಾಜರ ಮಠಕ್ಕೆ ಅನೇಕ ಪಂಡಿತರು ಬರಲಾರಂಭಿಸಿದರು. ಬಂದ ಪಂಡಿತರು ಬಹುವಿಷಯವನ್ನು ಪ್ರದರ್ಶಿಸುತ್ತಾ ವಾದದಲ್ಲಿ ಶ್ರೀಗಳವರನ್ನು ಸೋಲಿಸ ಬೇಕೆಂಬ ಮಹತ್ವಾಕಾಂಕ್ಷೆಯುಳ್ಳವರಾಗಿದ್ದರು. ಶ್ರೀವ್ಯಾಸತೀರ್ಥರು ಅವರ ಅಂತರ್ಯವನ್ನು ಬಲ್ಲವರಾದ್ದರಿಂದ ಮಂದಹಾಸದಿಂದ ಅವರನ್ನು ಸ್ವಾಗತಿಸು ತ್ತಿದ್ದರು.

ಶ್ರೀಗಳವರು ವಿಷಯವಿಚಾರ ಪ್ರಾರಂಭಿಸಿದಾಗ ತಾವೇ ವ್ಯಾಖ್ಯಾರ್ಥಕ್ಕಿಳಿಯುತ್ತಿ ರಲಿಲ್ಲ. ಮೊದಲು ಮಠದ ಪಂಡಿತರನ್ನು ಮುಂದುಮಾಡುತ್ತಿದ್ದರು. ವಾಕ್ಯಾರ್ಥವು ಚೆನ್ನಾಗಿಯೇ ಜರಗುತ್ತಿತ್ತು. ಮಠೀಯ ವಿದ್ವಾಂಸರು ಕೆಲವು ಪಂಡಿತರನ್ನು ಜಯಿ ಸುತ್ತಿದ್ದರು. ಕೆಲವೊಮ್ಮೆ ಅವರ ಕೈಮೀರುವ ಪ್ರಸಂಗ ಬರುತ್ತಿತ್ತು. ಆಗ ಶ್ರೀ ವ್ಯಾಸತೀರ್ಥರು ವಿಷಯವಿಚಾರವನ್ನು ಕೈಗೆತ್ತಿಕೊಂಡು ಉಭಯವಾದಿಗಳು ಅದು ವರೆಗೆ ವಾದಿಸಿದ ವಿಷಯಗಳನ್ನು ಅನುವಾದಮಾಡಿ ಅವರ ಮೇಲೆ ಪರವಾದಿಗಳು ಮಂಡಿಸಿದ ವಿಚಾರವನ್ನು ಖಂಡಿಸಿ, ಕೋಟಿಕ್ರಮವನ್ನು ಹೇಳುತ್ತಿದ್ದರು.

ಶ್ರೀವ್ಯಾಸರಾಜರು ವಾದಕ್ಕಿಳಿದಮೇಲೆ, ವ್ಯಾಖ್ಯಾರ್ಥಕ್ಕೆ ಕಳೆಯೇರುತ್ತಿತ್ತು. ಒಳ್ಳೆಯ ಹುರುಪಿನಿಂದ ವ್ಯಾಕಾರ್ಥವು ಜರಗುತ್ತಿತ್ತು. ಕೊನೆಗೆ ಶ್ರೀಗಳವರ ಪ್ರಕಾಂಡ ಪಾಂಡಿತ್ಯ, ಪ್ರತಿಭೆ, ತರ್ಕಶೈಲಿಯ ಶಾಬ್ದಬೋಧಕ್ರಮದ ಅನುವಾದ, ಪ್ರಮಾಣೋ ದಾಹರಣ ಚಾತುರ್ಯ, ವಾಗ್ವೈಭವಗಳ ಮುಂದೆ ನಿಲ್ಲಲಾಗದೆ ಪರವಾದಿಗಳು ನಿರು ತ್ತರರಾಗುತ್ತಿದ್ದರು ಉದಾರಹೃದಯರಾದ ಸ್ವಾಮಿಗಳು ಪರಾಜಿತರಾದ ಪಂಡಿತ ರನ್ನು ಸಂಭಾವನಾದಿಗಳಿಂದ ವಿಶೇಷವಾಗಿ ಗೌರವಿಸಿ, ಕಳಿಸುತ್ತಿದ್ದರು. ಇದರಿಂದಾಗಿ ಗುರುಗಳ ಕೀರ್ತಿ ವ್ಯಾಪಿಸಹತ್ತಿತು. ಪರಮತೀಯ ಪಂಡಿತರೂ ಶ್ರೀವ್ಯಾಸರಾಜರ ಅದ್ವಿತೀಯ ಪಾಂಡಿತ್ಯ, ಪ್ರತಿಭೆ, ವಾದಶೈಲಿಗಳನ್ನೂ, ಪಂಡಿತಪಕ್ಷಪಾತ, ಔದಾರ್ಯಾದಿ ಗುಣಗಳನ್ನೂ ಹೊಗಳುತ್ತಿದ್ದರು. ದಿನೇ ದಿನೇ ಶ್ರೀವ್ಯಾಸರಾಜರ ಶ್ರೀಮಠವು

ಸರಸ್ವತೀ ಮಂದಿರವೆನಿಸಿ ಪಂಡಿತರ ಯಾತ್ರಾಸ್ಥಳವಾಗಿ ಪರಿಣಮಿಸುತ್ತಿತ್ತು.

ಕಾಂಚೀಪುರವಲ್ಲಿ ಆಸ್ತಿಕ ದರ್ಶನಗಳಲ್ಲಿ ಪರಿಣತರಾದ ಪಂಡಿತರಿದ್ದಂತೆ ನಾಸ್ತಿಕ ದರ್ಶನಗಳಲ್ಲಿ ಪ್ರಭುತ್ವ ಪಡೆದಿದ್ದ ಪ್ರಬಲಪಂಡಿತರಿಗೇನೂ ಕೊರತೆಯಿರಲಿಲ್ಲ. ಶ್ರೀಪಾದಂಗಳವರ ವಿದ್ಯಾವಿಲಾಸಕೀರ್ತಿಯನ್ನು ಕೇಳಿ ಪ್ರಬಲರಾದ ಬೌದ್ಧ, ಜೈನ, ಮತಾನುಯಾಯಿಗಳಾದ ಪಂಡಿತರು ಶ್ರೀವ್ಯಾಸರಾಜತೀರ್ಥರಲ್ಲಿಗೆ ಬಂದು ವಾದಮಾಡಿ ಪರಾಜಿತರಾದರು.

ಇವರಂತೆ ಪ್ರಾಚೀನ-ನವೀನ ನ್ಯಾಯಶಾಸ್ತ್ರ ಕೋವಿದರು, ಮೀಮಾಂಸಾ ಶಾಸ್ತ್ರ ಪರಿಣಿತರು,ವೇದವಿದ್ಯಾವಿಶಾರದರೇ ಮೊದಲಾದ ವಿವಿಧ ಶಾಸ್ತ್ರಪಾರಂಗತರು ಶ್ರೀಗಳವರೊಡನೆ ವಾಕ್ಯಾರ್ಥಮಾಡಿ ಸೋಲನ್ನೊಪ್ಪುತ್ತಿದ್ದರು. ಇದರಿಂದ ಶ್ರೀಗಳವರ ಕೀರ್ತಿ ಮತ್ತಷ್ಟು ಪ್ರಖ್ಯಾತವಾಯಿತು.

ಅನಂತರ ವಿಖ್ಯಾತರಾಗಿದ್ದ ಶೈವ-ಅದ್ವೈತ-ವಿಶಿಷ್ಟಾದ್ವೈತ ಮತಗಳ ಪಂಡಿತಶ್ರೇಷ್ಠರು ದ್ವೈತಸಿದ್ಧಾಂತದ ಮೇಲೆ ದುರ್ಧರದೋಷಗಳನ್ನು ಹೇರಿ, ದ್ವೈತ ಮತವು ಅವೈದಿಕವೆಂದೂ, ಸೂತ್ರ-ಶ್ರುತಿ-ಸ್ಮೃತಿ-ಪುರಾಣ-ಗೀತಾ ಮತ್ತು ಇತಿಹಾಸಾದಿ ಪ್ರಮಾಣಗಳಿಗೆ ವಿರುದ್ಧವಾದುದರಿಂದ ದ್ವೈತಮತವು ಅನುಪಾದೇಯವೆಂದೂ ವಾದಿಸುತ್ತಿದ್ದರು.

ಅದುವರೆಗೆ ಜರುಗಿದ ಅನೇಕ ವಾಕ್ಯಾರ್ಥಗಳಿಗಿಂತ ಈ ದ್ವೈತಾದ್ವೈತ ವಾಕ್ಯಾರ್ಥವು ಎಲ್ಲ ವಿಧದಿಂದ ಅತ್ಯಂತ ಪ್ರಬಲವಾಗಿತ್ತು. ಅಂತೆಯೇ ನಾಲ್ಕಾರು ಜನ ಸಕಲಶಾಸ್ತ್ರ ಪಾರೀಣರಾದ ಪ್ರಕಾಂಡಪಂಡಿತರನ್ನು ವಾದಮಧ್ಯಸ್ಥರನ್ನಾಗಿ ಏರ್ಪಡಿಸಿ, ವಾದನಿಯಮಗಳನ್ನು ತೀರ್ಮಾನಿಸಲಾಗಿದ್ದು, ಜಯಾಪಜಯಗಳ ತೀರ್ಪು ನೀಡುವ ಅಧಿಕಾರವನ್ನವರಿಗೆ ಕೊಡಲಾಗಿತ್ತು.

ಶ್ರೀವ್ಯಾಸರಾಜರಿಗೀಗ ತಮ್ಮ ನಿಜವಾದ ವೈದುಷ್ಯ,ಪ್ರತಿಭೆ,ಷಡ್ದರ್ಶನಗಳಲ್ಲಿದ್ದ ಪ್ರೌಢಿಮೆಗಳನ್ನೂ,ವಾದಚಾತುರ್ಯವನ್ನು ಪ್ರದರ್ಶಿಸಿ ಶ್ರೀಹರಿ-ವಾಯುಗಳ ಸೇವೆ ಮಾಡುವ ಸದವಕಾಶ, ಸಿದ್ಧಾಂತ ಸ್ಥಾಪನೆಯ ಸೌಭಾಗ್ಯಗಳು ತಾನಾಗಿದೊರಕಿತ್ತು.

ಶ್ರೀವ್ಯಾಸರಾಜರು-ಅದ್ವೈತ ಪಂಡಿತರಲ್ಲಿ, ಹತ್ತಾರು ದಿನಗಳವರೆಗೆ ಬಹು ಭರದಿಂದ ವಾಕ್ಯಾರ್ಥವಾಯಿತು. ಶ್ರೀಪಾದಂಗಳವರು ಪ್ರತಿವಾದಿಗಳ ಎಲ್ಲಾ ಯುಕ್ತಿ-ಪ್ರಮಾಣ-ಗುಂಫಿತವಾದ ಅದ್ವೈತಮಂಡನಪರ ವಾದವನ್ನು ಶತಶಃ ಖಂಡಿಸಿ, ದ್ವೈತ ತತ್ವಗಳನ್ನು ಬಲವಾಗಿ ಪ್ರತಿಪಾದಿಸಿ ಶ್ರುತಿ, ಸ್ಮೃತಿ, ಪುರಾಣ, ಗೀತಾ,ಭಾಗವತ-ರಾಮಾಯಣ-ಭಾರತ ಮತ್ತು ಬ್ರಹ್ಮಸೂತ್ರಗಳನ್ನು ಉದಾಹರಿಸಿ ವೇದಾದಿ ಸಕಲಪ್ರಮಾಣಗಳಿಂದ ಸಿದ್ಧವಾಗುವ ಸಿದ್ಧಾಂತವೆಂದರೆ, ಶ್ರೀಸೂತ್ರಕಾರರಿಗೆ ಪರಮ ಸಮ್ಮತವಾದ ಶ್ರೀಮತ್ಪೂರ್ಣಪ್ರಜ್ಞರ ದ್ವೈತಸಿದ್ಧಾಂತವೊಂದೇ ಎಂದು ತಮ್ಮ ಅನಿತರ ಸಾಧಾರಣ ಪ್ರಜ್ಞಾತಾಂಡವ, ವಾದವೈಖರಿ, ನವನವೋನ್ಮೇಷ್ಮಿತ ಪ್ರತಿಭೆಗಳಿಂದ ಸಾಧಿಸಿದರು. ಪುಂಖಾನುಪುಂಖವಾಗಿ ಶ್ರೀರಾಮನ ಬಿಲ್ಲಿ

ನಿಂದ ಹೊರಹೊಮ್ಮುವ ಶರಾಘಾತಗಳಿಂದ ತತ್ತರಿಸಿದ ಪ್ರತಿಭಟರಂತೆ ಶ್ರೀಯವರ ಮುಖಾರವಿಂದದಿಂದ ಹೊರಹೊಮ್ಮುತ್ತಿದ್ದ ವಾಗ್ವೈಖರಿಯ ಮುಂದೆ ನಿಲ್ಲಲಾಗದೆ ಎಲ್ಲ ಪರವಾದಿಗಳೂ ನಿರುತ್ತರರಾಗಿ ತಲೆತಗ್ಗಿಸಿ ಕುಳಿತರು ! ಉಭಯಪಂಡಿತರ ವಾಕ್ಯಾರ್ಥಗಳನ್ನು ಕೇಳಿವಿವೇಚಿಸಿದ ವಾದಮಧ್ಯಸ್ಥರು ಶ್ರೀವ್ಯಾಸರಾಜರು ವಿಜಯ ಶಾಲಿಗಳಾದರೆಂದು ಘೋಷಿಸಿದರು! ವಾಕ್ಯಾರ್ಥವನ್ನು ಕೇಳುತ್ತಿದ್ದ ಸಭಿಕರು ಪ್ರಚಂಡ ಕರತಾಡನ-ಜಯಘೋಷಗಳಿಂದ ತೇಜಸ್ವೀ ತರುಣಸನ್ಯಾಸಿಗಳಾದ ಶ್ರೀವ್ಯಾಸತೀರ್ಥರ ವಿಜಯವನ್ನು ಸ್ವಾಗತಿಸಿ ಪರಮಾನಂದತುಂದಿಲರಾದರು.

ಅನಂತರ ಶ್ರೀ ವ್ಯಾಸತೀರ್ಥರು ಎಲ್ಲಪರವಾದಿಪಂಡಿತರುಗಳೊಡನೆ ಸೌಹಾರ್ದ ದಿಂದಲೇ ವರ್ತಿಸಿ, ಅವರ ಪಾಂಡಿತ್ಯ ಪ್ರತಿಭೆಗಳನ್ನು ಶ್ಲಾಘಿಸಿ, ಪರವಾದಿಗಳು ಶ್ರೇಷ್ಠ ಪಂಡಿತರೆಂದೂ, ಅವರ ಪರಾಜಯಕ್ಕೆ ಮತದೌರ್ಬಲ್ಯವು ಕಾರಣವೇ ಹೊರತು ಮತಿದೌರ್ಬಲ್ಯವಲ್ಲ ಎಂದೂ ಹೇಳಿ ಎಲ್ಲ ಪರಮತೀಯ ಪಂಡಿತರನ್ನೂ ವಿಶೇಷ ಸಂಭಾವನಾದಿಗಳಿಂದ ಗೌರವಿಸಿ ಸಕಲರ ಶ್ಲಾಘನೆಗೆ ಪಾತ್ರರಾದರು.

ವಾದದಲ್ಲಿ ಜಯಗಳಿಸಿದ್ದರೂ ಪರಮತೀಯ ವಿದ್ವಾಂಸರನ್ನೂ ಸ್ನೇಹ ಸೌಹಾರ್ದದಿಂದ ಗೌರವಿಸಿ ಅವರ ಪಾಂಡಿತ್ಯವನ್ನು ಹೊಗಳಿದ ಶ್ರೀ ವ್ಯಾಸರಾಜರ ಉದಾರಗುಣ, ವಿದ್ವಾಪಕ್ಷಪಾತಾದಿಗಳನ್ನು ಕಂಡು ಅಚ್ಚರಿಗೊಂಡ ಪರವಾದಿಗಳು ಶ್ರೀಯವರನ್ನು ಮುಕ್ತಕಂಠದಿಂದ ಹೊಗಳಿದರು. ಇದು ಶ್ರೀವ್ಯಾಸತೀರ್ಥರ ದಿಗ್ವಿ ಜಯ ಪರಂಪರೆಯಲ್ಲಿ ಒಂದು ಮೈಲುಗಲ್ಲೆಂದು ಧಾರಾಳವಾಗಿ ಹೇಳಬಹುದು. ಕಂಚಿಯ ದಿಗ್ವಿಜಯವು ಅವರ ವಾದಿದ್ವಿಜಯ ಚರಿತೆಯ ನಾಂದೀಪದ್ಯವಾಗಿ ಪರಿಣಮಿಸಿತೆಂದು ಹೇಳಿದರೆ ತಪ್ಪಾಗಲಾರದು.

ಶ್ರೀವ್ಯಾಸರಾಜರ ಅಪೂರ್ವ ದಿಗ್ವಿಜಯ ವಿಚಾರ ತಿಳಿದು ಕಂಚಿಯ ಮಹಾ ರಾಜನಿಗೆ ಅಪಾರ ಆನಂದವಾಯಿತು. ಪ್ರಥಮ ದರ್ಶನದಲ್ಲಿಯೇ ಪ್ರಭಾವಿತ ನಾಗಿದ್ದ ಕಂಚಿಯ ದೊರೆ ಶ್ರೀಪಾದಂಗಳ ಮಹಿಮಾತಿಶಯಗಳನ್ನು ಕೇಳಿದ ಮೇಲಂತೂ ಅತ್ಯಂತ ಮುಗ್ಧನಾದನು. ಶ್ರೀಗಳವರಲ್ಲಿ ಅವನಿಗೆ ಬಹು ಭಕ್ತಿ ಶ್ರದ್ಧೆ ಗಳುಂಟಾದವು. ಅವನು ಗುರುಗಳನ್ನು ವಿಶೇಷ ರೀತಿಯಿಂದ ಸನ್ಮಾನಿಸಬೇಕೆಂದು ಬಯಸಿದನು. ಅದಕ್ಕೆ ಒಂದು ಅವಕಾಶ ತಾನಾಗಿ ಒದಗಿಬಂದಿತು.

ಶ್ರೀಪಾದಂಗಳವರೊಡನೆ ವಾದಮಾಡಿ ಪರಾಜಿತರಾದ ನಿರ್ಮಾತ್ಸರ್ಯ ಬುದ್ಧಿಯ ಅನೇಕ ಪಂಡಿತರು,ಕಂಚಿಯ ನಾಗರಿಕರೂ,ಧಾರ್ಮಿಕರುಸರಸ್ವತಿಯ ಅವ ತಾರವತಾರರೆನಿಸಿದ ಶ್ರೀಗಳವರನ್ನು ಅಭೂತಪೂರ್ವರೀತಿಯಲ್ಲಿ ಕಂಚಿಯ ಮಹಾ ರಾಜರ ಅಧ್ಯಕ್ಷತೆಯಲ್ಲಿ ಗೌರವಿಸಬೇಕೆಂದು ನಿಶ್ಚಯಿಸಿ ಮಹಾರಾಜರನ್ನು ಆ ವಿಚಾರವಾಗಿ ಭೇಟಿಮಾಡಿ ಕೋರಿದರು. ಇದರಿಂದ ಮಹಾರಾಜನಿಗೆ ಹರ್ಷ ವಾಯಿತು. ಆ ನಂತರ ವಿಚಾರ ವಿನಿಮಯಮಾಡಿ ಅರಮನೆಯಲ್ಲಿ ಸನ್ಮಾನ

ಸಮಾರಂಭವು ಮಹಾ ರಾಜರ ಅಧ್ಯಕ್ಷತೆಯಲ್ಲಿ ನೆರವೇರಬೇಕೆಂದೂ,ಶ್ರೀಗಳವರನ್ನು ಸಮಸ್ತ ರಾಜಮರ್ಯಾದೆಯೊಡನೆ ಮೆರವಣಿಗೆಯೊಡನೆ ಕರತಂದು ಮಹಾಪ್ರಭುಗಳ ಅಧ್ಯಕ್ಷತೆಯಲ್ಲಿ ಸನ್ಮಾನಿಸುವುದೆಂದೂ ತೀರ್ಮಾನವಾಗಿ ಅದಕ್ಕೆ ತಕ್ಕ ವ್ಯವಸ್ಥೆಗಳು ಭರದಿಂದ ಜರುಗಹತ್ತಿದವು.

ಒಂದು ಪ್ರಾತಃಕಾಲ ಶ್ರೀಗಳವರು ವಿದ್ಯಾರ್ಥಿಗಳಿಗೆ ಪಾಠಹೇಳುತ್ತಾ ಕುಳಿರುವಾಗ ಕಂಚಿಯ ಪ್ರಮುಖ ಪಂಡಿತರು, ದರ್ಬಾರಿನ ಗಣ್ಯರು, ರಾಜಪುರೋಹಿತರು, ಧರ್ಮಾಭಿಮಾನಿ ಪುರಪ್ರಮುಖರುಗಳು ಬಂದು ಶ್ರೀಯವರ ದರ್ಶನ ಪಡೆದು ಅವರನ್ನು ಸನ್ಮಾನಿಸಲು ನಿಶ್ಚಯಿಸಿರುವ ವಿಚಾರವನ್ನು ವಿವರವಾಗಿ ವಿಜ್ಞಾಪಿಸಿ, ತಮ್ಮ ಅಪೇಕ್ಷೆಯನ್ನು ಪೂರೈಸಿಕೊಟ್ಟು ಅನುಗ್ರಹಿಸಬೇಕೆಂದು ಬಿನ್ನವಿಸಿದರು.

ಶ್ರೀವ್ಯಾಸರಾಜ ಸ್ವಾಮಿಗಳವರು ಅವರ ಮಾತನ್ನಾಲಿಸಿ ನಸುನಕ್ಕು "ವಿದ್ವಜ್ಜನರೇ, ನಮಗೆ ಸನ್ಮಾನವೇ ? ಸನ್ಯಾಸಿಗೆಂಥ ಸನ್ಮಾನ? ಸನ್ಮಾನಿತರಾಗುವ ಅದಾವ ಮಹತ್ಕಾರ್ಯ ಸಾಧಿಸಗಿದ್ದೇವೆ? ಒಂದು ಸಂಸ್ಥಾನಾಧಿಪತಿಗಳಾಗಿ, ಪೀಠಾಧೀಶರು ಮಾಡಬೇಕಾದ ಕರ್ತವ್ಯವನ್ನು ಮಾತ್ರ ನಾವು ಮಾಡುತ್ತಿದ್ದೇವೆ, ಅದು ನೈಜ ಕರ್ತವ್ಯವೇ ಆಗಿರುತ್ತದೆ. ಇದಕ್ಕಾಗಿ ನಮ್ಮನ್ನು ಸನ್ಮಾನಿಸುವುದು ಅಷ್ಟು ಉಚಿತವೆನಿಸಲಾರದು. ನಮಗೆ ಅದಾವ ಆಶೆ ಆಕಾಂಕ್ಷೆಗಳೂ ಇಲ್ಲ. ನೀವು ಈ ಸಮಾರಂಭವನ್ನು ಇಟ್ಟುಕೊಂಡಿದ್ದು ನಮಗೆ ಸರಿಯೆನಿಸುವುದಿಲ್ಲ" ಎಂದು ಅಪ್ಪಣೆ ಕೊಡಿಸಿದರು.

ಶ್ರೀವ್ಯಾಸತೀರ್ಥರ ವಚನವನ್ನಾಲಿಸಿ ವಿದ್ವಜ್ಜನರು ಆಶ್ಚರ್ಯಗೊಂಡರು, ಶ್ರೀಗಳವರು ನಿಷ್ಕಾಮಕರ್ಮಯೋಗಿಗಳೆಂದು ಅವರು ಮನಗಂಡರು. ವಿನಯದಿಂದ "ಪೂಜ್ಯರೇ, ನಾವು ತಮ್ಮನ್ನು ವೈಯಕ್ತಿಕವಾಗಿ ಗೌರವಿಸುತ್ತಿಲ್ಲ, ವಿದ್ಯಾಕೇಂದ್ರವಾದ ಕಂಚಿಯ ವಿದ್ವದ್ವೃಂದದ ಶ್ರೇಷ್ಠಜ್ಞಾನಿಗಳೂ, ಪರಮಹಂಸಕುಲತಿಲಕರೂ ಆದ ಓರ್ವ ಮಹನೀಯರಲ್ಲಿ ಅಂತರ್ಗತರಾಗಿರುವ ವಿದ್ಯಾದೇವಿ ಶ್ರೀಸರಸ್ವತೀದೇವಿಗೆ ಪರಮಾತ್ಮನಿಗೆ ನಮ್ಮ ಭಕ್ತಿಯನ್ನೂ ಗೌರವವನ್ನೂ ಸಮರ್ಪಿಸಿ ಕೃತಾರ್ಥರಾಗ ಬಯಸಿದ್ದೇವೆ, ಅಷ್ಟೇ! ವಿದ್ಯಾಪಕ್ಷಪಾತಿಗಳಾದ ಮಹಾರಾಜರ ಮನೋರಥವನ್ನು ಪೂರ್ಣಮಾಡಬೇಕು" ಎಂದು ಪ್ರಾರ್ಥಿಸಿದರು.

ಶ್ರೀವ್ಯಾಸರಾಜರು ಪಂಡಿತರ, ಶಿಷ್ಯ, ಭಕ್ತಜನರ ಬಲಾತ್ಕಾರದಿಂದಾಗಿ ನಿರ್ವಾಹವಿಲ್ಲದೆ ಸಮ್ಮತಿಯನ್ನು ದಯಪಾಲಿಸಿದರು.

ಇಂದು ಕಂಚಿಯಲ್ಲಿ ಶ್ರೀವ್ಯಾಸರಾಯಸ್ವಾಮಿಗಳವರ ಮಠದ ಮುಂದೆ ಅಸಾಧ್ಯ ಜನಸಂದಣಿ, ನಗರದ ಜನರ ಸಂಭ್ರಮ ಮೇರೆಮೀರಿದೆ. ನಗರವನ್ನು ಸುಂದರವಾಗಿ ಶೃಂಗರಿಸಲಾಗಿದೆ. ವೇದಘೋಷ, ಮಂಗಳವಾದ್ಯಗಳಾಗುತ್ತಿವೆ, ಆನೆಯ ಮೇಲೆ ಅಂಬಾರಿಯನ್ನಿಟ್ಟು ಅಲಂಕರಿಸಲಾಗಿದೆ, ಅರಮನೆಯ ಬಿರುದು ಬಾವಲಿಗಳೆಲ್ಲವೂ ಸಜ್ಜಾಗಿವೆ. ಕಂಚಿಯ ಮಹಾರಾಜರು ಪಂಡಿತಮಂಡಲಿ,ಪುರಜನರು ಶ್ರೀಯವರನ್ನು

ಆನೆಯಮೇಲೆ ಅಂಬಾರಿಯಲ್ಲಿ ಮಂಡಿಸಿದ್ದಾರೆ. ಮಹಾರಾಜರು ಮೆರವಣಿಗೆಯನ್ನು ಹೊರಡಿಸಿ ಅರಮನೆಗೆ ತೆರಳಿದರು. ಮೆರವಣಿಗೆಯು ರಾಜಬೀದಿಗಳನ್ನು ಹಾದು ಸಾಗುತ್ತಿದೆ, ಬೀದಿಯ ಇಕ್ಕೆಲಗಳಲ್ಲಿ ಸಹಸ್ರಾರು ಜನರು ನಿಂತು ಗುರುಗಳ ದರ್ಶನಮಾಡಿ ಜಯಘೋಷ ಮಾಡುತ್ತಿದ್ದಾರೆ.

ಶ್ರೀಯವರ ಮೆರವಣಿಗೆಯು ಶ್ರೀ ಏಕಾಂಬರೇಶ್ವರ, ಶ್ರೀ ಕಾಮಾಕ್ಷಿ, ಶ್ರೀ ವರದರಾಜಸ್ವಾಮಿ. ಶ್ರೀ ತ್ರಿವಿಕ್ರಮಸ್ವಾಮಿ ದೇವಸ್ಥಾನಗಳಿಗೆ ತೆರಳಿ ಅಲ್ಲಿ ಶ್ರೀಪಾದಂಗಳವರು ದೇವರದರ್ಶನ-ದೇವಾಲಯಗಳ ಗೌರವವನ್ನು ಸ್ವೀಕರಿಸಿದ ಮೇಲೆ ಮತ್ತೆ ಮೆರವಣಿಗೆಯು ವೈಭವದಿಂದ ಹೊರಟು ಅರಮನೆಯನ್ನು ತಲುಪಿತು,

ಮಂಗಳವಾದ್ಯ ವೇದಘೋಷಗಳಾಗುತ್ತಿರಲು ಕಂಚಿಯ ಮಹಾರಾಜರು ಸಕಲ ರಾಜಮರ್ಯಾದೆಯೊಡನೆ ಶ್ರೀಗಳವರನ್ನು ಸ್ವಾಗತಿಸಿ ಹಸ್ತಲಾಘವವಿತ್ತು ಅರಮನೆಗೆ ಕರೆತಂದು ಅಲ್ಲಿ ಸಿದ್ಧಪಡಿಸಲಾದ ಉನ್ನತ ಭದ್ರಾಸನದಲ್ಲಿ ಶ್ರೀವ್ಯಾಸತೀರ್ಥರನ್ನು ಮಂಡಿಸಿದ ಮೇಲೆ ಮಹಾರಾಜ ದಂಪತಿಗಳು ಶ್ರೀಗಳವರಿಗೆ ಪಾದಪೂಜೆಮಾಡಿ ಧನ ಕನಕ ವಸ್ತ್ರಾಭರಣಗಳನ್ನು ಸಮರ್ಪಿಸಿ ಅನುಗೃಹೀತರಾದರು. ಆ ನಂತರ ಮಹಾ ರಾಜರ ಅಧ್ಯಕ್ಷತೆಯಲ್ಲಿ ಗುರುಗಳ ಸನ್ಮಾನ ಸಮಾರಂಭವು ಪ್ರಾರಂಭವಾಯಿತು.

ಅನೇಕ ಪಂಡಿತರು,ಧರ್ಮಾಭಿಮಾನಿಗಳು ಭಾಷಣಮಾಡಿ ಶ್ರೀವ್ಯಾಸತೀರ್ಥರ ಜ್ಞಾನ-ಭಕ್ತಿ-ವೈರಾಗ್ಯ-ವಾದವಿದ್ಯಾಕೌಶಲ-ಶಮದಮಾದಿಗುಣಸಂಪತ್ತು.ವಿದ್ವಜ್ಜನ ಪೋಷಣೆ. ಔದಾರ್ಯಾದಿಗಳನ್ನು ವರ್ಣಿಸಿ ಮುಕ್ತಕಂಠದಿಂದ ಕೊಂಡಾಡಿದರು. ತರುವಾಯ ಮಹಾಪ್ರಭುಗಳು ಗುರುಪಾದರ ಪಾಂಡಿತ್ಯ.ವಾದದಿಗ್ವಿಜಯ,ಅಸದೃಶ ಪ್ರತಿಭೆ.ತೇಜಸ್ಸು, ವಿದ್ಯಾಪಕ್ಷಪಾತ ಲೋಕಸಂಗ್ರಹಾದಿ ಸದ್ಗುಣಗಳನ್ನು ಸ್ತುತಿಸಿ. ಮಹಾಜ್ಞಾನಿಗಳಾದ, ಧರೆಗಿಳಿದು ಬಂದ ಸರಸ್ವತಿಯಂತಿರುವ ಪೂಜ್ಯಗುರುಗಳನ್ನು ಅವರ ದಿಗ್ವಿಜಯ ಯಾತ್ರೆಯಲ್ಲಿ ಮೊಟ್ಟಮೊದಲಿಗೆ ಗೌರವಿಸಿ ಕೃತಾರ್ಥರಾಗುವ ಭಾಗ್ಯ ಕಂಚಿಯಜನತೆಗೆ, ಪಂಡಿತರಿಗೆ ಮತ್ತೆ ತಮಗೆ ದೊರಕಿದ್ದು ಪೂರ್ವಾರ್ಜಿತ ಪುಣ್ಯಫಲವೆಂದು ತಾವು ಭಾವಿಸಿರುವುದಾಗಿ ಹೇಳಿ ಸಮಯೋಚಿತವಾಗಿ ಅಧ್ಯಕ್ಷ ಭಾಷಣಮಾಡಿ, ಶಾಲು ಜೋಡಿ,ಮುತ್ತಿನ ಕಂಠೀಸರ. ಪೀತಾಂಬರ,ಸುವರ್ಣಮಯ ವ್ಯಾಸಪೀಠ, ಪುಷ್ಪಹಾರಗಳನ್ನು ಶ್ರೀಪಾದಂಗಳವರಿಗೆ ಸಮರ್ಪಿಸಿ ನಮಸ್ಕರಿಸಿದರು. ಸಭಾಸದರು ಪ್ರಚಂಡ ಕರತಾಡನ ಜಯಧ್ವನಿಗಳಿಂದ ತಮ್ಮ ಆನಂದವನ್ನು ವ್ಯಕ್ತಪಡಿಸಿದರು.

ತರುವಾಯ ವಿದ್ಯಾಪೀಠ, ಇತರ ಸಂಸ್ಕೃತ ವಿದ್ಯಾಸಂಸ್ಥೆಗಳು, ಧಾರ್ಮಿಕರು ಶಿಷ್ಯಭಕ್ತಜನರು, ಪಂಡಿತರು-ಇವರ ಪರವಾಗಿ ಶ್ರೀಗಳವರಿಗೆ ಯೋಗ್ಯತಾನುಸಾರ ಗೌರವ ಸಮರ್ಪಣೆಯಾಯಿತು.

ಶ್ರೀವ್ಯಾಸತೀರ್ಥ ಗುರುವರೇಣ್ಯರು ಸೂಕ್ತರೀತಿಯಲ್ಲಿ ಚಿಕ್ಕದಾದರೂ ಚೊಕ್ಕವಾದ, ವಿದ್ವತ್ಪೂರ್ಣ ಉಪದೇಶಭಾಷಣಮಾಡಿ ಕಂಚಿಯ ಮಹಾರಾಜರು

ವಿದ್ವಜ್ಜನರು, ಆಸ್ತಿಕರು ತಮಗೆಮಾಡಿದ ಗೌರವ-ಸನ್ಮಾನಗಳನ್ನು ತಮ್ಮ ಅಂತರ್ಗತರಾದ ಶ್ರೀಹರಿವಾಯುಗಳಿಗೆ ಸಮರ್ಪಿಸಿರುವುದಾಗಿಹೇಳಿ ಎಲ್ಲರನ್ನೂ ಆಶೀರ್ವದಿಸಿದರು. ಆನಂತರ ಸಮಾರಂಭವು ಮುಕ್ತಾಯವಾಯಿತು. ಅಂದಿನ ಆ ಮೆರವಣಿಗೆ ಜನಸ್ತೋಮ, ಸಂಭ್ರಮ, ವೈಭವಸನ್ಮಾದಿಗಳು ಅವರ್ಣನೀಯ ! ಅದನ್ನು ಕಣ್ಣಾರೆ ಕಂಡವರೇ ಪರಮಭಾಗ್ಯಶಾಲಿಗಳು.

## ೨೨. ವಿಷಪ್ರಯೋಗ-ಭಗವದನುಗ್ರಹ

ಕಂಚಿಯ ಪಂಡಿತರು ವ್ಯಾಸರಾಜಗುರುಗಳಿಂದ ಪರಾಜಿತರಾದುದಕ್ಕೆ ತಮ್ಮಿಂದ ತಮ್ಮ ಶಾಸ್ತ್ರಕ್ಕೆ ಬೆಲೆಯಿಲ್ಲದಾಯಿತೆಂದು ಮನದಲ್ಲಿ ಕಳವಳವಾಗಿದ್ದರೂ ವೈಯಕ್ತಿಕವಾಗಿ ವ್ಯಾಸರಾಜರಲ್ಲಿ ಸ್ನೇಹದಿಂದಲೇ ವರ್ತಿಸುತ್ತಿದ್ದರು. ಗುರುಗಳ ದಿಗ್ವಿಜಯದಿಂದ, ತಮ್ಮ ಮತದ ಪರಾಭವದಿಂದ ಮತ್ಸರಗ್ರಸ್ತರಾಗಿ ಅವರ ಬಗ್ಗೆ ಅಂತರ್ಯದಲ್ಲಿ ದ್ವೇಷಸಾಧಿಸುತ್ತಿದ್ದವರು ಒಬ್ಬಿಬ್ಬರಿಲ್ಲದಿರಲಿಲ್ಲ. ಹೀಗೆ ಮಾತ್ಸರ್ಯಪಿಶಾಚಾವಿಷ್ಟರಾದ ಒಬ್ಬಿಬ್ಬ ಪಾಷಂಡಿಗಳ ಕುತಂತ್ರ ದುರಾಲೋಚನೆಗಳ ಫಲವಾಗಿ ಶ್ರೀಗಳವರಿಗೆ ವಿಷತ್ತೊಂದು ಬಂದೊದಗುವ ಸಂದರ್ಭವುಂಟಾಯಿತು.

ಕಂಚಿಯಲ್ಲಿ ಪರಾಜಿತರಾದ ಪರಮತಪಂಡಿತರಕಿಂತ ಅವರ ಬಂಧುಗಳಾದ ಪಾಖಂಡಿ ಬ್ರಾಹ್ಮಣಾಧಮರಿಬ್ಬರು ತಮ್ಮ ಮತದ ಅಪಜಯಕ್ಕೆ ಕಾರಣರಾದ ವ್ಯಾಸತೀರ್ಥರನ್ನು ಇರಗೊಡಬಾರದೆಂದು ಸಂಕಲ್ಪಿಸಿ ಶ್ರೀಯವರಿಗೆ ವಿಪತ್ತು ತರುವ ಷಡ್ಯಂತ್ರದಲ್ಲಿ ಪ್ರವೃತ್ತರಾದರು. ಅವರು ಶ್ರೀಗಳವರಲ್ಲಿ ಗೌರವವುಳ್ಳ ಆಸ್ತಿಕರಂತೆ ನಟಿಸುತ್ತಾ ಸೂಕ್ಷ್ಮವಾಗಿ ಗಮನಿಸುತ್ತಾ ಬಂದರು.

ಆಸ್ತಿಕರಾದ ಕಂಚೀಪುರನಿವಾಸಿಗಳು ವಿಶೇಷವಾಗಿ ಶ್ರೀಮಠಕ್ಕೆ ಬಂದು ಗುರುಗಳದರ್ಶನ, ತೀರ್ಥಪ್ರಸಾದಾದಿಗಳಿಂದ ಅನುಗೃಹೀತರಾಗಲಾರಂಭಿಸಿದ್ದರು. ಅನೇಕರು ಗುರುಗಳ ತೇಜಸ್ಸಿನಿಂದ ಪ್ರಭಾವಿತರಾಗಿ ಅವರಲ್ಲಿ ಪೂಜ್ಯಭಾವನೆಯಿಂದ ಪ್ರತಿದಿನ ಹಾಲು, ಮೊಸರು, ತುಪ್ಪ, ದಿನಸಿ, ತರಕಾರಿಗಳು, ಹೂವು ಹಣ್ಣುಗಳನ್ನು ಕಾಣಿಕೆಯಾಗಿ ಸಮರ್ಪಿಸಿ ಹೋಗುತ್ತಿದ್ದರು. ಭಕ್ತರು ತಂದಿತ್ತ ವಸ್ತುಗಳನ್ನು ಶ್ರೀಯವರ ಅಪ್ಪಣೆಯಂತೆ ಅಂದಿನ ಅಡುಗೆಗೆ ಉಪಯೋಗಿಸಲಾಗುತ್ತಿತ್ತು. ಇವೆಲ್ಲವನ್ನೂ ಚೆನ್ನಾಗಿ ಗಮನಿಸಿದ್ದ ದುಷ್ಟರಾದ ಆ ಬ್ರಾಹ್ಮಣರು ಶ್ರೀಗಳವರ ಭಕ್ತರಂತೆ ನಟಿಸಿ ಒಂದುದಿನ ವಿಷಮಿಶ್ರಿತ ಹಾಲನ್ನು ತಂದು "ದೇವರ ಪ್ರೇರಣೆಯಂತೆ ಗುರುಗಳ ಉಪಯೋಗಕ್ಕಾಗಿ ಇದನ್ನು ತಂದಿದ್ದೇವೆ. ದಯಮಾಡಿ ಇದನ್ನು ಪೂಜ್ಯ ಗುರುಗಳಿಗೆ ವಿನಿಯೋಗಿಸಬೇಕು" ಎಂದು ಪ್ರಾರ್ಥಿಸಿ ಹಾಲನ್ನು ಕೊಟ್ಟುಹೋದರು.

ಪದ್ಧತಿಯಂತೆ ಅಂದುಬಂದ ಸಮಸ್ತವಸ್ತುಗಳೊಡನೆ ಹಾಲನ್ನೂ ಅಂದಿನ ಅಡುಗೆಗೆ ಉಪಯೋಗಿಸುವಂತೆ ಪಾರುಪತ್ತೇದಾರರು ಹೇಳಿಹೋದರು. ಶ್ರೀಪಾದಂಗಳವರ ಚಿಕ್ಕನೈವೇದ್ಯದ ಅಡಿಗೆಯವನು, ದ್ವೇಷಬುದ್ಧಿಯಿಂದ ದುಷ್ಟ ಬ್ರಾಹ್ಮಣರು ತಂದುಕೊಟ್ಟ ವಿಷಮಿಶ್ರಿತವಾದ ಹಾಲನ್ನು ಅದರಲ್ಲಿ ವಿಷಬೆರೆತಿದೆ ಯೆಂದು ತಿಳಿಯದೆ ಪಾಯಸಕ್ಕೆ ಉಪಯೋಗಿಸಿ ಅಡಿಗೆ ಮಾಡಿದನು.

ಎಂದಿನಂತೆ ಪೂಜಾಕಾಲದಲ್ಲಿ ಶ್ರೀಗಳವರು ಚಿಕ್ಕ ನೈವೇದ್ಯದ ಅಡುಗೆಯನ್ನು ದೇವರಿಗೆ ನಿವೇದನಮಾಡಿ, ಪೂಜಾನಂತರ ತೀರ್ಥಪ್ರಸಾದ ವಿನಿಯೋಗವಾದಮೇಲೆ ಪಂಡಿತಮಂಡಲಿಯೊಡನೆ ಸಮ್ಮುಖದಲ್ಲಿ ಭಿಕ್ಷೆಗೆ ಕುಳಿತರು. ಚಿಕ್ಕ ನೈವೇದ್ಯದ ಪಾಚಕನು ಗುರುಗಳಿಗೆ ಪಾಯಸ ಬಡಿಸಿದನು. ಅಂದು ಗುರುಗಳು ಎಂದಿನಗಿಂತ ಸ್ವಲ್ಪ ಹೆಚ್ಚಾಗಿಯೇ ಪಾಯಸವನ್ನು ಸ್ವೀಕರಿಸಿದರು.

ಸ್ವಲ್ಪ ಹೊತ್ತಾದಮೇಲೆ ಶ್ರೀಗಳವರ ಉದರದಲ್ಲಿ ವಿಚಿತ್ರ ತಳಮಳ, ಉರಿ. ಸಂಕಟಗಳಾಗಹತ್ತಿತು ! ಸಂಕಟದಿಂದ ಸ್ವಾಮಿಗಳು 'ಕಷ್ಟಪಡಲಾರಂಭಿಸಿದರು. ಅದನ್ನು ಕಂಡ ಪಂಡಿತರು-ಪರಿವಾರದವರು ಗಾಬರಿಯಾದರು. ಶ್ರೀಗಳವರು ಊಟ ಬಿಟ್ಟು ಎದ್ದು ಕೈತೊಳೆದು ತೀರ್ಥಪ್ರಾಶನಮಾಡಿ ಒಂದೆಡೆ ಕುಳಿತು ದುಸ್ಸಹವಾದ ಯಾತನೆಯಿಂದ ಬಳಲಹತ್ತಿದರು. ಏನು ಮಾಡುವುದೆಂದು ಯಾರಿಗೂ ತೋಚ ದಂತಾಯಿತು. ಆಗ ಕಂಚಿಯ ಪುರವಾಸಿಗಳೇ ಆದ ಒಬ್ಬ ಪಂಡಿತರು ತಮಗೆ ಪರಿ ಚಿತರಾದ ವೈದ್ಯರನ್ನು ಕರೆದುತಂದರು.

ವೈದ್ಯರು ಶ್ರೀಗಳವರನ್ನು ಅನೇಕ ಬಗೆಯಾಗಿ ಪರೀಕ್ಷಿಸಿ, ಶ್ರೀಯವರು ಸ್ವೀಕರಿಸಿದ ಅಡುಗೆಯನ್ನು ಪರೀಕ್ಷಿಸಲಾರಂಭಿಸಿದರು. ಅಡಿಗೆಯವನು ಅವರಿಗೆ ಶ್ರೀಯವರಿಗೆ ಬಡಿಸಿದ ಎಲ್ಲ ಅಡಿಗೆ ಪದಾರ್ಥಗಳನ್ನೂ ತೋರಿಸಿದನು. ಪಾಯಸ ದಲ್ಲಿ ವಿಷವಿರುವುದನ್ನು ಕಂಡುಹಿಡಿದ ವೈದ್ಯರು ಕಳವಳದಿಂದ ಅದನ್ನು ಶ್ರೀಯವರಿಗೂ ಪರಿವಾರದವರಿಗೂ ತಿಳಿಸಿದರು. ಪಂಡಿತರು ಪರಿವಾರದವರು ಅಡಿಗೆಯವನನ್ನು ಹಿಡಿದು ದಂಡಿಸಿ ವಿಚಾರಿಸಿದರು. ಪಾಪ ಏನೂ ತಿಳಿಯದ ಪಾಚಕನು ಪ್ರತಿದಿನ ಭಕ್ತಜನರು ತಂದು ಕೊಡುವ ಪದಾರ್ಥಗಳಿಂದ ಅಡುಗೆ ಮಾಡುವಂತೆ ಇಂದೂ ಮಾಡಿರುವುದಾಗಿಯೂ, ಇಂದು ಹಾಲು ತಂದುಕೊಟ್ಟವರು ಇಬ್ಬರು ಬ್ರಾಹ್ಮಣರೆಂದೂ ಅವರ ಚಹರೆಯನ್ನು ತಿಳಿಸಿ ವಿಷಬೆರೆತ ಹಾಲಿನಿಂದ ಪಾಯಸಮಾಡಿ ಅದನ್ನು ಶ್ರೀಯವರಿಗೆ ಬಡಿಸಿದ್ದಕ್ಕಾಗಿ ಆತನು ಬಹುವಾಗಿ ದುಃಖಿಸಿ ಕಣ್ಣೀರುಸುರಿಸಿದನು.

ವೈದ್ಯರು ಶ್ರೀಗಳವರಿಗೆ ಕೂಡಲೇ ಚಿಕಿತ್ಸೆ ಮಾಡಬೇಕೆಂದೂ "ಶ್ರೀಗಳವರಿಗೆ ಪ್ರಯೋಗಿಸಿರುವ ವಿಷವು ಕೂಡಲೇ ಅಪಾಯವಾಗದೆ, ದೀರ್ಘಾವಧಿಯಲ್ಲಿ ದಿನ ದಿನಕ್ಕೂ ದೇಹವನ್ನು ಕೃಶಗೊಳಿಸಿ ಕ್ರಮೇಣ ಪ್ರಾಣಹರಣ ಮಾಡುವಂತಹದು. ಇಂತಹ ವಿಷವನ್ನು ಹಾಕಿರುವುದು ನಮ್ಮ ದುರ್ದೈವ. ಆದರೂ ಕೂಡಲೇ ಚಿಕಿತ್ಸೆ

ಮಾಡುವುದೊಳಿತು. ಇಲ್ಲದಿದ್ದರೆ ಮುಂದೆ ಅನಾಹುತವಾಗುವುದೆಂದು ಹೇಳಿದರು. ಶ್ರೀಪಾದಂಗಳವರು ಚಿಕಿತ್ಸೆಗೆ ಒಪ್ಪಲಿಲ್ಲ ! ಅವರು "ಶ್ರೀಹರಿಗೆ ಸಮರ್ಪಿಸಿದ ಆಹಾರವನ್ನೇ ತಾವು ಸ್ವೀಕರಿಸಿರುವುದರಿಂದ ಅದರ ಪರಿಹಾರ ಮಾಡುವುದು ಭಗವಂತನಿಗೆ ಅಪಚಾರ ಮಾಡಿದಂತಾಗುವುದು. ಭಕ್ತಪರಾಧೀನನಾದ ಆ ಪ್ರಭುವು ಅವನ ಭಕ್ತರಾದ ನಮ್ಮನ್ನು ಕಾಪಾಡುವನೆಂದು ನಾವು ನಂಬಿದ್ದೇವೆ, ಚಿಕಿತ್ಸೆ ಬೇಡ. ಅವನ ಸಂಕಲ್ಪವಿದ್ದಂತಾಗಲಿ. ಅವನ ತೀರ್ಥವೇ ನಮಗೆ ಸಕಲ ಔಷಧೋಪಚಾರ" ಎಂದು ಸ್ಪಷ್ಟವಾಗಿ ಹೇಳಿಬಿಟ್ಟರು.

ಶ್ರೀಯವರಿಗೆ ವಿಷಪ್ರಯೋಗವಾಗಿರುವ ವಿಚಾರ ಹಾಹಾ ಎನ್ನುವುದರೊಳಗೆ ಕಂಚಿಯಲ್ಲಿ ವ್ಯಾಪಿಸಿಬಿಟ್ಟಿತು. ಸಜ್ಜನವೃಂದ ಹೌಹಾರಿತು. ಪಂಡಿತರು, ಧಾರ್ಮಿಕರು ದುಃಖಿಸಿ, ಶ್ರೀಯವರ ದರ್ಶನಮಾಡಲು ಧಾವಿಸಹತ್ತಿದರು. ಶ್ರೀಗಳವರು ವಿಚಿತ್ರ ಸಂಕಟವಾಗುತ್ತಿದ್ದರೂ ಅದನ್ನು ಸಹಿಸುವ ಶಕ್ತಿಯನ್ನು ಭಗವಂತನು ಅನುಗ್ರಹಿಸಿದ್ದನೆಂದು ತೋರುವುದು. ಅಂತೆಯೇ ಅದನ್ನು ಸಹಿಸಿ, ನಿರಾಲೋಚನೆಯಿಂದ ಬಂದವರನ್ನು ನಗುಮುಖದಿಂದಲೇ ಮಾತನಾಡಿಸಿ ಸಮಾಧಾನಪಡಿಸಿ ಕಳಿಸಹತ್ತಿದರು. ಇದನ್ನು ಕಂಡ ಜನರು ಅಚ್ಚರಿಗೊಂಡು ಸ್ವಾಮಿಗಳವರು ಮಹಾತ್ಮರೆಂದು ಸ್ತುತಿಸಿ, ಅವರಿಗೆ ದ್ರೋಹಬಗೆದ ಪಾಪಿಯನ್ನು ನಿಂದಿಸಹತ್ತಿದರು. ಶ್ರೀಗಳವರು ಇದಾವುದರ ಕಡೆಗೂ ಗಮನಕೊಡದೆ ಶ್ರೀಹರಿ ಧ್ಯಾನನಿರತರಾಗಿ ಕುಳಿತುಬಿಟ್ಟರು. ಒಂದೆರಡು ದಿನಗಳಲ್ಲಿಯೇ ಶ್ರೀಯವರ ದೇಹ ತುಂಬಾ ಕೃಶವಾಗಹತ್ತಿತು. ಆದರೆ ಮುಖದಲ್ಲಿ ಮಾತ್ರ ಅಲೌಕಿಕ ತೇಜಸ್ಸು ಬೆಳಗುತ್ತಿತ್ತು. ಶ್ರೀಹರಿಯವರ ಆರೋಗ್ಯದ ಬಗ್ಗೆ ಎಲ್ಲರೂ ಕಳವಳಗೊಂಡರು. ವಿಷಜ್ವಾಲೆಯಿಂದ ಬಾಧೆಪಡುತ್ತಿದ್ದರೂ ಗುರುಗಳು ತಮ್ಮ ನಿತ್ಯಕರ್ಮ, ದೇವರ ಪೂಜಾ, ಭಗವದ್ಧ್ಯಾನಾದಿಗಳನ್ನು ಚಾಚೂತಪ್ಪದೆ ನೆರವೇರಿಸುತ್ತಾ ಶ್ರೀಹರಿಪಾದ ಸ್ಮರಣರತರಾಗಿ ಕಾಲಕಳೆಯುಹತ್ತಿದರು.

ಗುರುಗಳು ಒಂದುದಿನ ರಾತ್ರಿ ಕೋರಡಿಗೆ ಬಂದು ವಿಶ್ರಾಂತಿ ಪಡೆಯಲು ಕೃಷ್ಣಾಜಿನದಮೇಲೆ ಕುಳಿತರು. ಅಂದೇಕೋ ವಿಶೇಷ ತಳಮಳವಾಗುತ್ತಿದೆ. ಪದ್ಮಾಸನಸ್ಥರಾದ ಗುರುಗಳಿಗೆ ವಿಷಬಾಧೆಯು ಸ್ವಲ್ಪ ಹೆಚ್ಚಾದಂತೆ ಕಂಡುಬಂದಿತು. ಶ್ರೀಹರಿಯನ್ನು ರಕ್ಷಿಸುವಂತೆ ಅನನ್ಯಭಾವದಿಂದ ಪ್ರಾರ್ಥಿಸಹತ್ತಿದರು. ಅವರ ತನುಮನಗಳೆಲ್ಲವೂ ಶ್ರೀಕೃಷ್ಣನ ಪಾದಾರವಿಂದದಲ್ಲಿ ಕೇಂದ್ರೀಕೃತವಾಗಿದೆ. ಭಕ್ತಿಯು ಪರಕಾಷ್ಟದೆಶೆಯಲ್ಲಿದ್ದಾರೆ. ಭಗವನ್ಮಹಿಮಾಂಚಿತನ, ಭಕ್ತವಾತ್ಸಲ್ಯಗಳನ್ನು ನೆನೆದು ಅವರ ನೇತ್ರಗಳಿಂದ ಆನಂದಬಾಷ್ಪ ಹರಿಯುತ್ತಿದೆ. ಧ್ಯಾನಮಗ್ನರಾಗಿ ತಮಗೆ ಒಲಿದು ದರ್ಶನವಿತ್ತು ನರ್ತಿಸಿದ ಶ್ರೀಕೃಷ್ಣನಲ್ಲಿ ಮೊರೆಯಿಡಲಾರಂಭಿಸಿದರು.

ಶ್ರೀಗಳವರು ಭಗವಂತನನ್ನು ಹೃದಯಗುಹೆಯಲ್ಲಿ ಕಂಡ ಅಪರೋಕ್ಷಜ್ಞಾನಿಗಳು. ಭಕ್ತರನ್ನು ಚೆನ್ನಾಗಿ ರಕ್ಷಿಸುವ ಪ್ರಭು ಶ್ರೀಹರಿಯೆಂದು ಅವರು ಬಲ್ಲರು.

ಶ್ರೀಹರಿಯ ಸಂಕಲ್ಪದಂತೆ ಅವತರಿಸಿ ಸಾರ್ಥಕಜೀವನ ನಡೆಸುತ್ತಿದ್ದರೂ ತಾವು ವ್ಯರ್ಥವಾಗಿ ಕಾಲ ಕಳೆದೆವೆಂದು ಭಕ್ತಾಗ್ರಣಿಗಳಾದ ಅವರು ಶ್ರೀಕೃಷ್ಣನಲ್ಲಿ ಮೊರೆಯಿಡುತ್ತಿದ್ದಾರೆ-ದೇವ ! ಕಾಲವನ್ನು ವ್ಯರ್ಥವಾಗಿ ಕಳೆದೆ ! ಶ್ರೀಕೃಷ್ಣ ! ನೀನು ಕರುಣಿಸಿದ ಈ ಶರೀರದಿಂದ ಮುಂದಿನ ಗತಿಗೆ ಅವಶ್ಯವಾದ ಸಾಧನವನ್ನು ಮಾಡಿಕೊಳ್ಳುತ್ತಿಲ್ಲ, ಸ್ವಾಮಿ. ವಿಷಬಾಧೆಯಿಂದ ನನ್ನ ಶರೀರದ ಬಲವೆಲ್ಲ ಕುಗ್ಗುತ್ತಿದೆ, ಇಂದ್ರಿಯಪಾಟವ ಮಂದವಾಗುತ್ತಿದೆ, ಹೀಗಿರುವಾಗ ಸಾಧನಮಾಡಿಕೊಳ್ಳುವುದೆಂದು ? ಪ್ರಭು, ನಾನಾರೆಂಬುದನ್ನು ನಿನ್ನ ಅನುಗ್ರಹದಿಂದ ಅರಿತಿದ್ದೇನೆ. ಕರ್ತವ್ಯವೇನೆಂಬುದನ್ನೂ ಬಲ್ಲೆ. ಆದರೂ ನನ್ನ ಮೂಲನಿವಾಸದಲ್ಲಿ, ಬ್ರಹ್ಮದೇವರೆಸಗುವ ನಿನ್ನ ಪೂಜಾರಾಧನೆಯಲ್ಲಿ ಸೇವೆಸಲ್ಲಿಸಬೇಕೆಂಬ ನನ್ನ ಆಶೆ. ಸತ್ಯಲೋಕದತ್ತ ನನ್ನನ್ನು ಸೆಳೆಯುತ್ತಿದೆ. ಶ್ರೀಶ ! ನಿನ್ನಾಜ್ಞೆಯಂತೆ ಕಮಲಾಸನರ ಶಾಪರೂಪ ವರದಿಂದ ಭೂಲೋಕದಲ್ಲಿ ಜನಿಸಿ ನಿನ್ನ ಆರಾಧನೆಯಿಂದ ಗಳಿಸಿದ ಪುಣ್ಯ, ಇನ್ನು ಮುಂದೆ ಗಳಿಸಬೇಕಾಗಿರುವ ಪುಣ್ಯರೂಪಧನವನ್ನು ಕಳೆದುಕೊಳ್ಳಲು ಕ್ಲೇಶವಾಗುತ್ತಿದೆ, ಅದು ನಿನ್ನವರಾದ ಸುಜನರಿಗೆ ಹಂಚಿಕೊಡಬೇಕಾದ ಧನವಾಗಿದೆ. ಅದನ್ನೆಂತು ನಾನು ಕಳೆದುಕೊಳ್ಳಲು ಸಾಧ್ಯ ? ಈ ವಿಷದ ಬಾಧೆಯಿಂದ ಮೃತ್ಯುವು ಯಾವಾಗ ಬರುವುದೋ ನಾನರಿಯೆ ! ಎಷ್ಟೋ ಜನರು ತಮ್ಮ ಕಾರ್ಯಪೂರೈಸುವ ಮೊದಲೇ ಮೃತ್ಯುವಶವಾಗಿರುವುದನ್ನು ಕಂಡಿದ್ದೇನೆ. ಅದು ಅನಿವಾರ್ಯ. ಆದರೂ ಈ ದೇಹ ಸ್ಥಿರವೆಂದು ನಂಬಿಯೇ ಕಾರ್ಯ ಮಾಡಬೇಕಾಗಿದೆಯಲ್ಲವೇ ಸ್ವಾಮಿ ?

ದೇವ ! ನಿನ್ನ ಸಂಕಲ್ಪದಂತೆ ಮಾಡಬೇಕಾಗಿರುವ ಮಹತ್ಕಾರ್ಯಗಳು ಬಹಳ ಉಳಿದಿವೆ, ಈ ದೇಹ ಸ್ಥಿರವಲ್ಲವೆಂದು ಅರಿತಿದ್ದೇನೆ. ಆದರೂ ನಾನು ಮಾಡಬೇಕಾಗಿರುವ ದಾನ-ಧರ್ಮ-ಲೋಕಕಲ್ಯಾಣ-ಗ್ರಂಥರಚನಾದಿಗಳ ದ್ವಾರಾ ನಿನ್ನ ಸತ್ತತ್ವಪ್ರಸಾರ ಮೊದಲಾದ ನಿನಗೆ ಪ್ರಿಯವಾದ ಕಾರ್ಯಗಳನ್ನು ಮಾಡದೆ ನಾನು ಕೇವಲ ಕೀರ್ತಿ, ಪ್ರತಿಷ್ಠೆ, ಸನ್ಮಾನಾದಿಗಳಲ್ಲಿ ಪರವಶನಾಗಿ ಕಾಲಕಳೆದುಬಿಟ್ಟೆ. ನಿನ್ನ ಆಜ್ಞೆಯನ್ನು ಪೂರ್ಣಗೊಳಿಸಲು ಈದೇಹ ಉಳಿಯಬೇಕಲ್ಲವೇ ? ಆದ್ದರಿಂದ ಹೇ ವಾಸುದೇವ, ಶ್ರೀಕೃಷ್ಣ ! ನಿನ್ನ ಸಂಕಲ್ಪದಂತೆ ಕರ್ತವ್ಯಪರನಾಗಲು ನನ್ನನ್ನು ಕಾಪಾಡು" ಎಂದು ಕೃಷ್ಣನಲ್ಲಿ ಪ್ರಾರ್ಥಿಸಿದರು.

ಶ್ರೀವ್ಯಾಸತೀರ್ಥರ ಮೇಲಿನ ಪ್ರಾರ್ಥನೆಯ ಸಾರಸೂಚಕವಾದ ಒಂದು ನೂತನ ಕೃತಿಯು ಅವರ ಮುಖದಿಂದ ಹೊರಹೊಮ್ಮಿತು !

ರಾಗ-ಪುನ್ನಾಗವರಾಳಿ ತಾಳ-ತ್ರಿಪುಟ

ಆವಾವ ಬಗೆಯಿಂದ ನೀನೇ ರಕ್ಷಿಸುವೆಯೋ ।
ದೇವಾಧಿದೇವ ಶ್ರೀಕೃಷ್ಣ ! ನೀನೆನ್ನನು ॥ ಪ ॥
ಹಿಂದಿನ ಕಾಲವ ವ್ಯರ್ಥವಾಗಿ ಕಳೆದೆನೋ ।

ಮುಂದಿನ ಗತಿ ಚಿಂತೆ ಲೇಶವಿಲ್ಲವೋ ॥
ಸಂದುಹೋಯಿತು ದೇಹದೊಳಗಿನ ಬಲ್ಲವೆಲ್ಲ ।
ಮಂದವಾದವು ಇಂದ್ರಿಯ ಗತಿಗಳೆಲ್ಲ ॥ ೧ ॥
ಆಸೆಯೆಂಬುದು ಅಜನಲೋಕಕ್ಕೆ ಮುಟ್ಟುತಿದೆ ॥
ಕಾಸು ಹೋದರೆ ಕ್ಲೇಶವಾಗುತಿದೆ ॥
ಮೋಸಮಾಡಿ ಮೃತ್ಯು ಬರುವುದ ನಾನರಿಯೆ ।
ವಾಸುದೇವನೆ ! ಎನ್ನ ದಯಮಾಡಿ ಸಲಹೋ ॥ ೨ ॥
ಜನರು ದೇಹವ ಬಿಟ್ಟುಪೋಪುದ ನಾಕಂಡು ।
ಎನ್ನ ದೇಹ ಸ್ಥಿರವೆಂದು ತಿಳಿದು ॥
ದಾನಧರ್ಮ ಮೊದಲಾದ ಹರಿಯನೇಮವ ಬಿಟ್ಟು ।
ಹೀನವಿಷಯಂಗಳಿಗೆರಗುವೆ ಸಿರಿಕೃಷ್ಣ ॥ ೩ ॥

ಶ್ರೀವ್ಯಾಸರಾಜ ಗುರುಗಳ ಮೊರೆಯು ಶ್ರೀಕೃಷ್ಣನಿಗೆ ಕೇಳಿಸಿತೆಂದು ತೋರುವುದು. ಕರುಣಾಸಾಗರನಾದ ಆ ಪ್ರಭುವು ತನ್ನ ಪರಮಭಕ್ತನಾದ ಗುರುಗಳಲ್ಲಿ ಅನುಗ್ರಹೋನ್ಮುಖನಾದನು.

ಅಂದು ರಾತ್ರಿ ಶ್ರೀಗಳವರು ಧ್ಯಾನಾಸಕ್ತರಾಗಿರುವಾಗಲೇ ಸ್ವಲ್ಪ ನಿದ್ರೆಬಂದಂತಾಗಿ ಆ ಅವಸ್ಥೆಯಲ್ಲಿ ಅವರೊಂದು ಕನಸುಕಂಡರು. ಸ್ವಪ್ನದಲ್ಲಿ ಗರುಡಧ್ವಜನಾದ ಶ್ರೀಲಕ್ಷ್ಮೀಕಾಂತನು ಶ್ರೀಯವರಿಗೆ ದರ್ಶನವಿತ್ತು ಅವರನ್ನು ಶ್ರೀಮಠದ ಹಿಂಭಾಗದ ತೋಟಕ್ಕೆ ಕರೆದೊಯ್ದು ಅಲ್ಲಿ ಬೆಳೆಯೊಂದರ ಬುಡದಲ್ಲಿರುವ ದಿವ್ಯಮೂಲಿಕೆಯನ್ನು ತೋರಿಸಿ "ಭಕ್ತರಾಜ! ಇದು ಅಮೃತಸದೃಶವಾದ ಸಿದ್ಧೌಷಧವು, ಎಲ್ಲ ಬಗೆಯ ವಿಷಬಾಧೆಯನ್ನೂ ಇದು ಪರಿಹರಿಸಿ ದೇಹಕ್ಕೆ ಪುಷ್ಟಿಯನ್ನೂ, ಕಾಂತಿಯನ್ನೂ ನೀಡುವುದು. ಕುಮಾರ ! ನೀನು ವೈದ್ಯರಿಂದ ಔಷಧವನ್ನು ಸ್ವೀಕರಿಸದೆ ನನ್ನ ಮೇಲೆಯೇ ನಿನ್ನ ರಕ್ಷಣೆಯ ಭಾರವನ್ನು ವಹಿಸಿ ನನ್ನ ಧ್ಯಾನದಲ್ಲಿಯೇ ಮಗ್ನನಾಗಿ ನನ್ನನ್ನು ನಂಬಿಕುಳಿತಿರುವೆ! ನೀನು ನನ್ನ ಪರಮಭಕ್ತಾಗ್ರಣಿಯಾಗಿದ್ದೀಯೆ! ನಿನ್ನನ್ನು ರಕ್ಷಿಸುವ ಹೊಣೆ ನನ್ನದಾಗಿದೆ. ಅನನ್ಯ ಭಾವದಿಂದ ನನ್ನನ್ನು ಚಿಂತಿಸುತ್ತಾ ಉಪಾಸನೆಮಾಡುವ ಅಭಿಯುಕ್ತ ಭಕ್ತರ ಯೋಗಕ್ಷೇಮವನ್ನು ನಾನು ವಹಿಸುತ್ತೇನೆ* ಇದು ನನ್ನ ಸಂಕಲ್ಪ. ವತ್ಸ! ಈ ಮೂಲಿಕೆಯನ್ನು ಸೇವಿಸು, ಇದರಿಂದ ವಿಷದೋಷ ಪರಿಹಾರವಾಗಿ ಮೊದಲಿನಂತೆ ಆರೋಗ್ಯಶಾಲಿಯಾಗಿ ಕಂಗೊಳಿಸುತ್ತೀಯೆ. ನನ್ನೀ ಆಜ್ಞೆಯನ್ನು ಪರಿಪಾಲಿಸು. ನಿನಗೆ ಮಂಗಳವಾಗಲಿ" ಎಂದು ಅನುಗ್ರಹಿಸಿ ಅಂತರ್ಧಾನ ಹೊಂದಿದನು. ಆ ತರುವಾಯ ಮತ್ತೊಂದು ಕನಸಾಯಿತು. ಆ ಕನಸಿನಲ್ಲಿ ಪಾರ್ವತೀ

---

* ಅನನ್ಯಾಶ್ಚಿಂತಯಂತೋ ಮಾಂ ಯೇಜನಾಃ ಪರ್ಯುಪಾಸತೇ ।
ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಮ್ ॥ —ಗೀತಾ

ಸಮೇತನಾದ ವಿಷಕಂಠನೆಂಬ ಖ್ಯಾತನಾದ ಶ್ರೀಏಕಾಂಬರೇಶ್ವರನು ದರ್ಶನವಿತ್ತು "ನನ್ನ ಪ್ರಭುವಿನ ಭಕ್ತನಾದ ನಿನಗೆ ಈ ವಿಷಪ್ರಯೋಗದಿಂದ ಏನೂ ಆಗಲಾರದು. ಶ್ರೀಹರಿಯು ನಿನಗೆ ಆಜ್ಞಾಪಿಸಿದಂತೆ ವರ್ತಿಸು, ನಿನಗೆ ಮಂಗಳವಾಗುವುದು" ಎಂದು ಹೇಳಿ ಅದೃಶ್ಯನಾದನು.

ಶ್ರೀಯವರು ಎಚ್ಚರಗೊಂಡಮೇಲೆ ಎರಡು ಕನಸುಗಳನ್ನೂ ನೆನೆದು ಆನಂದ ಪರವಶರಾದರು. ಸೂರ್ಯೋದಯವಾದ ಕೂಡಲೇ ಶ್ರೀಗಳವರು ಮಠದ ಪಂಡಿತರು, ಪರಿವಾರದೊಡನೆ ಮಠದ ಹಿಂಭಾಗದಲ್ಲಿದ್ದ ತೋಟಕ್ಕೆಹೋಗಿ ಭಗವಂತನು ಸ್ವಪ್ನ ದಲ್ಲಿ ತೋರಿಸಿದ ಬೇಲಿಯ ಬುಡದಲ್ಲಿ ಅಗೆಸಿದಾಗ ಅಲ್ಲಿ ಮೂಲಿಕೆಗಳು ದೊರಕಿದವು! ಶ್ರೀಗಳವರು ತಮಗಾದ ಸ್ವಪ್ನವನ್ನು ತಿಳಿಸಿ ಪರಿವಾರದವರಿಗೆ ಆ ಮೂಲಿಕೆ ಯನ್ನು ತರಲು ಆಜ್ಞಾಪಿಸಿದರು, ಮತ್ತು ಶ್ರೀಹರಿಯ ಅಪ್ಪಣೆಯಂತೆ ಆ ಮೂಲಿಕೆ ಯನ್ನು ಔಷಧ ರೂಪವಾಗಿ ಸೇವಿಸಿದರು. ಏನಾಶ್ಚರ್ಯ! ಕೂಡಲೇ ಶ್ರೀಗಳವರಿಗೆ ತಳಮಳವಾಗಿ ವಿಷಮಿಶ್ರಿತವಾದ ಪಾಯಸವು ವಾಂತಿರೂಪವಾಗಿ ಹೊರಬಂದಿತು ! ಶ್ರೀಯವರಿಗೆ ತುಂಬಾ ಸಮಾಧಾನವಾಯಿತು, ಇದೆಲ್ಲವೂ ಒಂದು ಪವಾಡದಂತೆ ನಡೆದುಹೋಯಿತು! ಶ್ರೀಹರಿಯು ಗುರುಗಳಲ್ಲಿ ಮಾಡಿದ ಅನುಗ್ರಹವನ್ನು ಪ್ರತ್ಯಕ್ಷ ಕಂಡ ಪಂಡಿತರು, ಪರಿವಾರದವರು, ಶ್ರೀಹರಿಯ ಭಕ್ತವಾತ್ಸಲ್ಯ, ಶ್ರೀಗಳವರ ಹರಿಭಕ್ತಿ, ಮಹಿಮಾದಿಗಳನ್ನು ಕೊಂಡಾಡಿದರು.

ಶ್ರೀಹರಿಯ ಅನುಗ್ರಹದಿಂದ ಮೂಲಿಕಾ ಸೇವನೆಯಿಂದ ವಿಷವು ಹೊರ ಬಂದು, ಎಲ್ಲ ಬಗೆಯ ಸಂಕಟವೂ ಪರಿಹಾರವಾಗಿ ಹತ್ತಾರು ದಿನಗಳಲ್ಲಿಯೇ ಗುರು ಗಳು ಮೊದಲಿನಂತೆ ಸಂಪೂರ್ಣ ಆರೋಗ್ಯಭಾಗ್ಯ, ವಿಶೇಷ ತೇಜಸ್ಸು ಕಾಂತಿಗಳಿಂದ ಶೋಭಿಸಹತ್ತಿದರು.

ಶ್ರೀವ್ಯಾಸತೀರ್ಥರಲ್ಲಿ ಭಗವಂತನು ಮಾಡಿದ ಅನುಗ್ರಹ, ವಿಷಪ್ರಯೋಗ ದಿಂದ ಬಳಲುತ್ತಿದ್ದ ಗುರುಗಳು ವಿಷಬಾಧೆಯಿಂದ ಮುಕ್ತರಾಗಿ ಆರೋಗ್ಯವಂತರಾಗಿ ಮೊದಲಿನಕ್ಕಿಂತ ಹೆಚ್ಚು ಕಾಂತಿ ತೇಜಸ್ಸುಗಳಿಂದ ಕಂಗೊಳಿಸುತ್ತಿರುವುದನ್ನು ಕಣ್ಣಾರೆಕಂಡು ಕಂಚಿಯ ಜನರು ಹರ್ಷನಿರ್ಭರರಾದರು. ಇದುವರೆಗೂ ಶ್ರೇಷ್ಠ ಜ್ಞಾನಿಗಳೂ, ವಾದವಿದ್ಯಾಕೋವಿದರೆಂದು ಗೌರವಿಸುತ್ತಿದ್ದ ಪಂಡಿತರು, ಆಸ್ತಿಕರು ಶ್ರೀಗಳವರು ವಿಷವನ್ನೂ ಅರಗಿಸಿಕೊಂಡ ಮಹಾತ್ಮರೆಂದು ತಿಳಿದು ಅವರನ್ನು ಕೊಂಡಾಡಹತ್ತಿದರು.

ಮಹಾಕವಿ ಸೋಮನಾಥನು ಈ ವಿಷಪ್ರಯೋಗ ಪ್ರಕರಣವನ್ನು ತನ್ನ "ಶ್ರೀವ್ಯಾಸಯೋಗಿ ಚರಿತೆ"ಯಲ್ಲಿ ಹೀಗೆ ನಿರೂಪಿಸಿದ್ದಾನೆ—

"ಇತ್ಥಮಚಿರಾದೇವ ಅಧಿಗತ ಸಮಸ್ತವಿದ್ಯಾಯ ಸತತಂ ವಿವಾದಯಿಷಯಾ ಸ್ಫುರತಾದಶನವಾಸಸಾ ತರ್ಜನ ಇವ ಶಾರದಾವಾಚಾರಭಟಮಪಿ ತಸ್ಮೈಮಹಾ ಯೋಗಿನೇ ಜಾತುಚಿತ್ತೇಜೋವಿಶೇಷವೇಸಹಿಷ್ಣುನಾ ಕೇನಾಪಿ ಬ್ರಹ್ಮಬಂಧುನಾ

ಧಾರ್ತರಾಷ್ಟ್ರೇಣೇವ ದುರಾತ್ಮನಾ ಭೀಮಸೇನಾಯ ಗರಲಂ ಕಬಲಗೋಪಿತಂ ಪ್ರಾಯುಂಕ್ತ. ಅನಂತರದೇನ ತೇನ ತಸ್ಯ ತನುಶ್ಶರದೀವ ಶೈವಲಿನೀ, ಬಹುಲೇವ ಶಶಿಮಂಡಲೀ, ಶೈಶಿರೀವ ಸಹಕಾರಲತಾ, ದಿನೇದಿನೇ ಸುಷುಮ್ನೈಕಶೇಷಂ ತನಿಮಾನಮಭಜತ ತಾವತ್ಸ ಭಕ್ತವತ್ಸಲೇನ ಕರುಣಾವಶಂವದೇನ ಭಗವತಾ ಗರುಢಧ್ವಜೇನ ಸ್ವಪ್ನನಿರ್ದಿಷ್ಟಾಯಾ ಸ್ಸಾಕ್ಷಾದಿವ ಧನ್ವಂತರೀಕುಲದೇವತಾಯಾಃ ಕನ್ಯಾಶ್ಚಿನ್ಮಹೌಷಧಿಮೂಲಿಕಾಯಾಃ ಸದ್ಯಸ್ತನೇನೇವ ಯೋಗೇನ ಪ್ರತ್ಯಾಸನ್ನರೂಪಯಾ-ಮೂರ್ತ್ಯಾ ಗ್ರಾಹ ಮುಕ್ತ ಇವ ಗಜಯೂಥನಾಥಃ ಪೂರ್ವಾದಪ್ಯಧಿಕಮಶೋಭತ ||" ಶ್ರೀವ್ಯಾಸಯೋಗಿಚರಿತಮ್. ಪುಟ-38-39,

**ಭಾವಃ** :- ಇಂತು ಅನತಿಕಾಲದಲ್ಲಿಯೇ ನಿಖಿಲತಂತ್ರ ಸ್ವತಂತ್ರರಾಗಿ, ವಾದ ವಿದ್ಯಾವಿಶಾರದರಾಗಿ, ತಮ್ಮ ಅಪ್ರತಿಹತ ವಾದ ವೈಖರಿಯಿಂದ ಸಕಲವಿದ್ಯೆಗಳಲ್ಲಿ ಕೋವಿದರಾದ ಪರಮತವಿಬುಧಾನೀಕವನ್ನು ನಿರಾಕರಿಸುವ ಮಹಾಮಹಿಮೋಪೇತರಾದ ಆ ಪರಮಹಂಸ ಶಿಖಾಮಣಿಗಳಾದ ಶ್ರೀ ವ್ಯಾಸತೀರ್ಥರ ಅತಿಶಯ (ಅಸಾಧಾರಣ)ಪ್ರಭಾವವನ್ನು ಕಂಡು ಸಹಿಸಲಾರದ. ಮಾತ್ಸರ್ಯಪೂರ್ಣಬುದ್ಧಿಯ ಓರ್ವ ಬ್ರಾಹ್ಮಣಾಧಮನು; ದುಷ್ಟನಾದ ದುರ್ಯೋಧನನು ಭೀಮಸೇನನಿಗೆ ವಿಷ ಪ್ರಯೋಗ ಮಾಡಿದಂತೆ ವಿಷಮಿಶ್ರಿತ ಭೋಜನವನ್ನು ಉಣಬಡಿಸಿದನು.

ಬಹು ತೀವ್ರವೂ ತಾಪಕರವೂ ಆದ ಆ ವಿಷದಜ್ವಾಲೆ (ಬಾಧೆ) ಯಿಂದ ಯೋಗಿವರ್ಯರಾದ ಶ್ರೀವ್ಯಾಸರಾಯರ ದೇಹವು ಶರತ್ಕಾಲಿನ ಶೈವಲಿಯಂತೆಯೂ ಕೃಷ್ಣಪಕ್ಷದ ಚಂದ್ರಮಂಡಲದಂತೆಯೂ, ಶಿಶಿರಋತುವಿನ ಸಿಹಿ ಮಾವಿನಮರದ (ಸಹಕಾರಲತಾ) ಎಲೆಯ ಚಿಗುರಿನಂತೆಯೂ. ದಿನದಿನಕ್ಕೂ ಕಾಂತಿಯುಕ್ತವಾಗಿದ್ದರೂ (ಕಾಂತಿಮಾತ್ರಾವಶಿಷ್ಟವಾಗಿ) ಕೃಶವಾಗತೊಡಗಿತು. ಅದೇ ಸಮಯದಲ್ಲಿ ಭಕ್ತವತ್ಸಲನೂ, ಕರುಣಾವಶಂವದನೂ ಪರಾತ್ಪರನೂ(ಭಗವಂತನೂ)ಆದ ಗರುಡಧ್ವಜನಾದ ಶ್ರೀಲಕ್ಷ್ಮೀಕಾಂತನು ಸ್ವಪ್ನದಲ್ಲಿ ಅನುಗ್ರಹಿಸಿ ಸೂಚಿಸಿದ ಧನ್ವಂತರೀ ಕುಲ ದೇವಸದೃಶವಾದ ಒಂದು ಮಹೌಷಧದ ಮೂಲಿಕೆಯನ್ನು ಉಪಯೋಗಿಸಿದ್ದರಿಂದ ಶ್ರೀವ್ಯಾಸಯತಿಗಳಿಗೆ ವಿಷಬಾಧಾ ಪರಿಹಾರವಾಗಿ: ಮತ್ತು ದೇಹಪುಷ್ಟಿಯಾಗಿ, ಮೊದಲಿನಂತೆ ಆರೋಗ್ಯಭಾಗಯುಕ್ತ ಶರೀರವುಳ್ಳವರಾದರು. ಮೊಸಳೆಯ ಹಿಡಿತದ ಬಾಧೆಯಿಂದ ಮುಕ್ತನಾದ ಗಜೇಂದ್ರನಂತೆ ಶ್ರೀವ್ಯಾಸತೀರ್ಥರು ಹಿಂದಿನ ಕಿಂತಲೂ ಅಧಿಕವಾದ ಕಾಂತಿ ತೇಜಸ್ಸುಗಳಿಂದ ಕಂಗೊಳಿಸಿದರು.

o o o o o

ಈ ವಿಷಪ್ರಯೋಗ ಪ್ರಕರಣವು ಜರುಗಿ ಭಗವದನುಗ್ರಹದಿಂದ ಆರೋಗ್ಯ ಭಾಗ್ಯಪಡೆದಮೇಲೆ ಕೆಲವು ದಿನಗಳ ಕಾಲ ಕಂಚಿಯಲ್ಲಿ ವಾಸಮಾಡಿದ ಶ್ರೀವ್ಯಾಸರಾಜ ಯತೀಶ್ವರರು ಕಂಚಿಯ ಮಹಾರಾಜ, ವಿದ್ಯಾಪೀಠದ ಪಂಡಿತರು, ಧಾರ್ಮಿಕರಾದ

ಪುರಪ್ರಮುಖರು ಮತ್ತು ಶಿಷ್ಯಜನರು, ಭಕ್ತಜನರುಗಳು ನೀಡಿದ ಅಭೂತಪೂರ್ವ ಬೀಳ್ಕೊಡಿಕೆಯೊಡನೆ ಅಸಾಧಾರಣ ಕೀರ್ತಿ ಪ್ರತಿಷ್ಠೆಗಳಿಂದ ಯುಕ್ತರಾಗಿ ಪ್ರಸನ್ನ ಚಿತ್ತದಿಂದ ಶ್ರೀಕಾಂಚೀನಗರದ ಅಧಿದೇವತೆಯಾದ ಶ್ರೀ ವರದರಾಜಸ್ವಾಮಿ, ಶ್ರೀ ತ್ರಿವಿಕ್ರಮ ದೇವರು, ಶ್ರೀಏಕಾಂಬರೇಶ್ವರ ಮತ್ತು ಶ್ರೀಕಾಮಾಕ್ಷೀದೇವಿಯು ರಿಗೆ ಬಹು ಭಕ್ತಿಭಾವದಿಂದ ನಮಸ್ಕರಿಸಿ, ಪ್ರಸಾದ ಸ್ವೀಕರಿಸಿ, ಅಪ್ಪಣೆಪಡೆದು ಕಂಚಿಯಿಂದ ಹೊರಟು ಅನೇಕ ದೇಶಗಳನ್ನು ನೋಡಿ ಆನಂದಿಸುತ್ತಾ ನಿಧಾನವಾಗಿ ಮುಳ್ವನಗರಿಗೆ (ಮುಳಬಾಗಲಿಗೆ) ಬಂದು ಸೇರಿದರು.*

o o o o o

ಶ್ರೀವ್ಯಾಸರಾಜ ಗುರುಗಳು ಕಂಚಿಯಲ್ಲಿ ಅಪೂರ್ವ ದಿಗ್ವಿಜಯವನ್ನು ಸಾಧಿಸಿ ದ್ವೈತವಿಜಯ ಪತಾಕೆಯನ್ನು ಮೆರೆಸಿ ಮುಳಬಾಗಲಿಗೆ ಬರುತ್ತಿರುವ ವಿಚಾರವನ್ನು ಪೂರ್ವಭಾವಿಯಾಗಿ ತಿಳಿದ ಶ್ರೀಲಕ್ಷ್ಮೀನಾರಾಯಣ ಮುನಿಗಳು ಪ್ರಿಯಶಿಷ್ಯರನ್ನು ಸ್ವಾಗತಿಸಿ ಮೆರವಣಿಗೆಯಿಂದ ಶ್ರೀಮಠಕ್ಕೆ ಕರೆದುತಂದರು. ಸಾಷ್ಟಾಂಗ ನಮಸ್ಕಾರ ಮಾಡಿದ ಶಿಷ್ಯರನ್ನು ಭರದಿಂದ ಆಲಿಂಗಿಸಿ ಆನಂದಬಾಷ್ಪ ಸುರಿಸಿದರು. ಸಹಸ್ರಾರು ಜನ ಈ ಪವಿತ್ರ ಗುರುಶಿಷ್ಯರ ಸಮಾಗಮ ಪ್ರೇಮಗಳನ್ನು ಕಂಡು ಕೃತಾರ್ಥರಾಗಿ ಆನಂದದಿಂದ ಗುರುಶಿಷ್ಯರ ಜಯಕಾರ ಮಾಡಿದರು.

ಸ್ವಾಗತಸಮಾರಂಭವು ಮುಕ್ತಾಯವಾದಮೇಲೆ ಆತ್ಮೀಯರ ಕೋರಿಕೆಯಂತೆ ಶ್ರೀವ್ಯಾಸರಾಜಗುರುವರರು ಕಂಚಿಯಲ್ಲಿ ಜರುಗಿದ ಸಮಸ್ತವೃತ್ತಾಂತವನ್ನೂ ಸಾದ್ಯಾಂತವಾಗಿ ಗುರುಗಳಲ್ಲಿ ನಿವೇದಿಸಿದರು. ಅದನ್ನು ಕೇಳಿ ಸಕಲರೂ ಸಂತುಷ್ಟ ರಾಗಿ ವ್ಯಾಸತೀರ್ಥರನ್ನು ಕೊಂಡಾಡಿದರು.

## ೨೩. ಶ್ರೀಬ್ರಹ್ಮಣ್ಯತೀರ್ಥರಿಗೆ ದೇಹಾಲಸ್ಯ

ಶ್ರೀವ್ಯಾಸಭಿಕ್ಷುಗಳು ಕಂಚಿಯಿಂದ ಮುಳಬಾಗಿಲಿಗೆ ಬಂದು ಕೆಲದಿನಗಳಾದ ಮೇಲೆ ಅಬ್ಬೂರಿನಿಂದ ಮಠದ ಪಂಡಿತರಾದ ವೆಂಕಟರಮಣಾಚಾರ್ಯರು ಮುಳ-ಬಾಗಲಿಗೆ ಬಂದು ಉಭಯ ಶ್ರೀಪಾದಂಗಳವರ ದರ್ಶನವನ್ನು ಪಡೆದು ಕುಶಲಪ್ರಶ್ನೆ ಗಳಾದ ಮೇಲೆ ವಿಜ್ಞಾಪಿಸಿದರು, "ಮಹಾಸ್ವಾಮಿ ಹಿರಿಯ ಶ್ರೀಪಾದಂಗಳವರಿಗೆ ಈಗ ಒಂದೆರಡುತಿಂಗಳುಗಳಿಂದ ಆರೋಗ್ಯಭಾಗ್ಯನೆಟ್ಟಗಿಲ್ಲ. ವ್ಯಾಧಿಯಿಂದ ಬಹು

---

*"ಭೂರಿಷು ದಿನೇಷು ಯತಿಪ್ರವೇಕಸ್ತೇಜಃ ಪ್ರಣಮ್ಯ ವರದಂ ದ್ವಿಪಶೈಲಚಿಹ್ನಮ್ ।
ದೇಶಾನ್ಪ್ರದರ್ಶತಿ ವಿಚಿತ್ರ ವಚಃ ಪ್ರಭಾವಃ ತಸ್ಮಾತ್ಸಮುಲ್ವನಗರೀಂ ಪಸಕೈರಯಾಷೀತ್॥"
—ಶ್ರೀವ್ಯಾಸಯೋಗಿ ಚರಿತಮ್, ಪುಟ—3-6

ವಾಗಿ ಬಳಲುತ್ತಿದ್ದಾರೆ.ಕಿರಿಯ ಶ್ರೀಪಾದಂಗಳವರನ್ನು ಕಾಣಲು ತವಕಿಸುತ್ತಿದ್ದಾರೆ. ಶ್ರೀವ್ಯಾಸತೀರ್ಥರನ್ನು ಕರೆದುಕೊಂಡು ಬರಬೇಕೆಂದು ಅಪ್ಪಣೆಮಾಡಿ ನನ್ನನ್ನು ಕಳುಹಿಸಿದ್ದಾರೆ" ಎಂದರು.

ಶ್ರೀಬ್ರಹ್ಮಣ್ಯತೀರ್ಥರ ದೇಹಾರೋಗ್ಯವು ಸರಿಯಿಲ್ಲವೆಂದು ತಿಳಿದು ಉಭಯ ಶ್ರೀಪಾದಂಗಳವರಿಗೆ ತುಂಬಾ ಕಳವಳವಾಯಿತು.

ಶ್ರೀಲಕ್ಷ್ಮೀನಾರಾಯಣ ಮುನಿಗಳು ಹಿರಿಯ ಗುರುಗಳವರ ಇಚ್ಛೆ ನೆರವೇರಿಸಲು ನೀವು ಕೂಡಲೇ ಅಬ್ಬೂರಿಗೆ ಹೊರಡಬೇಕೆಂದು ವ್ಯಾಸತೀರ್ಥರಿಗೆ ಹೇಳಿ "ಆಚಾರ್ಯರೇ, ಶ್ರೀವ್ಯಾಸತೀರ್ಥರು ಇನ್ನು ಮೂರುನಾಲ್ಕುದಿನಗಳಲ್ಲಿ ಹೊರಟು ಅಲ್ಲಿಗೆ ಬರುತ್ತಾರೆ.ನೀವು ಅಬ್ಬೂರಿಗೆ ಇಂದೇ ಹೊರಟು ಶ್ರೀಹಿರಿಯ ಶ್ರೀಪಾದಂಗಳವರಲ್ಲಿ ಈ ವಿಚಾರವನ್ನು ಅರುಹಿರಿ" ಎಂದು ವೆಂಕಟರಮಣಾಚಾರ್ಯರಿಗೆ ಹೇಳಿ ಅಪ್ಪಣೆಕೊಟ್ಟು ಕಳುಹಿಸಿದರು.

## ೨೪. ಮಹಾಸಂಸ್ಥಾನಪತಿಗಳಾದರು

ಒಂದೆರಡುದಿನಗಳಾದಮೇಲೆ ಶ್ರೀವ್ಯಾಸರಾಜಗುರುವರ್ಯರು ಪೂಜ್ಯಗುರುಗಳಿಗೆ ನಮಸ್ಕರಿಸಿ ಅವರ ಆಶೀರ್ವಾದವನ್ನು ಪಡೆದು ಅಬ್ಬೂರಿಗೆ ದಯಮಾಡಿಸಿದರು.

ಶ್ರೀಬ್ರಹ್ಮಣ್ಯತೀರ್ಥರು ಅನಾರೋಗ್ಯದಿಂದ ಬಹಳ ಬಡವಾಗಿದ್ದರೂ ಪ್ರಸನ್ನ ಚಿತ್ತರಾಗಿದ್ದರು. ಶಿಷ್ಯರು ಬರುವ ವಾರ್ತೆಯಿಂದ ಅವರಲ್ಲಿ ಒಂದು ಬಗೆಯ ಉತ್ಸಾಹ ತುಂಬಿಬಂದಿತ್ತು. ಪ್ರೀತಿಯ ಶಿಷ್ಯರನ್ನು ಸ್ವಾಗತಿಸಲು ಹುಡುಗರಂತೆ ಲವಲವಿಕೆ, ಸಂಭ್ರಮ, ಸಂತೋಷಗಳಿಂದ ಓಡಾಡಹತ್ತಿದರು. ಶ್ರೀವ್ಯಾಸತೀರ್ಥರನ್ನು ಎದುರುಗೊಂಡು ಸ್ವಾಗತಿಸಲು ಸಕಲ ವ್ಯವಸ್ಥೆಗಳನ್ನು ಖುದ್ದಾಗಿಮಾಡಿ, ಪೂರ್ಣಕುಂಭ-ವಾದ್ಯವೈಭವ-ಬಿರುದಾವಳಿಗಳೊಡನೆ ಶ್ರೀಮಠದ ಅಧಿಕಾರಿಗಳು, ಪಂಡಿತರು, ಆತ್ಮೀಯರು, ಶಿಷ್ಯಮಂಡಲಿಯನ್ನು ಕಳಿಸಿಕೊಟ್ಟು, ಶ್ರೀಮಠದ ಬಾಗಿಲಿನಲ್ಲಿ ಶಿಷ್ಯರ ಆಗಮನವನ್ನು ನಿರೀಕ್ಷಿಸಹತ್ತಿದರು;

ಶ್ರೀವ್ಯಾಸತೀರ್ಥರನ್ನು ಅಲಂಕೃತ ಪಾಲಕಿಯಲ್ಲಿ ಸಕಲವೈಭವದೊಡನೆ ಶ್ರೀಮಠದವರು ಕರೆತಂದರು. ಶ್ರೀವ್ಯಾಸರಾಜರ ಪಾಲಕೀಯು ಶ್ರೀಮಠದ ಮುಂದೆ ಬಂದಕೂಡಲೇ ತಮ್ಮನ್ನು ಸ್ವಾಗತಿಸಲು ಕಾದುನಿಂತಿದ್ದ ಪೂಜ್ಯಗುರುಗಳನ್ನು ಕಂಡು ಪಾಲಕಿಯಿಂದಿಳಿದು ಗುರುಗಳತ್ತ ಧಾವಿಸಿದರು. ಇಪ್ಪತ್ತರ ತಾರುಣ್ಯ, ಜ್ಞಾನ-ಭಕ್ತಿ-ವೈರಾಗ್ಯ ಸೂಚಕ ದಿವ್ಯತೇಜಸ್ಸು, ಆಕರ್ಷಣೀಯ ಸೌಂದರ್ಯಗಳಿಂದ ಕಂಗೊಳಿಸುತ್ತಿರುವ ಶಿಷ್ಯರನ್ನು ಕಂಡು ಶ್ರೀಬ್ರಹ್ಮಣ್ಯತೀರ್ಥರು ಹಿರಿಹಿರಿಹಿಗ್ಗುತ್ತಾ ಆನಂದಭರದಿಂದ ಶಿಷ್ಯರತ್ತ ತಾವೂ ಧಾವಿಸಿದರು. ಶ್ರೀವ್ಯಾಸತೀರ್ಥರು ಗುರುಗಳಿಗೆ ಸಾಷ್ಟಾಂಗಪ್ರಣಾಮಮಾಡಿದರು. ಬ್ರಹ್ಮಣ್ಯಮುನಿಗಳು ಶಿಷ್ಯರ ನ್ನಾಲಿಂಗಿಸಿ ಪ್ರೇಮದ

ಪರವಶರಾದರು. ಇಬ್ಬರ ಕಣ್ಣಿನಿಂದಲೂ ಆನಂದಬಾಷ್ಪ ಸುರಿಯುತ್ತಿದೆ. ಮಾತನಾಡಲೂ ಬಾರದಂತಾಗಿದೆ. ಒಬ್ಬರ ಮುಖವನ್ನೊಬ್ಬರು ನೋಡುತ್ತಿದ್ದಾರೆ. ಆ ಗುರುಶಿಷ್ಯರ ಸಮಾಗಮ, ಅವರ ಪ್ರೇಮ, ವಾತ್ಸಲ್ಯಗಳನ್ನು ನೋಡಿದ ಸುಜನರು ಆನಂದದಿಂದ "ಆಹಾ ಎಂಥ ಗುರುಶಿಷ್ಯರು ! ಅದೇನು ಪ್ರೇಮ-ಈ ಪವಿತ್ರಸ್ನೋಟವನ್ನು ಕಂಡ ನಮ್ಮ ಕಣ್ಣುಗಳು ಸಾರ್ಥಕವಾದವು"ಎಂದು ಉದ್ಗರಿಸಹತ್ತಿದರು.

ಗುರುಶಿಷ್ಯರಲ್ಲಿ ಪ್ರಥಮಸಮಾಗಮದ ಉದ್ವೇಗವು ಸ್ವಲ್ಪ ಕಡಿಮೆಯಾದ ಮೇಲೆ ಬ್ರಹ್ಮಣ್ಯತೀರ್ಥರು ಪ್ರೀತಿಯಿಂದ ಶಿಷ್ಯರ ಕರಪಿಡಿದು ಶ್ರೀಮಠಕ್ಕೆ ಕರತಂದರು. ಶ್ರೀಮಠದ ಮುಖದ್ವಾರದಲ್ಲಿ ಸುಮಂಗಲಿಯರು ಶ್ರೀವ್ಯಾಸಯತಿಗಳಿಗೆ ಆರತಿ ಬೆಳಗಿದರು. ಪರಿವಾರದವರು ದೃಷ್ಟಿಪರಿಹಾರಕ್ಕಾಗಿ ಅನೇಕ ತೆಂಗಿನಕಾಯಿಗಳನ್ನು ಒಡೆದರು. ಸುಜನರು ಉಭಯರುಗಳ ಜಯಜಯಕಾರ ಗೈಯುತ್ತಾ ಲಾಜಾಪುಷ್ಪವೃಷ್ಟಿ ಮಾಡಿದರು.

ಗುರುಶಿಷ್ಯರು ಮಠಪ್ರವೇಶಮಾಡಿ ಆಸನಾಸೀನರಾದರು. ಅನಂತರ ಸ್ವಾಗತ ಸಮಾರಂಭ ಜರುಗಿ, ಅನೇಕ ಪಂಡಿತರು, ಧರ್ಮಾಭಿಮಾನಿಗಳು ಗುರುಶಿಷ್ಯರ ಗುಣಗಾನಮಾಡಿ, ಕೊಂಡಾಡಿದರು, ಅನಂತರ ಶ್ರೀವ್ಯಾಸತೀರ್ಥರು ಸೂಕ್ತರೀತಿಯಲ್ಲಿ ಉಪದೇಶಭಾಷಣಮಾಡಿ ಸರ್ವರಿಗೂ ಫಲಮಂತ್ರಾಕ್ಷತೆಯನ್ನು ದಯಪಾಲಿಸಿದಮೇಲೆ ಗುರುಶಿಷ್ಯರು ವಿಶ್ರಾಂತಿಗೆ ತೆರಳಿದರು.

ತಾವು ಶ್ರೀಲಕ್ಷ್ಮೀನಾರಾಯಣ ಮುನಿಗಳಲ್ಲಿ ವ್ಯಾಸಂಗಕ್ಕೆ ಬಿಟ್ಟುಬಂದ ಮೇಲೆ ಶ್ರೀವ್ಯಾಸರಾಜರು ಅಲ್ಲಿ ಅಧ್ಯಯನ ಪ್ರಾರಂಭಿಸಿದಲಾಗಾಯಿತು, ಈವರೆಗಿನ ಸಮಸ್ತವೃತ್ತಾಂತವನ್ನೂ ಶ್ರೀಬ್ರಹ್ಮಣ್ಯತೀರ್ಥರು ಪ್ರಿಯಶಿಷ್ಯರಿಂದ ತಿಳಿದು ಹರ್ಷನಿರ್ಭರರಾದರು.

ಶ್ರೀವ್ಯಾಸತೀರ್ಥರು ಅಂದಿನಿಂದ ಶ್ರೀಮಠದ ನಿರ್ವಹಣೆಯ ಜವಾಬ್ದಾರಿಯನ್ನು ತಾವೇವಹಿಸಿಕೊಂಡು ಶ್ರೀದೇವಪೂಜಾ, ಪಾಠಪ್ರವಚನಗಳನ್ನು ನಿರ್ವಹಿಸುತ್ತಾ ತಮ್ಮ ಗುರುಗಳಿಗೆ ಪೂರ್ಣವಿಶ್ರಾಂತಿ ದೊರಕುವಂತೆಮಾಡಿ ತಾವೇ ಸ್ವತಃ ನಿಂತು ಗುರುಗಳ ಔಷಧೋಪಚಾರ, ಆಹಾರಗಳಿಗೆ ಗಮನವಿತ್ತು ಹಗಲು-ರಾತ್ರಿ ಗುರುಗಳಿಗೆ ಭಕ್ತಿಶ್ರದ್ಧೆಗಳಿಂದ ಶುಶ್ರೂಷೆಮಾಡುತ್ತಾ ಗುರುಗಳ ವಿಶೇಷ ಪ್ರೀತಿ ವಿಶ್ವಾಸ ಅನುಗ್ರಹಗಳಿಗೆ ಪಾತ್ರರಾದರು.

o o o o o

ಶ್ರೀವ್ಯಾಸತೀರ್ಥರು ಅಬ್ಬೂರಿಗೆ ಬಂದು ಒಂದೆರಡು ತಿಂಗಳುಗಳಾದವು. ಶ್ರೀಬ್ರಹ್ಮಣ್ಯತೀರ್ಥರ ಆರೋಗ್ಯವು ಸುಧಾರಿಸುವ ಬದಲು ಕೆಡುತ್ತಾ ಬಂದಿತು. ಶ್ರೀಗಳವರು ಬಹಳನಿಶ್ಶಕ್ತರಾದರು. ಅವರು ಪ್ರಿಯ ಶಿಷ್ಯರಿಗೆ ಇನ್ನು ಔಷಧೋಪಚಾರಗಳಿಂದ ಪ್ರಯೋಜನವಿಲ್ಲವೆಂದು ಹೇಳಿ ಅವೆಲ್ಲವನ್ನೂ ನಿಲ್ಲಿಸಿಬಿಟ್ಟರು.

ಶ್ರೀ ವ್ಯಾಸತೀರ್ಥರಿಗೆ ಗುರುಗಳ ಆರೋಗ್ಯಸ್ಥಿತಿಯನ್ನು ಕಂಡು ತುಂಬಾ ಕಳವಳವಾಯಿತು.

ಶ್ರೀಬ್ರಹ್ಮಣ್ಯತೀರ್ಥರು ಶಿಷ್ಯರನ್ನು ಹತ್ತಿರಕೂಡಿಸಿಕೊಂಡು ಒಂದು ದಿನ ಶಿಷ್ಯರಿಗೆ ತಿಳಿಸಬೇಕಾದ ಮಹಾಸಂಸ್ಥಾನದ ಇತಿಹಾಸ, ಪಾಷ್ಟಿಕ ಮನೆತನದ ಹಿರಿಮೆ ಗರಿಮೆಗಳನ್ನೂ, ಶ್ರೀಮಠದ ಸಂಪ್ರದಾಯಾದಿ ಸಮಸ್ತ ವಿಚಾರಗಳನ್ನೂ ವಿಸ್ತಾರವಾಗಿ ತಿಳಿಸಿ, "ನಮ್ಮ ಕಾಲಮುಗಿಯುತ್ತಾ ಬಂದಿದೆ. ಇನ್ನು ಈ ಮಹಾಸಂಸ್ಥಾನದ ಆಚಾರ್ಯರ ಸಿದ್ಧಾಂತದ ಅಭಿವೃದ್ಧಿಯನ್ನು ಯಶಸ್ವಿಯಾಗಿ ನೆರವೇರಿಸಿ, ಜಗತ್ತಿನಲ್ಲೆಲ್ಲಾ ದ್ವೈತಸಿದ್ಧಾಂತದ ವಿಜಯವೈಜಯಂತಿಯನ್ನು ಮೆರೆಯಿಸುತ್ತೀರಿ ಎಂಬ ನಂಬಿಕೆ ನಮಗಿದೆ. ನಮಗೆ ಇನ್ನು ಯಾವ ಚಿಂತೆಯೂ ಇಲ್ಲ. ನಮ್ಮ ಹಿರಿಯಾಶೆಯನ್ನು ನೆರವೇರಿಸುವುದಾಗಿ ನಮಗೆ ವಚನವನ್ನು ಕೊಡಬೇಕು. ಅಂದರೆ ನಾವು ನಿರಾಲೋಚನೆಯಿಂದ, ಸಂತೋಷದಿಂದ ನಮ್ಮ ಇಹಲೋಕವ್ಯಾಪಾರವನ್ನು ಮುಗಿಸುತ್ತೇವೆ" ಎಂದು ಆಜ್ಞಾಪಿಸಿದರು.

ಆಗ ಶ್ರೀವ್ಯಾಸರಾಜರು ಗುರುಗಳ ಪಾದಗಳನ್ನು ಹಿಡಿದು "ಗುರುವರ್ಯ ! ತಮ್ಮ ಚರಣಕಮಲಗಳನ್ನು ಹಿಡಿದು ಪ್ರಮಾಣಮಾಡಿ ವಚನ ನೀಡುತ್ತಿದ್ದೇನೆ. ನನ್ನ ಜೀವನದ ಕೊನೆಯುಸಿರು ಇರುವವರೆಗೆ ನಿಮ್ಮ ಈ ಆಜ್ಞೆಯನ್ನು ನೆರವೇರಿಸಿಕೊಂಡು ಬರುತ್ತೇನೆ. ಇನ್ನು ನನ್ನ ಜೀವನ ಅದಕ್ಕಾಗಿಯೇ ಮುಡುಪಾಗಿಡುತ್ತೇನೆ" ಎಂದು ಹೇಳಿದರು. ಆಗ ಶ್ರೀಬ್ರಹ್ಮಣ್ಯತೀರ್ಥರಿಗಾದ ಆನಂದ ಅವರ್ಣನೀಯ !

ಶ್ರೀಶಾಲಿವಾಹನ ಶಕ ೧೩೮೯ನೆಯ ಸರ್ವಜಿತ್ ಸಂವತ್ಸರದ ವೈಶಾಖ ಕೃಷ್ಣ ದಶಮೀ ದಿವಸ (ಕ್ರಿ. ಶ. 1467ನೇ ಮೇ ಮಾಹೆ) ಶ್ರೀವ್ಯಾಸರಾಜ ಗುರುಸಾರ್ವಭೌಮರಿಗೆ ವೈಭವದಿಂದ ಮಹಾಸಂಸ್ಥಾನವನ್ನು ಒಪ್ಪಿಸಿಕೊಟ್ಟು.[1] ಮರುದಿನ ಏಕಾದಶೀ ದಿವಸ ಪ್ರಾತಃಕಾಲ ಸ್ನಾನ, ಆಹ್ನಿಕ, ಜಪತಪಾದ್ಯನುಷ್ಠಾನಗಳನ್ನು ಪೂರೈಸಿ ಶ್ರೀ ಪಟ್ಟಾಭಿರಾಮ–ಮೂಲಗೋಪಾಲಕೃಷ್ಣ–ವೇದವ್ಯಾಸ ದೇವರಿಗೆ ನಮಸ್ಕಾರಮಾಡಿ ಯೋಗಾಸನಾರೂಢರಾಗಿ ಕುಳಿತುಸೂರ್ಯಾಂಶರಾದ ಶ್ರೀಬ್ರಹ್ಮಣ್ಯತೀರ್ಥರು ಮಧ್ಯಾಹ್ನ ಶ್ರೀಹರಿ ವಾಯುಗಳ ಪಾದಸ್ಮರಣೆಮಾಡಿ, ಲಯಚಿಂತನ ಮಾಡುತ್ತಾ ಶ್ರೀಹರಿಧ್ಯಾನ ಪೂರ್ವಕವಾಗಿ ಯೋಗಶಕ್ತಿಯಿಂದ ತಮ್ಮ ಐಹಿಕ

---

1 ಅಬ್ದೇ ಸರ್ವಜಿದಾಹ್ವಯೇ ಶುಚಿವರೋ ವೈಶಾಖಮಾಸಾಸಿತದ್ವಾದಶ್ಯಾಮಗಮದ್ಯದೂದ್ವಹ ಪದಾಬ್ಜಾರ್ಚಾಧಿಕಾರಂ ಮುನೇಃ ।
ಬ್ರಹ್ಮಣ್ಯಾಭಿಧಯಾಯುತಾದಥ......।

—ಶ್ರೀವ್ಯಾಸರಾಜಗುರುಸಾರ್ವಭೌಮ ಚರಿತಮ್

ವ್ಯಾಪಾರವನ್ನು ಮುಗಿಸಿ ತಮ್ಮ ಮೂಲರೂಪವಾದ ಸೂರ್ಯಮಂಡಲದಲ್ಲಿ ಲೀನರಾದರು.[2]

ಪೂಜ್ಯ ಗುರುಗಳು ಶ್ರೀಮನ್ನಾರಾಯಣಧ್ಯಾನಪರರಾದವಿಚಾರತಿಳಿದು ಶ್ರೀವ್ಯಾಸತೀರ್ಥರು ಗುರುಗಳ ವಿಯೋಗ ದುಃಖವನ್ನು ಸಹಿಸಲಾರದೆ ಕಣ್ಣೀರು ಸುರಿಸಿ ಅವರ ಶಿಷ್ಯಪ್ರೇಮ-ವಾತ್ಸಲ್ಯ-ಅನುಗ್ರಹಾದಿಗಳನ್ನು ಸ್ಮರಿಸುತ್ತಾ ಅವರಗುಣಗಾನ ಮಾಡಹತ್ತಿದರು. ಆ ನಂತರ ಸಂಸ್ಥಾನ ಪರಂಪರಾಗತ ಪದ್ಧತಿಯಂತೆ ಶ್ರೀಬ್ರಹ್ಮಣ್ಯತೀರ್ಥರ ಬೃಂದಾವನಪ್ರತಿಷ್ಠಾಮಹೋತ್ಸವಗಳು ವೈಭವದಿಂದ ನೆರವೇರಿದವು.

ಶಾಲಿವಾಹನಶಕೆ ೧೪೨೮ನೇ ಸರ್ವಜಿತ್ ಸಂವತ್ಸರದ ವೈಶಾಖಕೃಷ್ಣದ್ವಾದಶೀ ದಿವಸ ಶ್ರೀವ್ಯಾಸರಾಜ ಗುರುವರೇಣ್ಯರು ಮಹಾಸಂಸ್ಥಾನ ಪೂಜೆಮಾಡಿ ಗುರುಗಳ ಮಹಾಸಮಾರಾಧನೆಯನ್ನು ಭಕ್ತ್ಯಾದರಗಳಿಂದ ನಡೆಸಿ, ಶ್ರೀಪಟ್ಟಾಭಿರಾಮ-ಮೂಲಗೋಪಾಲಕೃಷ್ಣ-ಬಾಲಗೋಪಾಲ-ವೇದವ್ಯಾಸ ದೇವರುಗಳನ್ನು ಗುರುಗಳ ಬೃಂದಾವನದಮೇಲೆ ಮಂಡಿಸಿ, ಕನಕಾಭಿಷೇಕಮಾಡಿ, ಗುರುಗಳಿಗೆ ಹಸ್ತೋದಕವನ್ನು ಸಮರ್ಪಿಸಿ ಮಹಾಮಂಗಳಾರತಿಯನ್ನು ಮಾಡಿದರು.

ಅನಂತರ ಗದ್ಗದ ಕಂಠದಿಂದ ಭಕ್ತಿಪೂರ್ವಕವಾಗಿ ಗುರುಗಳ ಮೇಲೆ ಚರಮಶ್ಲೋಕವನ್ನು ರಚಿಸಿ, ಹೀಗೆಸ್ತುತಿಸಿ ಸಮರ್ಪಿಸಿದರು—

**"ಸಮುತ್ಸಾರ್ಯ ತಮಸ್ತೋಮಂ ಸನ್ಮಾರ್ಗಂ ಸಂಪ್ರದರ್ಶ್ಯ ಚ ।**
**ಸದಾ ವಿಷ್ಣುಪದಾಸಕ್ತಂ ಸೇವೇ ಬ್ರಹ್ಮಣ್ಯಭಾಸ್ಕರಮ್ ॥"**

—ಅಜ್ಞಾನಾಂಧಕಾರ ಸಮೂಹವನ್ನು (ಅಜ್ಞಾನವನ್ನು) ಬಡಿದೋಡಿಸಿ, ಬೆಳಕಿನ ಮಾರ್ಗವನ್ನು (ಸಮೀಚೀನ ದಾರಿಯನ್ನು) ತೋರಿಕೊಟ್ಟು, ಸರ್ವದಾ ಶ್ರೀ ವಿಷ್ಣುಪಾದಗಳಲ್ಲಿ ಆಸಕ್ತರಾದ, (ಸದಾ ಆಕಾಶದಲ್ಲಿ ಕಂಗೊಳಿಸುವ), ಶ್ರೀ ಬ್ರಹ್ಮಣ್ಯತೀರ್ಥರೆಂಬ ಭಾಸ್ಕರ (ಸೂರ್ಯ) ರನ್ನು ಸೇವಿಸುತ್ತೇವೆ.

**"ಕಂಸಧ್ವಂಸಿ ಪದಾಂಭೋಜ ಸಂಸಕ್ತೋ ಹಂಸಪುಂಗವಃ ।**
**ಬ್ರಹ್ಮಣ್ಯ ಗುರುರಾಜಾಖ್ಯೋ ವರ್ತತಾಂ ಮಮ ಮಾನಸೇ॥"**

—ಕಂಸನನ್ನು ಸಂಹರಿಸಿದ ಶ್ರೀಕೃಷ್ಣನ ಪದಾಂಭೋಜದಲ್ಲಿಯೇ(ಕಂಸಧ್ವಂಸಿ ಪದ-ಕೃಷ್ಣಪದ-ವಿಷ್ಣುಪದ-ಆಕಾಶದಲ್ಲಿಯೇ) ಸಂಸಕ್ತರಾದ, ಯತಿಶ್ರೇಷ್ಠರಾದ, (ಹಂಸ-ಸೂರ್ಯದೇವರ ಅಂಶರಾದ) ಶ್ರೀಬ್ರಹ್ಮಣ್ಯತೀರ್ಥ ಗುರುರಾಜರು ನನ್ನ ಮನಸ್ಸಿನಲ್ಲಿ ನಲಿಯುತ್ತಿರಲಿ !

ಹೀಗೆ ಗುರುಗಳ ಮಹಾಸಮಾರಾಧನೆಯನ್ನು ಭಕ್ತ್ಯಾದರಗಳಿಂದ ನಡೆಸಿದ ಶ್ರೀ ವ್ಯಾಸರಾಜ ಗುರುಸಾರ್ವಭೌಮರು ಶ್ರೀಮದಾಚಾರ್ಯರ ಮಹಾಸಂಸ್ಥಾನದ

---

2 ವೈಶಾಖ ಕೃಷ್ಣಪಕ್ಷೇ ಸಾಪೇಕಾದಶ್ಯಾಂ ಗುರೂತ್ತಮಃ ।
ನಭೋ ಮಧ್ಯಗತೇರ್ಕಮ್ಮಿ ಸ್ವರೂಪೇ ಲೀಯತ ಪ್ರಭುಃ ॥
—ಶ್ರೀಬ್ರಹ್ಮಣ್ಯತೀರ್ಥ ವಿಜಯ

ಅಧಿಪತಿಗಳಾಗಿ ಬಹುಕಾಲ ಅಬ್ಬೂರಿನಲ್ಲಿ ವಿರಾಜಿಸಿ, ಮಹಾಸಂಸ್ಥಾನದ ಆಡಳಿತಾದಿ ಸಕಲವನ್ನೂ ಸುವ್ಯವಸ್ಥಿತಗೊಳಿಸಿ, ಪಾಠಪ್ರವಚನ, ಆಶ್ರಮೋಚಿತ ಸಮಸ್ತ ಕಾರ್ಯಗಳನ್ನೂ ಯಶಸ್ವಿಯಾಗಿ ನಡೆಸುತ್ತಾ ಸರ್ವಮಾನ್ಯರಾದರು.

ಕೆಲದಿನಗಳಾದ ಮೇಲೆ ಶ್ರೀವ್ಯಾಸರಾಜ ಗುರುವರ್ಯರು ತಮ್ಮ ವಿದ್ಯಾಗುರುಗಳಾದ ಲಕ್ಷ್ಮೀನಾರಾಯಣ ಮುನಿಗಳ ದರ್ಶನಾಕಾಂಕ್ಷಿಗಳಾಗಿ ಮಹಾಸಂಸ್ಥಾನದೊಡನೆ ಮುಳಬಾಗಿಲಿಗೆ ದಯಮಾಡಿಸಿದರು. ಶಿಷ್ಯರ ಆಗಮನದಿಂದ ಗುರುಗಳಿಗೆ ಬಹಳ ಸಂತೋಷವಾಯಿತು. ಶ್ರೀಲಕ್ಷ್ಮೀನಾರಾಯಣ ಯೋಗಿಗಳು ನಾಲ್ಕಾರು ತಿಂಗಳುಗಳಲ್ಲಿಯೇ ಶ್ರೀವ್ಯಾಸತೀರ್ಥರಿಗೆ ಶ್ರೀಸರ್ವಜ್ಞಶಾಸ್ತ್ರದ ಪಾಠಪ್ರವಚನ ಸತ್ಸಂಪ್ರದಾಯ ರಹಸ್ಯಗಳನ್ನು ಅತ್ಯಂತತೃಪ್ತಿಕರವಾಗಿ ಉಪದೇಶಮಾಡಿ ಅದರಲ್ಲಿ ಶ್ರೀವ್ಯಾಸತೀರ್ಥರು ಅಗ್ರಗಣ್ಯರಾಗುವಂತೆ ಮಾಡಿ ಪರಮಾನುಗ್ರಹ ಮಾಡಿದರು.

o o o o o

## ೨೫. ಉತ್ತರಭಾರತ ಸಂಚಾರ

ಶ್ರೀಮದಾಚಾರ್ಯ ಮಹಾಸಂಸ್ಥಾನಾಧಿಪತಿಗಳಾಗಿ ಶ್ರೀ ವ್ಯಾಸರಾಜಗುರುಸಾರ್ವಭೌಮರು ಪರಂಪರಾಗತ ಸಂಪ್ರದಾಯದಂತೆ ಮಹಾಸಂಸ್ಥಾನಾಧಿಪತಿಗಳಾದ ಮೇಲೆ ಮೊದಲಬಾರಿಗೆ ತೀರ್ಥಕ್ಷೇತ್ರ ಸಂದರ್ಶನ, ಸಿದ್ಧಾಂತಸ್ಥಾಪನೆ, ಶಿಷ್ಯ-ಭಕ್ತ ಜನೋದ್ಧಾರಾರ್ಥವಾಗಿ ಉತ್ತರಭಾರತ ದಿಗ್ವಿಜಯವನ್ನು ಕೈಗೊಳ್ಳಲು ನಿಶ್ಚಯಿಸಿ ಆ ವಿಚಾರವನ್ನು ಶ್ರೀಲಕ್ಷ್ಮೀನಾರಾಯಣ ಮುನಿಗಳಲ್ಲಿ ವಿಜ್ಞಾಪಿಸಿದರು.

ದೇಶಸಂಚಾರ, ಪಾಠಪ್ರವಚನ, ಪರವಾದಿ ದಿಗ್ವಿಜಯ, ಸಿದ್ಧಾಂತ ಸ್ಥಾಪನೆ, ಲೋಕಸಂಗ್ರಹ, ಶಿಷ್ಯ-ಭಕ್ತಜನರ ಉದ್ಧಾರ, ಕಲ್ಯಾಣಾದಿಗಳು ಮಠಗಳ ಮುಖ್ಯ ಕರ್ತವ್ಯವಾಗಿದ್ದು ಈಪೂರ್ವ ಸಂಪ್ರದಾಯವು ಅತಿಪ್ರಾಚೀನ ಕಾಲದಿಂದಲೂ ನಡೆದುಬಂದಿದೆ.

ಮಠವೆಂದರೆ "ಮಠ ಛಾತ್ರಾದಿನಿಲಯಃ" ಎಂಬಂತೆ ವಿದ್ಯಾಪೀಠವು. ಈ ಮಠಗಳು ಒಂದೆಡೆ ನೆಲೆಸಿದ್ದಾಗಲೂ, ಸಂಚಾರದಲ್ಲಿರುವಾಗಲೂ, ಪಾಠಪ್ರವಚನ, ವಾದಿದಿಗ್ವಿಜಯ, ಸಿದ್ಧಾಂತ ಸ್ಥಾಪನೆ, ಶಿಷ್ಯ-ಭಕ್ತ-ಜನೋದ್ಧಾರಾದಿ ಕಾರ್ಯವನ್ನು ಮಾಡುತ್ತಾ ಬಂದಿರುವುದೂ ಇತಿಹಾಸಪ್ರಸಿದ್ಧವಾಗಿದೆ. ಮಠಗಳೆಂದರೆ ಸಂಚಾರಿ

ವಿದ್ಯಾಪೀಠಗಳೇ ಆಗಿದ್ದವು.[1]

ಈ ಎಲ್ಲ ವಿಚಾರಗಳನ್ನೂ ಶ್ರೀ ಲಕ್ಷ್ಮೀನಾರಾಯಣಮುನಿಗಳ ಉಪದೇಶದಿಂದ ಚೆನ್ನಾಗಿ ಅರಿತಿದ್ದರಿಂದಲೇ ಶ್ರೀವ್ಯಾಸರಾಜಗುರುಗಳು ಶ್ರೀಮದಾಚಾರ್ಯರ ಮಹಾಸಂಸ್ಥಾನದ ಮುಖ್ಯಕರ್ತವ್ಯವನ್ನು ಯಶಸ್ವಿಯಾಗಿ ಜರುಗಿಸಲು ಸಂಕಲ್ಪಿಸಿ ಕಂಚಿಯ ದಿಗ್ವಿಜಯಾನಂತರ ವ್ಯಾಪಕವಾದ ಉತ್ತರಭಾರತ ದಿಗ್ವಿಜಯವನ್ನು[2] ಕೈಗೊಂಡರು.

ಶ್ರೀ ವ್ಯಾಸರಾಜರು ಲಕ್ಷ್ಮೀನಾರಾಯಣ ಮುನಿಗಳಲ್ಲಿ ತಮ್ಮ ದಿಗ್ವಿಜಯ ಯಾತ್ರೆಯ ವಿಚಾರವನ್ನರುಹಿದಾಗ ಗುರುಗಳು ಪರಮ ಸಂತುಷ್ಟರಾಗಿ ಪ್ರಿಯ ಶಿಷ್ಯರನ್ನು ಪ್ರೋತ್ಸಾಹಿಸಿ ಆಶೀರ್ವದಿಸಿದರು. ಕ್ರಿ.ಶ.1467-68ರಲ್ಲಿ ನವರಾತ್ರಿಯ ವಿಜಯದಶಮಿಯಂದು ಗುರುಗಳೊಡನೆ ಶ್ರೀನರಸಿಂಹತೀರ್ಥಕ್ಕೆ ಬಂದು ಅಲ್ಲಿ ಶ್ರೀನರಸಿಂಹದೇವರ ಸನ್ನಿಧಿಯಲ್ಲಿ ಪೂಜಾರಾಧನೆಗಳನ್ನು ಮುಗಿಸಿ, ಬನ್ನಿ ಮುಡಿದು, ಶ್ರೀನೃಸಿಂಹದೇವರಲ್ಲಿ ಪ್ರಾರ್ಥಿಸಿ ಪ್ರಸಾದಸ್ವೀಕರಿಸಿ ಮಿತಪರಿವಾರಸಮೇತರಾಗಿ ಉತ್ತರಭಾರತಸಂಚಾರ ಕೈಗೊಂಡು ಪ್ರಯಾಣಬೆಳೆಸಿದರು. ಶ್ರೀಪಾದಂಗಳವರು ಪಂಪಾ ಕ್ಷೇತ್ರಕ್ಕೆ ದಯಮಾಡಿಸಿ ವಿರೂಪಾಕ್ಷಸ್ವಾಮಿಯ ದರ್ಶನಪಡೆದು ತಮ್ಮ ಮೂಲಗುರುಗಳಾದ ಶ್ರೀಪದ್ಮನಾಭ, ನರಹರಿ, ಜಯತೀರ್ಥ ಮತ್ತು ಕವೀಂದ್ರರು, ವಾಗೀಶತೀರ್ಥರುಗಳ ಬೃಂದಾವನ ಸಂದರ್ಶನಮಾಡಿ ಹಸ್ತೋದಕವನ್ನು ಸಮರ್ಪಿಸಿ ಫಲಮಂತ್ರಾಕ್ಷತೆ ಸ್ವೀಕರಿಸಿ ಉತ್ತರಭಾರತದ ಕಡೆ ಸಂಚಾರ ಹೊರಟು ಕಾಶೀಕ್ಷೇತ್ರಕ್ಕೆ ದಯಮಾಡಿಸಿದರು.

---

1. In the good old days, The Mathams were always the Seats of learning. They were then not the petty things they are now. They answered the purpose of a Universities and unlike our modern universities, were both teaching and examining bodies. Kavya, Nataka, Alankara, The Vedanga, Vedas, Bhugola, Lilavathi and every department of knowledge was taught. And whenever parties wanted to give a Sound and liberal education to their sons, they sent them to the nearest Mathams.

—Indian Antiquary. Vol-XII-P. 532

2, ಶ್ರೀವ್ಯಾಸರಾಜರ ಮಠವು ಹೇಗಿತ್ತೆಂಬುದನ್ನು ಸೋಮನಾಥಕವಿಯು ಬಹು ಸುಂದರವಾಗಿ ಹೀಗೆ ನಿರೂಪಿಸಿದ್ದಾನೆ...

"ತದೀಯ ಪಾವನಚರಿತಶೋಭಿತಂ ಸಕಲವಿಬುಧಗಣ ಪ್ರವರಾಭರಣಂ ನಿರುಪಾಹರಣ ಮುಪಾಹರಣಮ್ ॥

—ಶ್ರೀವ್ಯಾಸಯೋಗಿಚರಿತೆ

ಕಾಶೀಕ್ಷೇತ್ರವು ಮೊದಲಿನಿಂದಲೂ, ಭಾರತದೇಶದ ಶ್ರೇಷ್ಠಕ್ಷೇತ್ರಗಳಲ್ಲೊಂದಾಗಿದ್ದು ಅಲ್ಲಿ ಪವಿತ್ರಗಂಗಾನದಿಯು ಹರಿಯುತ್ತಾ ಜನರ ಪಾಪನಿವಾರಣೆಮಾಡಿ ತನುಮನಗಳನ್ನು ಪಾವನಗೊಳಿಸುತ್ತಿರುವಳು.

ಶ್ರೀಪಾದಂಗಳವರು ಕಾಶಿಯಲ್ಲಿ ಗಂಗಾಸ್ನಾನ, ಶ್ರೀಬಿಂದುಮಾಧವನ, ಶ್ರೀ ವಿಶ್ವೇಶ್ವರ, ವಿಶಾಲಾಕ್ಷಿಯರದರ್ಶನಮಾಡಿ ಪ್ರತಿದಿನ ಜನತೆಗೆ ಉಪದೇಶ ಮಾಡುತ್ತಾ ಧಾರ್ಮಿಕ ಜಾಗೃತಿಯನ್ನುಂಟುಮಾಡುತ್ತಿದ್ದರು. ಶ್ರೀಪಾದಂಗಳವರ ಭವ್ಯಾಕೃತಿ, ಜ್ಞಾನ-ಭಕ್ತಿ-ವೈರಾಗ್ಯಾದಿಗಳಿಂದ ಪ್ರಭಾವಿತನಾದ ಕಾಶಿಯ ದೊರೆ ಗುರುಗಳನ್ನು ಬಹುವಾಗಿ ಗೌರವಿಸುತ್ತಿದ್ದನು.

ಅಂದು ಉತ್ತರಭಾರತದಲ್ಲಿ ವಿಖ್ಯಾತವಾಗಿದ್ದ ವಿದ್ಯಾಕೇಂದ್ರಗಳಲ್ಲಿ ಕಾಶಿಯೂ ಒಂದಾಗಿತ್ತು. ಅಲ್ಲಿ ಕರ್ಮಠರೂ, ವೇದ, ವೇದಾಂಗಪಾರಂಗತರೂ, ನ್ಯಾಯ, ಮೀಮಾಂಸಾ, ವೇದಾಂತಾದಿ ಶಾಸ್ತ್ರಕೋವಿದರೂ, ವಾದವಿದ್ಯಾ ವಿಶಾರದರೂ ನೂರಾರು ಜನರಿದ್ದರು. ಮಿಥಿಲೆಯ ವಿದ್ಯಾಪೀಠದಂತೆ ಕಾಶಿಯ ವಿದ್ಯಾಪೀಠವೂ ಬಹು ಹೆಸರುವಾಸಿಯಾಗಿದ್ದಿತು.

ಶ್ರೀಗಳವರು ಕಾಶಿಗೆ ಹೋಗುವ ವೇಳೆಗಾಗಲೇ ಮೂರು ನಾಲ್ಕು ದಶಕಗಳಿಂದ ಶ್ರೀವಿಬುಧೇಂದ್ರತೀರ್ಥರು ಎರಡು ಮೂರು ಬಾರಿ ಕಾಶಿಗೆ ದಯಮಾಡಿಸಿ ತಮ್ಮ ಪಾಂಡಿತ್ಯ ಪ್ರಭಾವದಿಂದ ಅಲ್ಲಿನ ಪಂಡಿತ ಮಂಡಲಿಯನ್ನು ಜಯಿಸಿ ಮಾಧ್ವ ವಿಜಯದುಂದುಭಿಯನ್ನು ಮೊಳಗಿಸಿದ್ದರು. ಅದುವರೆಗೆ ಮಧ್ವಮತವೆಂದರೆ ಅದೇನು ಮಹಾ ಎಂಬ ತಾತ್ಸಾರವಿದ್ದು ಶ್ರೀವಿಬುಧೇಂದ್ರರ ವಿಜಯಪರಂಪರೆಯಿಂದಾಗಿ ಪಂಡಿತರಿಗೆ ದ್ವೈತಮತದ ಬಗ್ಗೆ ಗೌರವವುಂಟಾಗಿತ್ತು. ಇಂಥ ದ್ವೈತ ಸಿದ್ಧಾಂತ ಸ್ಥಾಪನಾಚಾರ್ಯರಾದ ಶ್ರೀಮನ್ಮಧ್ವಾಚಾರ್ಯರ ಮಹಾಸಂಸ್ಥಾನಾಧೀಶರೇ ಶ್ರೀ ವ್ಯಾಸರಾಜಗುರುವರ್ಯರೆಂದು ತಿಳಿದಮೇಲೆ, ಮತ್ತು ತರುಣರಾದರೂ ಜ್ಞಾನವೃದ್ಧರಾಗಿ ಕಂಚಿಯ ವಿದ್ಯಾಪೀಠದ ಸಮಸ್ತ ಪ್ರಕಾಂಡಪಂಡಿತರನ್ನು ಜಯಿಸಿದ ಕೀರ್ತಿಯನ್ನು ಕೇಳಿ ಕಾಶಿಯ ಪಂಡಿತರು, ಆಸ್ತಿಕರು ಗುರುವರರನ್ನು ಬಹುಗೌರವಾದರಗಳಿಂದ ಕಾಣಲಾರಂಭಿಸಿದರು.

ಇಷ್ಟಾದರೂ ಶ್ರೀಯವರು ಮೇಲಿಂದ ಮೇಲೆ ಪ್ರತಿವಾದಿಗಳನ್ನು ಎದುರಿಸುವ ಪ್ರಸಂಗಗಳಿಗೇನೂ ಕಡಿಮೆ ಇರಲಿಲ್ಲ. ಶ್ರೀಗಳವರು ಅಲ್ಲಿ ನಾಲ್ಕಾರು ತಿಂಗಳ ಕಾಲ ವಾಸಮಾಡಿದಾಗ ಪ್ರತಿದಿನವೂ ಒಂದೊಂದು ಶಾಸ್ತ್ರದಲ್ಲಿ ಖ್ಯಾತ ಪಂಡಿತರೊಡನೆ ವಾಕ್ಯಾರ್ಥ ಮಾಡಬೇಕಾಗಿ ಬಂದಿತು. ಶ್ರೀಹರಿವಾಯುಗಳ ಅನುಗ್ರಹ, ಶ್ರೀಲಕ್ಷ್ಮೀನಾರಾಯಣ ಮುನಿಗಳ ಆಶೀರ್ವಾದ ಬಲದಿಂದ ಸಕಲ ವಿದ್ವಾಂಸರನ್ನೂ ವಾದದಲ್ಲಿ ಸೋಲಿಸಿ ಅಪೂರ್ವವಿಜಯಕೀರ್ತಿಗಳನ್ನು ಗಳಿಸಿದರು. ಅನೇಕ ಆಸ್ತಿಕರು ಶ್ರೀಯವರ ಶಿಷ್ಯರಾದರು. ಕಾಶಿಯ ಮಹಾರಾಜ ಗುರುಗಳನ್ನು ಬಗೆ ಬಗೆಯಿಂದ ಸನ್ಮಾನಿಸಿ ಕೃತಾರ್ಥನಾದ.

ಕಾಶಿಯ ಈ ದಿಗ್ವಿಜಯವು ಶ್ರೀಪಾದಂಗಳವರ ವಿಜಯಪರಂಪರೆಯ ಇತಿಹಾಸದಲ್ಲಿ ಶಾಶ್ವತವಾಗಿ ಬೆಳಗುವ ದ್ವಿತೀಯ ಘಟ್ಟವೆಂದು ಹೇಳಬಹುದು.

ಶ್ರೀವ್ಯಾಸರಾಜ ಗುರುವರ್ಯರು ಸರ್ವಮಾನ್ಯರಾಗಿ ಕಾಶಿಯಿಂದ ಹೊರಟು ಸಂಚಾರ ಕ್ರಮದಿಂದ ಪ್ರಯಾಗ, ಗಯಾ, ಅಯೋಧ್ಯಾ, ಪುರಿಜಗನ್ನಾಥ, ಮಥುರಾ, ಬೃಂದಾವನ, ಹರಿದ್ವಾರ, ಹೃಷೀಕೇಶ, ಬದರೀಕ್ಷೇತ್ರಗಳನ್ನು ಸಂದರ್ಶಿಸಿ ಒಂದೊಂದು ಕ್ಷೇತ್ರಗಳಲ್ಲಿಯೂ ಬಹುಕಾಲ ವಾಸಮಾಡಿ, ಎಲ್ಲಕಡೆ ಭಗವದನುಗ್ರಹವನ್ನು ಸಂಪಾದಿಸಿ ಕುರುಕ್ಷೇತ್ರವನ್ನು ಸಂದರ್ಶಿಸಲಾಶಿಸಿ ಮಾರ್ಗಮಧ್ಯದಲ್ಲಿ ದೆಹಲಿಗೆ ಭೇಟಿ ನೀಡಿದರು.

ಆಗ ಅಫ್ಘನ್ ರಾಜವಂಶೀಯನಾದ ಸುಲ್ತಾನ್ ಬಹುಲೂಲ್ ಲೂದಿಯು ದೆಹಲಿಯ ದೊರೆಯಾಗಿದ್ದನು. ಅವನು ಸ್ವಾಭಾವಿಕವಾಗಿ ದೈವಭಕ್ತನಾಗಿದ್ದನು. ಸಾಧು, ಸಂತರು, ಜ್ಞಾನಿಗಳು, ಪಂಡಿತರುಗಳನ್ನು ಕಂಡರೆ ಅವನಿಗೆ ವಿಶೇಷ ಗೌರವವಿತ್ತು. ಅಂತೆಯೇ ಶ್ರೀವ್ಯಾಸರಾಜ ಗುರುಸಾರ್ವಭೌಮರು ದೆಹಲಿಗೆ ಬಂದಾಗ, ಶ್ರೀಗಳವರ ಜ್ಞಾನ-ಭಕ್ತಿ-ವೈರಾಗ್ಯ, ಪಾಂಡಿತ್ಯ-ತೇಜಸ್ಸು, ಧರ್ಮಪ್ರಸಾರ-ಸಜ್ಜನೋದ್ಧಾರಾದಿ ಸದ್ಗುಣಗಳ ವಿಚಾರವನ್ನು ದರ್ಬಾರಿನ ಪಂಡಿತರು, ರಾಜಕೀಯ ಮುಖಂಡರುಗಳಿಂದ ತಿಳಿದು ಅವರ ದರ್ಶನಮಾಡಲು ಉತ್ಸುಕನಾದ.

ಒಂದು ದಿನ ಅಶ್ವಾರೋಹಿಯಾಗಿ ಯಮುನಾ ನದಿಯ ತೀರದಲ್ಲಿ ವಾಯುವಿಹಾರಕ್ಕಾಗಿ ಹೊರಟಿದ್ದ ಸುಲ್ತಾನ್ ಲೂದಿಯು ಯಮುನೆಯ ದಡದಲ್ಲಿ ಸಹಸ್ರಾರು ಜನರಿಗೆ ತತ್ವೋಪದೇಶಮಾಡುತ್ತಿದ್ದ ಅತ್ಯಂತ ತೇಜಸ್ವಿಗಳಾದ ಶ್ರೀವ್ಯಾಸತೀರ್ಥರನ್ನು ಕಂಡನು. ಶ್ರೀಯವರ ಅಸ್ಖಲಿತ ವಾಗ್ವೈಖರಿಯನ್ನು ಕೇಳಿ ಮುಗ್ಧನಾದನು. ಶ್ರೀಯವರ ವರ್ಚಸ್ಸಿನಿಂದ ಪ್ರಭಾವಿತನಾದ ದೇಹಲಿಯ ಸುಲ್ತಾನ ಗುರುಗಳ ಸಮೀಪಕ್ಕೆ ಬಂದು ಕುದುರೆಯಿಂದಿಳಿದು ವಿನಯದಿಂದ ತನ್ನ ಪದ್ಧತಿಯಂತೆ ನಮಸ್ಕರಿಸಿದನು. ಅವನು ದೆಹಲಿಯ ಸುಲ್ತಾನನೆಂದು ಅರಿತ ಶ್ರೀವ್ಯಾಸರಾಜರು ಅವನನ್ನು ನಗೆಮೊಗದಿಂದ ಸ್ವಾಗತಿಸಿ. ಕುಶಲ ಪ್ರಶ್ನೆಮಾಡಿ ಅವನಿಗೆ ಶ್ರೇಯಸ್ಸಾಗುವಂತೆ ಫಲ ಮಂತ್ರಾಕ್ಷತೆಯಿತ್ತು ಆಶೀರ್ವದಿಸಿದರು.

ಸುಲ್ತಾನ್ ಬಹಲೂಲ್ ಲೂದಿಯು ಗುರುಗಳನ್ನು ತನ್ನ ಅರಮನೆಗೆ ಬಂದು ಅನುಗ್ರಹಿಸಬೇಕೆಂದು ಪ್ರಾರ್ಥಿಸಿದನು. ಅವನ ಕೋರಿಕೆಯಂತೆ ಶ್ರೀವ್ಯಾಸತೀರ್ಥರು ಮರುದಿನ ಮಿತಪರಿವಾರದೊಡನೆ ಅರಮನೆಗೆ ತೆರಳಿದರು. ಸುಲ್ತಾನ ಗುರುಗಳನ್ನು ರಾಜ್ಯವೈಭವದಿಂದ ಸ್ವಾಗತಿಸಿ ಸತ್ಕರಿಸಿದನು. ಮತ್ತು ಅವರಿಗೆ ಸುಲ್ತಾನರ ವಿಶೇಷ ಬಿರುದೆನಿಸಿದ ಒಂಟೆಯ ಮೇಲೆ ಹಸರು ಛತ್ರಿಯನ್ನು ಹಿಡಿದುಕೊಂಡು ಹೋಗುವ ಅಸಾಧಾರಣ ಗೌರವ ಪ್ರಶಸ್ತಿಯನ್ನೂ ಧನಕನಕಾಭರಣ ವಸ್ತ್ರಗಳನ್ನೂ, ಅರ್ಪಿಸಿ,

ತನ್ನ ರಾಜ್ಯದಲ್ಲಿ ಶ್ರೀಯವರು ಸಂಚರಿಸುವಾಗ ಅವರಿಗೆ ಎಲ್ಲೆಡೆ ಸಕಲ ಸೌಕರ್ಯಗಳನ್ನೂ ಒದಗಿಸುವಂತೆ ಹುಕುಂ ಪತ್ರವನ್ನೂ ಸಮರ್ಪಿಸಿ ಕೃತಾರ್ಥನಾದ.*

ಶ್ರೀಪಾದಂಗಳವರು ಬಹುದಿನ ದೆಹಲಿಯಲ್ಲಿದ್ದು, ಅಲ್ಲಿಂದ ಕುರುಕ್ಷೇತ್ರ ಸಂದರ್ಶನ ಮಾಡಿಬಂದು ಮತ್ತೆ ದೆಹಲಿಯಿಂದ ಮಿಥಿಲೆಯ ಕಡೆಗೆ ದಿಗ್ವಿಜಯಮಾಡಿದರು.

## ೨೬. ಶ್ರೀಪಾದರಾಜ ಪ್ರಶಸ್ತಿ

ಕ್ರಿ.ಶ. 1470ರ ಹೊತ್ತಿಗಾಗಲೇ ಚಂದ್ರಗಿರಿಯ ರಾಜನೂ, ಮುಳಬಾಗಿಲು ಪೆನಗೊಂಡೇ ಮಂಡಲಗಳ ಮಹಾಮಂಡಲಾಧಿಪತಿಯೂ, ಕನ್ನಡ ಸಾಮ್ರಾಜ್ಯ ಧುರಂಧರನೂ ಆಗಿದ್ದ ಸಾಳುವ ನರಸಿಂಹಭೂಪಾಲನು ಅತ್ಯಂತ ಪ್ರಬಲನಾಗಿದ್ದನು, ಶ್ರೀಲಕ್ಷ್ಮೀನಾರಾಯಣಮುನಿಗಳ ಅನುಗ್ರಹದಿಂದಲೇ ತಾನು ಇಂತು ಅಭಿವೃದ್ಧಿಸಿ ಕೀರ್ತಿಗಳಿಸಿರುವೆನೆಂದು ಅವನು ಭಾವಿಸಿದ್ದನು. ಅಂತೆಯೇ ಶ್ರೀಪಾದಂಗಳವರನ್ನು ವಿಶೇಷರೀತಿಯಿಂದ ಸೇವಿಸಿ ಗೌರವಿಸಬೇಕೆಂದು ಅವನು ಆಶಿಸಿದ್ದನು. ಸ್ವಾಭಾವಿಕವಾಗಿ ವಿದ್ವಜ್ಜನಪಕ್ಷಪಾತಿಯಾದ ಅವನ ಒಲವು ಯಾವಾಗಲೂ ವಿದ್ಯೆಯತ್ತಲೇ ಇದ್ದಿತು. ಭಾರತದ ಅನೇಕ ವಿದ್ಯಾಕೇಂದ್ರಗಳ ವಿಚಾರ ಕೇಳಿ ತಿಳಿದಿದ್ದ ಅವನಿಗೆ ಮೊದಲಿನಿಂದಲೂ ವಿದ್ಯೆ, ಕಲೆಗಳಿಗೆ ತವರುಮನೆಯೆನಿಸಿದ್ದ ಕರ್ನಾಟಕದಲ್ಲಿ ಜಗತ್ತಿನಲ್ಲೇ ಅತ್ಯಂತ ಶ್ರೇಷ್ಠವಾದ ಒಂದು ವಿಶ್ವವಿದ್ಯಾನಿಲಯವನ್ನು ಪ್ರಾರಂಭಿಸಿ ನಡೆಸಿಕೊಂಡುಬಂದು, ಸಕಲವಿದ್ಯೆಗಳಿಗೆ ಪ್ರೋತ್ಸಾಹನೀಡಬೇಕೆಂದು ಅವನು ತವಕಿಸುತ್ತಿದ್ದನು. ಆದ್ದರಿಂದಲೇ ಸಾಳುವ ನರಸಿಂಹಭೂಪತಿಯು ಲಕ್ಷ್ಮೀನಾರಾಯಣಮುನಿಗಳನ್ನು ಶ್ರೀರಂಗದಿಂದ ಮುಳುಬಾಗಿಲಿಗೆ ಕರೆತಂದು ಅವರ ಅಧ್ಯಕ್ಷತೆಯಲ್ಲಿ ಒಂದು ವಿದ್ಯಾಪೀಠವನ್ನು ಸ್ಥಾಪಿಸಿ ಅದಕ್ಕೆ ಬೇಕಾದ ಸಕಲಸೌಕರ್ಯಗಳನ್ನು ಏರ್ಪಡಿಸಿಕೊಟ್ಟಿದ್ದನು. ಅದು ಈಗಾಗಲೇ ದಕ್ಷಿಣಭಾರತದಲ್ಲಿ ಪ್ರಖ್ಯಾತಿಪಡೆದಿದ್ದಿತು. ಅದು ಮತ್ತಷ್ಟು ಅಭಿವೃದ್ಧಿಸಬೇಕಾದರೆ ಅಲ್ಲಿ ಆಗಾಗ್ಗೆ ಅಖಿಲಭಾರತದ ಷಡ್ದರ್ಶನ ವಿದ್ವನ್ಮಹಾಸಭೆಗಳನ್ನು ನೆರವೇರಿಸಬೇಕೆಂದು ಅವನು ಮನಸಾ ಸಂಕಲ್ಪಿಸಿದ್ದನು. ಇವೆಲ್ಲ ಒನ್ನೆಲೆಯನ್ನೂ ನರಸಿಂಹರಾಜನು ತನ್ನ ಗುರುಗಳಾದ ಶ್ರೀಲಕ್ಷ್ಮೀನಾರಾಯಣ ಮುನಿಗಳಲ್ಲಿ ವಿಜ್ಞಾಪಿಸಿದನು. ವಿದ್ಯೆಗಳ ಬಗೆಗೆ, ವಿದ್ವಾಂಸರ ವಿಷಯವಾಗಿ

---

*ಸುಲ್ತಾನ ಬಹಲೂಲ್ ಲೂದಿಯ ಮಗನು ಮೃತನಾದನೆಂದು ಅವನ ಗೋರಿಮಾಡಿದ್ದಾಗ ಶ್ರೀವ್ಯಾಸರಾಜಗುರುಗಳು ರಾಜಕುಮಾರನು ಸತ್ತಿಲ್ಲವೆಂದು ಹೇಳಿ ಲೂದಿಯ ಸಮಕ್ಷ ಗೋರಿಯಿಂದ ರಾಜಕುಮಾರನ ಕಳೇಬರವನ್ನು ತೆಗೆಸಿ ಕಮಂಡಲೋದಕವನ್ನು ಪ್ರೋಕ್ಷಿಸಿ ಶ್ರೀಹರಿಯ ಅನುಗ್ರಹದಿಂದ ಅವನನ್ನು ಉಜ್ಜೀವನಗೊಳಿಸಿ ಹಿಂದೂಧರ್ಮ-ಮಂತ್ರಗಳ ಪ್ರಭಾವವನ್ನು ತೋರಿದರೆಂದೂ ಅದರಿಂದ ಪ್ರೀತನಾದ ಸುಲ್ತಾನ ಗುರುಗಳಿಗೆ ಒಂಟೆಯಮೇಲೆ ಹಸುರುಛತ್ರಿಯ ಗೌರವ ಸಲ್ಲಿಸಿದನೆಂದೂ ಒಂದು ಕಥೆಯಿದೆ :

ಅವನಿಗಿರುವ ಅಭಿಮಾನವನ್ನು ಕಂಡು ಹರ್ಷಿಸಿ ಶ್ರೀಗಳವರು ಅವನನ್ನು ಪ್ರೋತ್ಸಾಹಿಸಿದರು. ಮತ್ತು ಈ ಮಹಾಸಭೆಯು ತಮ್ಮ ಪೂಜ್ಯಗುರುಪಾದರಾದ ಶ್ರೀವಿಬುಧೇಂದ್ರತೀರ್ಥಯತಿಸಾರ್ವಭೌಮರ ಮಹಾಧ್ಯಕ್ಷತೆಯಲ್ಲಿ ಜರುಗಿದರೆ ಅದಕ್ಕೆ ಹೆಚ್ಚು ಮಹತ್ವ ಪ್ರಾಪ್ತವಾಗುವುದೆಂದು ನಿಶ್ಚಯಿಸಿದ ಶ್ರೀಗಳವರು ನರಸಿಂಹರಾಜನಿಗೆ ಶ್ರೀವಿಬುಧೇಂದ್ರಗುರುಗಳ ಮಹತ್ವ, ಮಹಿಮಾದಿಗಳನ್ನು ನಿರೂಪಿಸಿ, ರಾಜನ ಸುಕೃತಫಲವಾಗಿಯೋ ಎಂಬಂತೆ ಉತ್ತರಭಾರತ ತೀರ್ಥಕ್ಷೇತ್ರ ಸಂಚಾರದಲ್ಲಿದ್ದ ಗುರುಗಳು ಇದೀಗತಾನೇ ಕುಂಭಕೋಣಕ್ಕೆ ದಯಮಾಡಿಸಿರುವ ವಿಚಾರವನ್ನೂ ತಿಳಿಸಿ ಮಹಾಧ್ಯಕ್ಷತೆ ವಹಿಸಲು ಅವರನ್ನು ಆಹ್ವಾನಿಸಬೇಕೆಂದು ಆಜ್ಞಾಪಿಸಿದರು.

ನರಸಿಂಹಭೂಪಾಲನು ತನ್ನ ಆತ್ಮೀಯ ಅಧಿಕಾರಗಳನ್ನೂ ಶ್ರೀಪಾದಂಗಳವರ ಮಠದ ಪಂಡಿತರನ್ನೂ ತನ್ನ ಮತ್ತು ಶ್ರೀಗಳವರ ವಿಜ್ಞಾಪನಾ ಪತ್ರಗಳೊಡನೆ ಕುಂಭಕೋಣಕ್ಕೆ ಕಳಿಸಿ ಶ್ರೀವಿಬುಧೇಂದ್ರ ಗುರುಗಳನ್ನು ಕರೆಯಿಸಿಕೊಂಡನು. ಪ್ರಿಯಶಿಷ್ಯರನ್ನು ಬಹುವರ್ಷಗಳಮೇಲೆ ಕಂಡು ಗುರುಪಾದರು ಅವರನ್ನು ಭರದಿಂದಪ್ಪಿ ಆನಂದಬಾಷ್ಪಸುರಿಸಿದರು. ಶ್ರೀಲಕ್ಷ್ಮೀನಾರಾಯಣಮುನಿಗಳು ಗುರುಗಳಿಗೆ ಪದೇಪದೇ ಪ್ರಣಾಮಮಾಡಿ ತಮ್ಮ ಗುರುಭಕ್ತಿಯನ್ನು ಸಮರ್ಪಿಸಿದರು. ಗುರುಗಳು ಬಂದಿದ್ದರಿಂದ ಶ್ರೀಗಳವರಿಗೆ ಚತುರ್ಭುಜವಾದಂತಾಯಿತು. ಸಾಳುವ ನರಸಿಂಹನು ಮುಳಬಾಗಿಲಿನಲ್ಲಿ ದಕ್ಷಿಣಭಾರತದ ಸಕಲ ವಿದ್ವಜ್ಜನರನ್ನು ಕರೆಯಿಸಿಕೊಂಡು ಷಡ್ದರ್ಶನ ವಿದ್ವನ್ಮಹಾಸಮ್ಮೇಳನವನ್ನು ಜರುಗಿಸಿದನು.

ಶ್ರೀವಿಬುಧೇಂದ್ರಗುರುಗಳ ಮಹಾಧ್ಯಕ್ಷತೆಯಲ್ಲಿ ಸಭೆಯು ಪ್ರಾರಂಭವಾಯಿತು. ಅದೊಂದು ಅಭೂತಪೂರ್ವ ವಿದ್ವತ್ಸಭೆಯಾಗಿತ್ತು. ಜಗಜ್ಜೇತಾರ ವಾದಮಲ್ಲರೂ, ಸರಸ್ವತಿಯ ಅಪರಾವತಾರರೂ, ಶ್ರೀಮಧ್ವಾಚಾರ್ಯರ ಮಹಾಸಂಸ್ಥಾನ ಸಾರ್ವಭೌಮರೂ ಆದ ಶ್ರೀವಿಬುಧೇಂದ್ರತೀರ್ಥರೇ ಮಹಾಧ್ಯಕ್ಷರಾಗಿದ್ದುದು ಅದಕ್ಕೆ ಕಾರಣವಾಗಿತ್ತು. ದಕ್ಷಿಣಭಾರತದ ಎಲ್ಲ ಭಾಗಗಳಿಂದ, ವಿದ್ಯಾಕೇಂದ್ರಗಳಿಂದ ಸಕಲಶಾಸ್ತ್ರಪಾರೀಣರಾದ ಪಂಡಿತಪ್ರಕಾಂಡರು, ಕವಿಗಳು, ಸಾಹಿತಿಗಳು, ಕಲೆಗಾರರು ಹರಿದಾಸಪಂಥದವರುಗಳಲ್ಲದೆ ಅನೇಕ ಪೀಠಾಧೀಶರು, ಪರಮಹಂಸರುಗಳೂ ನೂರಾರು ಜನರು ಎಲ್ಲ ಭಾಗಗಳಿಂದ ಈ ಅಪೂರ್ವ ವಿದ್ವತ್ಸಭೆಯಲ್ಲಿ ಭಾಗವಹಿಸಲು ಆಸ್ತಿಕರೂ ಸಹಸ್ರಸಂಖ್ಯೆಯಲ್ಲಿ ಮುಳಬಾಗಿಲಿಗೆ ಬಂದು ಸೇರಿದ್ದರು. ಸಂತೋಷ-ಸಂಭ್ರಮಗಳಿಂದ ವಿದ್ವತ್ಸಭೆಯು ವೈಭವದಿಂದ ಪ್ರಾರಂಭವಾಯಿತು.

ಹನ್ನೆರಡುದಿವಸಗಳವರೆಗೆ ಜರುಗಿದ ಈ ವಿದ್ವತ್ಸಭೆಯು ಎಲ್ಲವಿಧದಿಂದಲೂ ಅಪೂರ್ವವೇ ಆಗಿದ್ದಿತು. ಕರ್ನಾಟಕ ಸಾಮ್ರಾಜ್ಯದ ಪ್ರಬಲಮುತ್ಸದ್ದಿಯೂ, ಮಹಾರಾಜನೂ ಆದ ಸಾಳುವ ನರಸಿಂಹ ಭೂಪಾಲನೇ ಮುಂದಾಳಾಗಿ ನಿಂತು ನೆರವೇರಿಸುತ್ತಿದ್ದುದರಿಂದ ಯಾವುದಕ್ಕೂ ಕೊರತೆ ಎಂಬುದೇ ಇರಲಿಲ್ಲ.

ಪ್ರತಿದಿನವೂ ವಿವಿಧಶಾಸ್ತ್ರಗಳಲ್ಲಿ ವಾಕ್ಯಾರ್ಥಗಳಾಗುತ್ತಿದ್ದಿತು. ನೂರಾರು ಜನ ವಿದ್ಯಾರ್ಥಿಗಳು ವಿವಿಧವಿದ್ಯೆಗಳಲ್ಲಿ ಪರೀಕ್ಷೆಕೊಡುತ್ತಿದ್ದರು. ಅಷ್ಟಾವಧಾನ, ಶತಾವಧಾನಗಳೂ, ಆಶುಕವಿತಾಸ್ಪರ್ಧೆಗಳೂ, ಸಂಗೀತ, ಹರಿದಾಸಸಮ್ಮೇಳನಾದಿ ಗಳೂ ಜರುಗುತ್ತಿದ್ದವು. ಶ್ರೀಲಕ್ಷ್ಮೀನಾರಾಯಣಮುನಿಗಳು ಪ್ರತಿಯೊಂದು ಶಾಸ್ತ್ರ ಗಳಲ್ಲಿ ತೋರುತ್ತಿದ್ದ ಪ್ರತಿಭೆ, ವಾದವೈಖರಿ. ಪರೀಕ್ಷಿಸುವ ಶೈಲಿ ಇವುಗಳೆಲ್ಲವನ್ನೂ ಕಂಡು ವಿದ್ವನ್ಮಂಡಲಿ, ಪೀಠಾಧೀಶರು, ಪರಮಹಂಸರು ವಿಸ್ಮಿತರಾಗುತ್ತಿದ್ದರು, ಶ್ರೀವಿಬುಧೇಂದ್ರತೀರ್ಥರೇ, ಪ್ರಿಯಶಿಷ್ಯರ ಅಗಾಧ ಪ್ರಜ್ಞಾತಾಂಡವ ಪ್ರತಿಭಾದಿ ಗಳನ್ನು ಕಂಡು ಮುಗ್ಧರಾಗುತ್ತಿದ್ದರೆಂದಮೇಲೆ ಉಳಿದವರ ಪಾಡೇನು ?

ಇದೇ ಸಂದರ್ಭದಲ್ಲಿ ಶ್ರೀಲಕ್ಷ್ಮೀನಾರಾಯಣಮುನಿಗಳು ತಾವು ರಚಿಸಿದ್ದ "ವಾಗ್ವಜ್ರ" ಎಂಬ ಶ್ರೀಮನ್ನ್ಯಾಯಸುಧಾಗ್ರಂಥದ ಮೇಲಿನ ವಿದ್ವತ್ಪೂರ್ಣವೂ ಪ್ರೌಢವೂ ಆದ ವಾದಗ್ರಂಥರತ್ನವನ್ನು ಗುರುಗಳ ಆಜ್ಞೆಯಂತೆ ಸಭೆಯಲ್ಲಿ ಮೂರು ನಾಲ್ಕು ದಿನಗಳಕಾಲ ಅನುವಾದಮಾಡಿ ಸಕಲ ವಿದ್ವಜ್ಜನರನ್ನೂ ಧಾರ್ಮಿಕರನ್ನೂ ಸಹಸ್ರಾರು ಸಭಿಕರನ್ನೂ ಪರಮಾನಂದಗೊಳಿಸಿದರು. ವಿಬುಧೇಂದ್ರಗುರುಗಳು ವಾಗ್ವಜ್ರಗ್ರಂಥವನ್ನು ಸ್ವಹಸ್ತದಿಂದ ಪ್ರಕಾಶಗೊಳಿಸಿದರು. ಶ್ರೀಗಳವರ ವಿದ್ಯಾ ವೈಭವ ಗ್ರಂಥರಚನಾಚಾತುರ್ಯ, ಸಿದ್ಧಾಂತ ಸ್ಥಾಪನೆಗಳ ಜಾಣ್ಮೆಗಳಿಂದ ಅತ್ಯಂತ ಪ್ರಭಾವಿತರಾದ ವಿದ್ವಜ್ಜನರು, ಸನ್ಯಾಸಿಗಳು, ಪೀಠಾಧೀಶರುಗಳು ಶ್ರೀಗಳವರ ಕೃತಿಯು ಸಾರ್ವಕಾಲಿಕವಾಗಿ ನಿಂತು ದ್ವೈತಸಿದ್ಧಾಂತದ ವಿಜಯಪತಾಕೆಯಂತೆ ಮೆರೆಯುವ ಅಮೋಘಗ್ರಂಥರಾಜವಾಗಿದೆಯೆಂದು ಕೊಂಡಾಡಿದರು. ಮಾತ್ರವಲ್ಲ, ಇಂಥ ಅಪೂರ್ವಕೃತಿಯನ್ನು ರಚಿಸಿದ ಗುರುವರ್ಯರನ್ನು ಸರಿಯಾದ ರೀತಿಯಲ್ಲಿ ಸನ್ಮಾನಿಸಬೇಕೆಂದು ಆಶಿಸಿ ತಮ್ಮ ಬಯಕೆಯನ್ನು ಸಾಳುವ ನರಸಿಂಹರಾಜ ಮತ್ತು ಗುರುಪಾದರಾದ ಶ್ರೀವಿಬುಧೇಂದ್ರತೀರ್ಥರಲ್ಲಿ ವಿಜ್ಞಾಪಿಸಿದರು. ಮಹಾರಾಜನಿಗೆ ಪರಮಾನಂದವಾಯಿತು. ಶ್ರೀವಿಬುಧೇಂದ್ರಗುರುಗಳಿಗಾದ ಹರ್ಷವಂತೂ ವರ್ಣಿಸಲಸದಳ !

ಶ್ರೀವಿಬುಧೇಂದ್ರ ಗುರುಗಳ ಅಮೃತಹಸ್ತದಿಂದ ಮರುದಿನ ಶ್ರೀಲಕ್ಷ್ಮೀ ನಾರಾಯಣ ಮುನಿಗಳನ್ನು ರಾಜವೈಭವದೊಡನೆ ಸನ್ಮಾನಿಸುವುದೆಂದು ತೀರ್ಮಾನಿಸ ಲಾಯಿತು.

ಮರುದಿನ ವಿದ್ವನ್ಮಹಾಸಭೆಯ ಮುಕ್ತಾಯಸಮಾರಂಭಕಾಲದಲ್ಲಿ ಶ್ರೀವಿಬು ಧೇಂದ್ರತೀರ್ಥಶ್ರೀಪಾದಂಗಳವರು ಪ್ರಾಸ್ತಾವಿಕ ಭಾಷಣಮಾಡಿ ತಮ್ಮ ಶಿಷ್ಯರ ಸರ್ವಂಕಷ ಪಾಂಡಿತ್ಯ, ಪ್ರತಿಭೆ, ಗ್ರಂಥರಚನಾಚಾತುರ್ಯ, ಅವರು ನಡೆಸಿಕೊಂಡು ಬರುತ್ತಿರುವ ವಿದ್ಯಾಪೀಠದ ಮಹತ್ವಾದಿಗಳನ್ನು ನಿರೂಪಿಸಿ, "ವಾಗ್ವಜ್ರ"ದಂತಹ ಅಸಾಧಾರಣ ಶಾಸ್ತ್ರೀಯ ಗ್ರಂಥರತ್ನವನ್ನು ರಚಿಸಿ ದ್ವೈತಸಿದ್ಧಾಂತಕ್ಕೆ

ಅವಿಸ್ಮರಣೀಯ ಕೊಡುಗೆಯನ್ನಿತ್ತಿರುವ ಪ್ರಿಯಶಿಷ್ಯರಿಗೆ "ಯತಿಚಕ್ರವರ್ತಿ"ಎಂಬ ಪ್ರಶಸ್ತಿಯನ್ನು ತಮ್ಮ ಮೂಲಕ ಕೊಡಿಸಿ ಸನ್ಮಾನಿಸಲು ಮಹಾರಾಜರು, ಪೀಠಾಧೀಶರು, ಯತಿಗಳು, ಸಕಲಪಂಡಿತರೂ ನಿಶ್ಚಯಿಸಿರುವ ವಿಚಾರವನ್ನು ಸಂತೋಷಭರದಿಂದ ನಿರೂಪಿಸಿದರು.

ಶ್ರೀಲಕ್ಷ್ಮೀನಾರಾಯಣಮುನಿಗಳು ಮೇಲೆದ್ದುನಿಂತು "ದ್ವೈತಸಿದ್ಧಾಂತಕ್ಕೆ ಚಕ್ರವರ್ತಿಗಳು ಒಬ್ಬರೇ ! ಅವರೇ ನಮ್ಮ ಪೂಜ್ಯಗುರುಪಾದರಾದ ಶ್ರೀವಿಬುಧೇಂದ್ರಗುರುಸಾರ್ವಭೌಮರು ! ಅವರಂಥ ಮಹಾನುಭಾವರು ವಿರಾಜಿಸುತ್ತಿರುವಾಗ ಅವರ ಅನುಗ್ರಹೋಪಜೀವಿಗಳೂ, ಶಿಷ್ಯರೂ ಆದ ನಾವೆಂತು "ಯತಿಚಕ್ರವರ್ತಿಗಳಾಗಲು ಸಾಧ್ಯ ? ಇದು ಗುರುಗಳ ಶಿಷ್ಯವಾತ್ಸಲ್ಯದ್ಯೋತಕವಾಗಿದೆ. ಈ ಮಹಾ ಪ್ರಶಸ್ತಿಯನ್ನು ನಾವು ಸ್ವೀಕರಿಸುವುದು ಗುರುದ್ರೋಹವಾದೀತು. ಆದುದರಿಂದ ಗುರುಪಾದರು, ಮಹಾಪ್ರಭುಗಳು, ಯತಿವರ್ಯರು ಪಂಡಿತರ ಈ ವಿಚಾರವನ್ನು ಬಿಡಬೇಕೆಂದು ಆಶಿಸುತ್ತೇವೆ" ಎಂದು ವಿನಯದಿಂದ ನಿರೂಪಿಸಿದರು.

ಸರ್ವರೂ ಶ್ರೀಗಳವರ ಗುರುಭಕ್ತಿ, ನಿಸ್ವಾರ್ಥ ಬುದ್ಧಿಗಳನ್ನು ಕಂಡು ಗುರುಗಳ ಗುಣಗಾನಮಾಡಿದರು. ವಿಬುಧೇಂದ್ರತೀರ್ಥ ಶ್ರೀಪಾದಂಗಳವರು ಸುಪ್ರೀತರಾಗಿ ಮಂದಹಾಸಬೀರುತ್ತಾ "ನಮ್ಮ ಪ್ರಿಯ ಶಿಷ್ಯರು ದ್ವೈತಸಿದ್ಧಾಂತಕ್ಕೆ ಒಬ್ಬರೇ ಚಕ್ರವರ್ತಿಗಳೆಂದು ಹೇಳಿ ತಮ್ಮ ಗುರುಭಕ್ತಿಯನ್ನು ತೋರಿದ್ದಾರೆ. ಸಂತೋಷ. ಚಕ್ರವರ್ತಿಯು ಒಬ್ಬನಾದರೂ ದ್ವೈತಸಿದ್ಧಾಂತ ರಾಜ್ಯದ ಭಾವಿ ಚಕ್ರವರ್ತಿಯಾದ ಯುವರಾಜನಿರಬಹುದಲ್ಲವೇ ? ದ್ವೈತಸಿದ್ಧಾಂತವನ್ನು ಕಾಪಾಡಿಕೊಂಡು ಬಂದು ಪರಮಹಂಸಕುಲದೀಪಕರಾಗಿ ಮೆರೆಯುತ್ತಿರುವ ನಮ್ಮ ಪ್ರಿಯಶಿಷ್ಯರು ಇಂದು ಪರಮಹಂಸಕುಲದ "ಯುವರಾಜ"ರಾಗಿದ್ದಾರೆ. ಅದನ್ನಂತೂ ಅವರು ಅಲ್ಲಗಳೆಯುವಂತಿಲ್ಲ. ಆದ್ದರಿಂದ ಭಾವಿ 'ಯತಿಚಕ್ರವರ್ತಿ' ಸ್ಥಾನದಲ್ಲಿರುವ ಶ್ರೀಲಕ್ಷ್ಮೀನಾರಾಯಣಮುನಿಗಳು; ನಾವೀಗ ಸರ್ವಯತಿಗಳ, ಪಂಡಿತರ ಮಹಾರಾಜರ ಅಪೇಕ್ಷೆಯಂತೆ ಅನುಗ್ರಹಿಸಲಿರುವ "ಶ್ರೀಪಾದರಾಜರು" ಎಂಬ ಪ್ರಶಸ್ತಿಯನ್ನು ಸ್ವೀಕರಿಸಿ ಸರ್ವರನ್ನೂ ಸಂತೋಷಪಡಿಸುವರೆಂದು ನಾವು ನಂಬಿದ್ದೇವೆ" ಎಂದು ಆಜ್ಞಾಪಿಸಿದರು. ಸಮಸ್ತಸಭೆಯು ಪರಮಹರ್ಷದಿಂದ ಜಯಜಯಕಾರ ಕರತಾಡನಮಾಡಿತು.

ಆಗ ಶ್ರೀಲಕ್ಷ್ಮೀನಾರಾಯಣಮುನಿಗಳು ನಸುನಕ್ಕು "ಗುರುಗಳ ಆಜ್ಞೆಯನ್ನು ಶಿರಸಾ ಧರಿಸಿದ್ದೇವೆ" ಎಂದು ಬಿನ್ನವಿಸಿದರು.

ಆನಂದೋತ್ಸಾಹಭರಿತನಾದ ಸಾಳುವ ನರಸಿಂಹಭೂಪಾಲನು ಧನಕನಕಮುಕ್ತಾ ಮಾಲೆ, ಶಾಲುಜೋಡಿ, ಪಟ್ಟೆ ಪೀತಾಂಬರಾದಿಗಳನ್ನು ತಂದು ಶ್ರೀವಿಬುಧೇಂದ್ರ ಮುನಿಗಳಿಗೆ ಸಮರ್ಪಿಸಿದ. ಶ್ರೀವಿಬುಧೇಂದ್ರತೀರ್ಥರು ಮಂಗಳವಾದ್ಯ, ವೇದ

ಘೋಷ, ಜಯಜಯಕಾರಗಳಾಗುತ್ತಿರಲು ತಮ್ಮ ಪ್ರಿಯ ಶಿಷ್ಯರಿಗೆ "ಶ್ರೀಪಾದರಾಜ" ಎಂಬ ಮಹಾಪ್ರಶಸ್ತಿಯನ್ನು ಅನುಗ್ರಹಿಸಿ ಆಶೀರ್ವದಿಸಿದರು.* ಆನಂತರ ಪೀಠಾಧೀಶರು, ಸನ್ಯಾಸಿಗಳು, ಪಂಡಿತರು, ಧಾರ್ಮಿಕರು ಒಬ್ಬೊಬ್ಬರಾಗಿ ಶ್ರೀಪಾದಂಗಳವರಿಗೆ ಭಕ್ತಿ ಕಾಣಿಕೆಗಳನ್ನು ಸಮರ್ಪಿಸಿ ಕೃತಕೃತ್ಯರಾದರು.

ಆ ನಂತರ ಶ್ರೀವಿಬುಧೇಂದ್ರ ಗುರುವರ್ಯರು ವಿದ್ವತ್ಪೂರ್ಣವಾಗಿ ಅಧ್ಯಕ್ಷ ಪೀಠದ ಪರವಾಗಿ ಉಪದೇಶ ಭಾಷಣ ಮಾಡಿದಮೇಲೆ ಸಮಸ್ತಪೀಠಾಧೀಶರು ಸನ್ಯಾಸಿಗಳು, ಪಂಡಿತರು, ಕವಿಗಳು, ಕಲೆಗಾರರು, ಹರಿದಾಸರು, ವಿದ್ಯಾರ್ಥಿಗಳಿಗೆ ಉದಾರವಾಗಿ ಶಾಲು, ಮಡಿ, ಪೀತಾಂಬರ, ಕನಕಾಭರಣ, ರಜತಪಾತ್ರೆ ಮತ್ತು ಸಂಭಾವನೆಗಳನ್ನು ಶ್ರೀವಿಬುಧೇಂದ್ರತೀರ್ಥರು "ಶ್ರೀಪಾದರಾಜ" ಬಿರುದಾಂಕಿತ ಶ್ರೀ ಲಕ್ಷ್ಮೀನಾರಾಯಣ ಮುನಿಗಳಿಂದ ಕೊಡಿಸಿ ಸರ್ವರನ್ನೂ ಆನಂದಗೊಳಿಸಿದರು. "ಸದ್ವಿದ್ಯಾಶ್ರಯ" ಎಂಬ ಕೀರ್ತಿಗಳಿಸಿ ಸಾಳುವ ನರಸಿಂಹಭೂಪಾಲನು ಸಕಲರ ಶ್ಲಾಘನೆಗೆ ಪಾತ್ರನಾದನು.

ನರಸಿಂಹಭೂಪಾಲನು ಭಕ್ತಿವಿನಮ್ರನಾಗಿ ಶ್ರೀವಿಬುಧೇಂದ್ರತೀರ್ಥರು. ಲಕ್ಷ್ಮೀನಾರಾಯಣಮುನಿಗಳು, ಇತರ ಪೀಠಾಧೀಶರು, ಸನ್ಯಾಸಿಗಳು ಪಂಡಿತರುಗಳಿಗೆ ತನ್ನ ಕೃತಜ್ಞತೆಯನ್ನು ಸಮರ್ಪಿಸಿ ವಂದನಾರ್ಪಣೆ ಮಾಡಿದಮೇಲೆ ಅಭೂತ ಪೂರ್ವವಾದ ಷಡ್ದರ್ಶನೀ ವಿದ್ವನ್ಮಹಾ ಸಮ್ಮೇಳನವು ಮುಕ್ತಾಯವಾಯಿತು,

ಶ್ರೀವಿಬುಧೇಂದ್ರ ಗುರುಗಳು ಶಿಷ್ಯರ ಒತ್ತಾಯದಿಂದ ಕೆಲದಿನಗಳು ಮುಳಬಾಗಿಲಿನಲ್ಲಿದ್ದು ನಂತರ ಮಹಾಸಂಸ್ಥಾನದೊಡನೆ ದಕ್ಷಿಣಭಾರತ ತೀರ್ಥ ಯಾತ್ರೆಗೆ ದಿಗ್ವಿಜಯ ಮಾಡಿದರು.

o o o o o

ಮುಳಬಾಗಲಿನಲ್ಲಿ ವಿದ್ವತ್ಸಭೆ ಮುಗಿದು ನಾಲ್ಕಾರು ತಿಂಗಳುಗಳಾದ ಮೇಲೆ ಸಾಳುವ ನರಸಿಂಹಭೂಪಾಲನು ಲಕ್ಷ್ಮೀನಾರಾಯಣ ಮುನಿಗಳನ್ನು ಚಂದ್ರಗಿರಿಯ ತನ್ನ ಆಸ್ಥಾನಕ್ಕೆ ಕರೆಯಿಸಿಕೊಂಡು ಗುರುಗಳನ್ನು ಸಕಲ ರಾಜಗೌರವದಿಂದ ಸ್ವಾಗತಿಸಿ ಸುವರ್ಣಪಲ್ಲಕ್ಕಿಯಲ್ಲಿ ಅವರನ್ನು ಮಂಡಿಸಿ ಮೆರವಣಿಗೆಯಿಂದ ಅರಮನೆಗೆ ಕರೆತಂದು ಬಿಡಾರಮಾಡಿಸಿದನು. ಪ್ರತಿನಿತ್ಯ ಗುರುಗಳನ್ನು ವಿವಿಧ ರೀತಿಯಿಂದ ಸತ್ಕರಿಸುತ್ತಾ

---

1. ಲಕ್ಷ್ಮೀನಾರಾಯಣಮುನಿಃ ವ್ಯಾಸದೇಶಿಕದೈಶಿಕಃ ।
ಯಸ್ಮಾತ್ ಶ್ರೀಪಾದರಾಜಾಖ್ಯಃ ಹ್ಯಧಗೀತ್ಸಕಲಾಗಮಾನ್ ॥

ಶ್ರೀರಾಘವೇಂದ್ರಮಠಗತಾರ್ಚಾಗತಿಕ್ರಮಃ

ಇದರಂತೆ "ಶ್ರೀಲಕ್ಷ್ಮೀನಾರಾಯಣಮೌನೀಂದ್ರ ಗುಣರತ್ನಮಾಲಾ" ಮತ್ತು ಶ್ರೀವಿಬುಧೇಂದ್ರವಿಜಯ"ಗಳಲ್ಲಿ ಈ ವಿಚಾರವು ಸುಂದರವಾಗಿ ನಿರೂಪಿತವಾಗಿದೆ.

ಅವರಿಂದ ತತ್ತ್ವ-ಧರ್ಮೋಪದೇಶ ರಾಜನೀತಿಗಳಲ್ಲಿ ಸಲಹೆಗಳನ್ನು ಪಡೆಯುತ್ತಾ ಕೃತಾರ್ಥನಾದನು.

ಒಂದು ದಿನ ಶುಭಮುಹೂರ್ತದಲ್ಲಿ ಶ್ರೀಲಕ್ಷ್ಮೀನಾರಾಯಣ ಯೋಗೀಂದ್ರರನ್ನು ತನ್ನ ಅರಮನೆಯಲ್ಲಿ ಸಕಲ ಸಾಮಂತರಾಜರು-ಪಂಡಿತರು-ಪೌರಜಾನಪದರ ಸಮಕ್ಷ ತನ್ನ ರತ್ನಸಿಂಹಾಸನದಲ್ಲಿ ಕೂಡಿಸಿ ಅವರನ್ನು "ರಾಜಗುರು"ಗಳನ್ನಾಗಿ ಮಾಡಿಕೊಂಡನು. ಮತ್ತು ಧನಕನಕ ವಸ್ತ್ರಾಭರಣಾದಿಗಳನ್ನೂ ಗ್ರಾಮ–ಭೂಮಿಗಳನ್ನೂ ಸಮರ್ಪಿಸಿ ಕೃತಕೃತ್ಯನಾದನು. ಶ್ರೀಲಕ್ಷ್ಮೀನಾರಾಯಣ ಮುನಿಗಳು "ರಾಜಗುರು" ಗಳಾಗಿ ಚಂದ್ರಗಿರಿಯಲ್ಲಿ ಕೆಲಕಾಲ ವಾಸಮಾಡಿ ಆಧ್ಯಾತ್ಮಿಕ ತತ್ತ್ವೋಪದೇಶಾದಿಗಳಿಂದ ನರಪತಿಯನ್ನು ಅನುಗ್ರಹಿಸಿದರು. ಆ ನಂತರ ಸಾಳುವ ನರಸಭೂಪಾಲನಿಂದ ಬೀಳ್ಕೊಂಡು ಮುಳಬಾಗಿಲಿಗೆ ಚಿತ್ತೈಸಿದರು.

## ೨೭. ಪಕ್ಷಧರಮಿಶ್ರ ಶಿಷ್ಯನಾದ

ಮಿಥಿಲೆಯು ವಿದ್ವಾಂಸರ ನೆಲೆವೀಡಾಗಿದ್ದಿತು: ಅಲ್ಲಿನ ವಿದ್ಯಾಪೀಠದಲ್ಲಿ ಪಕ್ಷಧರಮಿಶ್ರನೆಂಬ ಪ್ರಚಂಡ ಪಂಡಿತನಿದ್ದನು. ಅವನು ನವೀನ ನ್ಯಾಯಶಾಸ್ತ್ರ ಪರಂಪರೆಗೆ ಆದ್ಯನೆನಿಸಿದ್ದ, ಗಂಗೇಶೋಪಾಧ್ಯಾಯರ "ಚಿಂತಾಮಣಿ" ಎಂಬ ನವೀನ ನ್ಯಾಯಶಾಸ್ತ್ರದ ಮೇರುಕೃತಿಯನ್ನು ಸ್ವಾಧೀನಪಡಿಸಿಕೊಂಡು ಅದರಲ್ಲಿ ಅಸಾಧಾರಣ ಪಂಡಿತನೆನಿಸಿ ನೂರಾರು ಜನ ಪ್ರತಿಭಾನ್ವಿತ ವಿದ್ಯಾರ್ಥಿಗಳಿಗೆ ಚಿಂತಾಮಣಿಯ ಪಾಠ ಪ್ರವಚನ ಮಾಡಿಸುತ್ತಾ ಕೀರ್ತಿ ಗಳಿಸಿದ್ದನು.

ನವೀನ ನ್ಯಾಯಶಾಸ್ತ್ರದ ಬಲದಿಂದ ಪಕ್ಷಧರಮಿಶ್ರನು ತನ್ನೊಡನೆ ವಾದ ಮಾಡಲು ಬಂದ ಎಲ್ಲಾ ಪಂಡಿತರನ್ನೂ ಜಯಿಸಿ ಪ್ರತಿವಾದಿಗಳಿಗೆ ಸಿಂಹಸ್ವಪ್ನನಾಗಿದ್ದನು. ನ್ಯಾಯ ಶಾಸ್ತ್ರದಲ್ಲಿ ಅದ್ವಿತೀಯನಾಗಿದ್ದಂತೆ ಅವನು ವ್ಯಾಕರಣ, ಮೀಮಾಂಸಾ, ಕಾವ್ಯ-ನಾಟಕ-ಅಲಂಕಾರಾದಿ ಶಾಸ್ತ್ರಗಳಲ್ಲಿಯೂ, ಅದ್ವೈತ ವೇದಾಂತಾದಿ ಸಕಲ ಶಾಸ್ತ್ರಗಳಲ್ಲಿಯೂ ಏಕಮೇವಾದ್ವಿತೀಯನೆನಿಸಿದ್ದನು. ಅವನು ತಿಳಿಯದ, ಪಾಠ ಹೇಳದ, ವಾದಮಾಡದ ಶಾಸ್ತ್ರಗಳೇ ಇರಲಿಲ್ಲವೆನ್ನುವಷ್ಟರ ಮಟ್ಟಿಗೆ ಅವನ ಖ್ಯಾತಿ ಅಖಂಡ ಉತ್ತರಭಾರತದಲ್ಲಿ ವಿಖ್ಯಾತವಾಗಿದ್ದಿತು. ಒಂದೇ ಮಾತಿನಲ್ಲಿ ಹೇಳುವುದಾದರೆ ಪಕ್ಷಧರಮಿಶ್ರ ಮನೆಮಾತಾಗಿ ಬಿಟ್ಟಿದ್ದ !

ಪಕ್ಷಧರಮಿಶ್ರನ ಈ ಅಪಾರ ಕೀರ್ತಿಯನ್ನು ಕೇಳಿದ್ದ ಶ್ರೀ ವ್ಯಾಸರಾಜಗುರು ಸಾರ್ವಭೌಮರು ಅವನ ವಿದ್ವತ್ತನ್ನು ಪರೀಕ್ಷಿಸಲೋ ಎಂಬಂತೆ ದೆಹಲಿಯಿಂದ ಸಂಚಾರ ಕ್ರಮದಲ್ಲಿ ಮಿಥಿಲೆಗೆ ಚಿತ್ತೈಸಿದರು,

ಶ್ರೀವ್ಯಾಸರಾಜರ ಕೀರ್ತಿ ಆ ವೇಳೆಗಾಗಲೇ ಮಿಥಿಲೆಗೂ ಹರಡಿತ್ತು. ಅಲ್ಲಿನ ಸಂಸ್ಥಾನೀಕರು ಪಂಡಿತರು, ಧಾರ್ಮಿಕರು, ಸ್ವಾಭಾವಿಕವಾಗಿ ಸರಸ್ವತೀ ಉಪಾಸಕ

ರಾಗಿದ್ದುದರಿಂದ ಶ್ರೀವ್ಯಾಸಗುರುಗಳಿಗೆ ಅಲ್ಲಿ ಒಳ್ಳೆಯ ಆದರದ ಸ್ವಾಗತ ದೊರಕಿತು.

ಜ್ಞಾನ–ಭಕ್ತಿ–ವೈರಾಗ್ಯ–ತಪಸ್ಸುಗಳ ಸಾಕಾರಮೂರ್ತಿಯಂತೆ ತೇಜಸ್ಸಿನಿಂದ ಕಂಗೊಳಿಸಿ ದರ್ಶನಮಾತ್ರದಿಂದ ಭಕ್ತಿಯನ್ನು ಹುಟ್ಟಿಸುತ್ತಿದ್ದ ಅವರ ಭವ್ಯಾಕಾರದಿಂದ ಪ್ರಭಾವಿತರಾದ ಮಿಥಿಲೆಯ ಜನತೆ ಅವರಲ್ಲಿ ಪೂಜ್ಯಭಾವನೆಯಿಂದ ವರ್ತಿಸುತ್ತಿದ್ದರು. ಆದರೂ ಅಲ್ಲಿನ ಸಂಪ್ರದಾಯದಂತೆ ವಿದ್ಯಾಪೀಠದ ಪಂಡಿತರೊಡನೆ ಸೆಣಸಿ ತಮ್ಮ ಪಾಂಡಿತ್ಯದ ಪರಿಚಯ ಮಾಡಿಕೊಡಬೇಕೆಂದು ವಿದ್ವನ್ಮಂಡಲಿ ಬಯಸಿತು, ಸರಿ, ಪ್ರಾರಂಭವಾಯಿತು, ವಿವಿಧಶಾಸ್ತ್ರ ಕೋವಿದರೊಡನೆ ಶ್ರೀವ್ಯಾಸರಾಜರ ವಾಕ್ಯಾರ್ಥ ಪರಂಪರೆ! ಶ್ರೀಮಧ್ವಮತದ ವೈಶಿಷ್ಟ್ಯವನ್ನು ಅಲ್ಲಿ ಸ್ಥಾಪಿಸಲು ಶ್ರೀಗಳವರು ಮಿಥಿಲೆಯಲ್ಲಿ ಬಹುಕಾಲ ವಾಸಮಾಡಬೇಕಾಗಿ ಬಂದಿತು. ಪ್ರತಿದಿನ ಅನೇಕ ವಾದಿಗಳು ಅನೇಕ ಶಾಸ್ತ್ರಗಳಲ್ಲಿ ಗುರುಗಳೊಡನೆ ವಾದಿಸಿ ಶ್ರೀಗಳವರ ಪ್ರಖರ ವಾಗ್ವೈಖರಿಗೆ ತತ್ತರಿಸಿ ನಿರುತ್ತರರಾದರು. ಶ್ರೀಯವರ ಕೀರ್ತಿ ಎಲ್ಲೆಡೆ ಹರಡಿತ್ತು.

ಆಗ ಪಕ್ಷಧರಮಿಶ್ರನು ನೂರಾರು ಜನ ಪಂಡಿತರಾದ ಶಿಷ್ಯವೃಂದದಿಂದ ಸಹಿತನಾಗಿ ಶ್ರೀವ್ಯಾಸತೀರ್ಥರೊಡನೆ ವಾದಮಾಡಲು ಬಂದನು, ದಕ್ಷಿಣಭಾರತದ ಪಂಡಿತರಿಗೆ ನವೀನ ನ್ಯಾಯಶಾಸ್ತ್ರದ ಪರಿಚಯವು ಅಷ್ಟಾಗಿ ಇರುವುದಿಲ್ಲವಾದ್ದರಿಂದ ಈ ಸ್ವಾಮಿಗಳನ್ನು ಸುಲಭವಾಗಿ ಜಯಿಸಿಬಿಡುತ್ತೇನೆಂಬ ಅಹಂಭಾವದಿಂದ ಕೂಡಿದ್ದ ಪಕ್ಷಧರಮಿಶ್ರನು ಶ್ರೀಯವರೊಡನೆ ವಾದಮಾಡಲು ಬಂದನು. ಅದರಿಂದ ಶ್ರೀವ್ಯಾಸಮುನಿಗಳಿಗೆ ಸಂತೋಷವಾಯಿತು. ಅವನನ್ನು ಗೌರವದಿಂದ ಸ್ವಾಗತಿಸಿದರು.

ಇದೊಂದು ಅಪೂರ್ವ ಸಂದರ್ಭವಾದುದರಿಂದ ಈ ವಾಕ್ಯಾರ್ಥ ವೈಭವವನ್ನು ನೋಡಿ, ಕೇಳಿ ಆನಂದಿಸಲು ಸಹಸ್ರಾರು ಜನ ಧಾರ್ಮಿಕರು, ಪಂಡಿತರು ಆಗಮಿಸಿದರು. ಸ್ವತಃ ಪಂಡಿತರೂ, ವಿದ್ಯಾಪಕ್ಷಪಾತಿಗಳೂ, ಅಲ್ಲಿನ ವಿದ್ಯಾಪೀಠದ ಪೋಷಕರೂ ಆದ ಮಿಥಿಲಾಧಿಪತಿಗಳೂ ಮಿತಪರಿವಾರದೊಡನೆ ವಾಕ್ಯಾರ್ಥವನ್ನಾಲಿಸಲು ಆಗಮಿಸಿದರು. ವಾದನಿಯಮದಂತೆ ಮಧ್ಯಸ್ಥರು, ಶೀಘ್ರಲಿಪಿಕಾರರು, ನಿರ್ಣಯ ನೀಡುವ ಪಂಡಿತರುಗಳು ವ್ಯವಸ್ಥೆಯಾದಮೇಲೆ ಇತಿಹಾಸ ಪ್ರಸಿದ್ಧವಾದ ವಾಕ್ಯಾರ್ಥವು ಪ್ರಾರಂಭವಾಯಿತು.

ಪಕ್ಷಧರಮಿಶ್ರನು "ಚಿಂತಾಮಣಿ" ಗ್ರಂಥವನ್ನಾಧರಿಸಿ ನವೀನನ್ಯಾಯ ಶಾಸ್ತ್ರದಲ್ಲಿ ಒಂದು ಅಪೂರ್ವ ವಿಷಯವನ್ನೆತ್ತಿಕೊಂಡು ವಾಕ್ಯಾರ್ಥವನ್ನು ಪ್ರಾರಂಭಿಸಿ ತನ್ನ ಪಕ್ಷವನ್ನು ಅತ್ಯಂತ ಬಲಪಡಿಸಿ ವಾದಮಾಡಿದನು.

ವಿದ್ಯಾಮದದಿಂದ ಮತ್ತನಾಗಿದ್ದ ಪಕ್ಷಧರಮಿಶ್ರನು ತನ್ನನ್ನು ಚಕಿತಗೊಳಿಸುವ ಆಶ್ಚರ್ಯವೊಂದು ಕಾದಿದೆ ಎಂಬುದನ್ನು ಸ್ವಪ್ನದಲ್ಲಿಯೂಊಹಿಸಿರಲಿಲ್ಲ! ಶ್ರೀವ್ಯಾಸತೀರ್ಥರು ಪಕ್ಷಧರಮಿಶ್ರನ ನವೀನ ನ್ಯಾಯಶಾಸ್ತ್ರದ ವಾದವೈಖರಿ, ಅರ್ಭಟಗಳನ್ನು

ಗಂಡು ಪಸುನಕ್ಕು ಮಿಶ್ರನ ಪೂರ್ವಪಕ್ಷವನ್ನು ಲೀಲೆಯಿಂದಲೋ ಎಂಬಂತೆ ತಾವೂ ಅನುವಾದಮಾಡಿ ನವೀನನ್ಯಾಯಕ್ರಮದಲ್ಲಿಯೇ ಅದನ್ನು ಖಂಡಿಸಿ, ಅವರ ಮೇಲೆ ನವೀನನ್ಯಾಯಶಾಸ್ತ್ರ ಪದ್ಧತಿಯಂತೆ ಶಾಬ್ದಬೋಧ ಪರಿಪ್ಲುತವಾಗಿ ವಾದಮಾಡಿ ಕೋಟಿಗಳನ್ನು ಹೇಳಿ ಪ್ರತಿಭಾರಂಜಿತ ಮಿಂಚಿನಗೊಂಚಲುಗಳನ್ನೇ ತೂಗಿಬಿಟ್ಟಿರು! ಶ್ರೀಯವರ ವಾದವನ್ನು ಕೇಳಿ ಸಭಿಕರಲ್ಲಿ ವಿದ್ಯುತ್ಸಂಚಾರವಾದಂತಾಯಿತು! ಪಕ್ಷ ಧರಮಿಶ್ರ ಅಪ್ರತಿಭನಾದ! ತನ್ನ ಕಿವಿಗಳೇನಾದರೂ ತನಗೆ ಮೋಸಮಾಡು ತ್ತಿವೆಯೋ ಎಂದು ಭ್ರಾಂತನಾದ!

ತಾನು ಮಾಡಿದ ಪೂರ್ವಪಕ್ಷವನ್ನು ಅರ್ಥಮಾಡಿಕೊಳ್ಳುವುದೇ ಕಷ್ಟವಾಗಿರು ವಾಗ ನವೀನನ್ಯಾಯಶಾಸ್ತ್ರ ರೀತಿಯಲ್ಲಿ ವಿದ್ವತ್ಪೂರ್ಣವಾಗಿ ಅನುವಾದಮಾಡಿ, ತನ್ನ ಪಕ್ಷವನ್ನು ಸುಲಭವಾಗಿ ಖಂಡಿಸಿ ಕೋಟಿಕ್ರಮವನ್ನು ಹೇಳಿದ್ದನ್ನು ಕಂಡುಪಕ್ಷ ಧರಮಿಶ್ರ ಆಶ್ಚರ್ಯದಿಂದ ದಿಙ್ಮೂಢನಾಗಿ ತಡಬಡಸಹತ್ತಿದ. ಅದುವರೆಗಿದ್ದ ತಾತ್ಸಾರಭಾವ ಮಾಯವಾಗಿ ಶ್ರೀವ್ಯಾಸರಾಜ ಗುರುಗಳಲ್ಲಿ ಒಂದು ಬಗೆಯ ಗೌರವ ವುಂಟಾಯಿತು. ಸಭಿಕರು ದಕ್ಷಿಣಭಾರತದ ಈ ತರುಣ ಪರಮಹಂಸರು ಪಕ್ಷಧರ ಮಿಶ್ರನನ್ನೇ ವಿಸ್ಮಯಗೊಳಿಸಿ ಅವನ ಮೇಲೆ ಕೋಟಿಯನ್ನೇರಿಸಿದ್ದನ್ನು ಕಂಡು ಆಶ್ಚರ್ಯಗೊಂಡು ಗುರುಗಳಲ್ಲಿ ಗೌರವಬುದ್ಧಿಯುಳ್ಳವರಾಗಿ ಆ ವಾದಮಲ್ಲರಿಬ್ಬರ ವಾಕ್ಯಾರ್ಥವನ್ನು ಕುತೂಹಲದಿಂದ ಆಲಿಸಹತ್ತಿದರು.

ಮೊದಲು ಅಪ್ರತಿಭನಾಗಿ ತಡಬಡಿಸಿದ ಪಕ್ಷಧರಮಿಶ್ರನು ಎಚ್ಚರಗೊಂಡು "ಇವರೇನು ಮಹಾ ಸುಲಭವಾಗಿ ಜಯಿಸಿಬಿಡುತ್ತೇನೆ" ಎಂಬ ಅಹಂಕಾರವನ್ನು ಬಿಟ್ಟು ಇದುವರೆಗೂ ದೊರಕದಿದ್ದ, ತನಗೆ ಸರಿಸಮವಾಗಿ ನಿಂತು ವಾದಮಾಡಬಲ್ಲ ಶ್ರೇಷ್ಠ ರಾದ ಪಂಡಿತರು ದೊರಕಿದರೆಂದು ಸಂತುಷ್ಟನಾಗಿ ದ್ವಿಗುಣಿತ ಉತ್ಸಾಹದಿಂದ ಶ್ರೀಗಳವರು ಹೇಳಿದ ಕೋಟಿಗಳನ್ನು ಖಂಡಿಸಿ ಅವರ ಮೇಲೆ ಅನೇಕ ಕೋಟಿ ಗಳನ್ನು ಹೇರಿದನು.

ಆಗ ಶ್ರೀವ್ಯಾಸರಾಜ ಗುರುಚರಣರು ಪಕ್ಷಧರಮಿಶ್ರನೊಡನೆ ನಿಗ್ರಹೋಚ್ಚಾ ರಣಸಂಧಿಗಳು, ನಿದರ್ಶನ, ಪ್ರತ್ಯುಕ್ತಿ, ಅನುಸಾಧಕ, ಅನುಮಾನ, ಕಂಟಕೋದ್ಧಾರ, ಉಪನಯನ ನಿಗಮ, ನಿರ್ದೇಶ, ಸರ್ವನಾಮಾನುವಾದನ, ಸಿದ್ಧಿಸಾಧಕ ಪ್ರಯೋ ಜಕ, ಹೇತ್ವಾಭಾಸ, ಮುಂತಾದ ಕ್ರಮದಿಂದ ಚಿಂತಾಮಣಿಕಾರನ ಪದ್ಧತಿಯನ್ನೇ ಅನುಸರಿಸಿ ಅದ್ಭುತವಾದಮಾಡಿ ಶ್ರೀಗಳವರು ಪಕ್ಷಧರಮಿಶ್ರನ ವಾದವನ್ನು ಶತಶಃ ಖಂಡಿಸಿ ನಿರುತ್ತರಗೊಳಿಸಿ ಸರ್ವರನ್ನೂ ಮೂಕವಿಸ್ಮಿತರನ್ನಾಗಿ ಮಾಡಿದರು.

ಹೀಗೆ ಸುಮಾರು ಹತ್ತು-ಹನ್ನೆರಡು ದಿನಗಳವರೆಗೆ ವಾದವು ಒಳ್ಳೆಭರದಿಂದ ನಡೆದು ಕೊನೆಗೆ ಶ್ರೀವ್ಯಾಸರಾಜರು ಮಿಶ್ರನ ಎಲ್ಲಾ ವಾದಗಳನ್ನು ಶತಶಃ ಖಂಡಿಸಿ

ವ್ದಲ್ಲದೆ ಚಿಂತಾಮಣಿಗ್ರಂಥದ ಮೇಲೆಯೇ ಅನೇಕ ದೋಷಗಳನ್ನು ಹೇಳಿ* ತಮ್ಮ ಪ್ರತಿಭಾಪುಂಜರಂಜಿತವಾಗ್ವೈಖರಿಯಿಂದ ವಿಜೃಂಭಿಸಿದರು. ಮಿಶ್ರನಿಗೆ ವ್ಯಾಸಯತಿಗಳು ತನ್ನನ್ನೂ ಮೀರಿಸಿದ ಮಹಾನುಭಾವರೆಂಬುದು ಅರ್ಥವಾಯಿತು. "ಚಿಂತಾಮಣಿ"ಯ ಮೇಲೆಯೇ ದೋಷಗಳನ್ನು ಹೇಳಿದ ಯತಿವರ್ಯರ ವಾದವೈಖರಿಯಿಂದ ದಿಙ್ಮೂಢನಾದನು. ಮನಸ್ಸಿಗೆ ಬಹಳ ವ್ಯಾಕುಲವೂ ಆಯಿತು. ಆದ್ದರಿಂದ ಹಟವೂ ಉಂಟಾಯಿತು, ವಿಚಿತ್ರ ಶೈಲಿಯಿಂದ ವಾದಿಸಲಾರಂಭಿಸಿದನು, ವ್ಯಾಸರಾಜರೂ ಅದಕ್ಕೆ ಪ್ರತಿವಾದವನ್ನು ಹೂಡಿದರು. ಬರಬರುತ್ತಾ ಅವನ ವಿದ್ಯೆಯ ಉನ್ಮಾದ ಇಳಿಯಲಾರಂಭಿಸಿತು. ಎಷ್ಟು ಯತ್ನಿಸಿದರೂ ಅವನು ಗುರುಗಳ ವಾದದ ಮುಂದೆ ನಿಲ್ಲಲಾಗದೆ ತಲೆತಗ್ಗಿಸಿ ಕುಳಿತುಬಿಟ್ಟನು.

ಸಭೆ ನಿಶ್ಯಬ್ದವಾಯಿತು. ತನಗುಂಟಾದ ಅಪಯಶಸ್ಸನ್ನು "ಅದ್ವೈತವಿಜಯ"ದಿಂದಾದರೂ ಪರಿಹರಿಸಿಕೊಳ್ಳಲಾಶಿಸಿ ಪಕ್ಷಧರಮಿಶ್ರನುದ್ವೈತಾದ್ವೈತ ವಾದವನ್ನಾರಂಭಿಸಿ ದ್ವೈತಶಾಸ್ತ್ರದಮೇಲೆ ದುರ್ಧರದೋಷಾಭಾಸಗಳನ್ನು ಹೇಳಿ ಶ್ರುತಿ,ಸೂತ್ರ ಪುರಾಣ,ಗೀತಾದಿ ಸಕಲಶಾಸ್ತ್ರಗಳಿಂದ ಸಿದ್ಧವಾಗುವ ಸಿದ್ಧಾಂತವೆಂದರೆ ಅದ್ವೈತ ಸಿದ್ಧಾಂತವೊಂದೇ ಎಂದು ಬಹು ಚಮತ್ಕಾರವಾಗಿ ವಾದಿಸಲಾರಂಭಿಸಿದನು.

ಶ್ರೀವ್ಯಾಸರಾಜ ಗುರುಗಳು "ಸಿದ್ಧಂ ನಸ್ಸಮೀಹಿತಂ"ಎಂದು ನಗೆಮೊಗದಿಂದ ಮಿಶ್ರನು ಹೇಳಿದ ಎಲ್ಲ ದೋಷಗಳನ್ನೂ ನಿವಾರಿಸಿ ಅದು ದ್ವೈತಸಿದ್ಧಾಂತಕ್ಕೆ ಹತ್ತುವುದಿಲ್ಲವೆಂಬುದನ್ನು ಅತಿಕೌಶಲ್ಯಪೂರ್ಣವಾಗಿ ತೋರಿಸಿಕೊಟ್ಟರು. ಇಬ್ಬರೂ ವಾದಮಲ್ಲರು, ಸಕಲಶಾಸ್ತ್ರವಿಶಾರದರು, ಅವರ ವಾದವು ವಿಕೋಪಕ್ಕೆ ಎಡೆಗೊಡದೆ ಶಾಸ್ತ್ರಮರ್ಯಾದೆಯನ್ನು ಉಲ್ಲಂಘಿಸದೆ ಚಾತುರ್ಯಪೂರ್ಣವಾಗಿ ಜರಗುತ್ತಿದ್ದುದರಿಂದ ಸಹಸ್ರಾರು ಜನರನ್ನು ಅದು ಆಕರ್ಷಿಸುತ್ತಿತ್ತು. ಹತ್ತಾರು ದಿನಗಳ ಪರ್ಯಂತ ಜರುಗಿದ ಆ ಅಪೂರ್ವವಾದ ದ್ವೈತಾದ್ವೈತವಾದವು ಕೊನೆಗೊಮ್ಮೆ ಮುಕ್ತಾಯವಾಯಿತು. ವಿಜಯಲಕ್ಷ್ಮಿಯು ಶ್ರೀವ್ಯಾಸರಾಜರಿಗೆ ಮಾಲೆಹಾಕಿದಳು. ಜನರು ಶ್ರೀಯವರ ಜಯ ಜಯಕಾರಮಾಡಿದರು. ವಾದಮಧ್ಯಸ್ಥರು, ನಿರ್ಣಯಕಾರರು ಶ್ರೀವ್ಯಾಸತೀರ್ಥರು ವಿಜಯಶಾಲಿಗಳಾದರೆಂದು ಘೋಷಿಸಿದರು ! ಪಕ್ಷಧರ ಮಿಶ್ರರು ಗುರುಗಳಿಗೆ ನಮಿಸಿ "ಜಿತೋಽಸ್ಮಿ"ಎಂದರು. ಜನರು ಗಗನಮಂಡಲವೇ ಭೇದಿಸುವಂತೆ ಜಯಧ್ವನಿ ಮಾಡಿದರು. ಪಕ್ಷಧರಮಿಶ್ರನ ಮೇಲಿನ ಈ ದಿಗ್ವಿಜಯವು ಮಾಧ್ವಇತಿಹಾಸದಲ್ಲಿ ಸುವರ್ಣಾಕ್ಷರಗಳಲ್ಲಿ ಬರೆದಿಡುವ ಅಪೂರ್ವ ಘಟನೆಯೆನಿಸಿತು. ಈ ದಿಗ್ವಿಜಯವು ಶ್ರೀವ್ಯಾಸರಾಜರ ವಿಜಯಪರಂಪರೆಯಲ್ಲೇ ಅತ್ಯಂತ ಮಹತ್ವಪೂರ್ಣವಾದುದೆಂದು ಘಂಟಾಘೋಷವಾಗಿ ಹೇಳಬಹುದು.

---

1. ಈ ವಾಕ್ಯಾರ್ಥವೇ ಮುಂದೆ ಶ್ರೀವ್ಯಾಸರಾಜರು "ತರ್ಕತಾಂಡವ" ಗ್ರಂಥವನ್ನು ರಚಿಸಲು ಪ್ರೇರಕವಾಯಿತೆಂದು ಹೇಳಬಹುದು.

ವಿದ್ಯಾಪಕ್ಷಪಾತಿಯಾದ ಮಿಥಿಲಾಧಿಪತಿಯು ಶ್ರೀವ್ಯಾಸರಾಜರ ಈ ದಿಗ್ವಿಜಯವನ್ನು ಕೊಂಡಾಡಲು ಒಂದು ದೊಡ್ಡ ಸಮಾರಂಭವನ್ನೇರ್ಪಡಿಸಿದನು. ಅಂದು ರಾಜಯೋಗ್ಯವಾಗಿ ಶ್ರೀವ್ಯಾಸಯತಿಗಳನ್ನು ಮಹಾರಾಜ ಸನ್ಮಾನಿಸಿದನು.

ಆ ಸಮಾರಂಭದಲ್ಲಿ ಗುಣಗ್ರಾಹಿಯಾದ ಪಕ್ಷಧರಮಿಶ್ರನು ಶ್ರೀವ್ಯಾಸರಾಜರ ಗುಣಗಾನಮಾಡಿ ಅವರಂಥ ಪ್ರತಿವಾದಿಗಳನ್ನು ಸಕಲಶಾಸ್ತ್ರ ಪಾರಂಗತರನ್ನು ತಾನು ಆದುವರೆಗೆ ಕಂಡಿರಲಿಲ್ಲವೆಂದೂ, ಅಂಥ ಸರ್ವತಂತ್ರ ಸ್ವತಂತ್ರರೂ, ಪರಮಹಂಸ ಶಿಖಾಮಣಿಗಳೂ, ಪೂಜ್ಯರೂ ಆದ ಶ್ರೀವ್ಯಾಸತೀರ್ಥರಿಂದ ತಾನು ಪರಾಜಿತನಾದುದು ತನಗೆ ಭೂಷಣವೇ! ಎಂದು ಉದ್ಗರಿಸಿ, ''ನಾನು ನಾನಾ ರಾಜ್ಯಗಳಲ್ಲಿ ಸಂಚರಿಸಿ ನೂರಾರುಜನ ಪ್ರಬಲ ಪಂಡಿತರೊಡನೆ ವಾದ ಮಾಡಿ ಜಯಗಳಿಸಿದ್ದೇನೆ. ಆದರೆ ಇಂದಿನವರೆಗೂ ನನ್ನನ್ನು ಪರಾಭವಗೊಳಿಸಿದವರಾರೂ ಇರಲಿಲ್ಲ. ಮುಖ್ಯವಾಗಿ ನವೀನನ್ಯಾಯ ಶಾಸ್ತ್ರಕ್ಕೆ ಅದ್ವೈತಿಗಳೇ ಅದರಲ್ಲೂ ನಾನೇ ಆಧಾರಸ್ತಂಭನೆಂದು ಭ್ರಮಿಸಿದ್ದೆ. ಇಂದು ನನ್ನ ಭ್ರಮನಿರಸನವಾಯಿತು. ದ್ವೈತಮತದ ಈ ಮಹಾವಿಭೂತಿಪುರುಷರು ಅದನ್ನು ಸ್ಪಷ್ಟಪಡಿಸಿದರು. ಇವರು ಸಾಮಾನ್ಯ ಯತಿಗಳಲ್ಲ, ಸಾಕ್ಷಾತ್ ಶ್ರೀವೇದವ್ಯಾಸರೇ ಇವರ ರೂಪದಲ್ಲಿ ಧರೆಗಿಳಿದು ಬಂದಿದ್ದಾರೆಂದು ನಾನು ನಂಬಿದ್ದೇನೆ. ಇವರು ನವೀನವ್ಯಾಸರೆಂದೇ ನಾನು ಗೌರವಿಸುತ್ತೇನೆ ''—ಮುಂತಾಗಿ ಮುಕ್ತಕಂಠದಿಂದ ಹೊಗಳಿ —

> ''ಯದಧೀತಂ ತದಧೀತಂ ಯದನಧೀತಂ ತದಪ್ಯಧೀತಂ |
> ಪಕ್ಷಧರವಿಪಕ್ಷೋ ನಾವೇಕ್ಷಿ ವಿನಾ ನವೀನ ವ್ಯಾಸೇನ ||''

ನಾನು ಓದಿರುವುದನ್ನೆಲ್ಲಾ ಇವರು ಓದಿದ್ದಾರೆ! ನಾನು ಅಧ್ಯಯನ ಮಾಡದಿರುವುದನ್ನೆಲ್ಲವನ್ನೂ ಇವರು ಅಧ್ಯಯನ ಮಾಡಿದ್ದಾರೆ! ಪ್ರತಿಪಕ್ಷ ಪಂಡಿತರಲ್ಲಿ ''ನವೀನ ವ್ಯಾಸರಂತೆ'' ಕಂಗೊಳಿಸುವ ಈ ಶ್ರೀವ್ಯಾಸರಾಜ ಸ್ವಾಮಿಗಳಂಥ ಸರ್ವತಂತ್ರಸ್ವತಂತ್ರರಾದ ಸಿದ್ಧಾಂತಸ್ಥಾಪನಾಚಾರ್ಯರನ್ನು ಈ ಪಕ್ಷಧರಮಿಶ್ರನು ಎಲ್ಲಿಯೂ ಕಾಣಲಿಲಲ್ಲ!!ಎಂದು ಉದ್ಗಾರತೆಗೆದನು.

ಮಿಥಿಲೆಯ ರಾಜನು ಶ್ರೀವ್ಯಾಸತೀರ್ಥರನ್ನು ರಾಜೋಚಿತ ರೀತಿಯಲ್ಲಿ ಸನ್ಮಾನಿಸಿ . ''ಗುರುವರ್ಯರೇ, ತಮ್ಮ ಪಾದಧೂಳಿಯಿಂದ ನನ್ನ ರಾಜ್ಯ ಪಾವನವಾಯಿತು. ವಿದ್ಯಾವೈಭವದಿಂದ ಸುರಸರಸ್ವತಿಯು ನಮ್ಮ ವಿದ್ಯಾಪೀಠದಲ್ಲಿ ತಾಂಡವಿಸುವಂತಾಯಿತು. ತಾವು ನನ್ನ ಒಂದು ಮನೋರಥವನ್ನು ನೆರವೇರಿಸಿ ಕೊಟ್ಟು ಅನುಗ್ರಹಿಸಬೇಕು'' ಎಂದು ಪ್ರಾರ್ಥಿಸಿದರು,

ಶ್ರೀವ್ಯಾಸತಿರ್ಥರು 'ರಾಜನ್, ನಿನ್ನ ಅಭೀಷ್ಟವೇನು ತಿಳಿಸು. ಸಾಧ್ಯವಾಗುವಂತಿದ್ದರೆ ಪೂರ್ಣಮಾಡುವೆವು.'' ಎಂದೆನಲು ರಾಜನು ''ಸ್ವಾಮಿ, ತಾವು ಕುಲಪತಿಗಳಾಗಿದ್ದು ನಮ್ಮ ವಿದ್ಯಾಪೀಠದ ಕೀರ್ತಿಯನ್ನು ಬೆಳಗಬೇಕು'' ಎಂದು ಭಿನ್ನವಿಸಿದನು.

ಶ್ರೀವ್ಯಾಸಮುನಿಗಳು ಮಂದಹಾಸಬೀರಿ ''ಮಹಾರಾಜ, ನಮ್ಮಲ್ಲಿ ನೀನಿಟ್ಟಿರುವ ವಿಶ್ವಾಸ–ಗೌರವಗಳನ್ನು ಕಂಡು ಸಂತೋಷವಾಗಿದೆ. ಈ ಮಹಾವಿದ್ಯಾ

ಪೀಠದ ಅಧ್ಯಕ್ಷರಾಗಲು ಪಕ್ಷಧರಮಿಶ್ರರೊಬ್ಬರೇ ಯೋಗ್ಯರೆಂದು ನಾವು ಭಾವಿಸುತ್ತೇವೆ. ಇವರಂಥ ಪ್ರಕಾಂಡಪಂಡಿತರು ಭಾರತಾವನಿಯಲ್ಲಿ ಬೇರೊಬ್ಬರು ದೊರಕಲಾರರು ! ಇದೊಂದು ಅಪೂರ್ವರತ್ನ. ಇದನ್ನು ನೀನು ಕಳೆದುಕೊಳ್ಳಬೇಡ. ನಿನಗೆ ನಮ್ಮಲ್ಲಿ ನಿಜವಾದ ಗೌರವವಿದ್ದರೆ, ಪಕ್ಷಧರ ಮಿಶ್ರರನ್ನೇ ವಿದ್ಯಾಪೀಠದ ಅಧ್ಯಕ್ಷರನ್ನಾಗಿ ಮಾಡು. ಇವರಿಂದಲೇ ಈ ವಿದ್ಯಾಪೀಠವು ಜಗತ್ತಿನಲ್ಲಿ ಖ್ಯಾತಿಗಳಿಸಿ, ನಿನಗೆ ಅಪಾರ ಕೀರ್ತಿದೊರಕುವುದು" ಎಂದು ಹೇಳಿದರು.

ಶ್ರೀಗಳವರ ಉದಾರ ಅಂತಃಕರಣ, ವಿದ್ಯಾಪಕ್ಷಪಾತ, ಸೋತವರಲ್ಲಿ ತೋರುವ ಪ್ರೀತಿ-ವಿಶ್ವಾಸ-ಸೌಹಾರ್ದ್ರಗಳನ್ನುಕಂಡು ಸರ್ವರೂ ಆಶ್ಚರ್ಯಚಕಿತರಾದರು. ಇದರಿಂದ ಮಹಾರಾಜನಿಗೆ ಗುರುಗಳಲ್ಲಿ ವಿಶೇಷಗೌರವವುಂಟಾಯಿತು. ಪಕ್ಷಧರಮಿಶ್ರರು ಗುರುವ್ಯಾಸರ ಮಾತುಕೇಳಿ ರೋಮಾಂಚನಗೊಂಡರು. ತಮ್ಮಲ್ಲಿ ಶ್ರೀಗಳವರು ತೋರಿದ ಅಪಾರ ಗೌರವ-ವಾತ್ಸಲ್ಯಗಳಿಂದ ಅವರ ಕಣ್ಣುಗಳಿಂದ ಆನಂದಾಶ್ರುಹರಿಯಿತು. ಗದ್ಗದಕಂಠದಿಂದ-"ಮಹಾಸ್ವಾಮಿ, ನೀವು ಮಾನವರಲ್ಲ. ನಿಜವಾಗಿಯೂ ನೀವು ತ್ರಿಲೋಕಗುರುಗಳಾದ ಶ್ರೀವೇದವ್ಯಾಸದೇವರ ಮುಖ್ಯಾನುಗ್ರಹ ಪಾತ್ರರಾದ ದೇವಾಂಶಸಂಜಾತರಾದ ಜಗದ್ಗುರುಗಳು ! ಸಾಮಾನ್ಯರಲ್ಲಿ ಇಂಥ ಪಾಂಡಿತ್ಯ ಪ್ರತಿಭೆ, ಕಾರುಣ್ಯ, ಲೋಕಕಲ್ಯಾಣದೀಕ್ಷೆ, ಶಮದಮಾದಿಗುಣಸಂಪತ್ತುಗಳಿರಲು ಸಾಧ್ಯವಿಲ್ಲ ! ಇಂದಿನಿಂದ ಈ ಪಾಮರರನ್ನೂ ತಮ್ಮ ಶಿಷ್ಯಕೋಟಿಗೆ ಸೇರಿಸಿಕೊಂಡು ಅನುಗ್ರಹಿಸಬೇಕು" ಎಂದು ವಿಜ್ಞಾಪಿಸಿ ಸಾಷ್ಟಾಂಗ ಪ್ರಣಾಮ ಮಾಡಿದರು.

ಮಿಥಿಲಾಧಿಪತಿಯು ಶ್ರೀಯವರ ಅಣತಿಯಂತೆ ಪಕ್ಷಧರಮಿಶ್ರರನ್ನು ವಿದ್ಯಾಪೀಠದ ಮಹಾಧ್ಯಕ್ಷರೆಂದು ಘೋಷಿಸಿ ಗೌರವಿಸಿದರು. ಇದರಿಂದ ಸರ್ವರಿಗೂ ಪರಮಾನಂದವಾಯಿತು.

ಶ್ರೀವ್ಯಾಸತೀರ್ಥರು ಮಿಥಿಲೆಯ ಧಾರ್ಮಿಕರ ಕೋರಿಕೆಯಂತೆ ಅಲ್ಲಿ ಕೆಲತಿಂಗಳ ವಾಸವಾಗಿದ್ದು ತಮ್ಮ ಉಪದೇಶಾಮೃತದಿಂದ ಸರ್ವರನ್ನೂ ಆನಂದಗೊಳಿಸಿ ವಂಗದೇಶದ ಕಡೆಗೆ ಸಂಚಾರಹೊರಟರು.

o o o o o

## ೨೮. ವಂಗವಿಜಯ

ಶ್ರೀವ್ಯಾಸರಾಜತೀರ್ಥರು ವಂಗ (ಬಂಗಾಲೀ) ದೇಶಕ್ಕೆ ದಯಮಾಡಿಸಿದಾಗ ಅಲ್ಲಿ ಅವರಿಗೆ ಆತ್ಮೀಯ ಸ್ವಾಗತ ದೊರೆಯಿತು. ಶ್ರೀಗಳವರು ಅಲ್ಲಿಗೆ ಬಂದಾಗ ಪರಿಸ್ಥಿತಿಯು ಅವರಿಗೆ ಅನುಕೂಲಕರವಾಗಿತ್ತು.

ವಂಗದೇಶದಲ್ಲಿ ಮೊಟ್ಟಮೊದಲು ವೈಷ್ಣವಮತ ಮತ್ತು ವಿಷ್ಣುಭಕ್ತಿಯ ಪ್ರಸಾರಕ್ಕೆ ಶ್ರೀಮನ್ಮಧ್ವಾಚಾರ್ಯರು ಬೀಜನ್ಯಾಸಮಾಡಿದ್ದರು. ಶ್ರೀಮದಾ

ಚಾರ್ಯರು ಕ್ರಿ.ಶ. 1266ರ ಸುಮಾರಿಗೆ ಎರಡನೆಯ ಬದರಿಯಾತ್ರೆಗೆ ಹೊರಟಾಗ ಅವರು ಗಂಗಾ-ಯಮುನಾನದಿಗಳನ್ನು ದಾಟಬೇಕಾಗಿತ್ತು. ಅದೊಂದು ಯುದ್ಧದ ಕಾರ್ಮೋಡಗಳು ದೇಶದಮೇಲೆ ಕವಿದಿದ್ದ ಕಾಲ. ದೆಹಲಿಯ ಸುಲ್ತಾನನಾಗಿದ್ದ ಗಿಯಾಸುದ್ದೀನ ವಿರುದ್ಧವಾಗಿ ಬಂಗಾಲದಲ್ಲಿ ದೆಹಲಿಯ ಸುಲ್ತಾನನ ಪರವಾಗಿ ರಾಜ್ಯಪಾಲನಾಗಿದ್ದ ತುಘ್ರಿಲ್ಲನು ಸುಲ್ತಾನನಿಗೆ ತಿರುಗಿಬಿದ್ದು ತಾನು ಬಂಗಾಲದ ಸ್ವತಂತ್ರರಾಜನೆಂದು ಘೋಷಿಸಿದ್ದನು. ಇದರಿಂದ ಕುಪಿತನಾದ ಗಿಯಾಸುದ್ದೀನನು ತುಘ್ರಿಲ್ಲನಮೇಲೆ ಯುದ್ಧಘೋಷಿಸಿ ಅವನ ವಿರುದ್ಧವಾಗಿ ಕ್ರಮಕೈಗೊಂಡಿದ್ದನು. ಗಂಗಾ-ಯಮುನಾ ನದಿಗಳ ಮಾರ್ಗವಾಗಿ ಶತ್ರುಗಳ ಪರಾರಿಯಾಗದಂತೆ ಮಾಡಲು ಗಿಯಾಸುದ್ದೀನನು ಧನುಜ್ ರಾಯ್ ಎಂಬ ಹಿಂದೂರಾಜನೊಡನೆ ಒಪ್ಪಂದಮಾಡಿ ಕೊಂಡು ಗಂಗಾ-ಯಮುನಾ ನದಿಯಗುಂಟ ಭಾರಿ ಸೈನ್ಯಗಳನ್ನು ಕಾವಲಿರಿಸಿದ್ದನು. ಇಂಥ ಪರಿಸ್ಥಿತಿಯಲ್ಲಿಯೇ ಆಚಾರ್ಯರು ಅಲ್ಲಿಗೆ ಬಂದಿದ್ದರು. ಶ್ರೀಮದಾಚಾರ್ಯರ ತೇಜಸ್ಸಿನಿಂದ ಪ್ರಭಾವಿತನಾದ ಧನುಜ್‌ರಾಯ್ ಅವರು ನದಿಯನ್ನು ದಾಟಿ ಬದರಿಗೆ ದಯಮಾಡಿಸಲು ಸೌಕರ್ಯವನ್ನೇರ್ಪಡಿಸಿಕೊಟ್ಟಿದ್ದಲ್ಲದೆ ಗಿಯಾಸುದ್ದೀನನಿಗೆ ಆಚಾರ್ಯರ ಪರಿಚಯಮಾಡಿಸಿ ಅವನಿಂದಲೂ ಆಚಾರ್ಯರಿಗೆ ಗೌರವಸಲ್ಲುವಂತೆಮಾಡಿದ್ದನು. ಸರ್ವಜ್ಞರು ಬದರಿಯಾತ್ರೆಯನ್ನು ಮುಗಿಸಿ ಬರುವ ವೇಳೆಗೆ ಯುದ್ಧ ಮುಗಿದು ಶಾಂತಿನೆಲೆಸಿತ್ತು. ಆಚಾರ್ಯರು ಆಗ ನವದ್ವೀಪಕ್ಕೆ ಭೇಟಿಕೊಟ್ಟಿದ್ದರು. ಆ ಸಮಯದಲ್ಲಿ ಧನುಜ್‌ರಾಯ್ ಗುರುಗಳನ್ನು ಬಹುವಾಗಿಸತ್ಕರಿಸಿ ಅವರ ಅನುಗ್ರಹಕ್ಕೆ ಪಾತ್ರನಾದನು. ಧನುಜ್ ರಾಯ್ ಧಾರ್ಮಿಕನೂ, ಭಗವದ್ಭಕ್ತನೂ ಆಗಿದ್ದನು. ಶ್ರೀಮದಾಚಾರ್ಯರು ಅವನಿಗೆ ವಿಷ್ಣುಭಕ್ತಿ, ಭಾಗವತಧರ್ಮಗಳನ್ನು ಉಪದೇಶಿಸಿ ವಂಗದೇಶದಲ್ಲಿ ವಿಷ್ಣುಭಕ್ತಿಗೆ ಪ್ರೋತ್ಸಾಹನೀಡಿ ಭಾಗವತಧರ್ಮ ಪ್ರಸಾರಮಾಡಲು ಆಜ್ಞಾಪಿಸಿ ತಮ್ಮ ಯಾತ್ರೆಯನ್ನು ಮುಂದುವರೆಸಿದರು. ಧನುಜ್‌ರಾಯನು ಗುರುಗಳ ಆದೇಶದಂತೆ ತನ್ನರಾಜ್ಯದಲ್ಲಿ ವಿಷ್ಣುಭಕ್ತಿ, ಭಾಗವತ ಧರ್ಮಗಳಿಗೆ ಪ್ರೋತ್ಸಾಹ ನೀಡಿದ್ದರಿಂದ ವೈಷ್ಣವಮತಕ್ಕೆ ಅಲ್ಲಿ ಇಂಬುದೊರಕುವಂತಾಗಿತ್ತು.

ಮುಂದೆ ಶ್ರೀರಾಜೇಂದ್ರತೀರ್ಥರು, ಶ್ರೀಜಯಧ್ವಜತೀರ್ಥರು ಬಂಗಾಲದಲ್ಲಿ ಸಂಚಾರಮಾಡಿ ಪರವಾದಿಗಳನ್ನುಜಯಿಸಿ ವಿಶೇಷರೀತಿಯಲ್ಲಿ ವಿಷ್ಣುಭಕ್ತಿ, ಭಾಗವತ ಧರ್ಮ,ದ್ವೈತಸಿದ್ಧಾಂತಗಳ ಪ್ರಸಾರಮಾಡಿದರು. ಶ್ರೀಜಯಧ್ವಜತೀರ್ಥರು ವಂಗ ದೇಶದ ಶ್ರೇಷ್ಠಪಂಡಿತನಾದ ತಮ್ಮ ಶಿಷ್ಯನೊಬ್ಬನಿಗೆ ಸನ್ಯಾಸವಿತ್ತು "ವಿಷ್ಣುಪುರಿ" ಎಂಬ ಹೆಸರಿನಿಂದ ತಮ್ಮ ಮಠದ ಒಂದು ಶಾಖೆಗೆ ಆತನನ್ನು ಅಧಿಪತಿಯನ್ನಾಗಿ ಮಾಡಿ ತಮ್ಮ ಪ್ರತಿನಿಧಿಯಾಗಿದ್ದು ವಂಗದೇಶದಲ್ಲಿ ಮಧ್ವಮತ,ವಿಷ್ಣುಭಕ್ತಿಗಳನ್ನು ಪ್ರಸಾರಮಾಡಲು ವ್ಯವಸ್ಥೆಮಾಡಿದರು.

ಇಂದಿನ ಬಂಗಾಲದ ವೈಷ್ಣವಮತ, ವಿಷ್ಣುಭಕ್ತಿ, ಭಾಗವತ ಸಂಪ್ರದಾಯಗಳಿಗೆ ಮೂಲಪುರುಷರೇ ಈ ವಿಷ್ಣುಪುರಿಗಳು. ಅವರು ಪ್ರಪ್ರಥಮವಾಗಿ ಭಾಗ

ಮತವನ್ನು ವಂಗದೇಶದಲ್ಲಿ ಜನಪ್ರಿಯವಾಗುವಂತೆಮಾಡಿ ದೇಶದಲ್ಲೆಲ್ಲಾ ವೈಷ್ಣವ ಮತ ಪ್ರಸಾರಮಾಡಿದರು. ಇದು 'ಭಕ್ತಿರತ್ನಾಕರ' ಭಕ್ತಿರತ್ನಾವಳಿಗಳಿಂದ ವ್ಯಕ್ತವಾಗುವುದು.

ಪ್ರಖ್ಯಾತ ವಿಮರ್ಶಕ ಪಂಡಿತರಾದ ರಾಯ್‌ಬಹದ್ದೂರ್ ದಿನೇಶಚಂದ್ರಸೇನ್ ಎಂಬುವವರು ಬರೆದಿರುವ" ಚೈತನ್ಯ ಮತ್ತು ಅವರ ಮಿತ್ರರು (Chaitanya and His Companions) ಎಂಬ ಗ್ರಂಥದಲ್ಲಿ ಬಂಗಾಲದ ಚೈತನ್ಯಮತದ ಉಗಮಕ್ಕೆ ಮಾಧ್ವಸಂಪ್ರದಾಯದ ಆಲ್ಲಿನ ವೈಷ್ಣವ ಪಂಥದ ಹತ್ತನೆಯ ಗುರುಗಳಾದ ಜಯಧರ್ಮ (ಜಯಧ್ವಜ)ರ ಶಿಷ್ಯರಾದ ವಿಷ್ಣುಪುರಿಗಳೇ ಕಾರಣರೆಂದೂ ಅವರೇ ಭಾಗವತವನ್ನು ತಮ್ಮ ಭಕ್ತಿರತ್ನಾವಳಿಯ ಮೂಲಕವಾಗಿ ಜನಪ್ರಿಯವಾಗುವಂತೆ ಮಾಡಿದರೆಂದು ಅವರ ಭಕ್ತಿರತ್ನಾವಳಿಯಿಂದ ಸ್ಪಷ್ಟವಾಗುವುದೆಂದೂ ಬರೆದಿದ್ದಾರೆ.[1]

ದಿನೇಶಚಂದ್ರಸೇನರು ಮಾಧ್ವಪೀಠದ ಹತ್ತನೆಯ ಶ್ರೀಜಯಧರ್ಮ ಅಥವಾ ಜಯಧ್ವಜತೀರ್ಥರೇ ವಂಗದೇಶದ ಭಕ್ತಿಪಂಥದ ಮೂಲ ಪ್ರಸಾರಕರೆಂದು ಹೇಳಿರುವುದು ಮಾತ್ರವಲ್ಲದೆ ಶ್ರೀಮಧ್ವಾಚಾರ್ಯರ ಮಹಾಸಂಸ್ಥಾನದ ಶ್ರೀರಾಜೇಂದ್ರ ಪರಂಪರೆಯ, ಅಂದರೆ ಈಗಿನ ಶ್ರೀವ್ಯಾಸರಾಯಮಠದ ವಂಶವೃಕ್ಷವನ್ನು ಕೊಟ್ಟು ಈ ವಂಶದ ಮಾಧ್ವಮಠವೇ ತಮ್ಮ ಮತದ (ಚೈತನ್ಯ ಸಂಪ್ರದಾಯದ) ಮೂಲವೆಂದು ಹೇಳಿರುವುದು ಗಮನಾರ್ಹವಾಗಿದೆ.[2]

ಶ್ರೀಜಯಧ್ವಜತೀರ್ಥರ ಶಿಷ್ಯರಾದ ವಿಷ್ಣುಪುರಿಯವರ ಪರಂಪರೆಯಲ್ಲಿ

---

1. "It was to the Madhwa sect that Bangal has great Vaishnava faith, the Culminating Point of which was reached in the life of Chaitanya. We find in the "Bhakti Ratnakara" that Vishnupuri, a disciple of Jayadharma (Jayadhwaja), the tenth leader of this sect, popularized the Bhagavata amongst the Bangalies about the middle of the 13th century by his celebrated work called the "Bhakti Ratnavali". This seems to be the first impetus of Vaishnavism theat came from the Madhwa (Maddhi) order in Bengal," RaiSaheb Dinesh Chandra sen,

—"Chaitanya and His Companions" P.297.

2. —"Chaitanya and his Companions"—Page-207.

ಬಂದ ಶಿಷ್ಯರೇ ಶ್ರೀಕೃಷ್ಣಚೈತನ್ಯ ಪ್ರಭುಗಳು.[1] ಶ್ರೀಚೈತನ್ಯರು ಮುಂದೆ ವಂಗ ದೇಶವಲ್ಲೆಲ್ಲಾ ವ್ಯಾಪಕವಾಗಿ ವೈಷ್ಣವಮತವನ್ನೂ, ವಿಷ್ಣುಭಕ್ತಿ, ಭಾಗವತ ಧರ್ಮ ಗಳನ್ನೂ ಪ್ರಚಾರಮಾಡಿ ವಂಗದೇಶೀಯರನ್ನು ವಿಷ್ಣುಭಕ್ತರನ್ನಾಗಿ ಮಾಡಿದರು.

ಶ್ರೀವ್ಯಾಸರಾಜರು ವಂಗದೇಶಕ್ಕೆ ಬರುವುದರೊಳಗಾಗಿ ; ಶ್ರೀವ್ಯಾಸರಾಜರು ಪಕ್ಷಧರಮಿಶ್ರನನ್ನು ವಾದದಲ್ಲಿ ಜಯಿಸಿ ದ್ವೈತಸಿದ್ಧಾಂತ ಪ್ರತಿಷ್ಠಾನಮಾಡಿದ ಕೀರ್ತಿಯು ಬಂಗಾಲದಲ್ಲೆಲ್ಲಾ ಹರಡಿದ್ದಿತು. ಅಂತೆಯೇ ಶ್ರೀವ್ಯಾಸತೀರ್ಥರಿಗೆ ಅಲ್ಲಿ ಅಪೂರ್ವ ಸ್ವಾಗತದೊರಕಿತು. ಶ್ರೀವ್ಯಾಸರಾಜರು ವಂಗದೇಶದಲ್ಲೆಲ್ಲಾ ಸಂಚಾರ ಮಾಡಿ ಅನೇಕಕಡೆ ಶ್ರೀವಿಷ್ಣುಮಂದಿರಗಳನ್ನು ಪ್ರತಿಷ್ಠಾಪಿಸಿ. ನ್ಯಾಯ-ವೇದಾಂತಾದಿ ಶಾಸ್ತ್ರಕೋವಿದರಾದ ಅನೇಕ ಪರಮತೀಯ ವಿದ್ವಾಂಸರನ್ನು ಜಯಿಸಿ, ಹೋದ ಲ್ಲೆಲ್ಲಾ ದ್ವೈತಮತದ ಪ್ರತಿಕ್ರಿಯೆಗಳು, ವಿಷ್ಣುಭಕ್ತಿ, ಭಾಗವತ ಧರ್ಮಗಳನ್ನು ಪ್ರಸಾರಮಾಡಿ ನೂರಾರು ಜನರಿಗೆ ಮಂತ್ರಮುದ್ರಾಧಾರಣ-ಗುರೂಪದೇಶದ್ವಾರಾ ಮಾಧ್ವದೀಕ್ಷೆಯನ್ನು ಅನುಗ್ರಹಿಸಿದರು.

ವಂಗದೇಶೀಯರಿಗೆ ತಮ್ಮ ವೈಷ್ಣವಪಂಥದ ಬೆಳವಣಿಗೆಗೆ ಮೂಲಕಾರಣ ರಾದ ಶ್ರೀರಾಜೇಂದ್ರ-ಜಯಧ್ವಜತೀರ್ಥರ ಪೀಠಾಧೀಶರೇ ಶ್ರೀವ್ಯಾಸರಾಜರೆಂದು ತಿಳಿದಮೇಲಂತೂ ಶ್ರೀಗುರುಗಳಲ್ಲಿ ಅವರಿಗೆ ಅಸಾಧಾರಣ ಭಕ್ತಿಗೌರವಗಳುಂಟಾ ದವು. ಶ್ರೀಗಳವರು ಪ್ರತಿದಿನ ಪಾಠಪ್ರವಚನ, ದೇವರದರ್ಶನ, ತೀರ್ಥಪ್ರಸಾದ ಶ್ರೀವಿಷ್ಣುತತ್ವ, ಸನಾತನಧರ್ಮ, ಶ್ರೀಹರಿಭಕ್ತಿಗಳ ಉಪದೇಶಗಳಿಂದ ವಂಗದೇಶದ ಶಿಷ್ಯ-ಭಕ್ತಜನರನ್ನು ಅನುಗ್ರಹಿಸಹತ್ತಿದರು. ಸಾವಿರಾರು ಜನ ಶ್ರೀಯವರ ಶಿಷ್ಯ ರಾದರು.

ಶ್ರೀವ್ಯಾಸತೀರ್ಥರು ಬಹುಕಾಲ ವಂಗದೇಶದಲ್ಲಿದ್ದರು. ಮತ್ತು ಅಲ್ಲಿನ ಓರ್ವ ಪಂಡಿತಶಿಷ್ಯನಿಗೆ ಪರಮಹಂಸಾಶ್ರಮವಿತ್ತು "ಶ್ರೀಲಕ್ಷ್ಮೀತೀರ್ಥ" ರೆಂದು ನಾಮ ಕರಣಮಾಡಿ ಶ್ರೀಮಧ್ವಾಚಾರ್ಯರ ಸಿದ್ಧಾಂತ ಪ್ರಸಾರಮಾಡುತ್ತಿರಬೇಕೆಂದು

---

1. ಶ್ರೀಕೃಷ್ಣಚೈತನ್ಯರು ವಿಷ್ಣುಪುರಿಗಳ ಸಾಕ್ಷಾತ್ ಶಿಷ್ಯರೆಂದು ಕೆಲವರು ಹೇಳುವರು. ಮತ್ತೆ ಕೆಲವರು ವಿಷ್ಣುಪುರಿಗಳ ವೈಷ್ಣವಪಂಥದ ಪಡಿಮೂಲನೆಯ ಗುರುಗಳಾದ ಶ್ರೀಲಕ್ಷ್ಮೀತೀರ್ಥರ ಶಿಷ್ಯರು ಎಂದೂ ಹೇಳುವರು. ಈ ಲಕ್ಷ್ಮೀತೀರ್ಥರೇ ಶ್ರೀವ್ಯಾಸರಿಂದ ಸನ್ಯಾಸ ಪಡೆದ ಕೃಷ್ಣ ಚೈತನ್ಯರಿಗೆ ಪ್ರೇರಕಶಕ್ತಿಗಳಾಗಿದ್ದಾರೆ.

ಆಜ್ಞಾಪಿಸಿ* ಕರ್ನಾಟಕದತ್ತ ಪ್ರಯಾಣಬೆಳೆಸಲು ಸಿದ್ಧರಾದರು. ವಂಗದೇಶದ ಭಗವದ್ಭಕ್ತರೂ ಶಿಷ್ಯರೂ ಆದ ಧಾರ್ಮಿಕರು ಶ್ರೀಗಳವರನ್ನು ಕಳಿಸಿಕೊಡಲ್ಲ ಒಪ್ಪದಾದರು. ಶ್ರೀವ್ಯಾಸರಾಜರು ಅವರೆಲ್ಲರಿಗೂ ಮತ್ತೆಬರುವುದಾಗಿ ಭರವಸೆ ನೀಡಿ, ತಮ್ಮ ಶಿಷ್ಯರಾದ ಶ್ರೀಲಕ್ಷ್ಮೀತೀರ್ಥರ ಪ್ರಾರ್ಥನೆಯಂತೆ ತಮ್ಮ ಪಾದುಕೆ ಗಳನ್ನು ಕರುಣಿಸಿ ಎಲ್ಲರಿಂದ ಬೀಳ್ಕೊಂಡು ಅಲ್ಲಿಂದ ಪ್ರಯಾಣಬೆಳೆಸಿದರು.

ಶ್ರೀವ್ಯಾಸರಾಜರು ಹೀಗೆ ಉತ್ತರಭಾರತದ ದಿಗ್ವಿಜಯವನ್ನು ಯಶಸ್ವಿಯಾಗಿ ಮುಗಿಸಿಕೊಂಡು ಕ್ರಿ.ಶ.1477ರ ಹೊತ್ತಿಗೆ ಸಂಚಾರಕ್ರಮದಿಂದ ಶ್ರೀತಿರುಪತಿಗೆ ದಯಮಾಡಿಸಿ ಅಲ್ಲಿ ಶ್ರೀವೆಂಕಟೇಶ್ವರನಿಗೆ ತಮ್ಮೆಲ್ಲ ದಿಗ್ವಿಜಯಾದಿಗಳನ್ನು ಸಮರ್ಪಿಸಿ ದೇವರಸೇವೆಮಾಡಿ ಸ್ವಾಮಿಯ ಅನುಗ್ರಹಪಡೆದು ಕೃತಾರ್ಥರಾದರು. ತಿರುಪತಿ ಯಲ್ಲಿರುವಾಗಲೇ ಸಾಳುವ ನರಸಿಂಹರಾಜನು ಶ್ರೀವಿಬುಧೇಂದ್ರ ತೀರ್ಥರ ಅಧ್ಯಕ್ಷತೆ ಯಲ್ಲಿ ನೆರವೇರಿಸಿದ ಅಪೂರ್ವ ವಿದ್ವತ್ಸಭೆ, ಆ ಕಾಲದಲ್ಲಿ ಶ್ರೀಲಕ್ಷ್ಮೀನಾರಾಯಣ ಯೋಗಿಗಳು ತೋರಿದ ಪಾಂಡಿತ್ಯ, ವಾದಿದಿಗ್ವಿಜಯ,ಅವರು ರಚಿಸಿದ "ವಾಗ್ವಜ್ರ" ಗ್ರಂಥದ ಅನುವಾದ- ಪ್ರಕಾಶನ-ಯತಿ–ಪಂಡಿತ–ಪೀಠಾಧೀಶ- ಮಹಾರಾಜಾದಿಗಳ ಕೋರಿಕೆಯಂತೆ ಶ್ರೀವಿಬುಧೇಂದ್ರಗುರುಗಳು ಶ್ರೀಲಕ್ಷ್ಮೀನಾರಾಯಣಮುನಿಗಳಿಗೆ ಅನುಗ್ರಹಿಸಿದ"ಶ್ರೀಪಾದರಾಜ"ಪ್ರಶಸ್ತಿ, ಅನಂತರ ಸಾಳುವ ನರಸಿಂಹಭೂಪಾಲನು ಗುರುಗಳನ್ನು ಚಂದ್ರಗಿರಿಗೆ ರಾಜಗೌರವದಿಂದ ಕರೆದುಕೊಂಡುಹೋಗಿ ಕರ್ನಾಟಕರತ್ನ ಸಿಂಹಾಸನದಲ್ಲಿ ಗುರುಗಳನ್ನು ಮಂಡಿಸಿ ಭಕ್ತ್ಯಾದರಗಳಿಂದ "ರಾಜಗುರು"ಗಳನ್ನಾಗಿ ಮಾಡಿಕೊಂಡು ಸಲ್ಲಿಸಿದ ಅನಿತರ ಸಾಧಾರಣ ಗೌರವಾದಿವಿಚಾರಗಳು ಶ್ರೀವ್ಯಾಸರಾಜ ರಿಗೆ ತಿಳಿದು ಪರಮಾನಂದತುಂದಿಲರಾದರು.ಗುರುಗಳನ್ನು ಸಂದರ್ಶಿಸುವ ಉತ್ಸಾಹ ದಿಂದ ತಿರುಪತಿಯಿಂದ ಹೊರಟು ಮುಳುಬಾಗಲಿಗೆ ದಿಗ್ವಿಜಯಮಾಡಿದರು.

ಮತ್ತೆ ಗುರುಶಿಷ್ಯರ ಸಮಾಗಮವಾಯಿತು.ಗುರುಪಾದರ ಅಪ್ಪಣೆಯಂತೆ ಶ್ರೀ ವ್ಯಾಸತೀರ್ಥರು ತಮ್ಮ ಉತ್ತರಭಾರತದ ದಿಗ್ವಿಜಯ ವಿಚಾರವನ್ನು ಸಾದ್ಯಂತವಾಗಿ ನಿವೇದಿಸಿ—"ಗುರುವರ್ಯ. ನಾವು ಅತ್ತ ತೀರ್ಥಯಾತ್ರೆಯಲ್ಲಿದ್ದಾಗ ಇಲ್ಲಿಸಾಳುವ ನರಸಿಂಹರಾಜರು ತಮ್ಮ ನೇತೃತ್ವದಲ್ಲಿ ಪರಮಪೂಜ್ಯ ಗುರುಪಾದರಾದ ಶ್ರೀವಿಬು

---

1. "Lakshmi Thirtha, evidently a Bhramhana of North, appears to have taken Sanysa from Sri Vyasaraya"— —Introduction to Sri Vyasayogi Charita—P. CXXIII.
2. The 13th Leeder of the Maddhi Sect was Lakshmi Tirtha....Lakshmi Tirtha lived to a good age, he may well have lived ofter 1477 A. D. and met Nityananda" —Chaitanya and His Companions—P. 299.

ಧೇಂದ್ರತೀರ್ಥ ಶ್ರೀಪಾದಂಗಳವರ ಅಧ್ಯಕ್ಷತೆಯಲ್ಲಿ ಅಪೂರ್ವವಾದ ಷಡ್ದರ್ಶಿನೀ ವಿದ್ವನ್ಮಹಾಸಭೆಯನ್ನು ನೆರವೇರಿಸಿದ್ದು, ಆ ಕಾಲದಲ್ಲಿ ತಾವು ರಚಿಸಿದ "ವಾಗ್ವಜ್ರ"ವೆಂಬ ವಾದಗ್ರಂಥವನ್ನು ಅನುವಾದಮಾಡಿ ಗುರುಪಾದರ ಅಮೃತಹಸ್ತದಿಂದ ಪ್ರಕಾಶನಗೊಳಿಸಿದ್ದು, ಆ ಕಾಲದಲ್ಲಿ ಸೇರಿದ್ದ ಪರಮಹಂಸ-ಪಂಡಿತ-ಮಂಡಲಿಯ ಪ್ರಾರ್ಥನೆಯಂತೆ ಶ್ರೀವಿಬುಧೇಂದ್ರಗುರುವರರು ತಮಗೆ "ಶ್ರೀಪಾದರಾಜ"ಪ್ರಶಸ್ತಿಯನ್ನು ಅನುಗ್ರಹಿಸಿ ಸನ್ಮಾನಿಸಿದ್ದು, ಆ ನಂತರ ನರಸಿಂಹಭೂಪಾಲನು ತಮ್ಮನ್ನು ಚಂದ್ರಗಿರಿಗೆ ಕರೆಯಿಸಿಕೊಂಡು ರಾಜಸಿಂಹಾಸನದಲ್ಲಿ ಮಂಡಿಸಿ ತಮ್ಮನ್ನು "ರಾಜಗುರು"ಗಳನ್ನಾಗಿ ಮಾಡಿಕೊಂಡು ಗೌರವಿಸಿದ ವಾರ್ತೆಗಳು ತಿರುಪತಿಯಲ್ಲಿ ನಮಗೆ ತಿಳಿಯಿತು. ನಮಗಾದ ಆನಂದವನ್ನು ಬರೀಮಾತಿನಲ್ಲಿ ನಿರೂಪಿಸಲು ಸಾಧ್ಯವಿಲ್ಲ. ಇದೆಲ್ಲವೂ ತಮ್ಮ ಅಪಾರ ಮಹಿಮೆಗಳಿಗೆ ದ್ಯೋತಕವೆಂದು ನಾವು ನಂಬಿದ್ದೇವೆ. ಇದು ನಿಜವಾಗಿ ಶ್ರೀಮದಾಚಾರ್ಯರ ಸತ್ಸಿದ್ಧಾಂತಕ್ಕೆ ದೊರೆತ ಗೌರವವೆಂದು ನಾವು ಭಾವಿಸುತ್ತೇವೆ. ಆದರೆ ಸ್ವಾಮಿ, ಯಾವ ಗುರುಪಾದರ ಅನುಗ್ರಹದಿಂದ ಸಂಪಾದಿಸಿದ ಸಕಲಶಾಸ್ತ್ರ ಪಾಂಡಿತ್ಯವನ್ನು ತಾವು ನಮಗೆ ಧಾರೆಯೆರೆದು ಅನುಗ್ರಹಿಸೋಣವಾಯಿತೋ ಅಂಥ ಜಗನ್ಮಾನ್ಯ ದ್ವೈತಸಿದ್ಧಾಂತ ಪ್ರತಿಷ್ಠಾಪನ ಚಕ್ರವರ್ತಿಗಳಾದ ಪರಮಪೂಜ್ಯ ಶ್ರೀ ವಿಬುಧೇಂದ್ರತೀರ್ಥಗುರುಪಾದರ ದರ್ಶನಲಾಭವು ನಮಗಾಗಲಿಲ್ಲವೆಂಬ ಕೊರತೆಯೊಂದು ನಮ್ಮನ್ನು ಬಾಧಿಸುತ್ತಿದೆ, ಭಗವತ್ಸಂಕಲ್ಪವೇ ಹಾಗಿರಲು ನಾವೇನು ಮಾಡಬಲ್ಲೆವು ! ಒಟ್ಟಿನಲ್ಲಿ ಆ ಜಗದ್ಗುರುಗಳ ಪಾದಗಳನ್ನು ಮುಟ್ಟಿ ನಮಿಸಿ ಕೃತಾರ್ಥಾಂತರಂಗರಾಗುವ ಭಾಗ್ಯ ನಮಗಿಲ್ಲವಾಯಿತು, ಆದರೂ ನಮಗೊಂದು ಬಗೆಯ ತೃಪ್ತಿಯಾಗಿದೆ. ಆ ಮಹನೀಯರ ದ್ವಾರಾ ತಮಗೆ ಲಭಿಸಿದ ತಮ್ಮ ಅನುಗ್ರಹದಿಂದ ನಮಗೆ ಪ್ರಾಪ್ತವಾದ ಆ ಸದ್ ಜ್ಞಾನವು ನಮ್ಮಲ್ಲಿರುವವರೆಗೆ ಆ ಪೂಜ್ಯರು ನಮ್ಮೊಡನಿದ್ದು ಆಶೀರ್ವದಿಸುತ್ತಿರುವರೆಂದೇ ನಾವು ನಂಬಿದ್ದೇವೆ !" ಎಂದು ಮುಂತಾಗಿ ವಿಜ್ಞಾಪಿಸಿದರು.

ಶ್ರೀಲಕ್ಷ್ಮೀನಾರಾಯಣ ಮುನೀಂದ್ರರಿಗೆ ಶಿಷ್ಯರ ಮಾತುಕೇಳಿ ಅತೀವ ಆನಂದವಾಯಿತು. ಮೈ ಪುಳಕಿಸಿತು. ನಸುನಗುತ್ತಾ—"ಪರಮಾಶ್ಚರ್ಯ ! ಪ್ರಿಯಶಿಷ್ಯರೇ, ಇದೇ ಅಭಿಪ್ರಾಯವು ಪೂಜ್ಯ ಗುರುಪಾದರ ಬಾಯಿಂದಲೂ ಬಂದಿತು ! ಗುರುಪಾದರು ನಿಮ್ಮ ವಿಷಯವಾಗಿ ಬಹು ಅಭಿಮಾನ ಪ್ರೀತಿಗಳನ್ನು ವ್ಯಕ್ತಪಡಿಸಿದರು. ಅವರು ಹೇಳಿದ ಮಾತು ಇನ್ನೂ ನಮ್ಮ ಕಿವಿಗಳಲ್ಲಿ ಗುಂಯ್‌ಗುಟ್ಟುತ್ತಿದೆ! ಅವರೆಂದರು —"ಪ್ರಿಯಶಿಷ್ಯರೇ, ನಾವು ನಿಮಗೆ ಧಾರೆ ಎರೆದ ಸಕಲಶಾಸ್ತ್ರ, ಶ್ರೀಮದಾಚಾರ್ಯ ಟೀಕಾಕೃತ್ಪಾದ ಪರಂಪರಾಪ್ರಾಪ್ತ ಪಾಠಪ್ರವಚನ ಸಂಪ್ರದಾಯ ರಹಸ್ಯಗಳನ್ನು ನೀವು ಪರಮಶ್ರೇಷ್ಠರಾದ ಶಿಷ್ಯರಿಗೆ ಧಾರೆಯೆರೆದು ನಮ್ಮ ಶ್ರಮ ಆಶಯಗಳನ್ನು ಸಾರ್ಥಕ ಪಡಿಸಿದ್ದೀರಿ, ನಿಮ್ಮ ಶಿಷ್ಯರ ಕೀರ್ತಿ ಈಗಾಗಲೇ ಸರ್ವತ್ರ ವ್ಯಾಪಿಸಿದೆ ! ಅಂಥ ನಮ್ಮ ವಿದ್ಯಾಪ್ರಶಿಷ್ಯರನ್ನು ಕಂಡು ಆನಂದಿಸಿ ಆಶೀರ್ವದಿಸಲು ನಮ್ಮ

ಮನಸ್ಸು ಕಾತರಿಸುತ್ತಿತ್ತು. ನಾವು ಇತ್ತ ಬಂದಾಗಲೇ ಅವರು ಉತ್ತರಭಾರತ ದಿಗ್ವಿಜಯಕ್ಕೆ ಹೊರಟಿದ್ದಾರೆ ! ಇದೂ ಶ್ರೀಹರಿ ಸಂಕಲ್ಪಕ್ಕೊಂದು ಉದಾಹರಣೆ ಯಾಗಿದೆ. ಹೂಂ, ನಾವು ಅವರನ್ನು ಬೇರೊಂದು ರೂಪದಿಂದ* ಕಾಣಬೇಕೆಂಬುದು ಶ್ರೀಹರಿಚಿತ್ತವೋ ಏನೋ ! ಅದಾರು ಬಲ್ಲರು ? ನಮ್ಮ ವಿದ್ಯೆಯು ಅವರ ಮೂಲಕವಾಗಿ ನಾನಾವಿಧವಾಗಿ ಸರ್ವತ್ರ ಹರಡಿ, ಅವರಿಂದ ಉದ್ದಾಮ ಪಂಡಿತರಾದ ಶಿಷ್ಯರು ತಯಾರಾಗಿ, ಆ ಶಿಷ್ಯ-ಪ್ರಶಿಷ್ಯ ಪರಂಪರೆಯುವರು ಶತ-ಶತಮಾನಗಳವರೆಗೆ ಪರವಾದಿ ದಿಗ್ವಿಜಯ ಪೂರ್ವಕವಾಗಿ, ಗ್ರಂಥರಚನಾದ್ವಾರಾ, ದ್ವೈತಸಿದ್ಧಾಂತ ವನ್ನು ನಿಷ್ಕಂಟಗೊಳಿಸಿ ಈ ಭವ್ಯ ಸಿದ್ಧಾಂತವನ್ನು ಮುಂದುವರೆಸಿಕೊಂಡು ಹೋಗುವರೆಂದು ನಮಗೆ ಶ್ರೀಹರಿವಾಯುಗಳು ಪ್ರೇರಿಸುತ್ತಿದ್ದಾರೆ. ಇದಕ್ಕಿಂತ ಸಂತಸದ ವಿಚಾರ ಬೇರಾವುದಿದೆ ? ನಿಮ್ಮ ಶಿಷ್ಯರಿಗೆ, ಅಲ್ಲ, ನಮ್ಮ ಪ್ರೀತಿಯ ಪ್ರಶಿಷ್ಯರಿಗೆ ಅಂತಃಕರಣಪೂರ್ವಕವಾದ ನಮ್ಮ ಶುಭಾಶೀರ್ವಾದಗಳನ್ನು ತಿಳಿಸಿರಿ ಎಂದು ಆಜ್ಞಾಪಿಸಿದ್ದರು" ಎಂದು ಹೇಳಿದರು.

ಗುರುಗಳ ವಚನವನ್ನಾಲಿಸಿ ಶ್ರೀವ್ಯಾಸತೀರ್ಥರಿಗೆ ಅಮಂದಾನಂದವಾಯಿತು. ಅವರು ಸಂತೋಷಭರದಿಂದ "ಧನ್ಯರಾದೆವು ! ಆ ಮಹಾನುಭಾವರ ಅನುಗ್ರಹಾ ಶೀರ್ವಾದಗಳು ಪೂಜ್ಯರಾದ ತಮ್ಮ ಮೂಲಕ ನಮಗೆ ದೊರಕಿದ್ದು ನಮ್ಮ ಸೌಭಾಗ್ಯ. ಕೃತಾರ್ಥರಾದೆವು" ಎಂದು ವಿಜ್ಞಾಪಿಸಿದರು.

ಶ್ರೀವ್ಯಾಸಭಗವಾನರು ಗುರುಗಳ ಸನ್ನಿಧಿಯಲ್ಲಿ ಕೆಲಕಾಲ ವಾಸಮಾಡಿ ಅವರು ರಚಿಸಿದ "ವಾಗ್ವಜ್ರ"ವನ್ನು ಅಧ್ಯಯನಮಾಡಿ ತರುವಾಯ ಗುರುಗಳ ಅಪ್ಪಣೆ ಪಡೆದು ಅಬ್ಬೂರಿಗೆ ದಯಮಾಡಿಸಿದರು.

## ೨೯. ಕನ್ನಡ ಸಾಮ್ರಾಜ್ಯದ ಹಿತಚಿಂತನೆ

ಸಾಳುವ ನರಸಿಂಹನು ಕರ್ನಾಟಕ ಸಾಮ್ರಾಜ್ಯಧುರಂಧರನಾದಮೇಲೆ ತನ್ನ ಗುರು ಗಳಾದ ಶ್ರೀಲಕ್ಷ್ಮೀನಾರಾಯಣ ಮುನಿಗಳ ದರ್ಶನಮಾಡಿ, ಸಾಮ್ರಾಜ್ಯದಲ್ಲಿ ಜರುಗು ತ್ತಿರುವ ಸಮಸ್ತ ವಿಚಾರಗಳನ್ನು ಅರುಹಿ, ಶ್ರೀಪಾದಂಗಳವರು ತನ್ನೊಡನಿದ್ದು ಸಾಮ್ರಾಜ್ಯಹಿತಸಾಧನೆಯಲ್ಲಿ ಮಾರ್ಗದರ್ಶನಮಾಡಬೇಕೆಂದು ಬೇಡಿದನು. ಶ್ರೀ ಗಳವರು ತಾವು ವೃದ್ಧರಾಗಿರುವುದರಿಂದ ತಮ್ಮನ್ನು ಒತ್ತಾಯಪಡಿಸಬಾರದೆಂದೂ ಈ ಮಹತ್ಕಾರ್ಯವನ್ನು ನೆರವೇರಿಸಲು ಅತ್ಯಂತ ಸಮರ್ಥರಾದ ತಮ್ಮ ಶಿಷ್ಯರನ್ನು ಕಳಿಸಿಕೊಡುವುದಾಗಿಯೂ ಅವರ ಮಾರ್ಗದರ್ಶನ-ಉಪದೇಶಗಳಂತೆ ನಡೆದು ಕೀರ್ತಿ ಶಾಲಿಯಾಗಬೇಕೆಂದೂ ತಿಳಿಸಿ ನರಸಿಂಹಭೂಪತಿಯನ್ನು ಆಶೀರ್ವದಿಸಿ ಕಳುಹಿಸಿ

---

*ಶ್ರೀಪುರುಷೋತ್ತಮತೀರ್ಥರು ಮುಂದೆ ಶ್ರೀವಿಜಯೀಂದ್ರತೀರ್ಥರಾಗಿ ಅವತರಿಸಿ ಶ್ರೀವ್ಯಾಸರಾಜರ ಪ್ರಿಯಶಿಷ್ಯರಾದರೆಂದು ಜ್ಞಾನಿಗಳು ಹೇಳುವರು.

ಕೊಟ್ಟರು. ಮತ್ತು ತಾವು ನರಸಿಂಹ ಭೂಪತಿಗೆ ನೀಡಿದ ಭರವಸೆಯನ್ನು ಪೂರ್ಣಮಾಡಲು ಅಬ್ಬೂರಿನಿಂದ ಶ್ರೀವ್ಯಾಸತೀರ್ಥರನ್ನು ಮುಳಬಾಗಲಿಗೆ ಕರೆಸಿಕೊಂಡರು.

ಶ್ರೀವ್ಯಾಸರಾಜರು ಬಂದು ಕೆಲದಿನಗಳಾಗಿತ್ತು. ಒಂದು ದಿನ ಶ್ರೀಗಳವರು ಶಿಷ್ಯರಿಗೆ ಕನ್ನಡಸಾಮ್ರಾಜ್ಯಕ್ಕೆ ಬಂದ ಗಂಡಾಂತರ, ಇತ್ತೀಚೆಗೆ ರಾಜಕೀಯವಾಗಿ ಉಂಟಾಗಿರುವ ಬದಲಾವಣೆ,ನರಸಿಂಹಭೂಪಾಲನು ತಮ್ಮಲ್ಲಿ ಪ್ರಾರ್ಥಿಸಿದ್ದು,ತಮ್ಮ ಭರವಸೆ ಮುಂತಾದ ವಿಚಾರಗಳನ್ನು ತಿಳಿಸಿ ಕನ್ನಡಸಾಮ್ರಾಜ್ಯದ ಹಿತದೃಷ್ಟಿಯಿಂದ ರಾಜಾಸ್ಥಾನಕ್ಕೆ ಹೋಗಿ ಅಲ್ಲಿ ನರಸಿಂಹನಿಗೆ ಗುರುಗಳಾಗಿದ್ದು, ಉಪದೇಶ—ಮಾರ್ಗದರ್ಶನಗಳಿಂದ ರಾಜ್ಯದ ಅಭ್ಯುದಯಕ್ಕೆ ಸಹಾಯ ಮಾಡಬೇಕೆಂದು ಆಜ್ಞಾಪಿಸಿದರು.

ವ್ಯಾಸರಾಜರು "ಗುರುವರ್ಯ, ನಾವು ಸನ್ಯಾಸಿಗಳು, ಅರಮನೆಗೂ-ಗುರುಮನೆಗೂ ಬಹುದೂರ, ರಾಜಾಸ್ಥಾನವು ನಮ್ಮಂಥವರಿಗೆ ಯುಕ್ತವಲ್ಲವೇನೋ ಎಂದು ನಮಗನಿಸುತ್ತಿದೆ" ಎಂದು ವಿಜ್ಞಾಪಿಸಿದರು.

ಆಗ ಶ್ರೀಗಳವರು "ದೇಶದ ಹಿತ, ಪ್ರಜರಲ್ಲಿ ಧಾರ್ಮಿಕ, ಆಧ್ಯಾತ್ಮಿಕ. ಪ್ರಜ್ಞೆಗಳನ್ನು ಪ್ರಚೋದಿಸಿ ತತ್ತ್ವ, ಧರ್ಮ, ವಿಷ್ಣುಭಕ್ತಿ, ಭಾಗವತಧರ್ಮ ಪ್ರಸಾರ ದ್ವಾರಾ ಸರ್ವರಲ್ಲಿ ಶ್ರದ್ಧೆಯುಂಟಾಗುವಂತೆ ಮಾಡುವುದು ಧರ್ಮಪೀಠಾಧಿಪತಿಗಳ ಕರ್ತವ್ಯವೇ ಆಗಿದೆ. ಅದು ಸಫಲವಾಗಬೇಕಾದರೆ ದೇಶದಲ್ಲಿ ಶಾಂತಿ ಸಮಾಧಾನ, ಸಂತೋಷಗಳ ವಾತಾವರಣವುಂಟಾಗಬೇಕು. ಅದು ಆಗಬೇಕಾದರೆ ಆಡಳಿತ ಸುಲಲಿತವಾಗಿ ನಡೆದು ರಾಜ್ಯದಲ್ಲಿ ಸುಭದ್ರಸ್ಥಿತಿಯುಂಟಾಗಬೇಕು. ಆಗಮಾತ್ರ ರಾಷ್ಟ್ರಾಭ್ಯುದಯವಾಗಿ ಧಾರ್ಮಿಕತಳಹದಿಯ ಮೇಲೆ ಜನತೆಯ ಜೀವನ ಸುಲಭವಾಗುವುದು. ಇದನ್ನು ಸ್ಥಾಪಿಸುವಲ್ಲಿ ಜ್ಞಾನಿಗಳ ಪಾತ್ರವೂ ಹಿರಿದಾದು ಮತ್ತು ಅವರ ಧರ್ಮವೂ ಆಗಿದೆ. ಈ ಎಲ್ಲ ದೃಷ್ಟಿಯಿಂದ ನೀವು ನರಸಿಂಹರಾಜನ ಗುರುಗಳಾಗಿದ್ದು ಮಾರ್ಗದರ್ಶನ ಮಾಡುವುದು ಅತ್ಯವಶ್ಯವೆಂದು ನಾವು ಭಾವಿಸುತ್ತೇವೆ" ಎಂದು ನುಡಿದರು.

ಆದರೂ ಶ್ರೀವ್ಯಾಸರಾಜರು ಇಂಥ ಮಹತ್ವಕಾರ್ಯವನ್ನು ತಾವು ನಿರ್ವಹಿಸಬಲ್ಲೆವೇ ? ಆ ಶಕ್ತಿ ತಮಗಿದೆಯೇ ಎಂಬ ಸಂದೇಹದಿಂದ ಗುರುಗಳ ವಚನವನ್ನು ನೆರವೇರಿಸಲು ಹಿಂದುಮುಂದು ನೋಡಲಾರಂಭಿಸಿದರು.

ಶ್ರೀವ್ಯಾಸತೀರ್ಥರ ಮನದಿಂಗಿತವನ್ನು ಅರಿತು ಶ್ರೀಲಕ್ಷ್ಮೀನಾರಾಯಣ ಮುನಿಗಳು ನಸುನಗುತ್ತಾ "ಪ್ರಿಯ ಶಿಷ್ಯರೇ, ನೀವು ಯೋಚಿಸುವ ಕಾರಣವಿಲ್ಲ. ಜಗತ್ತಿನಲ್ಲಿ ಸರಸ್ವತಿದೇವಿಯಲ್ಲಿ ಸಕಲವಿದ್ಯೆಯೂ, ಭಾರ್ಗವರಾಮನಲ್ಲಿ ಪ್ರತಿಭಟರನ್ನು ಪರಾಭವಗೊಳಿಸುವ ಪ್ರತಿಭಾಸಂಪತ್ತೂ,ದೇವಗುರುಬೃಹಸ್ಪತ್ಯಾಚಾರ್ಯರಲ್ಲಿ ಅಡತಡೆಯಿಲ್ಲದ ಬುದ್ಧಿಚಾತುರ್ಯವೂ, ದಿನಮಣಿಯಲ್ಲಿ ಆಶ್ಚರ್ಯಕರ ತೇಜಸ್ಸು

ಚಂದ್ರಮನಲ್ಲಿ ಜನಮನಾನಂದಕಾರಕ ನೈಪುಣ್ಯವೂ, ಯಜ್ಞೇಶ್ವರನಲ್ಲಿ ಲೋಕ ಪಾವನಕಾರಕ ಶುಚಿತ್ವವೂ, ಪರ್ವತರಾಜನಲ್ಲಿ ಅಚಂಚಲ ಸ್ಥೈರ್ಯವೂ, ಕಲ್ಪತರುವಿನಲ್ಲಿ ಅಸಾಮಾನ್ಯ ದಾತೃತ್ವವೂ, ಭಗವಾನ್ ಶ್ರೀವಾಸುದೇವನಲ್ಲಿ ಚಿತ್ರವಿಚಿತ್ರ ಮಾಹಾತ್ಮ್ಯೆಯೂ ನೆಲೆಗೊಂಡಿರುವುದು ಲೋಕಪ್ರಸಿದ್ಧವಾಗಿದೆ. ಈ ಎಲ್ಲ ಸಂಪತ್ತುಗಳೂ ಅಭೂತಪೂರ್ವ ಅಭಿವೃದ್ಧಿಯಿಂದ ಪ್ರಖ್ಯಾತರಾದ ನಿಮ್ಮೊಬ್ಬರಲ್ಲಿಯೇ ಶ್ರೀಹರಿವಾಯುಗಳ ಅನುಗ್ರಹದಿಂದ ಸಮನ್ವಯಗೊಂಡು ಕಂಗೊಳಿಸುತ್ತಿದೆ.[1] ಎಂದು ನಾವು ಧೈರ್ಯವಾಗಿ ಹೇಳಬಲ್ಲೆವು! ಈ ಕಾರ್ಯವು ನಿಮ್ಮಿಂದ ಯಶಸ್ವಿಯಾಗಿ ಜರಗುವುದೆಂಬ ಭರವಸೆಯು ನಮಗಿದೆ, ಆದುದರಿಂದ ಕನ್ನಡಸಾಮ್ರಾಜ್ಯದ ಹಿತದೃಷ್ಟಿಯಿಂದ ನೀವು ನರಸಿಂಹರಾಜನಿಗೆ ಉಪದೇಶಕ ಗುರುಗಳಾಗಿದ್ದು ಅನುಗ್ರಹಿಸುವುದು ಅತಿಮುಖ್ಯವಾಗಿದೆ. ಹಿಂದೆ ಮಹನೀಯರಾದ ಶ್ರೀವಿದ್ಯಾರಣ್ಯರು ವೈರಾಗ್ಯನಿಧಿಗಳಾಗಿ ಜ್ಞಾನಿಗಳೂ, ಸನ್ಯಾಸಿಗಳೂ ಆಗಿದ್ದರೂ, ದೇಶದ ಹಿತದೃಷ್ಟಿಯಿಂದ ಕರ್ನಾಟಕಸಾಮ್ರಾಜ್ಯವನ್ನು ಸ್ಥಾಪಿಸಲು ಮುಂದಾದುದನ್ನು ಸ್ಮರಿಸಿರಿ.

ಆದುದರಿಂದ ಸಾಯಂಸಮಯದಲ್ಲಿ ಬಾಡಿದ್ದ ಕಮಲಗಳನ್ನು ಸೂರ್ಯಭಗವಾನನು ಉದಯಿಸುತ್ತಲೇ ವಿಕಾಸಗೊಳಿಸುವಂತೆ ದುಷ್ಟವಚನ ಸುರಾಪಾನಮತ್ತರಾಗಿ ಜಡಪ್ರಾಯರಾಗಿರುವ ಸನಾತನ ವೈದಿಕ ಧರ್ಮಾಚಾರಶೀಲರನ್ನು, ದೇಶದ ಪ್ರಜರನ್ನು ನೀವೀಗ ಜಾಗೃತಗೊಳಿಸಬೇಕಾಗಿದೆ. ಜನತೆಯಲ್ಲಿ ನವಚೈತನ್ಯ, ಸ್ಫೂರ್ತಿಗಳನ್ನು ತುಂಬಬೇಕಾಗಿದೆ. ಮುಖ್ಯವಾಗಿ ದ್ವೈತಸಿದ್ಧಾಂತದ ಪ್ರಸಾರವಾಗಬೇಕಾಗಿದೆ. ಅದಕ್ಕೆ ರಾಜಸ್ಥಾನವೇ ಸರಿಯಾದಸ್ಥಳ. ಆ ಕಾರ್ಯಮಾಡಲು ನೀವೊಬ್ಬರೇ ಸಮರ್ಥರು.[2]

---

1. "ಅಯೇ,ಜಗತಿ ವಿಜಯತೇ ಕೇವಲಂ ಶಾರದಾಯಾಮೇವ ಹೃದ್ಯಾ ನಿಖಿಲವಿದ್ಯಾ। ಭಾರ್ಗವ ಏವ ಪ್ರತಿಭಟಪ್ರತಿಭಯಾ ಪ್ರತಿಮಾ, ಧಿಷಣ ಏವ ಅಪ್ರತಿಹತಮೇದುರ ಮದಾವದಾವದತಾ ವಿಕರ್ತನ ಏವ ವಿಸ್ಮಾಪಿತತೇಜಃಪ್ರಪಂಚಃ ಸುಧಾಕರ ಏವ ಸಕಲಜನ ಮನಃಪ್ರೀಣನಂ ನೈಪುಣ್ಯಂ. ವಿಭಾವಸಾವೇವ ವಿಶ್ವಾಸಿತಲೋಕಬುದ್ಧಿಃ ಶುದ್ಧಿಃ ಮೇದಿನೀಧರಾದಿಪಶೃಂಗ ಏವ ವಿಶೇಷ ಧೌರಂಧರ್ಯಂ, ಮಂದಾರ ಮಹೀರುಹ ಏವ ಅನನ್ಯಸಾಮಾನ್ಯ ವದಾನ್ಯತಾ, ಭಗವತಿ ವಾಸುದೇವ ಏವ ವಿಚಿತ್ರಾಣಿ ಚರಿತ್ರಾಣಿ ॥

   ಅಭೂತ ಪೂರ್ವಾಭ್ಯುದಯೇ ತ್ರಿಲೋಕೀಕೀ
   ಪಟೀಕುಟೀ (ಪ್ರೌ) ಭವದುಚ್ಚಕೀರ್ತೇ ।
   ಸಮಸ್ತಮೇತತ್ತು ಸಮೇಧಮಾನಂ
   ತ್ವಯ್ಯೇಕವಾಸ್ತವ್ಯತಯಾ ಸಮಿಂಧೇ ॥

   ಮಹಾಕವಿ-ಸೋಮನಾಥ-ಶ್ರೀವ್ಯಾಸಯೋಗಿಚರಿತಮ್-P. 40

2. ಅಹೋ ದಿನವಿರಾಮಣೇವ ಖಿಲಜನಯೋ ವ್ಯಾಮೋಹಘೂರ್ಣೇನ ಸರೋಜಿನ್ಯಾ ಇವ ಚಿರೇಣ ನಿದ್ರಾಣಾಯಾಃ ವೈದಿಕಾಚಾರ ಮಂದ್ರಾಯೋಃ ದಿನಕರ ಇವ ಭವಾನ್ ಪ್ರತಿಬೋಧನ ಕಾರ್ಮಠೀ ಭವತಿ॥"

   -ವ್ಯಾಸಯೋಗಿಚರಿತಮ್-P. 40

ಸಕಲ ತತ್ತ್ವಗಳು, ಧರ್ಮಗಳಿಗೂ ರಾಜನು ಸೇತುವೆಯಂತಿರುವನು.ಆದಕಾರಣ ನೀವೀಗ ರಾಜಸ್ಥಾನದಲ್ಲಿ ಸರ್ವದಾ ಇದ್ದುಕೊಂಡು ಮಹಾರಾಜನಿಗೆ ಹಿತೋಪದೇಶಮಾಡುತ್ತಾ ಅವನು ಧರ್ಮದಿಂದ ರಾಜ್ಯಪರಿಪಾಲನೆಮಾಡುತ್ತಾ ಪ್ರಜಾರಂಜಕನಾಗಿ ಬಾಳುವಂತೆ ಮಾಡುವುದು ನಿಮ್ಮ ಕರ್ತವ್ಯ. ಈ ವಿಚಾರವಾಗಿ ನೀವು ಸಂದೇಹಿಸಬೇಕಾಗಿಲ್ಲ. ಏಕೆಂದರೆ ಹಿಂದಿನ ಕಾಲದಲ್ಲಿ ಶ್ರೀದತ್ತಾತ್ರೇಯ, ವಸಿಷ್ಠ, ವಾಮದೇವ ಮೊದಲಾದ ಯೋಗಿಗಳೂ, ತಪಸ್ವಿಗಳೂ, ವೈರಾಗ್ಯದಿಂದ ನಿಸ್ಸಂಗರಾಗಿದ್ದರೂ ಕೂಡ ಸಮಸ್ತಲೋಕದ ಹಿತದೃಷ್ಟಿಯಿಂದ ರಾಜಸ್ಥಾನಗಳಲ್ಲಿ ಗುರುಪೀಠಗಳನ್ನು ಅಲಂಕರಿಸಿ ಲೋಕೋಪಕಾರಮಾಡಿದ್ದಾರೆ.[1] ಆದುದರಿಂದ ನೀವು ನಮ್ಮ ಶಿಷ್ಯನಾದ ನರಸಿಂಹಭೂಪತಿಯ ಆಸ್ಥಾನದಲ್ಲಿದ್ದು ಉಪದೇಶ-ಮಾರ್ಗದರ್ಶನಾದಿಗಳಿಂದ ಕನ್ನಡನಾಡಿನ ಹಿತವನ್ನೂ, ಪ್ರಜಾಕ್ಷೇಮವನ್ನೂ ತತ್ತ್ವ-ಧರ್ಮಪ್ರಸಾರಗಳನ್ನೂ ಸಾಧಿಸಬೇಕು" ಎಂದು ಅಪ್ಪಣೆ ಮಾಡಿದರು.

ಗುರುಗಳ ಉಪದೇಶದಿಂದ ಸಮಾಧಾನಗೊಂಡು ಶ್ರೀವ್ಯಾಸತೀರ್ಥರು ಗುರುಗಳಿಗೆ ಕರಮುಗಿದು "ತಮ್ಮ ಅಪ್ಪಣೆಯಂತೆ ನಡೆಯುತ್ತೇನೆ" ಎಂದು ಹೇಳಿ ಗುರುಗಳನ್ನು ಸಂತೋಷಪಡಿಸಿ, ಗುರುಗಳ ಆಶೀರ್ವಾದಪಡೆದು ಕೆಲ ಶಿಷ್ಯರೊಡಗೂಡಿ ನಕ್ಷತ್ರಗಣಮಂಡಿತನಾದ ಚಂದ್ರನಂತೆ ಸಾಳುವ ನರಸಿಂಹಭೂಪಾಲನ ರಾಜಧಾನಿಯಾದ ಮಹಾಚಲಪುರಿಗೆ (ಚಂದ್ರಗಿರಿಗೆ) ಪ್ರಯಾಣಬೆಳೆಸಿದರು.[2]

## ೩೦. ಬ್ರಾಹ್ಮಣಕುಮಾರನಿಗೆ ಪ್ರಾಣದಾನಮಾಡಿದರು

ಶ್ರೀವ್ಯಾಸರಾಜರು ಮಿತಪರಿವಾರವಾಗಿ ಚಂದ್ರಗಿರಿಯ ರಾಜಸ್ಥಾನಕ್ಕೆ ಹೊರಟು ಸಂಚಾರಕ್ರಮದಿಂದ ರಾಜಧಾನಿಗೆ ಸಮೀಪದಲ್ಲಿದ್ದ ಒಂದು ವನಪ್ರದೇಶಕ್ಕೆ ಚಿತ್ತೈಸಿದರು. ಆ ಹೊತ್ತಿಗೆ ಮಧ್ಯಾಹ್ನವಾದ್ದರಿಂದ ಅಲ್ಲಿ ನಿಬಿಡವಾದ ವೃಕ್ಷಗಳ ನೆರಳಿನ ಮಧ್ಯೆ ಒಂದು ಪ್ರಶಸ್ತವಾದ, ವಿಸ್ತಾರವಾದ ಸರೋವರವನ್ನು ಕಂಡು ಅಂದಿನ

---

1. "ತತ್ರ ಸರ್ವೇಷಾಮಪಿ ಧರ್ಮಾಣಾಂ ರಾಜಾ ಸೇತುರಿತಿ ನ್ಯಾಯೇನ ಭವತಾ ಸರ್ವದಾತದಾ-ತದಾಸ್ಥಾನೀಸ್ಥೇಯೇಷಾ ಭವಿತವ್ಯಮ್ । ಪುರಾ ಕಿಲ ಯೋಗಿನೋ ನಿಸ್ಸಂಗಾ ಅಪಿ ಮಹಾಂತೋ ದತ್ತಾತ್ರೇಯಾದಯಃ ಜಗದುಪಕರಣಾಯ ರಾಜನ್ಯಸಭಾಲಂಕಾರಾ ಬಭೂವುಃ ॥
—ಶ್ರೀವ್ಯಾಸಯೋಗಿ ಚರಿತಮ್-P 40

2. ಇತ್ಯುಕ್ತವಂತಮಥ ತಂ ಸ ತಥೇತಿ ವಾಚಾ
ತುಷ್ಟಂ ವಿಧಾಯ ನರಸಿಂಹನವೀನಗುಪ್ತಾಂ ।
ಶಿಷ್ಯೈಸ್ಸಮಂ ಕತಿಪಯೈರುಡುಭಿಶ್ಶಶೀವ
ಸಂಪ್ರಸ್ಥಿತಃ ಪ್ರತಿಮಹಾಚಲರಾಜಧಾನೀಮ್ ॥
—ವ್ಯಾಸಯೋಗಿಚರಿತಮ್-P 40

ಪೂಜಾರಾಧನೆಯನ್ನು ಅಲ್ಲಿಯೇ ನೆರವೇರಿಸಲು ನಿಶ್ಚೈಸಿ ಆ ವನದಲ್ಲಿ ತಂಗಿದರು.[1]

ಆನಂತರ ಯೋಗಿವರ್ಯರು ತಿಳಿಯೂ, ಸ್ವಚ್ಛವೂ ಶೀತಲವೂ ಆದ ಆ ಸರೋವರದ ಜಲದಲ್ಲಿ ಸ್ನಾನಮಾಡಿ ಮಾಧ್ಯಾನ್ಹಿಕ-ಜಪ-ತಪಾದ್ಯನುಷ್ಠಾನಗಳನ್ನು ಪೂರೈಸಿ, ಶಿಷ್ಯರು ತಂದುಕೊಟ್ಟ ಕಲ್ಹಾರ, ಕಮಲ, ಕೈರವಾದಿ ಕುಸುಮಗಳು ಮತ್ತು ತುಳಸಿ ಪತ್ರಾದಿಗಳಿಂದ ದೇವತಾರ್ಚನೆ ಮಾಡಿದರು.[2]

ಆಗ ಇದ್ದಕ್ಕಿದ್ದಂತೆ ಆ ಸರೋವರದ ದಕ್ಷಿಣಭಾಗದ ವೃಕ್ಷಗಳ ಗುಂಪಿನಿಂದ ಯಾರೋ ಚೀತ್ಕರಿಸಿ ಗಟ್ಟಿಯಾಗಿ ಅಳುತ್ತಿರುವ ಧ್ವನಿಯುನ್ನು ಕೇಳಿ ಇದೇನೆಂದು ಶ್ರೀವ್ಯಾಸತೀರ್ಥರು ಯೋಚಿಸುತ್ತಿರುವಂತೆಯೇ ಬ್ರಾಹ್ಮಣ ದಂಪತಿಗಳು ಭುಜದ ಮೇಲೆ ಓರ್ವ ಬಾಲಕನನ್ನು ಹೊತ್ತುಕೊಂಡು ಸರೋವರದ ಬಳಿಗೆ ಬಂದು ಬಾಲಕನ ಕಳೇಬರವನ್ನು ಸರಸ್ಸಿನ ಬೇರೊಂದು ಭಾಗದಲ್ಲಿರಿಸಿ ಬಾಲಕನ ಮುಖವನ್ನು ನೋಡುತ್ತಾ ದುಃಖತಪ್ತರಾಗಿ ರೋಧಿಸಹತ್ತಿದರು.

ಅದನ್ನು ಕಂಡು ದಯಾಳುಗಳಾದ ಶ್ರೀವ್ಯಾಸಮುನಿಗಳು ಮೆಲ್ಲನೆ ಆ ದಂಪತಿಗಳಿದ್ದೆಡೆಗೆ ಆಗಮಿಸಿ "ಎಲೈ ಗೃಹಸ್ಥನೇ, ನೀನು ಯಾರು? ಎಲ್ಲಿಂದ ಬಂದೆ? ಕಂಟಕಮಯವಾದ ಈ ಅರಣ್ಯಪ್ರದೇಶಕ್ಕೆ ಏತಕ್ಕಾಗಿ ಬಂದೆ? ನಿನ್ನ ಈ ಪುತ್ರನು ಹೇಗೆ ಮರಣವನ್ನಪ್ಪಿದನು ?" ಎಂದು ಪ್ರಶ್ನಿಸಿದರು.

ದುಃಖಾರ್ತನಾದ ಆ ಭೂಸುರನು ಗದ್ಗದಕಂಠದಿಂದ ಹೀಗೆ ವಿಜ್ಞಾಪಿಸಿದನು: "ಭಗವನ್! ನನ್ನ ಜನ್ಮಾಂತರ ದುಷ್ಕರ್ಮದ ಫಲವಾಗಿ ಬಂದೊದಗಿದ ದುಃಖವನ್ನು ಏನೆಂದು ಹೇಳಲಿ? ಇಲ್ಲಿಗೆ ಸಮೀಪದಲ್ಲಿರುವ ಗ್ರಾಮದಲ್ಲಿ ನಾನು ವಾಸಿಸುತ್ತಿರುವೆನು. ನಮ್ಮ ವಂಶದ ಕುಡಿಯಾದ ಇವನು ನನ್ನ ಏಕಮಾತ್ರ ಪುತ್ರನು. ಇವನು ಇಂದು ಮುಂಜಾನೆ ಸಮವಯಸ್ಕರೊಡನೆ ಸಮಿತ್ತುಗಳನ್ನು ಆರಿಸಿತರಲು ಈ ವನಪ್ರದೇಶಕ್ಕೆ ಬಂದನು. ಒಂದು ದೊಡ್ಡ ವಟವೃಕ್ಷದ ಬುಡದಲ್ಲಿ ಸಮಿತ್ತುಗಳನ್ನು ಸಂಗ್ರಹಿಸುತ್ತಿರುವಾಗ ಆ ವಟವೃಕ್ಷದ ಪೊಟರೆಯಿಂದ ಒಂದು ಘಟಸರ್ಪವು ಬಂದು ಇವನನ್ನು ಕಚ್ಚಿಬಿಟ್ಟಿತು. ದುರ್ಧರವಾದ ವಿಷಜ್ವಾಲೆಯು ಕೂಡಲೇ ದೇಹದಲ್ಲಿ

---

1. ಮಾರ್ಗಂ ವಿಲಂಘಿತವತಃ ಕ್ರಮಶೋ ಮಹಾಂತಂ
ಮಧ್ಯೇದಿನಂ ವನತರುಪ್ರಕಟೋಪಗೂಢವ್ |
ಅಗ್ರೇ ಸರಸ್ಯ ಯತಿನಾಮಮಲಾಂಬುಗರ್ಭ-
ಮಗ್ರೇಸರೋ ನಯನಯೋರತಿಥೀ ಬಭೂವ ||

—ವ್ಯಾ. ಯೋ. ಚ–P. 41

2. ಸ್ನಾತ್ವಾ ಸ ತತ್ರ ಸಲಿಲೈಃಶಿಶಿರೀಭವದ್ಭಿಃ ಭಾನೋರಗೋಚರತಯಾ ಪರಿತಃಕರಾಣಾಂ |
ದೇವಾರ್ಚನಾಮಕೃತಶಿಷ್ಯಜನಾಹೃತಾಭಿಃ ಕಲ್ಹಾರತಾಮರಸಕೈರವ ಮಂಜರೀಭಿಃ ||

—ಶ್ರೀವ್ಯಾಸಯೋಗಿಚರಿತಮ್–ಪುಟ 41.

ವ್ಯಾಪಿಸಿ ಈ ವಂಶದೀಪಕನು ನಮ್ಮನ್ನು ಅನಾಥಕರನ್ನಾಗಿಮಾಡಿ ಮೃತನಾದನು. ಇವನ ಸಂಗಡಿಗರು, ದಾರಿಹೋಕರಾದ ಆಪ್ತೇಷ್ಟರಿಂದ ವಿಷಯವರಿತು ನಾವಿಲ್ಲಿಗೆ ಧಾವಿಸಿದೆವು. ನಮಗೆ ಏಕೈಕ ಆಧಾರನಾಗಿದ್ದ ನಮ್ಮ ಕಂದನು ಜೀವ ತೊರೆದು ಬಿದ್ದಿರುವುದನ್ನು ಕಂಡು ದುಃಖಸಮುದ್ರದಲ್ಲಿ ಮುಳುಗಿಹೋದೆವು. ಹಿತೈಷಿಗಳು ನಮ್ಮನ್ನು ಬಗೆಬಗೆಯಿಂದ ಸಮಾಧಾನಪಡಿಸಿದರು. ನಾವು ಇವನನ್ನು ಹೊತ್ತು ಮುಂದಿನ ಕಾರ್ಯಕ್ಕಾಗಿ ಇಲ್ಲಿಗೆ ಬಂದೆವು. ಸ್ವಾಮಿ, ನಾವು ಯಾರಿಗೂ ಅನ್ಯಾಯ ಮಾಡಿದವರಲ್ಲ, ಸ್ವವರ್ಣಾಶ್ರಮೋಚಿತಾಚಾರ ನಿಷ್ಠರಾದ ನಮಗೂ, ನಮ್ಮ ಪುತ್ರನಿಗೂ ಕರುಣೆಯಿಲ್ಲದೆ ಪರಮಾತ್ಮನು ಏಕೀ ದುರವಸ್ಥೆಯನ್ನು ತಂದನೋ ನಾನರಿಯೆ"ಹೀಗೆ ಹೇಳಿ ಆ ದ್ವಿಜನು ಪತ್ನಿಯೊಡನೆ ಅಳಲಾರಂಭಿಸಿದನು.

ಆ ದಂಪತಿಗಳ ದುಃಖವನ್ನು ಕಂಡು ದಯಾಮಯರಾದ ಶ್ರೀವ್ಯಾಸಭಗವಾನರ ಹೃದಯ ದ್ರವಿಸಿತು, ಅವರ ಹೃದಯಭೂಮಿಯಲ್ಲಿ ಕಾರುಣ್ಯರಸವು ಉಕ್ಕೇರಿ ಹರಿಯಿತು. ಆ ಬ್ರಾಹ್ಮಣದಂಪತಿಗಳನ್ನು ಮೃದುಮಧುರ ವಚನಗಳಿಂದ ಸಂತೈಸಿದ ಶ್ರೀಗಳವರು ತಮ್ಮ ಪವಿತ್ರ ಕಮಂಡಲೋದಕವನ್ನು ಅಭಿಮಂತ್ರಿಸಿ,ಶ್ರೀಹರಿಯನ್ನು ಧ್ಯಾನಿಸುತ್ತಾ ಮೃತನಾದ ಆ ಬಾಲಕನ ಶರೀರದ ಮೇಲೆ ಪ್ರೋಕ್ಷಿಸಿದರು. ಅದೇನಾಶ್ಚರ್ಯ! ಮೃತನಾಗಿದ್ದ ಆ ಬಾಲಕನು ನಿದ್ರೆಯಿಂದೆಚ್ಚೆತ್ತವನಂತೆ ಎದ್ದು ಕುಳಿತು ತಂದೆತಾಯಿಯರನ್ನು ಕಂಡು[1] "ಅಪ್ಪಾ ಅಮ್ಮಾ" ಎನ್ನುತ್ತ ಪೋಲಿದ್ದು ನಿಂತನು ! ಈ ಅಪೂರ್ವ ಪವಾಡದಂತಿರುವ ಘಟನೆಯನ್ನು ಕಂಡು ಆಶ್ಚರ್ಯಚಕಿತರಾದ ವಿಪ್ರ ದಂಪತಿಗಳು ಕುಮಾರನ ಮುಖವನ್ನು ನೋಡಿ ಪರಮಾನಂದತುಂದಿಲರಾಗಿ, ರೋಮಾಂಚಿತರಾಗಿ ತಮ್ಮ ಕುಮಾರನನ್ನು ಭರದಿಂದಪ್ಪಿ ಮುದ್ದಾಡಿದರು.[2]

ತಮ್ಮ ಕುಮಾರನಿಗೆ ಜೀವದಾನಮಾಡಿ ಮಹಾಮಹಿಮೆಯನ್ನು ತೋರಿದ ಶ್ರೀ ವ್ಯಾಸರಾಜಯತಿಗಳಿಗೆ ಆ ದಂಪತಿಗಳು ಪುತ್ರಸಹಿತರಾಗಿ ಭಯಭಕ್ತಿಭರಿತರಾಗಿ ಸಾಷ್ಟಾಂಗ ಪ್ರಣಾಮಮಾಡಿ ಗುರುಗಳ ಕಾರುಣ್ಯ, ಮಹೋಪಕಾರಗಳನ್ನು ಕೊಂಡಾಡಿದರು. ನಂತರ ಪೂಜ್ಯ ಯತಿವರರನ್ನು ತಮ್ಮ ಮನೆಗೆ ಆಹ್ವಾನಿಸಿ ಸಂತಸದಿಂದ ಜೊತೆಗೇ ಕರೆದುಕೊಂಡುಹೋದರು.[3]

---

1] ಆಶ್ವಾಸ್ಯ ತೌ ವಾಗ್ಭಿರಯಂ ರುದಂತೌ । ವ್ಯಾಸೋ ಯತಿರ್ವಿಸ್ಮಯನೀಯಕರ್ಮಾ ॥
ಅಭ್ಯುಕ್ಷ್ಯ ಕಾಮಂಡಲುಕೀಭಿರದ್ಭಿ । ರಾಜೀವಯತ್ರಂ ಪುನರೇವ ಬಾಲಮ್ ॥

2] ಸುಪ್ತ್ವಾ ಪ್ರಬುದ್ಧಮಿವ ತಂ ಸುತಮುತ್ಥಿತಂ ತೌ । ನಿರ್ವಿಣ್ಣ ವಿಸ್ಮಯ ಪಯೋನಿಧಿ ಮಗ್ನಚೇತೌ ॥
ಪುಷ್ಯತ್ಪ್ರಮೋದಪುಲಕಾಂಕುರ ಮಾಂಸಲೇನ । ಬಾಹಾಯನೇನ ಪಿತರೌ ಪರಿಷಸ್ವಜಾತೇ॥

3] ಸುತೇನ ಸಾಕಂ ಸುಕುಮಾರಭಾಸಾ। ಕೃತ ಪ್ರಣಾಮೌ ಕೃತಿನಂ ಯತೀಂದ್ರಂ ।
ಜಾಯಾಪತೀ ತಾವದರಣ್ಯ ಭಾಗಾ । ದಾನಾಯಯಾಮಾಸತುರಾತ್ಮಗೇಹಮ್ ॥
— ಶ್ರೀವ್ಯಾಸಯೋಗಿಚರಿತಮ್. ಪುಟ–42

ಆ ದಂಪತಿಗಳು ತಮ್ಮ ಮನೆಯಲ್ಲಿ ಶಿಷ್ಯಸಹಿತರಾಗಿ ಶ್ರೀವ್ಯಾಸಯೋಗಿಗಳನ್ನು ಎರಡುದಿನವಿಟ್ಟುಕೊಂಡು, ಅವರಿಗೆ ಭಕ್ತಿಯಿಂದ ವಿಶೇಷಾದರ ಸತ್ಕಾರ ಭಿಕ್ಷೆಗಳನ್ನರ್ಪಿಸಿ ಕೃತಾರ್ಥರಾದರು. ಶ್ರೀಗಳವರು ಆ ನಂತರ ಆ ದಂಪತಿಗಳಿಗೆ ಕುಮಾರನಿಗೆ ಕೃಪೆಯಿಂದ ಫಲಮಂತ್ರಾಕ್ಷತೆಯಿತ್ತು ಆಶೀರ್ವದಿಸಿ, ಅಲ್ಲಿಗೆ ಅತಿ ಸಮೀಪವಲ್ಲಿದ್ದ ಚಂದ್ರಗಿರಿಗೆ ಶಿಷ್ಯಸಮೇತರಾಗಿ ದಯಮಾಡಿಸಿದರು.[1]

## ೩೧. ರಾಜಾಸ್ಥಾನದಲ್ಲಿ ಶ್ರೀ ವ್ಯಾಸರಾಜರು

ಕೋಟೆ ಕೊತ್ತಲೆಗಳು ಭವ್ಯಮಂದಿರಗಳು, ಗೋಡೆಗೋಪುರಗಳು, ಉದ್ಯಾನವನಗಳು, ವಿಸ್ತಾರವಾದ ರಾಜಬೀದಿಗಳು ಮುಗಿಲು ಮುಟ್ಟುವ ಅರಮನೆಗಳಿಂದ ಶ್ರೀಮಂತಿಕೆ ವೈಭವಗಳನ್ನು ಪ್ರದರ್ಶಿಸುತ್ತಾ ಕಂಗೊಳಿಸುತ್ತಿದ್ದ ಚಂದ್ರಗಿರಿರಾಜಧಾನಿಗೆ ಶ್ರೀವ್ಯಾಸರಾಜರು ದಯಮಾಡಿಸಿದರು. ಆಕಸ್ಮಿಕವಾಗಿ ಪೂರ್ವಸೂಚನೆ ನೀಡದಯೇ ಚಿತ್ತೈಸಿದ ಶ್ರೀಗಳವರ ಸವಾರಿಯನ್ನು ಕಂಡ ರಾಜಧಾನಿಯ ಪಂಡಿತರೊಬ್ಬರು ಗುರುಗಳನ್ನು ಭಕ್ತಿಗೌರವಗಳಿಂದ ತಮ್ಮ ಮನೆಗೆ ಕರೆದೊಯ್ದು ಸತ್ಕರಿಸಿದರು. ಅಂದು ಆ ಪಂಡಿತರ ಮನೆಯಲ್ಲಿಯೇ ಭಿಕ್ಷೆಯನ್ನು ಸ್ವೀಕರಿಸಿ, ಸಾಯಂ ದೀಪಾರಾಧನೆಯನ್ನು ಮುಗಿಸಿ ವಿಶ್ರಮಿಸಿದರು.

ಇತ್ತ ಚಂದ್ರಗಿರಿಯ ಅರಮನೆಯಲ್ಲಿ ಸಚಿವ–ಸಾಮಂತ–ಸೈನ್ಯಾಧಿಪತಿಗಳು ರಾಜಮನ್ನೆಯರು, ಪಂಡಿತರು, ಕವಿಗಳು, ಗಾಯಕರು, ಪೌರಜಾನಪದರಿಂದ ತುಂಬಿದ ರಾಜಸಭೆಯಲ್ಲಿ ಉನ್ನತ ವೇದಿಕೆಯಮೇಲೆ ಕಂಗೊಳಿಸುವ ಸಿಂಹಾಸನದಲ್ಲಿ ಮಂಡಿಸಿ ಸಾಳುವ ನರಸಿಂಹಭೂಪಾಲನು ಸಚಿವ-ಸಾಮಂತರಿಂದ ಓಲೈಸಿಕೊಳ್ಳುತ್ತಿರುವಾಗ, ನರಸಿಂಹಭೂಮೀಂದ್ರನ ಸನ್ನಿಧಿಗೆ ರಾಜಪುರೋಹಿತ ಸಹಕೃತನಾಗಿ ಸಚಿವಾಗ್ರೇಸರನಾದ ಭುವನಬಂಧುವು[2] ಮುಂದೆ ಬಂದು ಶಿರಬಾಗಿ ವಿಜ್ಞಾಪಿಸಿದನು.

"ಕನ್ನಡ ಸಾಮ್ರಾಜ್ಯಧುರಂಧರ ! ಪೂಜ್ಯಗುರುಗಳಾದ ಶ್ರೀಲಕ್ಷ್ಮೀನಾರಾಯಣ ಯೋಗೀಂದ್ರರ ಶಿಷ್ಯರೂ ಸರಸ್ವತಿಯ ಅಪರಾವತಾರರೂ ಆದ ಶ್ರೀವ್ಯಾಸತೀರ್ಥಯತೀಂದ್ರರು ಶ್ರೀಗುರುಪಾದರ ಆದೇಶದಂತೆ ನೆನ್ನೆ ಸಂಜೆ ರಾಜಧಾನಿಗೆ ದಯಮಾಡಿಸಿದ್ದಾರೆ.

---

1 ......ತತ್ರಾಹಾನಿ ದ್ವಿತ್ರಾಣಿ ಸತ್ರಾಶಿಷ್ಯೈಸ್ಸಮಾರಾಧಿತೋ ಭಗವಾನ್ ಸುಮತಿಂ ತಂ ಕೃಪಯಾನುಗೃಹ್ಯ ತತ್ರಸ್ಥಾಂ ಮಹಾಚಲಪುರೀಂ ಶನೈಶ್ಶನೈರುಪಾಸೀದತ್ ||
—ಶ್ರೀವ್ಯಾಸಯೋಗಿಚರಿತಮ್. P. ೪೨

2 ಚಿಟ್ಟಿಗಂಗಣ್ಣನೇ "ಭುವನ ಬಂಧು" ಬಿರುದಾಂಕಿತನಾದ ಸಾಳುವ ನರಸಿಂಹನ ಪ್ರಧಾನಾಮಾತ್ಯನೆಂದು ವಿಮರ್ಶಕರು ಅಭಿಪ್ರಾಯಪಡುತ್ತಾರೆ.

ಪ್ರಭು ! ಮಹನೀಯರಾದ ಶ್ರೀವ್ಯಾಸರಾಜ ಗುರುವರ್ಯರ ಕೀರ್ತಿಯು ಮಹಾಸನ್ನಿಧಿಗೆ ಈಗಾಗಲೇ ವೇದ್ಯವೇ ಆಗಿರುತ್ತದೆ.ಆ ಮಹಾತ್ಮರು ಜಾಹ್ನವಿಯು ಹಿಮಗಿರಿ ತಟವನ್ನು ಪಾವನಗೊಳಿಸುವಂತೆ ತಮ್ಮ ಶಿಷ್ಯರಾದ ಓರ್ವ ಪಂಡಿತರ ಮನೆಯಲ್ಲಿ ಬಿಡಾರಮಾಡಿ ಆ ಗೃಹವನ್ನು ಪಾವನಗೊಳಿಸಿದ್ದಾರೆ. ಅವರನ್ನು ಗೌರವದಿಂದ ಸ್ವಾಗತಿಸಿ ಕರೆತರಲು ತಮ್ಮ ಅಪ್ಪಣೆಯನ್ನು ನಿರೀಕ್ಷಿಸುತ್ತಿದ್ದೇವೆ"[1]

ಭುವನಬಂಧುಗಳ ಮಾತನ್ನಾಲಿಸಿ ನರಸಿಂಹಭೂಪಾಲನು ಕುತೂಹಲ-ಸಂಭ್ರಮ ಸಡಗರಗಳಿಂದ ಒಮ್ಮೆ ರಾಜಸಭೆಯನ್ನು ಪರಿಕಿಸಿ, ಪೂಜ್ಯ ಗುರುಗಳವರನ್ನು ಗೌರವದಿಂದ ಸ್ವಾಗತಿಸಿ ಕರೆತರಲು ರಾಜಪುರೋಹಿತರು, ದರಬಾರಿನ ಪ್ರಮುಖರು ಯೋಗ್ಯರಾದ ಪರಿವಾರದವರೊಡನೆ ತನ್ನ ಓರ್ವ ಸಚಿವರನ್ನು ಕಳುಹಿಸಿ ಕೊಟ್ಟನು.[2]

ಆ ನಂತರ ಭುವನಬಂಧುವು "ಮಹಾಪ್ರಭು ! ತಾವು ದಯಮಾಡಿಸುವುದನ್ನು ಪೂರ್ವಭಾವಿಯಾಗಿ ತಿಳಿಸದೆ ಬಂದಿರುವ ಆ ಮಹನೀಯರು ನಿಜವಾಗಿ ಮಹಾ-ತಪಸ್ವಿಗಳೂ, ವೈರಾಗ್ಯನಿಧಿಗಳೆಂದೇ ನಾನು ಭಾವಿಸುವೆನು. ನಮ್ಮ ಕನ್ನಡನಾಡು, ಇಂದಿನ ಚಕ್ರೇಶರ ಅವ್ಯವಹಾರದಿಂದಾಗಿ ಮೃತಪ್ರಾಯವಾಗಿದ್ದಾಗ ಈ ಧನ್ಯನಾಡಿಗೆ ಸ್ಫೂರ್ತಿಯನ್ನಿತ್ತು ನೂತನ ಚೈತನ್ಯವನ್ನು ತುಂಬಿ ಉಜ್ಜೀವನಗೊಳಿಸಲೆಂದೇ ಭಗವಾನ್‌ಶ್ರೀನಿವಾಸನು,ಭಗವದ್ಭಕ್ತರೂ,ಪ್ರಜಾರಂಜಕರೂ,ಆದ ತಮ್ಮನ್ನು ನಮಗೆ ಕರುಣಿಸಿರುವಂತೆ ಕನ್ನಡಸಾಮ್ರಾಜ್ಯದ ಅಭ್ಯುದಯಕ್ಕಾಗಿಯೇ ಪೂಜ್ಯಲಕ್ಷ್ಮೀನಾರಾಯಣಮುನೀಂದ್ರರು ಶ್ರೀವ್ಯಾಸತೀರ್ಥರಂತಹ ತಪಸ್ವಿಗಳನ್ನು ಕಳುಹಿಸಿರುವುದು ನಾಡಿನ ಸೌಭಾಗ್ಯವೆಂದು ಭಾವಿಸುತ್ತೇನೆ. ಇದಕ್ಕೆ ಆ ಮಹನೀಯರು ರಾಜಧಾನಿಯ ಸನಿಹಕ್ಕೆ ಬರುತ್ತಿರುವಂತೆಯೇ ತೋರಿದ ಅಪೂರ್ವ ಮಹಿಮೆಯೇ ದೃಷ್ಟಾಂತವಾಗಿದೆ! ಪ್ರಭು, ರಾಜಧಾನಿಗೆ ಹತ್ತಿರವಿರುವ ವನವೊಂದರಲ್ಲಿ ಸರ್ಪದಂಶನದಿಂದ ಮೃತನಾಗಿದ್ದ ಓರ್ವ ಬ್ರಾಹ್ಮಣಕುಮಾರನನ್ನು ಗುರುಗಳು ಮಂತ್ರೋದಕ ಪ್ರೋಕ್ಷಣದಿಂದ ಬದುಕಿಸಿದ ಅದ್ಭುತ ಪವಾಡವು ರಾಜಧಾನಿಯಲ್ಲಿ ಜನಜನಿತವಾಗಿದೆ. ಇದು ಅವರ ತಪಃಪ್ರಭಾವಕ್ಕೆ ಜ್ವಲಂತ ದೃಷ್ಟಾಂತವಾಗಿದೆ", ಎಂದರುಹಿದನು.

---

1) "ಸ್ವಾಮಿನ್,ದೇವೇನ ಬಹುಧಾ ನಿಶಮಿತ ತಾದೃಶಾನುಭಾವಸ್ಸಭಗವಾನ್ ವ್ಯಾಸಯೋಗೀ ಪೂರ್ವೇದ್ಯುಸ್ಸಮಾಗಮ್ಯ ಹಿಮಗಿರಿ ತಟಮಿವ ಜಾಹ್ನವೀಪೂರಃ ಕಮಪಿ ಕೋವಿದಾವಾಸಂ ಪಾವಯತಿ । ಅತ್ರ ದೇವಃ ಪ್ರಮಾಣಂ ಇತ್ಯಪಸಸಾರ ॥"

2) "ರಾಜಾ ತು ತದಾಕರ್ಣನ ಮಾತ್ರೇಣ ಸಮೇಧಮಾನಕುತೂಹಲಃ ಸಮುತ್ಥಿತ ಇವ ಮನಸಾ ಸಸಂಭ್ರಮಮವಲೋಕ್ಯ ಸಭಾಮಂಡಲಂ ಆತ್ಮ ಪ್ರತಿಬಿಂಬಮಿವ, ತತ್ರ ಭವತೋ ಮುನೇರಾನಯನಾಯ ಸಮುಚಿತ ಪುರುಷೈಸ್ಸಹ ಪುರೋಧಸಾ ಚ ತರಸಾ ಸಂಪ್ರೇಷಯಾಮಾಸ ॥" — ಶ್ರೀವ್ಯಾಸಯೋಗಿಚರಿತಮ್. P.-೪೫.

ಸಚಿವಾಗ್ರೇಸರನ ವಚನವನ್ನು ಕೇಳಿ ರೋಮಾಂಚಾಶ್ಚರ್ಯಚಕಿತನಾಗಿ, ನರಸಿಂಹಭೂಪಾಲನು ಆನಂದದಿಂದ "ಅಮಾತ್ಯರೇ, ಎಂತಹ ಸಂತಸದ ಸಮಾಚಾರವನ್ನರುಹಿದಿರಿ! ನಿಜ, ನಮ್ಮ ಗುರುಪಾದರಾದ ಶ್ರೀಲಕ್ಷ್ಮೀನಾರಾಯಣ ಮುನಿಗಳು ಹೇಳಿದಮಾತು ಅಕ್ಷರಶಃ ಸತ್ಯ! ಕನ್ನಡನಾಡು ಮತ್ತು ನಮ್ಮೆಲ್ಲರ ಉದ್ಧಾರಕ್ಕಾಗಿಯೇ ಭಗವಾನ್ ಶ್ರೀವೆಂಕಟೇಶ್ವರನು ಶ್ರೀವ್ಯಾಸಭಗವಾನರನ್ನು ತನ್ನ ಪ್ರತಿನಿಧಿಯಾಗಿ ನಮಗೆ ಕರುಣಿಸುತ್ತಿರುವನೆಂದು ಭಾವಿಸಿದ್ದೇನೆ. ಆ ಮಹನೀಯರ ದರ್ಶನಕ್ಕಾಗಿ ನನ್ನ ಮನವು ಹಾತೊರೆಯುತ್ತಿದೆ। ಅಂಥ ತಪಸ್ವಿಗಳು ನಮಗೆ ಗುರುಗಳಾಗಿ ದೊರಕುವುದು ನಮ್ಮ ನಾಡಿನ, ಜನತೆಯ ಪೂರ್ವಾರ್ಜಿತ ಪುಣ್ಯಫಲವೆಂದೇ ನಾನು ನಂಬಿದ್ದೇನೆ" ಎಂದು ಉದ್ಗರಿಸಿ ಶ್ರೀವ್ಯಾಸಭಗವಾನರ ಆಗಮನವನ್ನು ಕುತೂಹಲ ಭಕ್ತಿಪೂರ್ವಕ ನಿರೀಕ್ಷಿಸಹತ್ತಿದನು.

ಇತ್ತ ಶ್ರೀವ್ಯಾಸತೀರ್ಥರು ಬಿಡಾರಮಾಡಿರುವ ವಿದ್ವಾಂಸರ ಮನೆಗೆ ಪೂರ್ಣಕುಂಭ, ವೇದಘೋಷ, ವಾದ್ಯವೈಭವ, ರಾಜಗೌರವಗಳೊಡನೆ ಪಂಡಿತಮಂಡಲಿ-ಪುರೋಹಿತರಿಂದ ಸಹಿತರಾಗಿಬಂದ ರಾಜಸಚಿವರು ದೂರದಿಂದಲೇ ತೇಜಸ್ವಿಗಳಾದ ಶ್ರೀವ್ಯಾಸರಾಜಮುನಿಗಳ ದರ್ಶನಮಾಡಿದರು. ಗುರುಗಳತ್ತ ಬಂದ ಸಚಿವರು ಯತಿಗಳಿಗೆ ನಮಸ್ಕರಿಸಿ "ಭಗವನ್! ಮಹಾರಾಜರು ತಮ್ಮ ಪರಮಾನುಗ್ರಹವನ್ನು ಬಯಸುತ್ತಿದ್ದಾರೆ. ಅನುಗ್ರಹಿಸಿ ದಯಮಾಡಿಸಬೇಕು"ಎಂದು ಪ್ರಾರ್ಥಿಸಿದರು.[1]

ಶ್ರೀವ್ಯಾಸಭಗವಾನರು ನಗೆಮೊಗದಿಂದ, "ಸಂತೋಷ ಬರುತ್ತೇವೆ," ಎಂದು ಅಭಯವಿತ್ತು ಶಿಷ್ಯಮಂಡಲಿಯೊಡನೆ ದೇವೇಂದ್ರಸದನಕ್ಕೆ ಹೊರಡುವ ಆದಿಯೋಗಿಗಳಂತೆ ಅರಮನೆಗೆ ಚಿತ್ತೈಸಿದರು.[2]

ಆ ನಂತರ ಸಂತಸದಿಂದ ಸಚಿವಾದಿಗಳು ಗೌರವದಿಂದ ಕರೆತರುತ್ತಿರುವಯೋಗಿವರ್ಯರ ತೇಜಃಪುಂಜ ಮುಖಮುದ್ರೆ, ಅಪಾರ ವರ್ಚಸ್ಸುಗಳನ್ನು ನೋಡಿ ಕೊಂಡಾಡುತ್ತಾ ರಾಜಪಥದ ಎರಡುಭಾಗಗಳಲ್ಲಿಯೂ ನಿಂತು ಸಹಸ್ರಾರು ಜನರು ಗುರುಗಳ ಜಯಜಯಕಾರಮಾಡುತ್ತಿರಲು ಗುರುಗಳ ಸವಾರಿಯು ಅರಮನೆಗೆ ಸಮೀಪಿಸಿತು. ದೂರದಿಂದಲೇ ಶ್ರೀವ್ಯಾಸಯೋಗೀಂದ್ರರನ್ನು ಕಂಡ ನರಸಿಂಹ ಭೂಪಾಲನು ಅಂಕುರಿಸಿದ ವಿಸ್ಮಯದಿಂದ ಪಲ್ಲವಿಸಿದ ಭಕ್ತಿಯಿಂದಲೂ ಕುಸುಮಿತ ವಿನಯದಿಂದಲೂ, ಉಲ್ಲಸಿತ ಪ್ರಮೋದದಿಂದಲೂ,ಫಲಿತವಾದಪುಣ್ಯದಿಂದಲೂ,ಸಮೃದ್ಧಿಸಿದ ಮಂಗಳ

---

1. —"ಶತಶಃ ಪ್ರಣಿಪತ್ಯ ದೂರತಃ ಸಮುಪಜ್ಞಃ ಸಚಿವಸ್ತಪೋನಿಧಿಮ್ ।
ಅವದದ್ಭಗವನ್ ನೃಪೋಽಭವತ್ಪರಮಾನುಗ್ರಹಮಿಚ್ಛತೀತಿ ಸಃ ॥
—ಶ್ರೀವ್ಯಾಸಯೋಗಿಚರಿತಮ್, P. 46

2. "ತಾವದೇಷ ಸತಥೇತಿ ದಯಾಲುಃ ಭೂಪತೇರಭಿಸದಸ್ಸಹ ಶಿಷ್ಯೈಃ ।
ಆದಿಭಿಕ್ಷುರಿವ ನಾಕನಿಕಾಯಾದಾಲಯಂ ಸುರಪತೇರ್ನಿರಗಚ್ಛತ್ ॥"
—ಶ್ರೀವ್ಯಾಸಯೋಗಿಚರಿತಮ್. P. 46

ಸಮುದಾಯದಿಂದಲೂಕೂಡಿ, ಸಮಸ್ತರಾಜಪರಿವಾರದಿಂದೊಡಗೂಡಿ ಸಡಗರ ದಿಂದ ಸಿಂಹಾಸನದಿಂದಿಳಿದು ಮುನಿವರ್ಯರನ್ನು ಎದುರುಗೊಳ್ಳಲು ಹೊದ್ದಿದ್ದ ಶುಭ್ರ ಮೇಲ್ವಸ್ತ್ರವನ್ನು ಟೊಂಕಕ್ಕೆಕಟ್ಟಿ ಗುರುಗಳ ಸನಿಹಕ್ಕೆ ಧಾವಿಸಿ ನೆಲದಧೂಳಿ ನಿಂದ ತನ್ನ ಫಾಲ ಮತ್ತು ದೇಹಭಾಗಗಳು ದೂಸರಿತವಾಗುವಂತೆ ಗುರುಗಳ ಪಾದದಡಿಯಲ್ಲಿ ಮಲಗಿ ಸಾಷ್ಟಾಂಗ ನಮಸ್ಕಾರ ಮಾಡಿದನು.[3]

ವಿನಯಶೀಲನಾದ ರಾಜನನ್ನು ಕಂಡು ಗುರುವರ್ಯರು ಶುಭಾಶೀರ್ವಾದ ಪೂರ್ವಕವಾಗಿ ಅವನಿಗೆ ಶ್ರೀದೇವರ ಶ್ರೀಗಂಧ ಫಲಮಂತ್ರಾಕ್ಷತೆಗಳನ್ನು ದಯ ಪಾಲಿಸಿದರು. ನರಸಿಂಹಭೂಪತಿಯು ಅದನ್ನು ಭಕ್ತಿಯಿಂದ ಸ್ವೀಕರಿಸಿ ಶಿರದಲ್ಲಿ ಧರಿಸಿದನು. ಅನಂತರ ತಾಪಸಸಾರ್ವಭೌಮರನ್ನು ಉನ್ನತವಾದ ಸುವರ್ಣಮಯ ಭದ್ರಾಸನದಲ್ಲಿ ಕೂಡಿಸಿ, ಅವರ ಅಪ್ಪಣೆ ಪಡೆದು ತಾನೂ ಸ್ವಲ್ಪದೂರದಲ್ಲಿ ಕುಳಿತು ವಿನಯದಿಂದ ವಿಜ್ಞಾಪಿಸಿದನು.:—

"ಭಗವನ್, ನನ್ನ ಪೂರ್ವಾರ್ಜಿತಪುಣ್ಯ ಫಲದಿಂದ ತಮ್ಮ ದರ್ಶನ ಲಭಿಸಿತು. ಪೂಜ್ಯ ಗುರುವರ್ಯರಿಂದ ತಮ್ಮ ಗುಣಮಹಾತ್ಮ್ಯಗಳನ್ನು ಬಹುಕಾಲದಿಂದ ಕೇಳು ತ್ತಿದ್ದು, ತಮ್ಮ ದರ್ಶನಪಡೆಯಲು ಕುತೂಹಲ ಯುಕ್ತನಾಗಿದ್ದ ನನ್ನ ಕಣ್ಣುಗಳ ಅಭಿಲಾಷೆಯಿಂದು ಪೂರ್ಣವಾಯಿತು. ತಮ್ಮ ವಿಶೇಷಸನ್ನಿಧಾನದಿಂದ ಉಂಟಾದ ಆನಂದವು ಸಕಲ ಮುನಿಗಳಿಂದ ಸಹಿತರಾದ, ಸನಕಮುನೀಂದ್ರರ ಸನ್ನಿಧಾನದಿಂದ ಶೋಭಿತವಾದ ಸತ್ಯಲೋಕದ ಆನಂದ ಸುಖವನ್ನೂ ಮೀರಿಸಿದೆ !"

ಮಹಾರಾಜನ ಬಿನ್ನಹವನ್ನು ಲಾಲಿಸಿದ ವ್ಯಾಸಯತೀಂದ್ರರು ಸಾನುರಾಗ ಪೂರ್ವಕವಾಗಿ ಮಂದಹಾಸಬೀರುತ್ತಾ ಇಂತು ಅಪ್ಪಣೆಕೊಡಿಸಿದರು.

"ರಾಜೇಂದ್ರ ! ಪರಮಾತ್ಮನ ಧ್ಯಾನಾಸಕ್ತರಾದ ಸಾಧುಗಳನ್ನು ವಿಧಿಪೂರ್ವಕ ವಾಗಿ ಶ್ರದ್ಧೆಯಿಂದ ಪೂಜಿಸಿ, ಸತ್ಕರಿಸಿ ಅವರನ್ನು ಆನಂದಗೊಳಿಸುವುದು ಮೊದಲಿ ನಿಂದಲೂ ನಿಮ್ಮ ವಂಶಕ್ಕೆ ಸಹಜವಾಗಿ ಬಂದಿರುವ ಸದ್ಗುಣವಲ್ಲವೇ ? ಸಾಮ್ರಾಜ್ಯ ಕಂಟಕರಾದ ಶತ್ರುಗಳೂ ನಿನ್ನ ಪರಾಕ್ರಮದಿಂದ ಏಕಕಾಲದಲ್ಲಿ ನಾಶಹೊಂದುವುದ ರಲ್ಲಿ ಸಂದೇಹವಿಲ್ಲ. ನೀನು ಕರ್ನಾಟಕ ಸಾಮ್ರಾಜ್ಯಧುರಂಧರವಾಗಿ ವಿರಾಜಿಸುತ್ತಿ

---

3. "......ಭಗವಂತಂ ತಂ ವ್ಯಾಸಯತಿಸಾರ್ವಭೌಮಂ ದೂರಾದೇವಾವಲೋಕಯನ್ ಪರ ಪತಿಃ ಕಂದಲಿತ ಇವ ವಿಸ್ಮಯೇನ, ಪಲ್ಲವಿತ ಇವ ಭಕ್ತ್ಯಾ, ಕುಸುಮಿತ ಇವ ವಿನಯೇನ, ಪ್ರಫುಲ್ಲ ಇವ ಪ್ರಮೋದೇನ, ಫಲಿತ ಇವ ಪುಣ್ಯೇನ, ಸಮೃದ್ಧ ಇವ ಭದ್ರೇಣ, ಸಕಲೈರಪಿ ರಾಜಲೋಕೈಸ್ಸಹ ಸರಭಸಮಾಸನಾದುತ್ಥಿತಃ.. ಸೂಕ್ಷ್ಮತರಾಂ ಪಟೀಕಟೀತಟೇದೃಢಮಾಬಧ್ನನ್ ಉಪಸೃತ್ಯ ಧರಾತಲಪರಾಗತಿಲಕಿತಲಲಾಟಪಕ್ಷೋ ಭಾಗಃ ಭೂರಿಶಃ ಪ್ರಣಾಮ ॥"

ಶ್ರೀವ್ಯಾಸಯೋಗಿಚರಿತಮ್, P-46

ರುವುದರಿಂದ ದ್ವೀಪಾಂತರದ ಪ್ರತಾಪಶಾಲಿಗಳಾದ ಸಾಮಂತರಾಜರಿಗೆ ಕಪ್ಪಕಾಣಿಕೆಗಳು ತಪ್ಪಿ, ಆ ಕಪ್ಪಕಾಣಿಕೆಗಳು ಅವರಿಂದ ನಿಮಗೆ ಬರುವುದು ಲೋಕಪ್ರಸಿದ್ಧವಾಗಿದೆ. ನಿನ್ನ ಪ್ರಭಾವದಿಂದ ಶತ್ರುರಾಜರ ಪಟ್ಟಣಗಳಲ್ಲಿ ಮೆರೆಯುತ್ತಿದ್ದ ಅವರ ಧ್ವಜಗಳು ಕೆಳಗಿಳಿಸಲ್ಪಟ್ಟು, ಕನ್ನಡಸಾಮ್ರಾಜ್ಯಧ್ವಜವು ಅಲ್ಲಿ ಮೇಲೇರಿ ಮೆರೆಯುವಂತೆ ಮಾಡಿರುವ ನಿನ್ನ ಚಿತ್ರವಿಚಿತ್ರ ಶೌರ್ಯ-ಸಾಹಸಾದಿ ಚರಿತ್ರೆಯನ್ನು ಯಾರುತಾನೆ ವರ್ಣಿಸಲುಸಾಧ್ಯ ? ಹೆಚ್ಚು ಹೇಳುವುದೇನಿದೆ ? ಮಹಾರಾಜ! ಪುಣ್ಯಶ್ಲೋಕರೂ, ಮಹಾರಾಜಾಧಿರಾಜರೂ ಆಗಿದ್ದ ನಲ-ನಹುಷ ಮುಂತಾದ ಸಾರ್ವಭೌಮರಂತೆ ನೀತಿಯಿಂದ ರಾಜ್ಯಪರಿಪಾಲನೆಮಾಡುತ್ತಾ ದಿಗಂತದಲ್ಲಿ ಕಂಗೊಳಿಸುವ ಕೀರ್ತಿಯುಳ್ಳವನಾಗಿ, ಭುಜಬಲಪರಾಕ್ರಮದಿಂದ ಭೂಮಂಡಲವನ್ನು ಜಯಿಸುತ್ತಿರುವ ನಿನ್ನ ಪ್ರತಾಪವು ಅಸ್ಸಾದೃಶವಾಗಿದೆ !"[1]

ಅಷ್ಟುಹೊತ್ತಿಗೆ ಮಧ್ಯಾಹ್ನಸೂಚಕ ಶಂಖಧ್ವನಿಯಾಗಲು ದೇವತಾರ್ಚನೆಗೆ ಕಾಲಾತೀತವಾಗುವುದೆಂದು ಶ್ರೀವ್ಯಾಸತೀರ್ಥರು ಸೂಚಿಸಲು ನರಸಿಂಹಭೂಪಾಲನು ಸಕಲರಾಜಪರಿವಾರದೊಡನೆ ಮೇಲೆದ್ದು ಅಂಜಲೀಬದ್ಧನಾಗಿ ಯತಿವರರನ್ನು ಬೀಳ್ಕೊಟ್ಟು ಅವರನ್ನು ಗೌರವದಿಂದ ಕಳುಹಿಸಿಬರಲು ಅನೇಕ ಸೈನ್ಯಾದಿ ರಾಜವೈಭವದೊಡನೆ ಭುವನಬಂಧುವನ್ನು ಕಳುಹಿಸಿಕೊಟ್ಟನು, ಅಪರಿಮಿತ ವೈಭವ ಸಂಭ್ರಮಗಳಿಂದ ಭುವನಬಂಧುವು ಶ್ರೀವ್ಯಾಸತೀರ್ಥರಿಗಾಗಿ ಏರ್ಪಡಿಸಿದ್ದ ಒಂದು ವಿಶಾಲವಾದ ಭವ್ಯಮಂದಿರಕ್ಕೆ ಕರೆದುತಂದು ಬಿಟ್ಟು, ಗುರುಗಳಿಗೆ ವಾಸಮಾಡಲು ಬೇಕಾದ ಸಮಸ್ತ ವ್ಯವಸ್ಥೆಗಳನ್ನೂ ಮಾಡಿ ವ್ಯಾಸತೀರ್ಥರ ಅಪ್ಪಣೆಪಡೆದು ಅರಮನೆಗೆ ಮರಳಿದನು.

ಶ್ರೀವ್ಯಾಸತೀರ್ಥರು ಅನಂತರ ಸ್ನಾನ-ಆಹ್ನಿಕ-ಜಪ-ತಪಾದಿಗಳನ್ನು ಪೂರೈಸಿ ದೇವತಾರ್ಚನೆಯನ್ನು ಮಾಡಿ ತೀರ್ಥಪ್ರಸಾದ ವಿತರಣಪೂರ್ವಕವಾಗಿ ಅನೇಕ ಪ್ರಮುಖ-ಪಂಡಿತರೊಡನೆ ಭಿಕ್ಷೆಯನ್ನು ಸ್ವೀಕರಿಸಿದರು. ತರುವಾಯ ವಿದ್ವಾಂಸರು ಭಾಗವತಾದಿಗಳನ್ನು ಅನುವಾದಮಾಡುತ್ತಿರಲು ತತ್ವಾರ್ಥಗಳನ್ನು ವಿಬುಧಮಂಡಲಿಗೆ ಅನುವಾದಮಾಡಿ ಅಂದಿನ ರಾತ್ರಿಯನ್ನು ಕಳೆದರು.

---

1. ನೃಪನಲನಹುಷಾದೇ ರ್ನೀತಿಮಾರ್ಗಾಧ್ವನೀನಃ
ಸಕಲ ಇವ ದಿಗಂತೈಃ ಕೇವಲಂ ಕೀರ್ತಿಭಾಜೈ : |
ಭುಜಜಿತ ಭುಜಗಸ್ತ್ವಂ ಭೂಪ ! ತೇನಾವಿಶೇಷೋ
ಗುರುಮಪಿ ವಚಸಾನಾಂ ಕೋಮಲಾನಾಂ ಮಹಿಮ್ನಾ ॥"

ಶ್ರೀವ್ಯಾ. ಯೋ. ಚ. P–50

## ೩೨. ಶ್ರೀವ್ಯಾಸರಾಜರು ರಾಜಗುರುಗಳಾದರು

ಶ್ರೀ ವ್ಯಾಸತೀರ್ಥರ ಪ್ರಥಮದರ್ಶನದಿಂದಲೇ ಸಾಳುವ ನರಸಿಂಹರಾಜನಿಗೆ ಅವರಲ್ಲಿ ಅನ್ಯಾದೃಶ ಭಕ್ತಿಶ್ರದ್ಧೆಗಳುಂಟಾದವು. ಇಂಥ ಗುರುಗಳನ್ನು ತನಗೆ ಕರುಣಿಸಿದ ಶ್ರೀಲಕ್ಷ್ಮೀನಾರಾಯಣ ಮುನಿಗಳ ಉಪಕಾರವನ್ನು ಮತ್ತೆ ಮತ್ತೆ ಸ್ಮರಿಸುತ್ತಾ ಶ್ರೀವ್ಯಾಸಮುನಿಗಳಿಗೆ ರಾಜಯೋಗ್ಯವಾದ ಎಲ್ಲಾ ಅನುಕೂಲ ವೈಭವಗಳನ್ನು ಏರ್ಪಡಿಸಿಕೊಟ್ಟು ಅವರ ಅನುಗ್ರಹಕ್ಕೆ ಪಾತ್ರನಾದನು.

ಒಂದುದಿನ ಅಭಿನವ ದೇವೇಂದ್ರನ "ಸುಧರ್ಮ" ಸಭೆಯಂತೆ ಕಂಗೊಳಿಸುವ ಆ ರಾಜಸಭೆಯಲ್ಲಿ ದೇವಗುರು ಬೃಹಸ್ಪತ್ಯಾಚಾರ್ಯರೊಡನೆ ಶೋಭಿಸುವ ಇಂದ್ರದೇವನಂತೆ ಶ್ರೀವ್ಯಾಸಯತಿಸಾರ್ವಭೌಮರಿಂದೊಡಗೂಡಿ ನರಸಿಂಹಭೂಪಾಲನು ವಿರಾಜಿಸುತಿದ್ದನು.

ಆಗ ಶ್ರೀವ್ಯಾಸಯತಿಗಳಿಗೆ ಮಹರಾಜನು ಸಲ್ಲಿಸುತ್ತಿದ್ದ ಅಪಾರಗೌರವವನ್ನು ಸಹಿಸದೆ ಅಸೂಯಾಪರರಾದ, ಸ್ವವಿದ್ಯಾಹಂಕಾರದರ್ಪಿತರಾದ ಅನೇಕ ಭಟ್ಟರೇ ಮೊದಲಾದ ದುರ್ವಾದಿಗಳು ಶ್ರೀವ್ಯಾಸಭಗವಾನರನ್ನು ಸೋಲಿಸಲಿಚ್ಛಿಸಿ ಅವಮಹಮಿಕೆಯಾ ತಾವಾಗಿ ಗುರುಗಳ ಜೊತೆಗೆ ವಾದಕ್ಕೆ ಸಿದ್ಧರಾಗಿ ತಮ್ಮ ವಾದ ಕೌಶಲದಬಡಾಯಿಕೊಚ್ಚಲಾರಂಭಿಸಿದರು.

ಮಣಿಕಾರನ ಪದ್ಧತಿಯಂತೆ ನ್ಯಾಯಶಾಸ್ತ್ರ, ಮತ್ತಿತರ ಶಾಸ್ತ್ರಗಳಲ್ಲಿ ವಾದ ಪ್ರಾರಂಭವಾಯಿತು. ವಾದ-ಪ್ರತಿವಾದಗಳು ಹತ್ತೆಂಟು ದಿನಗಳವರೆಗೆ ಭರದಿಂದ ಜರುಗಿದವು. ಶ್ರೀವ್ಯಾಸಯತೀಂದ್ರರು ತಮ್ಮ ಪ್ರಕಾಂಡಪಾಂಡಿತ್ಯ, ವಾದವೈಖರಿ, ಯುಕ್ತಿಪರಂಪರೆ-ಪ್ರತಿಭೆಗಳ ಕೋಲಾಹಲಗಳಿಂದ ಸಕಲ ದುರ್ವಾದಿಗಳನ್ನು ನಿಗ್ರಹಿಸಿ ಸುಲಭವಾಗಿ ಜಯಗಳಿಸಿದರು.[1]

ಶ್ರೀವ್ಯಾಸರಾಜರ ವಾದಚಾತುರ್ಯವನ್ನು ಕಂಡು ವಿಸ್ಮಯಾನಂದಭರಿತನಾಗಿ ನರಸಿಂಹರಾಜನು "ಈ ವ್ಯಾಸರಾಜ ಗುರುವರ್ಯರು ಸಾಮಾನ್ಯರಲ್ಲ; ನಾಲ್ಕು ಮುಖಗಳಲ್ಲಿ ಮೂರನ್ನು ಮರೆಮಾಡಿ ಒಂದೇಮುಖದಿಂದ ಸತ್ಯಲೋಕದಿಂದ ಧರೆಗಿಳಿದು ಬಂದ ವಾಗ್ದೇವಿಯ ಪ್ರೇಮಕಲಾರಸಜ್ಞರಾದ ಸಾಕ್ಷಾತ್ ಬ್ರಹ್ಮದೇವರೇ ಇವರೆಂದು ನಿಶ್ಚಯಿಸಿದನು.[2]

---

1. ಸದ್ಯೋ ಯುಕ್ತಿಪರಂಪರೈಃ ಪ್ರತಿಭಟಾನ್ ವಾಗ್ಜೃಂಭಕೋಲಾಹಲೈಃ।
ಜಿತ್ವಾ ವ್ಯಾಸಮುನಿಸ್ಸಭೇಲಮಪಿಲಾಸ್ಮೃಥ್ಯೇ ಮಹೀಭೃತ್ಸಭಮ್ ॥
—ಶ್ರೀವ್ಯಾಸಯೋಗಿಚರಿತಮ್

2. ಸಮೀಕ್ಷ್ಯ ತಂ ತತ್ರ ನೃಪೋ ವಿಲಕ್ಷಃ ಪ್ರಾಭುಧ್ಯತ ತ್ರೀಣಿಮುಖಾನಿ ಮುಕ್ತ್ವಾ ।
ಭುವಂಗತಂ ತಾದೃಶಮೇವ ತೇಜೋ ವಾಗ್ದೇವತಾಪ್ರೇಮಕಲಾರಸಜ್ಞಮ್
—ಶ್ರೀವ್ಯಾಸಯೋಗಿಚರಿತಮ್—P.—52

ಸಾಳುವ ನರಸಿಂಹಭೂಪಾಲನು ಸಮಸ್ತ ಸಭೆಯ ಜಯಜಯಕಾರವಾಡು ತ್ತಿರಲು ಸಕಲ ವೈಭವದಿಂದ ಶ್ರೀವ್ಯಾಸರಾಜ ಗುರುಸಾರ್ವಭೌಮರನ್ನು ತನ್ನ ರತ್ನ ಸಿಂಹಾಸನದಲ್ಲಿ ಕೂಡಿಸಿ"ರಾಜಗುರು"ಗಳೆಂದು ಅವರಿಗೆ ಪಟ್ಟಾಭಿಷೇಕಮಾಡಿ ರಾಜ ಗುರುತ್ವದ್ಯೋತಕವಾಗಿ ಛತ್ರ, ಚಾಮರ, ಚೌರಿ, ಆಂದೋಲಿಕಾ, ಗಜ–ತುರಗ– ವಾಹನ, ಸೈನಿಕರು, ಮಂಗಳವಾದ್ಯ, ತಾಳಸ್ತುತಿಪಾಠಕರು, ವೀಣಾದಿ ವಾದ್ಯಗಳು, ಅಮೂಲ್ಯ ಪೀತಾಂಬರ, ವಸ್ತ್ರ, ಶಾಲು, ನವರತ್ನಖಚಿತವಾದ ಆಭರಣಗಳು, ಸುವರ್ಣಮಯ ಪಾತ್ರೆಗಳು, ಅತಿಥಿಪೂಜಾದಿ ಸತ್ಕಾರ ನಿರತರಾದ ಶ್ರೋತ್ರಿಯ ರಿಂದ ಕೂಡಿದ ಅಗ್ರಹಾರಗಳು, ಭೂಸ್ವಾಸ್ತಿಗಳು, ಮತ್ತಿತರ ಅಪೂರ್ವವಸ್ತು ಗಳನ್ನು ಸಮರ್ಪಿಸಿ ನಮಸ್ಕರಿಸಿದನು.[1]

ಶ್ರೀವ್ಯಾಸರಾಜರು ಮಹಾರಾಜನ ಗುರುಭಕ್ತಿ, ಔದಾರ್ಯಾದಿ ಸದ್ಗುಣಗಳನ್ನು ಶ್ಲಾಘಿಸಿ ಫಲಮಂತ್ರಾಕ್ಷತೆಯನ್ನು ಅನುಗ್ರಹಿಸಿ ಆಶೀರ್ವದಿಸಿ ರಾಜವೈಭವ ದೊಡನೆ ತಮ್ಮ ಮಠಕ್ಕೆ ದಿಗ್ವಿಜಯಮಾಡಿದರು.

ಇಂತು ಅನೇಕ ಪ್ರತಿವಾದಿಗಳನ್ನು ಜಯಿಸಿ, ರಾಜಗುರುಗಳೆಂದು ನರಸಿಂಹ ಮಹೀಪತಿಯಿಂದ ಸೇವ್ಯರಾಗಿ ಸಕಲ ಧರ್ಮಮಾರ್ಗವನ್ನು ಸಂಸ್ಥಾಪಿಸಿ ಶ್ರೀವ್ಯಾಸ ತೀರ್ಥರು ರಾಜಧಾನಿಯಲ್ಲಿ ಬಹುವರ್ಷಗಳಕಾಲ ವಾಸಮಾಡಿದರು. ಶ್ರೀವ್ಯಾಸ ರಾಜರ ಕೀರ್ತಿಯು ದಶದಿಕ್ಕುಗಳನ್ನೂ ವ್ಯಾಪಿಸಿತು.[2]

ಹೀಗೆ ಕೆಲಕಾಲ ಕಳೆಯಿತು. ಒಂದು ದಿನ ಸಾಳುವ ನರಸಿಂಹ ವ್ಯಾಸರಾಜರಲ್ಲಿ ಕನ್ನಡನಾಡಿನ ಪರಿಸ್ಥಿತಿ, ಸಾಮ್ರಾಟನಾದ ವಿರೂಪಾಕ್ಷನಿಗೆ ಸಾಮ್ರಾಜ್ಯದ ಬಗ್ಗೆ ಇರುವ ಅನಾಸಕ್ತಿ, ಹೇಡಿಯೂ, ವಿಲಾಸಪ್ರಿಯನೂ, ಪ್ರಜಾಹಿಂಸಕನೂ ಆದ ಅವನ ದೌರ್ಬಲ್ಯಗಳನ್ನು ಕಂಡು ವಿಧರ್ಮೀಯರೂ ಸಾಮ್ರಾಜ್ಯದ ಶತ್ರುಗಳೂ ಆದ ಬಹ ಮನಿ ಸುಲ್ತಾನರು, ಭಾರತೀಯರೇ ಆದರೂ ನೆರೆಹೊರೆಯ ಹಿಂದೂರಾಜರು ಅಂತ ರಂಗದಲ್ಲಿ ಕನ್ನಡನಾಡಿನ ಅಭ್ಯುದಯವನ್ನು ಸಹಿಸದೆ ಶತ್ರುರಾಜರ ಜೊತೆಸೇರಿ

---

1. "ತದಾನೀಮೇವ ಪ್ರಹೃಷ್ಟಮನಾಃ ವಸುಮತೀಪತಿರವ್ಯಾಪದರಸಲಿಪಿತ ಬಹುವಿಧ ಬಿಂಬಾಡಂಬರಾಣಾಂ ವಸನಾನಾಂ...ಸ್ನಿಗ್ಧಮಪ್ರಭಾಪವಾತ್ರೀಣಾಂ ಕನಕಪಾತ್ರೀಣಾ- ಮಗಣನೀಯಗುಣಗ್ರಾಮಾಣಾಂ ಗ್ರಾಮಾಣಾಮನವರತಮತಿಥಿಜನ ಪೂಜನಕರ್ಮಠಾ- ನಾಮಿತರೇಷಾಮಪಿ ಬಹ್ವೀಯಸಾಂ ವಸ್ತೂನಾಂ ನಿಚಯಮದಾತ್ ||

—ಶ್ರೀವ್ಯಾಸಯೋಗಿಚರಿತಮ್-53

2. ಜಿತ್ವೈವಮೇವ ಬಹುಧಾ ಪರಿಪಂಥಿವರ್ಗಂ
ಪ್ರೋದ್ದಾಮಕೀರ್ತಿ ನಿಬಿಡೋರುನಭಃ ಕಟಾಹಃ |
ಸಂಸ್ಥಾಪಯನ್ ಸಕಲಧರ್ಮಕುಲಂ ಯತೀಂದ್ರಃ
ತತ್ರಾವಸತ್ಸಬಹುಲಾಶ್ಶರದಸ್ಸವೀನ ||

—ಶ್ರೀವ್ಯಾಸಯೋಗಿಚರಿತಮ್-P.53

ಆಗಾಗ್ಗೆ ನಾಡಿನ ಎಲ್ಲೆಗಳ ಒಳ-ಹೊರಗೆ ಮಾಡುತ್ತಿರುವ ಧಾಳಿ, ಕೊಲೆ, ಸುಲುಗೆ ಹಿಂದೂಧರ್ಮ-ಗುಡಿಗುಂಡಾರಗಳ ಮೇಲಾಗುತ್ತಿರುವ ದಬ್ಬಾಳಿಕೆ, ಪ್ರಜಾಹಿಂಸೆ—ಮುಂತಾದ ವಿಚಾರಗಳನ್ನು ವಿವರಿಸಿ, ಈವೊಂದು ಸಂದರ್ಭದಲ್ಲಿ ಕನ್ನಡ ಸಾಮ್ರಾಜ್ಯದ ಕಾರ್ಯಕರ್ತನಾಗಿರುವ ನನಗೆ ಕರ್ತವ್ಯವನ್ನು ಬೋಧಿಸಿ ಕನ್ನಡ ನಾಡು ಮಾತ್ರವಲ್ಲದೆ ದಕ್ಷಿಣಭಾರತದ ಹಿತಚಿಂತನೆ, ಶಾಂತಿಸ್ಥಾಪನೆ, ಪ್ರಜಾ ಸಂರಕ್ಷಣೆಗಳಿಗೆ ಮಾರ್ಗದರ್ಶನವನ್ನುಮಾಡಿ ಅನುಗ್ರಹಿಸಬೇಕೆಂದು ಪ್ರಾರ್ಥಿಸಿದನು.

ಸ್ವಲ್ಪಕಾಲ ಮನದಲ್ಲಿಯೇ ಎಲ್ಲಾ ವಿಚಾರಗಳನ್ನೂ ಯೋಚಿಸಿ ಆನಂತರ ಶ್ರೀ ವ್ಯಾಸರಾಜರು ಹೀಗೆ ಉಪದೇಶಿಸಿದರು—"ರಾಜನ್, ನಮ್ಮ ಭರತವರ್ಷ ಪುಣ್ಯ ಭೂಮಿ. ಇದು ಮೊದಲಿನಿಂದಲೂ ಜಗತ್ತಿಗೆ ಜ್ಞಾನದಾನಮಾಡಿ ಧರ್ಮ-ಸದಾಚಾರ, ಪರಾಕ್ರಮ, ವಿವಿಧವಿದ್ಯೆ, ಕಲೆ, ನಾಗರಿಕತೆಗಳನ್ನು ಉಪದೇಶಿಸುತ್ತಾ ಬಂದಿರುವ ಭವ್ಯದೇಶ. ಭಾರತದ ವಿದ್ಯೆ, ಧರ್ಮ, ಸಂಸ್ಕೃತಿ, ಭವ್ಯಪರಂಪರೆಗೆ ಹಿಂದಿನಿಂದಲೂ ಕನ್ನಡಕಲಿಗಳು ಅಪಾರ ಕೊಡುಗೆ ನೀಡಿದ್ದಾರೆ.ಅದರ ರಕ್ಷಣೆಗಾಗಿ ಹೋರಾಡಿದ್ದಾರೆ. ಚಾಲುಕ್ಯ, ರಾಷ್ಟ್ರಕೂಟ, ಕದಂಬ, ದೇವಗಿರಿಯ ಸಾಮ್ರಾಟರು ನಮಗೆ ಮಾರ್ಗ ದರ್ಶಕರಾಗಿದ್ದಾರೆ. ಶ್ರೀವಿದ್ಯಾರಣ್ಯಮುನಿಗಳು ಈ ವಿಜಯನಗರದ ಕನ್ನಡ ಸಾಮ್ರಾಜ್ಯವನ್ನು ಸ್ಥಾಪಿಸಿದ ಉದ್ದೇಶವೂ ಭಾರತೀಯ ತತ್ವ, ಧರ್ಮ, ಸಂಸ್ಕೃತಿ ಗಳ, ಹಿಂದೂ ಜನತೆಯ, ಮುಖ್ಯವಾಗಿ ಕನ್ನಡ ಜನತೆಯ ಸಂರಕ್ಷಣೆ,- ಅಭ್ಯುದಯ ಗಳಿಗೆಂಬುದು ಸ್ಪಷ್ಟವಾಗಿದೆ. ಭಾರತದ ಹಿಂದೂ ಸಂಸ್ಕೃತಿ, ಸನಾತನ ಧರ್ಮ, ವೇದ ಮತಗಳ, ನಮ್ಮ ಭವ್ಯಪರಂಪರೆಯ ಅಳಿವು-ಉಳಿವುಗಳಿಂದು ಕನ್ನಡ ಸಾಮ್ರಾಜ್ಯ ವನ್ನೇ ಅವಲಂಬಿಸಿದೆ. ಹಿಂದಿನಿಂದಲೂ ಈವೊಂದು ಮಹತ್ವಪೂರ್ಣ ಕಾರ್ಯವನ್ನು ನಮ್ಮವರು ಶ್ರದ್ಧೆಯಿಂದ ನೆರವೇರಿಸುತ್ತಾ ಬಂದಿರುವುದಲ್ಲದೆ, ಸರ್ವಪ್ರಜರ ಸುಖ ಸಂತೋಷಗಳಿಗಾಗಿಯೇ ಶ್ರಮಿಸಿರುವುದರಿಂದ ಇಂದು ಕನ್ನಡ ಸಾಮ್ರಾಜ್ಯದ ಎಲ್ಲ ಸ್ವಾಮಿನಿಷ್ಠ ಸೇವಕರೂ ಹಿಂದಿನವರು ಹಾಕಿಕೊಟ್ಟಿರುವ ದಾರಿಯಲ್ಲೇ ಮುಂದು ವರೆಯುವುದು ಅತ್ಯವಶ್ಯವಾಗಿದೆ. ಈ ಕಾರ್ಯ ಯಶಸ್ವಿಯಾಗಬೇಕಾದರೆ ಮೊದಲು ಪ್ರಜರಲ್ಲಿ ಸುಖ-ಸಂತೋಷ-ನೆಮ್ಮದಿಗಳುಂಟಾಗಬೇಕು. ನಾಡಿನಲ್ಲಿ ಶತ್ರುಗಳ ಚುಂಚು ಪ್ರವೇಶವಾಗದಂತೆ ನೋಡಿಕೊಳ್ಳಬೇಕು. ದೇವರು-ಧರ್ಮಗಳಲ್ಲಿ ನಂಬಿಕೆ ಯನ್ನು ಸರ್ವರಲ್ಲೂ ಒಡಮೂಡಿಸಬೇಕು. ಇದಕ್ಕೆ ಅನುಕೂಲರಾದ ದಕ್ಷಿಣಭಾರತದ ಎಲ್ಲ ಹಿಂದೂ ಧರ್ಮಾಭಿಮಾನಿ ರಾಜ-ಮಹಾರಾಜರೊಡನೆ ಹಾರ್ದಿಕ-ಸೌಹಾರ್ದ್ರ ಸಂಬಂಧವನ್ನು ಬಲಪಡಿಸಬೇಕು. ದಕ್ಷಿಣಭಾರತದ ಮಿತ್ರರಾಜರು, ಸಾಮಂತರು, ಮತ್ತು ಪ್ರಜೆಗಳಿಗೆ ನಮ್ಮ ಸಾಮ್ರಾಜ್ಯವು ಅಖಂಡ ಭಾರತದ ಆದರ್ಶ, ಧರ್ಮ, ಸತ್ಪರಂಪರೆಗಳ ರಕ್ಷಣೆಗಾಗಿ ದೀಕ್ಷಾಬದ್ಧವಾಗಿದೆ-ಎಂಬುದನ್ನು ತೋರಿಕೊಟ್ಟು ಅವರೆಲ್ಲರ ಪ್ರೀತಿ-ವಿಶ್ವಾಸ, ಬೆಂಬಲಗಳನ್ನು ಗಳಿಸಬೇಕು.

ಭೂಪಾಲ ! ನಮ್ಮದು ಹಿಂದೂರಾಷ್ಟ್ರ. ಇಲ್ಲಿ ವಿವಿಧ ತತ್ತ್ವ, ಧರ್ಮ, ಸಂಸ್ಕೃತಿ ಮತ, ಪಂಥ, ದೇವತೆಗಳನ್ನು ಉಪಾಸಿಸುವ ಜನರಿದ್ದಾರೆ. ಅವರೆಲ್ಲರೂ ಸಾಮ್ರಾಜ್ಯದ ಪ್ರಜೆಗಳೇ ಆಗಿರುವುದರಿಂದ ಎಲ್ಲರನ್ನೂ ಸಮಾನ ಗೌರವ-ವಿಶ್ವಾಸ ಗಳಿಂದ ಪಾಲಿಸಿಕೊಂಡು ಬಂದು ಪ್ರೋತ್ಸಾಹಿಸಬೇಕು. ಅವರಲ್ಲಿ ಸಂಚಿಕೆ ಹುಟ್ಟು ವಂತೆ ಮಾಡಬೇಕು. ಪ್ರಜರ ಆಶೋತ್ತರಗಳನ್ನು ನೆರವೇರಿಸಿ "ಸರ್ವೇಜನಾಃ ಸ್ಸುಖಿನೋ ಭವಂತು"ಎಂಬ ವೈದಿಕೋಪದೇಶವನ್ನು ಜಾರಿಗೆ ತರಬೇಕು. ಜೊತೆಗೆ ವೈದಿಕ ಸದ್ವೈಷ್ಣವ ಸಿದ್ಧಾಂತ. ಭಾಗವತ ಧರ್ಮಗಳ ಪ್ರಸಾರಮಾಡಬೇಕು. ಇಷ್ಟಾದರೆ ಸಾಲದು. ನಮ್ಮ ನಾಡಿನ ಜನತೆಗೆ, ಧರ್ಮಕ್ಕೆ, ಗುಡಿಗುಂಡಾರಗಳಿಗೆ ಹಾನಿಮಾಡುವವರು ಅವರು ಯಾರೇ ಆಗಿರಲಿ, ಅಂಥವರನ್ನು ದಂಡಿಸಿ, ಪುಂಡತನ ದಿಂದ ಬಂಡೆದ್ದು ತೊಂದರೆ ಕೊಡುವವರನ್ನು ಬಗ್ಗುಬಡಿದು, ನಾಡಿನ ಎಲ್ಲೆಗಳನ್ನು ರಕ್ಷಿಸಿ, ಬಿಟ್ಟುಹೋಗಿರುವ ಪ್ರದೇಶಗಳನ್ನು ಮತ್ತೆ ಸಂಪಾದಿಸಿ ಸುಭದ್ರಪಡಿಸ ಬೇಕು. ನಮ್ಮ ನಾಡು, ಮಾಂಡಲಿಕರ ರಾಜ್ಯ, ದಕ್ಷಿಣದ ಇತರ ಮಿತ್ರರಾಜ್ಯಗಳಲ್ಲಿ ದೇವಾಲಯ ಧರ್ಮ, ಸಂಸ್ಕೃತಿಗಳ ಮೇಲೆ ದಾಳಿಮಾಡಿ ಮತ್ತು ಪ್ರಜರಿಗೆ ಹಿಂಸೆ ಕೊಡುವ ವಿಧರ್ಮೀಯ ಶತ್ರುಗಳನ್ನು ಜಯಿಸಿ ಎಲ್ಲೆಡೆ ಶಾಂತಿಸಮಾಧಾನ ಗಳನ್ನುಂಟುಮಾಡಬೇಕು. ಇದೊಂದು ಮಹತ್ತ್ವಪೂರ್ಣವಾದ ಕಾರ್ಯ ! ಇದು ಯಶಸ್ವಿಯಾದಲ್ಲಿ ಅಖಂಡಭಾರತದಲ್ಲಿ ಕನ್ನಡ ಸಾಮ್ರಾಜ್ಯವು ಅತ್ಯಂತ ಬಲಾಢ್ಯ ವಾದ ಏಕೈಕ ಸಾಮ್ರಾಜ್ಯವಾಗುಳಿದು, ಹಿಂದೂ ಧರ್ಮತ್ರಾಣಪರಾಯಣ ಸಾಮ್ರಾಜ್ಯವೆನಿಸಿ ಕೀರ್ತಿಗಳಿಸುವುದು.

ಮಹಾರಾಜ, ಇದನ್ನು ಯಶಸ್ವಿಯಾಗಿ ನಿರ್ವಹಿಸಲು ಬೇಕಾದ ಸಮಸ್ತ ಗುಣ ಗಳು, ಅರ್ಹತೆಯೂ ನಿನಗಿದೆ. ಶ್ರೀನಿವಾಸ-ವಿರೂಪಾಕ್ಷರ ನಿಸ್ಸೀಮ ಭಕ್ತನೂ, ಮಹಾಪರಾಕ್ರಮಿಯೂ, ಚಾಣಾಕ್ಷನೂ, ಸದ್ಗುಣಿಯೂ, ದೇವ-ಗುರು-ದ್ವಿಜಪೂಜ ಕನೂ, ಸರ್ವರ ಹಿತಚಿಂತಕನೂ, ಮುಖ್ಯವಾಗಿ ಕನ್ನಡ ಸಾಮ್ರಾಜ್ಯಧುರಂಧರನೂ ಆಗಿರುವ ನೀನು ಈ ಮಹಾತ್ಕಾರ್ಯವನ್ನು ನೆರವೇರಿಸಲು ಪ್ರತಿಜ್ಞಾಬದ್ಧನಾಗು ! ನಿನಗೆ ಭಗವಂತನ ಅನುಗ್ರಹವಿದೆ, ನಮ್ಮ ಬೆಂಬಲ-ಆಶೀರ್ವಾದಗಳಂತೂ ಸರ್ವದಾ ಇದೆ. ನೀನು ಈ ಕಾರ್ಯದಲ್ಲಿ ಜಯಶೀಲನಾಗುವುದರಲ್ಲಿ ಸಂದೇಹವಿಲ್ಲ.

ರಾಜೇಂದ್ರ ! ನಾವು ಹೇಳಿದ ವಿಚಾರಗಳನ್ನು ಸಾವಧಾನವಾಗಿ ಆಲೋಚಿಸಿ, ಸಾಮ್ರಾಜ್ಯನಿಷ್ಠರೂ, ನಿನ್ನ ಮಿತ್ರರೂ, ಹಿತೈಷಿಗಳೂ ಆದ ಎಲ್ಲ ಸಚಿವ-ರಾಜನ್ಯ-ಪುರಪ್ರಮುಖರೊಡನೆ ವಿಚಾರವಿನಿಮಯಮಾಡಿ ಎಲ್ಲರ ಬೆಂಬಲ ಪಡೆದು ಕಾರ್ಯ ಪ್ರವೃತ್ತನಾಗು. ಹಿಂದೂಧರ್ಮ–ಸಂಸ್ಕೃತಿ, ಪ್ರಜಾಸಂರಕ್ಷಣೆಗಳಿಗಾಗಿ ಮೊದಲು ದಕ್ಷಿಣಭಾರತದಲ್ಲಿ "ಧರ್ಮದಿಗ್ವಿಜಯ" ಯಾತ್ರೆಯನ್ನು ಕೈಕೊಂಡು ಹೊರಡು. ನಾವು ಸರ್ವಸಂಗಪರಿತ್ಯಾಗ ಮಾಡಿದ ಸನ್ಯಾಸಿಗಳಾದರೂ ಕನ್ನಡ ಸಾಮ್ರಾಜ್ಯದ ಹಿಂದೂ ಧರ್ಮ-ಸಂಸ್ಕೃತಿಗಳ ಕಲ್ಯಾಣದ ದೃಷ್ಟಿಯಿಂದ ನಾವೂ ನಿನ್ನೊಡನೆ ಬಂದು

ಮಾರ್ಗದರ್ಶನ ಮಾಡುವೆವು ! ಈ ಮಹಾಪ್ರಯತ್ನಕ್ಕೆ ಭಗವಂತನು ಯಶಸ್ಸು, ಸತ್ಫಲಗಳನ್ನು ಅನುಗ್ರಹಿಸುವನೆಂದು ನಾವು ನಂಬಿದ್ದೇವೆ. ರಾಜನ್, ಕನ್ನಡ ಸಾಮ್ರಾಜ್ಯದ ಹಿತಸಾಧಿಸಿ ಕೀರ್ತಿಶಾಲಿಯಾಗು !"

ಶ್ರೀಪಾದಂಗಳವರ ಹಿತೋಕ್ತಿ-ಅಭಯುವಚನಗಳಿಂದ ನರಸಿಂಹಭೂಪಾಲ ರೋಮಾಂಚಿತನಾದ. ಶ್ರೀಯವರ ಉಪದೇಶ ಅವನಿಗೆ ಅಮೃತಪ್ರಾಶನವಾಡಿದಂತಾಯಿತು. ಒಂದು ಬಗೆಯ ನೂತನೋತ್ಸಾಹ ಉಂಟಾಯಿತು. ಆದುದರಿಂದ ಗುರುಗಳಿಗೆ ನಮಸ್ಕರಿಸಿ ಕೃತಜ್ಞತೆಯನ್ನು ಸಮರ್ಪಿಸಿ ಶ್ರೀಯವರ ಉಪದೇಶದಂತೆ ವರ್ತಿಸುವುದಾಗಿ ವಿಜ್ಞಾಪಿಸಿ ಈವಿಚಾರವನ್ನು ಆಪ್ತೇಷ್ಟರೊಡನೆ ವಿಚಾರವಿನಿಮಯ ಮಾಡಲು ಗುರುಗಳ ಅಪ್ಪಣೆಪಡೆದು ತೆರಳಿದನು.

ಒಂದು ಶುಭ ಮುಹೂರ್ತದಲ್ಲಿ ಶ್ರೀವ್ಯಾಸತೀರ್ಥರೊಡನೆ ತಿರುಪತಿಗೆ ತೆರಳಿ ಶ್ರೀನಿವಾಸದೇವರಿಗೆ ಸೇವೆಸಲ್ಲಿಸಿ, ಮನೋಭೀಷ್ಟವನ್ನು ಪೂರ್ಣಮಾಡುವಂತೆ ಪ್ರಾರ್ಥಿಸಿ ಚಂದ್ರಗಿರಿಗೆ ಬಂದು ಅಲ್ಲಿಂದ ಗುರುಗಳೊಡನೆ ದಕ್ಷಿಣಭಾರತದ ದಿಗ್ವಿಜಯವನ್ನು ಕೈಗೊಂಡುಹೊರಟನು,

o o o o o

ಕ್ರಿ. ಶ. 1476 ರಿಂದ 1482ರ ವರೆಗೆ ಸಾಳುವ ನರಸಿಂಹಭೂಪಾಲನು "ರಾಜಗುರು" ಶ್ರೀವ್ಯಾಸಗುರುಗಳೊಡನೆ ಅನೇಕಬಾರಿ ಕನ್ನಡಸಾಮ್ರಾಜ್ಯ, ದಕ್ಷಿಣ ಭಾರತದ ಇತರ ಪ್ರಾಂತ್ಯಗಳಲ್ಲೆಲ್ಲಾ ಸಂಚರಿಸಿ, ದಂಗೆಕೋರರ ಹುಟ್ಟಡಗಿಸಿ, ಶತ್ರುರಾಜರನ್ನು ಸಂಪೂರ್ಣವಾಗಿ ಪರಾಜಯಗೊಳಿಸಿ, ಕನ್ನಡನಾಡಿನ ಎಲ್ಲೆಗಳನ್ನು ಭದ್ರಪಡಿಸಿ, ಕೈಬಿಟ್ಟುಹೋಗಿದ್ದ ಪ್ರಾಂತ್ಯಗಳನ್ನು ಮತ್ತೆ ವಶಪಡಿಸಿಕೊಂಡು, ವಿಸ್ತರಿಸಿ, ಎಲ್ಲಕಡೆ ಪ್ರಜೆಗಳಿಗೆ ಬಂದಿದ್ದ ಸಂಕಟಗಳನ್ನೂ ಪರಿಹರಿಸಿ, ಶಾಂತಿ, ಸಮಾಧಾನ, ತೃಪ್ತಿಗಳನ್ನುಂಟುಮಾಡಿ, ಪ್ರಜೆಗಳ ಪ್ರೀತಿ, ವಿಶ್ವಾಸ, ನಂಬಿಕೆಗಳನ್ನುಗಳಿಸಿ, ಶತ್ರುಗಳಿಗೆ ಯಮಸದೃಶನೆನಿಸಿ, ಸ್ನೇಹಿತರಿಗೆ ಮನೋಲ್ಲಾಸಕರನಾಗಿ, ತೀರ್ಥ ಕ್ಷೇತ್ರ ದರ್ಶನ, ದೇವಾಲಯಗಳ ಜೀರ್ಣೋದ್ಧಾರಮಾಡಿ, ಎಲ್ಲ ದೇವಾಲಯ, ಮಠ ಮಂದಿರ, ಛತ್ರಗಳಲ್ಲಿ ಸಕ್ರಮವಾಗಿ ಪೂಜಾಪುರಸ್ಕಾರಗಳು ನೆರವೇರುವಂತೆಮಾಡಿ, ಅವುಗಳಿಗೆ ಗ್ರಾಮ, ಭೂಮಿ, ಧನಕನಕಾಭರಣ, ತಸ್ತೀಕುಗಳನ್ನೂ ದತ್ತಿಗಳನ್ನೂ ಏರ್ಪಡಿಸಿಕೊಟ್ಟು, ಹಿಂದೂದೇವಾಲಯ-ಧರ್ಮಗಳ ಮೇಲಾದ ಧಾಳಿಗಳನ್ನು ಎದುರಿಸಿ, ಶತ್ರುಗಳನ್ನು ಹೊಡೆದೋಡಿಸಿ, ಪ್ರಜೆಗಳಿಗೆ ಅವಶ್ಯಕವಾದ ಕೆರೆ, ಕುಂಟೆ, ರಸ್ತೆ ಮುಂತಾದ ಅನುಕೂಲಗಳನ್ನು ಏರ್ಪಡಿಸಿಕೊಟ್ಟು, ದಕ್ಷಿಣಭಾರತದಲ್ಲಿ ಮುಖ್ಯವಾಗಿ ಕನ್ನಡಸಾಮ್ರಾಜ್ಯದಲ್ಲಿ ನೂತನೋತ್ಸಾಹ, ಸಂತೋಷ, ಸಮಾಧಾನಗಳಿಂದ ಪ್ರಜರು ಜೀವಿಸುವಂತೆಮಾಡಿ, ಭಾರತೀಯಧರ್ಮ, ಸಂಸ್ಕೃತಿ, ವಿದ್ಯೆ, ಕಲೆ, ಭವ್ಯ

ಪರಂಪರೆಯ ಆಶ್ರಯವಿತ್ತು ರಕ್ಷಿಸುವ ಏಕೈಕಸಾಮ್ರಾಜ್ಯವೆಂದು ಕನ್ನಡ ಸಾಮ್ರಾಜ್ಯದ ಕೀರ್ತಿ ಬೆಳಗುವಂತೆ ಮಾಡಿ ಸರ್ವರ ಗೌರವಾದರಗಳಿಗೆ ಪಾತ್ರನಾದನು.

ಈ ಮಹತ್ಕಾರ್ಯದಲ್ಲಿ ಶ್ರೀವ್ಯಾಸಭಗವಾನರು ನರಸಿಂಹರಾಜನ ಜೊತೆಗಿದ್ದು ಮಾರ್ಗದರ್ಶನಮಾಡಿ ಸಮಸ್ತಪ್ರಜರಲ್ಲಿ ಕನ್ನಡಸಾಮ್ರಾಜ್ಯ ಹಾಗೂ ನರಸಿಂಹ ಭೂಪಾಲನಲ್ಲಿ ಸರ್ವರ ನಂಬಿಕೆಯು ಮತ್ತಷ್ಟು ದೃಢವಾಗುವಂತೆಮಾಡಿ ಅನುಗ್ರಹಿಸಿದರು. ಶ್ರೀವ್ಯಾಸರಾಜ ಗುರುಸಾರ್ವಭೌಮರ ತಪಃಪ್ರಭಾವ, ಅನುಗ್ರಹಾಶೀರ್ವಾದಗಳಿಂದ ಸಾಳುವ ನರಸಿಂಹಭೂಪಾಲನು ಅಸಾಧ್ಯವಾದುದನ್ನು ಸಾಧಿಸಿ ದಕ್ಷಿಣ ಭಾರತದಲ್ಲೇ ಅತ್ಯಂತ ಬಲಾಢ್ಯವ್ಯಕ್ತಿ ಎನಿಸಿದನು, ಮಾತ್ರವಲ್ಲ ಅಖಂಡಭಾರತದಲ್ಲೇ ಹಿಂದೂಧರ್ಮರಕ್ಷಕ, ಅರಿಭಯಂಕರ, ಪ್ರಜಾರಂಜಕ ಎಂಬ ಕೀರ್ತಿಪ್ರತಿಷ್ಠೆಗಳಿಗೆ ಪಾತ್ರನಾದನು. ಈ ಧಾರ್ಮಿಕ ದಿಗ್ವಿಜಯದಲ್ಲಿ ನರಸಿಂಹಭೂಪಾಲನಿಗೆ ಕನ್ನಡಸಾಮ್ರಾಜ್ಯದ ಅಜೇಯಸೇನೆ ಅವನ ಆಪ್ತಮಿತ್ರರೂ, ಹಿತೈಷಿಗಳೂ, ಪರಾಕ್ರಮಿಗಳೂ ಆದ ಸಚಿವ-ಸೇನಾಧಿಪತಿಗಳೂ ನಿಷ್ಠೆಯಿಂದ ಸೇವೆ ಸಲ್ಲಿಸಿದರು.

ನರಸಿಂಹರಾಜನ ಸಾಧನೆಗಳು ಅನೇಕ. ಅವುಗಳಲ್ಲಿ ಕೆಲವನ್ನು ಮಾತ್ರ ಇಲ್ಲಿ ನಿರೂಪಿಸಬಯಸುತ್ತೇವೆ.

ಕಳಿಂಗಭೂಪತಿಯು ಹಿಂದೂವಾಗಿದ್ದರೂ, ಕನ್ನಡಸಾಮ್ರಾಜ್ಯ ವಿರುದ್ಧವಾಗಿ ವಿಧರ್ಮೀಯರಾದ ಮುಸಲ್ಮಾನರೊಡನೆ ಸೇರಿ, ಕನ್ನಡನಾಡಿನ ಎಲ್ಲೆಗಳಲ್ಲಿ ಧಾಳಿಮಾಡಿ ಕೊಲೆ, ಸುಲಿಗೆಗಳಿಂದ ಪ್ರಜರಿಗೆ ತೊಂದರೆಕೊಡುತ್ತಿರಲು ಅಗಾಧ ಸೈನ್ಯದೊಡನೆ ಹೊರಟು ಕಳಿಂಗ ಭೂಪತಿಯನ್ನು ರಾಜ್ಯದ ಎಲ್ಲೆಯಿಂದ ಓಡಿಸಿದ್ದಲ್ಲದೆ ಅವನ ಬೆನ್ನಟ್ಟಿ ಕಳಿಂಗರಾಜ್ಯಕ್ಕೂ ಹೋಗಿ ಅವನನ್ನು ಸಂಪೂರ್ಣವಾಗಿ ಜಯಿಸಿದನು. ಶರಣಾಗತನಾದ ಅವನನ್ನು ಕ್ಷಮಿಸಿ ಅವನ ರಾಜ್ಯವನ್ನು ಮತ್ತೆ ಅವನಿಗೆ ಹಿಂದಿರುಗಿಸಿದನು. ಕಪ್ಪಕಾಣಿಕೆಗಳನ್ನು ಪಡೆದು ಪುನಃ ತೊಂದರೆ ಕೊಡದಿರಲೆಂದು ಅಲ್ಲಿ ನರಸನಾಯಕನನ್ನು ಸೈನ್ಯದೊಡನಿಟ್ಟು ಚಂದ್ರಗಿರಿಗೆ ಹಿಂದಿರುಗಿ ವಿಶ್ರಾಂತಿ ಪಡೆದನು.[1]

---

1. (i) "After dictating terms of peace to the king of Orrissa, Narasimha returned abviously to Chandragiri."
—A Little known chapter of Vijayanagaram Histroy p. 35

(ii) ಆದೌ ಜಿತ್ವಾ ಹರಿಪದಮಿದಿನಾಮಾತ್ಮಾ ಸಾಕ್ಷ್ಯತ್ಕಶಕ್ತ್ಯಾ
ತತ್ರಾಪ್ಯಗ್ರ್ಯಂ ದಿನಕರಮಿವ ಸ್ಥಾಪಯಿತ್ವಾ ಪ್ರತಾಪಮ್ ।
ಕ್ಷೋಣೀಪಾಲಃ ಪ್ರಥಮ ಜಲಧೇಃ ಕೂಲಮಾರ್ಗೇಣ ಗತ್ವಾ
ಪಾರಾವಾರಾಂತರ ಘನಚಮೂ ಪಂಕ್ತಿರಾಗಾದವಾಚೀಮ್ ॥
— ವರದಾಂಬಿಕಾ ಪರಿಣಯ

(iii) ಸಾನುಕ್ರೋಶಮನಾಃ ಕಲಿಂಗನೃಪತಿ... ಪುನಃ ।
ಶ್ರಾಂತಾಮಾತ್ಮಚಮೂಂ ರಣೇನ ವಿಷಯೇ ತಸ್ಮಿನ್ನಿವೇಶ್ಯೋಚಿತಮ್ ।
ಕ್ಷಿಪ್ರಂ ರಾಜಗೃಹೇ ಸ್ವಸೈನ್ಯಪತಿನಾಕ್ಲೃಪ್ತೈಸ್ಸಹಾಪ್ತೈರ್ವಸನ್
ವಿಶ್ರಾಂತೋ ನರಸಿಂಹ ಏಷ... ಸ್ನೈಃಪೀನ್ನಿನಾದಮ್ ॥
—ಸಾಳುವಾಭ್ಯುದಯ

ಚೋಳ ಮಂಡಲದ ಅಧಿಪತಿಯಾದ ಕೋನೇಟಿ(ರಿ)ರಾಜನು ದುರಹಂಕಾರಿಯೂ, ಪ್ರಜಾಪೀಡಕನೂ, ಆಗಿ, ಉನ್ಮತ್ತನಾಗಿ ಶ್ರೀರಂಗದವೈಷ್ಣವರನ್ನು ತನ್ನ ಪ್ರಜೆಗಳನ್ನೂ ಹಿಂಸಿಸುತ್ತಾ, ಕನ್ನಡ ಸಾಮ್ರಾಜ್ಯಕ್ಕೆ ವಿರುದ್ಧವಾಗಿ ವರ್ತಿಸುತ್ತಾ ತೊಂದರೆಕೊಡುತ್ತಿದ್ದನು. ಸಾಮ, ದಾನ, ಭೇದಗಳಿಗೂ ಬಗ್ಗದಿದ್ದುದರಿಂದ ಯಾವನು ತನ್ನ ಜನರನ್ನೂ ದೇಶವನ್ನೂ ಪರಕೀಯ ವಸ್ತುವಂತೆ ಕಾಣುವನೋ ಪ್ರಜಾಪೀಡಕನಾದ ಅಂಥ ರಾಜನನ್ನು ದಂಡಿಸುವುದು ಯುಕ್ತವೆಂದರಿತು[1] ನರಸಿಂಹಭೂಪಾಲ–ನರಸನಾಯಕರು ತೀರ್ಮಾನಿಸಿದರು. ಅದರಂತೆ ಕಳಿಂಗದಲ್ಲಿದ್ದ ಸೇನೆಯೊಡನೆ ನರಸನಾಯಕನೂ ಚಂದ್ರಗಿರಿಯಿಂದ ನರಸಿಂಹಭೂಪಾಲರೂ ದೊಡ್ಡ ಸೇನೆಯೊಡನೆ ಚೋಳರಾಜನಾದ ಕೊನ್ನೇಟಿ ರಾಜನನ್ನು ಆಕ್ರಮಿಸಿದರು. ಗಜಬಲದೊಡನೆ ತಮ್ಮ ಮೇಲೆ ಕ್ರೋಧದಿಂದ ಎರಗಿದ ಕೊನ್ನೇಟಿ ರಾಜನೊಡನೆ ಹೋರಾಡಿದರು. ಯುದ್ಧದಲ್ಲಿ ಪರಾಜಿತನಾದ ಚೋಳಭೂಪನು ರಾಜ್ಯಕೋಶ ಸ್ವಜನರೆಲ್ಲರನ್ನೂ ಬಿಟ್ಟು ಪಲಾಯನ ಮಾಡಿದಾಗ ನರಸನಾಯಕನು ನರಸಿಂಹನ ಆಜ್ಞೆಯಂತೆ ಅವನನ್ನು ಬೆನ್ನಟ್ಟಿ ಸೆರೆಹಿಡಿದು ತಂದನು.[2] ಆ ನಂತರ ನರಸಿಂಹಭೂಪಾಲನು ಚೋಳಮಂಡಲಕ್ಕೆ ಅವನ ವಂಶೀಕನನ್ನು ರಾಜ್ಯಪಾಲನನ್ನಾಗಿಮಾಡಿ ಅಲ್ಲಿನ ಜನರ ಕಷ್ಟವನ್ನು ಪರಿಹರಿಸಿ ಶಾಂತಿಸ್ಥಾಪನೆ ಮಾಡಿದನು.

ಬಹಮನಿ ಸುಲ್ತಾನರ ಸೈನ್ಯವು ಕಂಚಿ, ಮುಳೂರುಗಳಮೇಲೆ ಧಾಳಿಮಾಡಿ ಹಿಂದೂ ಜನರ ಪ್ರಾಣಮಾನಗಳಿಗೆ ಹಾನಿಮಾಡಿ, ಹಿಂದೂಧರ್ಮದ ನಾಶಪ್ರಯತ್ನ ಮಾಡಿದಾಗ ನರಸಿಂಹರಾಜ-ನರಸನಾಯಕರು ಸೈನ್ಯದೊಡನೆ ಅಲ್ಲಿಗೆ ಧಾವಿಸಿ ಯವನ ಸೈನ್ಯವನ್ನು ಮುತ್ತಿ ಪರಾಜಯಗೊಳಿಸಿ ಅವರನ್ನು ಅಲ್ಲಿಂದ ಓಡಿಸಿ ಕಂಚಿ-ಮುಳೂರುಗಳಲ್ಲಿ ಶಾಂತಿಸ್ಥಾಪನೆಮಾಡಿ ಹಿಂದೂಧರ್ಮವನ್ನು ಸಂರಕ್ಷಿಸಿದನು.

---

1) "ಭೃತ್ಯೇಷು ಪೀಡಯತಿ ಯಃ ಪರಕೀಯ ಬುದ್ಧ್ಯಾ ।
ದೇಶಾನಿಮಾನ್ ಮಮತು ದಂಡ್ಯತಮಃ ಸ್ಮ ಏವ ॥ —ವರದಾಂಬಿಕಾಪರಿಣಯಃ

2 i) —"the Chola King then fled to the sea coast leaving all his wealth and relatives behind him."
—Sources of Vijayanagaram History

(ii) "ಕ್ರುಧಾಪತಂತಂ ಸಹ ಕುಂಜರೋಘೈಃ
ಕೋನೇಟಿರಾಜಂ ಕ್ಷುಭಿತಾನ್ಯ ಸೈನ್ಯಃ ।
ಜಗ್ರಾಹ ಪಾಣೌ ಜಗದೇಕವೀರೋ
ಜಯಾಬ್ಧಿಕನ್ಯಾಮಪಿ ಜನ್ಮಭೂಮಿಮ್ ॥
—ಅಚ್ಯುತರಾಯಾಭ್ಯುದಯಃ.

*— A Little known chapter of Vijayanagaram History.

ಯೂಸುಫ್ ಆದಿಲ್‌ಖಾನನು ತಾನೇ ವಿಜಾಪುರದ ಸುಲ್ತಾನನೆಂದು ಘೋಷಿಸಿಕೊಂಡು, ಅಹಮದ್‌ನಗರದ ಸಣ್ಣವಯಸ್ಸಿನ ಸುಲ್ತಾನನಾಗಿದ್ದ ಮೊಹಮ್ಮದನ ರಾಜ್ಯವನ್ನೂ ಕಬಳಿಸಿಲು ಯತ್ನಿಸಿದಾಗ, ಅಹಮ್ಮದನಗರದ ಕಾರ್ಯಕರ್ತನಾದ ಕಾಸೀಂಬರೀದ್ ತುರ್ಕನ ಪ್ರಾರ್ಥನೆಯಂತೆ ನರಸಿಂಹನು ಕನ್ನಡಸಾಮ್ರಾಜ್ಯದ ಮುಖ್ಯಸೇನಾನಿಯಾದ ತಿಮ್ಮರಾಜ್ ಮತ್ತು ನರಸನಾಯಕರೊಡನೆ ಸೈನ್ಯದೊಡನೆ ಹೊರಟನು, ಕಾಸೀಂಬರೀದನು ವಿಜಯನಗರಕ್ಕೆ ಸೇರಿದ್ದ ರಾಯಚೂರು-ಮುದ್ಗಲ್ ಪ್ರಾಂತ್ಯಗಳನ್ನು ವಶಪಡಿಸಿಕೊಂಡು ವಿಜಾಪುರವನ್ನು ಮುತ್ತಬೇಕೆಂದು ಕೋರಿದಂತೆ ನರಸಿಂಹಭೂಪತಿ ನರಸನಾಯಕ, ತಿಮ್ಮರಾಜರು, ರಾಯಚೂರು-ಮುದ್ಗಲ್ ಪ್ರಾಂತ್ಯಗಳನ್ನು ಜಯಿಸಿ ಕನ್ನಡಸಾಮ್ರಾಜ್ಯಕ್ಕೆ ಸೇರಿಸಿದರು.[3] ಅನಂತರ ವಿಜಾಪುರವನ್ನು ಮುತ್ತಿ ಜಯಿಸಿದರು. ಯೂಸುಫ್ ಆದಿಲ್‌ಖಾನನು ಶರಣಾಗತನಾಗಿ ರಾಯಚೂರು-ಮುದ್ಗಲ್ಲುಗಳನ್ನು ವಿಜಯನಗರಕ್ಕೆ ಬಿಟ್ಟುಕೊಟ್ಟು, ಕಪ್ಪಕಾಣಿಕೆಗಳನ್ನು ನೀಡಿ ಸಂಧಿಮಾಡಿಕೊಂಡನು. ಮತ್ತು ಅದೇಕಾಲದಲ್ಲಿ ತನ್ನ ರಾಜ್ಯವನ್ನು ಬೇರೊಂದುಕಡೆಯಿಂದ ಅಕ್ರಮಿಸಿದ ಗೋವೆಯ ಬಹಾದೂರ್ ಗೀಲನೇಯನ್ನು ಹೊಡದುಕಳಿಸಲು ಪ್ರಾರ್ಥಿಸಿದಂತೆ ಗೀಲನೆಯನ್ನು ಅವನರಾಜ್ಯದಿಂದ ಹೊರಟು ಹಿಂದಿರುಗುವಂತೆ ಮಾಡಿ ನರಸಿಂಹರಾಜನ ಅಪ್ಪಣೆಯಂತೆ ಅವನಿಗೆ ಮತ್ತೆ ಬಿಜಾಪುರ ರಾಜ್ಯದ ನಿರ್ಬಾಧವಾದ ಅಧಿಕಾರ ವಹಿಸಿಕೊಟ್ಟು ಬಂದರು.[4] ಮತ್ತು ಅಹಮದ್

3 (i) Kaseem Badrid—Called in the aid of Vijayanaragar against Bijapur, promising for reward the cession of Mudgal and Raichur or the country between the two rivers. Narasimha collected the forces of the Hindus Crossed the Tungabhadra with a large army and after laying waste the coutry. sized the to cities, Mudgal and Raichur, which thus once more passed in to the possession of Vijayanagara —Ferishta.

4 —Kaseem Bareed Toork—wrote to the Ray of Beejanagar that Muhammad shah was willing to cede of him the forst of Mudkal and Raichur if he would wrest them from yusuf Adil Khan. Timraj (Heemaraj), the general ot the Roy of Vijayanagar, having crossed the river Tungabhadra, laid wast the country as for as Mudkal and Raichur.... yusuf Adil Khan was too weak to repel these attaks by force. He accordingly made peace with Timraj and expelled Bahadur Geelany from his dominions'.

—Dr. Krishnaswamy Ayyangar

ನಗರದ ಸಣ್ಣವಯಸ್ಸಿನ ಸುಲ್ತಾನನನ್ನು ಅವರ ರಾಜ್ಯದಲ್ಲಿ ಸ್ಥಾಪಿಸಿ 'ಪಾರಸೀಕ ರಾಜ ಸಂರಕ್ಷಕ' ಎಂಬ ಪ್ರಶಸ್ತಿಯನ್ನು ಧರಿಸಿದನು. ಅವನು ನೀಡಿದ ಒಂಟೆ,ಸೈನ್ಯ, ಹಸಿರುಛತ್ರಿ ಮೊದಲಾದ ಬಿರುದುಗಳನ್ನು ನರಸಿಂಹಭೂಪನು ಧರಿಸಿದನು.[5]

ನರಸಿಂಹಭೂಪಾಲನು ಯವನರಾಜರುಗಳಿಂದ ಸಹಸ್ರಾಧಿಕ ಒಂಟೆ, ಕುದುರೆ, ಮೊದಲಾದವುಗಳನ್ನು ಕಾಣಿಕೆಯಾಗಿ ಪಡೆದು,ಉಷ್ಟ್ರಾಧಿಪತಿ,ಗಜಾಧಿಪ,ಅಶ್ವಾಧಿಪ, ಅಂಗಾಧಿಪನಾಗಿ ಅಖಿಲಾಂಗಾಧಿಪತಿ ಮುಂತಾದ ಕೀರ್ತಿಗಳಿಸಿದನು.[6]

ಸಾಳುವ ನರಸಿಂಹಭೂಪತಿಯು ನಾಗಮಂಡಲದಲ್ಲಿ ಶತ್ರುಗಳನ್ನು ಜಯಿಸಿ ಪಶ್ಚಿಮಕರಾವಳಿಯತ್ತ ದೊಡ್ಡ ಸೈನ್ಯದೊಡನೆ ಸಾಗುತ್ತಿರುವಾಗ ಕುತಪಾಚಲೇಂದ್ರ ತತಪಾಸಿ ಮುಂತಾದವರ ಕೋರಿಕೆಯಂತೆ ಪಶ್ಚಿಮ ಕರಾವಳಿ ತೀರಗಳಲ್ಲಿ ಹಿಂದೂ ಧರ್ಮದಮೇಲೆ ದಾಳಿಮಾಡುತ್ತಾ ಪ್ರಜರಿಗೆ ಹಿಂಸೆಕೊಡುತ್ತಾ,ಕನ್ನಡಸಾಮ್ರಾಜ್ಯದ ವಿರುದ್ಧ ಕಾರ್ಯಪ್ರವೃತ್ತರಾಗಿದ್ದ ಮೋಹಮದೀಯರ ಸೈನ್ಯ, ಜಮೋರಿಯನ್ನರ ಸೈನ್ಯಗಳೊಡನೆ ಪ್ರಥುಗಿರಿಸನಿಹದಲ್ಲಿ ಸುವರ್ಣನದೀ ತೀರದಲ್ಲಿ ಹೋರಾಡಿ ಪರಶು ರಾಮದೇವರಂತೆ ಶತ್ರುಗಳನ್ನೆಲ್ಲಾ ಸಂಹರಿಸಿ ರಕ್ತದಹೊಳೆ ಹರಿಸಿದನು. ಸುತ್ತ ಲಿಂದಲೂ ಮುತ್ತಿದ್ದ ಶತ್ರುಗಳನ್ನು ಒಬ್ಬನೇ ಅಶ್ವಾರೂಢನಾಗಿ ಮಿಂಚಿನಂತೆ ಸಂಚರಿಸುತ್ತಾ ಪ್ರಚಂಡ ಪರಾಕ್ರಮದಿಂದ ಹೋರಾಡುತ್ತಿರಲು ಅವನನ್ನು ಎದುರಿಸ ಲಾಗದೆ ಶತ್ರುಗಳು ಪಲಾಯನಗೈದರು. ಶಬರೇಂದ್ರನು ಇದೇ ಕಾಲದಲ್ಲಿ ನರಸಿಂಹ ಭೂಪಾಲನನ್ನು ಅಡ್ಡಗಟ್ಟಲು, ವೀರಾವೇಶದಿಂದ ಹೋರಾಡಿ ಶಬರೇಂದ್ರನನ್ನೂ ಸೋಲಿಸಿದನು.[7] ಮತ್ತು ಆ ಪ್ರದೇಶಗಳಲ್ಲಿ ಮತ್ತೆ ಶತ್ರುಗಳು ಪ್ರವೇಶಿಸದಂತೆ

---

5 —ಪರಿಪಾಲ್ಯ ಏವ ಪಿತುಃ ಪಾರಸೀಕರಾಟ್ ।
ಭವತಾತ್ಪ್ರಸಃ ಪದಾಮವಾಪಿತಃ ಶಿಶುಃ ॥
—ಹೂಣಸ್ಸುರತ್ರಾಣ ನೃಪೋಽಥಪ್ರೋಷ್ಟೌ ತ್ರಾಣೌ ಪರಿತ್ರಾಣಧರೌ ನೃಪೇಣ
———— —ಪಾಮರಭೂಮಿಪಾಲಃ ಛತ್ರಂ ಹರಿಚ್ಛತ್ರ ನೃಪೋಽಪ್ಯಗೃಹ್ಣಾತ್ ॥
—Salavabhyudaya.

6 ಉಷ್ಟ್ರಾಧಿಪಸ್ಸೋಽಭವದುಷ್ಟ್ರಪಾಲೋ ಗಜಾಧಿಪಸ್ಸೋಽಪಿ ಗಜಾಧಿಪೋಽಭೂತ್ ।
ಅಶ್ವಾಧಿಪೋಽಭೂತ್ಸ್ವಯಮಶ್ವಪಾಲೋ ಪ್ಯಂಗಾಧಿಪೋಽಭೂದಖಿಲಾಂಗಪಾಲಃ ॥
—ಸಾಳವಾಭ್ಯುದಯ.

7 ಅತಿಬಲ ಮತಿರಂಗಸ್ಸಂಹಿತಂ ವೀಕ್ಷ್ಯ ಸಿಂಹಧ್ವನಿಪಟುಭಟಸಿಂಹೈಸ್ಸಂಹೃತಾಶಾಂತ್ಯತಾಶವನ್ ।
ರಣಭುವಿ ನರಸಿಂಹೋ ರಂಹಸಾರುಹ್ಯವಾಹಂ ಮೃಗಕುಲಮಿವಸಿಂಹಸ್ಸಂಪರಾನ್ ವ್ಯಂಹತಿಸ್ಮ ॥
ಅಯಮಥ ಶಬರೇಂದ್ರೋ ಬಿಂದುರಾಯಸ್ಸಬಾಹೂ
ಧನುಷಿ ಚ ಕೃತಶಿಕ್ಷಾ ದಕ್ಷಿಣಾದಕ್ಷಿಣೌ ತೌ ।
ವಿಜಯಸದೃಶ ವೀರ್ಯಾವುದ್ಧತೌ ದ್ವಾವಪಿ ದ್ರಾಕ್
ಅಚಲಯದಪರಾಬ್ಧೇರಧ್ವರೋದ್ಧಾತ್ತ ಯುದ್ಧೇ ॥
—ಸಾಳವಾಭ್ಯುದಯ

ಮಾಡಿ ಅಪಾರ ವಿಜಯವನ್ನು ಗಳಿಸಿದನು. ಹೀಗೆ ನರಸಿಂಹರಾಜನು ದಕ್ಷಿಣಭಾರತದಲ್ಲೆಲ್ಲಾ ಕನ್ನಡಸಾಮ್ರಾಜ್ಯದ ವಿಜಯಧ್ವಜವನ್ನು ಮೆರೆಸಿ, ಪ್ರಜಾರಕ್ಷಣೆ ಶಾಂತಿಸ್ಥಾಪನೆ,ಧರ್ಮಪ್ರತಿಷ್ಠಾಪನೆಯನ್ನು ಮಾಡುತ್ತಾ[8] ಅಸಾಧಾರಣ ಕೀರ್ತಿಗಳಿಸಿದನು. ಅವನು ಹೋದಹೋದಲ್ಲೆಲ್ಲಾ ರಾಜಾಧಿರಾಜರು ನತಮಸ್ತಕರಾಗಿ ಗೌರವಿಸುತ್ತಿದ್ದರು.[9]

ಹೀಗೆ ಸಾಳುವನರಸಿಂಹಭೂಪಾಲನು ದಕ್ಷಿಣಭಾರತದಲ್ಲಿ ಅನ್ಯಾಯ ಅತ್ಯಾಚಾರ ನಿರತರಾದ ದುಷ್ಟರಾಜರನ್ನು ಶಿಕ್ಷಿಸಿ, ಎಲ್ಲೆಡೆ ಧರ್ಮ-ಶಾಂತಿ-ಸಮಾಧಾನಗಳು ನೆಲೆಗೊಂಡು ಪ್ರಜರು ನೆಮ್ಮದಿಯಿಂದ ಬಾಳುವಂತೆಮಾಡಿ,ಸಮಸ್ತರಾಜರ,ಪ್ರಜರ, ಧಾರ್ಮಿಕರ ಗೌರವಾದರಗಳಿಗೆ ಪಾತ್ರನಾದನು. ಶ್ರೀವ್ಯಾಸರಾಜಗುರುಸಾರ್ವಭೌಮರಿಗೆ ಅಪಾರಸಂತೋಷವಾಯಿತು.

ೲ ೲ ೲ ೲ ೲ

ಶ್ರೀವ್ಯಾಸರಾಜಗುರುಸಾರ್ವಭೌಮರು ಚಂದ್ರಗಿರಿಯ ರಾಜಧಾನಿಗೆ ಬಂದು ರಾಜಗುರುಗಳಾದಮೇಲೆ ಆರೇಳು ವರ್ಷಗಳು ಸಂದಿದ್ದವು. ಈ ಒಂದು ಅವಧಿಯಲ್ಲಿ ಶ್ರೀಗಳವರ ಉಪದೇಶ-ಮಾರ್ಗದರ್ಶನಗಳಿಂದ ನರಸಿಂಹರಾಜನು ಕನ್ನಡ ಸಾಮ್ರಾಜ್ಯದ ಅಭಿವೃದ್ಧಿ, ಪರರಾಜವಿಜಯ,ಪ್ರಜಾಪರಿಪಾಲನೆ. ಧರ್ಮಸಂರಕ್ಷಣೆ, ಮಿತ್ರರಾಜರೊಡನೆ ಸ್ನೇಹಸಂವರ್ಧನೆ ಮುಂತಾದ ಕಾರ್ಯಗಳನ್ನೆಸಗಿ ಕನ್ನಡನಾಡಿನ ಅನಭಿಷಿಕ್ತ ಸಾಮ್ರಾಟನೆನಿಸಿ ಸರ್ವರ ಮನ್ನಣೆಗೆ ಪಾತ್ರನಾದುದು ಮಾತ್ರವಲ್ಲದೆ, ಅಖಂಡ ದಕ್ಷಿಣಭಾರತದಲ್ಲಿ ಶಾಂತಿಸ್ಥಾಪನೆಮಾಡಿ ಆರ್ಯಧರ್ಮ-ಪ್ರಸಾರಾದಿಗಳಿಂದ "ಹಿಂದೂ ಧರ್ಮಸುತ್ರಾಣ" ನೆನಿಸಿ ಸಕಲರ ಗೌರವಾದರಗಳಿಗೂ ಪ್ರೀತಿಗೂ ಪಾತ್ರನಾದನು.

ಶ್ರೀವ್ಯಾಸರಾಜರ ಪ್ರಭಾವದಿಂದಾಗಿ ದಕ್ಷಿಣಭಾರತದಲ್ಲೆಲ್ಲಾ ಶಾಂತಿ ಸಮಾಧಾನಗಳೇರ್ಪಟ್ಟು ಎಲ್ಲಕಡೆ ಪ್ರಜರು ಸಂತೋಷದಿಂದ ಬಾಳುತ್ತಿದ್ದುದರಿಂದ ಉತ್ತಮ ವಾತಾವರಣ ಉಂಟಾಗಿತ್ತು.ಇದರಿಂದ ಕ್ರಿ.ಶ.1482ರ ಹಾಗೆ ಶ್ರೀವ್ಯಾಸರಾಜರು ತಮ್ಮ ಎರಡನೆಯ ಜೈತ್ರಯಾತ್ರೆಯನ್ನು ಕೈಗೊಂಡು ಉತ್ತರಭಾರತದ ಕಡೆ ಸಂಚಾರ ಹೊರಡಲು ನಿಶ್ಚಯಿಸಿದರು.

---

8 "ಸಮಿಧಾಯ ತಜ್ಜನಪದಂ ಚ ನಿಗಮನಿರತಂ ನಿಜಾಜ್ಞಯಾ" ।

9 "He (Narasimha) receives tribute from the Kings all along the way.

—Sources of Vijayanagar History.

ಶ್ರೀಪಾದಂಗಳವರನ್ನು ಅಗಲಿರಲಾರದೆ ಸಾಳುವ ನರಸಿಂಹನು ಮೊದಲು ಇನ್ನು ಕೆಲಕಾಲದವರೆಗೆ ಹೊರಡಬೇಕೆಂದು ಪ್ರಾರ್ಥಿಸಿದರೂ ಕೊನೆಗೆ ಗುರುಗಳ ತೀರ್ಥಯಾತ್ರೆಗೆ ಸಮಸ್ತ ವ್ಯವಸ್ಥೆಗಳನ್ನೂ ಮಾಡಿ ಶ್ರೀ ವ್ಯಾಸರಾಜರನ್ನು ವೈಭವ ದಿಂದ ಬೀಳ್ಕೊಟ್ಟನು. ಶ್ರೀಯವರು ಸಂತೋಷದಿಂದ ಯಾತ್ರೆಗೆ ದಯಮಾಡಿ ಸಿದರು.

o o o o o o

ವಿರೂಪಾಕ್ಷರಾಯನ ದುರಾಡಳಿತದಿಂದ ಬೇಸರಗೊಂಡು ವಿವಿಧ ಕಷ್ಟ ಕಾರ್ಪಣ್ಯಗಳಿಗೆ ಶಿಲುಕಿದ್ದ ನಾಡಿನ ಪ್ರಜರೀಗ ನೆಮ್ಮದಿಯಿಂದ ಬಾಳುತ್ತಿದ್ದರು. ಇದಕ್ಕೆ ನರಸಿಂಹರಾಜನ ದಕ್ಷಆಡಳಿತ, ಪ್ರಜಾವಾತ್ಸಲ್ಯ, ಧರ್ಮಬುದ್ಧಿಗಳೇ ಕಾರಣ ವಾಗಿತ್ತು. ಜನತೆಯ ಆಶೋತ್ತರಗಳನ್ನು ನೆರವೇರಿಸುವುದರಲ್ಲಿ ದಕ್ಷನೂ, ಪ್ರಜಾನು ರಾಗಪಾತ್ರನೂ ಸರ್ವಜನಹಿತೈಷಿಯೂ, ಮುಖ್ಯವಾಗಿ ಕನ್ನಡ ಸಾಮ್ರಾಜ್ಯದ ಸರ್ವಾಂಗೀಣ ಅಭಿವೃದ್ಧಿತತ್ಪರನೂ ಆದ ನರಸಿಂಹರಾಜನೇ ಕನ್ನಡ ಸಾಮ್ರಾಜ್ಯದ ಅಧಿಪತಿಯಾಗಬೇಕೆಂದು ಪ್ರಜಾನಿಕವು ಬಯಸಿತು. ಸಾಮ್ರಾಜ್ಯದ ಇನ್ನಿತರ ರಾಜಕೀಯ ಧುರಿಣರೂ ಇದನ್ನೇ ಬಯಸುತ್ತಿದ್ದರು.

ಕನ್ನಡರಾಜ್ಯದ ಪ್ರಮುಖರಾದ ತುಳುವ ನರಸನಾಯಕ, ಭುವನಬಂಧು, ತಿಮ್ಮರಾಜ, ತಿಮ್ಮರಸು ಮುಂತಾದವರು ಪ್ರಜಾಭಿಪ್ರಾಯವನ್ನು ಸಮರ್ಥಿಸಿ ಚಕ್ರವರ್ತಿಗಳಾಗಿ ಕನ್ನಡ ಸಾಮ್ರಾಜ್ಯದ ಹಿತಸಾಧನೆ ಮಾಡಬೇಕೆಂದು ನರಸಿಂಹ ರಾಜನನ್ನು ಬಲಾತ್ಕರಿಸಹತ್ತಿದರು. ನರಸಿಂಹರಾಜನು ಹಿತೈಷಿಗಳ, ಪ್ರಜೆಗಳ ಅಭಿ ಪ್ರಾಯಕ್ಕೆ ತಲೆಬಾಗಿದರೂ ತನ್ನೆಲ್ಲ ಅಭ್ಯುದಯಗಳಿಗೂ ಮುಖ್ಯಕಾರಣರಾದ ಶ್ರೀ ವ್ಯಾಸರಾಜಗುರುಗಳು ಉತ್ತರ ಭಾರತ ಸಂಚಾರದಲ್ಲಿರುವುದರಿಂದ ಅವರ ಅನುಪ ಸ್ಥಿತಿಯಲ್ಲಿ ಈ ಶುಭಕಾರ್ಯವು ಶೋಭಿಸದೆಂದು ಹೇಳಲು, ನರಸಾನಾಯಕ ಮುಂತಾದವರು "ಮಹಾಸ್ವಾಮಿ, ಈಗಿನ ಪರಿಸ್ಥಿತಿ-ವಾತಾವರಣಗಳು ನಮಗೆ ಅನು ಕೂಲಕರವಾಗಿದೆ. ಜನತೆಯು ಆಶಿಸುತ್ತಿರುವಾಗಲೇ ಈ ಮಂಗಳಕಾರ್ಯವು ಜರ ಗುವುದು ಎಲ್ಲ ದೃಷ್ಟಿಯಿಂದಲೂ ಶ್ರೇಯಸ್ಕರ. ತಮ್ಮ ಪೂಜ್ಯಗುರುಗಳಾದ ಶ್ರೀ ಲಕ್ಷ್ಮೀನಾರಾಯಣ ಮುನಿಗಳ ಪರಮಸನ್ನಿಧಿಯಲ್ಲಿ ಈ ಶುಭಕಾರ್ಯ ನಡೆಯುವುದು ಉತ್ತಮ. ರಾಜರುಗಳನ್ನು ಕರೆಸುವ ಏರ್ಪಾಟುಗಳನ್ನೂ ಮಾಡೋಣ. ಈಗ ಮೊದಲು ಲಕ್ಷ್ಮೀನಾರಾಯಣಮುನಿಗಳ ದರ್ಶನಮಾಡಿ, ಅವರ ಅನುಮತಿ ಪಡೆದು ಪಟ್ಟಾಭಿಷೇಕಕ್ಕೆ ಒಂದು ಪ್ರಶಸ್ತವಾದ ಮುಹೂರ್ತವನ್ನಿರಿಸಿ, ಅದರ ಸಿದ್ಧತೆ ಯನ್ನು ಮಾಡುವುದು ಒಳಿತು" ಎಂದು ವಿಜ್ಞಾಪಿಸಿದರು. ಆಪ್ತೇಷ್ಟರು, ಮಿತ್ರರು,

ಹಿತೈಷಿಗಳೂ ಆದ ಅವರ ಕೋರಿಕೆಗೆ ನರಸಿಂಹರಾಜ ಒಪ್ಪಿಗೆ ನೀಡಿದನು. ನೂತನ ಚಕ್ರವರ್ತಿಯ ಪಟ್ಟಾಭಿಷೇಕದ ಸಿದ್ಧತೆಯು ಉತ್ಸಾಹಸಂಭ್ರಮದಿಂದ ಜರಗಿತು.

ಸಾಳುವ ನರಸಿಂಹಪ್ರಭುವು ಮಿತಪರಿವಾರದೊಡನೆ ಮುಳಬಾಗಿಲಿಗೆ ತೆರಳಿ ಪೂಜ್ಯ ಲಕ್ಷ್ಮೀನಾರಾಯಣ ಯೋಗೀಂದ್ರರ ದರ್ಶನಪಡೆದು ಸಮಸ್ತ ವಿಚಾರಗಳನ್ನೂ ಅರಿಕೆಮಾಡಿ "ರಾಜರುಗಳ ಅನುಪಸ್ಥಿತಿಯಲ್ಲಿ ನನ್ನ ಉದ್ಧಾರಕ ಗುರುಗಳಾದ ತಾವು ನೇತೃತ್ವ ವಹಿಸಿ ಪರಮಾನುಗ್ರಹಮಾಡಿ ಈ ಶುಭಕಾರ್ಯವನ್ನು ನೆರವೇರಿಸಿಕೊಟ್ಟು ಈ ದಾಸನನ್ನು ಆಶೀರ್ವದಿಸಬೇಕು" ಎಂದು ಪ್ರಾರ್ಥಿಸಿದನು.

ಶ್ರೀಪಾದರಾಜ ಬಿರುದಾಂಕಿತ ಶ್ರೀಲಕ್ಷ್ಮೀನಾರಾಯಣ ಮುನಿಗಳು ಪರಮ ಸಂತುಷ್ಟರಾಗಿ "ರಾಜನ್. ನೀನು ಒಂದುದಿನ ಕರ್ನಾಟಕಸಾಮ್ರಾಜ್ಯಾಧೀಶ್ವರನಾಗುವಿ ಎಂಬುದನ್ನು ನಾವರಿತಿದ್ದೆವು. ಈ ನಂಬಿಕೆ ಹುಸಿಯಾಗಲಿಲ್ಲ. ಎಲ್ಲ ಭಗವದನುಗ್ರಹ, ಮಹಾರಾಜ ! ನೀನು ಶ್ರೀ ವೆಂಕಟೇಶ್ವರನ ಪರಮಭಕ್ತ, ಅದರಂತೆ ಪಂಪಾಪತಿ ಶ್ರೀವಿರುಪಾಕ್ಷನ ಭಕ್ತನೂ ಆಗಿರುವೆ. ನಾವು ನಿನ್ನೊಡನೆ ತಿರುಪತಿಗೆ ಬಂದು ಶ್ರೀ ಶ್ರೀನಿವಾಸದೇವರ ಸನ್ನಿಧಿಯಲ್ಲಿ ನಿನಗೆ ಸಂಪ್ರದಾಯಕವಾಗಿ ಪಟ್ಟಾಭಿಷೇಕ ಮಹೋತ್ಸವವನ್ನು ನೆರವೇರಿಸಿ ಆಶೀರ್ವದಿಸಿ ಬರುತ್ತೇವೆ. ಅನಂತರ ನೀನು ಶ್ರೀ ವಿರುಪಾಕ್ಷಸ್ವಾಮಿಯ ಸನ್ನಿಧಿಯಲ್ಲಿ ಮಹಾರಾಜಧಾನಿಯಲ್ಲಿ ಅಧಿಕೃತವಾಗಿ ಪಟ್ಟಾಭಿಷಿಕ್ತನಾಗಿ ಕನ್ನಡಸಾಮ್ರಾಜ್ಯವನ್ನು ಪ್ರಜಾರಂಜಕನಾಗಿ, ಧರ್ಮದಿಂದ ಪರಿಪಾಲಿಸು" ಎಂದಾಜ್ಞಾಪಿಸಿದರು. ಶ್ರೀಯವರ ಉಪದೇಶವಚನ ನರಸಿಂಹಭೂಪತಿಯ ಮನಸ್ಸಿಗೆ ಸಂತಸನೀಡಿತು, ಶ್ರೀಗುರುಪಾದರ ಅಪ್ಪಣೆಯಂತೆ ವರ್ತಿಸುವುದಾಗಿ ಮಹಾರಾಜ ಗುರುಗಳಲ್ಲಿ ವಿಜ್ಞಾಪಿಸಿದ.

ನರಸಿಂಹರಾಜನಿಗೆ ಅಭಯವಿತ್ತಂತೆ ಶ್ರೀಲಕ್ಷ್ಮೀನಾರಾಯಣ ಮುನೀಂದ್ರರು ಮಹಾಪ್ರಭುವಿನೊಂದಿಗೆ ಚಂದ್ರಗಿರಿಗೆ ದಯಮಾಡಿಸಿದರು ಮತ್ತು ಕೆಲದಿನಗಳಲ್ಲಿಯೇ ಪಟ್ಟಾಭಿಷೇಕದ ವ್ಯವಸ್ಥೆಗಳೆಲ್ಲವೂ ಜರುಗಿದ ಮೇಲೆ ಒಂದು ಶುಭ ಮಹೂರ್ತದಲ್ಲಿ ತಿರುಪತಿಯಲ್ಲಿ ಶ್ರೀ ಶ್ರೀನಿವಾಸನ ದಿವ್ಯಸನ್ನಿಧಿಯಲ್ಲಿ ನರಸಿಂಹರಾಜನಿಗೆ ಕನ್ನಡ ಸಾಮ್ರಾಜ್ಯದ ಸಾಳುವಂಶದ ಪ್ರಥಮ ಚಕ್ರವರ್ತಿಯೆಂದು ವೈಭವದಿಂದ ತಮ್ಮ ಅಮೃತಹಸ್ತದಿಂದ ಪಟ್ಟಾಭಿಷೇಕ ಮಹೋತ್ಸವವನ್ನು ನೆರವೇರಿಸಿ "ರಾಜಾಧಿರಾಜ ರಾಜಪರಮೇಶ್ವರ ಧರ್ಮಸಂಸ್ಥಾನಾಚಾರ್ಯ" ಎಂಬ ಬಿರುದನ್ನು ದಯಪಾಲಿಸಿ ಅನುಗ್ರಹಿಸಿದರು.

ಸಾಮ್ರಾಜ್ಯಾಭಿಷೇಕದ ಸವಿನೆನಪಿಗಾಗಿ ಚಕ್ರವರ್ತಿಯು ಶ್ರೀನಿವಾಸದೇವರಿಗೆ, ಇತರ ಭಗವತ್ಸನ್ನಿಧಿಗಳಿಗೆ ಅನೇಕ ಗ್ರಾಮಭೂಮಿ ಧನಕನಕವಸ್ತ್ರಾಭರಣಗಳನ್ನು ದಾನವಾಗಿತ್ತನು, ಮತ್ತು ಶ್ರೀಪಾದರಾಜಬಿರುದಾಂಕಿತ ಗುರುವರರಿಗೆ ಅನೇಕ ದತ್ತಿಗಳನ್ನಿತ್ತು ಕೃತಾರ್ಥನಾದನು.

ಇದಾದ ಒಂದೆರಡು ತಿಂಗಳಲ್ಲಿಯೇ ವಿಜಯನಗರದಲ್ಲಿ ಶ್ರೀ ವಿರೂಪಾಕ್ಷ ಸ್ವಾಮಿಯ ಸನ್ನಿಧಿಯಲ್ಲಿ ಸಮಸ್ತ ಪ್ರಜರು, ನಾಗರಿಕರು, ಸಚಿವಸಾಮಂತ ಸೈನ್ಯಾಧಿಪತಿ ರಾಜಮನ್ನೆಯರು, ಪಂಡಿತಮಂಡಲಿ ಜಯಜಯಕಾರ ಮಾಡುತ್ತಿರಲು ಅತ್ಯಂತ ವೈಭವದಿಂದ ಅಧಿಕೃತ ಪಟ್ಟಾಭಿಷೇಕ ಮಹೋತ್ಸವವು ವಿಜೃಂಭಣೆಯಿಂದ ನೆರವೇರಿತು. ಆ ಮಹೋತ್ಸವವನ್ನು ಸಮಸ್ತ ಸಾಮ್ರಾಜ್ಯದ ಪ್ರಜರು ಆನಂದದಿಂದ ಆಚರಿಸಿ ನಾಡಿನ ಭಾಗ್ಯೋದಯವಾಯಿತೆಂದು ಹರ್ಷಿಸಿದರು. ಆ ಕಾಲದಲ್ಲಿ ಸಾಮ್ರಾಟನು ದೇವಾಲಯ, ಮಠ, ಛತ್ರಗಳಿಗೆ ಪಂಡಿತರು-ಕವಿಗಳು ಕಲೆಗಾರರು, ಭೂಸುರಗಳಿಗೆ ತೆರೆದ ಹಸ್ತದಿಂದ ದಾನಮಾಡಿ ಸರ್ವರನ್ನೂ ಆನಂದಗೊಳಿಸಿದನು. ಒಂದು ತಿಂಗಳಕಾಲ ರಾಜಧಾನಿ ಮತ್ತಿತರ ಕಡೆಗಳಲ್ಲಿ ಮಹೋತ್ಸವವನ್ನಾಚರಿಸಲಾಯಿತು. ಶ್ರೀನರಸಿಂಹಪ್ರಭುವಿನ ಪಟ್ಟಾಭಿಷೇಕದೊಂದಿಗೆ ಕನ್ನಡ ಸಾಮ್ರಾಜ್ಯದಲ್ಲಿ ಸಂಗಮವಂಶದವರ ಆಳ್ವಿಕೆಯು ಮುಗಿದು ನೂತನ ಸಾಳುವಂಶದವರ ಆಳ್ವಿಕೆಯು ಪ್ರಾರಂಭವಾಯಿತು.

## ೩೩. ಬ್ರಹ್ಮಹತ್ಯಾದೋಷ ಪರಿಹಾರ

ಕನ್ನಡನಾಡಿನ ಸಾಮ್ರಾಟನಾದ ಸಾಳುವ ನರಸಿಂಹರಾಯನು ಪಟ್ಟಕ್ಕೆ ಬಂದ ಕೆಲಕಾಲದಲ್ಲಿಯೇ ಪೂರ್ವಾರ್ಜಿತ ದುಷ್ಕರ್ಮದ ಫಲವಾಗಿ ಬ್ರಹ್ಮಹತ್ಯಾದೋಷಕ್ಕೆ ಗುರಿಯಾಗುವ ಪ್ರಸಂಗವುಂಟಾದುದು ದುರ್ದೈವದ ಸಂಗತಿ, ಸ್ವಯಮಾಚಾರ್ಯ ಪುರುಷರೂ-ಮಹಾಪಂಡಿತರೂ ಆಗಿದ್ದ ಶ್ರೀ ತಾತಾಚಾರ್ಯರು ತಿರುಪತಿಯ ಪೂಜಾಧಿಕಾರ-ಆಡಳಿತಗಳನ್ನು ತಮ್ಮ ಸೋದರ ಬಂಧುಗಳಿಗೆ ವಹಿಸಿ ತಿರುಪತಿಯಿಂದ ಹೊರಟುಹೋದಮೇಲೆ, ಅನಾಯಾಸವಾಗಿ ತಮ್ಮ ಕೈಸೇರಿದ ದೇವಾಲಯದ ಆಡಳಿತಾಧಿಕಾರವನ್ನು ಶ್ರೀ ತಾತಾಚಾರ್ಯರ ಬಂಧುಗಳು ದುರುಪಯೋಗಪಡಿಸಿಕೊಂಡು ದೇವರ ಭಂಡಾರದ ಧನಕನಕ ವಸ್ತ್ರಾಭರಣಾದಿಗಳು ತಮ್ಮ ಸ್ವಂತವೆನ್ನುವಂತೆ ಉಪಯೋಗಿಸಿಕೊಳ್ಳತೊಡಗಿದ್ದರು. ಶ್ರೀನಿವಾಸನ ವಾಹನಗಳು ಅವರ ಮಕ್ಕಳ ಮದುವೆ ಮುಂಜಿಗಳ ಕಾಲದಲ್ಲಿ ಮೆರವಣಿಗೆಗೆ ಉಪಯೋಗಿಸಲ್ಪಟ್ಟವು. ತಮ್ಮ ಈ ನಡವಳಿಕೆಯನ್ನು ಎದುರಿಸಿದವರನ್ನು ಹಿಂಸಿಸುತ್ತಾ ಅವರಿಗೆ ದೇವರ ದರ್ಶನವೂ ದೊರಕದಂತೆ ಮಾಡಿ ಹೊಡೆದುಬಡೆದು ಬೆಟ್ಟದಿಂದ ಹೊರಗಟ್ಟಹತ್ತಿದರು. ಇದ ಇದರಿಂದ ಯಾತ್ರಾರ್ಥಿಗಳು ಸ್ಥಳಿಯಜನರಲ್ಲಿ ಅಸಂತೋಷದ ಹೊಗೆಯಾಡಹತ್ತಿತು.

ಅನೇಕ ಮುಖದಿಂದ ಈ ವಿಚಾರವನ್ನು ತಿಳಿದ ಶ್ರೀನಿವಾಸನ ಭಕ್ತನಾದ ನರಸಿಂಹ ರಾಜನು ಚಕ್ರವರ್ತಿಯಾದ ತರುಣದಲ್ಲೇ ಅರ್ಚನನ್ನು ಎಚ್ಚರಿಸಿ, ದೇವರ ಸ್ವತ್ತನ್ನು ದುರುಪಯೋಗಪಡಿಸದೆ ನ್ಯಾಯಮಾರ್ಗದಲ್ಲಿ ಎಲ್ಲ ಭಕ್ತರಿಗೆ ಸಂತೋಷವಾಗುವಂತೆ ಆಡಳಿತವನ್ನು ನಿರ್ವಹಿಸಬೇಕೆಂದು.ಬುದ್ಧಿವಾದ ಹೇಳಿಕಳಿಸಿದರೂ ಪ್ರಯೋಜನವಾಗಲಿಲ್ಲ. ಅದೇ ಸಮಯದಲ್ಲಿ ಅರ್ಚಕರ ಮನೆಯ ಒಂದು ಲಗ್ನಕಾಲದಲ್ಲಿ ವಧೂ

ವರರನ್ನು ದೇವರ ಸುವರ್ಣಶೇಷವಾಹನದಲ್ಲಿ ಕೂಡಿಸಿ ಮೆರವಣಿಗೆ ಮಾಡಿದ್ದನ್ನು ಕಣ್ಣಾರೆ ಕಂಡ ರಾಜಪ್ರತಿನಿಧಿಯು ಈ ವಿಚಾರವನ್ನು ನರಸಿಂಹಭೂಪಾಲನಲ್ಲಿ ವಿಜ್ಞಾಪಿಸಿದನು. ಇದರಿಂದ ಚಕ್ರವರ್ತಿಗೆ ಬಹಳಕೋಪವುಂಟಾಯಿತು. ಪರಮಾತ್ಮನ ಪವಿತ್ರವಸ್ತುಗಳನ್ನು ಹೀಗೆ ದುರುಪಯೋಗಪಡಿಸಿ ಭಕ್ತಜನರ ಧಾರ್ಮಿಕ ಪ್ರಜ್ಞೆಗೆ ತಣ್ಣೀರೆರಚಿ ದುಷ್ಟತನದಿಂದ ವರ್ತಿಸುತ್ತಿರುವ ಅರ್ಚಕರನ್ನು ಶಿಕ್ಷಿಸಲು ಅವರೆಲ್ಲರನ್ನೂ ಬಂಧಿಸಿ ತರಲು ಸೈನಿಕರನ್ನು ಕಳಿಸಿದನು. ಇದು ಹೇಗೋ ಅರ್ಚಕರಿಗೆ ಗೊತ್ತಾಗಿ ಅವರು ಹೆದರಿದರು. ಯುಕ್ತಾಯುಕ್ತಜ್ಞಾನಶೂನ್ಯರಾಗಿ ರಾಜಾಜ್ಞೆಯನ್ನು ಧಿಕ್ಕರಿಸಿಬಿಟ್ಟಿದ್ದರು. ಈಗ ಪರಿಸ್ಥಿತಿ ವಿಕೋಪಕ್ಕೆ ಹೋಗಿದೆ. ಭಗವದ್ಭಕ್ತನಾದ ನರಸಿಂಹರಾಜ ತಮ್ಮ ಈ ಅಪರಾಧವನ್ನು ಕ್ಷಮಿಸುವುದಿಲ್ಲ. ಮರಣದಂಡನೆ ವಿಧಿಸಲೂಬಹುದು, ಅವನಿಂದ ಸಾಯುವುದಕ್ಕಿಂತ ತಾವೇ ಆತ್ಮಹತ್ಯೆ ಮಾಡಿಕೊಂಡು ಆ ರಾಜನ ಮೇಲೆ ಸೇಡುತೀರಿಸಿಕೊಳ್ಳಬೇಕು—ಮುಂತಾಗಿ ಯೋಚಿಸಿ ಆ ಅರ್ಚಕರೆಲ್ಲರೂ ಹೆಂಗಸರು ಹುಡುಗರು ವೃದ್ಧರು ಮೊದಲಾಗಿ ಎಲ್ಲರೂ ಅಂದು ರಾತ್ರಿಯೇ ಆತ್ಮಹತ್ಯೆ ಮಾಡಿಕೊಂಡು ಮರಣಹೊಂದಿದರು. ಮರುದಿನ ಅರ್ಚಕರನ್ನು ಸೆರೆಹಿಡಿಯಬಂದ ಸೈನಿಕರಿಗೆ ಈ ಅನಾಹುತ ವಿಚಾರ ತಿಳಿದು ಏನು ಮಾಡಲು ತೋರದೆ ರಾಜಧಾನಿಗೆ ಹಿಂದಿರುಗಿ ಬಂದು ಮಹಾರಾಜರಲ್ಲಿ ಜರುಗಿದ ಅನಾಹುತವನ್ನು ನಿವೇದಿಸಿದರು. ಅದನ್ನು ಕೇಳಿ ನರಸಿಂಹರಾಜ ಬಹು ದುಃಖಿಸಿದ. ತಾನೊಂದುಮಾಡಹೋದರೆ ದೈವವೊಂದು ಬಗೆದಂತಾಯಿತಲ್ಲ ನನ್ನಸ್ಥಿತಿ! ಅರ್ಚಕರನ್ನು ಬೆದರಿಸಿ ಅವರು ನ್ಯಾಯದಿಂದ ದೇವರ ಸೇವೆಮಾಡುವಂತೆ ಮಾಡಲು ತಾನು ಯೋಚಿಸಿದ್ದರೆ ಹೀಗಾಯಿತಲ್ಲಾ! ಬ್ರಹ್ಮಹತ್ಯಾಪಾಪಕ್ಕೆ ಗುರಿಯಾದೆನಲ್ಲಾ ಎಂದು ತಳಮಳಿಸಿದ. ದೇವರ ಪೂಜೆಗೂ ವ್ಯತ್ಯಯ ಉಂಟಾಯಿತಲ್ಲಾ ಎಂದು ಪರಿತಪಿಸಿದ.

ಅರ್ಚಕರ ಆತ್ಮಹತ್ಯಾ ಪ್ರಕರಣ ನರಸಿಂಹಭೂಪಾಲನ ಮೇಲೆ ವಿಚಿತ್ರ ಪರಿಣಾಮವನ್ನುಂಟುಮಾಡಿತು. ಅವನಿಗೆ ಅನ್ನಾಹಾರಾದಿಗಳು ಬೇಡವಾಯಿತು. ಸಾಯುವಾಗ ಸೇಡುತೀರಿಸಿಕೊಳ್ಳಲು ಪ್ರತಿಜ್ಞಾಬದ್ಧರಾದ ಅರ್ಚಕರು ಪಿಶಾಚಿಗಳಾಗಿ ಚಕ್ರವರ್ತಿಯನ್ನು ಹಗಲುರಾತ್ರಿ ಪೀಡಿಸಹತ್ತಿದರು. ನರಸಿಂಹಪ್ರಭು ದುಃಖ-ದುಮ್ಮಾನ, ಚಿಂತೆ ಮತ್ತು ಪ್ರೇತಬಾಧೆಗಳಿಂದ ದಿನೇದಿನೇ ಕೃಶನಾಗುತ್ತಾ ಹಾಸಿಗೆ ಒಡಿದು ಮಲಗಿಬಿಟ್ಟ. ರಾಜ್ಯದ ಆಡಳಿತಾದಿಗಳಂತೂ ದೂರವೇ ಉಳಿಯಿತು. ಈ ಪರಿಸ್ಥಿತಿಯನ್ನು ಕಂಡು ಚಕ್ರೇಶನ ಪತ್ನೀಪುತ್ರಾದಿಗಳು, ಸಚಿವಾದಿ ಆಪ್ತರು ಭಯಗ್ರಸ್ತರಾದರು, ಮುಂದೇನು ಮಾಡುವುದೆಂದು ವಿಚಾರವಿನಿಮಯ ಮಾಡಿ ಮಹಾ

---

1. ದೇವರ ಆಭರಣಾದಿಗಳನ್ನು ಸ್ವಂತಕ್ಕೆ ಉಪಯೋಗಿಸಿ, ದೇವರ ವಾಹನಗಳನ್ನು ಮೆರವಣಿಗೆಗಳಿಗೆ ಉಪಯೋಗಿಸಿ ದ್ರೋಹಮಾಡಿದ ಅರ್ಚಕರೆಲ್ಲರನ್ನೂ ನರಸಿಂಹನೇ ಕೊಲ್ಲಿಸಿದನೆಂದೂ ಹೇಳುವರು.

ರಾಣಿಯವರ ಸಲಹೆಯಂತೆ ಶ್ರೀಲಕ್ಷ್ಮೀನಾರಾಯಣಮುನಿಗಳಿಗೆ ಶರಣುಹೋಗ ಬೇಕೆಂದು ನಿಶ್ಚಯಿಸಿ ಸಚಿವರು-ಕೆಲ ಆತ್ಮೀಯರು ಮುಳಬಾಗಿಲಿಗೆ ಬಂದು ಎಲ್ಲಾ ವಿಚಾರವನ್ನೂ ಗುರುಗಳಲ್ಲಿ ವಿಜ್ಞಾಪಿಸಿ, ಈ ಘೋರ ಪರಿಸ್ಥಿತಿಯಿಂದ ಸಾಮ್ರಾಜ್ಯ ವನ್ನೂ, ಸಾಮ್ರಾಟರನ್ನೂ ಕಾಪಾಡಬೇಕೆಂದು ಪ್ರಾರ್ಥಿಸಿದರು.

ಶ್ರೀಲಕ್ಷ್ಮೀನಾರಾಯಣ ಯತಿಗಳಿಗೆ ತಮ್ಮ ಪ್ರಿಯಶಿಷ್ಯನೂ ಭಕ್ತನೂ ಆದ ನರಸಿಂಹಭೂಪತಿಗೊದಗಿದ ಈ ಗತಿಯನ್ನು ಕೇಳಿ ತುಂಬಾ ದುಃಖವಾಯಿತು. ಸ್ವಲ್ಪಕಾಲ ಧ್ಯಾನಸ್ಥರಾದ ಗುರುಗಳು ನಂತರ ಕಣ್ತೆರೆದು "ದುಷ್ಟ ಅರ್ಚಕರು ಪಿಶಾಚಿಗಳಾಗಿ ನರಸಿಂಹ ಪ್ರಭುವನ್ನು ಪೀಡಿಸುತ್ತಿದ್ದಾರೆ, ಶ್ರೀಹರಿವಾಯುಗಳ ಅನುಗ್ರಹದಿಂದ ಈ ಕಷ್ಟದಿಂದ ಅವನನ್ನು ಪಾರುಮಾಡುತ್ತೇವೆ, ಚಿಂತಿಸಬೇಡಿ" ಎಂದು ಅಭಯವಿತ್ತು ಅವರೊಡನೆ ರಾಜಧಾನಿಗೆ ದಯಮಾಡಿಸಿದರು.

ಅರಮನೆಗೆ ಗುರುಗಳು ದಯಮಾಡಿಸುತ್ತಿರುವ ವಿಚಾರ ತಿಳಿದು ಹಾಸಿಗೆಹಿಡಿದು ಮಲಗಿದ್ದ ನರಸಿಂಹರಾಜ ಸೇವಕರ ಸಹಾಯ ಪಡೆದು ಬಹು ಕಷ್ಟದಿಂದ ಮೇಲೆದ್ದು ಬಂದು ಗುರುಗಳನ್ನು ಸ್ವಾಗತಿಸಿದ, ಅವನ ಪರಿಸ್ಥಿತಿಯನ್ನು ಕಂಡು ಸ್ವಾಮಿಗಳಿಗೆ ಬಹು ಪರಿತಾಪವಾಯಿತು. ಶ್ರೀಲಕ್ಷ್ಮೀನಾರಾಯಣಮುನಿಗಳನ್ನು ಕಂಡು ರಾಜನ ದುಃಖ ಒತ್ತರಿಸಿ ಬಂತು. ಕಣ್ಣೀರು ಸುರಿಸುತ್ತಾ ಬಹುಕಷ್ಟದಿಂದ ಗುರುಗಳ ಪಾದ ಕ್ಕೆರಗಿ ನಿಂತನು. ಗುರುಗಳಿಗೆ ಪ್ರಿಯಶಿಷ್ಯನಲ್ಲಿ ಅಪಾರ ಕಾರುಣ್ಯವುಂಟಾಯಿತು. ದಯಾರ್ದ್ರದೃಷ್ಟಿಯಿಂದ ಅವನನ್ನು ನೋಡುತ್ತಾ "ರಾಜನ್ ! ಭಯಪಡದಿರು. ನಿನ್ನ ಕಷ್ಟವೆಲ್ಲವನ್ನು ಶ್ರೀಗೋಪಿನಾಥ-ರಂಗವಿಠಲರು ಪರಿಹರಿಸುವರು, ನಾಳೆಯೇ ನೀನು ಪೂರ್ವದಲಿನಂತಾಗುವೆ" ಎಂದು ಅವನ ತಲೆಯಮೇಲೆ ಅಮೃತ ಹಸ್ತವಿಟ್ಟು ಆಶೀರ್ವದಿಸಿದರು ಗುರುಗಳ ವಚನ, ಅಮೃತಸ್ಪರ್ಶಗಳಿಂದ ಅವನ ಶರೀರದಲ್ಲಿ ನವ ಚೈತನ್ಯವುಂಟಾಯಿತು. ಕಣ್ಣುಗಳಲ್ಲಿ ಕಾಂತಿ ಮಿಂಚಿತು.

ಗುರುವರ್ಯರು ಅಂದು ಅರಮನೆಯಲ್ಲಿಯೇ ದೇವರಪೂಜಾರಾಧನೆ ನೆರವೇರಿಸಿ ದೇವರಲ್ಲಿ ವಿಶೇಷ ಪ್ರಾರ್ಥನೆಮಾಡಿ-ಭಿಕ್ಷಾ ಸ್ವೀಕಾರಮಾಡಿ, ಅನಂತರ ದೇವರ ಪವಿತ್ರ ತೀರ್ಥ-ಶಂಖೋದಕ-ತುಳಸೀ ಪ್ರಸಾದಗಳನ್ನು ತೆಗೆಸಿಕೊಂಡು ಬಂದು ತಮಗಾಗಿ ಹಾಕಿಸಿದ ಪೀಠದಲ್ಲಿ ಕುಳಿತು ಶಂಖೋದಕ ತೀರ್ಥಗಳನ್ನು ಅಭಿಮಂತ್ರಿಸಿ ಪ್ರಭುವಿಗೆ ನೀಡಿ, ಅವನ ಮೇಲೆ ಪ್ರೋಕ್ಷಿಸಿದರು. ರಾಜನ ಶರೀರದಲ್ಲಿ ಅದೇನೋ ಒಂದು ಅದ್ಭುತಶಕ್ತಿಯು ಸಂಚರಿಸಿದಂತಾಯಿತು. ಗುರುಗಳ ಆಜ್ಞೆಯಂತೆ ಪ್ರಭುವಿನ ಉಡುಪುಗಳನ್ನು ಬಿಚ್ಚಿಸಿ, ಬೇರೆ ಉಡುಪುಗಳನ್ನು ತೊಡಿಸಿ, ರಾಜನು ತೊಟ್ಟಿದ್ದ ಉಡುಪುಗಳನ್ನು ಗುರುಗಳ ಮುಂದಿಟ್ಟರು. ಶ್ರೀಗಳವರು ಶಂಖೋದಕ ತೀರ್ಥಗಳನ್ನು ಅದರ ಮೇಲೆ ಪ್ರೋಕ್ಷಿಸಿದರು. ಪವಿತ್ರತೀರ್ಥ ಸ್ಪರ್ಶವಾದ ಕೂಡಲೇ ಅವೆಲ್ಲವೂ ಧಗಧಗನೆ ಉರಿದು ಭಸ್ಮವಾಗಿಹೋಯಿತು !

ಪಿಶಾಚಿಗಳಾಗಿದ್ದ ಅರ್ಚಕರು ಗುರುಗಳ ದೃಷ್ಟಿಗೆ ಗೋಚರಿಸಿ "ಮಹಾನುಭಾವರೆ ! ನಾವೀಗ ಪಶ್ಚಾತ್ತಪ್ತರಾಗಿದ್ದೇವೆ. ಸೇಡು ತೀರಿಸಿಕೊಳ್ಳಬಯಸಿ ಆತ್ಮಹತ್ಯೆ ಮಾಡಿಕೊಂಡು ಈ ಪಿಶಾಚಜನ್ಮ ಪಡೆಯಬೇಕಾಯಿತು. ಮಹಾತ್ಮರಾದ ನೀವು ರಾಜರಲ್ಲಿ ಅನುಗ್ರಹ ಮಾಡಿದಂತೆ ಪಾಪಿಗಳಾದ ನಮ್ಮಲ್ಲೂ ಕಾರುಣ್ಯತೋರಿ ಈ ಪಿಶಾಚಜನ್ಮದಿಂದ ನಮಗೆ ನಿವೃತ್ತಿನೀಡಿ ಸದ್ಗತಿ ಪಡೆಯುವಂತೆ ಅನುಗ್ರಹಿಸಬೇಕು" ಎಂದು ಪ್ರಾರ್ಥಿಸಿದರು. ಅವರ ಪ್ರಾರ್ಥನೆಯಿಂದ ಗುರುಗಳಿಗೆ ಅವರಲ್ಲಿ ಕಾರುಣ್ಯ ಉಂಟಾಯಿತು. "ಚಕ್ರವರ್ತಿಯ ತಂಟೆಗೆ ನೀವು ಬರದಂತೆ ನಾವೀಗ ದಿಗ್ಬಂಧನ ಮಾಡುತ್ತೇವೆ, ನೀವಿನ್ನು ರಾಜನನ್ನು ಪೀಡಿಸದೆ ಯೋಗ್ಯರಾಗಿ ವರ್ತಿಸಿರಿ. ಅಂದರೆ ಮುಂದೆ ನಿಮಗೆ ವಿಜಯನಗರದಲ್ಲಿ ಪ್ರಾಣದೇವರ ಅನುಗ್ರಹದಿಂದ ನಮ್ಮ ಶಿಷ್ಯರ ದ್ವಾರಾ ಈ ಪಿಶಾಚಜನ್ಮ ನಿವೃತ್ತಿಯಾಗುವುದಲ್ಲದೆ, ನಿಮ್ಮ ವಂಶಿಕರೇ ಮತ್ತೆ ಶ್ರೀ ಶ್ರೀನಿವಾಸನನ್ನು ಪೂಜಿಸುವಂತಾಗುವುದು"ಎಂದಾಜ್ಞಾಪಿಸಿದರು.[1] ಗುರುಗಳ ಅಭಯ ವಚನದಿಂದ ಸಂತುಷ್ಟರಾಗಿ ಅರ್ಚಕ ಪಿಶಾಚಗಳು ಶ್ರೀಗಳವರಿಗೆ ಅಭಿವಂದಿಸಿ ಅದೃಶ್ಯವಾದವು.

ಸಾಮ್ರಾಟನಿಗೆ ಬಂದಿದ್ದ ವಿಪತ್ತು ಪರಿಹೃತವಾಯಿತು, ಬ್ರಹ್ಮಹತ್ಯಾ ಪಾಪ ನಿವಾರಣೆಯಾಯಿತು. ಪಿಶಾಚಬಾಧೆ ತಪ್ಪಿತು. ನರಸಿಂಹಭೂಪಾಲ ನಿರೋಗಿಯಾಗಿ ನಾಲ್ಕಾರು ದಿನಗಳಲ್ಲಿಯೆ ಸುಧಾರಿಸಿ ಮೊದಲಕಿಂತ ತೇಜಸ್ವಿಯಾಗಿ, ದೃಢಕಾಯನಾಗಿ ಕಂಗೊಳಿಸಿದನು, ಶ್ರೀಪಾದಂಗಳವರು ಒಂದು ಸಪ್ತಾಹಕಾಲ ಚಕ್ರವರ್ತಿಯಿಂದ ಅನೇಕ ಹವನ ಹೋಮಾದಿಗಳನ್ನು ಮಾಡಿಸಿ, ಆವನಿಗೆ ಭಗವದನುಗ್ರಹದಿಂದ ಶಾಂತಿ ಸಮಾಧಾನಗಳುಂಟಾಗುವಂತೆ ಮಾಡಿ ಅನುಗ್ರಹಿಸಿದರು. ಮಹಾಪ್ರಭುವು ಶ್ರೀಪಾದಂಗಳವರಿಗೆ ಮತ್ತೆ ಮತ್ತೆ ನಮಸ್ಕರಿಸಿ, ಅವರು ಮಾಡಿದ ಮಹೋಪಕಾರಕ್ಕಾಗಿ ತನ್ನ ಕೃತಜ್ಞತೆಗಳನ್ನು ಸಮರ್ಪಿಸಿ ಕೃತಾರ್ಥನಾದ. ಮತ್ತು ಎಂದಿನಂತೆ ಉತ್ಸಾಹದಿಂದ ಸಾಮ್ರಾಜ್ಯ ಕಾರ್ಯಗಳಲ್ಲಿ ಮಗ್ನನಾದನು.

ಶ್ರೀಲಕ್ಷ್ಮೀನಾರಾಯಣ ಯೋಗಿಗಳು ಸಾಳುವ ನರಸಿಂಹನ ಬ್ರಹ್ಮಹತ್ಯಾ ದೋಷಪರಿಹಾರ ಮಾಡಿದ ವಿಚಾರ ಎಲ್ಲಕಡೆ ಹರಡಿ ಸಕಲರೂ ಗುರುಗಳ ಮಹಿಮೆ-ಕಾರುಣ್ಯಗಳನ್ನು ಕೊಂಡಾಡಹತ್ತಿದರು. ಆದರೆ ಕುಬುದ್ಧಿಯ ಅಸೂಯಾಪರರಾದ ಕೆಲ ಪಂಡಿತರು "ಈ ಗುರುಗಳು ಮಹಾರಾಜನ ಬ್ರಹ್ಮಹತ್ಯಾಪಾಪವನ್ನು ತೀರ್ಥ

---

1) ಶ್ರೀಪಾದರಾಜ ಗುರುಗಳ ಭವಿಷ್ಯ ಮುಂದೆ ಸತ್ಯವಾಗಿ ಪರಿಣಮಿಸಿತು. ಶ್ರೀವ್ಯಾಸರಾಜರ ಅನುಗ್ರಹ-ಪ್ರಯತ್ನಗಳಿಂದ ತಿರುಪತಿ ಅರ್ಚಕರ ವಂಶೀಕರಿಗೇ ಶ್ರೀನಿವಾಸ ದೇವರ ಪೂಜಾಧಿಕಾರವು ಪ್ರಾಪ್ತವಾಯಿತು. ಪಿಶಾಚಿಗಳಾಗಿದ್ದ ಅರ್ಚಕರಿಗೆ ಚಕ್ರತೀರ್ಥರ ಸಮೀಪದಲ್ಲಿ ಶ್ರೀವ್ಯಾಸರಾಜರು ಪ್ರತಿಷ್ಠಿಸಿದ ಶ್ರೀಪ್ರಾಣದೇವರ ಸೇವೆಯಿಂದ ಪಿಶಾಚಿಜನ್ಮ ನಿವೃತ್ತಿಯಾಗಿ ಸದ್ಗತಿಯಾದುದು ಇತಿಹಾಸ ಪ್ರಸಿದ್ಧವಾಗಿದೆ.

ಪ್ರೋಕ್ಷಣೆಯಿಂದ ನಿವಾರಿಸಲು ಸಾಧ್ಯವೇ ಇಲ್ಲ. ಅದು ಸಾಧ್ಯವಾಗುವಂತಿದ್ದರೆ ಜಗತ್ತಿನಲ್ಲಿ ಪಾಪಿಗಳು-ದೋಷಗಳೇ ಇಲ್ಲದಂತಾಗಬೇಕಾದೀತು ! ಇದು ಅಸಾಧ್ಯ ಮಾತ್ರವಲ್ಲ ಅಶಾಸ್ತ್ರೀಯವೂ ಆಗಿದೆ, ಇವೆಲ್ಲವೂ ಮೋಸ" ಮುಂತಾಗಿ ಆಡಿಕೊಳ್ಳ ಹತ್ತಿದರು.

ಈ ವಿಚಾರ ಕರ್ಣಾಕರ್ಣಿಕೆಯಾಗಿ ಶ್ರೀಲಕ್ಷ್ಮೀನಾರಾಯಣಯತಿಗಳಿಗೂ ತಿಳಿಯಿತು. ನಿಂದಕರ ಮೂಢತನವನ್ನು ಕಂಡು ಗುರುಗಳು ನಕ್ಕು ಸುಮ್ಮನಾಗಬಹು ದಾಗಿತ್ತು. ಹಾಗೆ ಸುಮ್ಮನಾದಲ್ಲಿ ಆದರಿಂದ ಚಕ್ರವರ್ತಿ ಸಾಮ್ರಾಜ್ಯದ ಪ್ರಜಾವರ್ಗದ ಮೇಲೆ ದುಷ್ಪರಿಣಾಮವಾಗಿ ಕೇಡಾಗಬಹುದು. ಹಾಗಾಗಬಾರದೆಂದು ದೂರದೃಷ್ಟಿ ಯುಳ್ಳ ಶ್ರೀಗಳವರು ನಿಂದಕರಾದ ಪಂಡಿತರನ್ನು ಕರೆಯಿಸಿಕೊಂಡು ನರಸಿಂಹ ರಾಜನ ಸಮಕ್ಷದಲ್ಲಿ "ಪಂಡಿತರೇ, ನರಸಿಂಹಪ್ರಭುಗಳ ಬ್ರಹ್ಮಹತ್ಯಾದೋಷವನ್ನು ಪರಿಹರಿಸಿದ್ದು ಸುಳ್ಳು ಎಂದು ನೀವು ಹೇಳುತ್ತಿರುವುದಾಗಿ ನಮಗೆ ತಿಳಿದುಬಂದಿದೆ. ಬ್ರಹ್ಮಹತ್ಯಾ ದೋಷವನ್ನು ಪರಿಹರಿಸುವುದು ಅಸಾಧ್ಯವೆಂದು ನಿಮ್ಮ ಅಭಿ ಮತವೇ ?" ಎಂದು ಪ್ರಶ್ನಿಸಿದರು.

ಅಸೂಯಾಪರರಾದ ಪಂಡಿತರು "ಅಹುದು ಸ್ವಾಮಿ. ಬ್ರಹ್ಮಹತ್ಯಾದೋಷ ಅಪರಿಹಾರ್ಯ ! ಅದು ಅನೇಕ ಕ್ಷೇತ್ರಗಳ ಯಾತ್ರೆ, ತೀರ್ಥಗಳ ಸ್ನಾನಾದಿಗಳಿಂದ ಪರಿಹಾರವಾಗುವುದೆಂದು ಶಾಸ್ತ್ರಗಳು ಹೇಳುವುವು. ನೀವು ಆ ಕ್ರಮವನ್ನು ಬಿಟ್ಟು, ಹಾಗೆ ಮಾಡಿಸದೆ ಶಂಖೋದಕ-ತೀರ್ಥ ಪ್ರೋಕ್ಷಣಗಳಿಂದ ಆ ದೋಷವನ್ನು ಅದೆಂತು ಪರಿಹರಿಸಲು ಶಕ್ತರಾದಿರಿ ? ಇದು ಅಶಾಸ್ತ್ರೀಯವಲ್ಲವೇ ?" ಎಂದು ಸವಾಲು ಹಾಕಿದರು !

ದೈವ-ಮಂತ್ರ-ಶಂಖೋದಕ-ತೀರ್ಥಗಳಲ್ಲಿ ನಂಬಿಕೆಯಿಲ್ಲದ ಆ ಜನರ ಅಜ್ಞಾನ ವನ್ನು ಪರಿಹರಿಸಲಾಶಿಶಿ ಶ್ರೀಗಳವರು ಒಂದು ಬಿಳಿಯ ಶುಭ್ರವಾದ ವಸ್ತ್ರವನ್ನು ತರಿಸಿ ಅದನ್ನು ಗೇರುಬೀಜದ ಎಣ್ಣೆಯಲ್ಲಿ ತೋಯಿಸಿ ಕೃಷ್ಣವರ್ಣ ತಾಳಿದ್ದ ಆ ವಸ್ತ್ರವನ್ನು ಆ ಕುಹಕಿಗಳ ಮುಂದಿರಿಸಿ "ಪಂಡಿತರೇ, ಈ ವಸ್ತ್ರವನ್ನು ಶುಭ್ರ ಗೊಳಿಸಲು ಸಾಧ್ಯವಿಲ್ಲವೇ ?" ಎಂದು ಕೇಳಿದರು. ಅದಕ್ಕೆ ಆ ಪಂಡಿತರು ನಕ್ಕು "ಗುರುಗಳೇ, ಇದು ಗೇರೆಣ್ಣೆಯಿಂದ ಕಪ್ಪಾಗಿದೆ, ದೋಷಯುಕ್ತವಾಗಿದೆ. ಇದನ್ನು ಶುಭ್ರಗೊಳಿಸಲು ಸಾಧ್ಯವೇ ಇಲ್ಲ" ಎಂದರು.

ಶ್ರೀಗಳವರು ಮಂದಹಾಸಬೀರುತ್ತಾ "ನೀವು ಹೇಳಿದಂತೆ ಬ್ರಹ್ಮಹತ್ಯಾ ದೋಷಗಳು ಕ್ಷೇತ್ರಯಾತ್ರೆ, ತೀರ್ಥಸ್ನಾನಾದಿಗಳಿಂದ ಪರಿಹಾರವಾಗುವುದಷ್ಟೇ ? ಶಾಸ್ತ್ರವಿಹಿತವಾದ ಆ ಕ್ರಮದಂತೆ ದೋಷಯುಕ್ತವಾದ ಈ ವಸ್ತ್ರವನ್ನೂ ಕ್ಷೇತ್ರ ಯಾತ್ರೆ ತೀರ್ಥ-ಸಮುದ್ರ-ನದಿಗಳಲ್ಲಿ ಅದ್ದಿ ದೋಷ ಪರಿಹಾರ ಮಾಡಿಸಿ ಶುಭ್ರ

ಗೊಳಿಸಿ-ತನ್ನಿರಿ" ಎಂದು ಹೇಳಿ ಕ್ಷೇತ್ರ ತೀರ್ಥಯಾತ್ರಾರ್ಥಿಗಳಿಗೆ ಬೇಕಾಗುವ ಧನ ಸಹಾಯ ಮಾಡಿ ಕಳಿಸಿಕೊಟ್ಟರು;

ಒಂದೆರಡು ತಿಂಗಳು ಕಳೆದಮೇಲೆ ವಾಪಸಾದ ಆ ನಿಂದಕಪಂಡಿತರು ತಮ್ಮ ಕಾರ್ಯ ಅಸಫಲವಾಯಿತೆಂದು ಹೇಳಿ ಕಪ್ಪಾಗಿದ್ದ ವಸ್ತ್ರವನ್ನು ಶ್ರೀಗಳವರ ಮುಂದಿಟ್ಟು ತಲೆತಗ್ಗಿಸಿ ನಿಂತರು ! ಆಗ ಶ್ರೀಲಕ್ಷ್ಮೀನಾರಾಯಣಮುನಿಗಳು ಶಿಷ್ಯರಿಂದ ಶಂಖೋದಕ ಮತ್ತು ದೇವರ ತೀರ್ಥವನ್ನು ತರಿಸಿ ಅಭಿಮಂತ್ರಿಸಿ ಎಲ್ಲರೂ ನೋಡುತ್ತಿರುವಂತೆ ಆ ವಸ್ತ್ರದ ಮೇಲೆ ಪ್ರೋಕ್ಷಿಸಿದರು, ಆಶ್ಚರ್ಯ! ಪರಮಾಶ್ಚರ್ಯ ! ಕಪ್ಪುಬಣ್ಣದಿಂದಿದ್ದ ಆ ವಸ್ತ್ರವು ತಕ್ಷಣವೇ ಬಿಳುಪಾಗಿ ಮೊದಲಿನಂತೆಯೇ ಶುಭ್ರವಾಗಿ ಕಂಗೊಳಿಸಿತು ! ಆ ಅದ್ಭುತಪವಾಡವನ್ನು ಕಂಡು ಎಲ್ಲರೂ ಬೆರಗಾದರು ! ತಮ್ಮ ಕಣ್ಣೆದುರಿಗೇ ಜರುಗಿದ ವಿಸ್ಮಯಕಾರಕ ಪವಾಡವನ್ನು ಕಂಡು ಕುಹಕಿಗಳು ಆಶ್ಚರ್ಯಗೊಂಡರು. ಆಗ ಅವರು ಈ ಗುರುಗಳು ಸಾಮಾನ್ಯರಲ್ಲ, ಭಗವಂತನ ಅನುಗ್ರಹಕ್ಕೆ ಪಾತ್ರರಾದ ಮಹಾತ್ಮರು, ಮಂತ್ರಸಿದ್ಧರು. ಇಂಥವರನ್ನು ತಾವು ನಿಂದಿಸಿ ಅಪರಾಧಿಗಳಾದೆವಲ್ಲಾ ಎಂದು ಚಿಂತಾಕ್ರಾಂತರಾಗಿ ತಲೆತಗ್ಗಿಸಿ ನಿಂತರು,

ಆಗ ಶ್ರೀಗಳವರು "ಪಂಡಿತರೇ, ನೀವು ವೇದವೇದಾಂಗ ಪಾರಂಗತರು. ಆಸ್ತಿಕರು, ನಿಮ್ಮಂಥವರು ಪರಮಾತ್ಮನ ಮಹಿಮಾತಿಶಯ, ಮಂತ್ರಶಾಸ್ತ್ರಗಳ ಮಹತ್ವವನ್ನು ಅಲ್ಲಗಳೆಯಬಹುದೆ ? ಇನ್ನು ಜನಸಾಮಾನ್ಯರ, ಮತ್ತು ನಾಸ್ತಿಕರ ವಿಚಾರ ಹೇಳುವುದೇನಿದೆ? ಜನತೆಯಲ್ಲಿ ಆಸ್ತಿಕತೆಯನ್ನು ಪ್ರಚೋದಿಸಬೇಕಾದ ನೀವೇ ಹೀಗೆ ಮಾಡಬಹುದೆ ? ಕ್ಷೇತ್ರ-ತೀರ್ಥಗಳಿಗೆ ಆ ಶಕ್ತಿಯನ್ನು ತಂದೀಯುವ ಭಗವಂತನ ಪವಿತ್ರತೀರ್ಥ, ಜಗತ್ತನ್ನೇ ಪಾವನಗೊಳಿಸುವ ಶಂಖತೀರ್ಥಗಳ ಮಹತ್ವ ನಿಮಗೆ ತಿಳಿಯದೇ ? ಭಗವದನುಗ್ರಹ ಮಂತ್ರಶಕ್ತಿ ಪ್ರಭಾವಗಳಿಂದ ಏನನ್ನು ಬೇಕಾದರೂ ಸಾಧಿಸಬಹುದೆಂದು ಇಂದಿನ ದೃಷ್ಟಾಂತದಿಂದ ನಿಮಗೀಗ ಮನವರಿಕೆಯಾಗಿರಬಹುದೆಂದು ನಂಬಿದ್ದೇವೆ. ಗೇರೆಣ್ಣೆಯಿಂದ ಕಪ್ಪಾದವಸ್ತ್ರವು ಹೇಗೆ ಶುಭ್ರವಾಯಿತೋ, ಅದರಂತೆಯೇ ಮಹರಾಜರಿಗೆ ಬಂದಿದ್ದ ಬ್ರಹ್ಮಹತ್ಯಾದೋಷವೂ ಮಂತ್ರಪೂತವಾದ ಶಂಖೋದಕ ಮತ್ತು ದೇವರ ಪವಿತ್ರತೀರ್ಥ, ಮಂತ್ರಶಕ್ತಿಯ ಪ್ರಭಾವದಿಂದ ಪರಮಾತ್ಮನ ಅನುಗ್ರಹದಿಂದ ಪರಿಹಾರವಾಗಿ ಅವರು ಪಾಪಮುಕ್ತರಾದರೆಂದು ತಿಳಿಯಿರಿ !" ಎಂದು ಹೇಳಿದರು.

ಪಂಡಿತರು ತಮ್ಮ ಕುಕೃತ್ಯಕ್ಕಾಗಿ ನಾಚಿ, ಪಶ್ಚಾತ್ತಪ್ತರಾಗಿ ಗುರುಗಳಿಗೆ ನಮಸ್ಕರಿಸಿ "ಮಹಾನುಭಾವರೇ, ಭಗವದ್ಭಕ್ತರೂ, ಜ್ಞಾನಿಗಳೂ ಆದ ತಮ್ಮನ್ನು ಶಂಕಿಸಿ ಪಾಪಿಗಳಾಗಿದ್ದೇವೆ. ನಮ್ಮ ಅಪರಾಧವನ್ನು ಕ್ಷಮಿಸಿ ಅನುಗ್ರಹಿಸಬೇಕು" ಎಂದು ಪ್ರಾರ್ಥಿಸಿದರು.

ಇವೆಲ್ಲವನ್ನೂ ಕಂಡು ನೃಸಿಂಹಭೂಪಾಲ ಸಂತೋಷಗೊಂಡ. ಗುರುಗಳಲ್ಲಿ ಅವನಿಗಿದ್ದ ಭಕ್ತಿ-ಗೌರವಗಳು ಇಮ್ಮಡಿಸಿದವು. ಶ್ರೀಗಳವರಿಗೆ ಕರಮುಗಿದು "ಅನುಗ್ರಹೀತನಾದೆ ಗುರುದೇವ! ತಾವು ಕೆಲಕಾಲ ಇಲ್ಲಿದ್ದು ನನ್ನನ್ನೂ ಸಾಮ್ರಾಜ್ಯವನ್ನೂ ಕಾಪಾಡುತ್ತಿರಬೇಕು" ಎಂದು ಕೋರಿದನು. ಶ್ರೀಗಳವರು ಕಾರುಣ್ಯದಿಂದ ಅವನ ವಿಜ್ಞಾಪನೆಯಂತೆ ಅಲ್ಲಿರಲು ಒಪ್ಪಿದರು. ಮಹಾರಾಜ ಅವರಿಗೆ ಉತ್ತಮ ಬಿಡಾರ-ಮತ್ತು ಸಕಲವ್ಯವಸ್ಥೆಗಳನ್ನೂ ಮಾಡಿಕೊಟ್ಟ.

o o o o o

ಇದೇ ಸಮಯಕ್ಕೆ ಸರಿಯಾಗಿ ಉತ್ತರಭಾರತ ಸಂಚಾರದಲ್ಲಿದ್ದ ಭಗವಾನ್ ವ್ಯಾಸತೀರ್ಥರು ತಮ್ಮ ದಿಗ್ವಿಜಯವನ್ನು ಯಶಸ್ವಿಯಾಗಿ ಮುಗಿಸಿಕೊಂಡು ರಾಜಧಾನಿಗೆ ದಯಮಾಡಿದರು.

ನಾಲ್ಕುವರ್ಷಗಳ ಹಿಂದೆ ಸಾಳುವ ನರಸಿಂಹರಾಜನಿಂದ ಬೀಳ್ಕೊಂಡು ಉತ್ತರ ಉತ್ತರದಿಗ್ವಿಜಯವನ್ನು ಕೈಕೊಂಡು ಹೊರಟ ಶ್ರೀಗಳವರು ಕಾಶಿ, ಪ್ರಯಾಗ, ಗಯಾ, ಹರಿದ್ವಾರ ಹೃಷೀಕೇಶ,ಬದರಿ, ಪೂರಿ,ಜಗನ್ನಾಥ, ಮಥುರಾ, ಬೃಂದಾವನ ಕುರುಕ್ಷೇತ್ರ–ಮೊದಲಾದ ಕ್ಷೇತ್ರಗಳಿಗೆ ದಯಮಾಡಿಸಿ ಅಲ್ಲಲ್ಲಿ ಬಹುಕಾಲ ವಾಸಮಾಡಿ ಪುಣ್ಯನದೀಸ್ನಾನ, ಭಗವದ್ದರ್ಶನ-ಸೇವೆಗಳಿಂದ ಪವಿತ್ರಾಂತಃಕರಣರಾದರು. ಕಾಶಿ, ಗಯಾ, ಹರಿದ್ವಾರ, ಮುಂತಾದ ಕಡೆ ಪ್ರಖ್ಯಾತರಾಗಿದ್ದ ಗದಾಧರ, ವಾಜಪೇಯಿ, ಲಿಂಗಣ್ಣಮಿಶ್ರ, ಸತ್ಯನಾಥ, ಹರಮಿಶ್ರ ಮುಂತಾದ ಪ್ರಕಾಂಡ ಪಂಡಿತರನ್ನು ವಾದದಲ್ಲಿ ಜಯಿಸಿ ತಮ್ಮ ಶಿಷ್ಯರನ್ನಾಗಿ ಮಾಡಿಕೊಂಡರು. ಮತ್ತು ಕಾಶಿ, ಗಯಾ, ಹರಿದ್ವಾರ ಮುಂತಾದ ಕಡೆ ಇದ್ದ ವಿದ್ಯಾಪೀಠಗಳಿಗೆ ಕ್ರಮವಾಗಿ ಗದಾಧರ ಹರಮಿಶ್ರ, ಸತ್ಯನಾಥ ಮುಂತಾದವರನ್ನು ಅಧ್ಯಕ್ಷರನ್ನಾಗಿಮಾಡಿ ಸಕಲಶಾಸ್ತ್ರಗಳ, ಮುಖ್ಯವಾಗಿ ದ್ವೈತಸಿದ್ಧಾಂತ ಪ್ರಸಾರಗಳನ್ನು ನೆರವೇರಿಸಬೇಕೆಂದು ಆಜ್ಞಾಪಿಸಿ, ಅದಕ್ಕೆ ಅವರಿಗೆ ಎಲ್ಲ ಅನುಕೂಲಗಳನ್ನೂ ಏರ್ಪಡಿಸಿಕೊಟ್ಟು ಅನುಗ್ರಹಿಸಿದರು.

ಅಲ್ಲಿಂದ ಮುಂದೆ ಗುರುಗಳು ವಂಗದೇಶಕ್ಕೆ ದಯಮಾಡಿಸಿದರು. ಅಲ್ಲಿ ಅವರಿಗೆ ಅಭೂತಪೂರ್ವ ಸ್ವಾಗತದೊರೆಯಿತು. ಅಲ್ಲಿ ವಿಷ್ಣುಭಕ್ತಿ ಭಾಗವತಧರ್ಮಗಳು ವಿಶೇಷಪ್ರಸಾರವಾಗಿರುವುದನ್ನು ಕಂಡುಗುರುಗಳಿಗೆ ಅತೀವಸಂತೋಷವಾಯಿತು ಶ್ರೀವ್ಯಾಸತೀರ್ಥರು, ಊರೂರು, ಗ್ರಾಮಗಳಿಗೆ ದಯಮಾಡಿಸಿ ಎಲ್ಲೆಡೆ ವಿಷ್ಣುಭಕ್ತಿಯನ್ನು ಪ್ರಸಾರಮಾಡಿ ಸಹಸ್ರಾರು ಜನರಿಗೆ ಮಾಧ್ವದೀಕ್ಷೆಕರುಣಿಸಿ, ಮಠದ ಶಿಷ್ಯರನ್ನಾಗಿ ಮಾಡಿಕೊಂಡು ಪೊರೆದರು. ಅಲ್ಲಿನ ಜನರ ಪ್ರಾರ್ಥನೆಯಂತೆ ಅಲ್ಲಿ ಪ್ರಖ್ಯಾತ ಪಂಡಿತರಾಗಿದ್ದ ಶಿಷ್ಯರಿಗೆ ಪರಮಹಂಸಾಶ್ರಮವಿತ್ತು "ಶ್ರೀಲಕ್ಷ್ಮೀತೀರ್ಥ" ಎಂಬ ಹೆಸರಿನಿಂದ ತಮ್ಮ ಶಾಖಾಮಠದ ಅಧಿಪತಿಗಳಾಗಿರುವಂತೆ ಮಾಡಿದ್ದಲ್ಲದೆ ಲಕ್ಷ್ಮೀತೀರ್ಥರನ್ನು ವಂಗದೇಶದ ವಿದ್ಯಾಪೀಠದ ಅಧ್ಯಕ್ಷರನ್ನಾಗಿ ಮಾಡಿದರು.

ಶ್ರೀವ್ಯಾಸರಾಜರ ಈ ದ್ವಿತೀಯ ಚೈತ್ರಯಾತ್ರೆಯು ವೈಶಿಷ್ಟ್ಯಪೂರ್ಣವಾಗಿದ್ದಿತು. ಗುರುಗಳ ತೇಜಸ್ಸು-ಜ್ಞಾನ ಭಕ್ತ್ಯಾದಿಗಳಿಂದ ಪ್ರಭಾವಿತರಾಗಿದ್ದ ಜನರು ಅವರ ಉಪದೇಶ ಅನುಗ್ರಹಗಳಿಂದ ಆಕರ್ಷಿತರಾಗಿ ಅವರಲ್ಲಿ ಅಪಾರಭಕ್ತಿಮಾಡುತ್ತಿದ್ದರು. ಶ್ರೀಯವರು ದೇವರದರ್ಶನ, ತೀರ್ಥಪ್ರಸಾದ, ಮಂತ್ರಮುದ್ರಾಧಾರಣ, ಗುರೂಪದೇಶಾದಿಗಳಿಂದ ಆಸ್ತಿಕವೃಂದವನ್ನು ಸಂತೋಷಪಡಿಸಿದರು. ಜನತೆಯು ಅನೇಕಸಮಸ್ಯೆಗಳು, ಕಷ್ಟಕಾರ್ಪಣ್ಯಗಳನ್ನು ಪರಿಹರಿಸಿ, ಮನೋರಥಗಳನ್ನು ಪೂರೈಸುತ್ತಿದ್ದರು. ಜನತೆಯಲ್ಲಿ ಆಧ್ಯಾತ್ಮಿಕ, ಧಾರ್ಮಿಕ-ನೈತಿಕ ಭಾವನೆಗಳನ್ನು ಜಾಗೃತಿಗೊಳಿಸಿ, ಭಾರತೀಯ ವೈದಿಕ ಭವ್ಯಪರಂಪರೆಯು ಅಲ್ಲಿ ಅವ್ಯಾಹತವಾಗಿ ನಿರ್ಬಾಧವಾಗಿ ಮುಂದುವರೆಯುವಂತೆ ಮಾಡಿದರು.

ಶ್ರೀಪಾದಂಗಳವರು ತಾವು ತುಳಿದ ಸ್ಥಳಗಳನ್ನೆಲ್ಲಾ ತಮ್ಮ ಪಾದಧೂಳಿಯಿಂದ ಪಾವನಗೊಳಿಸುತ್ತಾ ಸುಮಾರು ನಾಲ್ಕು ವರ್ಷಗಳಕಾಲ ಉತ್ತರಭಾರತಾದ್ಯಂತ ಸಂಚಾರಮಾಡಿ ಸಜ್ಜನರನ್ನು ಉದ್ಧರಿಸುತ್ತಾ, ದ್ವೈತಸಿದ್ಧಾಂತ ವಿಜಯಧ್ವಜವನ್ನು ಮೆರೆಸಿ ರಾಜಾಧಿರಾಜರು-ಪಂಡಿತ-ಪಾಮರರಿಂದ ಸೇವಿತರಾಗಿ ಲೋಕಕಲ್ಯಾಣವೆಸಗಿ ಮತ್ತೆ ಸಂಚಾರಕ್ರಮದಲ್ಲಿ ಚಂದ್ರಗಿರಿಗೆ ಪ್ರಯಾಣಬೆಳೆಸಿದರು.

o o o o o

## ೩೪. ಶ್ರೀಪಾದರಾಜರಿಗೆ ರತ್ನಾಭಿಷೇಕ

ಇತ್ತ ಕನ್ನಡರಾಜಧಾನಿಯಲ್ಲಿ ಸಾಳುವ ನರಸಿಂಹಭೂಪಾಲನು ತನಗೆ ಬಂದ ವಿಪತ್ತನ್ನು ಪರಿಹರಿಸಿ ಅನುಗ್ರಹಿಸಿದ ಪರಮಪೂಜ್ಯ ಶ್ರೀಲಕ್ಷ್ಮೀನಾರಾಯಣಯತಿಗಳನ್ನು ವಿಶೇಷರೀತಿಯಿಂದ ಗೌರವಿಸಲಾಶಿಸಿ, ಸಚಿವರಾದ ಭುವನಬಂದು, ತುಳವ ನರಸನಾಯಕ, ಚಿನ್ನರಾಜ ಮುಂತಾದ ಆತ್ಮೀಯರೊಡನೆ ವಿಚಾರವಿನಿಮಯಮಾಡಿ ಸರ್ವಾನುಮತದಿಂದ ಶ್ರೀಪಾದಂಗಳವರಿಗೆ ರತ್ನಾಭಿಷೇಕಮಾಡಿ ಗೌರವಿಸಬೇಕೆಂದು ತೀರ್ಮಾನಿಸಿದನು. ಚಕ್ರವರ್ತಿ, ಸಚಿವಮಂಡಲಿಯವರು ಖುದ್ದಾಗಿನಿಂತು ಅದಕ್ಕೆ ಬೇಕಾದ ಎಲ್ಲ ವ್ಯವಸ್ಥೆಗಳನ್ನುಮಾಡಿ, ಗುರುಗಳನ್ನು ಒಪ್ಪಿಸಲು ಶ್ರೀಗಳವರ ಸನ್ನಿಧಿಗೆಬಂದು ನರಸಿಂಹಪ್ರಭುವು ತನ್ನ ಆಶೆಯನ್ನು ವಿಜ್ಞಾಪಿಸಿ ರತ್ನಾಭಿಷೇಕಕ್ಕೆ ಒಪ್ಪಿ ಅನುಗ್ರಹಿಸಬೇಕೆಂದು ಪ್ರಾರ್ಥಿಸಿದನು.

ಶ್ರೀಲಕ್ಷ್ಮೀನಾರಾಯಣಮುನಿಗಳು ಮೊದಲು ಅದಕ್ಕೆ ಸಮ್ಮತಿಸದಿದ್ದರೂ ಚಕ್ರವರ್ತಿ ಸಚಿವಾದಿಗಳ ವಿಶೇಷ ಪ್ರಾರ್ಥನೆಯಿಂದ ಮನಕರಗಿ ಸಮ್ಮತಿಸಿದರು. ಮತ್ತು "ರಾಜನ್, ನೀನೀಗಾಗಲೇ ನಮಗೆ ಗ್ರಾಮ, ಭೂಮಿ, ತಸ್ತೀಕು, ಬಿರುದುಬಾವಲಿ, ಧನಕನಕಾಭರಣಗಳು ಶ್ರೀಹರಿಗೆ ವಿವಿಧ ನೈವೇದ್ಯಗಳನ್ನು ಅರ್ಪಿಸಲು ಬೇಕಾದ ಎಲ್ಲಾ ಸೌಕರ್ಯಾದಿಗಳನ್ನು ಮಾಡಿಕೊಟ್ಟು ಗೌರವಿಸಿದ್ದೀಯೇ. ಈಗ ಮತ್ತೆ ಈ ರತ್ನಾಭಿಷೇಕದ ಅವಶ್ಯಕತೆ ಇರಲಿಲ್ಲ. ನಿನ್ನ ಮನಸ್ಸಿಗೆ ನೋವಾಗಬಾರದೆಂದು

ಅವನ್ನು ಶ್ರೀಗೋಪಿನಾಥ–ರಂಗವಿಠಲರಿಗೆ ನೀನು ಸಮರ್ಪಿಸುವ ಸೇವೆಯೆಂದು ಭಾವಿಸಿ ಸ್ವೀಕರಿಸಲು ಒಪ್ಪಿದೇವೆ. ಈಗ ನಿನಗೆ ತೃಪ್ತಿಯೇ ?" ಎಂದರು. ನರಸಿಂಹಪ್ರಭು ಸಚಿವಾದಿಗಳಿಗೆ ಸಂತೋಷವಾಯಿತು. ಗುರುಗಳಿಂದ ಫಲಮಂತ್ರಾಕ್ಷತೆ ಪಡೆದು ಅರಮನೆಗೆ ತೆರಳಿದರು.

ನಾಲ್ಕಾರು ದಿನಗಳಾದಮೇಲೆ ಒಂದು ಶುಭಮುಹೂರ್ತದಲ್ಲಿ ನರಸಿಂಹ ಭೂಪಾಲನು ಸಮಸ್ತರಾಜವೈಭವದೊಡನೆ ಶ್ರೀಲಕ್ಷ್ಮೀನಾರಾಯಣಮುನಿಗಳನ್ನು ಸಂಭ್ರಮದಿಂದ ಅರಮನೆಗೆ ಕರೆತಂದು ವಾದ್ಯವೈಭವವೇದಘೋಷಗಳೊಡನೆ ರತ್ನಸಿಂಹಾಸನದಲ್ಲಿ ಮಂಡಿಸಿ ವಂದಿಮಾಗಧರು ಜಯಘೋಷಮಾಡುತ್ತಿರಲು ಸ್ವಹಸ್ತದಿಂದ ಶ್ರೀಪಾದಂಗಳವರಿಗೆ ಭಕ್ತಿಯಿಂದ ರತ್ನಾಭಿಷೇಕಮಾಡಿ ಧನಕನಕವಸ್ತ್ರಾಭರಣಗಳನ್ನು ಸಮರ್ಪಿಸಿ ಕೃತಾರ್ಥನಾದನು. ಗುರುವರ್ಯರು ಸಾಮ್ರಾಟನು ಮಾಡಿದ ರತ್ನಾಭಿಷೇಕ ನವರತ್ನಕನಕಾಭರಣಾದಿಗಳನ್ನು ತಿರುಪತಿ ಶ್ರೀನಿವಾಸ, ಕಂಚಿವರದರಾಜ, ಶ್ರೀರಂಗದ ರಂಗನಾಥ, ಹಂಪಿಯ ವಿರೂಪಾಕ್ಷದೇವರುಗಳ ಸೇವೆಗಾಗಿಯೂ, ಪಂಡಿತರು ಶ್ರೋತ್ರಿಯ ಬ್ರಾಹ್ಮಣರು ಹಾಗೂ ಬಡಬಗ್ಗರುಗಳಿಗೆ ಉದಾರವಾಗಿ ದಾನಮಾಡಿದರು. ಶ್ರೀಗಳವರ ನಿಸ್ವಾರ್ಥಬುದ್ಧಿ, ಔದಾರ್ಯಾದಿಗಳನ್ನು ಕಂಡು ಸರ್ವರೂ ಗುರುವರ್ಯರನ್ನು ಮುಕ್ತಕಂಠದಿಂದ ಕೊಂಡಾಡಿದರು.

ಅಂದು ಅರಮನೆಯಲ್ಲಿಯೇ ಗುರುಗಳು ಪೂಜಾರಾಧನೆಯನ್ನು ನೆರವೇರಿಸಿದರು. ಸಹಸ್ರಾರು ಜನರಿಗೆ ಮೃಷ್ಟಾನ್ನ ಭೋಜನವಾಯಿತು. ಅಂದು ಸಂಜೆ ರತ್ನಾಭಿಷೇಕಾಂಗವಾಗಿ ವಿದ್ವತ್ಸಭೆಯೂ. ಗುರುಗಳ ಆಶೀರ್ವಾದರೂಪ ಉಪದೇಶಗಳು ಜರುಗಲು ವ್ಯವಸ್ಥೆಯಾಗಿತ್ತು.

ಹಿಂದೆ ನಿರೂಪಿಸಿದಂತೆ ಇದೇ ಸಮಯಕ್ಕೆ ಸರಿಯಾಗಿ ಶ್ರೀವ್ಯಾಸತೀರ್ಥರು ಉತ್ತರಭಾರತ ದಿಗ್ವಿಜಯವನ್ನು ಪೂರೈಸಿ ಚಂದ್ರಗಿರಿಗೆ ದಯಮಾಡಿಸಿದರು, ಹರ್ಷಭರಿತನಾದ ಚಕ್ರೇಶ್ವರನು "ರಾಜಗುರು"ಗಳನ್ನು ರಾಜವೈಭವದಿಂದ ಸ್ವಾಗತಿಸಿ ಅರಮನೆಗೆ ಕರೆದುತಂದನು. ಶ್ರೀಲಕ್ಷ್ಮೀನಾರಾಯಣ ಮುನಿಗಳು ಪ್ರಿಯಶಿಷ್ಯರನ್ನು ಪ್ರೀತ್ಯಾದರಗಳಿಂದ ಸ್ವಾಗತಿಸಿದರು. ವ್ಯಾಸಭಿಕ್ಷುಗಳು ಗುರುಗಳಿಗೆ ಸಾಷ್ಟಾಂಗವೆರಗಿದರು. ಗುರುಗಳು ಶಿಷ್ಯರನ್ನು ಭರದಿಂದ ಆಲಿಂಗಿಸಿದರು, ಪರಸ್ಪರ ದರ್ಶನದಿಂದ

---

1 ಶ್ರೀಮದ್ವೀರನೃಸಿಂಹರಾಜನೃಪತೇ ರ್ಭೂದೇವಹತ್ಯಾ ವ್ಯಥಾಂ ।
ದೂರೀಕೃತ್ಯ ತದರ್ಪಿತೋಜ್ವಲಮಹಾಸಿಂಹಾಸನೇ ಸಂಸ್ಥಿತ ॥
ಶ್ರೀಮತ್ಪೂರ್ವಕವಾಟನಾಮಕಪುರೇ ಸರ್ವೇಷ್ಟಸಿದ್ಧಿಪ್ರದಃ
ಶ್ರೀಶ್ರೀಪಾದಯತೀಂದ್ರಶೇಖರಮಣಿ ರ್ಭೂಯಾತ್ಸನಃ ಶ್ರೇಯಸೇ ॥

—ಶ್ರೀಪಾದರಾಜಾಷ್ಟಕಮ್.

Stotra Mahodadhi, Belgam Edition. Part-I. P. 410

ರುಶಿಷ್ಯರಿಗೆ ಅಪಾರ ಆನಂದವಾಯಿತು. ಈ ಪವಿತ್ರದೃಶ್ಯವನ್ನು ನೋಡಿ ಸಕಲರೂ, ಹರ್ಷಭರಿತರಾಗಿ ಗುರುಶಿಷ್ಯರನ್ನು ಕೊಂಡಾಡಿದರು.

ಅಂದು ಸಂಜೆ ಶ್ರೀಮಠದ ಪಂಡಿತರು, ಆತ್ಮೀಯರು ಶ್ರೀವ್ಯಾಸರಾಯರು ದಿಗ್ವಿಜಯ ಹೊರಟಮೇಲೆ ಕನ್ನಡಸಾಮ್ರಾಜ್ಯದಲ್ಲಿ ಜರುಗಿದ ಎಲ್ಲಾ ಘಟನೆಗಳನ್ನು ಚಕ್ರವರ್ತಿಗೆ ಬಂದಿದ್ದ ಬ್ರಹ್ಮಹತ್ಯಾದೋಷಪರಿಹಾರ, ಶ್ರೀಲಕ್ಷ್ಮೀನಾರಾಯಣ ಗಳು ಅದನ್ನು ಪರಿಹರಿಸಿದ್ದು, ಕುಹುಕಿಗಳ ನಿಂದೆ, ಆಗ ಗುರುಗಳು ತೋರಿದ ಪವಾಡ, ನರಸಿಂಹರಾಜನು ಅಂದು ಗುರುಗಳಿಗೆ ನೆರವೇರಿಸಿದ ರತ್ನಾಭಿಷೇಕ— ಮುಂತಾದ ವಿಚಾರಗಳನ್ನು ನಿವೇದಿಸಿದರು. ಶ್ರೀವ್ಯಾಸತೀರ್ಥರು ಗುರುಗಳ ಮಹಿಮಾತಿಶಯವನ್ನು ಕೇಳಿ ಪರಮ ಸಂತೋಷಗೊಂಡರು.

ಅಂದು ಅರಮನೆಯಲ್ಲಿ ವಿದ್ವತ್ಸಭೆಯಿದ್ದು, ಅದೇ ಸಮಯಕ್ಕೆ ಶ್ರೀವ್ಯಾಸರಾಜರು ಆಗಮಿಸಿದ್ದರಿಂದ ವಿಶೇಷ ಕಳೆಯುಂಟಾಗಿತ್ತು. ನರಸಿಂಹ ಮಹೀಪಾಲನು ಗುರುಗಳನ್ನು ಸಕಲ ಸಚಿವ-ಸಾಮಂತ-ಪಂಡಿತರೊಡನೆ ಸಕಲ ವೈಭವದಿಂದ ದರ್ಬಾರಿಗೆ ಕರೆತಂದನು. ವೈಭವದಿಂದ ದಯಮಾಡಿಸುತ್ತಿರುವ ಪೂಜ್ಯಗುರುಗಳನ್ನು ಶ್ರೀವ್ಯಾಸಯತೀಂದ್ರರು ತದೇಕದೃಷ್ಟಿಯಿಂದ ಅವಲೋಕಿಸಿದರು. ಅವರು ಕಂಡ ದೃಶ್ಯ, ಅವರ ಮೈ ಪುಳುಕುಗೊಳಿಸಿತು. ಭಕ್ತಿಯಿಂದ ಆನಂದದ ಕಣ್ಣೀರುಹರಿಯಿತು.

ಶ್ರೀಲಕ್ಷ್ಮೀನಾರಾಯಣ ಮುನೀಂದ್ರರು ಸಾರ್ವಭೌಮನ ಪ್ರಾರ್ಥನೆಯಂತೆ ಅವನು ಅರ್ಪಿಸಿದ ಉಡುಗೆ ತೊಡುಗೆಗಳಿಂದ ಅಲಂಕೃತರಾಗಿದ್ದಾರೆ. ಕಾಷಾಯಾಂಬರ ದ್ವಾದಶನಾಮ, ಗಂಧಗಳಿಂದೊಪ್ಪುತ್ತಿದ್ದಾರೆ. ಸುವರ್ಣಪೀತಾಂಬರವನ್ನು ಹೊದ್ದಿದ್ದಾರೆ, ಮುತ್ತಿನ ಕವಚ, ನವರತ್ನ ಕರ್ಣಕುಂಡಲಗಳು, ಕಂಕಣ-ಹಾರಗಳು, ತುಳಸೀ ಮಾಲೆಗಳಿಂದಶೋಭಿಸುತ್ತಿದ್ದಾರೆ. ಶಿರದಲ್ಲಿ ಮುತ್ತು ರತ್ನ-ಮಾಣಿಕ್ಯಮಯ ಕಿರೀಟ (ಕುಲಾಯಿ) ರಾಜಿಸುತ್ತಿದೆ. ಹಣೆಯಲ್ಲಿ ಕಸ್ತೂರಿತಿಲಕ ಕಂಗೊಳಿಸಿದೆ ! ಪಂಡಿತರು ಶ್ವೇತಛತ್ರ ಹಿಡಿದಿದ್ದಾರೆ. ಸಾರ್ವಭೌಮ ಮಹಾಮಾತ್ಯರು ಗುರುಗಳಿಗೆ ಚಾಮರ ಹಾಕುತ್ತಿದ್ದಾರೆ. ಸಭಾಸದರು ಎದ್ದು ನಿಂತು ಗೌರವ ಭಕ್ತಿಗಳನ್ನರ್ಪಿಸುತ್ತಾ ಜಯ ಜಯಕಾರಮಾಡುತ್ತಿದ್ದಾರೆ. ಆಗ ನರಸಿಂಹಭೂಪಾಲ ಗುರುಗಳಿಗೆ ಹಸ್ತಲಾಘವ ವಿತ್ತು ಸಿಂಹಾಸನದಲ್ಲಿ ಕೂಡಿಸಿ, ಶ್ರೀವ್ಯಾಸರಾಜರಿಗಾಗಿ ಏರ್ಪಡಿಸಿದ್ದ ಸುವರ್ಣಾಸನ ದಲ್ಲಿ ಅವರನ್ನು ಮಂಡಿಸುವಂತೆ ಪ್ರಾರ್ಥಿಸಿದ. ಸಭೆ ಸಂಭ್ರಮಯುಕ್ತವಾಗಿದ್ದರೂ ನಿಶ್ಶಬ್ದವಾಗಿದೆ.

ತಮ್ಮ ಆಸನದತ್ತ ಬರುವಾಗ ವ್ಯಾಸರಾಜರಿಗೆ, ಗುರುಗಳು ಚಕ್ರವರ್ತಿಗೆಬಂದಿದ್ದ ಬ್ರಹ್ಮಹತ್ಯಾಪರಿಹಾರಮಾಡಿದುದು, ಮತ್ತಿತರ ಮಹಿಮೆಗಳೆಲ್ಲಾ ಅವರ ಮನದಲ್ಲಿ ಮಿಂಚಿ ಮಿನುಗಹತ್ತಿತು. ಭಾವಪರವಶರಾದ ಶ್ರೀವ್ಯಾಸತೀರ್ಥರು ಗುರುಗಳಿಗೆ ನಮಿಸಿ ಕರಜೋಡಿಸಿನಿಂತರು. ಆಗವರ ಮುಖಾರವಿಂದದಿಂದ ಗುರುಮಹಿಮಾನ್ವಿ ನಿರೂಪಣಪರವಾದ ಕೃತಿಯೊಂದು ಹೊರಹೊಮ್ಮಿತು !

ರಾಗ :-ಪಂತುವಾರಳಿ. ತಾಳ,-ಆದಿ.

ಮಹಿಮೆಸಾಲದೇ ಇಷ್ಟೇ ಮಹಿಮೆ ಸಾಲದೇ ॥ ಪ ॥
ಅತಿಶಯನನ ಒಲುಮೆಯಿಂದ
ಮಹಿಯೊಳೆಮ್ಮ ಶ್ರೀಪಾದರಾಜರ ॥ ಅ । ಪ ॥
ಮುತ್ತಿನಕವಚ ಮೇಲ್ಕುಲಾವಿ ರತ್ನಕೆತ್ತಿದ ಕರ್ಣಕುಂಡಲ।
ಕಸ್ತೂರಿತಿಲಕ ಶ್ರೀಗಂಧಲೇಪನ ವಿಸ್ತಾರದಿಂದ ಮೆರೆದುಬರುವ ॥ ೧ ॥
ವಿಪ್ರಹತ್ಯಾದೋಷಬರಲು ಕ್ಷಿಪ್ರ ಶಂಖೋದಕದಿ ಕಳೆಯೆ ।
ಅಪ್ರಬುದ್ಧರು ದೂಷಿಸೆ ಗೇರೆಣ್ಣೆ ಕಪ್ಪುವಸನ ಶುಭ್ರಮಾಡಿದ ॥ ೨ ॥
ಹರಿಗೆ ಸಮರ್ಪಿಸಿದ ನಾನಾ ಪರಿಯಶಾಕಗಳನು ಭುಂಜಿಸೆ ।
ನರರು ನಗಲು ಶ್ರೀಕೃಷ್ಣನ ಕರುಣದಿಂದ ಹಸಿಯತೋರಿದ ॥ ೩ ॥

ಶ್ರೀಲಕ್ಷ್ಮೀನಾರಾಯಣಯೋಗೀಂದ್ರರ ಮಹಿಮಾನಿರೂಪಣಪರವಾದ ಮನೋಹರವಾದ ಆ ಕೃತಿಯನ್ನಾಲಿಸಿ ಸಭೆಯ ಜನರೆಲ್ಲ ರೋಮಾಂಚಿತರಾಗಿ "ಜಯ ಜಯ ಶ್ರೀಲಕ್ಷ್ಮೀನಾರಾಯಣ ಗುರುಸಾರ್ವಭೌಮ ! ಜಯಜಯ ಶ್ರೀವ್ಯಾಸರಾಜ ಯತಿ ಸಾರ್ವಭೌಮ" ಎಂದು ಹರ್ಷಧ್ವನಿಮಾಡಿದರು. ಶ್ರೀಲಕ್ಷ್ಮೀನಾರಾಯಣ ಯೋಗಿಗಳು ವಾತ್ಸಲ್ಯಾನಂದಗಳಿಂದ ಪ್ರಿಯಶಿಷ್ಯರನ್ನಾಲಿಂಗಿಸಿ ಕರಪಿಡಿದು ಅವರನ್ನು ಭದ್ರಾಸನದಲ್ಲಿ ಕೂಡಿಸಿ ತಾವೂ ಆಸನಾಸೀನರಾದರು.

ಅನಂತರ ಸಭೆಯು ಪ್ರಾರಂಭವಾಯಿತು. ಸಾಳುವ ನರಸಿಂಹಪ್ರಭುವು ಗುರುಗಳು ತನಗೆ ಮಾಡಿದ ಮಹೋಪಕಾರವನ್ನು ಬಣ್ಣಿಸಿ ಮಾತನಾಡಿದಮೇಲೆ ಅನೇಕ ಪಂಡಿತರು ಗುರುಗಳ ಭಕ್ತಿವೈರಾಗ್ಯ-ಮಹಿಮಾತಿಶಯಗಳನ್ನು ವರ್ಣಿಸಿ ಸ್ತುತಿಸಿದರು. ಅನಂತರ ಶ್ರೀವ್ಯಾಸರಾಜರು ಗುರುಗಳು ತಮ್ಮಲ್ಲಿ ಕನ್ನಡಸಾಮ್ರಾಜ್ಯದಲ್ಲಿ ಚಕ್ರವರ್ತಿಯಲ್ಲಿ ಸಕಲಸಜ್ಜನರಲ್ಲಿ ಮಾಡಿದ, ಮಾಡುತ್ತಿರುವ ಅನುಗ್ರಹ, ಅವರ ಮಹಿಮಾತಿಶಯಗಳನ್ನು ವಿದ್ವತ್ಪೂರ್ಣವಾಗಿ ನಿರೂಪಿಸಿ ಅಂದು ಜರುಗಿದ ರತ್ನಾಭಿಷೇಕದ ಮಹತ್ವ, ಅದರಿಂದ ಸಾಮ್ರಾಜ್ಯದ-ಸಾಮ್ರಾಟನ ಕೀರ್ತಿಬೆಳಗಲಿರುವುದೇ ಮುಂತಾದ ವಿಚಾರಗಳನ್ನು ವಿದ್ವತ್ಪೂರ್ಣವಾಗಿ ಹೇಳಿ ಗುರುಗಳಿಗೆ ನಮಸ್ಕರಿಸಿ ಕುಳಿತರು.

ತರುವಾಯ ಶ್ರೀಲಕ್ಷ್ಮೀನಾರಾಯಣಮುನೀಂದ್ರರು ಸಕಲಶಾಸ್ತ್ರಾರ್ಥಸಾರಭೂತವಾದ, ವಿದ್ವತ್ಪೂರ್ಣವಾದ ಅನುಗ್ರಹೋಪದೇಶಭಾಷಣಮಾಡಿ ಸರ್ವರನ್ನೂ ಆಶೀರ್ವದಿಸಿ ಪರಮಾನಂದಗೊಳಿಸಿದರು. ತದನಂತರ ನರಸಿಂಹಭೂಪಾಲನ ಕೋರಿಕೆಯಂತೆ ವಿದ್ವಾಂಸರು, ವಿದ್ಯಾರ್ಥಿಗಳು, ಕವಿಗಳು, ಸಾಹಿತಿಗಳು, ಸಂಗೀತಗಾರರು, ಕಲೆಗಾರರು, ಹರಿದಾಸರುಗಳಿಗೆ ಉದಾರವಾಗಿ ಸಂಭಾವನೆ ನೀಡಿ ಫಲಮಂತ್ರಾಕ್ಷತೆಯನ್ನು ಕರುಣಿಸಿದರು. ಅನಂತರ ವಂದನಾರ್ಪಣೆಯೊಡನೆ ರತ್ನಾಭಿಷೇಕಾಂಗ ಕಾರ್ಯಕಲಾಪಗಳು ಮುಕ್ತಾಯವಾದವು.

## ೩೫. ತಿರುಪತಿ ಶ್ರೀನಿವಾಸನ ಸೇವೆ

ಮರುದಿನ ಸಂಜೆ ಗುರುಶಿಷ್ಯರು ಏಕಾಂತವಾಗಿ ಮಾತನಾಡುತ್ತಿರುವಾಗ ಮಠದ ಅಧಿಕಾರಿಗಳು ನರಸಿಂಹಭೂಪಾಲನನ್ನು ಗುರುಸನ್ನಿಧಿಗೆ ಕರೆತಂದರು. ಶ್ರೀಯವರಿಗೆ ನಮಸ್ಕರಿಸಿದ ಸಾಮ್ರಾಟನು ಅಪ್ಪಣೆಪಡೆದು ತನಗಾಗಿ ಹಾಕಿದ ಚಿತ್ರಾಸನದಲ್ಲಿ ಕುಳಿತ. ಆಗ ನಸುನಗುತ್ತಾ ಶ್ರೀವ್ಯಾಸರಾಜರು-"ಕರ್ನಾಟಕ ಚಕ್ರವರ್ತಿಗೆ ಮಂಗಳ ವಾಗಲಿ! ರಾಜನ್! ನಾವು ಸಂಚಾರದಲ್ಲಿದ್ದಾಗ ಇಲ್ಲಿ ನಡೆದ ಸಕಲ ವಿಚಾರಗಳನ್ನು ಗುರುಪಾದರು ತಿಳಿಸಿದರು, ಮಹದಾನಂದವಾಯಿತು. ನಮ್ಮ ಕನಸು ನನಸಾಯಿತು ! ಇದು ಸಾಮ್ರಾಜ್ಯದ ಭಾಗ್ಯೋದಯ. ಸಂತೋಷ" ಎಂದರು.

ಸಾಳವ ನರಸಿಂಹನು "ಗುರುದೇವ ! ಇವೆಲ್ಲವೂ ತಮ್ಮ ಉಪದೇಶದಂತೆ ನಡೆದುದರ ಫಲ! ಉಭಯ ಶ್ರೀಪಾದಂಗಳವರ ಅನುಗ್ರಹ ಆಶೀರ್ವಾದ ಬಲ ದಿಂದಲೇ ನನಗೆ ಇಂಥ ಭಾಗ್ಯದೊರಕಿದೆಯೆಂದು ನಾನು ನಂಬಿದ್ದೇನೆ, ಉಭಯಗುರು ಗಳ ಮಾರ್ಗದರ್ಶನ-ಉಪದೇಶ-ಅನುಗ್ರಹಗಳೇ ನನಗೆ ಮುಂದೆಯೂ ದಾರಿದೀಪ. ತಮ್ಮ ಅನುಗ್ರಹ ಏಕರೀತಿಯಾಗಿರಬೇಕು" ಎಂದು ಪ್ರಾರ್ಥಿಸಿ, ಅನಂತರ ಮತ್ತೆ ವಿಜ್ಞಾಪಿಸಿದ.

"ಹಿರಿಯ ಗುರುಗಳ ಅನುಗ್ರಹದಿಂದ ಬಂದಿದ್ದ ವಿಪತ್ತಿನಿಂದ ಪಾರಾಗಿ ಬದುಕಿದ್ದೇನೆ. ಇದರಿಂದ ನನ್ನ ಒಂದು ಸಮಸ್ಯೆ ಬಗೆಹರಿದಂತಾಯಿತು. ಆದರೆ ನನ್ನನ್ನು ಕಾಡುತ್ತಿರುವ ಮತ್ತೊಂದು ಸಮಸ್ಯೆಯು ಪರಿಹಾರವಾಗದ ವಿನಃ ನನ್ನ ಮನಸ್ಸಿಗೆ ಸಮಾಧಾನವಿಲ್ಲ. ಸಾಮ್ರಾಜ್ಯದ ಅಭ್ಯುದಯವೂ ಆಗದು.

ಹಿರಿಯ ಗುರುಗಳು "ರಾಜನ್, ನಿನ್ನನ್ನು ಬಾಧಿಸುತ್ತಿರುವ ಚಿಂತೆಯೇನು ?" ಎಂದು ಪ್ರಶ್ನಿಸಿದರು.

ನರಸಿಂಹ : ಗುರುದೇವ ತಿರುಪತಿ ಶ್ರೀನಿವಾಸದೇವರ ಪೂಜಾರಾಧನೆಯು ನಿಂತುಹೋಗಿರುವ ವಿಚಾರ ಸನ್ನಿಧಿಗೆ ವೇದ್ಯವೇ ಆಗಿದೆ. ನನ್ನ ನಿಮಿತ್ತವಾಗಿ ದೇವರಸೇವೆ ನಿಲ್ಲುವಂತಾಯಿತು. ಆ ಚಿಂತೆ ಹಗಲಿರುಳೂ ನನ್ನನ್ನು ಬಾಧಿಸುತ್ತಿದೆ. ಅರ್ಚಕರ ಮರಣಾನಂತರ ಯೋಗ್ಯರಾದ ಒಬ್ಬಿಬ್ಬರನ್ನು ಪೂಜೆಗೆ ನೇಮಿಸಿದ್ದೆ. ಆದರವರು"ಸ್ವಾಮಿಯನ್ನು ಪೂಜಿಸುವ ಧೈರ್ಯ ನಮಗಿಲ್ಲ"ವೆಂದು ಹೇಳಿಬಿಟ್ಟರು. ಮುಂದಿನ ದಾರಿಗಾಣದೆ ಅಲ್ಲಿನ ಮುಖ್ಯಸ್ಥರು ಗರ್ಭಾಲಯದ್ವಾರವನ್ನು ಮುಚ್ಚಿಸಿ ಬೀಗಮುದ್ರೆಮಾಡಿಸಿ, ಮುಂಭಾಗದ ಮಂಟಪದಲ್ಲೇ-ಭೋಗ ಶ್ರೀನಿವಾಸದೇವರಿಗೆ (ಉತ್ಸವಮೂರ್ತಿ) ಪೂಜಾದಿಗಳು ನಡೆಯುವ ವ್ಯವಸ್ಥೆಮಾಡಿ ನನಗೆ ಆ ವಿಚಾರ ವನ್ನು ನಿವೇದಿಸಿದರು. ಈಗ ಕೆಲತಿಂಗಳಗಳಿಂದ ಸ್ವಾಮಿಯ ಪೂಜೆ ನಿಂತುಹೋಗಿದೆ. ದೇವರನ್ನು ಪೂಜಿಸಲು ಯಾರೂ ಧೈರ್ಯಮಾಡಿ ಮುಂದೆ ಬರಲೊಲ್ಲರು. ಈ ಚಿಂತೆಯು ನನ್ನನ್ನು ಪೀಡಿಸುತ್ತಿದೆ. ಜ್ಞಾನನಿಧಿಗಳಾದ ಹಿರಿಯ

ಶ್ರೀಪಾದಂಗಳವರೇ ಶ್ರೀನಿವಾಸನ ದೇವಾಲಯಾಡಳಿತ,ಪೂಜಾಧಿಕಾರವನ್ನು ವಹಿಸಿ ಕೊಂಡು ಶ್ರೀನಿವಾಸನು ಎಂದಿನಂತೆ ಸುಪ್ರಸನ್ನನಾಗಿ ಪೂಜಾಸ್ವೀಕರಿಸಿ ಸರ್ವರನ್ನೂ ಅನುಗ್ರಹಿಸುವಂತೆ ಮಾಡಬೇಕಾಗಿ ಬೇಡುತ್ತೇನೆ.

ಶ್ರೀಲಕ್ಷ್ಮೀ : ಸಾರ್ವಭೌಮ! ದೇವರನ್ನು ಒಲಿಸಿಕೊಂಡು ನೀನು ಹೇಳಿದ ಕಾರ್ಯಮಾಡಲು ಶಕ್ತರಾದ ಮಹನೀಯರೊಬ್ಬರಿದ್ದಾರೆ, ಅವರು ಮನಸ್ಸು ಮಾಡಿದರೆ ಎಲ್ಲವೂ ಮಂಗಳಕರವಾಗಿ ಜರಗುವುದು.

ನರಸಿಂಹ : ಸ್ವಾಮಿ:, ಆ ಮಹನೀಯರಾರು ? ಅಪ್ಪಣೆಮಾಡಿರಿ. ಅವರ ಕಾಲಿಗೆ ಬಿದ್ದು ಬೇಡಿ ಒಪ್ಪಿಸುತ್ತೇನೆ.

ಶ್ರೀಲಕ್ಷ್ಮೀ : ಮಹಾರಾಜ! ಅವರಿಲ್ಲೇ ಇದ್ದಾರೆ !

'ಇಲ್ಲಿರುವರೇ ?' ಎಂದು ಚಕ್ರವರ್ತಿ ವಿಸ್ಮಿತನಾಗಿ ಪ್ರಶ್ನಿಸಲು ಶ್ರೀಲಕ್ಷ್ಮೀ ನಾರಾಯಣಯೋಗಿಗಳು ಮಂದಸ್ಮಿತರಾಗಿ ಶ್ರೀವ್ಯಾಸರಾಜರತ್ತ ದೃಷ್ಟಿಬೀರಿ- "ಭೂಪಾಲ! ಇಕೋ ಈ ರಾಜಗುರುಗಳೇ ಆ ಮಹನೀಯರು ! ಹಿಂದೆ ಭಯಂಕರ ಕೋಪದಿಂದ ತ್ರಿಲೋಕಗಳನ್ನೆ ಭಯಗೊಳಿಸಿದ್ದ ಶ್ರೀನರಹರಿಯನ್ನು ತಮ್ಮ ಭಕ್ತಿ ಮತ್ತು ಸ್ತೋತ್ರಗಳಿಂದ ಶಾಂತಗೊಳಿಸಿ, ಅವನು ಸುಪ್ರಸನ್ನನಾಗಿ ಸರ್ವರನ್ನೂ ರಕ್ಷಿಸುವಂತೆ ಶ್ರೀಪ್ರಹ್ಲಾದರಾಜರು ಮಾಡಿದ್ದರೆಂಬುದು ಪುರಾಣಾದಿಗಳಿಂದ ತಿಳಿ ದಿರುವುದಷ್ಟೇ ? ಆ ಪ್ರಹ್ಲಾದರಾಜರಂತೆ ಶ್ರೀನಿವಾಸನನ್ನು ಒಲಿಸಿಕೊಂಡು ಸುಪ್ರ ಸನ್ನಗೊಳಿಸಿ, ಅವನ ಅನುಗ್ರಹ ಸರ್ವರಿಗೂ ದೊರಕುವಂತೆಮಾಡಲು ನಮ್ಮ ಈ ವ್ಯಾಸರಾಜರು ಸಮರ್ಥರಾಗಿದ್ದಾರೆ, ಇವರನ್ನೇ ಪ್ರಾರ್ಥಿಸು" ಎಂದು ಹೇಳಿದರು.

ಗುರುಗಳ ಮಾತನ್ನಾಲಿಸಿ ನರಸಿಂಹಭೂಪತಿಯು ಹರ್ಷನಿರ್ಭರನಾಗಿ "ಗುರು ದೇವ !ಪೂಜ್ಯ ಹಿರಿಯರುಗಳ ಮಾತು ಕೇಳೋಣವಾಯಿತಷ್ಟೇ ? ಈಗ ನೀವೇ ನನಗೆ ದಿಕ್ಕು. ತಿರುಪತಿದೇವಾಲಯಾಡಳಿತ ಪೂಜಾಧಿಕಾರಗಳನ್ನು ವಹಿಸಿಕೊಂಡು ದೇವರು ಒಲಿಯುವಂತೆ ಮಾಡಿ ಅನುಗ್ರಹಿಸಬೇಕು." ಎಂದು ಶ್ರೀವ್ಯಾಸರಾಜರಿಗೆ ನಮಸ್ಕರಿಸಿ ಪ್ರಾರ್ಥಿಸಿದನು.

ಶ್ರೀವ್ಯಾಸರಾಜರು ಕ್ಷಣಕಾಲ ಮೌನವಾಗಿದ್ದು ಅನಂತರ "ಹೂಂ, ಶ್ರೀಹರಿ ಚಿತ್ತ, ಗುರುಗಳ ಆಜ್ಞೆ ! ರಾಜನ್. ಶ್ರೀಹರಿಯು ಒಲಿದರೆ ಯಾವುದೂ ಅಸಾಧ್ಯ ವಲ್ಲ! ಆಗಲಿ, ನಿನ್ನ ಕೋರಿಕೆಯಂತೆ ಶ್ರೀವೆಂಕಟೇಶ್ವರನನ್ನ ಒಲಿಸಿಕೊಂಡು ಅವನು ಸುಮುಖನಾಗಿ ಸರ್ವರನ್ನೂ ಪೊರೆಯುವಂತೆ ಮಾಡಲು ಪ್ರಯತ್ನಿಸುತ್ತೇವೆ. ಫಲ ಆ ದೇವನಿಗೇ ಸೇರಿದ್ದು, ಆದರೆ ರಾಜನ್. ನಮ್ಮ ಒಂದು ಕರಾರಿಗೆ ನೀನು ಸಮ್ಮತಿ ಸಿದಲ್ಲಿ ನಾವೀ ಕಾರ್ಯವನ್ನು ಕೈಗೊಳ್ಳುತ್ತೇವೆ" ಎಂದರು.

ನರಸಿಂಹ : ಮಹಾಸ್ವಾಮಿ. ತಮ್ಮೆಲ್ಲ ನಿಬಂಧನೆಯನ್ನೂ ಒಪ್ಪಿದ್ದೇನೆ. ಅದೇನು ಅಪ್ಪಣೆಯಾಗಲಿ !

ವ್ಯಾಸರಾಜರು: (ದರಹಾಸಬೀರಿ) ಚಕ್ರೇಶ, ಈ ಹೊಣೆಗಾರಿಕೆ ತಾತ್ಕಾಲಿಕವಾಗಿರಬೇಕು. ಮುಂದೆ ದೇವರ ಪೂಜಾಧಿಕಾರವು ಶ್ರೀತಾತಾಚಾರ್ಯರ ವಂಶೀಕರಿಗೆ ಕೊಡಲು ನೀವು ಒಪ್ಪಬೇಕು. ನಾವು ತಿರುಪತಿಗೆ ಮೂರುನಾಲ್ಕುಜನ ಶಿಷ್ಯರೊಡನೆ ಹೋಗಿ ಅಲ್ಲಿ ಒಂದು ಮಂಡಲ ಏಕಾಂತವಾಗಿ ಪೂಜಾರಾಧನೆ ನೆರವೇರಿಸುತ್ತೇವೆ. ಆಗ ಯಾರಿಗೂ ಒಳಗೆ ಪ್ರವೇಶವಿರತಕ್ಕದ್ದಲ್ಲ. ಭಗವಂತನು ನಮ್ಮ ಕೈಂಕರ್ಯವನ್ನು ಸ್ವೀಕರಿಸಿ ಸುಪ್ರಸನ್ನವಾಗುವ ಶುಭಲಕ್ಷಣ ಕಂಡಾಗ ನಾವು ಹೇಳಿಕಳಿಸುತ್ತೇವೆ. ಆಗ ಪೂಜ್ಯಗುರುಗಳು ಮತ್ತು ನೀವೆಲ್ಲರೂ ಬಂದು ಶ್ರೀನಿವಾಸನ ದರ್ಶನ, ಅನುಗ್ರಹಗಳಿಗೆ ಪಾತ್ರರಾಗಬೇಕು. ಇದೇ ನಮ್ಮ ಕರಾರು !

ನರಸಿಂಹಭೂಪತಿಯು ಆನಂದಪರವಶನಾಗಿ "ಸ್ವಾಮಿ,ನನ್ನಲ್ಲಿ ತಮ್ಮ ಕಾರುಣ್ಯ ಅಪಾರವಾಯಿತು. ತಮ್ಮ ಚಿತ್ತದಂತಾಗಲಿ" ಎಂದು ವಿಜ್ಞಾಪಿಸಿದನು. ಒಂದೆರಡು ದಿನಗಳಲ್ಲಿಯೇ ಶ್ರೀವ್ಯಾಸರಾಜರು ತಿರುಪತಿಗೆ ಹೊರಡುವದೆಂದು ನಿಶ್ಚಯಿಸಲಾಯಿತು. ನರಸಿಂಹಭೂಪನು ತಿರುಪತಿಯ ಮುಖ್ಯಸ್ಥರಿಗೆ "ರಾಜಗುರು ಶ್ರೀವ್ಯಾಸರಾಜರು ತಿರುಪತಿಯ ದೇವಾಲಯಾಧಿಪತ್ಯ, ಪೂಜಾಧಿಕಾರಿಗಳನ್ನು ವಹಿಸಿಕೊಳ್ಳಲು ದಯಮಾಡಿಸುವರು. ಅವರ ಆಜ್ಞೆಯಂತೆ ಸರ್ವರೂ ವರ್ತಿಸತಕ್ಕದ್ದು" ಎಂದು ನಿರೂಪಬರೆಯಿಸಿ ಕಳುಹಿಸಿದನು.

○ ○ ○ ○ ○ ○

ಶ್ರೀವ್ಯಾಸರಾಜರು ತಮ್ಮ ಪೂರ್ವಾಶ್ರಮದ ಸಾತ್ವಿಕ ಬಂಧುಗಳು, ಶ್ರೇಷ್ಠ ಪಂಡಿತರೂ, ಸದಾಚಾರಸಂಪನ್ನರೂ ಆದ ನಾಲ್ಕು ಜನ ಆತ್ಮೀಯ ಶಿಷ್ಯರೊಡನೆ ಒಂದು ಶುಭಮುಹೂರ್ತದಲ್ಲಿ ತಿರುಪತಿಗೆ ಹೊರಟರು, ಬೆಟ್ಟವು ಕಣ್ಣಿಗೆ ಬಿದ್ದೊಡನೆ ಶ್ರೀಗಳವರು ಸಾಷ್ಟಾಂಗ ನಮಸ್ಕಾರಮಾಡಿ ವಿಷ್ಣುಸಹಸ್ರನಾಮ, ಸೂತ್ರಭಾಷ್ಯ, ಗೀತಾಭಾಷ್ಯ, ಅನುವ್ಯಾಖ್ಯಾನಗಳನ್ನು ಪಾರಾಯಣಮಾಡುತ್ತಾ ಪರ್ವತವನ್ನು ಹತ್ತ ತೊಡಗಿದರು.* ಭಗವದ್ಧ್ಯಾನಮಾಡುತ್ತ ಗುರುಗಳು ಬೆಟ್ಟವನ್ನು ಹತ್ತಿ ಗುಡಿಯ ಸಮೀಪಕ್ಕೆ ದಯಮಾಡಿಸಿದರು. ಆಗ ಅಲ್ಲಿನ ಮುಖ್ಯಸ್ಥರು, ಧರ್ಮಾಭಿಮಾನಿಗಳು, ಪೂರ್ಣಕುಂಭ, ವಾದ್ಯ, ವೇದಘೋಷಗಳೊಡನೆ ಗುರುಗಳನ್ನು ಸ್ವಾಗತಿಸಿ ದೇವಾಲಯದ ಸಮೀಪದಲ್ಲೇ ಏರ್ಪಡಿಸಿದ್ದ ಮಂದಿರದಲ್ಲಿ ಬಿಡಾರಮಾಡಿಸಿ ಫಲಮಂತ್ರಾಕ್ಷತೆಪಡೆದು ತೆರಳಿದರು.

---

1 ಶ್ರೀವ್ಯಾಸರಾಜರು ಪರ್ವತಾರೋಹಣಮಾಡಿದಾಗ ಅವರಿಗೆ ಸಮಗ್ರಪರ್ವತವು ಶೇಷದೇವರ ಶರೀರವಾಗಿಯೂ, ಶಾಲಿಗ್ರಾಮವಾಗಿಯೂ ಕಂಡಿತೆಂದೂ ಗುರುಗಳು ಮೊಳಕಾಲುಮಂಡೆಗಳಿಂದಲೇ ಪರ್ವತವನ್ನು ಹತ್ತಿದರೆಂದೂ ಜ್ಞಾನಿಗಳು ಹೇಳುವರು.

ಶ್ರೀಗಳವರು ಶಿಷ್ಯಸಹಿತರಾಗಿ ಸ್ವಾಮಿಪುಷ್ಕರಣಿಯಲ್ಲಿ ಸ್ನಾನಮಾಡಿ ದೇವಾಲಯ ಸಮೀಪಕ್ಕೆ ಬಂದು ಮಹಾದ್ವಾರದ ಮುಂದೆಯೇ ದೇವರಿಗೆ ನಮಸ್ಕರಿಸಿ ಬಿಡಾರಕ್ಕೆ ಆಗಮಿಸಿ, ಸ್ನಾನ, ಆಹ್ನಿಕ ಜಪತಪಾದಿಗಳನ್ನೂ ದೇವರ ಪೂಜೆಯನ್ನೂ ಮುಗಿಸಿ ಭಿಕ್ಷಾಸ್ವೀಕರಿಸಿ ವಿಶ್ರಾಂತಿ ಪಡೆದರು. ಅಂದು ರಾತ್ರಿ ಅಲ್ಲಿನ ಮುಖ್ಯಸ್ಥರನ್ನು ಕರೆಯಿಸಿಕೊಂಡು ತಾವು ನಲವತ್ತೆಂಟುದಿನ ಶ್ರೀನಿವಾಸನನ್ನು ಏಕಾಂತವಾಗಿ ಆರಾಧಿಸಲಿಚ್ಛಿಸುವುದಾಗಿಯೂ, ಆ ಕಾಲದಲ್ಲಿ ದೇವಾಲಯದ ಗರ್ಭಾಲಯಕ್ಕೆ ಯಾರೂ ಬರದಂತೆ ವ್ಯವಸ್ಥೆಮಾಡಬೇಕೆಂದೂ ತಿಳಿಸಿದರು. ಅವರು ಶ್ರೀಗಳವರ ಆಜ್ಞೆಯಂತೆ ವ್ಯವಸ್ಥೆಮಾಡುವುದಾಗಿ ವಿಜ್ಞಾಪಿಸಿ ಶ್ರೀಯವರ ಪೂಜಾರಾಧನೆ, ಭಿಕ್ಷಾದಿಗಳಿಗೂ ಸರ್ವವ್ಯವಸ್ಥೆಗಳನ್ನು ಮಾಡಿ ಅಪ್ಪಣೆಪಡೆದು ತೆರಳಿದರು.

ಮರುದಿನ ಬೆಳಗಿನಝಾವ ಶ್ರೀಗಳವರು ಸ್ವಾಮಿಪುಷ್ಕರಣಿಯಲ್ಲಿ ಶಿಷ್ಯರೊಂದಿಗೆ ಸ್ನಾನಮಾಡಿ ಆಹ್ನಿಕಾದಿಗಳನ್ನು ಪೂರೈಸಿ ಪೂಜಾದ್ರವ್ಯಗಳೊಡನೆ ಸಿದ್ಧರಾಗಿದ್ದ ಶಿಷ್ಯರೊಡನೆ ದೇವಾಲಯ ಪ್ರವೇಶಮಾಡಿದರು. ಶ್ರೀಯವರ ಅಪ್ಪಣೆಯಂತೆ ಅಲ್ಲಿನ ಮುಖ್ಯಸ್ಥರು ಗರ್ಭಾಲಯದ ಬೀಗಮುದ್ರೆಯನ್ನೊಡೆಸಿ ಗರ್ಭಾಲಯದ ಬೀಗದಕೈಯನ್ನು ಗುರುಗಳಿಗರ್ಪಿಸಿ ತೆರಳಿದರು. ಪೂಜಾದ್ರವ್ಯವನ್ನು ಕರದಲ್ಲಿಹಿಡಿದು ಶ್ರೀಗಳವರು, ತಾವು ಮತ್ತೆ ಹೊರಗೆ ಬರುವವರೆಗೆ ಗರ್ಭಾಲಯದ ಹೊರಗೇ ಕಾದಿರಲು ಶಿಷ್ಯರಿಗೆ ಹೇಳಿ ತಾವೊಬ್ಬರೇ ಪರಮಾತ್ಮನನ್ನು ಸ್ತುತಿಸುತ್ತಾ ಬಾಗಿಲು ತೆರೆದು ಒಳಗೆ ಪ್ರವೇಶಿಸಿ ಮತ್ತೆ ಬಾಗಿಲನ್ನು ಭದ್ರಪಡಿಸಿ ದೇವರಸನ್ನಿಧಿಗೆ ಬಂದರು. ಒಳಗಿನ ಗರ್ಭಾಂಕಣವನ್ನೂ ದಾಟಿ ಶ್ರೀವೆಂಕಟೇಶ್ವರನಿಗೆ ಸಾಷ್ಟಾಂಗ ಪ್ರಣಾಮಮಾಡಿ ದೇವದೇವನನ್ನು ಭಕ್ತಿಯಿಂದ ಈಕ್ಷಿಸಿದರು. ಆಗ ಗುರುಗಳ **ಮುಖದಿಂದ ಭಗವಂತನ ಸ್ತುತಿಯೊಂದು ಹೊರಹೊಮ್ಮಿತು !**

ರಾಗ : ಪೂರ್ವಿ ತಾಳ : ಆದಿ

ನಿನ್ನನೋಡಿ ಧನ್ಯನಾದೆನೋ । ಹೇ ಶ್ರೀನಿವಾಸ ॥ ಪ ॥
ನಿನ್ನನೋಡಿ ಧನ್ಯನಾದೆ । ನೆನ್ನಮನದಿ ನಿಂತು ಸುಪ್ರ ।
ಸನ್ನ ದಯಮಾಡಿ ನೀನು । ಮುನ್ನಿನಂತೆ ಸಲಹಬೇಕು ॥ ಅ ॥ ಪ ॥
ಲಕ್ಷ್ಮೀರಮಣ ಪಕ್ಷಿವಹನ । ಕಕ್ಷ ನಿನ್ನದಲ್ಲೆ ಪಾಂಡು ।
ಪಕ್ಷ ದೈತ್ಯಶಿಕ್ಷ । ರಕ್ಷಿಸೆನ್ನ ಕಮಲಾಕ್ಷ ॥ ೧ ॥
ದೇಶದೇಶವನ್ನು ತಿರುಗಿ । ಆಶೆಬದ್ಧನಾದೆ ಸ್ವಾಮಿ ।
ಪಾಶ ನಿನ್ನದಲ್ಲ ಜಗ । ದೀಶ ಕಾಯೊ ವಾಸುದೇವ ॥ ೨ ॥
ಕಂತುಜನಕ ಕೇಳೊಯೆನ್ನ । ಅಂತರದ ಸೇವೆಯನ್ನು ।[1]

1. ಪಾಠಾಂತರ:- ಅಂತರಂಗಸೇವೆಯನ್ನು (ಏಕಾಂತಸೇವೆಯನ್ನು)

ಅಂತರವಿಲ್ಲದೆ ಸಲಹಬೇಕು । ಹೊಂತಕಾರಿ ಮುದ್ದುಕೃಷ್ಣ[2] ॥ ೩ ॥

ಅನಂತರ ಶ್ರೀವ್ಯಾಸರಾಜರು ಶ್ರೀನಿವಾಸನ ಮುಂದೆ ಕರಜೋಡಿಸಿ ನಿಂತು ಪ್ರಾರ್ಥಿಸಹತ್ತಿದರು—

"ದೇವದೇವ! ಜಗಜ್ಜನ್ಮಾದಿ ಕಾರಣ, ರಮಾಬ್ರಹ್ಮರುದ್ರೇಂದ್ರಾದ್ಯಮರವೃಂದ ವಂದ್ಯ ಪಾದಾಬ್ಜ ! ಸರ್ವೋತ್ತಮ, ಅನಂತಕಲ್ಯಾಣಗುಣಮಂದಿರ, ದೋಷದೂರ ಆನಂದಮಯ, ಮೋಕ್ಷಪ್ರದಾತ, ಭಕ್ತವತ್ಸಲ, ಸ್ವಾಮಿ! ಏಕಿಂತು ಉದಾಸರೂಪ ತಾಳಿರುವೆ? ದೇವ, ನಿನ್ನೀ ಉದಾಸರೂಪವನ್ನು ಕಂಡು ಹೆದರುವೆನೆಂದು ತಿಳಿದಿರುವೆಯಾ? ಹಿಂದೆ ಖೂಳಹಿರಣ್ಯಕಶ್ಯಪನನ್ನು ಸಂಹರಿಸಿದಾಗ ನಿನ್ನ ಕೋಪ-ಭಯಂಕರ ರೂಪವನ್ನು ಕಂಡು ಸರ್ವರೂ ಭಯಾರ್ತರಾದಾಗ, ನಿನ್ನ ಭಕ್ತನಾದ ಪ್ರಹ್ಲಾದನು ಭಯಗೊಂಡನೇನು ? ಪ್ರಹ್ಲಾದನ ಸ್ತುತಿಗೆ ನೀನು ಪ್ರಸನ್ನನಾಗಿ ಕೋಪತ್ಯಜಿಸಿ ಪೊರೆದೆಯಲ್ಲವೆ ? ಅದನ್ನು ಮರೆತುಬಿಟ್ಟೆಯಾ ಸ್ವಾಮಿ ? ನಿನ್ನ ಭಕ್ತನಾದ ನಾನೂ ಪ್ರಹ್ಲಾದನಂತೆ ನಿನ್ನೀ ಉದಾಸರೂಪವನ್ನುನೋಡಿ ಭಯಪಟ್ಟಿಲ್ಲ. ನನ್ನ ಪ್ರಾರ್ಥನೆಯನ್ನು ಕೇಳಿ ಪ್ರಸನ್ನನಾಗು. ಶ್ರೀವೆಂಕಟೇಶ, ನಿನ್ನೀ ಅಭಿನಯವನ್ನು ಸಾಕುಮಾಡು ಅನಂತಕಲ್ಯಾಣ ಗುಣಪೂರ್ಣನೂ, ದೋಷದೂರನೂ, ಅಪ್ರಾಕೃತಸ್ವಾಮಿಯೂ ಆದ ನಿನಗೆ ಉದಾಸರೂಪವೆಂದರೇನು ? ನಿನ್ನ ಪೂಜಾರಾಧನೆಯು ನಿಂತಿತೆಂದೇ? ರಮಾಬ್ರಹ್ಮಾದಿಗಳಿಂದ ನಿರಂತರ ಪೂಜೆಗೊಳ್ಳುತ್ತಿರುವ ನಿನ್ನ ಅರ್ಚನೆಗೆ ಅಪೋಹ ಉಂಟೆ?

---

2 ತಿರುಪತಿಯಲ್ಲಿ ಪೂಜೆನಿಂತುಹೋಗಿ ಉದಾಸರೂಪತಾಳಿ ನಿಂತಿದ್ದ ಶ್ರೀನಿವಾಸನನ್ನು ಒಲಿಸಿಕೊಳ್ಳಲು ತಿರುಪತಿಗೆ ಬಂದಾಗ ಶ್ರೀವ್ಯಾಸರಾಜರು ಮೊಟ್ಟಮೊದಲು ದೇವರದರ್ಶನ ಮಾಡಿದಾಗ ರಚಿಸಿದ ಪದವಿದೆಂದು ಹೇಳಬಹುದು.

ಈ ಪದದಲ್ಲಿರುವ "ನಿನ್ನನೋಡಿಧನ್ಯನಾದೆ, ಎನ್ನ ಮನದಿನಿಂತು, ಸುಪ್ರಸನ್ನ ವದನನಾಗಿ ನೀನು ಮುನ್ನಿನಂತೆ ಸಲಹಬೇಕು ಕಂತುಜನಕ ಕೇಳೋ, ಎನ್ನ ಅಂತರದ (ಅಂತರಂಗದ) ಸೇವೆಯನ್ನು, ಅಂತರವಿಲ್ಲದೆ, ಸಲಹಬೇಕು, ಇತ್ಯಾದಿವಾಕ್ಯಗಳನ್ನು ವಿವೇಚಿಸಿದಾಗ ಶ್ರೀವ್ಯಾಸರಾಜರು ಶ್ರೀನಿವಾಸನನ್ನು ಹೀಗೆ ಪ್ರಾರ್ಥಿಸಿದರೆಂದು ಹೇಳಬಹುದು "ದೇವ, ನಿನ್ನನ್ನು ನೋಡಿ ಧನ್ಯನಾದೆ, ನನ್ನ ಮನದಲ್ಲಿ ನಿಂತು-ಅಂದರೆ ನನ್ನ ಹೃದಯಕಮಲದಲ್ಲಿ ಬಿಂಬರೂಪಿಯಾಗಿರುವ ಹೇ ಕಂತುಜನಕ ಶ್ರೀಕೃಷ್ಣಾ! ಅಲ್ಲಿ ನೀನು ಪ್ರಸನ್ನನಾಗಿರುವೆ, ಸ್ವಾಮಿ, ಇಲ್ಲೇಕೆ ಉದಾಸರೂಪಿಯಾಗಿದ್ದೀಯೆ ? ನನ್ನ ಮನದಲ್ಲಿ ನೆಲೆನಿಂತಿರುವಂತೆಯೇ. ಇಲ್ಲಿಯೂ ಸುಪ್ರಸನ್ನನಾಗಿ, ಈಗಿನ ಉದಾಸರೂಪವನ್ನು ತ್ಯಜಿಸಿ ಮೊದಲಿನಂತೆಯೇ (ಮುನ್ನಿನಂತೆ) ಸುಪ್ರಸನ್ನರೂಪದಿಂದ ದರ್ಶನವಿತ್ತು ಕಾಪಾಡು. ಸ್ವಾಮಿ, ಕೇಳು ನಾನು ಮಾಡುತ್ತಿರುವ ಈ ಅಂತರಂಗಸೇವೆಯನ್ನು, ಅಂತರವಿಲ್ಲದೆ, ನನ್ನನ್ನು ದೂರಮಾಡದೆ ಸ್ವೀಕರಿಸಿ ಸಲಹಬೇಕು-"ಎಂದು ಪ್ರಾರ್ಥಿಸಿದ್ದಾರೆಂದು ಭಾಸವಾಗುತ್ತದೆ. ಆದ್ದರಿಂದ ಇದು ದೇವರ ದರ್ಶನವಾದಕೂಡಲೇ ರಚಿಸಿದ ಪದವೆಂದು ಹೇಳಬಹುದು.

—ಗ್ರಂಥಕರ್ತಾ.

ಅಜ್ಞಜನರ ಕಣ್ಣಿಗೆ ಶಿಲಾರೂಪವಾಗಿ ಕಾಣುವ ನೀನು ಕಲಿಯುಗದ ಜನರನ್ನು ಪೊರೆಯಲೆಂದು ವೈಕುಂಠದಿಂದ ಧರೆಗಿಳಿದು ಬಂದುನಿಂತಿರುವ ಸಚ್ಚಿದಾನಂದ ಸ್ವರೂಪನೆಂದು ನಾನರಿತಿರುವೆನು. ದೇವ ! ನೀನು ಪೂಜೆ ಸ್ವೀಕರಿಸದೇ ನಿಲ್ಲುವಂತಾದುದಕ್ಕೆ ಕಾರಣವೇನು ? ಬಹುಶಃ ಈ ನಿನ್ನ ಪಾದಕಿಂಕರನಿಂದ ಸೇವೆ ಸ್ವೀಕರಿಸುವ ಇಚ್ಛೆ ಮತ್ತು ಸೇವೆಸ್ವೀಕರಿಸಿ ಮೊದಲಿಗಿಂತ ಹೆಚ್ಚು ಸಾನ್ನಿಧ್ಯ, ತೇಜಸ್ಸುಗಳಿಂದ ಕಂಗೊಳಿಸಿ ವಿಶೇಷಾಕಾರವಾಗಿ ಜಗತ್ಕಲ್ಯಾಣಮಾಡಿ, ಆ ಕೀರ್ತಿಯನ್ನು ಈ ದಾಸನಿಗಿತ್ತು ಪೊರೆಯಬೇಕೆಂಬ ವಾತ್ಸಲ್ಯದಿಂದಲೇ ಉದಾಸರೂಪ ತಾಳಿದಂತೆ ನಟಿಸುತ್ತಿರುವೆಯಾ ? ದೇವ, ಭಕ್ತರ ಗುಂಪಿನಲ್ಲಿ ನಾನು ನಿನಗೆ ಅತಿ ಪ್ರಿಯನೆಂದು ಒಪ್ಪಿಕೊಂಡಿರುವೆ. ಅದು ಸತ್ಯವಾಗಿದ್ದಲ್ಲಿ ನನ್ನ ಸೇವೆ ಸ್ವೀಕರಿಸಿ, ಉದಾಸರೂಪವನ್ನು ತ್ಯಜಿಸಿ, ಸುಪ್ರಸನ್ನನಾಗಿ ಹಿಂದಿನಂತೆಯೇ ಪ್ರಶಾಂತ ಸುಂದರರೂಪದಿಂದ ಸರ್ವರನ್ನೂ ಕಾಪಾಡು! ಭಕ್ತವತ್ಸಲನೆಂಬ ನಿನ್ನ ಬಿರುದನ್ನು ಸಾರ್ಥಕಪಡಿಸಿಕೋ, ಪ್ರಭು, ನಿನಗೆ ನಮೋನಮಃ"ಎಂದು ಪರಿಪರಿಯಿಂದ ಪ್ರಾರ್ಥಿಸಿ ನಮಸ್ಕರಿಸಿದರು.

ಆಗೊಂದು ಅದ್ಭುತ ಘಟನೆ ಜರುಗಿತು.! ಗುರುಗಳ ಪ್ರಾರ್ಥನೆಗೆ ಶ್ರೀನಿವಾಸನು ಒಲಿದನೋ ಎಂಬಂತೆ ಇದ್ದಕ್ಕಿದಂತೆ ಗರ್ಭಾಲಯದಲ್ಲಿ ಮಿಂಚೊಂದು ಮಿನುಗಿದಂತಾಗಿ ಆ ದಿವ್ಯ ಪ್ರಶಾಂತ ಪ್ರಭೆಯಲ್ಲಿ ಶ್ರೀವೆಂಕಟೇಶ್ವರನು ಅಭಯ–ವರದ ಮುದ್ರಾಂಕಿತಕರನಾಗಿ ಮಂದಹಾಸಬೀರುತ್ತಾ ನಿಂತಿರುವ ಭವ್ಯದೃಶ್ಯ ಶ್ರೀಗಳವರ ದೃಷ್ಟಿಗೆ ಗೋಚರಿಸಿತು ! ಗುರುಗಳು ರೋಮಾಂಚಿತರಾದರು. ಅವರ ನೇತ್ರಗಳಿಂದ ಆನಂದಸಲಿಲ ಹರಿಯತೊಡಗಿತು. ಭಕ್ತ್ಯುದ್ರೇಕದಿಂದ ಶ್ರೀ ವ್ಯಾಸತೀರ್ಥರು "ಒಲಿದಯಾ ಪ್ರಭು ! ಆಹಾ, ನೀನೆಂಥ ಕರುಣಾಳು ! ನಿನ್ನ ಭಕ್ತವಾತ್ಸಲ್ಯಕ್ಕೆ ಎಣೆಯಿಲ್ಲ, ದೇವ, ಧನ್ಯನಾದೆ" ಎಂದು ಸ್ತೋತ್ರಮಾಡಿ ಶ್ರೀನಿವಾಸನ ಪಾದಕಮಲಗಳನ್ನು ಶುದ್ಧೋದಕದಿಂದ ತೊಳೆದು ಕ್ಷೀರಾಭಿಷೇಕಮಾಡಿ "ತಂತ್ರಸಾರೋಕ್ತ"ಕ್ರಮದಿಂದ ದೇವರನ್ನು ಗಂಧಾಕ್ಷತೆ, ತುಳಸೀ ಪುಷ್ಪಾದಿಗಳಿಂದ ಅರ್ಚಿಸಿ ಫಲಕ್ಷೀರಗಳನ್ನು ಸಮರ್ಪಿಸಿ, ಮಹಾ ನೀರಾಜನವನ್ನೆತ್ತಿ, ಮಂತ್ರಪುಷ್ಪಗಳನ್ನು ಅರ್ಪಿಸಿ ಭಗವಂತನ ಪಾದಗಳಮೇಲೆ ಶಿರವಿರಿಸಿ ನಮಸ್ಕರಿಸಿ ಪ್ರಾರ್ಥಿಸಿದರು.

ತರುವಾಯ ತೀರ್ಥಪ್ರಸಾಧಗಳೊಡನೆ ಹೊರಬಂದು ಗರ್ಭಾಲಯದ್ವಾರವನ್ನು ಬಂಧಿಸಿ ಬೀಗಹಾಕಿದರು. ವಿಲಕ್ಷಣ ತೇಜಸ್ಸು, ಭಕ್ತಿಭಾವ, ಮಿನುಗುವ ಕಾಂತಿಪೂರ್ಣ ನೇತ್ರಗಳು, ಮಂದಹಾಸದಿಂದ ರಂಜಿತರಾದ ಗುರುಗಳನ್ನು ಕಂಡು ಶಿಷ್ಯರು ಗುರುಗಳಿಗೆ ಭಗವಂತನು ಒಲಿದಿರುವನೆಂದರಿತು ಆನಂದದಿಂದ ಗುರುವರರಿಗೆ ನಮಸ್ಕರಿಸಿ ನಿಂತರು. ಆಗ ವ್ಯಾಸಮುನಿಗಳು ಗದ್ಗದಕಂಠದಿಂದ"ಶ್ರೀ ಶ್ರೀನಿವಾಸ ಸುಪ್ರಸನ್ನನಾದ" ಎಂದಿಷ್ಟೇ ಹೇಳಿ ಶಿಷ್ಯರೊಡನೆ ಮಠಕ್ಕೆ ಬಂದು ಸಂಸ್ಥಾನ ಪೂಜೆಮಾಡಿ ಶ್ರೀನಿವಾಸನ ತೀರ್ಥ ಪ್ರಸಾದಗಳನ್ನು ಸ್ವೀಕರಿಸಿ ಭಿಕ್ಷಾ ಸ್ವೀಕಾರ ಮಾಡಿದರು.

ಮರುದಿನ ಶ್ರೀವ್ಯಾಸತೀರ್ಥರ ಆದೇಶದಂತೆ ಬೆಟ್ಟದ ಪ್ರಮುಖರು ಶ್ರೀನಿವಾಸನ ಪೂಜಾಮಂಡಲೋತ್ಸವಾಂಗವಾಗಿ ಹವನ, ಹೋಮ, ಸಚ್ಛಾಸ್ತ್ರ ಪಾರಾಯಣಾದಿಗಳನ್ನು ವೈಭವದಿಂದ ಜರುಗಿಸಹತ್ತಿದರು. ಒಂದು ಸಪ್ತಾಹಕಾಲ ತಾವೊಬ್ಬರೇ ಏಕಾಂತವಾಗಿ ಶ್ರೀನಿವಾಸ ದೇವರ ಪೂಜಾರಾಧನೆ ಮಾಡುತ್ತಿದ್ದ ಶ್ರೀಗಳವರು ಆನಂತರ ದೇವರ ಪೂಜಾ ಕೈಂಕರ್ಯಕ್ಕೆ ತಮ್ಮ ಪಂಡಿತ ಶಿಷ್ಯರ ಸಹಾಯವನ್ನು ಪಡೆದು ಏಕಾಂತವಾಗಿ ಪೂಜಿಸಹತ್ತಿದರು. ಅದೇ ಕಾಲದಲ್ಲಿ ತಮ್ಮ ಮಹಾಸಂಸ್ಥಾನ ಪೂಜೆಯನ್ನೂ ಶ್ರೀವೆಂಕಟೇಶ್ವರನ ಸನ್ನಿಧಿಯಲ್ಲಿಯೇ ನೆರವೇರಿಸಲಾರಂಭಿಸಿದರು. ಹದಿನೈದು ದಿನಗಳು ಶ್ರೀಯವರು ಭಕ್ತಿಯಿಂದ ಪೂಜಾರಾಧನೆ ನೆರವೇರಿಸುತ್ತಿದ್ದಂತೆಯೇ ವಿಶೇಷ ತೇಜಸ್ಸು, ಸೌಂದರ್ಯ, ಪ್ರಸನ್ನತೆಗಳಿಂದ ಶ್ರೀನಿವಾಸ ರಾರಾಜಿಸಲಾರಂಭಿಸಿದನು. ಇದರಿಂದ ಹರ್ಷಿತರಾದ ವ್ಯಾಸಭಿಕ್ಷುಗಳು ತಮ್ಮ ಈ ಕೈಂಕರ್ಯ, ಭಗವಂತನು ಒಲಿದು ಪ್ರಸನ್ನನಾದುದರ ಜ್ಞಾಪಕಾರ್ಥವಾಗಿ ಮಂಡಲೋತ್ಸವ ಸಮಾರೋಪಣ ಕಾಲದಲ್ಲಿ ಶ್ರೀನಿವಾಸದೇವರಿಗೆ ಸಮರ್ಪಿಸಲು ಶ್ರೀಮಠದ ಖರ್ಚಿನಿಂದಲೇ ನೂರೆಂಟು ಶಾಲಿಗ್ರಾಮಗಳಿಂದ ಶೋಭಿಸುವ ಸುವರ್ಣ ಹಾರವನ್ನು ನಿರ್ಮಾಣ ಮಾಡಿಸಿದರು.

ನಲವತ್ತು ದಿನಗಳ ಕಾಲ, ಪೂಜೆ, ಹವನ-ಹೋಮ-ಪಾರಾಯಣಾದಿಗಳು ನಿರ್ವಿಘ್ನವಾಗಿ ಜರುಗಿದಮೇಲೆ ಶ್ರೀವ್ಯಾಸಮುನಿಗಳು, ಈ ವಿಚಾರವನ್ನು ಗುರುಗಳು ಹಾಗೂ ಸಾರ್ವಭೌಮನಿಗೆ ತಿಳಿಸಿ, ಮಂಡಲೋತ್ಸವದ ದಿನ ಬಂದು ದೇವರ ದರ್ಶನಮಾಡಿ ಅನುಗ್ರಹ ಪಡೆಯಬೇಕೆಂದು ಹೇಳಿಕಳಿಸಿದರು. ಆ ವಿಚಾರ ಕೇಳಿ ಪರಮಾನಂದ ತುಂದಿಲರಾದ ಅವರು ಮಂಡಲೋತ್ಸವಕ್ಕೆ ತಿರುಪತಿಗೆ ಬರಲು ಸಿದ್ಧರಾಗಹತ್ತಿದರು.

ಮಂಡಲೋತ್ಸವದ ಹಿಂದಿನ ದಿನ ಗುರುಗಳು ಸಚಿವ ಸಾಮಂತ-ಪರಿವಾರ ದೊಡನೆ ಬಂದ ನರಸಿಂಹಭೂಪಾಲನನ್ನು ಗೌರವದಿಂದ ಸ್ವಾಗತಿಸಿ ಬಿಡಾರಮಾಡಿಸಿ ಸಕಲ ವಿಚಾರವನ್ನೂ ವ್ಯಾಸತೀರ್ಥರು ತಿಳಿಸಿದರು. ಆನಂದಪರವಶರಾಗಿ ಸರ್ವರೂ ರಾತ್ರಿಯನ್ನು ಕಳೆದರು.

ಮಂಡಲೋತ್ಸವದ ಕೊನೆಯ ದಿನ ಬೆಳಗಿನಝಾವ ಶ್ರೀವ್ಯಾಸತೀರ್ಥರು ಗುರುಗಳೊಡನೆ ಸ್ವಾಮಿಪುಷ್ಕರಣಿಯಲ್ಲಿ ಮಿಂದು ಜಪತಪಾದ್ಯನುಷ್ಠಾನ ಪೂರೈಸಿ,ವಾದ್ಯ ಘೋಷ,ವೇದಪಾರಾಯಣಗಳನ್ನು ಪಂಡಿತರು ನೆರವೇರಿಸುತ್ತಿರಲು ಪುನಗು ಜವ್ವಾಜಿ ಕಸ್ತೂರಿ,ಇನ್ನಿತರ ಪರಿಮಳದ್ರವ್ಯಗಳಿಂದ ಪರಿಮಿಶ್ರಿತವಾದ ಸುಗಂಧ ತೈಲತುಂಬಿದ ಸುವರ್ಣ ಕಳಶಗಳನ್ನು ಶಿರದಲ್ಲಿರಿಸಿ ಭಕ್ತಿಯಿಂದ ಶ್ರೀನಿವಾಸನ ಸನ್ನಿಧಿಗೆ ಬಂದರು, ಕನ್ನಡ ಚಕ್ರವರ್ತಿ-ಪರಿವಾರಸಹಿತನಾಗಿ ಗುರುಗಳನ್ನು ಹಿಂಬಾಲಿಸಿದನು. ಬಹುಕಾಲ ಪೂಜೆ ನಿಂತಿದ್ದು, ಶ್ರೀವ್ಯಾಸತೀರ್ಥರು ಭಗವಂತನನ್ನು ಒಲಿಸಿಕೊಂಡು ಮೊದಲಿನ

ಕಾಂತಿಯಿಂದ ವಿರಾಜಿಸುವ ಶ್ರೀನಿವಾಸನಿಗೆ ಮಂಡಲೋತ್ಸವ ನಡೆಸಿ ಅಂದು ಸರ್ವರಿಗೂ ದೇವರ ದರ್ಶನಮಾಡಿಸುವರೆಂಬ ವಾರ್ತೆ ಹಬ್ಬಿ ಎಲ್ಲ ಕಡೆಯಿಂದ ಸಹಸ್ರಾರು ಜನಭಕ್ತರು ದೇವರಭಜನೆ,ನಾಮಸ್ಮರಣೆಮಾಡುತ್ತಾ ದೇವಾಲಯದಲ್ಲಿ ನೆರೆದಿದ್ದರು. ಗುರುದ್ವಯರು ಮಂತ್ರಪಠನ ಮಾಡುತ್ತಾ ಗರ್ಭಗುಡಿಯನ್ನು ಪ್ರವೇಶಿಸಿದರು. ನರಸಿಂಹಭೂಪಾಲ-ಪರಿವಾರದವರೂ ಹಿಂಬಾಲಿಸಿದರು. ತೆರೆಯನ್ನು ತೆರೆದಕೂಡಲೇ ದಿವ್ಯಪ್ರಕಾಶದಲ್ಲಿ ನಗೆಮೊಗದಿಂದ ಸುಪ್ರಸನ್ನನಾಗಿ ನಿಂತ ಶ್ರೀನಿವಾಸನ ವಿಶ್ವರೂಪ ದರ್ಶನವಾದಕೂಡಲೇ ಸಕಲರೂ ಆನಂದತುಂದಿಲರಾಗಿ"ಜಯ ಜಯ ವೆಂಕಟೇಶ್ವರ" ಎಂದು ಜಯಘೋಷಮಾಡಿದರು. ಅನಂತರ ವ್ಯಾಸರಾಜರು ಮತ್ತು ಶ್ರೀಪಾದ ರಾಜರು ಮಂಡಲಾಭಿಷೇಕಾಂಗ ಪುನಗಾಭಿಷೇಕ ನಿಮಿತ್ತವಾಗಿ ಸಕಲರ ಶ್ರೇಯಸ್ಸಿಗಾಗಿ ಸಂಕಲ್ಪಮಾಡಿ ಅಕ್ಷತೆ ನೀರು ಬಿಟ್ಟರು, ಸುಪ್ರಸನ್ನನಾದ ಶ್ರೀನಿವಾಸನ ದರ್ಶನ ಮಾಡಲೋ ಎಂಬಂತೆ ಅದೇ ಸಮಯಕ್ಕೆ ಪೂರ್ವ ದಿಗಂತದಲ್ಲಿ ಸೂರ್ಯ ಭಗವಾನನು ತನ್ನ ತರುಣಾರುಣ-ಕಿರಣ ಕಾಂತಿಯನ್ನು ಹೊರಚೆಲ್ಲುತ್ತಾ ಉದಯಿಸಿದನು.

ಶ್ರೀಮಠದ ಪಂಡಿತರು ಸಹಾಯ ಮಾಡುತ್ತಿರಲು ಗುರುದ್ವಯರು ಶ್ರೀವೆಂಕಟೇಶ್ವರನಿಗೆ ಭಕ್ತಿಶ್ರದ್ಧಾನ್ವಿತರಾಗಿ ಪುನಗಾಭಿಷೇಕ ಮಾಡಿದರು. ಅದೊಂದು ಪವಿತ್ರ ಮಂಗಳಕರ ದೃಶ್ಯವಾಗಿತ್ತು. ತರುವಾಯ ಸಹಸ್ರಶಂಖ ಕ್ಷೀರಾಭಿಷೇಕ, ಶುದ್ಧೋದಕಾಭಿಷೇಕಗಳಾದ ಮೇಲೆ ದ್ವಾರದ ತೆರೆಯನ್ನು ಎಳೆದರು. ಶ್ರೀವ್ಯಾಸರಾಜರು ಪರಮಾತ್ಮನನ್ನು ವಸ್ತ್ರಾಭರಣ-ಪುಷ್ಪಮಾಲೆಗಳಿಂದ ಅಲಂಕರಿಸಿ ದೇವರಹಣೆಯಲ್ಲಿ ಕಸ್ತೂರಿ ಕರ್ಪೂರ-ಕೇಸರಿ ಮಿಶ್ರಿತವಾದ ತಿಲಕವನ್ನಿಟ್ಟರು (ಶ್ರೀಪಾದರೇಣು), ನಂತರ ಗುರುಗಳ ಅಪ್ಪಣೆಯಂತೆ ತೆರೆಯನ್ನು ತೆರೆಯಲಾಯಿತು. ಸರ್ವಾಭರಣ ಭೂಷಿತನಾಗಿ ಮುಖಾರವಿಂದದಲ್ಲಿ ಮಂದಹಾಸ ಚಂದ್ರಿಕೆಯನ್ನು ಹೊರಸೂಸುತ್ತಾ ಅಭಯವರದ ಮುದ್ರಾಂಕಿತಕರನಾಗಿ ಕೋಟಿಮನ್ಮಥ ಸೌಂದರ್ಯದಿಂದ ದೇದಿಪ್ಯಮಾನನಾದ ಶ್ರೀನಿವಾಸನ ದರ್ಶನ ಪಡೆದು, ಭಕ್ತಸಮುದಾಯ "ಶ್ರೀಹರೇ, ಶ್ರೀನಿವಾಸ ಜಯ ಜಯ" ಎಂದು ಹರ್ಷಧ್ವನಿಮಾಡಿದರು.

ಅನಂತರ ಗುರುಗಳು ವಿವಿಧ ಪುಷ್ಪ-ತುಳಸಿಗಳಿಂದ ಸಹಸ್ರಾರ್ಚನೆಮಾಡಿ ಫಲಗಳನ್ನು ಸಮರ್ಪಿಸಿ ಮಹಾಮಂಗಳಾರತಿಯನ್ನು ಬೆಳಗಿದರು. ಆಗ ಶ್ರೀವ್ಯಾಸತೀರ್ಥರು ತಾವು ತಯಾರುಮಾಡಿಸಿದ ಸುವರ್ಣಸಾಲಿಗ್ರಾಮಸರವನ್ನು ಗುರುಗಳಿಗೂ ಸಾರ್ವಭೌಮನಿಗೂ ತೋರಿಸಿ ಶ್ರೀನಿವಾಸದೇವರ ಕಂಠದಲ್ಲಿ ಹಾಕಿ ಸಾಷ್ಟಾಂಗ ಪ್ರಣಾಮಮಾಡಿದರು.[1] ಆಗೊಂದು ಪವಾಡವೇ ನಡೆದುಹೋಯಿತು, ಶ್ರೀವ್ಯಾಸ

---

1. ತಿರುಪತಿಯಲ್ಲಿ ಇಂದಿಗೂ ಶ್ರೀವ್ಯಾಸರಾಜರು ಸಮರ್ಪಿಸಿದ ಸುವರ್ಣಸಾಲಿಗ್ರಾಮಹಾರವನ್ನು ಶ್ರೀನಿವಾಸನು ಧರಿಸುವುದನ್ನು ಎಲ್ಲರೂ ನೋಡಬಹುದಾಗಿದೆ.

ಯತೀಶ್ವರರು ತನಗರ್ಪಿಸಿದ ಶಾಲಿಗ್ರಾಮಸರವನ್ನು ಆನಂದದಿಂದ ಸ್ವೀಕರಿಸಿ ಆಶೀರ್ವದಿಸುತ್ತಾ ಗುರುಗಳನ್ನು ಸಂಭಾವಿಸುತ್ತಿರುವನೋ ಎಂಬಂತೆ ದೇವರ ಕೊರಳಲಿದ್ದ ಮಲ್ಲಿಕಾಮಾಲೆಯೊಂದು ಕಳಚಿಬಿದ್ದು ನಮಸ್ಕರಿಸಿದ ಶ್ರೀವ್ಯಾಸರಾಜರ ಕಂಠವನ್ನಲಂಕರಿಸಿತು ! ಶ್ರೀನಿವಾಸನ ಈ ಭಕ್ತವಾತ್ಸಲ್ಯ-ಅನುಗ್ರಹಗಳನ್ನು ಕಂಡು ಸಕಲರೂ "ಶ್ರೀವ್ಯಾಸತೀರ್ಥರಿಗೆ ಜಯವಾಗಲಿ" ಎಂದು ಹರ್ಷಧ್ವನಿಗೈದರು.

ಭಗವದನುಗ್ರಹವನ್ನು ಕಂಡು ವ್ಯಾಸಮುನಿಗಳು ರೋಮಾಂಚಿತರಾದರು. ಆಗ ಅವರ ಮುಖದಿಂದ ಸುರಸರಸ್ವತಿಯು ಸ್ತೋತ್ರರೂಪವಾಗಿ ಹೊರಹೊಮ್ಮಿದಳು.

**ಶ್ರೀವ್ಯಾಸರಾಜ ವಿರಚಿತ ಶ್ರೀನಿವಾಸ ಸುಪ್ರಭಾತ ಸ್ತುತಿ**

"[1]ಪ್ರಾತಃಸ್ಮರಾಮಿ ರಮಯಾ ಸಹ ವೇಂಕಟೇಶಂ
ಮಂದಸ್ಮಿತಂ ಮುಖಸರೋರುಹ ಕಾಂತಿರಮ್ಯಮ್ ।
ಮಾಣಿಕ್ಯಕಾಂತಿ ವಿಲಸನ್ಮುಕುಟೋರ್ಧ್ವಪುಂಡ್ರಂ
ಪದ್ಮಾಕ್ಷಲಕ್ಷ(ಕ್ಷ್ಯ)ಮಣಿಕುಂಡಲಮಂಡಿತಾಂಗಮ್ ॥೧॥
ಪ್ರಾತರ್ಭಜಾಮಿ ಕರರಮ್ಯ ಸುಶಂಖಚಕ್ರಂ
ಭಕ್ತಾಭಯಪ್ರದಕಟಿಸ್ಥಲದತ್ತ ಪಾಣಿಮ್ ।
ಶ್ರೀವತ್ಸಕೌಸ್ತುಭ ಲಸನ್ಮಣಿ ಕಾಂಚನಾಢ್ಯಂ
ಪೀತಾಂಬರಂ ಮದನಕೋಟಿ ಸುಮೋಹನಾಂಗಮ್ ॥೨॥
ಪ್ರಾತರ್ನಮಾಮಿ ಪರಮಾತ್ಮಪದಾರವಿಂದಂ
ಆನಂದಸಾಂದ್ರನಿಲಯಂ ಮಣಿನೂಪುರಾಢ್ಯಮ್ ।
ಏತತ್ಸಮಸ್ತಜಗತಾಮಿತಿ ದರ್ಶಯಂತಂ
ವೈಕುಂಠಮತ್ರ ಭಜತಾಂ ಕರಪಲ್ಲವೇನ ॥೩॥
ವ್ಯಾಸರಾಜಯತಿಪ್ರೋಕ್ತಂ ಶ್ಲೋಕತ್ರಯಮಿದಂ ಶುಭಂ ।
ಪ್ರಾತಃಕಾಲೇ ಪಠೇದ್ಯಸ್ತು ಪಾಪೇಭ್ಯೋ ಮುಚ್ಯತೇ ನರಃ ॥"

ಭಕ್ತ್ಯುದ್ದೀಪಕವಾದ ಆ ಸುಪ್ರಭಾತವನ್ನಾಲಿಸಿ ಸರ್ವರೂ ಪರಮಾನಂದಭರಿತರಾದರು. ಆಗ ಸಾಮ್ರಾಟ್ ನರಸಿಂಹಭೂಪನು ತಾನು ತಂದಿದ್ದ ಧನಕನಕಾಭರಣಾದಿ ಕಾಣಿಕೆಗಳನ್ನು ದೇವರಿಗೆ ಅರ್ಪಿಸಿ ಕೃತಾರ್ಥನಾದನು. ಅದರೊಂದಿಗೆ ಬೆಳಗಿನಪೂಜಾ ಕಾರ್ಯ ಮುಗಿಯಿತು.

---

1 ಶ್ರೀವ್ಯಾಸರಾಯರು ತಿರುಪತಿ ಶ್ರೀನಿವಾಸನನ್ನು ಪ್ರಪ್ರಥಮವಾಗಿ ಪೂಜಿಸಿದಾಗ ಶ್ರೀಹರಿಯು ಯತಿಗಳ ಸೇವೆಯನ್ನು ಸ್ವೀಕರಿಸಿ ಸುಪ್ರಸನ್ನನಾಗಿ ಅವರನ್ನು ಅನುಗ್ರಹಿಸಿದಾಗ ಶ್ರೀವ್ಯಾಸಮುನಿಗಳು ಈ ಸುಪ್ರಭಾತವನ್ನು ರಚಿಸಿ ಸಮರ್ಪಿಸಿದರೆಂದು ಪರಂಪರೆಯಿಂದ ಹಿರಿಯರು, ಜ್ಞಾನಿಗಳು ಹೇಳುತ್ತಾ ಬಂದಿದ್ದಾರೆ.

ಆ ತರುವಾಯ ಉಭಯಗುರುಗಳ ನೇತೃತ್ವದಲ್ಲಿ ಹವನಹೋಮಾದಿಗಳ ಪೂರ್ಣಾಹುತಿಯಾಗಿ ಋತ್ವಿಜರು-ಪಾರಾಯಣ ಮಾಡಿದವರುಗಳಿಗೆ, ಪುರೋಹಿತರಿಗೆ ಚಕ್ರವರ್ತಿಯು ಗುರುಗಳಿಂದ ಸಂಭಾವನಾಪ್ರದಾನಮಾಡಿಸಿದನು.

ಮಧ್ಯಾಹ್ನ ಶ್ರೀವ್ಯಾಸರಾಜರು ಶ್ರೀನಿವಾಸನ ಸನ್ನಿಧಿಯಲ್ಲಿ ತಮ್ಮ ಮಹಾ ಸಂಸ್ಥಾನ ಪೂಜೆಯನ್ನೂ ಶ್ರೀನಿವಾಸನಿಗೆ ಮಧ್ಯಾಹ್ನದ ಪೂಜೆಯನ್ನೂ ನೆರವೇರಿಸಿ, ಶಾಲ್ಯನ್ನ, ಹುಗ್ಗಿ, ಲಡ್ಡುಕ, ದೋಸೆ, ವಡೆ, ಫಲಗಳನ್ನು ನಿವೇದಿಸಿ ಮಹಾ ಮಂಗಳಾರತಿ ಮಾಡಿ ಸಕಲರಿಗೂ ದೇವರ ತೀರ್ಥಪ್ರಸಾದಗಳನ್ನು ಕರುಣಿಸಿದರು. ಅಂದು ನಾಲ್ಕಾರುಸಾವಿರ ಜನರಿಗೆ ಮೃಷ್ಟಾನ್ನ ಭೋಜನವಾಯಿತು.

ಅಂದು ಸಂಜೆ ಸಾರ್ವಜನಿಕಸಭೆಸೇರಿಸಿ ಸಾಳುವ ನರಸಿಂಹರಾಜನು ಶ್ರೀವ್ಯಾಸ ರಾಜರು, ತನಗೆ, ಸಾಮ್ರಾಜ್ಯಕ್ಕೆ ಅಖಂಡಭಕ್ತವೃಂದಕ್ಕೆ ಶ್ರೀನಿವಾಸದೇವರ ಅನು ಗ್ರಹದೊರಕಿಸಿಕೊಟ್ಟು ಮಹೋಪಕಾರಮಾಡಿದ್ದನ್ನು ಬಣ್ಣಿಸಿ ಗುರುಗಳಿಗೆ ಕೃತಜ್ಞತೆ ಯನ್ನು ಸಲ್ಲಿಸಿದನು. ಮತ್ತು ಇನ್ನುಮುಂದೂ ಶ್ರೀವ್ಯಾಸತೀರ್ಥರೇ ದೇವಾಲ ಯದ ಆಡಳಿತ, ಪೂಜಾದಿಗಳನ್ನು ನೆರವೇರಿಸುತ್ತಾ ಸಮಸ್ತ ಭಕ್ತಜನರಿಗೆ ಶ್ರೇಯಸ್ಸು ಮಂಗಳಗಳೂ, ದೇವರಅನುಗ್ರಹವೂ ದೊರಕುವಂತೆ ಮಾಡಬೇಕೆಂದು ಪ್ರಾರ್ಥಿಸಿ, ಶ್ರೀಗಳವರ ಆಜ್ಞೆಯಂತೆಯೇ ಬೆಟ್ಟದ ಲೌಕಿಕ-ವೈದಿಕಜನರು, ಬರುವ ಯಾತ್ರಾರ್ಥಿ ಗಳು ವರ್ತಿಸಬೇಕೆಂದು ಆಜ್ಞಾಪಿಸಿ ಅದರಂತೆ ನಿರೂಪಹೊರಡಿಸಿದನು.

ಶ್ರೀವೆಂಕಟೇಶ್ವರನ ಇಚ್ಛೆಯಿಂದಲೇ ಪರಮಾತ್ಮನನ್ನು ಪೂಜಿಸುವ ಅಧಿಕಾರ- ವೈಭವಗಳು ಪ್ರಾಪ್ತವಾಯಿತೆಂದು, ಅದು ಭಗವತ್ಸಂಕಲ್ಪವೆಂದೂ ಭಾವಿಸಿದ ಶ್ರೀವ್ಯಾಸತೀರ್ಥರು ಚಕ್ರವರ್ತಿಯ ಪ್ರಾರ್ಥನೆಗೆ ಸಂತೋಷದಿಂದ ಸಮ್ಮತಿಸಿದರು. ಅಂದಿನಿಂದ ಗುರುಗಳು ಶ್ರೀನಿವಾಸದೇವರ ಪೂಜಾರಾಧನೆಯನ್ನು "ತಂತ್ರಸಾರಾಗಮ" ಕ್ರಮದಂತೆಯೇ ನೆರವೇರಿಸುತ್ತಾ ಬಂದರು.*

ಶ್ರೀಪಾದರಾಜರು, ನರಸಿಂಹಭೂಪಾಲ ಮತ್ತು ಪರಿವಾರದವರು ಮೂರು ನಾಲ್ಕುದಿನ ಬೆಟ್ಟದಮೇಲಿದ್ದು ತರುವಾಯ ಚಂದ್ರಗಿರಿಗೆ ಪ್ರಯಾಣಬೆಳೆಸಿದರು. ಶ್ರೀಲಕ್ಷ್ಮೀನಾರಾಯಣಮುನಿಗಳು ಅಲ್ಲಿಂದ ಮುಳಬಾಗಿಲಿಗೆ ದಯಮಾಡಿಸಿದರು.

ೕ ೕ ೕ ೕ ೕ

---

1 ಶ್ರೀನಿವಾಸೇಚ್ಛಯಾ ಪ್ರಾಪ್ತಂ ವೈಭವಂ ವೀಕ್ಷ್ಯ ತತ್ಪ್ರಭುಃ ।
ಓಮಿತ್ಯುಕ್ತ್ವಾ ಭಕ್ತಿಭರಸ್ತಂತ್ರಸಾರೋಕ್ತಮಾರ್ಗತಃ ॥
ಅಪೂಜಯಚ್ಛ್ರೀನಿವಾಸಂ ವ್ಯಾಸರಾಜೋ ದ್ವಿಷಟ್ಸಮಾಃ ॥

1 "ವಿಭವೈರ್ಬಹುಭಿಶ್ಚೈವ ತದಾ ಭಕ್ತಿಪುರಸ್ಸರಮ್ ।
ವೇಂಕಟೇ ದ್ವಾದಶಾಬ್ದಾಂಸ್ತು ವ್ಯಾಸರಾಜಯತೀಶ್ವರಃ ॥
ಅಭ್ಯರ್ಚಯಚ್ಛ್ರೀನಿವಾಸಂ ತಂತ್ರಸಾರೋಕ್ತವರ್ತ್ಮನಾ ॥"

ಕೆಲಕಾಲ ಗತಿಸಿದಮೇಲೆ ಚಕ್ರವರ್ತಿಯು ಶ್ರೀವ್ಯಾಸರಾಜರಿಗೆ ತಿರುಪತಿಬೆಟ್ಟದ ಮೇಲೆ ಸ್ವಾಮಿಪುಷ್ಕರಣಿಯತೀರದಲ್ಲಿ ಒಂದು ಭವ್ಯಮಠವನ್ನು ನಿರ್ಮಿಸಿಕೊಟ್ಟನು. ಶ್ರೀಗಳವರು ಬೆಟ್ಟದ ಮೇಲಿರುವಾಗ ಆ ಮಠದಲ್ಲಿದ್ದು ದೇವರ ಸೇವೆಯನ್ನು ಮಾಡಬೇಕೆಂದು ಪ್ರಾರ್ಥಿಸಿದನು. ಅರಸನ ಅಪೇಕ್ಷೆಯಂತೆ ಗುರುಗಳು ಸಾರ್ವಭೌಮನು ತಮಗಿತ್ತ ಮಠದಲ್ಲಿ ವಾಸಿಸುತ್ತಾ ಶ್ರೀನಿವಾಸದೇವರ ಪೂಜಾರಾಧನೆ, ದೇವಾಲಯಾಡಳಿತಾದಿಗಳನ್ನು ನೆರವೇರಿಸಹತ್ತಿದರು. ಒಂದೆರಡು ವರ್ಷಗಳಲ್ಲೇ ಸಹಸ್ರ ಸಂಖ್ಯೆಯಲ್ಲಿ ಯಾತ್ರಿಕರು ಬಂದು ದೇವರನ್ನು ಸೇವಿಸಿ ಇಷ್ಟಾರ್ಥಗಳನ್ನು ಪಡೆದು ಕೃತಾರ್ಥರಾಗತೊಡಗಿದರು.

ವ್ಯಾಸರಾಜರು ತಿರುಪತಿಯಲ್ಲಿ ಅನೇಕ ಅಭಿವೃದ್ಧಿಕಾರ್ಯಗಳನ್ನು ನೆರವೇರಿಸಿ ಶ್ರೀನಿವಾಸನ ಪೂಜಾರಾಧನೆಯು ಸುಸೂತ್ರವಾಗಿ ನೆರವೇರುವ ವ್ಯವಸ್ಥೆ ಮಾಡಿದರು. ಅವುಗಳಲ್ಲಿ ಕೆಲವನ್ನು ಇಲ್ಲಿ ಉಲ್ಲೇಖಿಸುವುದು ಯುಕ್ತವಾಗಿದೆ.

ಮೊದಲನೆಯದಾಗಿ ಗುರುಗಳು ಶಾಸ್ತ್ರೀಯವಾಗಿ ದೇವರ ಪೂಜಾರಾಧನೆಗಳು ನೆರವೇರಿಸಲು ವ್ಯವಸ್ಥೆಯನ್ನುಮಾಡಿ ತಂತ್ರಸಾರಾಗಮೋಕ್ತಪ್ರಕಾರವಾಗಿ ದೇವರ ಪೂಜೆಯನ್ನು ನೆರವೇರುವಂತೆಮಾಡಿದರು. ಪ್ರತಿದಿವಸ ಶ್ರೀನಿವಾಸದೇವರ ಪಾದಗಳಿಗೆ ಮಾತ್ರ ಅಭಿಷೇಕ,ಪೂಜೆಗಳು ಜರಗುವಂತೆಯೂ, ಪ್ರತಿಗುರುವಾರ ದೇವರಿಗೆ ಪಾದಗಳಿಗೆ ಅಭಿಷೇಕವಾದಮೇಲೆ ದೇವರಿಗೆ"ಹೂವಿನಅಂಗಿ"ಯ ಸೇವೆ ನೆರವೇರುವ ಕ್ರಮವನ್ನೇರ್ಪಡಿಸಿದರು. ಪ್ರತಿಶುಕ್ರವಾರಮಾತ್ರ ಶ್ರೀನಿವಾಸದೇವರ ವಿಶ್ವರೂಪ ದರ್ಶನವಾಗುವಂತೆಯೂ, ಅಂದು ದೇವರಿಗೆ ಪುನಗಾಭಿಷೇಕ, ಸರ್ವಾಭರಣಾಲಂಕಾರ ವಿಧ್ಯುಕ್ತ ಷೋಡಶೋಪಚಾರಪೂಜಾ ಕ್ರಮವನ್ನೇರ್ಪಡಿಸಿದರು. ಇದರಂತೆ ನಿತ್ಯೋತ್ಸವ, ವಾರೋತ್ಸವ, ಪಕ್ಷೋತ್ಸವ, ಮಾಸೋತ್ಸವಾದಿ ಸೇವೆಗಳಲ್ಲದೆ ನೈಮಿತ್ತಿಕವಾದ ವಿಶೇಷೋತ್ಸವಗಳು, ಕಲ್ಯಾಣೋತ್ಸವ ಬ್ರಹ್ಮೋತ್ಸವಾದಿ ಸೇವೆಗಳು ವಿಶೇಷ ವೈಭವದಿಂದ ಸಕ್ರಮವಾಗಿ ನೆರವೇರುವ ಕ್ರಮವನ್ನು ಏರ್ಪಡಿಸಿದರು, ಮತ್ತು ಭಕ್ತರುಗಳಿಗಾಗಿ ಆರತಿ, ಅರ್ಚನೆ ತೋಮಾಲಸೇವೆ, ಕಲ್ಯಾಣೋತ್ಸವ, ವಿವಿಧ ವಾಹನೋತ್ಸವಗಳು. ವಿವಿಧ ನೈವೇದ್ಯ ಸಮರ್ಪಣೆ ಮುಂತಾದ ಹೊಸ ವ್ಯವಸ್ಥೆಗಳು ಸಕ್ರಮವಾಗಿ ಭಕ್ತರಮನಸ್ಸಿಗೆ ತೃಪ್ತಿಯಾಗುವಂತೆ ಸುವ್ಯವಸ್ಥಿತವಾಗಿ ನೆರವೇರಿಸುವಂತೆ ಮಾಡಿದರು.

ಶ್ರೀಗಳವರು ಏರ್ಪಡಿಸಿದ ಸರ್ವಜನರಿಗೂ ಸಂತೋಷಪ್ರದವಾದ ಈ ಕ್ರಮದಿಂದಾಗಿ ತಿರುಪತಿಗೆ ದಿನೇ ದಿನೇ ಯಾತ್ರಾರ್ಥಿಗಳು ಅಧಿಕಸಂಖ್ಯೆಯಲ್ಲಿ ಬರಲಾರಂಭಿಸಿದರು. ಜನಸಂದಣಿ ಅಧಿಕವಾಗಹತ್ತಿದ್ದರಿಂದ ಭಕ್ತರಾದ ಯಾತ್ರಾರ್ಥಿಗಳು ತಂಗಲು ಅನೇಕ ಕಟ್ಟಡ-ಛತ್ರಾದಿಗಳನ್ನು ಗುರುಗಳು ನಿರ್ಮಾಣಮಾಡಿಸಿದರು. ದೇವಾಲಯದ ಆಡಳಿತವು ಸುವ್ಯವಸ್ಥಿತವಾಗಿ ಜರುಗಲು ಅನೇಕ ಯೋಗ್ಯರಾದ

ಜನರನ್ನು ಅನೇಕ ಹುದ್ದೆಗಳಿಗಾಗಿ ತೆಗೆದುಕೊಂಡು ಅವರೆಲ್ಲರಿಗೂ ಭಕ್ತಿಶ್ರದ್ಧೆಗಳಿಂದ ಯಾತ್ರಾರ್ಥಿ ಭಕ್ತರ ಮನಸ್ಸಂತೋಷವಾಗುವಂತೆ ವರ್ತಿಸುತ್ತಾ ಸೇವೆ ಸಲ್ಲಿಸಲು ಕಟ್ಟಳೆಮಾಡಿದರು. ಇವೆಲ್ಲದರ ಪರಿಣಾಮವಾಗಿ, ಮುಖ್ಯವಾಗಿ ಶ್ರೀಯವರ ಶುದ್ಧ ಆಡಳಿತ, ಕಾರ್ಯದಕ್ಷತೆ, ಅವರ ಜ್ಞಾನ–ವೈರಾಗ್ಯ–ತಪಸ್ಸುಗಳಿಂದ ಪ್ರಭಾವಿತರಾದ ಭಕ್ತಜನರು ಪರಮಹರ್ಷಿತರಾಗಿ ದೇವರಿಗೆ ವಿವಿಧರೀತಿಯಲ್ಲಿ ಧನ, ಕನಕ, ಆಭರಣ, ವಸ್ತ್ರ, ಪಾತ್ರೆ, ದಿನಸಿ ಮುಂತಾದವುಗಳನ್ನು ಕಾಣಿಕೆಯಾಗಿ ಸಮರ್ಪಿಸಲಾರಂಭಿಸಿದರು. ಮತ್ತು ಶ್ರೀಮಂತರು ಭೂಸ್ವಾಸ್ತಿಗಳನ್ನು ದೇವರಿಗೆ ದತ್ತಿಯಾಗಿ ಬಿಟ್ಟರು. ಇವೆಲ್ಲದರಿಂದ ದೇವಾಲಯದ ಭಂಡಾರ ತುಂಬಿ ಆದಾಯವು ಮೊದಲಿಗಿಂತ ನಾಲ್ಕಾರುಪಟ್ಟು ಅಧಿಕವಾಗಲು ಕಾರಣವಾಯಿತು

ಶ್ರೀಪಾದಂಗಳವರು ಇದಿಷ್ಟರಿಂದಲೇ ತೃಪ್ತರಾಗಲಿಲ್ಲ. ತಮಗೆ ಕುಲದೇವನೂ ಆರಾಧ್ಯಮೂರ್ತಿಯೂ ಆದ ಶ್ರೀವೆಂಕಟೇಶ್ವರನಿಗೆ ಶ್ರೀಪಾದರು ತಮ್ಮ ಶ್ರೀಮಠದ ಉತ್ಪನ್ನದಿಂದ ವಿವಿಧ ಆಭರಣಗಳು, ಪೂಜಾಸಾಮಗ್ರಿಗಳನ್ನು ಮಾಡಿಸಿ ದೇವರಿಗೆ ಸಮರ್ಪಿಸಿದರು. ಶ್ರೀವ್ಯಾಸರಾಜರು ತಿರುಪತಿಯ ಶ್ರೀನಿವಾಸನ ಭಂಡಾರಕ್ಕೆ ಸುಮಾರು ಹದಿನಾಲ್ಕುಸಾವಿರ (14,000) ಸ್ವರ್ಣವಣ (ವರ್‌ಹಣ)ಗಳನ್ನು ಅಂದರೆ ಇಂದಿನ 60ಸಾವಿರ ತೊಲ ಭಂಗಾರವನ್ನು ಕಾಣಿಕೆಯಾಗಿ ಸಮರ್ಪಿಸಿ ಪ್ರತಿವರ್ಷವೂ ವಿಶೇಷದಿನಗಳಲ್ಲಿ ದೇವರಿಗೆ ಅಪ್ಪವಡಿಗಳನ್ನು ಅರ್ಪಿಸುವ ವ್ಯವಸ್ಥೆ ಮಾಡಿದರು. ಇದಲ್ಲದೆ ಕನ್ನಡದ ಎಲ್ಲಸಾರ್ವಭೌಮರಿಂದಲೂ ದೇವರಿಗೆ ಗ್ರಾಮ, ಭೂಮಿ, ಆಭರಣಗಳು, ವಿಶೇಷಪೂಜೆಗಳು, ಅನ್ನದಾನಮುಂತಾದವು ಹೆಚ್ಚಾಗಿ ಜರುಗಲು ಮುಖ್ಯಕಾರಣರಾದರು. ಇದೂ ಅಲ್ಲದೆ ಚಕ್ರವರ್ತಿಯು ತಮಗೆ ನೀಡಿದ್ದ ಪಡೈನಾಡುಸೀಮೆಯಲ್ಲಿದ್ದ "ಶಿಯಾಲಪಾಂಡೂರು" ಎಂಬ ಗ್ರಾಮವನ್ನು ತಿರುಪತಿಯ ಗೋವಿಂದರಾಜನಿಗೆ ಪ್ರತಿನಿತ್ಯವೂ ಕೆಲವು ಸೇವೆಗಳು ಜರುಗಲು ದಾನವಾಗಿ ಕೊಟ್ಟರು. ಶ್ರೀವ್ಯಾಸರಾಜರು ಶ್ರೀನಿವಾಸನ ಸೇವೆಗಾಗಿ ಶ್ರೀಮಠದಿಂದ ಅನೇಕ ಭೂಸ್ವಾಸ್ತಿಗಳನ್ನೂ, ಗ್ರಾಮಗಳನ್ನೂ, ಸುವರ್ಣಾಭರಣಗಳನ್ನು ಸಮರ್ಪಿಸಿ ಭಗವಂತನ ವಿಶೇಷಾನುಗ್ರಹಕ್ಕೆ ಪಾತ್ರರಾದರು.

ಇದಕ್ಕಿಂತಲೂ ಹೆಚ್ಚಾಗಿ ಶ್ರೀವ್ಯಾಸರಾಜರು ಸ್ವಹಸ್ತದಿಂದ ಶ್ರೀಶ್ರೀನಿವಾಸನನ್ನು ಪೂಜಿಸುತ್ತಿದ್ದುದರಿಂದ "ಪ್ರತಿಮಾಂ ತು ಸಾನಿಧ್ಯಂ ಅರ್ಚಕಸ್ಯ ತಪೋಬಲಾತ್" ಎಂಬ ಪ್ರಮಾಣದಂತೆ ಶ್ರೀನಿವಾಸನು ತನ್ನ ವಿಶೇಷಸನ್ನಿಧಾನದಿಂದ ತಿರುಪತಿಯಲ್ಲಿ ಪೂರ್ಣಕಳೆಯಿಂದ ಕಂಗೊಳಿಸಹತ್ತಿದನು. ದೇವರಿಗೆ ಹೂವಿನಅಂಗಿ ಸೇವೆ, ಪುನಗಾಭಿಷೇಕ ಮುಂತಾದ ಸೇವೆಗಳನ್ನು ಏರ್ಪಡಿಸಿದ್ದಲ್ಲದೆ ವರ್ಷದಲ್ಲಿ ಇನ್ನೂರಾಇಪ್ಪತ್ತೈದು ದಿನಗಳಲ್ಲಿ ಶ್ರೀನಿವಾಸನಿಗೆ ವಿಶೇಷಪೂಜೆ ಜರಗುವಂತೆಮಾಡಿದರು. ಪದ್ಮಸರೋವರದಲ್ಲಿ (ತಿರುಚಾನೂರು) ಶ್ರೀಪದ್ಮಾವತಿದೇವಿಗೆ ವರ್ಷದಲ್ಲಿ

ನೂರೈವತ್ನಾಲ್ಕು ದಿನಗಳಲ್ಲಿ ವಿಶೇಷಪೂಜಾರಾಧನೆ ನೆರವೇರುವಂತೆ ವ್ಯವಸ್ಥೆ ಮಾಡಿದರು.

ಶ್ರೀವ್ಯಾಸರಾಜರು ತಿರುಪತಿಬೆಟ್ಟದ ಮೇಲಿನ ತಮ್ಮ ಶ್ರೀಮಠದ ಮುಂಭಾಗದಲ್ಲಿ ಒಂದು ಮಂಟಪವನ್ನು ಕಟ್ಟಿಸಿ ಅಲ್ಲಿ ತಮ್ಮ ಸೇವಾರೂಪವಾಗಿ ಪ್ರತಿವರ್ಷ ಜರುಗುವ ಬ್ರಹ್ಮೋತ್ಸವ, ಅಧ್ಯಯನೋತ್ಸವ, ಪವಿತ್ರೋತ್ಸವಗಳ ಸಮಯದಲ್ಲಿ ಶ್ರೀಭೋಗ ಶ್ರೀನಿವಾಸದೇವರು (ಉತ್ಸವಮೂರ್ತಿ) ಉತ್ಸವದಿಂದ ಬಂದು ಆ ಮಂಟಪದಲ್ಲಿ ಮಂಡಿಸಿ,ಮೂರನೂರಾಐವತ್ನಾಲ್ಕು 'ಅಪ್ಪ-ಪಡಿ'ಗಳನ್ನುಸ್ವೀಕರಿಸಿ, ಹೋಗುವ ಕ್ರಮ ಏರ್ಪಡಿಸಿದರು.ಬೆಟ್ಟದಕೆಳಗೆ ಗೋವಿಂದರಾಜಪಟ್ಟಣದಲ್ಲಿ ಪ್ರತಿ ತಿಂಗಳ ಪೂರ್ಣಿಮಾ-ದಿವಸ ಶ್ರೀಗೋವಿಂದರಾಜಸ್ವಾಮಿಗೆ "ಪೂರ್ಣಿಮೋತ್ಸವ" ನೆರವೇರಿಸಲು ಗ್ರಾಮದಾನಮಾಡಿದರು, ಹೀಗೆ ಗುರುಗಳು ಅನೇಕ ರೀತಿಯಿಂದ ಶ್ರೀವೆಂಕಟೇಶ್ವರನ ಸೇವೆಮಾಡಿ ಕೀರ್ತಿಶಾಲಿಗಳಾದರು.[1]

ಕ್ರಿಸ್ತಶಕೆ 1486ರಿಂದ 1498ರ ವರೆಗೆ ಹನ್ನೆರಡು ವರ್ಷಗಳ ಕಾಲ ತಿರುಪತಿ ಶ್ರೀನಿವಾಸದೇವರ ಪೂಜೆಮಾಡಿ, ಅವರು ದೇವಾಲಯದ ಆಡಳಿತ ನಡೆಸಿದ ಕಾಲ ತಿರುಪತಿಯ ಇತಿಹಾಸದ ಸುವರ್ಣಯುಗವೆಂದು ಹೇಳಬಹುದು, ಶ್ರೀವ್ಯಾಸಮುನಿಗಳು ಅನೇಕವರ್ಷ ಬೆಟ್ಟದಲ್ಲಿಯೇ ನೆಲೆಸಿದ್ದು ದೇವಾಲಯದಾಡಳಿತ, ದೇವರ ಪೂಜಾರಾಧನೆಗಳನ್ನು ಖುದ್ದಾಗಿ ಸ್ವಹಸ್ತದಿಂದ ನೆರವೇರಿಸುತ್ತಿದ್ದರು. ಆ ನಂತರ ಸಾಳುವ ನರಸಿಂಹನ ಪ್ರಾರ್ಥನೆಯಂತೆ ಚಂದ್ರಗಿರಿಯಲ್ಲಿ ವಾಸಿಸುತ್ತಿರುವಾಗಲೂ ಪ್ರತಿ ಗುರುವಾರ ಶುಕ್ರವಾರಗಳಲ್ಲಿ ತಿರುಪತಿಗೆ ತೆರಳಿ ದೇವರ ಸೇವೆಯನ್ನು ನೆರವೇರಿಸಿ ಬರುತ್ತಿದ್ದರು. ಶ್ರೀಗಳವರ ಅನುಪಸ್ಥಿತಿಯಲ್ಲಿ ಶ್ರೀನಿವಾಸದೇವರ ಪೂಜೆಯನ್ನು ಆತ್ಮೀಯ ಶಿಷ್ಯರಾದ ಪಂಡಿತರು ನೆರವೇರಿಸುತ್ತಿದ್ದರು. ಈ ಶಿಷ್ಯರಲ್ಲಿ ಶ್ರೀವ್ಯಾಸರಾಜರ ಪೂರ್ವಾಶ್ರಮ ವಂಶೀಕರೂ, ವಾಷ್ಟಿಕಕುಲಭೂಷಣರೂ ಆದ ಬೆಟ್ಟದ ಆಚಾರ್ಯರು ಪ್ರಮುಖರು.

ತಿರುಪತಿಯಲ್ಲಿ ಶ್ರೀವ್ಯಾಸರಾಜರು ನೆರವೇರಿಸಿದ ಇನ್ನೊಂದು ಮಹತ್ವಪೂರ್ಣ ಕಾರ್ಯವೆಂದರೆ ತಾವು ಶ್ರೀವೆಂಕಟೇಶ್ವರನನ್ನು ಹನ್ನೆರಡು ವರ್ಷಗಳಕಾಲ ಪೂಜಿಸಿದ ಜ್ಞಾಪಕಾರ್ಥವಾಗಿ ಶ್ರೀನಿವಾಸನ ಗರ್ಭಗುಡಿಯ ಮೇಲಿರುವ ಗೋಪುರಕ್ಕೆ ಬಂಗಾರದ ಮುಲಾಮು ಮಾಡಿಸಿದ ತಗಡನ್ನು ಬಡಾಯಿಸಿ ಸುವರ್ಣಗೋಪುರವು ಭಕ್ತರನ್ನು ಆಕರ್ಷಿಸುವಂತೆ ಮಾಡಿದ್ದು[2] ಮತ್ತು ಗೋಪುರದ ಉತ್ತರ ದಿಕ್ಕಿನಲ್ಲಿ ವಿಮಾನ

---

1. ಮೇಲ್ಕಂಡ ಎಲ್ಲ ವಿಚಾರಗಳೂ ಅನೇಕ ಶಿಲಾಶಾಸನ, ತಾಮ್ರಶಾಸನ, ದಾನಶಾಸನ ಪತ್ರಗಳೇ ಮೊದಲಾದವುಗಳಿಂದ ಸ್ಪಷ್ಟವಾಗುವುದು.

1. ಶ್ರೀವ್ಯಾಸರಾಜರು ದೇವರಗೋಪುರಕ್ಕೆ ಬಡಾಯಿಸಿದ್ದ ತಗಡಿನಲ್ಲಿದ್ದ ಬಂಗಾರದ ಮುಲಾಮು ಐದುನೂರುವರ್ಷಗಳಕಾಲ ಬಿಸಿಲುಮಳೆಗಳ ಪರಿಣಾಮವಾಗಿ ಮಸುಕಾದ್ದರಿಂದ ಇತ್ತೀಚೆಗೆ ತಿರುಪತಿಯ ದೇವಸ್ಥಾನದವರು ಹಳೆಯತಗಡು ತೆಗೆಸಿ ಹೊಸದಾಗಿ ಬಂಗಾರದ ಮುಲಾಮುಮಾಡಿಸಿ ತಗಡನ್ನು ಬಡಾಯಿಸಿದ್ದಾರೆ. ಶ್ರೀವ್ಯಾಸರಾಜಪ್ರತಿಷ್ಠಿತ ವಿಮಾನ ಶ್ರೀನಿವಾಸನಿಗೂ ಹೊಸದಾಗಿ ಬಂಗಾರದಮುಲಾಮು ಮಾಡಿಸಿದ್ದಾರೆ. ತಿರುಪತಿಗೆ ಹೋದ ಭಕ್ತರು ಇಂದಿಗೂ ಆ ಸುವರ್ಣಗೋಪುರ, ವಿಮಾನಶ್ರೀನಿವಾಸರನ್ನು ಕಾಣಬಹುದಾಗಿದೆ.

ಶ್ರೀನಿವಾಸನನ್ನು ಸ್ಥಾಪಿಸಿ ಶ್ರೀಮದಾಚಾರ್ಯರ ಅನುಯಾಯಿಗಳು ಮಠೀಯ, ಶಿಷ್ಯರುಗಳು ಶ್ರೀನಿವಾಸನ ದರ್ಶನ ಮಾಡಿಹೋಗುವ ಮೊದಲು ಈ ವಿಮಾನ ಶ್ರೀನಿವಾಸನ ದರ್ಶನಪಡೆದುಹೋಗುವುದು ಮತ್ತು ಅಲ್ಲಿ ಪುರಾಣ, ಹರಿಕಥೆ, ಭಜನೆ, ಪಾರಾಯಣಾದಿಗಳನ್ನು ಮಾಡಿ ಭಗವಂತನ ಅನುಗ್ರಹಕ್ಕೆಪಾತ್ರರಾಗುವಂತೆ ಪದ್ಧತಿಯನ್ನು ಏರ್ಪಡಿಸಿದರು. ಇಂದಿಗೂ ಮಾಧ್ವರು ಈ ವಿಮಾನ ಶ್ರೀನಿವಾಸನ ಸನ್ನಿಧಿಯಲ್ಲಿ ಪುರಾಣ ಪಾರಾಯಣಾದಿಗಳನ್ನು ಮಾಡುತ್ತಾ, ಭಗವದನುಗ್ರಹಕ್ಕೆ ಪಾತ್ರರಾಗುತ್ತಿರುವುದು ಕಾಣಬಹುದು. ಇದರಂತೆ ದೇವಸ್ಥಾನದ ಮುಂಭಾಗದ ಎದುರು ಸ್ವಲ್ಪದೂರದಲ್ಲಿ ಶ್ರೀನಿವಾಸದೇವರ ಭಕ್ತರನ್ನಾಕರ್ಷಿಸಿ ಬೆಟ್ಟಕ್ಕೆ ಕರೆತರುವ ಹೊಣೆಹೊತ್ತ ಬೇಡಿಆಂಜನೇಯನ ಸನ್ನಿಧಿಯಿಂದ ತಿರುಪತಿಗೆಬರುವ ಅನೇಕಧರ್ಮಪೀಠಾಧೀಶರನ್ನು ಪೂರ್ಣಕುಂಭ–ದೇವಾಲಯದ ಗೌರವಗಳೊಡನೆ ಸ್ವಾಗತಿಸಿ ಕರೆದುತಂದು ದೇವರ ಧೂಳಿದರ್ಶನ ಮಾಡಿಸುವ ಸಂಪ್ರದಾಯವನ್ನು ಏರ್ಪಡಿಸಿದರು, ಅದು ಇಂದಿಗೂ ನಡೆದುಬಂದಿದೆ.

## ೩೬. ಕನ್ನಡ ಚಕ್ರವರ್ತಿಗಳ ಗುರುಭಕ್ತಿ

ಶ್ರೀವ್ಯಾಸರಾಜರು ತಿರುಪತಿಯ ಶ್ರೀನಿವಾಸನು ಸುಮುಖನಾಗಿ ಭಕ್ತಜನರನ್ನು ಪೊರೆಯುವಂತೆಮಾಡಿ ದೇವರಗುಡಿಯ ಆಡಳಿತ, ಸೇವಾಸೂತ್ರಗಳನ್ನು ಕ್ರಮಪಡಿಸಿ ದೇವರ ಭಂಡಾರವು ಅತಿಶಯವಾಗಿ ಬೆಳೆಯುವಂತೆ ಮಾಡಿದ ನಾಲ್ಕಾರು ವರ್ಷವಾದ ನಂತರ ನರಸಿಂಹ ಭೂಪತಿಯ ಪ್ರಾರ್ಥನೆಯಂತೆ ತಮ್ಮ ಶಿಷ್ಯರಿಗೆ ದೇವರಪೂಜಾರಾಧನಾದಿಗಳನ್ನು ವಹಿಸಿಕೊಟ್ಟು ಚಂದ್ರಗಿರಿಗೆ ಬಂದು ರಾಜನಿಗೆ ಉಪದೇಶ-ಮಾರ್ಗದರ್ಶನ ಮಾಡುತ್ತಾ ಅನುಗ್ರಹಿಸುತ್ತಿದ್ದರೂ ಪ್ರತಿ ಗುರುವಾರದಿಂದ ಶನಿವಾರದವರೆಗೆ ಬೆಟ್ಟಕ್ಕೆ ಹೋಗಿ ಸ್ವತಃ ದೇವರ ಪೂಜಾರಾಧನೆ ನೆರವೇರಿಸುತ್ತಿದ್ದರು. ಉಳಿದ ವೇಳೆಯಲ್ಲಿ ಅವರ ಶಿಷ್ಯರೇ ಪೂಜಿಸುತ್ತಿದ್ದರು. ಚಂದ್ರಗಿರಿಯಲ್ಲಿ ವ್ಯಾಸತೀರ್ಥರು ಪರವಾದಿ ದಿಗ್ವಿಜಯ, ಪಾಠಪ್ರವಚನ, ಶ್ರೀಮೂಲಗೋಪಾಲಕೃಷ್ಣನ ಪೂಜೆ-ಭಕ್ತಜನರಿಗೆ ಉಪದೇಶಾದಿ ಕಾರ್ಯಾಸಕ್ತರಾಗಿ ರಾಜಗುರುಗಳಾಗಿ ಸಾಮ್ರಾಜ್ಯ ಹಿತಚಿಂತನೆ ಮಾಡುತ್ತಾ ಧರ್ಮಸಂಸ್ಥಾಪನ ಮಾಡುತ್ತಾ ಕೀರ್ತಿಗಳಿಸಿ ಅನೇಕ ವರ್ಷಗಳಕಾಲ ಅಲ್ಲಿ ವಾಸಮಾಡಿದರು.[1]

---

1. ಜಿತ್ವೈವಮೇವ ಬಹುಧಾ ಪರಿಪಂಥಿವರ್ಗಂ
ಪ್ರೋದ್ದಾಮಕೀರ್ತಿ ನಿಚಿತೋರು ನಭಃಕಟಾಹಃ।
ಸಂಸ್ಥಾಪಯನ್ ಸಕಲಧರ್ಮಕುಲಂ ಯತೀಂದ್ರಃ
ತತ್ರಾವಸತ್ಸಬಹುಶಾಶ್ವತರದ ಸ್ಸಮೇಸ॥

ನರಸಿಂಹಭೂಪಾಲನಿಗೆ ಶ್ರೀವ್ಯಾಸರಾಜರಲ್ಲಿ ಅಪರಿಮಿತವಾದ ಭಕ್ತಿಗೌರವ ಗಳಿದ್ದವು. ಅವನು ಶ್ರೀವ್ಯಾಸಮುನಿಗಳನ್ನು ತನ್ನ ಉದ್ಧಾರಕ ಗುರುಗಳೆಂದು ನಂಬಿದ್ದನು. ಅಂತೆಯೇ ಅವನು ಕಾರ್ತವೀರ್ಯಾರ್ಜುನನು ಶ್ರೀ ದತ್ತಾತ್ರೇಯಸ್ವಾಮಿಯನ್ನು ಪೂಜಿಸಿದಂತೆ ಭಕ್ತಿಯಿಂದ ಪೂಜಿಸುತ್ತಿದ್ದನು.

ಸಾಳುವ ನರಸಿಂಹನಿಗೆ ತಿಮ್ಮರಾಜ,ತಮ್ಮರಾಜರೆಂಬ ಮಕ್ಕಳಿದ್ದರು. ಹಿರಿಯುವನಾದ ತಿಮ್ಮರಾಜನಿಗೆ ನರಸಿಂಹಭೂಪತಿಯು ಕ್ರಿ.ಶ. 1493ರಲ್ಲಿ ಯೌವರಾಜ್ಯದಲ್ಲಿ ಪಟ್ಟಾಭಿಷೇಕಮಾಡಿದನು. ಅವನು ಗುರುಗಳಾದ ಶ್ರೀವ್ಯಾಸರಾಜರಲ್ಲಿ ತನ್ನ ತರುವಾಯ ತಿಮ್ಮರಾಜನೂ, ಅವನ ನಂತರ ತಮ್ಮರಾಜನೂ ಕನ್ನಡಸಾಮ್ರಾಜ್ಯವನ್ನಾಳುವಂತೆ ಮಾಡಿ ಅನುಗ್ರಹಿಸಬೇಕೆಂದು ಪ್ರಾರ್ಥಿಸಿದನು. ವ್ಯಾಸತೀರ್ಥರು ಅವನ ಮನದಾಸೆಯನ್ನು ನೆರವೇರಿಸುವುದಾಗಿ ಭರವಸೆನೀಡಿದರು. ಇದಾದ ಕೆಲದಿನಗಳಲ್ಲಿ ಸಾಳುವ ನರಸಿಂಹರಾಜನು ಸ್ವರ್ಗಸ್ಥನಾದನು. ಶ್ರೀವ್ಯಾಸರಾಜರು ತಿಮ್ಮರಾಜನಿಗೆ ಪಟ್ಟಕಟ್ಟಿಸಿದರು. ಆದರೆ ದುರ್ದೈವದಿಂದ ಒಂದು ದಿನ ಬೇಟೆಗೆ ಅರಣ್ಯಕ್ಕೆ ಹೋದ ತಿಮ್ಮರಾಯನು ಮರಳಿಬರಲಿಲ್ಲ. ಏನಾದನೆಂದೂ ತಿಳಿಯಲಿಲ್ಲ. ಆಗ ಸಾಮ್ರಾಜ್ಯನಿಷ್ಠ ಸೇವಕರು ಮಾರ್ಗದರ್ಶನಕ್ಕಾಗಿ ರಾಜಗುರುಗಳ ಬಳಿಗೆ ತುಳುವ ನರಸನಾಯಕನನೊಡನೆ ತಿರುಪತಿಗೆ ತೆರಳಿದರು.

ತುಳುವ ನರಸನಾಯಕನು ರಾಜಗುರುಗಳ ದರ್ಶನಪಡೆದು ನಡೆದ ವೃತ್ತಾಂತವನ್ನರುಹಿ ಮುಂದಿನ ಕರ್ತವ್ಯದ ಬಗ್ಗೆ-ಸಲಹೆ ನೀಡಲು ಚಂದ್ರಗಿರಿಗೆ ಬರಬೇಕೆಂದು ಪ್ರಾರ್ಥಿಸಿದನು. ವ್ಯಾಸತೀರ್ಥರು ನರಸನಾಯಕನೊಡನೆ ರಾಜಧಾನಿಗೆ ಬಂದು ಸ್ವಾಮಿನಿಷ್ಠ ಸೇವಕರು, ಸಚಿವ-ಸೇನಾನಿ-ರಾಜಬಂಧುಗಳ ಸಭೆಯಲ್ಲಿ ಕೀರ್ತಿಶೇಷ ಸಾಳುವ ನರಸಿಂಹರಾಜನ ಅಪೇಕ್ಷೆ,ಅದಕ್ಕೆ ತಾವು ನೀಡಿದ್ದ ಭರವಸೆಗಳನ್ನು ವಿವರಿಸಿ ತಮ್ಮರಾಜರೇ ಸಾಮ್ರಾಟರಾಗಬೇಕು ಎಂದು ಸಲಹೆ ನೀಡಿದರು. ಆಗ ಕೆಲವರು "ತಮ್ಮರಾಜರು ಇನ್ನೂ ಬಾಲಕರು. ಮಹಾಸಾಮ್ರಾಜ್ಯವನ್ನವರು ಆಳಬಲ್ಲರೇ" ಎಂದು ಸಂದೇಹ ವ್ಯಕ್ತಪಡಿಸಿದರು.

ಶ್ರೀವ್ಯಾಸರಾಜರು "ಸಾಮ್ರಾಜ್ಯನಿಷ್ಠರಾದ ಕನ್ನಡವೀರರೇ, ನಿಮ್ಮ ಅಭಿಪ್ರಾಯ ವ್ಯಕ್ತವಾಯಿತು. ನಮಗೆ ಶ್ರೀಹರಿಯು ಪ್ರೇರಿಸಿರುವುದನ್ನು ತಿಳಿಸುತ್ತೇವೆ. ಅದು ಯುಕ್ತವಾಗಿದ್ದಲ್ಲಿ ಅದರಂತೆ ನಡೆಯಬಹುದು"ಎಂದು ಹೇಳಿದರು, ಸಕಲರೂ "ಗುರುಪಾದರೇ, ನೀವೇ ನಮಗೀಗ ದಿಕ್ಕು, ತಮ್ಮ ಅಭಿಪ್ರಾಯವನ್ನು ತಿಳಿಸಬೇಕು" ಎಂದು ಪ್ರಾರ್ಥಿಸಿದರು.

ಆಗ ವ್ಯಾಸಮುನಿಗಳು "ನರಸಿಂಹಭೂಪಾಲರ ಪುತ್ರರಾದ ತಮ್ಮರಾಜರು ಸಾಮ್ರಾಟರಾಗಿರಲಿ, ಅವರು ಪ್ರಾಪ್ತವಯಸ್ಕರಾಗಿ ಸ್ವತಃ ಸಾಮ್ರಾಜ್ಯ ನಿರ್ವಹಣೆ ಮಾಡುವ ಯೋಗ್ಯತೆ ಬರುವವರೆಗೆ ಮಹಾಪರಾಕ್ರಮಿಗಳೂ ಸಾಮ್ರಾಜ್ಯದ ಹಿತ

ಚಿಂತಕರೂ, ಮಹಾ ದಂಡನಾಯಕರೂ ಆದ ತುಳುವ ನರಸನಾಯಕರು ಸಾಮ್ರಾಜ್ಯದ ಕಾರ್ಯಕರ್ತರಾಗಿದ್ದು (ಕ್ಷಮಾಪತಿಗಳು) ಸಾಮ್ರಾಜ್ಯದ ಸಮಸ್ತ ಹೊರೆಯನ್ನು ಹೊತ್ತು ಆಡಳಿತವನ್ನು ನಿರ್ವಹಿಸಲಿ. ಇಂದಿನ ಪರಿಸ್ಥಿತಿಯಲ್ಲಿ ಇದಕ್ಕೆ ನರಸನಾಯಕರೇ ಸಮರ್ಥರು. ನೀವೆಲ್ಲರೂ ಅವರಿಗೆ ಬೆಂಬಲಿಗರಾಗಿದ್ದು ಸಾಮ್ರಾಜ್ಯದ ಹಿತವನ್ನು ಸಾಧಿಸಬೇಕು" ಎಂದು ಆಜ್ಞಾಪಿಸಿದರು.

ಗುರುಗಳ ಮಾತು ಎಲ್ಲರಿಗೂ ಸಮ್ಮತವಾಯಿತು. ಆನಂದದಿಂದ ಸರ್ವರೂ ಅದನ್ನು ಪೂರ್ಣಮನಸ್ಸಿನಿಂದ ಅನುಮೋದಿಸಿದರು. ಶ್ರೀಗಳವರು ತನ್ನ ಮೇಲೆ ತೋರಿದ ಅನುಗ್ರಹ, ನೀಡಲಿರುವ ಜವಾಬ್ದಾರಿಗಳ ಮಹತ್ವವನ್ನರಿತು ಪರಮಾನಂದ ಭರಿತನಾದ ತುಳುವ ನರಸನಾಯಕನು ಶ್ರೀವ್ಯಾಸತೀರ್ಥರಿಗೆ ನಮಸ್ಕರಿಸಿ "ಗುರುದೇವ ! ನನ್ನ ಮೇಲೆ ದೊಡ್ಡ ಹೊಣೆ ಹೊರಿಸುತ್ತಿರೋಣವಾಗಿದೆ. ತಮ್ಮ ಆಶೀರ್ವಾದ-ಉಪದೇಶದಂತೆ, ಸಾಮ್ರಾಜ್ಯನಿಷ್ಠ ಹಿತೈಷಿಗಳ ಸಲಹೆಯಂತೆ ಚಕ್ರವರ್ತಿಗಳಿಗೆ ವಿಧೇಯನಾಗಿದ್ದು ನನ್ನ ಯೋಗ್ಯತಾನುಸಾರ ಸೇವೆಸಲ್ಲಿಸುತ್ತಾ ಕನ್ನಡ ಸಾಮ್ರಾಜ್ಯದ ಅಭ್ಯುದಯವಾಗುವಂತೆ ಶ್ರಮಿಸುತ್ತೇನೆ" ಎಂದು ವಿಜ್ಞಾಪಿಸಿದನು

ಒಂದು ಶುಭಮುಹೂರ್ತದಲ್ಲಿ ತಮ್ಮರಾಯನಿಗೆ ಪಟ್ಟಾಭಿಷೇಕವಾಯಿತು. ಅವನು ಇಮ್ಮಡಿ ನರಸಿಂಹನೆಂಬ ಹೆಸರಿನಿಂದ ಕನ್ನಡ ಸಾಮ್ರಾಜ್ಯದ ಚಕ್ರವರ್ತಿಯಾದನು.

ಇಮ್ಮಡಿ ನರಸಿಂಹನು ರಾಜಗುರುಗಳಾದ ಶ್ರೀವ್ಯಾಸರಾಜರನ್ನು ದೇವೇಂದ್ರನು ತನ್ನ ಗುರುಗಳಾದ ಬೃಹಸ್ಪತ್ಯಾಚಾರ್ಯರನ್ನು ಸೇವಿಸುವಂತೆ ಅತಿ ಭಕ್ತಿಯಿಂದ ಪೂಜಿಸುತ್ತಿದ್ದನು.[1]

ಕನ್ನಡ ಸಾಮ್ರಾಜ್ಯದ ನೂತನ ಕ್ಷಮಾಪತಿಯಾದ ತುಳುವ ನರಸನಾಯಕನು ಶ್ರೀವ್ಯಾಸರಾಜರು ಮೊದಲೇ ತೀರ್ಮಾನಿಸಿ ಒಪ್ಪಿಸಿದಂತೆ, ಇಮ್ಮಡಿ ನರಸಿಂಹನು ಚಂದ್ರಗಿರಿಯಲ್ಲಿದ್ದು ರಾಜ್ಯವಾಳಲು ಎಲ್ಲ ವ್ಯವಸ್ಥೆಯನ್ನೂ ಮಾಡಿ ವಿಜಯನಗರಕ್ಕೆ ಹೊರಡಲು ಸಿದ್ಧನಾದನು.

ಅದೇ ಸಮಯಕ್ಕೆ ಶ್ರೀರಂಗದ ವೈಷ್ಣವರು, ಜಂಬುಕೇಶ್ವರದ ಶೈವರು ತಮ್ಮ ವಿವಾದ ಪರಿಹರಿಸಿ ನ್ಯಾಯದೊರಕಿಸಿಕೊಡಬೇಕೆಂದು ಚಕ್ರವರ್ತಿಯಬಳಿಗೆ ನಿಯೋಗ ಬಂದರು. ಬಹುವರ್ಷಗಳಿಂದ ಈ ವಿವಾದವು ಇದ್ದು ಸಾಮ್ರಾಜ್ಯದಲೆಲ್ಲಾ ವೈಷ್ಣವ, ಶೈವವಿವಾದ-ದ್ವೇಷಾಸೂಯೆಗಳಿಗೆ ಕಾರಣವಾಗಿದ್ದು, ಆ ವಿವಾದವನ್ನು ಪರಿಹರಿಸುವುದು ಸಾಮ್ರಾಜ್ಯದ ಹಿತದೃಷ್ಟಿಯಿಂದ ಅತ್ಯವಶ್ಯವಾದ್ದರಿಂದ ನರಸನಾಯಕನು ಚಕ್ರವರ್ತಿ-ವ್ಯಾಸರಾಜರೊಡನೆ ವಿಚಾರವಿನಿಮಯಮಾಡಿ ರಾಜಗುರುಗಳು-ಚಕ್ರವರ್ತಿ

---

[1] "ಕೋವಿದಕುಲಸೇವನಕುತೂಹಲಿನಂ ಗುರುಮಿವ ಕುಲಿಶಪಾಣಿಂ ಕ್ಷ್ಮಾಪತಿಮನ್ವಗೃಹ್ಣನ್ ।"
ಶ್ರೀವ್ಯಾಸಯೋಗಿಚರಿತಮ್. P. 53.

ಗಳೊಡನೆ ತಾನೇ ಶ್ರೀರಂಗಕ್ಕೆ ಬಂದು ಉಭಯರಿಗೂ ಸಮ್ಮತವಾಗುವ ರೀತಿಯಲ್ಲಿ ವ್ಯವಸ್ಥೆ ಮಾಡಿ ವಿವಾದವನ್ನು ಪರಿಹರಿಸುವುದಾಗಿಹೇಳಿ ನಿಯೋಗದವರನ್ನು ಕಳುಹಿಸಿದನು. ಆನಂತರ ನಾಲ್ಕಾರುದಿನಗಳಾದಮೇಲೆ ನರಸನಾಯಕನು ಚಕ್ರವರ್ತಿಗಳು ಶ್ರೀವ್ಯಾಸರಾಜಗುರುಗಳನ್ನು ಕರೆದುಕೊಂಡು ಶ್ರೀರಂಗಕ್ಕೆ ಪ್ರಯಾಣಬೆಳೆಸಿದನು.

## ೩೭. ಶ್ರೀರಂಗದ ವಿವಾದ ಪರಿಹಾರ

ಶ್ರೀರಂಗವು ದಕ್ಷಿಣಭಾರತದಲ್ಲಿ ಪ್ರಸಿದ್ಧವಾದ ಪವಿತ್ರ ಕ್ಷೇತ್ರಗಳಲ್ಲೊಂದು. ಆ ಪ್ರಾಂತ್ಯವು ಕನ್ನಡ ಸಾಮ್ರಾಜ್ಯದ ಸಾಮಂತ ರಾಜ್ಯವಾಗಿದ್ದು, ಕನ್ನಡನಾಡಿನ ಅಧಿಕಾರಕ್ಕೆ ಒಳಪಟ್ಟಿದ್ದು ಮುಂದೆ ವಿಜಯನಗರದ ಪತನವಾದ ಮೇಲೆ ಮಧುರೆಯ ದೊರೆಗಳ ಆಡಳಿತಕ್ಕೆ ಸೇರಿತ್ತು. ಅದು ಈಗ ತಮಿಳುನಾಡಿನ ಒಂದು ಭಾಗವಾಗಿದೆ. ಕನ್ನಡನಾಡಿನಲ್ಲಿ ಆವಿರ್ಭವಿಸಿ ನಾಡನ್ನು ಪಾವನಗೊಳಿಸುತ್ತಾ ಮುಂದುವರೆದು ಕಾವೇರೀ ನದಿಯು ತಮಿಳುನಾಡನ್ನು ಪವಿತ್ರಗೊಳಿಸುತ್ತಾ ಶ್ರೀರಂಗದ ಸಮೀಪದಲ್ಲಿ ಎರಡುಭಾಗವಾಗಿ ಶ್ರೀರಂಗನಾಥನನ್ನು ಮಾಲಾಕಾರವಾಗಿ ಬಳಸಿ ಮತ್ತೆ ಒಂದಾಗಿ ಹರಿದು ಸಮುದ್ರ ಸೇರುವಳು. ಇಂತು ಪವಿತ್ರ ಕಾವೇರೀ ನದಿಯಿಂದ ರಾರಾಜಿಸುವ ಶ್ರೀರಂಗ ಕ್ಷೇತ್ರದ ಶ್ರೀರಂಗನಾಥನು ತಿರುಪತಿಯ ಶ್ರೀನಿವಾಸನಂತೆ ಸಕಲಭಕ್ತರ ಆರಾಧ್ಯದೈವವಾಗಿದ್ದಾನೆ. ಶ್ರೀರಂಗವು ತಿರುಪತಿಯಂತೆ ಶ್ರೀವೈಷ್ಣವರಿಗೆ ಪ್ರಾಧಾನ್ಯವಿರುವ ಕ್ಷೇತ್ರವೆನಿಸಿದೆ. ಶ್ರೀರಂಗನಾಥನ ಆಲಯವನ್ನು ಬಳಸಿ ಅನೇಕ ಪ್ರಾಕಾರಗಳೂ, ಗೋಪುರಗಳೂ ರಾಜಿಸುತ್ತಿದ್ದು ನಯನಮನೋಹರವಾಗಿ ಎಲ್ಲ ಭಕ್ತರನ್ನೂ ಆಕರ್ಷಿಸುವುದು.

ಶ್ರೀರಂಗಕ್ಕೆ ಸುಮಾರು ನಾಲ್ಕು ಮೈಲಿ ದೂರದಲ್ಲಿ ಶ್ರೀಜಂಬುಕೇಶ್ವರ ಕ್ಷೇತ್ರವಿದೆ. ಅಲ್ಲಿ ಶ್ರೀಮಹರುದ್ರದೇವರು ವಿರಾಜಿಸುತ್ತಿದ್ದಾರೆ. ಈ ಕ್ಷೇತ್ರವೂ ಅತಿ ಪ್ರಾಚೀನವಾಗಿದ್ದು ಅಲ್ಲಿ ಶೈವರೇ ಹೆಚ್ಚಾಗಿ ನಡೆದುಕೊಳ್ಳುವುದರಿಂದ ಅದು ಶೈವ ಕ್ಷೇತ್ರವೆಂದು ಖ್ಯಾತಿಗಳಿಸಿದೆ.

ಈ ಎರಡು ಕ್ಷೇತ್ರನಿವಾಸಿಗಳೂ, ಶ್ರೀವೈಷ್ಣವ-ಶೈವಮತಿಯರೂ ಮೊದಲಿನಿಂದಲೂ ಸ್ನೇಹಸೌಹಾರ್ದಗಳಿಂದ ವರ್ತಿಸುತ್ತಾ ಶಾಂತಿಯಿಂದ ಜೀವಿಸುತ್ತಾ ತಮ್ಮ ತಮ್ಮ ಆಧ್ಯಾತ್ಮಜೀವನವು ಸುಗಮವಾಗಿ ಜರುಗುವಂತೆ ಸಾಧನೆಮಾಡಿಕೊಳ್ಳುತ್ತಿದ್ದರು. ಇಂಥ ಸ್ನೇಹಕ್ಕೆ ಕೆಲ ಕಿಡಿಗೇಡಿಗಳು ಭಂಗತಂದು, ಅವರ ಕುತಂತ್ರದಿಂದಾಗಿ ಶ್ರೀವೈಷ್ಣವ-ಶೈವಮತಿಯರಲ್ಲಿ ವಾದ-ವಿವಾದ-ವಿದ್ವೇಷದ ಹೊಗೆಯಾಡಲಾರಂಭಿಸಿ ಬರಬರುತ್ತಾ ಅದು ಮಿತಿಮೀರಿ ಪರಸ್ಪರ ಹೊಡೆದಾಟ, ಹಿಂಸೆ, ಮನೆ-ಮನೆಗಳಿಗೆ ಬೆಂಕಿಹಚ್ಚುವಷ್ಟರಮಟ್ಟವನ್ನು ತಲುಪಿ ಆ ಪ್ರಾಂತ್ಯದಲ್ಲಿ ಜನರಿಗೆ ನೆಮ್ಮದಿಯೇ ಇಲ್ಲದಂತಾಗುವ ಪರಿಸ್ಥಿಯುಂಟಾಯಿತು. ಶ್ರೀರಂಗನಾಥನ ಉತ್ಸವಕ್ಕೆ ಶೈವರೂ

ಶ್ರೀಜಂಬುಕೇಶ್ವರನ ಉತ್ಸವಕ್ಕೆ ಶ್ರೀವೈಷ್ಣವರೂ ಅಡ್ಡಿಮಾಡಹತ್ತಿದರು. ಈ ದ್ವೇಷದ ಮೂಲಕಾರಣವಿಷ್ಟೇ ; ಈ ಪ್ರಾಂತ್ಯಕ್ಕೆ "ಅತಿಪ್ರಾಚೀನ ಹಾಗೂ ಮೂಲ ಜಂಬುಕೇಶ್ವರ, ಅವನೇ ಶ್ರೀರಂಗ ಕ್ಷೇತ್ರಾಧಿಪತಿಯು. ಶ್ರೀವೈಷ್ಣವರು ಜಂಬುಕೇಶ್ವರನ ನೆಲವನ್ನು ಆಕ್ರಮಿಸಿಕೊಂಡಿದ್ದಾರೆ. ಶ್ರೀರಂಗವೆಲ್ಲಾ ಜಂಬುಕೇಶ್ವರನ ಸ್ವತ್ತಾದುದರಿಂದ ಅದೆಲ್ಲಾ ಅವನಿಗೇ ಸೇರಬೇಕು ಎಂದು ಶೈವರೂ, ಯುಗಯುಗಗಳಿಂದ ಶ್ರೀರಂಗವು ಶ್ರೀವಿಷ್ಣುಕ್ಷೇತ್ರವಾಗಿದೆ. ಈ ಕ್ಷೇತ್ರಕ್ಕೂ ಜಂಬುಕೇಶ್ವರನಿಗೂ ಸಂಬಂಧವೇ ಇಲ್ಲ, ಶೈವರು ಉಪದ್ವ್ಯಾಪತನದಿಂದ ತಮ್ಮದಲ್ಲದ ಹಕ್ಕನ್ನು ಸಾಧಿಸಲು ಶ್ರೀರಂಗನಾಥನ ಎಲ್ಲೆಯನ್ನು ಅಲ್ಲಗಳೆಯುತ್ತಿದ್ದಾರೆ.ಶ್ರೀರಂಗವೆಲ್ಲಾ ರಂಗನಾಥನ ಸ್ವತ್ತು" ಎಂದು ಶ್ರೀವೈಷ್ಣವರೂ ಬಡಿದಾಡುತ್ತಿದ್ದುದೇ ಈ ದ್ವೇಷದ ಮೂಲ.

ಹೀಗೆ ಆ ಪ್ರಾಂತ್ಯದಲ್ಲಿ ಪ್ರಾರಂಭವಾದ ಮತೀಯಕಲಹ, ವಿದ್ವೇಷಗಳು ಕ್ರಮೇಣ ಕನ್ನಡ ಸಾಮ್ರಾಜ್ಯದಲ್ಲೆಲ್ಲಾ ಹರಡಲಾರಂಭಿಸಿ, ಆಯಾ ಮತೀಯ ಅಭಿಮಾನಿಗಳು, ಆಯಾ ಪಕ್ಷಗಳನ್ನು ಸಮರ್ಥಿಸುತ್ತಾ ಬಂದದ್ದರಿಂದ ಇದೊಂದು ದೊಡ್ಡ ಸಮಸ್ಯೆಯೇ ಆಗಿ ಪರಿಣಮಿಸಿತು. ಹಿಂದೂಧರ್ಮ ಸ್ಥಾಪನೆ, ಸಕಲಮತ-ಧರ್ಮಗಳಿಗೂ ಸಮಾನಾವಕಾಶ, ಗೌರವಗಳಿದ್ದ ಕನ್ನಡ ಸಾಮ್ರಾಜ್ಯದಲ್ಲಿ ಈ ಮತೀಯ ವಿದ್ವೇಷ ಬೆಳೆಯಲಾರಂಭಿಸಿದ್ದರಿಂದ ಸರ್ವಮತಸಹಿಷ್ಣುಗಳೂ, ಎಲ್ಲಾ ಧರ್ಮಗಳಿಗೆ ಆಶ್ರಯದಾತರೂ, ರಕ್ಷಕರೂ ಆಗಿದ್ದ ವಿಜಯನಗರದ ಸಾಮ್ರಾಟರು ಈ ವಿವಾದವನ್ನು ಬಗೆಹರಿಸುವುದು ಸಾಮ್ರಾಜ್ಯದ ಹಿತದೃಷ್ಟಿಯಿಂದ ಅತ್ಯವಶ್ಯವಾಗಿದ್ದುದರಿಂದ ಇದೆಲ್ಲವನ್ನೂ ಮನಗಂಡ ಸಾಮ್ರಾಟ್, ರಾಜರುಗಳು ಹಾಗೂ ಕ್ಷಮಾಧಿಪತಿಗಳೂ ಶ್ರೀರಂಗಕ್ಕೆ ಬರಬೇಕಾಯಿತು.

ತುಳುವ ನರಸನಾಯಕನು ಶ್ರೀರಂಗಕ್ಕೆ ಬಂದಕೂಡಲೇ ಶ್ರೀರಂಗ, ಜಂಬುಕೇಶ್ವರದ ಪ್ರಮುಖ ಜನರನ್ನೂ, ಉಭಯ ದೇವಾಲಯಗಳ ಧರ್ಮದರ್ಶಿಗಳು, ಅರ್ಚಕರನ್ನೂ ಕರೆಯಿಸಿಕೊಂಡು ಅವರೊಡನೆ ಮಾತುಕತೆ ನಡೆಸಿದನು. ಅದರಿಂದ ಪ್ರಯೋಜನವಾಗದಿರಲು ಅವರೆಲ್ಲರನ್ನೂ ಕರೆದುಕೊಂಡು ಬಂದು ತಮ್ಮರಾಯ ಮತ್ತು ಶ್ರೀವ್ಯಾಸರಾಜರ ಭೇಟಿಮಾಡಿಸಿ ಎಲ್ಲ ವಿಚಾರಗಳನ್ನೂ ವಿಜ್ಞಾಪಿಸಿ "ಮಹಾ ಪ್ರಭುಗಳು,ರಾಜಗುರುಗಳು ಈ ವಿವಾದವನ್ನು ಉಭಯರಿಗೂ ಸಮಾಧಾನವಾಗುವ ರೀತಿಯಲ್ಲಿ ಪರಿಹರಿಸಬೇಕು" ಎಂದು ಕೋರಿದನು.

ಚಕ್ರವರ್ತಿಯ ಸುಮಕ್ಷ ಶ್ರೀವ್ಯಾಸರಾಜರು ಉಭಯಮತೀಯರ, ಪುರಪ್ರಮುಖರ ಅಹವಾಲನ್ನು ಸಾವಧಾನವಾಗಿ ವಿಚಾರಿಸಿ, ಎಲ್ಲರನ್ನೂ ಕುರಿತು ಹೀಗೆ ಹೇಳಿದರು—

"ಧರ್ಮಾಭಿಮಾನಿಗಳೇ, ನಿಮ್ಮೆಲ್ಲರ ಅಭಿಪ್ರಾಯವೂ ತಿಳಿಯಿತು. ನಿಮ್ಮಲ್ಲಿ ಉಂಟಾಗಿರುವ ಈ ಭಿನ್ನಾಭಿಪ್ರಾಯ-ವಾದ-ವಿವಾದಗಳಿಗೆ ಮೂಲವು ಉಭಯಕ್ಷೇತ್ರ

ಗಳ ಎಲ್ಲೆಯನ್ನು ಕುರಿತಾಗಿದೆ. ಇದು ದ್ವೈತಾದ್ವೈತ-ವಿಶಿಷ್ಟಾದ್ವೈತ ವಾದವಲ್ಲ. ಆದ್ದರಿಂದ ಇದನ್ನು ಶಾಂತರೀತಿಯಿಂದ ಪರಸ್ಪರ ಸಹಕಾರದಿಂದ ಪರಿಹರಿಸಿಕೊಳ್ಳಲು ಸಾಧ್ಯವಿದೆ. ನಿಮ್ಮ ಕಲಹವನ್ನು ಪರಿಹರಿಸಿ ಈ ಭಾಗದಲ್ಲಿ ಶಾಂತಿಸ್ಥಾಪನೆ ಮಾಡ ಲೆಂದು ಖುದ್ದಾಗಿ ಸಾರ್ವಭೌಮರೇ ಬಂದಿದ್ದಾರೆ.ಈ ಸಮಯದಲ್ಲಿ ನಿಮಗೆ ಮಾತ್ರ ವಲ್ಲ, ಸಮಗ್ರ ಹಿಂದೂಜನಾಂಗಕ್ಕೂ ನಾವು ಕೆಲ ಹಿತವಚನ ಹೇಳಬಯಸಿದ್ದೇವೆ.

ಪುಣ್ಯಭೂಮಿಯಾದ ಭಾರತ ಅನಾದಿಕಾಲದಿಂದ ಧರ್ಮಭೂಮಿಯೆನಿಸಿ ಸಕಲ ಭಾರತೀಯರಿಗೂ ಪವಿತ್ರದೇಶವಾಗಿದೆ. ಆಧ್ಯಾತ್ಮ ತಳಹದಿಯುಳ್ಳ ನಮ್ಮ ದೇಶ ಜಗತ್ತಿಗೇ ಆದರ್ಶವಾಗಿದೆ. ವಿವಿಧ ವಿದ್ಯೆಗಳು, ವೇದ, ಉಪನಿಷತ್ತು, ಪುರಾಣ. ಗೀತಾದಿಶಾಸ್ತ್ರಗಳು ನಮಗೆ ಪವಿತ್ರಗ್ರಂಥಗಳಾಗಿವೆ. ಅವೆಲ್ಲದರ ಉಪದೇಶವೂ ಭಗ ವಂತನ ಸಾಕ್ಷಾತ್ಕಾರವೇ ಆಗಿದೆ, ಸದಾಚಾರಗಳ ದ್ವಾರಾ ಆತ್ಮೋನ್ನತಿಗಾಗಿ ಸತ್ಯ-ಅಹಿಂಸೆ, ತಪಸ್ಸು ಸ್ವಾಧ್ಯಾಯ ಸದ್ಧರ್ಮಾಚರಣೆಗಳಿಂದ ಸಾಧನೆ ಮಾಡಿಕೊಂಡು ಉದ್ಧೃತರಾಗುವುದೇ ಆಗಿದೆ. ಭಾರತದಲ್ಲಿ ಅನೇಕ ಮತ-ಧರ್ಮ-ತತ್ವೋಪಾಸಕ ರಿದ್ದಾರೆ. ಇವರೆಲ್ಲರೂ ವೇದಮತಾನುಯಾಯಿಗಳಾದವರು. ಅನೇಕ ಮತಧರ್ಮ, ತತ್ವಗಳಿದ್ದರೂ ನಮ್ಮ ಪ್ರಾಚೀನರು ಸ್ನೇಹಸೌಹಾರ್ದದಿಂದ ಜೀವಿಸುತ್ತಾ ತಮ್ಮ ತಮ್ಮ ಉನ್ನತಿಗಾಗಿ ಶ್ರಮಿಸುತ್ತಾ ಬಂದು, ಭಾರತವು ಸರ್ವಧರ್ಮ ಸಹಿಷ್ಣುತೆಗೆ ಜಗತ್ತಿನಲ್ಲಿ ಖ್ಯಾತಿಪಡೆಯುವಂತೆಮಾಡಿ ಅಮರರಾಗಿದ್ದಾರೆ, ಮತ, ಧರ್ಮ. ತತ್ವ ಗಳು ನಮ್ಮಲ್ಲಿ ಅನೇಕ ಬಗೆಯಾಗಿದ್ದರೂ, ತಾತ್ವಿಕ ಭಿನ್ನಾಭಿಪ್ರಾಯಗಳಿದ್ದರೂ ಭಾರತೀಯರೆಲ್ಲರೂ ಆರ್ಯ ಹಿಂದೂ ಧರ್ಮಾಭಿಮಾನಿಗಳೇ ಆಗಿದ್ದು ಎಲ್ಲರೂ ಅವ್ರೊಂದು ಧರ್ಮವನ್ನು ನಂಬಿಬಾಳುತ್ತಿದ್ದಾರೆ. ಈ ತಾತ್ವಿಕ ಭಿನ್ನಾಭಿಪ್ರಾಯಗಳು ಎಂದೂ ಜನರ ಜೀವನಕ್ಕೆ ಅಡ್ಡಿಬಂದಿಲ್ಲ ! ಸಹಸ್ರಾರುವರ್ಷಗಳಿಂದಲೂ ವಿವಿಧ ಮತಧರ್ಮ-ತತ್ವೋಪಾಸಕರಿದ್ದರೂ ಆಸೇತು ಹಿಮಾಚಲಪರ್ಯಂತವಾಗಿ ನಮ್ಮ ದೇಶದಲ್ಲಿ ಒಂದೇ ಬಗೆಯಾದ ಸಂಸ್ಕೃತಿ, ಹಬ್ಬಹುಣ್ಣಿಮೆಗಳು ಓತಪ್ರೋತವಾಗಿ ನಡೆದುಬರುತ್ತಿರುವುದನ್ನು ನಾವು ವಿವೇಚಿಸಿದಾಗ ನಮ್ಮೀ ಧರ್ಮಭೂಮಿಯ ಮಹತ್ವ,ವೈಶಿಷ್ಟಗಳು ವ್ಯಕ್ತವಾಗದಿರದು, ನಮ್ಮ ಹಿಂದಿನವರು ಪರಸ್ಪರ ಪ್ರೇಮ, ಸಹಕಾರ ಮಾನವೀಯತೆಗಳಿಂದ ಅಣ್ಣತಮ್ಮಂದಿರಂತೆ ಬಾಳಿ ಕೀರ್ತಿಗಳಿಸಿದರು. ಅವರ ಆದರ್ಶವನ್ನು ನಾವೆಲ್ಲರೂ ಅನುಸರಿಸಿದಲ್ಲಿ ನಮ್ಮೆಲ್ಲರ ಅಭ್ಯುದಯವಾಗುವು ದರಲ್ಲಿ ಸಂದೇಹವಿಲ್ಲ. ಇಂಥ ಪವಿತ್ರನೆಲದಮಕ್ಕಳಾದ, ನೀವು ಕೇವಲ ಒಂದು ಎಲ್ಲೆ ಗಾಗಿ ಕಾದಾಡುತ್ತಿರುವುದನ್ನು ಕಂಡು ನಮಗೆ ಅಪಾರ ವೇದನೆಯಾಗುತ್ತಿದೆ.

ಹಿಂದೆ ಪರಸ್ಪರ ದ್ವೇಷ, ಅಸಹಕಾರ, ಸ್ವಾರ್ಥಗಳಿಂದಾಗಿ ಭಾರತೀಯ ಆಳ ರಸರು ಒಗ್ಗಟ್ಟನ್ನು ಕಳೆದುಕೊಂಡದ್ದರಿಂದ ವಿದೇಶಿಯರು, ವಿಧರ್ಮೀಯರು ಈ ಪವಿತ್ರನಾಡಿನಮೇಲೆ ದಾಳಿಮಾಡಿ ದೇಶವನ್ನಾಕ್ರಮಿಸಿದ್ದು ಮಾತ್ರವಲ್ಲದೆ—ನಮಗೆ

ಪವಿತ್ರವಾದ ಗುಡಿ ಗುಂಡಾರ, ಗ್ರಂಥ-ಗೋವುಗಳನ್ನು ಧ್ವಂಸಮಾಡುವಂತಾದು ದನ್ನು ನೆನಪಿಗೆ ತಂದುಕೊಳ್ಳಿರಿ! ಅಂದಿನ ಅನೈಕ್ಯಮತ್ಯದ ಫಲವಾಗಿ ಸೋಮನಾಥ, ಕಾಶಿ, ಶ್ರೀರಂಗ, ಕಂಚಿ ಮುಂತಾದ ಪವಿತ್ರ ಕ್ಷೇತ್ರಗಳು–ಭಗವದ್ವಿಗ್ರಹಗಳು ವಿಧರ್ಮೀಯರ ದಾಳಿಗೆ ತುತ್ತಾಗಬೇಕಾಯಿತು.

ನಮ್ಮ ಈ ಪವಿತ್ರ ಶ್ರೀರಂಗವನ್ನು ಯವನರು ಆಕ್ರಮಿಸಿ, ದೇವಾಲಯ, ಹಿಂದೂಜನರನ್ನು ನಾಶಮಾಡುತ್ತಿದ್ದಾಗ ನಮ್ಮ ಕನ್ನಡ ಸಾಮ್ರಾಜ್ಯಾಧೀಶರ ಅಪ್ಪಣೆ ಯಂತೆ ಕಂಪಲದೇವರು,ಗೋಪಣ್ಣನೆಂಬ ಸೈನ್ಯಾಧೀಶನನ್ನು ಸೈನ್ಯದೊಡನೆ ಕಳುಹಿಸಿ ಇಲ್ಲಿಂದ ಯವನರನ್ನು ಬಡಿದೋಡಿಸಿ, ತಿರುಪತಿಯಲ್ಲಿ ರಹಸ್ಯವಾಗಿಟ್ಟಿದ್ದ ಶ್ರೀರಂಗ ನಾಥನನ್ನು ಮತ್ತೆ ಇಲ್ಲಿಗೆ ತರಿಸಿ ಪ್ರತಿಷ್ಠಾಪನೆಮಾಡಿಸಿ, ದೇವಾಲಯಾದಿಗಳನ್ನು ಅಭಿವೃದ್ಧಿಪಡಿಸಿ ಈ ಮಹಾಕ್ಷೇತ್ರವನ್ನು ಉಳಿಸಿಕೊಟ್ಟಿದ್ದನ್ನು ಜ್ಞಾಪಿಸಿಕೊಳ್ಳಿರಿ ! ನಿಮ್ಮ ಈ ಪರಸ್ಪರ ಕಲಹ, ಬಡಿದಾಟ-ವಿದ್ವೇಷಗಳಿಂದ ಮತ್ತೊಮ್ಮೆ ಈ ಕ್ಷೇತ್ರವು ವಿಧಿವಿರ್ಮೀಯರ ದಾಳಿಗೆ ತುತ್ತಾಗುವಂತೆ ಮಾಡಬೇಡಿರಿ. ಸಾಮ್ರಾಜ್ಯದಲ್ಲಿ ಪ್ರಜೆಗಳು ಪರಸ್ಪರ ಸ್ನೇಹ, ಸಹಕಾರದಿಂದ ಬಾಳದೆ ವಿದ್ವೇಷದ ಅಗ್ನಿಜ್ವಾಲೆ ವಿಜೃಂಭಿಸಿದರೆ ಸಾಮ್ರಾಜ್ಯ ನಿರ್ವಹಣೆ ಕಷ್ಟವಾಗುವುದು, ಮಾತ್ರವಲ್ಲ:ಸಾಮ್ರಾಜ್ಯ ಶತ್ರುಗಳಾದ ವಿಧರ್ಮೀಯರಿಗೆ ಅದು ಅನುಕೂಲ ಪರಿಸ್ಥಿತಿಯಾಗಿ ಮಾರ್ಪಟ್ಟು ಸಾಮ್ರಾಜ್ಯದ ಮೇಲೆ ದಾಳಿಮಾಡಲು ಸಹಾಯಕವಾಗಬಹುದು. ಆದ್ದರಿಂದ ಸಮಗ್ರ ಸಾಮ್ರಾಜ್ಯದ ಮತ್ತು ಭಾರತದೇಶದ ಹಿತದೃಷ್ಟಿಯಿಂದ ನೀವು ಶ್ರೀವೈಷ್ಣವ-ಶೈವಪಂಥೀಯರಾಗಿ ದ್ದರೂ, ನಿಮ್ಮ ಎಲ್ಲ ದ್ವೇಷ,ಭಿನ್ನಾಭಿಪ್ರಾಯಗಳನ್ನೂ ತ್ಯಜಿಸಿ ಸ್ನೇಹ-ಸೌಹಾರ್ದ್ರ ಸಹಕಾರ-ತ್ಯಾಗಗಳಿಂದ ಅಣ್ಣ ತಮ್ಮಂದಿರಂತೆ ಬಾಳಿ ಎಲ್ಲರಿಗೂ ಮಾರ್ಗದರ್ಶಕರಾಗ ಬೇಕೆಂದು ನಾವು ಅಪೇಕ್ಷಿಸುತ್ತೇವೆ" ಎಂದು ಅಪ್ಪಣೆಕೊಡಿಸಿದರು.

ಶ್ರೀಯವರ ಉಪದೇಶ ಎಲ್ಲರ ಮೇಲೆಯೂ ವಿಶೇಷ ಪರಿಣಾಮವನ್ನುಂಟು ಮಾಡಿತು. ತಾವು ಒಂದು ಸಣ್ಣ ವಿಚಾರಕ್ಕಾಗಿ ಹೀಗೆ ಬಡಿದಾಡುವುದು ಸರಿಯಲ್ಲ ವೆನಿಸಿದರೂ ಯಾರೂ ಸೋಲಲು ಮುಂದಾಗಲಿಲ್ಲ. ಈ ವಿದ್ವೇಷವು ಪರಿಹಾರವಾಗ ಬೇಕೆಂದು ಉಭಯ ಪಕ್ಷದವರಿಗೆ ಇಷ್ಟವಿದೆಯೆಂಬುದು ಅವರ ಮುಖಭಾವದಿಂದ ವ್ಯಕ್ತವಾಯಿತು. ಆದರೆ ಯಾರಿಗೂ ಪರಿಹಾರಮಾರ್ಗ ಗೋಚರಿಸಲಿಲ್ಲ. ಉಭಯ ಪಕ್ಷಗಳ ಪರವಾಗಿ ನಾಲ್ಕಾರು ಜನ ಮುಂದೆಬಂದು "ಗುರುವರ್ಯರೇ, ತಮ್ಮ ಉಪ ದೇಶದಿಂದ ಧನ್ಯರಾದೆವು. ತಾವು ಮಹಾತ್ಮರು, ಎಲ್ಲರ ಹಿತವನ್ನೂ ಬಯಸುವ ಮಹಾನುಭಾವರು. ಉಭಯ ಪಕ್ಷದವರಿಗೂ ಸಮ್ಮತವಾಗುವಂತೆ ತಾವೇ ಒಂದು ದಾರಿಯನ್ನು ತೋರಿಸಿ ಅನುಗ್ರಹಿಸಬೇಕು" ಎಂದು ಬಿನ್ನವಿಸಿದರು.

ಶ್ರೀವ್ಯಾಸರಾಜರು ನಗುಮುಖದಿಂದ "ಧರ್ಮಾಭಿಮಾನಿಗಳೇ, ನಮ್ಮ ಮೇಲೆ ಬಹಳ ದೊಡ್ಡ ಹೊಣೆಯನ್ನು ಹೊರೆಸುತ್ತಿರುವಿರಿ. ನಾವು ವಿಷ್ಣುಭಕ್ತರಾದರೂ

ನಮಗೆ ಶೈವ-ಶ್ರೀವೈಷ್ಣವರಾದ ನೀವೀರ್ವರೂ ಸಮಾನರು. ನಿಮ್ಮ ವಿವಾದ ಪರಿಹಾರವಾಗಲು ನಮಗೊಂದು ದಾರಿತೋಚುತ್ತಿದೆ. ನಾವು ಸೂಚಿಸುವ ಮಾರ್ಗ ದಿಂದ ನಿಮ್ಮಿಬ್ಬರ ವೈಷಮ್ಯ ಪರಿಹಾರವಾಗಬಹುದೆಂದು ನಮಗನಿಸುವುದು. ಕೇಳಿ, ನಾವು ಶ್ರೀವಿಷ್ಣುಭಕ್ತರಾದರೂ, ವಿಷ್ಣುಪಾರಮ್ಯವಾದಿಗಳಾದರೂ ಶ್ರೀರುದ್ರದೇವ ರನ್ನು ತೆಗಳುವವರಲ್ಲ. ನಮ್ಮ ಸಿದ್ಧಾಂತದಲ್ಲಿ ಶ್ರೀರುದ್ರದೇವರನ್ನು ಭಾಗವತಾಗ್ರಣಿ ಗಳೆಂದು, ಮನೋಭಿಮಾನಿಗಳೆಂದೂ ಗೌರವಿಸುತ್ತೇವೆ, ಪೂಜಿಸುತ್ತೇವೆ. ಜಗ ಜ್ಜನ್ಮಾದಿಕಾರಣನೂ ಸರ್ವಸ್ವತಂತ್ರನೂ, ಕಲ್ಯಾಣಗುಣಪೂರ್ಣನೂ ದೋಷ ದೂರನೂ, ಸರ್ವದೇವತಾವಂದ್ಯನೂ ಆದವನು ಸರ್ವೋತ್ತಮ ದೇವತೆ ಶ್ರೀಹರಿ ಯೊಬ್ಬನೇ. ಅವನು ಸರ್ವನಾಮಗಳಿಂದ ಪ್ರತಿಪಾದ್ಯನು, ನಾರಾಯಣ, ಶಿವ-ಬ್ರಹ್ಮ-ಇಂದ್ರ ಮುಂತಾದನಾಮಗಳಿಂದ ಪ್ರಮುಖವೃತ್ತಿಯಿಂದಪ್ರತಿಪಾದ್ಯನವನು. ಬೇರೆ ಬೇರೆ ಹೆಸರಿನಿಂದ ಆಯಾ ದೇವತೆಗಳ ನಿಯಾಮಕನಾಗಿ, ಅಂತರ್ಗತನಾಗಿದ್ದು ಅವರವರಿಗೆ ಆ ಆ ನಾಮಗಳನ್ನು ಕರುಣಿಸಿ ಅವರಿಂದ ಕಾರ್ಯಮಾಡಿಸುವನೆಂದು ವೇದಾದಿಶಾಸ್ತ್ರಗಳು ಸಾರುತ್ತಿವೆ.[1] ಅಂತೆಯೇ ನಾವು ಶ್ರೀಹರಿಯನ್ನು ಸರ್ವೋತ್ತಮ ದೇವತೆಯೆಂದು ಆರಾಧಿಸುತ್ತೇವೆ. ನಾವು ಶ್ರೀಹರಿಭಕ್ತರಾದರೂ ಇಲ್ಲಿ ನಾವು ಯಾರ ಪಕ್ಷಪಾತಿಗಳೂ ಅಲ್ಲ. ನಮಗೆ ಶೈವ-ಶ್ರೀವೈಷ್ಣವರೆಲ್ಲರೂ ಬೇಕಾದವರೇ. ನಾವು ನಿಷ್ಪಕ್ಷಪಾತವಾಗಿ ಒಂದು ಸೂಚನೆಯನ್ನು ನಿಮ್ಮ ಮುಂದೆ ಮಂಡಿಸುತ್ತೇವೆ.ಸನ್ಯಾಸಿ ಗಳೂ, ವಿರಕ್ತರೂ ಆದ ನಮಗೆ ಅಖಂಡಭಾರತದ ಅಷ್ಟೇ ಏಕೆ? ಸಮಸ್ತ ವಿಶ್ವದ ಕಲ್ಯಾಣ-ಅಭ್ಯುದಯ ಶ್ರೇಯಸ್ಸುಗಳೇ ಗುರಿ,ನಮ್ಮ ಮಾತು ನಿಮಗೆ ಒಪ್ಪಿಗೆಯಾ ದಲ್ಲಿ ಮುಂದಿನ ಮಾರ್ಗ ಸುಗಮ. ಕೇಳಿ, ಶ್ರೀರಂಗನಾಥಕ್ಷೇತ್ರ ಶ್ರೀಜಂಬುಕೇಶ್ವರ ಕ್ಷೇತ್ರಗಳ ಎಲ್ಲೆ ಯಾವುದು ? ಇದೇ ಈಗ ನಿರ್ಣಯವಾಗಬೇಕಾಗಿರುವ ಪ್ರಶ್ನೆ ! ಇದಕ್ಕೆ ಒಂದು ಮಾರ್ಗವಿದೆ— ಅದೆಂದರೆ ಶ್ರೀರಂಗ ಅಥವಾ ಶ್ರೀಜಂಬುಕೇಶ್ವರ ದೇವಾಲಯದ ಧ್ವಜಸ್ತಂಭದಿಂದ ಯಾರಾದರೊಬ್ಬರು ಶ್ವಾಸನಿರೋಧಮಾಡಿ ಓಡ ಬೇಕು. ಎಲ್ಲಿ ಉಸಿರುಬಿಡುತ್ತಾರೋ ಅಲ್ಲಿಯವರೆಗೆ ಆ ಕ್ಷೇತ್ರದ ಸೀಮೆ (ಎಲ್ಲೆ) ಎಂದು ತಿಳಿಯತಕ್ಕದ್ದು. ಇದೊಂದೇ ಸರಿಯಾದ ಮಾರ್ಗವೆಂದು ನಾವು ಭಾವಿಸಿ ದ್ದೇವೆ. ಈಗ ಹೇಳಿ ಇದು ನಿಮಗೆ ಸಮ್ಮತವೇ ?" ಎಂದು ಪ್ರಶ್ನಿಸಿದರು.

ಆಗ ಸರ್ವರೂ ಕರತಾಡನದಿಂದ ಗುರುಗಳ ಸೂಚನೆಯನ್ನು ಸ್ವಾಗತಿಸಿ "ಶ್ರೀಯವರ ಸೂಚನೆ ನಮಗೆ ಮಾನ್ಯವಾಗಿದೆ. ಆಗಬಹುದು" ಎಂದು ಒಪ್ಪಿಗೆ ಸೂಚಿಸಿದರು. ಆಗ ಶ್ರೀಗಳವರು ಸಂತುಷ್ಟರಾಗಿ "ಸಂತೋಷ, ಹಾಗಾದರೆ ನಾವು ಹೇಳಿದ ನಿಯಮದಂತೆ ಓಡಲು ಯಾರು ಸಿದ್ಧರಾಗಿರುವಿರಿ ? ಮುಂದೆ ಬನ್ನಿ"

---

1) "ನಾಮಾನಿ ಸರ್ವಾಣಿ ಯಮಾವಿಶಂತಿ ತಂ ವೈ ವಿಷ್ಣುಂ ಪರಮಮುದಾಹರಂತಿ" — ಶ್ರುತಿ
"ವೇದೈಶ್ಚ ಸರ್ವೈಃ ಅಹಮೇವ ವೇದ್ಯಃ" —ಗೀತಾ

ಎಂದೆನ್ನಲು ಯಾರೂ ಮುಂದಾಗಲು ಧೈರ್ಯತೋರಲಿಲ್ಲ. ಶ್ರೀರಂಗ-ಜಂಬುಕೇಶ್ವರಗಳಿಗೆ ನಾಲ್ಕು ಮೈಲು ಅಂತರವಿದ್ದುದರಿಂದ ಬಹುಶಃ ತಾವು ಉಸಿರುಕಟ್ಟಿ ಹೆಚ್ಚು ದೂರ ಓಡಲಾಗದಿದ್ದಲ್ಲಿ ತಮ್ಮ ಅಸಮರ್ಥತೆಯಿಂದ ತಮ್ಮ ಕ್ಷೇತ್ರದ ಎಲ್ಲೆಗೆ ಭಂಗ ಬರಬಾರದು. ಅದು ಕಡಿಮೆಯಾಗುವುದೇನೋ ಎಂಬ ಭಯವೇ ಅವರು ಮುಂದೆ ಬರದಿರಲು ಕಾಣವಾಗಿತ್ತು.

ಶ್ರೀಯವರ ಆಹ್ವಾನವನ್ನು ಮನ್ನಿಸಿ ಯಾರೂ ಮುಂದಾಗದಿದ್ದರಿಂದ ಸ್ವಲ್ಪ ಕುಪಿತನಾದ ನರಸನಾಯಕನು "ನೀವೆಂಥ ಭಕ್ತರು? ನಿಮ್ಮ ಕ್ಷೇತ್ರದ ಎಲ್ಲೆಯನ್ನು ನಿರ್ಣಯಿಸಲು ಗುರುಗಳು ಸುಲಭೋಪಾಯವನ್ನು ತೋರಿದರೂ ಅದನ್ನು ಕಾರ್ಯರೂಪಕ್ಕೆ ತರಲು ಮುಂದಾಗುತ್ತಿಲ್ಲವಲ್ಲ ! ಹೂಂ, ನೀವು ಮುಂದೆ ಬರದಿದ್ದರೆ . " ಎನ್ನುತ್ತಿರುವಾಗಲೇ ತಮ್ಮರಾಯರು ಮಧ್ಯೆ ಬಾಯಿಹಾಕಿ "ಆಗ ನಾವು ನಿರ್ವಾಹವಿಲ್ಲದೆ ನಮಗೆ ಸೂಕ್ತಕಂಡಂತೆ ನಿರ್ಣಯಕೊಡಬೇಕಾದೀತು ! ಅದಕ್ಕೆ ಸರ್ವರೂ ಒಪ್ಪತಕ್ಕದ್ದು. ಅದನ್ನು ವಿರೋಧಿಸಿದವರು-ಉಲ್ಲಂಘಿಸಿದವರು ಶಿಕ್ಷಾರ್ಹರಾಗುತ್ತಾರೆ. ಎಚ್ಚರ!" ಎಂದು ಹೇಳಲು ಸರ್ವರೂ ಭಯಗ್ರಸ್ಥರಾದರು.

ಶ್ರೀವ್ಯಾಸರಾಜರು ಮಂದಹಾಸಬೀರುತ್ತಾ "ಮಹಾಪ್ರಭುಗಳು ಕುಪಿತರಾಗಬಾರದು. ಇವರೆಲ್ಲರೂ ದೈವಭಕ್ತರು, ಧರ್ಮಿಷ್ಠರು, ಅವರ ಮನದ ಆಂದೋಳನವನ್ನು ನಾವು ಗ್ರಹಿಸಿದ್ದೇವೆ" ಎಂದೆನ್ನಲು ಸಕಲರೂ ಗುರುಗಳ ಪ್ರಶಾಂತ ಮನಸ್ಸು, ಉದಾರಹೃದಯಗಳನ್ನರಿತು ಆನಂದಿಸುತ್ತಾ "ಮಹಾಪ್ರಭು! ಗುರುಗಳು ಸತ್ಯವನ್ನೇ ನುಡಿದಿದ್ದಾರೆ. ಅವರು ಜ್ಞಾನಿಗಳು, ಸರ್ವಜನ ಹಿತೇಚ್ಛುಗಳು. ನಮ್ಮೆಲ್ಲರ ಕ್ಷೇಮಾಭ್ಯುದಯವೇ ಅವರ ಗುರಿ ಎಂಬುದನ್ನು ನಾವೀಗ ಅರಿತೆವು. ಆ ಮಹನೀಯರೇ ನಮಗೆ ಮಾರ್ಗದರ್ಶನ ಮಾಡಿ ಅನುಗ್ರಹಿಸಬೇಕೆಂದು ಬೇಡುತ್ತೇವೆ" ಎಂದರುಹಿರಿಯರು.

ಜನರ ಮಾತನ್ನಾಲಿಸಿ ತಮ್ಮರಾಯ ಮತ್ತು ನಾಯಕರು "ಗುರುದೇವ, ತಾವೇ ಈ ವಿವಾದವನ್ನು ಪರಿಹರಿಸಿ ಜನರಲ್ಲಿ ಶಾಂತಿ ಸೌಹಾರ್ದಗಳನ್ನು ಒಡಮೂಡಿಸಬೇಕು" ಎಂದು ಸಂತಸದಿಂದ ವಿಜ್ಞಾಪಿಸಿದರು.

ಶ್ರೀವ್ಯಾಸಮುನಿಗಳು ಹಸನ್ಮುಖಿಗಳಾಗಿ "ಆಸ್ತಿಕರೇ, ನೀವು ನಮ್ಮ ಮಾತನ್ನು ಸಾವಧಾನವಾಗಿ ಆಲಿಸಿರಿ. ನಿಮ್ಮೆಲ್ಲರ ಹಿತಚಿಂತಕರಾದ ನಾವೇ ಶ್ವಾಸನಿರೋಧಿಸಿ ಓಡಲು ಸಿದ್ಧರಾಗಿದ್ದೇವೆ. ನಮ್ಮಲ್ಲಿ ನಿಮಗೆ ನಂಬಿಕೆಯಿದ್ದಲ್ಲಿ ಉಭಯಪಕ್ಷದವರೂ ಇದಕ್ಕೆ ಒಪ್ಪಬೇಕು. ಅಂದರೆ ನಾವು ಓಡಲು ಸಿದ್ಧರಾಗಿರುತ್ತೇವೆ. ನಿಸ್ಸಂಕೋಚವಾಗಿ ನಿಮ್ಮ ಅಭಿಮತ ತಿಳಿಸಿರಿ" ಎಂದರು.

ಗುರುಗಳ ಮಾತುಕೇಳಿ ಎಲ್ಲರಿಗೂ ಆನಂದ-ಆಶ್ಚರ್ಯಗಳಾದವು.ಉತ್ಸಾಹದಿಂದ ಒಕ್ಕೊರಲಿನಿಂದ "ಮಹಾಸ್ವಾಮಿ, ನಿಮ್ಮಲ್ಲಿ ನಮಗೆ ಸಂಪೂರ್ಣ ನಂಬಿಕೆಯಿದೆ, ವಿಶ್ವಾಸವಿದೆ. ತಾವೇ ಈ ಕಾರ್ಯವನ್ನು ಯಶಸ್ವಿಯಾಗಿಮಾಡಿ ನಮ್ಮ ವಿವಾದವನ್ನು ಬಗೆಹರಿಸಿ ಅನುಗ್ರಹಿಸಿರಿ" ಎಂದು ಬೇಡಿದರು.

ಆಗ ವ್ಯಾಸರಾಜರು "ಸಂತೋಷ. ನಾವು ಈಗ ಶ್ರೀರಂಗನಾಥನ ಸನ್ನಿಧಿಯಲ್ಲಿದ್ದೇವೆ. ಆದ್ದರಿಂದ ಶ್ರೀರಂಗನಾಥನ ಗುಡಿಯ ಧ್ವಜಸ್ತಂಭದ ಸಮೀಪದಿಂದಲೇ ನಾವು ಶ್ವಾಸವನ್ನು ನಿರೋಧಿಸಿ ಓಡತೊಡಗುತ್ತೇವೆ. ಉಭಯಪಕ್ಷಕ್ಕೂ ಸಂಬಂಧವಿಲ್ಲದ ನಾಲ್ವರು ಮಧ್ಯಸ್ಥಗಾರರು ನಮ್ಮೊಡನೆ ಓಡಿಬರಲಿ. ನಾವು ಎಲ್ಲಿ ಉಸಿರು ಬಿಟ್ಟು ನಿಲ್ಲುತ್ತೇವೆಯೋ ಅದನ್ನವರು ಪ್ರಾಮಾಣಿಕವಾಗಿ ಹೇಳಲಿ. ನಾವು ಉಸಿರು ಬಿಟ್ಟಲ್ಲಿಯೇ ನಿಂತುಬಿಡುತ್ತೇವೆ. ನಾವು ಎಲ್ಲಿ ನಿಲ್ಲುವೆವೋ ಅಲ್ಲಿಯವರೆಗೆ ಶ್ರೀರಂಗನಾಥ ಕ್ಷೇತ್ರದ ಎಲ್ಲೆ ಎಂದು ತಿಳಿಯತಕ್ಕದ್ದು. ಅಲ್ಲಿಂದ ಮುಂದಿನಭಾಗ ಶ್ರೀಜಂಬುಕೇಶ್ವರ ಕ್ಷೇತ್ರದ ಎಲ್ಲೆ ಎಂದು ತಿಳಿಯಬೇಕು. ಇದಕ್ಕೆ ನೀವೆಲ್ಲರೂ ಒಪ್ಪುವಿರಾ?" ಎಂದು ಕೇಳಿದಾಗ ಸರ್ವರೂ ಸಂತೋಷದಿಂದ ಹೃತ್ಪೂರ್ವಕವಾಗಿ ಗುರುಗಳ ನಿಬಂಧನೆಗೆ ಒಪ್ಪಿರುವುದಾಗಿ ಅರುಹಿದರು.

ಯೋಗಸಿದ್ಧಿಪಡೆದ ಮಹಾತ್ಮರಾದ ಶ್ರೀವ್ಯಾಸತೀರ್ಥರು ಶ್ರೀರಂಗನಾಥನ ಧ್ವಜಸ್ತಂಭದ ಹತ್ತಿರ ಬಂದು ಶ್ವಾಸನಿರೋಧಮಾಡಿ ಓಡಲು ಪ್ರಾರಂಭಿಸಿದರು. ಮಧ್ಯಸ್ಥರೂ ಅವರನ್ನು ಅನುಸರಿಸಿದರು. ನೂರಾರು ಭಕ್ತಜನರು ಗುರಗಳು ಹೇಗೆ, ಎಲ್ಲಿಯವರೆಗೆ ಓಡುವರೋ ನೋಡಬೇಕೆಂದು ಉತ್ಸಾಹದಿಂದ ತಾವೂ ಗುರುಗಳನ್ನು ಹಿಂಬಾಲಿಸಿ ಓಡಲಾರಂಭಿಸಿದರು !

ಶ್ರೀವ್ಯಾಸರಾಜರು ಓಡತೊಡಗಿದರು, ಓಡುತ್ತಲೇ ಇದ್ದಾರೆ, ಒಂದುಮೈಲು ಪ್ರದೇಶವನ್ನು ದಾಟಿದರು. ಎರಡುಮೈಲಿಗಳಾದವು. ಶ್ರೀಗಳವರು ಇನ್ನೂ ಓಡುತ್ತಲೇ ಇದ್ದಾರೆ! ಕೊನೆಗೆ ಶ್ರೀವ್ಯಾಸರಾಜರು ಮೂರುಮೈಲಿ ದೂರ ಓಡಿ ಒಂದು ಮರದಕೆಳಗೆ ಉಸಿರಾಡಲು ನಿಂತುಬಿಟ್ಟರು! ಶ್ರೀಯವರನ್ನು ಹಿಂಬಾಲಿಸಿದ್ದ ಮಧ್ಯಸ್ಥರು, ಧಾರ್ಮಿಕರೂ ಬಂದುಸೇರಿದರು. ಮಧ್ಯಸ್ಥರು "ಗುರುಗಳು ಇಲ್ಲಿಯವರೆಗೆ ಅಂದರೆ ಧ್ವಜಸ್ತಂಭದದಿಂದ ಮೂರುಮೈಲಿಯವರೆಗೆ ಶ್ವಾಸನಿರೋಧಿಸಿ ಓಡಿದ್ದಾರೆ" ಎಂದು ಘೋಷಿಸಿದರು. ಜನರು "ಶ್ರೀವ್ಯಾಸರಾಜಗುರುಗಳಿಗೆ ಜಯವಾಗಲಿ" ಎಂದು ಜಯಘೋಷಮಾಡಿದರು.

ಶ್ರೀವ್ಯಾಸಮುನಿಗಳು ನಗೆಮೊಗದಿಂದ "ಆಸ್ತಿಕರೇ ! ಇಂದಿನಿಂದ ಶ್ರೀರಂಗನಾಥಕ್ಷೇತ್ರದ ಗಡಿ ಈ ಸ್ಥಳವಾಗಿದೆ! ಇಲ್ಲಿಂದ ಮುಂದಿನಭಾಗ ಶ್ರೀಜಂಬುಕೇಶ್ವರ ಕ್ಷೇತ್ರದ ಗಡಿ ಎಂದು ತಿಳಿಯಿರಿ. ಇದಕ್ಕೆ ಉಭಯಪಕ್ಷದವರೂ ಬದ್ಧರಾಗಿರತಕ್ಕದ್ದು. ಮತ್ತು ಮುಂದೆ ಅಣ್ಣತಮ್ಮಂದಿರಂತೆ ಪ್ರೀತಿವಿಶ್ವಾಸಗಳಿಂದ ವರ್ತಿಸುತ್ತಾ ಉಭಯ ಕ್ಷೇತ್ರಗಳ ಉತ್ಸವಾದಿಗಳಲ್ಲಿ ಪಾಲ್ಗೊಂಡು ಐಕ್ಯಮತ್ಯದಿಂದಧರ್ಮನಿರತರಾಗಿ ಭಗವದ್ಭಕ್ತರಿಗೆ ಆದರ್ಶರಾಗಿ ಬಾಳಬೇಕು. ನಿಮಗೆಲ್ಲರಿಗೂ ಮಂಗಳವಾಗಲಿ" ಎಂದು ಹಾರೈಸಿದರು.

ಗುರುಗಳ ಉಪದೇಶ-ಅವರ ಅನುಗ್ರಹಗಳಿಂದ ಸಂತುಷ್ಟರಾದ ಉಭಯಮತೀಯರೂ ಶ್ರೀಯವರ ಅಪ್ಪಣೆಗೆ ತಲೆಬಾಗಿದರು. ಆಗಲೇ ಶ್ರೀಗಳವರು ಕನ್ನಡ ಸಾಮ್ರಾಜ್ಯಾಧೀಶರು ಹಾಗೂ ಕಾರ್ಯಕರ್ತರ ಮತ್ತು ಸಕಲ ರಸಮುಕ್ಷ ಉಭಯ ಪಕ್ಷದವರಿಗೆ ಸಂಧಿಮಾಡಿಸಿ ಅದರಂತೆ ಕಾಗದಪತ್ರ ಮಾಡಿಸಿದರು. ಅನವಶ್ಯಕವಾಗಿ ಅನೇಕ ವರ್ಷಗಳಿಂದ ಬೆಳೆದು ವಿಕೋಪಕ್ಕೆಹೋಗಿದ್ದ ಭಿನ್ನಾಭಿಪ್ರಾಯ-ವಿದ್ವೇಷಗಳನ್ನು ಪರಿಹರಿಸಿ ಎಲ್ಲರೂ ಶಾಂತಿಸಮಾಧಾನಗಳಿಂದ ಬಾಳುವಂತೆಮಾಡಿದ ಶ್ರೀಗಳವರನ್ನು ಎಲ್ಲರೂ ಮುಕ್ತಕಂಠದಿಂದ ಸ್ತುತಿಸಿದರು.

ಹೀಗೆ ಶ್ರೀವ್ಯಾಸರಾಜರು ವಿವಾದವನ್ನು ಪರಿಹರಿಸಿದ್ದರಿಂದ ಚಕ್ರವರ್ತಿಗೂ, ನರಸನಾಯಕನಿಗೂ. ಅಪಾರ ಆನಂದವಾಯಿತು. ಇದರಿಂದ ಧರ್ಮಸಾಮ್ರಾಜ್ಯವೆಂದು ಖ್ಯಾತಿಗಳಿಸಿದ್ದ ವಿಜಯನಗರ ಸಾಮ್ರಾಜ್ಯಕ್ಕೂ; ಶ್ರೀಗಳವರು, ಚಕ್ರವರ್ತಿ. ನರಸನಾಯಕರಿಗೂ "ಸಕಲಧರ್ಮಸಂರಕ್ಷಕ"ರೆಂಬ ಕೀರ್ತಿಯುಂಟಾಯಿತು.[1]

ಜಂಬುಕೇಶ್ವರ-ಶ್ರೀರಂಗಕ್ಷೇತ್ರದ ಧರ್ಮದರ್ಶಿಗಳು, ಅರ್ಚಕರು, ಪುರನಿವಾಸಿಗಳು ಶ್ರೀವ್ಯಾಸರಾಜರನ್ನು ಆನೆಯಮೇಲೆ ಅಂಬಾರಿಯಲ್ಲಿ ಭೇರೀತಾಡನ, ವಾದ್ಯ ವೈಭವ, ಪೂರ್ಣಕುಂಭ ವೇದಘೋಷಗಳೊಡನೆ ಕರೆದೊಯ್ದು ದೇವರ ದರ್ಶನ ಮಾಡಿಸಿದರು. ಶ್ರೀವ್ಯಾಸರಾಜರು ಶ್ರೀರಂಗನಾಥನ ದರ್ಶನಮಾಡಿ ಭಕ್ತಿಯಿಂದ ನಮಸ್ಕರಿಸಿದರು.[2] ಉಭಯದೇವಾಲಯದವರೂ ಅಸಾಧಾರಣ ಮರ್ಯಾದೆಗಳನ್ನು ಗುರುಗಳಿಗೆ ಸಮರ್ಪಿಸಿ ಗೌರವಿಸಿದರು.[3]

ಶ್ರೀವ್ಯಾಸರಾಜರು ತಾವು ಉಸಿರುಬಿಟ್ಟು ನಿಂತಸ್ಥಳದಲ್ಲಿ ಉಭಯಕ್ಷೇತ್ರಗಳ ಗಡಿಗಳ ಸೂಚಕವಾಗಿ ಶ್ರೀಪ್ರಾಣದೇವರನ್ನು ಪ್ರತಿಷ್ಠಾಪಿಸಿ ಪೂಜಾರಾಧನೆಯು ಜರಗುವಂತೆ ವ್ಯವಸ್ಥೆ ಮಾಡಿದರು. ಈಗಲೂ ಆ ದೇವರು "ಎಲ್ಲೆ ಆಂಜನೇಯ"ನೆಂಬ ಹೆಸರಿನಿಂದ ಪೂಜೆಗೊಳ್ಳುತ್ತಿದ್ದಾನೆ!

ಇದರಂತೆಯೇ ಮುಂದೆ ಶ್ರೀವ್ಯಾಸರಾಜರು ಶ್ರೀರಂಗನಾಥದೇವರಗುಡಿಯ ಒಳಪ್ರಕಾರದಲ್ಲಿ ಒಂದು ಮಠವನ್ನೂ, ಶ್ರೀಪ್ರಾಣದೇವರಗುಡಿಯನ್ನೂ ಕಟ್ಟಿಸಿ ಸಕ್ರಮವಾಗಿ ಪೂಜಾರಾಧನೆ ನಡೆಯುವಂತೆ ವ್ಯವಸ್ಥೆ ಮಾಡಿದರು.

---

1. "ತತ್ಸರ್ವಂ ವೈಷ್ಣವಂ ಸ್ಥಾನಂ ಕೃತ್ವಾಥ ಮುನಿಶೇಖರಃ ।

2. ಅಥೋ ಜಗನ್ಮಂಗಲಮಂಗಲಾಂಗಂ ಪವಾ ಸಮುದ್ದೀಪವಪುರೋತ್ತಮಾಂಗಂ ।
ಭಂಗೀಕೃತಾಶೇಷಜನಾಘಸಂಘಂ ನನಾಮ ಭಕ್ತ್ಯಾ ಶಿರಸಾ ಸ ರಂಗಮ್ ॥

3. ಶ್ರೀರಂಗದರ್ಶನಾರ್ಥಂ ತು ಭೇರೀತಾಡನಪೂರ್ವಕೈಃ ।
ಛತ್ರಚಾಮರಸಂಘೈಶ್ಚ ವೇದಘೋಷಾದಿಭಿಸ್ತಥಾ ।
ವಿಭವೈರ್ಬಹುಭಿರ್ಯುಕ್ತೋ ಯಯೌ ದೇವಾಲಯಾಂತಿಕಮ್ ॥"

ಶ್ರೀರಂಗ ಮತ್ತು ಜಂಬುಕೇಶ್ವರ ಕ್ಷೇತ್ರವಾಸಿಗಳ ಪ್ರಾರ್ಥನೆಯಂತೆ ಶ್ರೀವ್ಯಾಸರಾಜ ಗುರುಗಳು ತಿಮ್ಮರಾಯ - ನರಸನಾಯಕರೊಡನೆ ಕೆಲದಿನಗಳು ಅಲ್ಲಿದ್ದು ಪ್ರತಿದಿನ ಕಾವೇರೀಸ್ನಾನ, ಅನ್ಹಿಕ-ಜಪತಪಾದ್ಯನುಷ್ಠಾನ, ದೇವರದರ್ಶನ, ಮಹಾಸಂಸ್ಥಾನಪೂಜೆ, ತೀರ್ಥಪ್ರಸಾದವಿನಿಯೋಗಾದಿಗಳನ್ನು ಮಾಡುತ್ತಾ ಪ್ರತಿದಿನ ತತ್ವ ಧರ್ಮೋಪದೇಶಗಳಿಂದ ಆಸ್ತಿಕಜನರನ್ನು ಸಂತೋಷಗೊಳಿಸಿದರು. ಆ ತರುವಾಯ ಸಾರ್ವಭೌಮ ಮತ್ತು ನರಸನಾಯಕರೊಡನೆ ಹೊರಟು ಚಂದ್ರಗಿರಿಗೆ ಬಂದರು. ನರಸನಾಯಕನು ಮಹಾಪ್ರಭುಗಳ ಮತ್ತು ರಾಜಗುರುಗಳ ವಿಶೇಷ ಕೃಪೆಗೆ ಪಾತ್ರನಾಗಿ ಅಪ್ಪಣೆಪಡೆದು ವಿಜಯನಗರಕ್ಕೆ ತೆರಳಿದನು.

ಸಾಮ್ರಾಜ್ಯದಲ್ಲೇ ಭಾರೀ ವಿಪ್ಲವಕ್ಕೆ ಕಾರಣವಾಗಿದ್ದ ಶ್ರೀರಂಗದ ಶ್ರೀವೈಷ್ಣವರು ಹಾಗೂ ಜಂಬುಕೇಶ್ವರದ ಶೈವರಿಗಿದ್ದ ವಿವಾದವನ್ನು ಪರಿಹರಿಸಿ ಮತೀಯ ಕಲಹವನ್ನು ನಿವಾರಿಸಿ ಉಭಯಮತೀಯರಲ್ಲಿ ಸ್ನೇಹಸೌಹಾರ್ದಗಳನ್ನು ಕುದುರಿಸಿ ಶಾಂತಿಸ್ಥಾಪನೆಮಾಡಿ ಯಶಸ್ವಿಯಾದನೆಂದು ಅವನವಿಷಯದಲ್ಲಿ ಸುಪ್ರೀತರಾದ ಸಾಮ್ರಾಜ್ಯದ ಎಲ್ಲ ಮತ-ಧರ್ಮಗಳ ಪ್ರಜಾಜನರೂ ಅವನನ್ನು ಕೊಂಡಾಡಿದರು. ಶ್ರೀವ್ಯಾಸರಾಜಗುರುಗಳು ಸರ್ವಧರ್ಮಹಿತದೃಷ್ಟಿಯಿಂದ ಮಾಡಿದ ಈ ಮಹತ್ಕಾರ್ಯದಿಂದ ತನಗೆ ಕೀರ್ತಿ ಪ್ರತಿಷ್ಠೆ, ಪ್ರಜರ ಪ್ರೇಮಾದರಗಳು ದೊರಕುವಂತಾಯಿತೆಂದು ನರಸನಾಯಕ ಶ್ರೀವ್ಯಾಸರಾಜರ ಬಗ್ಗೆ ಅತಿಶಯಗೌರವಭಕ್ತಿಯಿಂದ ವರ್ತಿಸಿ ಅನುಗೃಹೀತನಾದನು.

o o o o

ಶ್ರೀವ್ಯಾಸರಾಜರು ಶ್ರೀರಂಗದಿಂದ ಬಂದು ಎರಡು ತಿಂಗಳಾಗಿತ್ತು. ಒಂದು ದಿನ ಮಧ್ಯಾಹ್ನ ಶಿಷ್ಯರಿಗೆ ಪಾಠಹೇಳುತ್ತಾ ಕುಳಿತಿರುವಾಗ ಅರುವಾಮುದೈಂಗಾರ್ ಎಂಬ ಶ್ರೀರಂಗದ ವೃದ್ಧಅರ್ಚಕರು ಎಂಟುಹತ್ತು ವರ್ಷವಯಸ್ಸಿನ ತೇಜಸ್ವೀಬಾಲಕ ಅವನ ತಾಯಿ. ಸೋದರಮಾವಂದಿರೊಡನೆ ಬಂದು ಶ್ರೀಗುರುಗಳವರಿಗೆ ನಮಸ್ಕರಿಸಿದರು. ವೃದ್ಧರನ್ನು ಗುರುತಿಸಿದ ಗುರುಗಳು ನಸುನಗುತ್ತಾ "ಓಹೋ, ಅರುವಾಮುದೈಂಗಾರ್ ಅಲ್ಲವೇ ? ಯಾವಾಗ ಬಂದಿರಿ ? ಕುಶಲವೇ ?" ಎಂದು ಕುಶಲಪ್ರಶ್ನೆ ಮಾಡಲು ಅರುವಾಮುದೈಂಗಾರ್‌ರವರು "ಮಹಾಸ್ವಾಮಿಯವರು ನನಗೊಂದು ಹೊಣೆ ಹೊರಿಸೋಣವಾಗಿತ್ತು. ತಮ್ಮ ಅನುಗ್ರಹದಿಂದ ಯಶಸ್ವಿಯಾಗಿದ್ದೇನೆ. ಇತ್ತ ಪರಾಂಬರಿಸಬೇಕು. ತಿರುಪತಿ ಅರ್ಚಕರಪೈಕಿ ಓರ್ವ ತರುಣಿಯು ಗರ್ಭಿಣಿಯಾಗಿದ್ದು ತಾಯಿಯಮನೆಗೆ ಪ್ರಸವಕ್ಕಾಗಿ ಹೋಗಿದ್ದಳು. ಅದೇ ಕಾಲದಲ್ಲಿ ತಿರುಪತಿಯಲ್ಲಿ ಅರ್ಚಕರುಗಳ ದುರಂತ ಜರುಗಿಹೋಯಿತು. ತಾಯಿಯಮನೆಗೆ ಹೋಗಿದ್ದ ಆ ತರುಣಿಯೇ ಈಕೆ, ಹೆಸರು ಶೃಂಗಾರಮ್ಮ. ಈ ಬಾಲಕನೇ

ಈಕೆಯಪುತ್ರ ಶ್ರೀನಿವಾಸತಾತಾಚಾರ್ಯ. ಇವರು ವೀರರಾಘವಾಚಾರ್ಯರು- ಈತನ ಸೋದರಮಾವ" ಎಂದು ಪರಿಚಯಮಾಡಿಸಿದರು. ಎಲ್ಲರೂ ಗುರುಗಳಿಗೆ ನಮಸ್ಕರಿಸಿದರು,

ಶ್ರೀಗಳವರು ಅವರನ್ನು ಕಂಡು ಹರ್ಷಿಸಿ "ಈಗ ನಮ್ಮ ಮನಸ್ಸಿಗೆ ನೆಮ್ಮದಿಯುಂಟಾಯಿತು, ಶ್ರೀತಾತಾಚಾರ್ಯರ ವಂಶೀಕರು ಒಬ್ಬರಾದರೂ ದೊರೆತುದು ಸಂತೋಷಕರ. ಮುಂದಿನ ಜವಾಬ್ದಾರಿ ನಮಗಿರಲಿ. ಚಕ್ರವರ್ತಿಗಳಲ್ಲಿ ನಿವೇದಿಸಿ ಶೀಘ್ರವಾಗಿ ಈ ಬಾಲಕನಿಗೆ ದೇವರ ಪೂಜಾಧಿಕಾರವನ್ನು ವಹಿಸಿಕೊಡುತ್ತೇವೆ. ಈತನಿಗೆ ವೀರರಾಘವಾಚಾರ್ಯರು ಸಹಾಯಕರಾಗಲಿ" ಎಂದು ಆಜ್ಞಾಪಿಸಿ ಅವರಿಗೆ ವಸತಿ-ಭೋಜನಾದಿ ವ್ಯವಸ್ಥೆ ಮಾಡಲು ಮಠದ ಅಧಿಕಾರಿಗೆ ಅಪ್ಪಣೆಮಾಡಿದರು.

o o o o

ಶ್ರೀವ್ಯಾಸರಾಜರು ಶ್ರೀನಿವಾಸತಾತಾಚಾರ್ಯನಿಗೆ ಉಪನಯನಮಾಡಿಸಿ. ಅವನಿಗೆ ಸಂಸ್ಕೃತಭಾಷೆ, ಮಂತ್ರ-ಕಾವ್ಯಾದಿಗಳು,ವೇದಾಧ್ಯಯನ, ವೈಖಾನಸಾಗಮ ಪಾಠಗಳನ್ನು ಹೇಳಿಸಿ ಆತನಿಗೆ ಸ್ವತಃ ನ್ಯಾಯ–ಸಾಹಿತ್ಯಾದಿಪಾಠಗಳನ್ನು ಹೇಳಿದ್ದಲ್ಲದೇ, ಪ್ರತಿಮಾಪೂಜಾಕ್ರಮ, ಮಂತ್ರಾದಿಗಳು ಹಾಗೂ ಮಹಾಮಂತ್ರಾದಿಗಳನ್ನು ಹೇಳಿಕೊಟ್ಟು ನಾಲ್ಕೈದು ವರ್ಷದಲ್ಲಿ ಅವನು ಶ್ರೀನಿವಾಸನ ಪೂಜೆಗೆ ಅರ್ಹನಾಗುವಂತೆ ಮಾಡಿದರು.

o o o o

ಹುಡುಗನು ಅಭಿವೃದ್ಧನಾದಮೇಲೆ ಶ್ರೀಗಳವರು ಶ್ರೀನಿವಾಸತಾತಾಚಾರ್ಯನೊಡನೆ ತಿರುಪತಿಗೆ ತೆರಳಿ, - ಅಲ್ಲಿ ಒಂದು ದಿನ ಧರ್ಮದರ್ಶಿಗಳು, ಬೆಟ್ಟದ ಮೇಲಿನ ಧರ್ಮಾಭಿಮಾನಿಗಳು ಮುಂತಾದವರನ್ನು ಕರೆಯಿಸಿಕೊಂಡು ಎಲ್ಲರಿಗೂ ಶ್ರೀನಿವಾಸತಾತಾಚಾರ್ಯನ ಪರಿಚಯಮಾಡಿಸಿ ಇನ್ನು ಮುಂದೆ ಇವರೇ ಶ್ರೀನಿವಾಸನ ಪೂಜಾರಾಧನಾದಿ ಕೈಂಕರ್ಯವನ್ನು ನೆರವೇರಿಸುವರೆಂದೂ, ಚಕ್ರವರ್ತಿಗಳು ಇವರ ವಂಶೀಕರೇ ಪರಂಪರೆಯಾಗಿ ಅರ್ಚಕರಾಗಿ ಸೇವೆಸಲ್ಲಿಸಲು ನಿರೂಪದಯಪಾಲಿಸಿರುವುದನ್ನು ತಿಳಿಸಿ, ದೇವಾಲಯದ ಆಡಳಿತಾಧಿಕಾರವನ್ನು, ಧಾರ್ಮಿಕವಿಚಾರಾದಿಗಳನ್ನು ತಮ್ಮ ಪ್ರಿಯಶಿಷ್ಯರಾದ .ಬೆಟ್ಟದ ಆಚಾರ್ಯರೂ, ದೇವರಪೂಜೆಯನ್ನು ಶ್ರೀನಿವಾಸಾಚಾರ್ಯರೂ ನೆರವೇರಿಸುತ್ತಾ ಬರಬೇಕೆಂದೂ, ಇತರ ಧರ್ಮದರ್ಶಿಗಳು, ಬೆಟ್ಟದ ಆಸ್ತಿಕವೃಂದದವರು ಸರ್ವವಿಧದಲ್ಲಿ ಶ್ರೀದೇವರ ಸೇವಾದಿಗಳಲ್ಲಿ ಸಹಕಾರ ನೀಡತಕ್ಕದ್ದೆಂದೂ ಆಜ್ಞಾಪಿಸಿ ಶ್ರೀನಿವಾಸತಾತಾಚಾರ್ಯರಿಗೆ ದೇವರಗುಡಿಯ ಗರ್ಭಾಲಯದ ಬೀಗದಕೈಯನ್ನು ಬೆಟ್ಟದ ಆಚಾರ್ಯರಿಂದ ಕೊಡಿಸಿ "ನಾವು ತಂತ್ರಸಾರಾಗಮದಂತೆ ಪೂಜೆಮಾಡುತ್ತಿದ್ದೆವು. ನೀವು ದೇವರಪೂಜೆ ನಿತ್ಯ-

ನೈಮಿತ್ತಿಕ ಉತ್ಸವ, ಪೂಜಾರಾಧನೆಗಳನ್ನು ವೈಖಾನಸಾಗಮದಂತೆ ಸಕ್ರಮವಾಗಿ ಜರುಗಿಸಿಕೊಂಡು ಹೋಗಬೇಕು" ಎಂದೂ ಆಜ್ಞಾಪಿಸಿದರು.

ಶ್ರೀವರ ನಿಃಸ್ವಾರ್ಥಬುದ್ಧಿ, ಔದಾರ್ಯ, ಕಾರುಣ್ಯಗಳನ್ನು ಸಕಲರೂ ಕೊಂಡಾಡಿದರು. ಆ ನಂತರ ಶ್ರೀಗಳವರು ಸ್ವಾಮಿಪುಷ್ಕರಣಿಯಲ್ಲಿ ಮಿಂದು ವೈಭವ ದೊಡನೆ ದೇವಾಲಯಕ್ಕೆಬಂದು ಶ್ರೀನಿವಾಸದೇವರ ಪಾದಸ್ಪರ್ಶಮಾಡಿ ಭಕ್ತಿಯಿಂದ ನಮಸ್ಕರಿಸಿದರು। ಆಗ ಶ್ರೀಯವರ ಹನ್ನೆರಡು ವರ್ಷಗಳ ಪೂಜಾರಾಧನೆಯಿಂದ ಸಂತುಷ್ಟನಾದ ಶ್ರೀನಿವಾಸನು ಶ್ರೀವ್ಯಾಸರಾಜರನ್ನು ಆಶೀರ್ವದಿಸಿದನೋ ಎಂಬಂತೆ ದೇವರಿಗೆ ಹೊದ್ದಿಸಿದ್ದ ಪೀತಾಂಬರವು ದೇವರಶರೀರದಿಂದ ಜಾರಿ ಶ್ರೀಯವರ ಮೇಲೆ ಬಿದ್ದಿತು! ಅದನ್ನು ಕಂಡು ಜನರು ಗುರುಗಳ ಜಯಜಯಕಾರಮಾಡಿದರು. ಶ್ರೀಗಳವರು ಪರಮಾತ್ಮನ ಅನುಗ್ರಹದಿಂದ ಪುಳಕಿತಗಾತ್ರರಾಗಿ ಆನಂದಬಾಷ್ಪ ಸುರಿಸುತ್ತಾ ಶ್ರೀನಿವಾಸನನ್ನು ಭಕ್ತಿಯಿಂದ ಸ್ತುತಿಸಿ ವಿಧವಿಧವಾಗಿ ಪ್ರಾರ್ಥಿಸಿ ದೇವರಿಗೆ ಮಂಗಳಾರತಿಮಾಡಿ ಪ್ರಸಾದಸ್ವೀಕರಿಸಿ ಶ್ರೀದೇವಾಲಯದ ಸಕಲ ಬಿರು ದಾವಳಿಯೊಡನೆ ಶ್ರೀಮಠಕ್ಕೆ ದಯಮಾಡಿಸಿದರು.

ಅಂದು ಮಧ್ಯಾಹ್ನ ಧರ್ಮಾಭಿಮಾನಿಗಳು ಸಭೆ ಸೇರಿ ಹನ್ನೆರಡುವರ್ಷಗಳ ಕಾಲ ದೇವರಪೂಜೆ, ಆಡಳಿತಗಳನ್ನು ನಿರ್ವಹಿಸಿ, ದೇವರ ಪೂಜಾದಿ ಕಾರ್ಯ, ಆಡಳಿತಗಳನ್ನು ಕ್ರಮಪಡಿಸಿ ಅಸಾಧಾರಣ ಸೇವೆಸಲ್ಲಿಸಿ ಅನುಗ್ರಹಿಸಿದ ಶ್ರೀಗಳವರ ಗುಣಗಾನಮಾಡಿದರು. ಇದರ ಸ್ಮರಣೆ ಹಾಗೂ ತಾತಾಚಾರ್ಯರ ವಂಶೀಕರಿಗೇ ಮತ್ತೆ ಪೂಜಾಧಿಕಾರ ಕರುಣಿಸಿದ ಕೃತಜ್ಞತಾರೂಪವಾಗಿ ಧರ್ಮದರ್ಶಿಗಳು,ಅರ್ಚಕರೆಲ್ಲರೂ ಒಮ್ಮತದಿಂದ ಗುರುಗಳ ಮಠಕ್ಕೆ ವಿಶೇಷಮರ್ಯಾದೆಗಳು ಶಾಶ್ವತವಾಗಿ ಸಲ್ಲಿಸುವ ಶಾಸನಮಾಡಿದರು. ಶ್ರೀವ್ಯಾಸರಾಜರ ಆ ನಂತರದ ಮುಂದಿನ ಪೀಠಾಧೀಶರು ತಿರುಪತಿಗೆ ದಯಮಾಡಿಸಿದಾಗ,ಅರ್ಧಬೆಟ್ಟದವರೆಗೆ ಪೂರ್ಣಕುಂಭ-ಸಕಲ ಬಿರುದು, ಗೌರವಗಳೊಡನೆ ಬಂದು ಶ್ರೀಗಳವರನ್ನು ಸ್ವಾಗತಿಸಿ ಕರೆತರುವುದು. ಶ್ರೀನಿವಾಸ ದೇವರ ದೇವಾಲಯದ ಬೀಗದ ಕೈಯನ್ನು ಒಪ್ಪಿಸುವುದು, ಶ್ರೀಪೀಠಾಧೀಶರು ತಮ್ಮ ದೇವರೊಡನೆ ಗರ್ಭಾಲಯಕ್ಕೆ ಬಂದು ಸಾಷ್ಟಾಂಗ ನಮಸ್ಕಾರಮಾಡಿ, ದೇವರ ಪಾದಸ್ಪರ್ಶಪಡೆದು ಶ್ರೀನಿವಾಸನಿಗೆ ಸ್ವಹಸ್ತದಿಂದ ಮಂಗಳಾರತಿ ಮಾಡು ವುದೇ ಮುಂತಾದ ಅನೇಕ ಅಸಾಧಾರಣ ಗೌರವ. ವಿಶಿಷ್ಟ ಮರ್ಯಾದೆ ಹಕ್ಕುಗಳನ್ನು ಶ್ರೀಪಾದಂಗಳವರಿಗೆ ಸಮರ್ಪಿಸಿ ಕೃತಾರ್ಥರಾದರು।

---

1) ಈ ಎಲ್ಲಾ ಗೌರವಗಳು ಶತಶತಮಾನಗಳವರೆಗೆ ಶ್ರೀವ್ಯಾಸರಾಜಮಠಕ್ಕೆ ಸಲ್ಲುತ್ತಿದ್ದು ಮುಂದೆ ಪೀಠಾಧೀಶ್ವರರು ತಿರುಪತಿಗೆ ಬರುವುದು ಕಡಿಮೆಯಾಗಿ ಕ್ರಮೇಣ ಕೆಲಗೌರವಗಳು ತಪ್ಪಿಹೋದವು. ಆದರೂ ಇನ್ಯಾವ ಪೀಠಾಧಿಪತಿಗಳಿಗೂ ಸಲ್ಲದ ವಿಶೇಷ ಗೌರವಗಳು ಇಂದಿಗೂ ಶ್ರೀಮಠಕ್ಕೆ ಜರಗುತ್ತಾ ಬಂದಿವೆ.

ಇದರಂತೆ ಶ್ರೀಯವರು "ತಂತ್ರಸಾರಾಗಮೋಕ್ತ ಕ್ರಮ" ದಲ್ಲಿ ಏರ್ಪಡಿಸಿದ ಪೂಜಾ ಪದ್ಧತಿಯು ಬಹುಕಾಲನಂತರ ನಿಂತುಹೋಗಿ ಈಗ ವೈಖಾನಸಾಗಮ ಪದ್ಧತಿಯಲ್ಲಿ ಶ್ರೀನಿವಾಸದೇವರ ಪೂಜಾರಾಧನ ಜರುಗುತ್ತಿದೆ.

ಶ್ರೀಗಳವರು ಶ್ರೀನಿವಾಸ ದೇವರದರ್ಶನ ಪಡೆಯಲು ಗುಡಿಗೆಹೋಗಿ ದೇವರಿಗೆ ಸಾಷ್ಟಾಂಗವೆರಗಿ ನಿಂತರು. ಶ್ರೀನಿವಾಸನನ್ನು ಅಗಲಿ ಹೋಗಬೇಕಲ್ಲಾ ಎಂದವರ ಕಣ್ಣಿನಿಂದ ಧಾರಾಕಾರವಾಗಿ ನೀರು ಹರಿಯಿತು. ಹೃದಯ ಭಕ್ತಿಭರದಿಂದ ಕಂಪಿಸಿತು. "ದೇವ, 12 ವರ್ಷ ನಿನ್ನ ಸೇವೆ ಸ್ವೀಕರಿಸಿ ಅನುಗ್ರಹಿಸಿದೆ. ಇದು, ಮುಂದೆ ನನ್ನಿಂದ ಯಾವುದೋ ಮಹತ್ಕಾರ್ಯ ಮಾಡಿಸಲು ಒಂದು ತಪಸ್ಸಾಗಬೇಕೆಂದು ನೀನು ಇಚ್ಛಿಸಿದೆ ಎಂದು ನಾನು ಭಾವಿಸುತ್ತೇನೆ. ನಾನೆಸಗಿದ ತಪಸ್ಸಿನ ಫಲವನ್ನು ಲೋಕ ಕಲ್ಯಾಣಕ್ಕಾಗಿ ನಿನ್ನ ಪ್ರೇರಣೆಯಂತೆ ವಿನಿಯೋಗಿಸಲು ನಾನು ಯೋಚಿಸಿದ್ದೇನೆ. ಅದನ್ನು ಪೂರ್ಣವಾಗಿ ಯಶಸ್ವಿಗೊಳಿಸುವ ಭಾರ ನಿನಗೆ ಸೇರಿದೆ. ನಿನ್ನನ್ನು ಬಿಟ್ಟು ಹೋಗಲು ಮನಮಿಡಿಯುತ್ತಿದೆ. ಎಲ್ಲಿಡೆಯಲ್ಲಿರುವ ಹೇ ಪ್ರಭು, ನನ್ನ ಹೃದಯದಲ್ಲಿ ನೀನು ನೆಲೆ ನಿಂತು ಅನುಗ್ರಹಿಸು" ಎಂದು ಭಕ್ತಿಭರಿತವಾಗಿ ಪ್ರಾರ್ಥಿಸಿ ಮತ್ತೆಮತ್ತೆ ಶ್ರೀಹರಿಗೆ ನಮಸ್ಕಾರಮಾಡಿ ಹೊರಗೆ ಬಂದರು.

ಆ ನಂತರ ದೇವಾಲಯದ ಸಮಸ್ತ ಗೌರವದೊಡನೆ ಶ್ರೀಗಳವರನ್ನು ಬಹು ದೂರ ಬಂದು ಬೀಳ್ಕೊಟ್ಟು ಗುರುಗಳ ಆಶೀರ್ವಾದ ಪಡೆದರು. ಶ್ರೀಗಳವರು ಸರ್ವರಿಗೂ ಫಲಮಂತ್ರಾಕ್ಷತೆಯನ್ನು ಅನುಗ್ರಹಿಸಿ ಬೆಟ್ಟದಾಚಾರ್ಯರಿಗೆ ಬೆಟ್ಟ, ಮತ್ತು ಬೆಟ್ಟದ ಕೆಳಗಿನ ಶ್ರೀಮಠದ ಹಾಗೂ, ದೇವಾಲಯದ ಧಾರ್ಮಿಕ ಅಧಿಕಾರ ಗಳನ್ನು ಅನುಗ್ರಹಿಸಿ, ಅವರು ಶ್ರೀಮಠದ ಪ್ರತಿನಿಧಿಯಾಗಿದ್ದು ಸಕಲಕಾರ್ಯಗಳನ್ನು ನಿರ್ವಹಿಸಬೇಕೆಂದು ಆಜ್ಞಾಪಿಸಿ ಚಂದ್ರಗಿರಿಗೆ ದಯಮಾಡಿಸಿದರು.

## ೩೭. ವಿಜಯನಗರಕ್ಕೆ ದಿಗ್ವಿಜಯ

ಶ್ರೀವ್ಯಾಸರಾಜರು ಒಂದುದಿನ ಇಮ್ಮಡಿ ನರಸಿಂಹರಾಯನಿಗೆ ಧರ್ಮೋಪದೇಶ ಮಾಡುತ್ತಿರುವಾಗ ನರಸನಾಯಕರ ಆಪ್ತರೂ, ಸಾಳುವ ತಿಮ್ಮರಸು ಮುಂತಾದ ಸಚಿವರುಗಳೂ ವಿಜಯನಗರದಿಂದ ಬಂದು ಗುರುಗಳಿಗೂ ಸಾರ್ವಭೌಮರಿಗೂ ವಂದಿಸಿದರು. ಆ ತರುವಾಯ "ಶ್ರೀಗುರುದೇವರು ವಿಜಯನಗರಕ್ಕೆ ಚಿತ್ತೈಸಿ ತನಗೆ ಮಾರ್ಗದರ್ಶನ- ಧರ್ಮೋಪದೇಶಮಾಡುತ್ತಾ ಸಾಮ್ರಾಜ್ಯಾಭಿವೃದ್ಧಿಗೆ ಸಹಾಯಮಾಡಬೇಕೆಂದು ಕ್ಷಮಾಧಿಪತಿಗಳು ಪ್ರಾರ್ಥಿಸಿರುವುದನ್ನು" ತಿಮ್ಮ ರಾಯರು ಹಾಗೂ ಶ್ರೀಗಳವರಲ್ಲಿ ವಿಜ್ಞಾಪಿಸಿ ನಾಯಕರು ಕಳಿಸಿದ ವಿಜ್ಞಾಪನಾ ಪತ್ರಗಳನ್ನು ಸಾಮ್ರಾಟನಿಗೂ ರಾಜಗುರುಗಳಿಗೂ ಸಮರ್ಪಿಸಿ "ಗುರುದೇವರನ್ನು ವಿದ್ಯಾನಗರಿಗೆ ಕಳುಹಿಸಿಕೊಟ್ಟು ಕನ್ನಡನಾಡಿನ ಸರ್ವತೋ ಮುಖ ಅಭಿವೃದ್ಧಿಯಾಗುವಂತೆ ಮಾಡಬೇಕೆಂದು" ಸಾಮ್ರಾಟರಲ್ಲಿ ಬಿನ್ನವಿಸಿ, "ಗುರುವರ್ಯ ! ತಾವು ಪರಮಾನುಗ್ರಹಮಾಡಿ ವಿಜಯನಗರಕ್ಕೆ ದಯ ಮಾಡಿಸಿ ನಮ್ಮೆಲ್ಲರನ್ನೂ ಅನುಗ್ರಹಿಸಬೇಕೆಂದು" ಪರಿಪರಿಯಿಂದ ಪ್ರಾರ್ಥಿಸಿದರು.[1]

---

1. ಅಥ ನರಸಭೂಪಾಲಸ್ಯಾಪ್ತೈರಮಾತ್ಯಮುಖಾವಲ್ಯೈಃ ಸ ಯತಿವೃಷಭಶ್ಶಶ್ವತ್ ಸಂಪ್ರಾರ್ಥ್ಯ ಮಾನನಿಜಾಗಮಃ ಭುಜಗನಗರೀಂ ಭೂವಿಂ ಪ್ರೀತ್ಯೋಪರೀವ ಸಮುಸಿ ತಾಂ ವಿಪುಲ ವೀಥಿಕಾಂ ಹೃದ್ಯಾಂ ವಿದ್ಯಾಪುರೀಂ ಸಮುಪಾಗಮತ್

ಶ್ರೀವ್ಯಾಸಯೋಗಿಚರಿತಮ್ P—54

ಇಮ್ಮಡಿ ನರಸಿಂಹಭೂಪಾಲನು ತನ್ನ ಉದ್ಧಾರಕ ಗುರುಗಳೂ ಸಾಮ್ರಾಜ್ಯದ ಕೇಂದ್ರಬಿಂದುವೂ ಆಗಿರುವ ಶ್ರೀವ್ಯಾಸರಾಜ ಗುರುವರ್ಯರನ್ನು ಅಗಲಿರಲಾಗದಿದ್ದರೂ ತನ್ನ ಮತ್ತು ನಾಡಿನ ಹಿತದೃಷ್ಟಿಯಿಂದ ಶ್ರೀವ್ಯಾಸರಾಜ ಯತಿವರರು ವಿಜಯನಗರದಲ್ಲಿರುವುದು ಶ್ರೇಯಸ್ಕರವೆಂದು ಭಾವಿಸಿ "ಗುರುದೇವ ! ನಮ್ಮ ಕಾರ್ಯಕರ್ತರಾದ ನರಸನಾಯಕರ ಪ್ರಾರ್ಥನೆಯಂತೆ ತಾವು ವಿದ್ಯಾನಗರಕ್ಕೆ ದಯಮಾಡಿಸಿ, ಅಲ್ಲಿ ಅವರಿಗೆ ಮಾರ್ಗದರ್ಶಕರಾಗಿದ್ದು ಕನ್ನಡ ಸಾಮ್ರಾಜ್ಯದ ಮತ್ತು ನಿಮ್ಮ ಸೇವಕನಾದ ನನ್ನ ಹಿತಚಿಂತನೆ ಮಾಡಬೇಕು" ಎಂದು ಪ್ರಾರ್ಥಿಸಿದನು.

ಶ್ರೀವ್ಯಾಸಮುನೀಂದ್ರರು "ಎಲ್ಲವೂ ಶ್ರೀಹರಿ ಸಂಕಲ್ಪ ! ಆದಷ್ಟು ಬೇಗ ನಾವು ರಾಜಧಾನಿಗೆ ಬರುವುದಾಗಿ ನರಸನಾಯಕರಲ್ಲಿ ನಿವೇದಿಸಿರಿ" ಎಂದು ಸಚಿವ ಮಂಡಲಿಗೆ ನಿರೂಪಿಸಿ ಅವರನ್ನು ಸಂತೋಷಗೊಳಿಸಿ ಆಶೀರ್ವದಿಸಿ ಕಳಿಸಿದರು.

೦ ೦ ೦ ೦ ೦

ವಿಜಯನಗರದಲ್ಲಿಂದು ಅಪೂರ್ವಸಂಭ್ರಮ ರಾಜಧಾನಿಯು ವಿವಿಧಾಲಂಕಾರಗಳಿಂದ ಶೋಭಿಸಿದೆ. ರಾಜಧಾನಿಯ ಬೀದಿಬೀದಿಗಳನ್ನು, ಮನೆಮನೆಗಳನ್ನು ಸಾರಿಸಿ ವಿವಿಧ ವರ್ಣರಂಜಿತ ರಂಗವಲ್ಲಿ, ತಳಿರು ತೋರಣ, ರಂಭಾಸ್ತಂಭ, ಪುಷ್ಪಗಳಿಂದ ಶೃಂಗರಿಸಲಾಗಿದೆ. ನೂರಾರು ಭವ್ಯ ಹಸಿರುವಾಣಿ ಚಪ್ಪರಗಳನ್ನು ಹಾಕಿದ್ದಾರೆ, ಪ್ರಜಾಜನರು ಬಹು-ಉತ್ಸಾಹ-ಸಡಗರಗಳಿಂದ ಓಡಾಡುತ್ತಿದ್ದಾರೆ, ಇದಕ್ಕೆ ಕಾರಣ ವಿಲ್ಲದಿಲ್ಲ. ಪೂಜ್ಯ ಶ್ರೀವ್ಯಾಸರಾಜ ಗುರುಸಾರ್ವಭೌಮರು ಇಂದು ರಾಜಧಾನಿಗೆ ದಯಮಾಡಿಸಲಿದ್ದಾರೆ !

ಸಚಿವರಿಂದ ಗುರುಗಳ ಆಗಮನವನ್ನು ಪೂರ್ವಭಾವಿಯಾಗಿ ಅರಿತ ನರಸನಾಯಕನು ಹರ್ಷನಿರ್ಭರನಾಗಿ ಸಕಲರಾಜವೈಭವದಿಂದ ರಾಜಗುರುಗಳನ್ನು ಸ್ವಾಗತಿಸಿ ಕರೆತರಲು ವ್ಯವಸ್ಥೆ ಮಾಡಿ ಅಲಂಕೃತಅಶ್ವವನ್ನೇರಿ ಸಚಿವ-ಸಾಮಂತ-ದಂಡನಾಯಕರಿಂದ ಪರಿವೃತನಾಗಿ ರಾಜಧಾನಿಯ ಹೊರವಲಯಕ್ಕೆ ಹೊರಟಿದ್ದಾನೆ, ರಾಜಗುರುಗಳನ್ನು ಸ್ವಾಗತಿಸಲು ರಾಜಧಾನಿಯ ಪ್ರಜಾನೀಕವೇ ಅಲ್ಲಿ ನೆರೆದಿದೆ. ನರಸನಾಯಕನ ಜೊತೆಗೆ ಪ್ರಧಾನಾಮಾತ್ಯರು-ಢಣಾಯಕರು, ಸಹಸ್ರಾರುಜನ ಸೈನಿಕರು, ರಾಜಪರಿವಾರ, ಪುರಪ್ರಮುಖರು, ಪಂಡಿತರು, ಕವಿಗಳು, ಗಾಯಕರು, ನರ್ತಕಿಯರು, ಧಾರ್ಮಿಕ ಸ್ತ್ರೀಪುರುಷರುಗಳು ಸಾಲುಗಟ್ಟಿ ಹೊರಟಿದ್ದಾರೆ. ಶ್ರೀವಿರೂಪಾಕ್ಷಸ್ವಾಮಿ ದೇವಾಲಯದ ಪೂರ್ಣಕುಂಭಾದಿ ಗೌರವದೊಡನೆ ಅರ್ಚಕರು, ಧರ್ಮದರ್ಶಿಗಳು, ಅಧಿಕಾರಿವರ್ಗದವರು, ಮುಂಭಾಗದಲ್ಲಿದ್ದಾರೆ. ಶ್ವೇತಛತ್ರ, ಅಪ್ತಾಗಿರಿ, ಮಕರತೋರಣ.ಧ್ವಜಪತಾಕೆಗಳು,ನಡುಚಪ್ಪರ. ಚಾಮರಗಳು, ಬೆಳ್ಳಿ-ಬಂಗಾರದ ಬೆತ್ತಗಳನ್ನು ಹಿಡಿದವರು, ಅಲಂಕೃತ ಆನೆಗಳು, ಒಂಟೆಗಳು, ಸಮವಸ್ತ್ರಧರಿಸಿದ ಕುದುರೆ ಸವಾರರು,ನಾದಸ್ವರದವರು,ವೇದಘೋಷಮಾಡುವ ಪಂಡಿತರು, ವಂದಿಮಾಗಧರು

ಸಾಮ್ರಾಜ್ಯದಬಿರುದು ಬಾವಲಿಗಳು ಹೀಗೆ ಹತ್ತಾರುಸಹಸ್ರ ಜನರು ಹೊರಟಿದ್ದಾರೆ.

ಕುಲಗಿರಿಗಳಂತೆ ಉನ್ನತವಾದ ಮದಗಜಗಳು, ವಿವಿಧ ಶಶ್ತ್ರಾಸ್ತ್ರಸಜ್ಜಿತರಾದ ಕವಚಧಾರಿ ಯೋಧರು ನರಸನಾಯಕನನ್ನು ಸುತ್ತಿಗಟ್ಟಿ ಬರುತ್ತಿದ್ದಾರೆ. ಆನೆಗಳು, ಒಂಟೆಗಳು, ಕುದುರೆಗಳ ಹೇಷಾರವ, ಯೋಧರ ಸಿಂಹನಾದ, ದಂಡಧಾರಿಗಳ ಕೋಲಾಹಲ, ಭೇರಿ, ಮೃದಂಗ, ಮದ್ದಳೆ, ಡಿಂಡಿಮ ಝರ್ಝರಿ ವಾದ್ಯಗಳ ವಿವಿಧಧ್ವನಿಗಳು, ಶಂಖ, ವೇಣು, ಕಹಳೆಗಳ ಧ್ವನಿಗಳು ಇವೆಲ್ಲ ಒಂದಾಗಿ ಜಗನ್ಮಂಡಲವೆಲ್ಲಾ ಶಬ್ದಾಯಮಾನವಾಗಿದೆ.

ಇಂತು ಪರಮವೈಭವದಿಂದೊಡಗೂಡಿದ ನರಸನಾಯಕನು ಶ್ರೀವ್ಯಾಸಭಗವಾನರ ಆಗಮನವನ್ನು ನಿರೀಕ್ಷಿಸುತ್ತಿದ್ದಾನೆ. ಆಹೋ, ಅತಿ ಸಮೀಪದಲ್ಲಿಯೇ ಕೇಳಿಬರುತ್ತಿದೆ, ಕಹಳೆಯ ಧ್ವನಿ ! ನಗಾರಿಯಶಬ್ದ ಹತ್ತಿರವಾಗುತ್ತಿದೆ. ನೋಡುತ್ತಿದ್ದಂತೆಯೇ ಶ್ರೀಮಠದ ಸಮಸ್ತ ಬಿರುದುಬಾವಲಿಗಳೊಡನೆ, ಮಹಾಸಂಸ್ಥಾನ ಪರಿವಾರದೊಡನೆ ಶ್ರೀವ್ಯಾಸರಾಜರು ಸುವರ್ಣಪಾಲಕಿಯಲ್ಲಿ ಕುಳಿತು ಕರದಲ್ಲಿ ತೆರೆದ ತಾಲಾವಾಲಿಗ್ರಂಥವನ್ನು ಅವಲೋಕಿಸುತ್ತಾ ಛತ್ರ ಚಾಮರ ವೇದಘೋಷ ಪಂಡಿತ ಮಂಡಲೀಸಹಿತರಾಗಿ ಬರುತ್ತಿದ್ದಾರೆ.

ಶ್ರೀಯವರ ಪಾಲಕಿಯ ಮುಂಭಾಗದಲ್ಲಿ ಸುಮಧುರ ಕಂಠಸ್ವರದಿಂದ ಕಿನ್ನರರನ್ನು ಲಜ್ಜಿಗೊಳಿಸುವ ಗಾಯನದ ಚತುರತೆಯಿಂದ ಗಂಧರ್ವವಿದ್ಯಾನಿಪುಣರು ಶ್ರೀಹರಿಯ ಗುಣಗಾನಮಾಡುತ್ತಾ ಬರುತ್ತಿದ್ದಾರೆ. ಪಾಲಕಿಯಲ್ಲಿ ಮಂಡಿಸಿದ

---

1. ತತಃ ನರಸಮಹೀಪಾಲಃ ಕ್ರಮೇಣ ನಗರೋಪಕಂಠಮಾಗಚ್ಛಂತಂ ಏನಂ ಭಗವಂತಂ ವ್ಯಾಸಯೋಗಿನಂ ಸಚಿವ ಮುಖಾದಾಕರ್ಣ್ಯ ಸಂಬದ್ಧಮಾನಕುತೂಹಲಃ ಪ್ರತ್ಯುಜ್ಜಿಗಮಿಷಯಾ ಸರಾಜಲೋಕಃ.........ಕುಲಗಿರಿಭಿಃ ವಿಕಟಕರಟಕಟಾಹ ನಿಶ್ರುತಮದ ಪ್ರವಾಹೈಸ್ಸ್ತಂಭೇರಮೈರನುರುದ್ಧ್ಯಮಾನಃ ಪರಿಸ್ಫುರತ್ತಪನಬಿಂಬಪ್ರತಿಫಲನಾಸ್ಯ ಪರೋಕ್ಷಿತಪ್ರತಾಪಜ್ವಲನಾನೀವ ವಿಕ್ಲಬಾದಿಧಾಯದ್ಭಿರಾಯುಧಾನಿ ಕಾಲಕವಚ ನಿಚೋಲಿತ ಸ್ಕಂಧೈ ರಂಬರಸಂಚಾರಲಗ್ನ ನವಮೇಘಖಂಡೈರಿವ ಚರಣಗಣೈರ-ಪರಿಮಿತೈ ರ್ಯೋಧೈಃ ಪರಿವೇಷ್ಟ್ಯಮಾನಃ.........ಕಿಲಕಿಲಾಮುಖರ ಮುಖೈಃ ಫಲಕಪಾಣಿಭಿ ರ್ದೇದೀಪ್ಯಮಾನಪುರೋಮಾರ್ಗೋ ಬೃಂಹಿತೇನ ದ್ವಿರದಾನಾಂ ಹ್ರೇಷಿತೇನ ಹಯಾನಾಂ ಕ್ಷ್ವೇಲಿತೇನ ಯೋಧಾನಾಂ ಆಲೋಕಕೋಲಾಹಲೇನ ದಂಡಿನಾಂ ಭಾಂಕಾರೇಣ ಭೇರೀಣಾಂ ಧಣಂಧಣೇನ ನಿಸ್ಸಾಣಾನಾಂ ದುಂಧುಮಿತೇನ ಮದ್ದಲಾನಾಂ ಜುಂಜು ಮಿತೇನ ಡಿಂಡಿಮಾನಾಂ ಝಿಂಕಾರೇಣ ಝರ್ಝರೀಣಾಂ ಘಂಘುಮಿತೇನ ಶಂಖಾನಾಂ ಕೂಜಿತೇನ ವೇಣೂನಾಂ ಕಲಕಲೇನ ಕಾಹಲೀನಾಂ ಶಬ್ದಾದ್ವೈತಾಮಿವ ಜಗತೀಂ ಕುರ್ವಾಣಃ ॥

ಶ್ರೀವ್ಯಾಸಯೋಗಿಚರಿತಮ್ — P 56

ಶ್ರೀಪಾದಂಗಳವರ ತೇಜಸ್ಸು ಅತ್ಯದ್ಭುತವಾಗಿದೆ. ಕಾಂಚನ ವರ್ಣದಿಂದ ದೇದೀಪ್ಯಮಾನವಾದ ಭವ್ಯಾಕೃತಿ. ದ್ವಾದಶನಾಮಮುದ್ರೆ-ಗಂಧಗಳಿಂದ ಅಲಂಕೃತರಾಗಿದ್ದಾರೆ. ವಿಸ್ತಾರವಾದ ಹಣೆಯಲ್ಲಿ ಊರ್ಧ್ವಪುಂಡ್ರಗಂಧಾಕ್ಷತೆಗಳು ಕಂಗೊಳಿಸುತ್ತಿವೆ. ವಕ್ಷಃ ಸ್ಥಳದಲ್ಲಿ ಕಮಲಾಕ್ಷೀತುಳಸೀಮಾಲೆಗಳು ಶೋಭಿಸಿವೆ. ಜ್ಞಾನ-ಭಕ್ತಿ-ವೈರಾಗ್ಯಪೂರ್ಣರಾದ ಗುರುಗಳ ಮುಖದಲ್ಲಿ ಮಿಂಚಿನಂತೆ ಮಿನುಗುವ ನೇತ್ರಗಳು ಅವರ ತಪಸ್ಸಿದ್ಧಿಯನ್ನು ಸಾರುತ್ತಿವೆ. ಮಂದಹಾಸವದನಾರವಿಂದದಿಂದ ಆ ಯತಿಚಂದ್ರಮರು ಧರಿಸಿರುವ ಕಾಷಾಯವಸನಗಳು ನಿರೀಕ್ಷಣಮಾತ್ರದಿಂದ ಅವರಲ್ಲಿ ಪೂಜ್ಯಭಾವನೆಯನ್ನು ಹುಟ್ಟಿಸುತ್ತಿವೆ. ಇಂತು ತೇಜಃಪುಂಜರಂಜಿತಶರೀರರಾಗಿ ಜ್ಞಾನ ಭಕ್ತಿ-ವೈರಾಗ್ಯಗಳ ತ್ರಿವೇಣೀಸಂಗಮದಂತೆ, ಸಾತ್ವಿಕತೆಯ ಸಾಕಾರರಾಗಿ ಲೋಕವನ್ನೇ ಆಶ್ಚರ್ಯಗೊಳಿಸುವ ಮಹಾಮಹಿಮರಾದ, ಶ್ವೇತಚಾಮರಗಳಿಂದ ಸೇವಿತರಾದ ಶ್ರೀವ್ಯಾಸಭಗವಾನರನ್ನು ಅವಲೋಕಿಸಿ ನರಸಭೂಪಾಲನು ರೋಮಾಂಚಿತನಾದನು. ಮತ್ತು ಕೂಡಲೇ ಕುದುರೆಯಿಂದಿಳಿದು ಪಾದಚಾರಿಯಾಗಿ ಧಾವಿಸಿ, ಗುರುಗಳ ದರ್ಶನಮಾಡಿ ಆನಂದಿಸಿದನು.[2]

ಶ್ರೀವ್ಯಾಸಯೋಗೀಂದ್ರರ ಮಹಿಮೆ ಅಗಾಧವಾದುದು. ಅವರು ಮನದಲ್ಲಿ ನೆನಸಿದಮಾತ್ರಕ್ಕೇ ಮಹಾಭೂತಗಳು ಓಡೋಡಿಬಂದು ನಮಸ್ಕರಿಸಿ ಅವರು ಕುಳಿತ ಪಾಲಕಿಯನ್ನು ಹೊರಲು ಸಿದ್ಧವಾಗುತ್ತಿದ್ದವು.[3] ಹಿಂದೊಮ್ಮೆ ಇವರು ತೀರ್ಥಯಾತ್ರಾ ಕಾಲದಲ್ಲಿ ಅರಣ್ಯಮಧ್ಯದಲ್ಲಿ ಸಂಚರಿಸುವಾಗ ಭೀಕರಸ್ವರೂಪರಾದ ಚೋರರು ಬಂದಿವರನ್ನು ಸುತ್ತುಗಟ್ಟಿನಿಂತರು,ಆಗ ಗುರುಗಳು ದರಹಾಸಬೀರಿ"ಪಾಪ, ಜೀವನಕ್ಕಾಗಿ ಬಹು ಕಷ್ಟಪಡುತ್ತಿದ್ದೀರಿ. ನಿಮಗೆ ಬೇಕಾದುದನ್ನು ತೆಗೆದುಕೊಂಡು ಹೋಗಿರಿ"ಎಂದುಹೇಳಿದಾಗ ಶ್ರೀಯವರ ತೇಜಸ್ಸು ಆ ಮಂದಹಾಸ ಆ ಕಳ್ಳರ ಹೃದಯವನ್ನು ಕಲಕಿಬಿಟ್ಟಿತು.ಅವರ ಎಲ್ಲ ಕ್ರೌರ್ಯವೂ ಹೋಗಿಬಿಟ್ಟಿತು. ಅವರು ಗುರುಗಳಿಗೆ ಶರಣಾಗತರಾಗಿ ನಮಸ್ಕರಿಸಿ ವ್ಯಾಸಯತಿಗಳ ಶಿಷ್ಯರಾಗಿ ಆಶೀರ್ವಾದಪಡೆದು ಅಂದಿನಿಂದ ತಮ್ಮ ಕಾರ್ಯಕ್ರಮಗಳನ್ನು ತ್ಯಜಿಸಿ ಗೆಡ್ಡೆಗೆಣಸು-ತರುಪಲ್ಲವಳಗನ್ನೇ

---

2. ..ಸ ನರವೇಷ್ಠೋ...ತಸ್ಯ ಭಗವತೋ ವ್ಯಾಸಯೋಗಿನಃ ಶ್ವೇತಚಾಮರಯೋಯುಗಲಂ ದೂರಾದವಲೋಕಯಾಮಾಸ। ತುರಂಗಾದವತತಾರ. ಸ ಚ ಪದ್ಭ್ಯಾಮೇವ ಸಂಚರಮಾಣಃ....
—ಶ್ರೀವ್ಯಾಸಯೋಗಿಚರಿತಮ್ ಪುಟ 56

3. ಅಮುಷ್ಯ ಕಿಲ ವಾಹನಮಾದಿಭಿಕ್ಷೋರಿವ ಸಮುದ್ವಹಂತಿ ಶೈಬಿಕನಿರ್ವಿಶೇಷಮವಸರೇಷು ಸ್ಮರಣಮಾತ್ರಕೃತ ಸನ್ನಿಧಾನಾದಿ ವಿನಮಂತಿ ಮಹಾಭೂತಾನಿ...
—ಶ್ರೀವ್ಯಾಸಯೋಗಿಚರಿತಮ್ ಪುಟ. 57

ಆಹಾರವಾಗಿ ಸ್ವೀಕರಿಸಿ ಸಾತ್ವಿಕರಾದರು.[1]

ಮತ್ತೊಮ್ಮೆ ಶ್ರೀವ್ಯಾಸತೀರ್ಥರು ಭಗವಂತನ ಪ್ರೀತ್ಯರ್ಥವಾಗಿ, ಅತ್ಯಂತ ಜ್ವರಪೀಡಿತರಾಗಿದ್ದರೂ ಮೂರುದಿನ ಉಪವಾಸದಿಂದ ಶ್ರೀಕೃಷ್ಣನನ್ನು ಧ್ಯಾನಿಸುತ್ತಾ ನಿಶ್ಶಕ್ತರಾಗಿ ಮಲಗಿರುವಾಗ ಭಗವಾನ್ ಬಾಲಗೋಪಾಲನು ಮಿತ್ರರಲ್ಲಿಗೆ ಬರುವಂತೆ ಅಪರಿಮಿತ ಭಕ್ತವಾತ್ಸಲ್ಯದಿಂದ ಗುರುಗಳಬಳಿಗೆ ಪ್ರತ್ಯಕ್ಷನಾಗಿ ಬಂದು ದರ್ಶನವಿತ್ತು ಸುಧಾಮಂಡಲದಂತೆ ಮನೋಹರವಾದ ಬೆಣ್ಣೆಯ ಮುದ್ದೆಯನ್ನು ಕರದಲ್ಲಿ ಹಿಡಿದು, ಕಿಂಕಿಣಿಯ ಝೇಂಕಾರಮಾಡುತ್ತಾ ಏಕಾಂತದಲ್ಲಿ ಮನಮೋಹಕವಾದ ತನ್ನ ನರ್ತನ ವಿಲಾಸವನ್ನು ತೋರಿಸಿ ಅನುಗ್ರಹಿಸಿದನು.[2] ಗ್ರಂಥರಚನೆಮಾಡಲಪೇಕ್ಷಿಸಿದ ಈ ವ್ಯಾಸಯತಿಗಳಿಗೆ, ಪೂಜ್ಯಳಾದ ಸಾಕ್ಷಾತ್ ವಿದ್ಯಾದೇವಿಯು (ಶ್ರೀಭಾರತೀದೇವಿಯು) ಪುತ್ರವಾತ್ಸಲ್ಯ-ಪ್ರೇಮಭರದಿಂದ ಇವರೆಡೆಗೈತಂದು ಮಹಾಮಹಿಮೆಯುಳ್ಳ ಕಾಂತಿಯುಕ್ತವಾದ ಒಂದು ಮಣಿಮಯ ಲೆಕ್ಕಣಿಕೆಯನ್ನು ಅನುಗ್ರಹಿಸಿದಳು.[3] ಆ ದೇವಿಯ ಅನುಗ್ರಹ, ಮಹತ್ವಪೂರ್ಣ ಮಣಿ ಲೆಕ್ಕಣಿಕೆಯ ಪ್ರಭಾವದಿಂದ ಶ್ರೀವ್ಯಾಸಮುನಿಗಳು ಯಾರಿಂದಲೂ ಯಾವಾಗಲೂ ದೂಷಿಸಲಸದಳವಾದ ಪರಮೋತ್ಕೃಷ್ಟ ಗ್ರಂಥರತ್ನಗಳನ್ನು ರಚಿಸಿ ಜಗತ್ತಿನಲ್ಲಿ ವಿಖ್ಯಾತರಾದರು.

ಶ್ರೀವ್ಯಾಸತೀರ್ಥರ ಕೃಪಾದೃಷ್ಟಿವೀಕ್ಷಣಮಾತ್ರದಿಂದ ಮೇಘಗಳು ವೃಷ್ಟಿಗರೆಯುತ್ತಿದ್ದವು.[4] ಇವರಿಗೆ ಮನಸ್ಸಿನಲ್ಲಿ ಅಪಚಾರವೆಸಗಿದವರೂ ಸಹ ಆ ಪಾಪದ ಫಲವಾಗಿ ತಾವಾಗಿಯೇ ಅಕಾಲಮೃತ್ಯುವಿಗೆ ತುತ್ತಾಗುವರೆಂದು ಜನರು ನಂಬಿದ್ದರು.[5]

---

1. ಅನೇನ ಖಲು ಪುರಾ ತೀರ್ಥಪರ್ಯಟನೇಷು ಅಧಿಕಾಂತಾರಮುಪಪರತೇತ್ಯುದಿತಮಾತ್ರಾತ್ಸವಿಭ್ರಮಾಃ ಕುಂಭೀಲಕಾ ಅಪಿ ದಾರುಣಾಃ ಪ್ರೇಷ್ಯಾ ಇವ ಕೇವಲಂ ತರುಪಲ್ಲವಾನಿ ಚಿರಮುಪಾಹರನ್. —ಶ್ರೀವ್ಯಾಸಯೋಗಿಚರಿತಮ್ P-57
2. ಅಸ್ಯ ನನು ತ್ರಿವಾರೋಪವಾಸಶ್ರಾಂತಿಜುಷೋ ಭಗವಾನ್ ಬಾಲಗೋಪಾಲಃ ವತ್ಸಲತಯಾ ಸುಹೃಜ್ಜನಸ್ಯೇವ ರಹಸಿ ಸಾಕ್ಷಾದಾಗತ್ಯ ಸುಧಾಮಂಡಲನಿರ್ವಿಶೇಷಂ ನವನೀತಪಿಂಡಂ ಹಸ್ತೇ ದಧಾನಃ ಮಣಿಮಂಜೀರಝಂಕಾರಘಟಿತಮನೋಹರಂ ತಾಂಡವವಿಲಾಸಮದರ್ಶಯತ್. —ಶ್ರೀವ್ಯಾಸಯೋಗಿಚರಿತಮ್ P-57
3. ಅಸ್ಮೈ ಕಿಲ ಕೃತಿನಿರ್ಮಿತ್ಸವೇ ಚತುರಾನನಾಯೇವ ಪ್ರೇಮಭಾರೇಣ ಸಾಕ್ಷಾತ್ ಸನ್ನಿಹಿತಾ ಭಗವತೀ ಭಾರತೀ ಮಹನೀಯಮಹಃ ಪ್ರರೋಹಾಂ ಕಾಮಪಿ ಮಣಿಲೇಖಿಕಾಂ ವ್ಯತಾರೀತ್.
4: ಏತಸ್ಯ ಖಲು ಭವಂತಿ ವರ್ಷಾವಗ್ರಹಯೋಃ ಕಟಾಕ್ಷವೀಕ್ಷಾವಂಶವದಾ ಮೇಘಾಃ ।
5. ಅಸ್ಮೈದ್ರು ಹಿ ಜನಾಃ ಮನಸಾಪ್ಯಪಚರಂತೋ ವ್ಯಾಧಾ ಇವ ಸ್ವಯಮೇವ ವಪೂಂಷಿ ನಾಶಯಂತಿ ॥ -ಶ್ರೀವ್ಯಾಸಯೋಗಿಚರಿತಮ್ P-57

ಶಾಪಾನುಗ್ರಹಶಕ್ತರಾದ ಈ ಮಹಾತ್ಮರು ಅಮೃತಮಯದೃಷ್ಟಿಯಿಂದ ನೋಡಿದ ಮಾತ್ರದಿಂದ ಅಭಿಮಂತ್ರಿತವಾದ ತಿಲಕವನ್ನು ಹಣೆಯಲ್ಲಿಧರಿಸಿದ ರಾಜಮಹಾರಾಜರು ರಣಮುಖದಲ್ಲಿ ಕಾರ್ತವೀರ್ಯಾರ್ಜುನರಂತೆ ಅಸಾಧಾರಣ ಶೌರ್ಯ-ಪರಾಕ್ರಮಗಳಿಂದ ಹೋರಾಡಿ ಶತ್ರುಗಳನ್ನು ಜಯಿಸಲು ಸಮರ್ಥರಾಗುತ್ತಿದ್ದರು.[6]

ಇಂತು ಮಹಿಮೋಪೇತರಾದ ಯತೀಶ್ವರರಬಳಿಗೆ ಬಂದ ನರಸಭೂಪಾಲನು ಶ್ರೀಗುರುಗಳಿಗೆ ಸಾಷ್ಟಾಂಗವೆರಗಿದನು.[7] ಶ್ರೀಗಳವರು ನಗೆಮೊಗದಿಂದ ನರಸಮಹೀಪಾಲನ ಕುಶಲಪ್ರಶ್ನೆಮಾಡಿದಮೇಲೆ ಸಾಮ್ರಾಜ್ಯಧುರಂಧರನಾದ ನಾಯಕನ ಆಜ್ಞೆಯಂತೆ ಶ್ರೀವಿರೂಪಾಕ್ಷದೇವಾಲಯದ ಅರ್ಚಕಾದಿಗಳು ಪೂರ್ಣಕುಂಭಸಹಿತರಾಗಿ ವೇದಘೋಷಗಳಿಂದ ಗುರುವರರನ್ನು ಭಕ್ತಿಯಿಂದ ಸ್ವಾಗತಿಸಿದರು.

ಅನಂತರ ನರಸನಾಯಕನ ಪ್ರಾರ್ಥನೆಯಂತೆ ಶ್ರೀವ್ಯಾಸತೀರ್ಥರು ಪಾಲಕಿಯಿಂದಿಳಿದು ಅಲಂಕೃತ ಆನೆಯಮೇಲೆ ಸುವರ್ಣಾಂಬಾರಿಯಲ್ಲಿ ಕುಳಿತರು. ವಾದ್ಯವೈಭವ, ವೇದಘೋಷ, ಜಯಜಯಕಾರಗಳಾಗುತ್ತಿರಲು ಸನತ್ಕುಮಾರರು ದೇವೇಂದ್ರನೊಡನೆ ಬರುವಂತೆ ನರಸಭೂಪಾಲನ ನೇತೃತ್ವದಲ್ಲಿ ಮೆಲ್ಲಮೆಲ್ಲನೆ ವಿಜಯನಗರವನ್ನು ಪ್ರವೇಶಿಸಿದರು.[8]

ಇಂತು ರಾಜಗುರುಗಳ ಮೆರವಣಿಗೆಯು ರಾಜವೈಭವದಿಂದ ಬರುತ್ತಿರಲು ಆ ನಗರ ನಿವಾಸಿ ಸ್ತ್ರೀ-ಪುರುಷರು ಬೀದಿಬೀದಿಗಳಲ್ಲಿ ಲಾಜಾ-ಕುಸುಮಗಳ ವರ್ಷಗೈಯುತ್ತ ಜಯ ಜಯಕಾರಮಾಡಿ ವಂದಿಸುತ್ತಿದ್ದರು. ಸುಮಂಗಲೆಯರು ಕದಳಾರತಿಗಳನ್ನೆತ್ತುತ್ತಿದ್ದರು. ವಂಧಿ-ಮಾಗಧರು ಗುರುಗಳ ಬಿರುದಾವಳಿಗಳನ್ನು ಉದ್ಘೋಷಿಸುತ್ತಿದ್ದರು. ರಾಜಬೀದಿಯ ಇಕ್ಕೆಲಗಳಲ್ಲಿ, ಮಂದಿರಗಳ ಮೇಲುಪ್ಪರಿಗೆಗಳಲ್ಲಿ ನಿಂತು ಸಹಸ್ರ, ಸಹಸ್ರ ಸಂಖ್ಯಾತ ಜನರು ಗುರುಗಳ ದರ್ಶನಮಾಡಿ ಕೃತಾರ್ಥರಾಗುತ್ತಿದ್ದರು.

ನೋಡಲಸದಳವಾದ ಪ್ರಖರತೇಜಸ್ಸಿನ ಕಾಂತಿಯಿಂದ ಬೆಳಗುತ್ತಿದ್ದ ಆ ಯತಿಸಾರ್ವಭೌಮರನ್ನು ನಗರನಿವಾಸಿಗಳು ಕುತೂಹಲದಿಂದ ನೋಡುತ್ತಾ ಅವರ ಮಹಿಮಾದಿಗಳನ್ನು ಬಣ್ಣಿಸುತ್ತಾ ಪರಸ್ಪರ ಮಾತನಾಡುತ್ತಿದ್ದರು. ಯತಿವರರು ಮಂದಹಾಸವದನರಾಗಿ ಪಟ್ಟಣಿಗರ ವಚನಗಳನ್ನಾಲಿಸುತ್ತಾ ಕರುಣಾರ್ದ್ರ ದೃಷ್ಟಿ

---

6. ಏತಸ್ಯ ಕಿಲ ವೀಕ್ಷಣ ಮಾತ್ರೇಣಾಭಿಮಂತ್ರಿತತಯಾ ವಿಭೂತ್ಯಾ ತಿಲಕಿತನಿಟಲಭಾಗ ನೃಪತಯಃ ಸಮರಶಿರಸಿ ಕೃತವೀರ್ಯಕುಮಾರವತ್ ಪ್ರತಿರಿಪುಲಲಿತಾಕೃತೀನಾಂ-।
7. ...ಮಹಾತಾಪಸಮುಪಸೃತ್ಯ...ಪ್ರಶ್ರಯೇಣ ಶತಶಃ ಪ್ರಾಣಂಸೀತ್ ॥
8. ...ತೇನ ಸನತ್ಕುಮಾರ ಇವ ಶತಕ್ರತುನಾ ಪರಿಷ್ಕ್ರಿಯಮಾಣಃ ಶನೈಶ್ಶನೈರ್ನಗರಮಗಾಹತ ॥

-ಶ್ರೀವ್ಯಾಸಯೋಗಿಚರಿತಮ್ P-58

ಯಿಂದ ಅವರನ್ನೀಕ್ಷಿಸುತ್ತಾ ನವಕುಸುಮಗಳಿಂದಲಂಕೃತವಾದ ಅನೇಕ ರಾಜವೀಧಿಗಳನ್ನು ದಾಟಿ ತಮಗಾಗಿ ಏರ್ಪಡಿಸಲಾಗಿದ್ದ ಭವ್ಯಭವನದತ್ತ ಚಿತ್ತೈಸಿದರು.[1]

ಅನಂತರ ಶ್ರೀಗಳವರು ತಮಗಾಗಿ ನರಸಭೂಪಾಲನು ಏರ್ಪಡಿಸಿದ್ದ ಭವ್ಯ ಮಂದಿರದ ಮುಂದೆ ಅಂಬಾರಿಯಿಂದ ಇಳಿದು ದೇವರನ್ನು ಮುಂದೆಮಾಡಿಕೊಂಡು ಹರ್ಷಧ್ವನಿಯಾಗುತ್ತಿರಲು, ಸುಮಂಗಲಿಯರು ಆರತಿಮಾಡುತ್ತಿರಲು ಮಹಾಮಂದಿರವನ್ನು ಪ್ರವೇಶಿಸಿದರು. ಆ ಮಂದಿರವು ಸ್ಫಟಿಕಮಣಿಯಂತೆ ಶುಭ್ರವಾದ ಅಮೃತಶಿಲೆಯ ಸೋಪಾನಗಳು, ವಿಸ್ತಾರವಾದ ಸುವರ್ಣಜಗುಲಿಗಳು, ವಿದ್ರುಮ ಖಚಿತ ಸ್ತಂಭಗಳ ಸಾಲುಗಳಿಂದಲೂ ಕಂಗೊಳಿಸುತ್ತಿತ್ತು. ನರಸನೃಪಾಲನು ಹಸ್ತಲಾಘವನೀಡುತ್ತಿರಲು ಮೃಗರಾಜನು ಪರ್ವತದ ಕಂದರವನ್ನು ಪ್ರವೇಶಿಸುವಂತೆ ಪ್ರವೇಶಮಾಡಿದರು.[2]

ನರಸನಾಯಕನು ಗುರುಗಳನ್ನು ಕರೆತಂದು ಅವರಿಗಾಗಿಯೇ ನಿರ್ಮಿಸಿದ್ದ ಸುವರ್ಣಮಯ ಭದ್ರಾಸದನದಲ್ಲಿ (ಮುದ್ರಾಸನದಲ್ಲಿ) ಕೂಡಿಸಿ ನಮಸ್ಕರಿಸಿದನು. ಆಗ ಸಮಸ್ತ ಅಜ್ಞಾನಾಂಧಕಾರವನ್ನು ಧ್ವಂಸಗೊಳಿಸುವ ಸಾಮರ್ಥ್ಯವುಳ್ಳ ವ್ಯಾಸಮುನಿಸಾರ್ವಭೌಮರು ಮಂದಾಕಿನಿಯ ಪುಲಿನಮಧ್ಯಭಾಗವನ್ನು ಮಾರ್ಗವಶಾತ್ ಪ್ರವೇಶಿಸಿದ ಮಾರ್ತಾಂಡಬಿಂಬದಂತೆ ವಿರಾಜಿಸಿದರು.[3]

ಅನಂತರ ನರಸಭೂಪಾಲನು ವ್ಯಾಸಮುನಿಗಳಿಗೆ ಸಾಮ್ರಾಜ್ಯದ ಸಕಲ ಸಚಿವ-ಸೇನಾನಿ-ದಣ್ಣಾಯಕ-ಸಾಮಂತರು, ರಾಜಪರಿವಾರ, ವಿದ್ವಜ್ಜನರು, ಪ್ರಮುಖ ನಾಗರಿಕರ ಪರಿಚಯಮಾಡಿಸಿದನು. ಗುರುಗಳ ಎಲ್ಲರ ಕುಶಲಪ್ರಶ್ನೆಮಾಡಿ ಫಲಮಂತ್ರಾಕ್ಷತೆಯನ್ನು ಕರುಣಿಸಿದರು. ತರುವಾಯ ತಾಪಸಸಾರ್ವಭೌಮರಾದ ಗುರುಗಳ ಗುಣ ವರ್ಣನೆಯನ್ನು ಪದೇಪದೇ ಕೇಳುವುದರಿಂದ ನಮ್ರೀಭಾವಹೊಂದಿ ಸರ್ವಾವಯವಗಳೂ ಸಂಕುಚಿತವಾದವೋ ಎಂಬಂತೆ ಬಾಗಿದ ಶರೀರವುಳ್ಳವನಾಗಿ ಶ್ರೀಗಳವರಿ

---

1. ತೇಜೋವಿಶೇಷಾದತಿದುರ್ನಿರೀಕ್ಷಂ । ರಥ್ಯಾಸು ರಥ್ಯಾಸು ಕುತೂಹಲೇನ ॥
ತತ್ರೈನಮಾಲೋಕಯತಾಂ ಜನಾನಾಂ । ಉಚ್ಚಾವಚಂ ಭಾಷಿತಮೇವಮಾಸೀತ್ ॥
ಇತ್ಯಾದಿ ಪೌರವಚನಂ ನಿಖಿಲಂ ಚ ಶೃಣ್ವನ್ । ವಿಕ್ಷಾಭಿರೇಷವಿಲಸತ್ಕರುಣಾಕರೀಭಿಃ ॥
ವ್ಯಾಕೀರ್ಣನವ್ಯಮೃದುಪುಷ್ಪಪಟೀರಚರ್ಚಾ । ವೀಥೀರಗಾಹತಮೇದುರವೈಜಯಂತೀಃ ॥

2. ತದನು ಸ ಪುರಮಾಗಾತ್ ಕ್ಷ್ಮಾಧಿಪೇನ ಪ್ರದಿಷ್ಟಂ ।
ಸ್ಫಟಿಕಮಣಿಮಯೋರುಸ್ಫಾರಸೋಪಾನಮಾರ್ಗಂ ॥
ವಿಪುಲ ಕನಕವೇದೀ ವಿದ್ರುಮಸ್ತಂಭರಾಜಿಂ । ಮೃಗಪತಿರಿವ ಕುಂಜಂ ಮೇದಿನೀಭೃದ್ವರಸ್ಯ ॥
—ಶ್ರೀವ್ಯಾಸಯೋಗಿಚರಿತಮ್ P–58

3. ತತ್ರ ವ್ಯರಾಜತ ಸಮಸ್ತತಮೋನಿಹಂತಾ । ಮುದ್ರಾಸನೇ ಸ ಭವಸನ್ಮುನಿಸಾರ್ವಭೌಮಃ ।
ಮಾರ್ತಾಂಡಬಿಂಬ ಇವ ಮಾರ್ಗವಶೇನ ಮಂದಂ । ಮಂದಾಕಿನೀಪುಲಿನಮಧ್ಯಭುವಂ ಪ್ರವಿಷ್ಟಃ ॥

ಎದುರಿಸಲ್ಲಿ ಸ್ವಲ್ಪದೂರದಲ್ಲಿ ಕರಮುಗಿದು ಶಿರಬಾಗಿ ನಿಂತಿರಲು ಅವನ ವಿನಯಾತಿಶಯವನ್ನುಕಂಡು ತೃಪ್ತರಾಗಿ ಶ್ರೀವ್ಯಾಸತೀರ್ಥರು ಅವನನ್ನು ಶ್ಲಾಘಿಸಿ, ಆಶೀರ್ವದಿಸಿ ಫಲಮಂತ್ರಾಕ್ಷತೆನೀಡಿ ಅರಮನೆಗೆ ಕಳಿಸಿದರು.[1] ನರಸಮಹೀಪಾಲನು ತೆರಳಿದ ತರುವಾಯ ತಮಗೆ ವಿಹಿತವಾದ ಸ್ನಾನಾಹ್ನಿಕ-ಜಪತಪಾದ್ಯನುಷ್ಠಾನ-ದೀಪಾರಾಧನಾದಿಗಳನ್ನು ಕ್ರಮವಾಗಿ ನೇರವೇರಿಸಿ ವ್ಯಾಸಮುನಿಗಳು ವಿಶ್ರಾಂತಿ ಪಡೆದರು.[2]

ಂ ಂ ಂ ಂ ಂ

ಮರುದಿನ ನರಸನಾಯಕನು ಸಮಸ್ತಬಿರುದಾವಳಿ ವಾದ್ಯವೈಭವದಿಂದ ಬಂದು ಗುರುಗಳದರ್ಶನಪಡೆದು "ಗುರುದೇವ ! ರಾಜಸಭೆಗೆ ದಯಮಾಡಿಸಿ ರಾಜಸಭೆಯಲ್ಲಿ "ರಾಜಗುರುಪೀಠ"ವನ್ನಲಂಕರಿಸಿ ಸರ್ವರನ್ನೂ ಆಶೀರ್ವದಿಸಬೇಕು"ಎಂದು ವಿಜ್ಞಾಪಿಸಲು ಅವನ ಭಕ್ತಿಶ್ರದ್ಧೆಗಳಿಂದ ಸುಪ್ರೀತರಾದ ಶ್ರೀವ್ಯಾಸರಾಜರು ರಾಜಸಭೆಗೆ ದಯಮಾಡಿಸಿದರು. ಕಿಕ್ಕಿರಿದು ತುಂಬಿದ ರಾಜಸಭೆಯಲ್ಲಿ ಸಾಮ್ರಾಜ್ಯಕಾರ್ಯಧುರಂಧರನಾದ ನರಸಭೂಪಾಲನು ಗುರುಗಳನ್ನು ಗೌರವದಿಂದ ಕರೆದೊಯ್ದು, ಪಂಡಿತರು ವೇದಘೋಷಮಾಡುತ್ತಿರಲು, ತಾಳಸ್ತುತಿಪಾಠಕರು ಬಿರುದಾವಳಿಗಳನ್ನು ಉಚ್ಚರಿಸುತ್ತಿರಲು, ವಾದ್ಯಮೇಳಗಳು ಮೊಳಗುತ್ತಿರಲು ಶ್ರೀಯವರನ್ನು ರತ್ನಸಿಂಹಾಸನದಲ್ಲಿ ಮಂಡಿಸಿ ಧನಕನಕಾಭರಣಾದಿಗಳನ್ನು ಸಮರ್ಪಿಸಿ "ರಾಜಗುರು ಶ್ರೀವ್ಯಾಸರಾಜಗುರುಸಾರ್ವಭೌಮರಿಗೆ ಜಯವಾಗಲಿ" ಎಂದು ಜಯಜಯ ಘೋಷಮಾಡಿ ನಮಸ್ಕರಿಸಿದನು. ಸಮಸ್ತರಾಜಸಭೆಯೂ ಹರ್ಷಧ್ವನಿ ಕರತಾಡನ ಜಯಘೋಷಮಾಡಿ ಮುನಿವರರಿಗೆ ನಮಿಸಿತು.

ಆಗ ನರಸನಾಯಕನು ತನ್ನ ಪೂರ್ವಾರ್ಜಿತ ಪುಣ್ಯವಿಶೇಷದಿಂದ ಮಹಾತ್ಮರಾದ ಶ್ರೀವ್ಯಾಸತೀರ್ಥರ ಸೇವೆಯು ತನಗೆ ಲಭಿಸಿತೆಂದು ಆನಂದಪುಳುಕಿತಗಾತ್ರನಾಗಿ ಭಕ್ತಿಶ್ರದ್ಧೆಗಳಿಂದ ಪಾಂಡುಕುಮಾರನಾದ ಧರ್ಮರಾಜನು ಭಗವಾನ್ ಶ್ರೀಬಾದನಾರಾಯಣ ದೇವರನ್ನು ಪೂಜಿಸಿದಂತೆ ಅರ್ಘ್ಯಪಾದ್ಯಾದಿಗಳಿಂದ ಶ್ರೀವ್ಯಾಸತೀರ್ಥರನ್ನು

---

1. ಸ ಚ ಭಗವಾನನತಿಸಮೀಪೋಪವಿಷ್ಟಮಗಣನೀಯಸ್ಯಾತ್ಮಗುಣವರ್ಣನಸ್ಯಾಕರ್ಣನೇನ ಸಂಕುಚಿತಮಿವ ಸಕಲಾವಯವೈರ್ಮಹಾರ್ಹೇಣ ವಿನಯಾಭರಣೇನ ಪ್ರಹ್ವೀಭವಂತಂ... ನರಪತಿಂ ಪ್ರಾಂಜಲಿಂ ಚಿರೇಣ ಭಗವಾನಭಿಗಮನಾಯ ತಮನ್ವಜಾನೀತ್ ॥

2. ತಸ್ಮಿನ್ ಗತೇ ಸಮುಚಿತಂ ಸಕಲಂ ಕರಣೀಯಂ ಕ್ರಮೇಣ ಸದಿವಾನಿಶಮತ್ಯವಾಹಿತ್ ॥
-ಶ್ರೀವ್ಯಾಸಯೋಗಿಚರಿತಮ್ P–59

ಅರ್ಚಿಸಿ ಕೃತಾರ್ಥನಾದನು.[1]

ವ್ಯಾಸಯತಿಗಳು ತಾತ್ಕಾಲಿಕ ಸಮುಚಿತ ಧರ್ಮೋಪದೇಶದಿಂದ ಸರ್ವರನ್ನೂ ಆಶೀರ್ವದಿಸಿ, "ಸತ್ಯ-ಧರ್ಮ-ನಿಷ್ಠೆಗಳಿಂದ ಸಕಲ ಪ್ರಜೆಗಳಿಗೆ ಹಿತವಾಗುವಂತೆ, ಸಾಮ್ರಾಜ್ಯ-ಸಾಮ್ರಾಟರಿಗೆ ವಿಧೇಯನಾಗಿ, ಸಾಮ್ರಾಜ್ಯದ ಅಭ್ಯುದಯಾಸಕ್ತನಾಗಿ ಆಡಳಿತವನ್ನು ನಿರ್ವಹಿಸಿ ಕೀರ್ತಿಶಾಲಿಯಾಗಬೇಕು" ಎಂದು ನರಸನಾಯಕನಿಗೆ ಉಪದೇಶಿಸಿ, "ಮಹಾಪರಾಕ್ರಮಿಯೂ, ಸ್ವಾಮಿನಿಷ್ಠನೂ ಕನ್ನಡಸಾಮ್ರಾಜ್ಯ ಹಿತಸಾಧಕನೂ, ಶ್ರೀಹರಿಗುರುಭಕ್ತನೂ, ಗುರುವಿಧೇಯಚರಿತನೂ ಆದ ಸಾಮ್ರಾಜ್ಯದ ಕ್ಷಮಾಧಿಪತಿಯಾದ ನರಸಭೂಪಾಲನಿಗೆ ಸಕಲಸಚಿವ-ಸಾಮಂತ-ಸೇನಾನಿ-ಧಣಾಯಕರು ಮತ್ತು ಪ್ರಜರೂ ಆಡಳಿತ ವಿಚಾರಾದಿಗಳಲ್ಲಿ ಸಹಕಾರನೀಡಿ ನಾಡಿನ-ಅಭ್ಯುದಯವಾಗುವಂತೆ ಮಾಡಿ ಶ್ರೇಯವಂತರಾಗಬೇಕು" ಎಂದು ಆದೇಶನೀಡಿ ಮತ್ತೊಮ್ಮೆ ಸರ್ವರನ್ನೂ ಹರಸಿ ಶ್ರೀಮಠಕ್ಕೆ ದಯಮಾಡಿಸಿದರು.

## ೩೯. ಯಂತ್ರೋದ್ಧಾರಕ ಶ್ರೀ ಪ್ರಾಣದೇವರು

ಶ್ರೀವ್ಯಾಸರಾಜರು ವಿಜಯನಗರಕ್ಕೆ ಬಂದು ಹಲವಾರು ದಿವಸಗಳಾಗಿತ್ತು. ಶ್ರೀವ್ಯಾಸತೀರ್ಥರು ವಿದ್ಯಾನಗರಿಗೆ ಬಂದಲಾಗಾಯಿತು ಪ್ರತಿದಿನ ಚಕ್ರತೀರ್ಥಕ್ಕೆ ಬಂದು ಅಲ್ಲಿ ತುಂಗಾನದಿಯಲ್ಲಿ ಅವಗಾಹನಸ್ನಾನಮಾಡಿ, ಎತ್ತರದ ಬಂಡೆಯೊಂದರಲ್ಲಿ ಕುಳಿತು. ಸ್ನಾನಾಹ್ನಿಕಾದಿಗಳನ್ನು ನೆರವೇರಿಸಿ ಬರುತ್ತಿದ್ದರು. ಒಂದು ರಾತ್ರಿ ಅವರೊಂದು ವಿಚಿತ್ರ ಕನಸು ಕಂಡರು. ಕನಸಿನಲ್ಲಿ ಶ್ರೀಮುಖ್ಯಪ್ರಾಣದೇವರು (ವಾಯುದೇವರು ದರ್ಶನವಿತ್ತು ಆ ತರುವಾಯ ತಮ್ಮ ಹನುಮ-ಭೀಮ-ಮಧ್ವಾವತಾರ ರೂಪಗಳಿಂದ ಆಶೀರ್ವದಿಸಿ"ವತ್ಸ! ನಾವು ನಿಮಗೆ ಒಲಿದಿದ್ದೇವೆ. ನಾವು ಈ ಪವಿತ್ರ ನೆಲದಲ್ಲಿ ಹಿಂದೆ ನಮ್ಮ ಮೊದಲ ಅವತಾರತಾಳಿ ಜನಿಸಿದ್ದೆವು. ಇದು ನಮ್ಮ ಜನ್ಮಭೂಮಿ. ನಿನಗೆ ನಾವು ಹನುಮರೂಪದಿಂದ ಒಲಿದುಬರುತ್ತೇವೆ. ಚಕ್ರತೀರ್ಥದ ಪವಿತ್ರತಟದಲ್ಲಿ ನಮ್ಮನ್ನು ಪ್ರತಿಷ್ಠಾಪಿಸು.ನಾವು ನಿನ್ನಕಾರ್ಯವೆಲ್ಲಕ್ಕೂ ಬೆಂಬಲಿಗರಾಗಿದ್ದು ಜಯನೀಡುತ್ತೇವೆ. ಮತ್ತು ಕನ್ನಡಸಾಮ್ರಾಜ್ಯದ ಸರ್ವತೋಮುಖ ಅಭಿವೃದ್ಧಿಯಾಗುವಂತೆಮಾಡಿ ಅನುಗ್ರಹಿಸುತ್ತೇವೆ" ಎಂದು ಅಭಯವಿತ್ತು ಅದೃಶ್ಯರಾದರು.

ಎಚ್ಚರಗೊಂಡ ಶ್ರೀಗಳವರು ಸ್ವಪ್ನಾರ್ಥವನ್ನು ನೆನೆದು ಹಿಗ್ಗಿದರು. ಶ್ರೀಮುಖ್ಯಪ್ರಾಣನ ಅನುಗ್ರಹವಾಯಿತೆಂದು ಸಂತೋಷಿಸಿದರು. ಯಾವಾಗ ಎಲ್ಲಿ ಹೇಗೆ ಒಲಿದುಬರುವರೋ ಎಂದು ಯೋಚಿಸುತ್ತಾ ಪ್ರತಿನಿತ್ಯದಪದ್ಧತಿಯಂತೆ ಮಿತ ಪರಿವಾರದೊಡನೆ ಚಕ್ರತೀರ್ಥಕ್ಕೆ ಸ್ನಾನಮಾಡಲು ಮೇನೆಯಲ್ಲಿ ಕುಳಿತುಬಂದರು.

---

1. ಅರ್ಚಯಂತಮಿಮಮುಪ್ಯರ್ಘಪೂರ್ವಯಾ । ಭಾಗಧೇಯಪರಿಣಾಮಮಾತ್ಮನಃ ।
ಪಾರ್ಥಿವಸ್ಸಪದಿ ಪರ್ಯಪೂಜಯತ್ । ಪಾಂಡುಸೂನುರಿವ ಬಾದರಾಯಣಮ್ ॥
ಶ್ರೀವ್ಯಾಸಯೋಗಿಚರಿತಮ್. P. 58

ಚಕ್ರತೀರ್ಥವು ಪರಮಪಾವನತೀರ್ಥವು. ಅಲ್ಲಿ ವರಾಹನಂದಿನಿಯಾದ ತುಂಗ ಭದ್ರೆಯು ಮಂಗಲಕರ ಮಂಜುಳರವದಿಂದ ನಲಿಯುತ್ತಾ ಭರದಿಂದ ಹರಿಯುತ್ತಿರುವಳು. ಭಗವಾನ್ ದಿನಮಣಿಯು ಪೂರ್ವದಿಗಂತದಿಂದ ಮೇಲೆದ್ದು ಬಂದು ಅಮೃತಮಯ ಅರುಣ ಕಿರಣಗಳಿಂದ ಸರ್ವಸುಜನರನ್ನು ಆನಂದಗೊಳಿಸುತ್ತಿದ್ದಾನೆ. ಗುರುವರರು ಸಂಕಲ್ಪಪೂರ್ವಕ ಚಕ್ರತೀರ್ಥದಲ್ಲಿ ಅವಗಾಹನಸ್ನಾನಮಾಡಿ, ದಂಡೋದಕದಿಂದ ಸಜ್ಜನರನ್ನು ಪವಿತ್ರಗೊಳಿಸಿ, ಮೇಲೆದ್ದುಬಂದು ಒಂದುವಿಶಾಲವಾದ ಬಂಡೆಯ ಮೇಲೆ ಕಾಷಾಯಾಂಬರ ಧರಿಸಿ ಕುಳಿತು ನಾಮಧಾರಣಮಾಡಿಕೊಂಡು ಪ್ರಾತರಾಹ್ನಿಕ ಜಪತಪಾದಿಗಳನ್ನು ಪೂರೈಸಿ ಶ್ರೀಹರಿವಾಯುಗಳ ಧ್ಯಾನದಲ್ಲಿ ಮಗ್ನರಾದರು.

ಆಗ ಶ್ರೀಗಳವರ ಹೃದಯಮಂದಿರದಲ್ಲಿ ದಿವ್ಯಪ್ರಕಾಶವು ಬೆಳಗಿದಂತಾಗಿ ಆ ಬೆಳಕಿನ ಕಾಂತಿವಲಯದಲ್ಲಿ ಕರದಲ್ಲಿ ಗದೆ, ಕಮಂಡಲುಗಳನ್ನು ಹಿಡಿದು ಪಾದಗಳಲ್ಲಿ ಮಣಿಪಾದುಕೆಗಳನ್ನು ಮೆಟ್ಟಿರುವ ಮುಖ್ಯಪ್ರಾಣದೇವರು ದರಹಾಸ ಬೀರುತ್ತಾ ನಿಂತಂತೆ ಭಾಸವಾಯಿತು ! ಆ ಮಂಗಳಕರ ಸ್ವರೂಪವನ್ನು ದರ್ಶಿಸುತ್ತಿದ್ದಂತೆಯೇ ಪ್ರಾಣದೇವರು ಕಣ್ಮರೆಯಾದರು. ಶ್ರೀಯವರು ಕಣ್ತೆರೆದರು. ಅವರ ಮುಂಭಾಗದಲ್ಲಿದ್ದ ಕರಿಯ ಬಂಡೆಯ ಮೇಲೆ ಅವರ ದೃಷ್ಟಿ ಹರಿಯಿತು. ಕೂಡಲೇ ಅದು ಮಾಯವಾಗಿ ಅಲ್ಲೊಂದು ಕಪಿಯು ಕುಳಿತಿರುವುದನ್ನು ನೋಡಿದರು. ತಮ್ಮ ಹೃದಯ ಗುಹೆಯಲ್ಲಿ ದರ್ಶನವಿತ್ತು ಅನುಗ್ರಹಿಸಿದ ಪ್ರಾಣದೇವರ ಆಕಾರತಾಳಿ ನಿಂತಂತಾಗಿ ಮತ್ತೆ ಬರೆ ಬಂಡೆಗಲ್ಲಾಗಿ ಗೋಚರಿಸಿತು ! ವ್ಯಾಸತೀರ್ಥರ ಮುಖದಲ್ಲಿ ಮಂದಹಾಸ ಮಿನುಗಿತು. ಹೃದಯ ಭಕ್ತಿಭರದಿಂದ ಉಬ್ಬಿತು. ಕಣ್ಣಾಲಿಗಳು ತೇವಗೊಂಡವು. "ದೇವ ! ಅನುಗೃಹೀತನಾದೆ" ಎಂದು ಗದ್ಗದಕಂಠದಿಂದುಸರಿದರು, ಹತ್ತಿರ ಆಹ್ನಿಕ ಪಾತ್ರೆಯಲ್ಲಿದ್ದ ಅಂಗಾರದಿಂದ ತಮಗೆ ದರ್ಶನವಿತ್ತ ಶ್ರೀಪ್ರಾಣದೇವರನ್ನು ಆ ಬಂಡೆಯಮೇಲೆ ಚಿತ್ರಿಸಿದರು. ಚಿತ್ರ ಸುಂದರವಾಗಿ ಮೂಡಿಬಂದಿತ್ತು. ಆದರೇನಾಶ್ಚರ್ಯ! ಅವರು ಬರೆದ ಮಾರುತಿಯ ಚಿತ್ರ ಕಣ್ಮರೆಯಾಗಿ ಮತ್ತೆ ಆ ಬಂಡೆ ಬರಿಗಲ್ಲಾಗಿ ನಿಂತಿತು. ! ಶ್ರೀವ್ಯಾಸರಾಜರು ಮತ್ತೆ ಅದೇ ಚಿತ್ರವನ್ನು ಬರೆದರು ಪುನಃ ಅದು ಅದೃಶ್ಯವಾಯಿತು !

ಶ್ರೀಯವರು "ಜೀವೋತ್ತಮ ! ವಾಯುನಂದನ, ದಾಸನೊಡನೆ ವಿನೋದ ಮಾಡುತ್ತಿರುವೆಯಾ? ಪ್ರಸನ್ನನಾಗು ಸ್ವಾಮಿ"ಎಂದು ಪ್ರಾರ್ಥಿಸಿ ಮತ್ತೆ ಚಿತ್ರವನ್ನು ಬರೆದರು. ಹೀಗೆ ಹನ್ನೆರಡುಸಲ ಪುನಃ ಪುನಃ ಪ್ರಾಣದೇವರ ಚಿತ್ರ ಬರೆಯುವುದು, ಬರೆದೊಡನೆ ಅದು ಅದೃಶ್ಯವಾಗುವುಧು! ಹೀಗೆ ಜರುಗಿತು, ವ್ಯಾಸರಾಜರು ಇದೇಕೆ ಹೀಗಾಗುತ್ತಿದೆ ಎಂದು ಚಿಂತಿಸುತ್ತಿರಲು ಮನದಲ್ಲಿ ಏನೋ ಸ್ಫುರಿಸಿದಂತಾಗಿ ನಸುನಗುತ್ತಾ ಆ ಬಂಡೆಯಮೇಲೆ ಮೊದಲ ಒಂದು ಪ್ರಾಣದೇವರ ಯಂತ್ರವನ್ನು ಬರೆದು ಅದರ ಸುತ್ತಲೂ ಹಿಂದೆ ತಾವು ಬರದ ಹನ್ನೆರಡು ಕಪಿವೀರ ಹನುಮಂತನ ಚಿತ್ರಗ

ಳನ್ನು ಬರೆದರು. ಒಂದರ ಬಾಲ ಮತ್ತೊಂದಕ್ಕೆ ಗಂಟುಹಾಕಿದಂತೆ ಹನ್ನೆರಡು ಪ್ರಾಣದೇವರ ಚಿತ್ರಗಳನ್ನು ಯಂತ್ರದ ಕಾವಲಾಗಿ ಬರೆದರು. ಆ ನಂತರ ಬೀಜಾಕ್ಷರಗಳನ್ನು ಬರೆದು ಯಂತ್ರದ ಮಧ್ಯಭಾಗದಲ್ಲಿ ಶ್ರೀಪ್ರಾಣದೇವರ ದಿವ್ಯಸ್ವರೂಪವನ್ನು ಚಿತ್ರಿಸಿ ದಿಗ್ಬಂಧನವಮಾಡಿ "ಪ್ರಭು, ವಾಯುನಂದನ, ಹನುಮ-ಭೀಮ-ಮಧ್ವಾಭಿಧ ಶ್ರೀಭಾರತೀರಮಣ ಮುಖ್ಯಪ್ರಾಣದೇವ ! ಕನಸಿನಲ್ಲಿ ಒಲಿದು ಬರುವುದಾಗಿ ಅಭಯವಿತ್ತು ದಾಸನೊಡನೆ ಏಕಿಂತು ಸರಸವಾಡುತ್ತಿರುವೆ ? ಭಕ್ತವತ್ಸಲನಾದ ನಿನಗಿದು ಶೋಭಿಸುವುದೇ ? ದೇವ, ಈಗ ನಿನ್ನನ್ನು ಈ ಯಂತ್ರದಲ್ಲಿ ದಿಗ್ಬಂಧನ ಮಾಡಿ ಚಿತ್ರಿಸಿದ್ದೇನೆ. ಪ್ರಸನ್ನನಾಗಿ ಸ್ಥಿರವಾಗಿ ನಿಂತು ಕನ್ನಡನಾಡಿನ ಉನ್ನತಿ, ಭಕ್ತಜನರ ಮನೋಽಭೀಷ್ಟಗಳನ್ನು ಪೂರ್ಣಮಾಡುತ್ತಾ ಅನುಗ್ರಹಿಸು" ಎಂದು ಪ್ರಾರ್ಥಿಸಿ ತುಳಸೀಪುಷ್ಪಗಳನ್ನು ಅರ್ಪಿಸಿದರು. ಆಗ ಯಂತ್ರಬದ್ಧನಾದ ಪ್ರಾಣದೇವನು ತನ್ನ ಅಂತರಂಗ ಭಕ್ತರಾದ ವ್ಯಾಸಮುನಿಗಳಲ್ಲಿ ಪ್ರಸನ್ನನಾಗಿ ನಗುನಗುತ್ತಾ ದರ್ಶನವಿತ್ತು ಅಭಯಪ್ರದಾನಮಾಡಿ ಅಂತರ್ಧಾನನಾದನು ! ಗುರುಗಳು ಅಂಗಾರದಲ್ಲಿ ಬರೆದ ಚಿತ್ರ ಬಂಡೆಗಲ್ಲಿನಲ್ಲಿ ಉಬ್ಬಿ ಸಾಕಾರಮೂರ್ತಿಯಾಗಿ ಕಂಗೊಳಿಸಿತು ! ಯಂತ್ರೋದ್ಧಾರಕ ಪ್ರಾಣದೇವ ಸ್ಥಿರವಾಗಿ ನಿಂತುಬಿಟ್ಟ ! ! ಆಗ ಗುರುಗಳಿಗಾದ ಆನಂದ ಅವರ್ಣನೀಯ. ತಮ್ಮಲ್ಲಿ ಅನುಗ್ರಹಮಾಡಿದ ಪ್ರಾಣದೇವರನ್ನು ಭಕ್ತಿಯಿಂದ ಸ್ತುತಿಸಿ ನಮಸ್ಕರಿಸಿದರು. ಈ ಅದ್ಭುತವನ್ನು ಕಣ್ಣಾರೆ ಕಂಡ ಮಠದ ಪರಿವಾರ-ಚಕ್ರತೀರ್ಥಕ್ಕೆ ಸ್ನಾನಕ್ಕಾಗಿ ಆಗಮಿಸಿದ್ದ ಧಾರ್ಮಿಕರು ವ್ಯಾಸರಾಜರ ಅಗಾಧಮಹಿಮೆಯನ್ನು ಭಕ್ತಿಭರದಿಂದ ಕೊಂಡಾಡಹತ್ತಿದರು.

ಅಂದು ಸಂಜೆ ಶ್ರೀಯವರು ನರಸನಾಯಕರನ್ನು ಕರೆಯಿಸಿಕೊಂಡು ಚಕ್ರತೀರ್ಥಕ್ಕೆ ಬಂದು "ಕ್ಷಮಾಧಿಪತಿಗಳೇ, ನಾವು ತಿರುಪತಿ, ಶ್ರೀರಂಗಗಳಲ್ಲಿ ಕೆಲ ಪ್ರಾಣದೇವರನ್ನು ಪ್ರತಿಷ್ಠಿಸಿರುವುದನ್ನು ನೀವು ಬಲ್ಲಿರಿ. ಕನ್ನಡಸಾಮ್ರಾಜ್ಯದ ಸರ್ವತೋಮುಖ ಅಭಿವೃದ್ಧಿ, ಶತ್ರುಪರಾಜಯ, ಪ್ರಜೆಗಳ ಕ್ಷೇಮಗಳಿಗಾಗಿ ನಾಡಿನ ಎಲ್ಲಾ ಭಾಗಗಳಲ್ಲಿ ನಾಡಿನ ಎಲ್ಲೆಯ ಗುರುತಾಗಿ ನಾವು 732 ಪ್ರಾಣದೇವರುಗಳನ್ನು ಪ್ರತಿಷ್ಠಿಸಲು ಮನಸಾ ಸಂಕಲ್ಪಿಸಿದೆವು. ಸಂಕಲ್ಪವನ್ನು ಯಶಸ್ವಿಗೊಳಿಸಲೋ ಎಂಬಂತೆ ಶ್ರೀಪ್ರಾಣದೇವರು ನಮಗೊಲಿದು ಇಲ್ಲಿ ಮೈದೋರಿದ್ದಾರೆ. ಈ ದೇವರನ್ನು ಯಂತ್ರೋದ್ಧಾರಕ ಪ್ರಾಣದೇವರು" ಎಂಬ ಹೆಸರಿನಿಂದ ಇದೇ ಸ್ಥಳದಲ್ಲಿ ಶನಿವಾರದಂದು ಪ್ರತಿಷ್ಠಾಪಿಸಲು ಇಚ್ಛಿಸಿದ್ದೇವೆ. ಇದರಂತೆ ಸಾಮ್ರಾಜ್ಯದಲ್ಲೆಲ್ಲಾ ಪ್ರಾಣದೇವರನ್ನು ಪ್ರತಿಷ್ಠಾಪಿಸಲು ಆಶಿಸಿದ್ದೇವೆ. ನೀವು ಇದಕ್ಕೆ ಅನುಕೂಲಮಾಡಿಕೊಡಬೇಕು. ನೀವು ಕ್ಷಮಾಧಿಪತಿಗಳಾದ ತರುಣದಲ್ಲೇ ಪ್ರಾಣದೇವರು ಇಲ್ಲಿ ಅಭಿವ್ಯಕ್ತರಾಗಿರುವುದು ಸಾಮ್ರಾಜ್ಯದ ಮತ್ತು ನಿಮ್ಮ ಅಭ್ಯುದಯಕ್ಕೆ ಶುಭಸೂಚನೆಯಾಗಿದೆ. ಈ ದೇವರ ಪ್ರತಿಷ್ಠೆಗೆ ಸಕಲ ಅನುಕೂಲಗಳನ್ನೇರ್ಪಡಿಸಿಕೊಟ್ಟು ಶ್ರೀ ಪ್ರಾಣದೇವರ

ಪೂರ್ಣಾನುಗ್ರಹಕ್ಕೆ ಪಾತ್ರರಾಗಬೇಕು" ಎಂದು ಹೇಳಲು ಆನಂದ ತುಂದಿಲರಾದ ನರಸನಾಯಕರು "ಗುರುದೇವರ, ಅಪ್ಪಣೆಯಂತಾಗಲಿ" ಎಂದು ವಿಜ್ಞಾಪಿಸಿ ಭಕ್ತಿಪರವಶನಾಗಿ ಗುರುಗಳಿಗೆ ನಮಿಸಿ ಅರಮನೆಗೆತೆರಳಿದರು. ಶ್ರೀಯವರು ಮಠಕ್ಕೆ ಚಿತ್ತೈಸಿದರು.

o o o o o o

ಚಕ್ರತೀರ್ಥದ ದಡದಲ್ಲಿ ಅಸಾಧ್ಯ ಜನಸಂದಣಿ. ಸಹಸ್ರಾರು ಜನರು ಶ್ರೀ ವ್ಯಾಸರಾಜರು ಭಕ್ತಿಪೂರ್ವಕವಾಗಿ ನೆರವೇರಿಸಿದ ಶ್ರೀ ಯಂತ್ರೋದ್ಧಾರಕ ಪ್ರಾಣ ದೇವರ ಪ್ರತಿಷ್ಠಾಪನಾ ಮಹೋತ್ಸವವನ್ನು ವೀಕ್ಷಿಸಿ ಆನಂದಪರವಶರಾಗಿದ್ದಾರೆ, ವೈದಿಕವಿಧಿಪೂರ್ವಕವಾಗಿ ಪ್ರತಿಷ್ಠೆಯನ್ನು ನೆರವೇರಿಸಿದ ಶ್ರೀವ್ಯಾಸರಾಜರು ಪಂಚಾ ಮೃತಾದಿಗಳನ್ನು ನೆರವೇರಿಸಿ ದೇವರಿಗೆ ಫಲಸಮರ್ಪಣೆಮಾಡಿ ಮಹಾಮಂಗಳಾರತಿ ಯನ್ನು ನೆರವೇರಿಸಿ ಪ್ರಾರ್ಥಿಸುತ್ತಿರುವಾಗ ಜನಸ್ತೋಮ "ಜಯಜಯಶ್ರೀ ಯಂತ್ರೋದ್ಧಾರಕ ಪ್ರಾಣದೇವ" ಎಂದು ಘೋಷಿಸಿದರು.

ಶ್ರೀವ್ಯಾಸಮುನಿಗಳು ಭಕ್ತಿಪರವಶರಾಗಿ ಶ್ರೀದೇವರ ಮಹಿಮಾವರ್ಣನಪರ ಸ್ತೋತ್ರವನ್ನು ರಚಿಸಿ ಹೇಳಹತ್ತಿದರು.

### ಶ್ರೀವ್ಯಾಸರಾಜತೀರ್ಥ ವಿರಚಿತ
### ಶ್ರೀಯಂತ್ರೋದ್ಧಾರಕ ಪ್ರಾಣದೇವರ ಸ್ತುತಿ

ನಮಾಮಿ ದೂತಂ ರಾಮಸ್ಯ ಸುಖದಂ ಚ ಸುರದ್ರುಮಮ್ ।
ಪೀನವೃತ್ತಂ ಮಹಾಬಾಹುಂ ಸರ್ವಶತ್ರು ನಿವಾರಕಮ್ ॥ ೧ ॥
ನಾನಾರತ್ನಸಮಾಯುಕ್ತ ಕುಂಡಲಾದಿ ವಿರಾಜಿತಮ್ ।
ಸರ್ವದಾಽಭೀಷ್ಟದಾತರಂ ಸತಾಂ ವೈ ದೃಢಮಾಹವೇ ॥ ೨ ॥
ವಾಸಿನಂ ಚಕ್ರತೀರ್ಥಸ್ಯ ದಕ್ಷಿಣಸ್ಥೇ ಗಿರೌ ಸದಾ ।
ತುಂಗಾಂಬೋಧಿತರಂಗಸ್ಯ ವಾತೇನ ಪರಿಶೋಭಿತೇ ॥ ೩ ॥
ನಾನಾದೇಶಾಗತೈಸ್ಸದ್ಭಿಃ ಸೇವ್ಯಮಾನಂ ನೃಪೋತ್ತಮೈಃ
ಧೂಪದೀಪಾದಿನೈವೇದ್ಯೈಃ ಪಂಚಖಾದ್ಯೈಶ್ಚ[1] ಭಕ್ತಿತಃ ॥ ೪ ॥
ಭಜಾಮಿ ಶ್ರೀಹನೂಮಂತಂ ಹೇಮಕಾಂತಿ ಸಮಪ್ರಭಮ್ ॥
ವ್ಯಾಸತೀರ್ಥಯತೀಂದ್ರೇಣ ಪೂಜಿತಂ ಸು[2]ವಿಧಾನತಃ ॥ ೫ ॥
ತ್ರಿವಾರಂ ಯಃಪಠೇನ್ನಿತ್ಯಂ ಸ್ತೋತ್ರಂ ಭಕ್ತ್ಯಾ ದ್ವಿಜೋತ್ತಮಃ ।
ವಾಂಛಿತಂ ಲಭತೇಽಭೀಷ್ಟಂ ಷಣ್ಮಾಸಾಭ್ಯಂತರೇ[3] ಖಲು ॥ ೬ ॥
ಪುತ್ರಾರ್ಥೀ ಲಭತೇ ಪುತ್ರಂ ಯಶೋರ್ಥೀ ಲಭತೇಯಶಃ ।
ವಿದ್ಯಾರ್ಥೀ ಲಭತೇ ವಿದ್ಯಾಂ ಧನಾರ್ಥೀ ಲಭತೇ ಧನಮ್ ॥ ೭ ॥
ಸರ್ವಥಾ ಮಾಸ್ತು[4] ಸಂದೇಹೋ ಹರಿಸ್ಸಾಕ್ಷೀ ಜಗತ್ಪತಿಃ ।
ಯಃಕರೋತ್ಯತ್ರ ಸಂದೇಹಂ ಸ ಯಾತಿ ನರಕಂ ಧ್ರುವಮ್ ॥ ೮ ॥

---

ಪಾಠಾಂತರಗಳು :- 1. ಶಕ್ತಿತಃ ।, 2. ಪೂಜಿತಂ ಚ., 3. ಷಣ್ಮಾಸಾನಂತರಂ, 4. ನಾಸ್ತಿ

ಪಂಡಿತರು, ಸ್ತೋತ್ರವನ್ನು ಕೇಳಿ ಮುದಗೊಂಡರು. ಶ್ರೀಗಳವರು ದೇವರಿಗೆ ನಮಸ್ಕರಿಸಿ ಪ್ರಾರ್ಥಿಸಿ ಪ್ರಾಣದೇವರಿಗೆ ಏರಿಸಿದ ಮಲ್ಲಿಕಾಮಾಲೆಯನ್ನು ಸ್ವೀಕರಿಸಿ ಕಣ್ಣಿಗೊತ್ತಿಕೊಂಡು ಫಲಮಂತ್ರಾಕ್ಷತೆಯೊಡನೆ ನರಸನಾಯಕನಿಗೆ ಅನುಗ್ರಹಿಸಿ "ಕ್ಷಮಾಧಿಪತಿಗಳೇ ! ಶ್ರೀಪ್ರಾಣದೇವನು ಸಾಮ್ರಾಜ್ಯಧುರಂಧರರಾದ ನಿಮ್ಮಲ್ಲಿ ಪ್ರಸನ್ನನಾಗಿದ್ದಾನೆ! ನಿಮ್ಮ ಆಡಳಿತದಲ್ಲಿ ಸಾಮ್ರಾಜ್ಯವು ಅಭಿವೃದ್ಧಿಸಿ ಪ್ರಜಾಜನರು ಶಾಂತಿ-ಸಮಾಧಾನ,ಸುಖಸಂತೋಷಗಳಿಂದ ಬಾಳುವಂತಾಗಿ ನಿಮಗೆ ಅಖಂಡಕೀರ್ತಿ ಬರುವಂತೆ ಕರುಣಿಸುತ್ತಾನೆ. ಇದರಲ್ಲಿ ಸಂದೇಹವಿಲ್ಲ" ಎಂದು ಆಶೀರ್ವದಿಸಿದರು. ನರಸಭೂಪಾಲನು ಆನಂದಭರಿತನಾಗಿ "ಗುರುದೇವ, ಶ್ರೀವಾಯುದೇವರ ಮತ್ತು ತಮ್ಮ ಕರುಣೆಗೆ ಪಾತ್ರನಾದ ನನ್ನ ಜೀವನವಿಂದು ಸಾರ್ಥಕವಾಯಿತು" ಎಂದು ವಿಜ್ಞಾಪಿಸಿದರು.

ಶ್ರೀಗಳವರ ಅಪ್ಪಣೆಯಂತೆ ನರಸನಾಯಕ ಅತಿಶೀಘ್ರವಾಗಿ ದೇವರಿಗೆ ಒಂದು ಸಣ್ಣ ಗುಡಿಯನ್ನು ಕಟ್ಟಿಸಿ ಪೂಜಾರಾಧನೆ, ನಿವೇದನ, ವಿಶೇಷೋತ್ಸವಗಳು ಯಶಸ್ವಿಯಾಗಿ ಜರುಗಲು ಭೂಸ್ವಾಸ್ತಿ, ಧನಕನಕಾಭರಣ, ಪಾತ್ರೆ-ಪದಾರ್ಥಗಳು ವಾರ್ಷಿಕ-ಮಾಸಿಕ ತಸ್ತೀಕುಗಳನ್ನು ಏರ್ಪಡಿಸಿಕೊಟ್ಟು ಸರ್ವರ ಮನ್ನಣೆಗೆ ಪಾತ್ರನಾದನು. ಶ್ರೀಗಳವರು ಯೋಗ್ಯರಾದ ತಮ್ಮ ಶಿಷ್ಯರೊಬ್ಬರನ್ನು ಪೂಜೆಗೆ ವ್ಯವಸ್ಥೆ ಮಾಡಿದರು. ಅಂದಿನಿಂದ ಶ್ರೀಪ್ರಾಣದೇವರನ್ನು ಆರಾಧಿಸಿ ಸಹಸ್ರಾರು ಜನರು ತಮ್ಮ ಮನೋಭೀಷ್ಟಗಳನ್ನು ಪಡೆದು ಕೃತಾರ್ಥರಾಗಹತ್ತಿದರು. ಶ್ರೀಯಂತ್ರೋದ್ಧಾರಕ ಪ್ರಾಣದೇವರ ಸನ್ನಿಧಾನ ಇಂದಿಗೂ ಜಾಗೃತಸ್ಥಳವೆಂದು ಖ್ಯಾತಿಪಡೆದು ಜನತೆಯಿಂದ ಸಂಸೇವಿತರಾಗಿ ಅದ್ಯಾಪಿ ಪೂಜೆಕೈಗೊಂಡು ಪ್ರಾಣದೇವರು ಭಕ್ತಜನರ ಇಷ್ಟಾರ್ಥಗಳನ್ನು ಕರುಣಿಸುತ್ತಿದ್ದಾರೆ.

ಶಾಲಿವಾಹನಶಕೆ ೧೪೨೨ನೇ ರೌದ್ರಿಸಂವತ್ಸರದಲ್ಲಿ (ಕ್ರಿ. ಶ. 1500) ಶ್ರೀವ್ಯಾಸರಾಜಸ್ವಾಮಿಗಳವರು ಮನಸಾ ಸಂಕಲ್ಪಿಸಿದಂತೆ ಕನ್ನಡಸಾಮ್ರಾಜ್ಯದ ಎಲ್ಲಭಾಗಗಳಲ್ಲಿ ಸಾಮ್ರಾಜ್ಯದ ಎಲ್ಲೆಯ ಗುರುತಾಗಿ 732 ಪ್ರಾಣದೇವರ ಪ್ರತಿಮೆಗಳನ್ನು ಪ್ರತಿಷ್ಠಾಪಿಸಿ[1] ಪೂಜಾರಾಧನೆಗಳು ಜರಗುವಂತೆ ವ್ಯವಸ್ಥೆ ಮಾಡಿದರು. ಶ್ರೀವ್ಯಾಸರಾಜ ಪ್ರತಿಷ್ಠಿತ ಪ್ರಾಣದೇವರನ್ನು ಇಂದಿಗೂ ನಾವು ಕನ್ನಡನಾಡಿನಲ್ಲೆಲ್ಲಾ ನೋಡ

---

1) ಮೂರ್ತೀಸ್ಸಪ್ತಶತಂ ಪ್ಲವಂಗಪತೇರಷ್ಟತ್ರಿಂಶದಪ್ಯಂಜಸಾ ।
ಸೋಸ್ಯೋರ್ಸರ್ಮವು ಈಶತೋಷಣಕೃತೇ ರೌದ್ರ್ಯಾಹ್ವಯಾಬ್ದೇ ಶಕೇ ॥
ಶಾಲೀವಾಹನನಾಮ್ನಿಯುಗ್ಮಯುಗಳಂ ಚತ್ವಾರಿಶೈಕಂಪಿಪಿನ್ ।
ಯಾಂ ಸಂಖ್ಯಾಂ ಮನಸಾ ದಧಾತಿ ತದಿಯಂ ಸಂಖ್ಯಾಯುತಃ ಪೂರ್ತಯೇ॥

—ಶ್ರೀವಿದ್ಯಾರತ್ನಾಕರತೀರ್ಥರು.

ಬಹುದಾಗಿದೆ. ಶಂಖ-ಚಕ್ರ ಹಾಗು ಬಾಲಕ್ಕೆ ಗಂಟೆಕಟ್ಟಿರುವ ಪ್ರಾಣದೇವರು ಎಲ್ಲೆಲ್ಲಿ ರಾಜಿಸಿದ್ದಾರೋ ಅವೆಲ್ಲಾ ಶ್ರೀವ್ಯಾಸರಾಜ ಪ್ರತಿಷ್ಠಿತವೆಂದು ತಿಳಿಯಬೇಕು. ಶ್ರೀವ್ಯಾಸರಾಜರ ಈ ಒಂದು ಮಹತ್ಕಾರ್ಯದಿಂದ ಕನ್ನಡನಾಡು ಹೇಗೆ ಉನ್ನತಿಪಡೆದು ವಿಶ್ವವಿಖ್ಯಾತವಾಯಿತೆಂಬುದಕ್ಕೆ ಇತಿಹಾಸವೇ ಸಾಕ್ಷಿಯಾಗಿದೆ.

o o o o

ಶ್ರೀವ್ಯಾಸರಾಜರು ಅದಾವ ಒಂದು ಶುಭಘಳಿಗೆಯಲ್ಲಿ ವಿಜಯನಗರದಲ್ಲಿ ಪದಾರ್ಪಣಮಾಡಿದರೋ, ಅಂದಿನಿಂದ ಸಾಮ್ರಾಜ್ಯದ ಅಭ್ಯುದಯವಾಗಹತ್ತಿತು. ಶ್ರೀಯವರ ಉಪದೇಶ, ಸಲಹೆ, ಆಶೀರ್ವಾದಗಳನ್ನು ಪಡೆದು ನರಸನಾಯಕನು ರಾಜ್ಯದ ಒಳ-ಹೊರಶತ್ರುಗಳನ್ನು ದಮನವಮಾಡಿ ತನ್ನ ಧರ್ಮಶ್ರದ್ಧೆ. ಪವಿತ್ರಾಚರಣೆ ಪ್ರಜಾವಾತ್ಸಲ್ಯಗಳಿಂದ ದಕ್ಷಿಣಭಾರತದಲ್ಲೇ ಅತ್ಯಂತ ಸಮರ್ಥನಾದ ಸಾಮ್ರಾಜ್ಯ ಧುಂಧರನೆಂದು ಕೀರ್ತಿಗಳಿಸಿ ಪ್ರಖ್ಯಾತನಾದನು. ಹೀಗೆ ಅನೇಕ ವರ್ಷಗಳುರುಳಿದವು.

ಇದೇ ಸಮಯದಲ್ಲಿ ಕನ್ನಡಸಾಮ್ರಾಟನಾದ ಇಮ್ಮಡಿ ನರಸಿಂಹನು (ತಮ್ಮರಾಯ) ಅನಾರೋಗ್ಯದಿಂದ ಹಾಸಿಗೆಹಿಡಿದು ಮಲಗಿದನು. ಔಷಧೋಪಚಾರಾದಿಗಳಿಂದ ಪ್ರಯೋಜನವಾಗದೆ ಕೊನೆಗೊಂದುದಿನ ಇಮ್ಮಡಿ ನರಸಿಂಹನು ಭಗವಂತನನ್ನು ಸ್ಮರಿಸುತ್ತ ಇಹಲೋಕವ್ಯಾಪಾರವನ್ನು ಮುಗಿಸಿ ಸ್ವರ್ಗಸ್ಥನಾದನು. ಇದರಿಂದ ಸಮಸ್ತಪ್ರಜರೂ ದುಃಖಿತರಾದರು. ಶ್ರೀಯವರಿಗೆ ತಮ್ಮ ಪ್ರಿಯಶಿಷ್ಯ ದಿವಂಗತನಾದ್ದರಿಂದ ಅತೀವಪರಿತಾಪವಾಯಿತು. ಆದರೂ ಆ ಮಹನೀಯರು ಸಾಮ್ರಾಟನ ಅಂತ್ಯಕ್ರಿಯಾದಿಗಳನ್ನು ಸಕ್ರಮವಾಗಿ ನೆರವೇರಿಸಲು ಆದೇಶವಿತ್ತರು.

ಸ್ವಾಮಿನಿಷ್ಠರಾಜ್ಯಹಿತೈಷಿಗಳ ಸಭೆಯಲ್ಲಿ ತೀರ್ಮಾನವಾದಂತೆ ಒಂದು ಶುಭ ಮುಹೂರ್ತದಲ್ಲಿ ತುಳುವ ನರಸನಾಯಕರು ಕನ್ನಡಸಾಮ್ರಾಟರಾದರು. ಶ್ರೀವ್ಯಾಸರಾಜರು ಧರ್ಮಮಾರ್ಗದಿಂದ ಜನಪ್ರಿಯನಾಗಿ ಸರ್ವರ ಹಿತವನ್ನು ಸಾಧಿಸುತ್ತಾ ಸಾಮ್ರಾಜ್ಯವನ್ನಾಳಿ ಶ್ರೇಯೋವಂತನಾಗುವಂತೆ ನರಸನಾಯಕನಿಗೆ ಉಪದೇಶಿಸಿ ಆಶೀರ್ವದಿಸಿದರು.

ನರಸನಾಯಕ ಕನ್ನಡಸಾಮ್ರಾಜ್ಯಾಧೀನನಾಗುವುದರ ಜೊತೆಗೆ ಸಂಗಮವಂಶದ ತರುವಾಯ ಸಾಳುವ ಮನೆತನದವರ ಆಡಳಿತ ಪ್ರಾರಂಭವಾಗಿದ್ದು, ಈಗ ಇಮ್ಮಡಿ ನರಸಿಂಹನ ಮರಣದಿಂದಾಗಿ ಸಾಳುವವಂಶದ ಆಳ್ವಿಕೆ ಕೊನೆಗೊಂಡು ತುಳುವ ವಂಶದವರ ಆಳ್ವಿಕೆಯೂ ಪ್ರಾರಂಭವಾಯಿತು.

o o o o o

ತುಳುವ ನರಸನಾಯಕರಿಗೆ ತಿಪ್ಪಾಂಬಿಕೆ,ನಾಗಲಾಂಬಿಕೆ,ಓಬಲಾಂಬಿಕೆಯರೆಂಬ ಮೂವರು ಪತ್ನಿಯರಿದ್ದರು. ನರಸನಾಯಕರಿಗೆ ತಿಪ್ಪಲಾಂಬಿಕೆಯಲ್ಲಿ ವೀರನರಸಿಂಹ,

ನಾಗಲಾಂಬಿಕೆಯಲ್ಲಿ ಕೃಷ್ಣದೇವ, ಓಬಲಾಂಬಿಕೆಯಲ್ಲಿ ಅಚ್ಯುತದೇವ, ರಂಗರಾಯ ನೆಂಬ ಸಾಳ್ವರು ಪುತ್ರರು ಜನಿಸಿದ್ದರು. ಇವರೆಲ್ಲರೂ ಶೌರ್ಯಧೈರ್ಯಾದಿ ಸಂಪನ್ನ ರಾಗಿದ್ದು ತಂದೆಗೆ ಸಾಮ್ರಾಜ್ಯಸೇವೆಯಲ್ಲಿ ಬೆಂಬಲರಾಗಿದ್ದು ಕೀರ್ತಿಗಳಿಸಿದ್ದರು. ನರಸನಾಯಕನು ತನ್ನ ಪುತ್ರರೊಡನೆ ಆಗಾಗ್ಗೆ ಗುರುಗಳ ಸನ್ನಿಧಿಗೆ ಬಂದು ತತ್ವ, ಧರ್ಮ, ಸದಾಚಾರ,ಪ್ರಜಾಭ್ಯುದಯಾದಿ ವಿಷಯಗಳಲ್ಲಿ ಉಪದೇಶಪಡೆದು ಹೋಗುತ್ತಿದ್ದನು. ಅವನ ಪುತ್ರರೆಲ್ಲರೂ ತಂದೆಯಂತೆ ಶ್ರೀವ್ಯಾಸರಾಜರ ಭಕ್ತರಾ ಗಿದ್ದರು. ಇದರಲ್ಲಿ, ಕೃಷ್ಣದೇವ ಗುರುವ್ಯಾಸರಾಜರನ್ನು ತನ್ನ ಆರಾಧ್ಯದೈವನ್ನಾಗಿ ತಿಳಿದು ಸೇವಿಸುತ್ತಿದ್ದನು.

ನರಸಭೂಪಾಲನು ರಾಜ್ಯದ ಸಕಲವ್ಯವಹಾರಗಳನ್ನೂ ಗುರುಗಳಿಗೆ ತಿಳಿಸಿ ಅವರ ಸಲಹೆ-ಆದೇಶಗಳಂತೆ ವರ್ತಿಸುತ್ತಿದ್ದನು ಶ್ರೀಗಳವರು ಅತ್ಯಂತ ಜಟಿಲ ವಾದ ಸಾಮ್ರಾಜ್ಯದ ಅದೆಷ್ಟೋ ಸಮಸ್ಯೆಗಳನ್ನು ಸುಲಭವಾಗಿ ಬಿಡಿಸಿ ಪರಿಹಾರೋ ಪಾಯವನ್ನು ಸೂಚಿಸುತ್ತಿದ್ದರು. ಇದರಿಂದ ದೊರೆ ಮತ್ತು ಗುರುಗಳಲ್ಲಿ ಬಹಳ ಗಾಢವಾದ ವಿಶ್ವಾಸಬೆಳೆಯಿತು. ಶ್ರೀವ್ಯಾಸಮುನಿಗಳು ವಿನಯಶೀಲನಾಗಿ ತಮ್ಮಲ್ಲಿಗೆ ಬರುತ್ತಿದ್ದ ಸಾಮ್ರಾಟನಿಗೆ ನಿದರ್ಶನವಾಗಿ ಅನೇಕ ಪ್ರಾಚೀನರಾಜರ್ಷಿಗಳ ಜೀವನ ಅವರ ಧೈರ್ಯಸಹಾಸ. ಸತ್ಯಧರ್ಮನಿಷ್ಠೆ, ಪ್ರಜಾಪ್ರೇಮ ಆಡಳಿತ ವೈಖರಿ ಮುಂತಾದ ಪಾವನಕಥೆಗಳನ್ನು ನಿರೂಪಿಸಿ ಆ ರಾಜರ್ಷಿಗಳು ಹಾಕಿಕೊಟ್ಟಿರುವ ಮಾರ್ಗದಲ್ಲಿ ಮುನ್ನಡೆಯುವಂತೆ ಉಪದೇಶಿಸುತ್ತಿದ್ದರು.[1]

ಇದರಂತೆ ಅಮಿತ ಭಕ್ತಿಶ್ರದ್ಧೆಗಳಿಂದ ತಮ್ಮನ್ನು ಸೇವಿಸುತ್ತಿದ್ದ ಆ ನರಸ ಭೂಪಾಲನಿಗೆ ಶ್ರೀವ್ಯಾಸತೀರ್ಥರು ಪ್ರತಿದಿನವೂ ರಹಸ್ಯವಾಗಿ ಉಪದೇಶಿಸುತ್ತಾ ಸಾಮ್ರಾಜ್ಯದ ಉದ್ಧಾರಕ ಗುರುಗಳೆಂದು ಸರ್ವಮಾನ್ಯರಾಗಿ ವಿಜಯನಗರದಲ್ಲಿ ಬಹುಕಾಲ ವಾಸಮಾಡಿದರು.[2]

## ೪೦. ಶ್ರೀವ್ಯಾಸರಾಜರ ವಾದ ದಿಗ್ವಿಜಯ ವೈಖರಿ

ಶ್ರೀವ್ಯಾಸರಾಜರು ಎರಡುಬಾರಿ ಉತ್ತರಭಾರತ ಸಂಚಾರಮಾಡಿ ಆಗಿನ ಕಾಲದ ದಿಗ್ದಂತಿ ಪಂಡಿತರುಗಳನ್ನು ವಾದದಲ್ಲಿ ಜಯಿಸಿ ಶಿಷ್ಯರನ್ನಾಗಿ ಮಾಡಿಕೊಂಡಿದ್ದರು.

---

1) .......ವಿನಯಾಭರಣೇನ ಪ್ರಶ್ರಿತೋಭವಂತಂ ನಿದರ್ಶನೀಕ್ರಿಯಮಾಣಾನಾಂ ಪ್ರಾಕ್ತನ ಪಾರ್ಥಿವಾನಾಂ ಧ್ರಾಘೀಯಸೀಭಿಃ ಕರ್ಣಕಹರಮಾವಿಶಂತೀಭಿಃ ಪಾವನಕಥಾಂತರಂ ಗೀರ್ಭಿಃ........ತುಮುಲಪುಲಕಿತಕಪೋಲಮುದ್ವಹಂತಂ ನರಪತಿಂ....।

—ಶ್ರೀವ್ಯಾಸಯೋಗಿಚರಿತಮ್ P. 58.

2) .......ಏವಮೇವ ಭಕ್ತ್ಯಾ ಸಂಭಾವಯಂತಂ ರಹಸ್ಯಮೇನಂ ಧರ್ಮೋಪದೇಶೇನ ಪ್ರತ್ಯಹಮನ್ವಗೃಹ್ಣನ್....ಸ ತಪೋನಿಧಿಃ ತತ್ರೈವ ಚಿರಮವಸತ್ ॥

—ಶ್ರೀವ್ಯಾಸಯೋಗಿಚರಿತಮ್. P: 59

ಸಾಕ್ಷಾತ್ ಸರಸ್ವತಿಯ ಅಪರಾವತಾರರಂತಿದ್ದ ಗುರುವರರ ವಿದ್ಯಾವೈಭವ, ವಾದ ವೈಖರಿಗಳಿಂದ ಪರವಾದಿಗಳು ಒಳಗೊಳಗೇ ಕುದಿಯುತ್ತಿದ್ದರು. ಸಾಮ್ರಾಟ್‌ನರಸ ಭೂಪಾಲನು ಶ್ರೀಯವರ ಶಿಷ್ಯನಾಗಿ ರಾಜಗುರುಗಳಾದ ಅವರಿಗೆ ಅಸದೃಶ ಮಾನ-ಮರ್ಯಾದೆಗಳನ್ನು ಸಲ್ಲಿಸುತ್ತಾ ಅವರ ಉಪದೇಶದಂತೆ ರಾಜ್ಯಭಾರವಾಡುತ್ತಿದ್ದುದರಿಂದ ಗುರುಗಳ ಕೀರ್ತಿ ಎಲ್ಲೆಡೆಯಲ್ಲಿಯೂ ವ್ಯಾಪಿಸಿತ್ತು. ಗುರು ವ್ಯಾಸಮುನಿಗಳ ಅಸ್ವಾದೃಶ ವಿದ್ಯಾಪರಿಪಾಟಿ,ಹಾಗೂ ವಿಜಯಪರಂಪರೆಗಳ ಕೀರ್ತಿಯವಾರ್ತೆ ಅಂಗ ವಂಗ ಕಳಿಂಗ ಚೋಳ ಕೇರಳ ಮುಂತಾದ ನಾನಾ ದೇಶಗಳಲ್ಲಿ ಪಸರಿಸಿದ್ದರಿಂದ ಆ ವಾರ್ತೆಯು ಆಯಾ ದೇಶಗಳಲ್ಲಿದ್ದ ಪಂಡಿತರ ಕಿವಿಗಳಿಗೆ ಶೂಲದಂತೆ ಅಸಹನೀಯ ದುಃಖವನ್ನು ತಂದೊಡ್ಡಿತು. ಗುರುಗಳ ವಿಜಯ ವೈಜಯಂತಿಯ ಹಿರಿಮೆಗರಿಮೆ ಗಳನ್ನು ಕೇಳಿದ ವಿದ್ವಾಂಸರ ಮನಸ್ಸು ಕಲಕಿ, ಅವರ ಆನಂದೋತ್ಸಾಹಗಳು ಕುಂದಿ ಅವರು ಶ್ರೀವ್ಯಾಸತೀರ್ಥರಬಗ್ಗೆ ಅಸೂಯೆ ಪಡಹತ್ತಿದರು. ಹೇಗಾದರೂ ಮಾಡಿ ವ್ಯಾಸಮುನಿಗಳ ಕೀರ್ತಿಯನ್ನು ತಗ್ಗಿಸಲು ಅವರು ನಿರೀಕ್ಷಿಸುತ್ತಿದ್ದರು. ಅದಕ್ಕೆ ಒಂದು ಅವಕಾಶವೂ ಒದಗಿಬಂದಿತು,

ಕಳಿಂಗ ದೇಶದಲ್ಲಿ ವಿಖ್ಯಾತನಾಗಿದ್ದ ಬಸವಾಭಟ್ಟನೆಂಬ ಪ್ರಕಾಂಡ ಪಂಡಿತನಿಗೆ ಶ್ರೀವ್ಯಾಸರಾಜರಲ್ಲಿ ಅತ್ಯಂತ ದ್ವೇಷವಿತ್ತು. ಕಳಿಂಗ ರಾಜ ಮೊದಲಿನಿಂದಲೂ ವಿಜಯನಗರದ ವೈಭವವನ್ನು ಕಂಡು ಕರಬುತ್ತಾ ಕನ್ನಡ ಸಾಮ್ರಾಜ್ಯದ ಕಡುವೈರಿಯಾಗಿದ್ದನು. ಅವನು ವಿಜಯನಗರದ ಈ ಅಭ್ಯುದಯಕ್ಕೆ ಪ್ರಕಾಂಡಪಂಡಿತರೂ, ಜ್ಞಾನಿನಾಯಕರೂ, ಮಹಾತಪಸ್ವಿಗಳೂ ಆಗಿದ್ದ ಶ್ರೀವ್ಯಾಸರಾಜರ ಪ್ರಭಾವವೇ ಕಾರಣವೆಂದು ನಂಬಿದ್ದನು. ಅಂತೆಯೇ ಕನ್ನಡ ಚಕ್ರವರ್ತಿಗಳ ಮೇಲಿದ್ದ ವ್ಯಾಸ ಮುನಿಗಳ ಪ್ರಭಾವವನ್ನು ಹೇಗಾದರೂ ಮಾಡಿ ಕಡಿಮೆಮಾಡಿಬಿಟ್ಟರೆ—ಶ್ರೀವ್ಯಾಸ ರಾಜರಲ್ಲಿದ್ದ ಗೌರವವು ಹೋಗಿ ಅವರ ಅನುಗ್ರಹ ಸಾಮ್ರಾಟರಿಗೆ ದೊರಕದಂತಾಗಿ ಸಾಮ್ರಾಜ್ಯದ ಕೀರ್ತಿ ಕುಂದುವುದೆಂದು ಭಾವಿಸಿದ ಕಳಿಂಗಾಧಿಪತಿ ಕಪಿಲೇಶ್ವರ ಗಜ ಪತಿಯು ತನ್ನ ಆಸ್ಥಾನದ ಮಹಾಪಂಡಿತನಾದ ಬಸವಾಭಟ್ಟನನ್ನೂ ಇನ್ನಿತರ ಪಂಡಿತ ರನ್ನೂ ಪ್ರಚೋದಿಸಿ ವ್ಯಾಸರಾಜರನ್ನು ವಾದದಲ್ಲಿ ಪರಾಭವಗೊಳಿಸಲು ಪ್ರೋತ್ಸಾ ಹಿಸಿದನು. ಮೊದಲೇ ಗುರುಗಳಲ್ಲಿ ದ್ವೇಷ ಕಾರುತ್ತಿದ್ದ ಬಸವಾಭಟ್ಟಾದಿಗಳಿಗೆ ತಮ್ಮ ರಾಜನ ಬೆಂಬಲ ದೊರಕಿದ್ದರಿಂದ ಹೈಯುಬ್ಬಿ ವ್ಯಾಸಮುನಿಗಳನ್ನು ಜಯಿಸಲು ನೂರಾರುಜನ ಪಂಡಿತರು ಶಿಷ್ಯರೊಡನೆ ವಿಜಯನಗರಕ್ಕೆ ಹೊರಟರು,

ಶ್ರೀವ್ಯಾಸರಾಜರ ವಿಜಯದ ಕಥೆ ತನ್ನದೇ ಆದ ವೈಶಿಷ್ಟ್ಯದಿಂದ ಕೂಡಿದ್ದಿತು. ಅದು ಶಾರದಾದೇವಿಯ ಮನದ ಬಯಕೆಯಂತೆಯೂ, ಕರ್ಣನಿಗೆ ಮನೋವೇದನೆ ಯನ್ನುಂಟುಮಾಡುವ ಪಾರ್ಥನ ಖಡ್ಗದಂತೆಯೂ, ಐರಾವತದ ಜಲಕ್ರೀಡೆಯಂತೆ ಕ್ಷೋಭಕರವಾಗಿಯೂ,ಸುವಾಸನೆಯನ್ನು ಬೀರುವ ಸುಳಿಗಾಳಿಯ ಗಮನದಂತೆಯೂ

ಮೆರೆದಿತ್ತು.[1] ಶ್ರೀವ್ಯಾಸಭಗವಾನರ ವಿದ್ಯಾವೈಭವದ ವಿಜಯವಾರ್ತೆಗಳನ್ನಾಲಿಸಿ ಕಡುನೊಂದ ದೇಶ-ವಿದೇಶಗಳ ಪರವಾದಿಪಂಡಿತರು ವ್ಯಾಸಮುನೀಂದ್ರರನ್ನು ಪರಾಜಯಗೊಳಿಸಲು ತಂಡೋಪತಂಡವಾಗಿ ವಿಜಯನಗರದತ್ತ ಧಾವಿಸಿದರು.

ಹೀಗೆ ಬಂದ ವಿದ್ವಾಂಸರು ಮಹಾಪಂಡಿತರಾಗಿದ್ದರು. ಸರಸ್ವತೀದೇವಿಯೇ ಅವರಲ್ಲಿ ವಿಲಾಸದಿಂದ ಕ್ರೀಡಿಸುತ್ತಿರುವಳೋ ಎಂಬಷ್ಟು ಮಟ್ಟಿಗೆ ಅವರು ಪ್ರಕಾಂಡ ಪಾಂಡಿತ್ಯಪೂರ್ಣರಾಗಿದ್ದರು, ವೇದವೇದಾಂತ ಪರಿಣತರೂ ಅನೇಕ ಶಾಸ್ತ್ರಗ್ರಂಥಗಳನ್ನು ರಚಿಸಿದವರೂ, ವಾದವಿದ್ಯಾಕೋವಿದರೂ ಆಗಿದ್ದರು.[2] ಇಂತಹ ಪಂಡಿತರು ವ್ಯಾಸಯತಿಗಳೊಡನೆ ವಾದಮಾಡಬಯಸಿ ಉತ್ಸಾಹದಿಂದ ವಿದ್ಯಾನಗರಿಯತ್ತ ಧಾವಿಸಿ ಒಂದುದಿನ ವಿಜಯನಗರವನ್ನು ತಲುಪಿದರು. ಅವರು ವಿಷಜಲದಿಂದಹುಟ್ಟಿದ ಮಹಾವೃಕ್ಷಗಳಂತೆ ಅಸೂಯಾಪರರಾಗಿದ್ದರು, ಅವರಲ್ಲಿ ಕಳಿಂಗದೇಶದವರು ಕೆಲವರು, ಕೆಲವರು ಮಾಳವರು, ಕೆಲವರು ಚೋಳರು. ಕೇರಳದವರು ಮತ್ತೆ ಕೆಲವರು ಹೀಗೆ ಅವರೆಲ್ಲರೂ ಒಂದೆಡೆ ಸೇರಿ ಅಹಮಹಮಿಕಯಾ (ನಾಮುಂದೆ ತಾ ಮುಂದೆ ಎಂದು), ಶ್ರೀವ್ಯಾಸರಾಜರನ್ನು ವಾದದಲ್ಲಿ ಜಯಿಸಬಯಸಿ, ಅರಮನೆಯ ಮಹಾದ್ವಾರದ ತೋರಣಸ್ತಂಭಕ್ಕೆ ತಮ್ಮ ಬಿರುದುಬಾವಲಿಗಳ ಪತ್ರಗಳನ್ನು ಕಟ್ಟಿ ಅಟ್ಟಹಾಸಗೈದರು.[3]

ಆ ನಂತರ ಅವರು ಬಹು ಆಡಂಬರವನ್ನು ಪ್ರದರ್ಶಿಸುತ್ತಾ ಇದ್ದಕ್ಕಿದ್ದಂತೆ ಅರಸನ ಒಡ್ಡೋಲಗಕ್ಕೆ ಬಂದು ಸೇರಿದರು. ರಾಜಾಸ್ಥಾನದಲ್ಲಿ ಸಚಿವ-ಸಾಮಂತ-ಕವಿ-ಪುರೋಹಿತ-ರಾಜಮಾನ್ಯರೇ ಮುಂತಾದವರು ಸಮುಚಿತಾಸನಗಳಲ್ಲಿ ಮಂಡಿಸಿದ್ದರು. ನರಸಭೂಪಾಲ ರತ್ನಸಿಂಹಾಸನದಲ್ಲಿ ವಿರಾಜಿಸಿದ್ದ, ಅವರು ಸುಂಟರಗಾಳಿ

---

1) ತಸ್ಯ ವ್ಯಾಸಮುನೇಃ ಅನ್ಯಾದೃಶಪರಿಪಾಟೀಂ ಮನೋವೃತ್ತಿಮಿವ ಶಾರದಾಯಾಃ ಪಾರ್ಥ ಕೃಪಾಣೀಮಿವ ಕರ್ಣಾರುಂತುದಾಮೈರಾವತಸಲಿಲಕ್ರೀಡಾಮಿವ ಕ್ಷೋಭಕರೀಂ ಸಮೀರ ಗತಿಮಿವಾಮೋದಹಾರಿಣೀಂ ವಸಂತ ಲಕ್ಷ್ಮೀಮಿವ ಮಹಾಶೋಕ ಸಂಪಾದಿನೀಂ ವಿಜಯಕಥಾ ಮಾಕರ್ಣ್ಯ......। —ಶ್ರೀವ್ಯಾಸಯೋಗಿಚರಿತಮ್. P. 59

2) ....ಸನ್ನಿಹಿತಸುರಸರಸ್ವತೀವಿಲಾಸಾವರವರ್ಣಿನೀಕಟಾಕ್ಷಾ ಇವ ಶ್ರುತಿಪಾರದೃಶ್ವಾನೋ.... ದುರ್ವಾರಶಾಸ್ತ್ರಪ್ರಣೇತಾರಃ........।

3) ........ವಿಷವಲ್ಲಿ ವಿಟಪಿನ ಇವ ಮಹೇರ್ಷ್ಯಾಯಾ..........ಕೇಚಿದಂಗವಂಗಕಲಿಂಗಮಾಳವ ಚೋಳಕೇರಳಾದಿ ವಿವಿಧದೇಶೇಭ್ಯಸ್ಸರೋಷೋದ್ವೇಗಮಾಪತಿತಮಾತ್ರಾ ಏವ ವಿಪಶ್ಚಿತಃ ಸಂಘೀಭೂಯಾಹಂಪ್ರಥಮಿಕಯಾ ವಾದೇನ ವಿಜಿಗೀಷವೋ ರಾಜಕುಲದ್ವಾರತೋರಣ ಸ್ತಂಭನಾಸಾಯಾಂ........ಬಿರುದಪತ್ರಿಕಾಂ ಬಬಂಧುಃ ॥

—ಶ್ರೀವ್ಯಾಸಯೋಗಿಚರಿತಮ್. P. 59.

ಯಂತೆ ಒಳನುಗ್ಗಿದರು.[1] ಪ್ರತಿವಾದಿ ಪಂಡಿತರ ಆರ್ಭಟವನ್ನು ನೋಡಿ, ಶ್ರೀವ್ಯಾಸ ರಾಜಗುರುವರ್ಯರ ವಿದ್ಯಾಪ್ರೌಢಿಮೆ-ವಾದಕುಶಲತೆಗಳನ್ನು ಮನಗಂಡಿದ್ದರೂ ನರಸಮಹೀಪಾಲ ರೋಷಾವೇಶ ಪೂರ್ಣವಾದ ಪ್ರತಿಪಕ್ಷ ಪಂಡಿತರ ಅಬ್ಬರದಿಂದ ಕ್ಷಣಕಾಲ ನಿಬ್ಬೆರಗಾದನು.[2] ಶ್ರೀವ್ಯಾಸಯೋಗೀಂದ್ರರೊಡನೆ ವಾದಿಸಲು ಬಂದಿರುವುದಾಗಿ ಪರವಾದಿಗಳು ನುಡಿಯಲು ನರಸಭೂಪಾಲನು ಅವರೆಲ್ಲರನ್ನೂ ಉಚಿತಾಸನಗಳಲ್ಲಿ ಕುಳ್ಳಿರಿಸಿ ರಾಜಗುರುಗಳಲ್ಲಿ ವಿಷಯವನ್ನು ಅರುಹಲು ರಾಜಪುರೋಹಿತರನ್ನು ಗುರುಗಳೆಡೆಗೆ ಕಳುಹಿಸಿದನು.

ಶಿಷ್ಯರಿಗೆ ಪಾಠಹೇಳುತ್ತಾ ಕುಳಿತಿದ್ದ ಶ್ರೀವ್ಯಾಸಯೋಗೀಂದ್ರರಲ್ಲಿಗೆ ಕೆಲ ಪಂಡಿತರೊಡನೆ ಬಂದು ನಮಸ್ಕರಿಸಿದ ರಾಜಪುರೋಹಿತರು ಎಲ್ಲ ವಿಚಾರಗಳನ್ನೂ ಅರುಹಿ ಆಸ್ಥಾನಕ್ಕೆ ದಯಮಾಡಿಸಬೇಕೆಂದು ಪ್ರಾರ್ಥಿಸಿದರು. ಶ್ರೀವ್ಯಾಸರಾಜರು ನಗುಮುಖದಿಂದ "ತಥಾಸ್ತು"ಎಂದು ಮೇಲೆದ್ದು ಸುವರ್ಣಪಾಲಕಿಯಲ್ಲಿ ಕುಳಿತು ಪಂಡಿತಮಂಡಲಿ ಶಿಷ್ಯಜನರೊಡನೆ ಅರಮನೆಗೆ ದಿಗ್ವಿಜಯ ಬೆಳೆಸಿದರು. ಅರಮನೆಯ ಮುಂಭಾಗದ ತೋರಣ ಸ್ತಂಭಗಳಿಗೆ ಕಟ್ಟಿರುವ ಪರವಾದಿಗಳ ಬಿರುದಾವಳೀ ಪತ್ರಗಳನ್ನು ಕಂಡು ನಸುನಕ್ಕು ಓರ್ವ ಸಮರ್ಥಶಿಷ್ಯನಿಂದ ಅವನನ್ನು ಕೆಡವಿಸಿ. ವಾದ್ಯವೈಭವ-ಬಿರುದಾವಳಿ-ಜಯಘೋಷಗಳೊಡನೆ ಪಾಲಕಿಯಲ್ಲಿ ಕುಳಿತಂತೆಯೇ ನರಪತಿಯ ಸಭೆಯನ್ನು ಪ್ರವೇಶಿಸಿದರು.[3] ರಾಜಗುರುಗಳ ಆಗಮನವನ್ನು ಸೂಚಿಸುವ ತಾಳಧ್ವನಿ. ಜಯಘೋಷಗಳು ಸಂಭ್ರಮದಿಂದ ಗಗನತಲದಲ್ಲಿ ವ್ಯಾಪಿಸಿದವು.

ಪರಮ ಮಂಗಳಕರವಾದ ಆ ಧ್ವನಿಯನ್ನಾಲಿಸಿ, ಸಜ್ಜನರು ಮುದಗೊಂಡರು. ಪ್ರತಿಪಕ್ಷದವರು ಬೆದರಿದರು. ಪರತಂತ್ರವನ್ನು ಭೇದಿಸುವರೆಂದು ಸೂಚಿಸುವ ಆ

---

1) ಆಡಂಬರೇಣ ಮಹತಾ ಭುವಿದೃಶ್ಯಮಾನಾಃ ।
ಸರ್ವೇಽಪಿ ತೇ ಯುಗಪದೇವ ಧರಾಧಿಪಸ್ಯ ॥
ಅಮರ್ಷಿತಾಃ ಸಚಿವಪೌರಪುರೋಹಿತಾದ್ಯೈಃ ।
ಆಸ್ಥಾನಭೂಮಿಮಧಿರುಹ್ಯ ತತೋ ನಿಷೇದುಃ ॥

2) ವೈದೇಶಿಕಾನಾಂ ಸುಧಿಯಾಂ ಕ್ಷಿತೀಂದ್ರಃ । ತಾದೃಗ್ವಿಧಾಮಾರಭಟೀಂ ಸಮೀಕ್ಷ್ಯ ॥
ತಂ ವ್ಯಾಸಯೋಗೀಶ್ವರಾನುಭಾವಂ । ಜಾನನ್ನಪಿ ತ್ರಸ್ತ ಇವಾಭವತ್ಸ್ಥೇ ॥
—ಶ್ರೀವ್ಯಾಸಯೋಗಿಚರಿತಮ್. P. 60.

3) ಅತ್ರಾಂತರೇ ಶಿಷ್ಯಮುಖಾದಾಕರ್ಣ್ಯ ತಥಾವಿಧಮುದಂತಮ್ ।
ಸಂಪ್ರೇಷಿತೇನ ಪುರತೋ ವಿಕಟಯ್ಯ ಪತ್ರೀಂ।ತಾಂ ಶೈಬಿಕೇನ ತರಸಾ ಯತಿಕುಂಜರಸ್ಯ
ಆಗಚ್ಛತೋ ನೃಪಸಭಾಂ ಗಗನಾವಗಾಹೀ।ತಾಲ್ಪಧ್ವನಿಸ್ಸಮುದಜೃಂಭತಸಂಭ್ರಮೇಣ॥
—ಶ್ರೀವ್ಯಾಸಯೋಗಿಚರಿತಮ್. P. 60

ಧ್ವನಿಯು ಪರವಾದಿಗಳಿಗೆ ಖೇದವನ್ನುಂಟುಮಾಡಿತು.[1] ಸರಸಭೂಪಾಲನು ಸಂತೋಷದಿಂದ ಶ್ರೀವ್ಯಾಸಮುನಿಗಳಿಗೆ ವಂದಿಸಿ ಎದುರುಗೊಂಡು ಕರತಂದು ಸಿಂಹಾಸನದಲ್ಲಿ ಕೂಡಿಸಿದನು. ಶ್ರೀಪಾದಂಗಳವರು ನಗೆಮೊಗದಿಂದ ಭದ್ರಾಸನದಲ್ಲಿ ಮಂಡಿಸಿದರು. ಗುರುಗಳ ವದನದಲ್ಲಿ ಒಡಮೂಡಿದ ಮಂದಹಾಸ, ಪರವಾದಿ ಗುಂಪನ್ನು ತೃಣಪ್ರಾಯವಾಗಿ ಕಂಡಂತೆ ಶೋಭಿಸುತ್ತಿತ್ತು.[2] ಸಾಮ್ರಾಟ್ ನರಸ ಭೂಪಾಲನು ವ್ಯಾಸಭಿಕ್ಷುಗಳಿಗೆ ಸಲ್ಲಿಸಿದ ಅಗ್ರಪೂಜೆಯನ್ನು ಕಂಡು ವಿರೋಧಿಗಳು ಬಹುಸಂಕಟಪಟ್ಟರು. ಹಿಂದೆ ರಾಜಸೂಯಯಾಗದಲ್ಲಿ ಧರ್ಮರಾಜನು ಶ್ರೀಕೃಷ್ಣ ಪರಮಾತ್ಮನಿಗೆ ಮಾಡಿದ ಅಗ್ರಪೂಜೆಯನ್ನು ನೋಡಿ ಅಸೂಯೆಯಿಂದ ತಳಮಳಿಸಿದ ಶಿಶುಪಾಲ-ದಂತವಕ್ರರನ್ನು ನೆನಪಿಗೆ ತರುತ್ತಿತ್ತು ಆ ದೃಶ್ಯ ![3]

ಮೊದಲೇ ದರ್ಪದಿಂದ ಉನ್ಮತ್ತರಾದ್ದ ಪ್ರತಿವಾದಿಗಳು ತಮ್ಮ ಬಿರುದುಪತ್ರಾದಿಗಳನ್ನು ಕಿತ್ತಿಹಾಕಿಸಿದ್ದರಿಂದ ಇಮ್ಮಡಿ ರೋಷಾವೇಶಯುಕ್ತರಾಗಿ ಸರ್ಪಗಳಂತೆ ಬುಸುಗುಟ್ಟುತ್ತಿದ್ದರು. ಬಂದಿದ್ದ ಆ ಪರವಾದಿಗಳು ತಮ್ಮಲ್ಲಿ ಅತ್ಯಂತ ಪ್ರಬಲ ಪಂಡಿತನಾಗಿದ್ದ ಕಳಿಂಗದೇಶದ ಬಸವಾಭಟ್ಟನೆಂಬ ವಿದ್ವಾಂಸನನ್ನು ಆನೆಗಳ ಹಿಂಡು ಮದಿಸಿದ ಸಲಗವನ್ನು ವನರಾಜನಮೇಲೆ ಕಾಳಗಮಾಡಲು ಪ್ರೇರಿಸುವಂತೆ ಒತ್ತಾಯ ಮಾಡಿದರು. ವಾದಸಮಯದ ನಿಬಂಧನೆಗಳು ನಿಯಮಿತವಾಗಿ ಉಭಯಪಕ್ಷದವರೂ ಅದಕ್ಕೆ ಸಮ್ಮತಿಸಿದಮೇಲೆ ಇತಿಹಾಸಪ್ರಸಿದ್ಧವಾದ ವಾದವು ಪ್ರಾರಂಭವಾಯಿತು.[4]

ಶ್ರೀವ್ಯಾಸರಾಜರು ಪರವಾದಿಗಳ ಪೂರ್ವಪಕ್ಷಗಳನ್ನು ಅನೇಕ ಪ್ರಮಾಣ ಗಳಿಂದಲೂ, ಯುಕ್ತಿ ಪುಂಜ ಪರಂಪರೆಗಳಿಂದಲೂ ಲೀಲಾಮಾತ್ರದಿಂದ ಖಂಡನ

---

1) ತದಾಸೀತ್ — ಕಲ್ಪ್ಯಮಾನಜಗದದ್ಭುತಮೋದಃ ಕಥ್ಯಮಾನಪರತಂತ್ರವಿಷೇದಃ ।
ವಿದ್ವಿಷಾಮಭವದಾಹಿತಖೇದೋ ವ್ಯಾಸಯೋಗಿಜಯತಾಲನಿನಾದಃ ।

2) ಆಕ್ರಾಂತಾಪದಮನೀರಮಣೇನ ಯೋಗೀಪ್ರತ್ಯುದ್ಗತಿಂ ಕೃತವತಾ ವಿನಯೇನಪತ್ಯೈಃ।
ಪೀಠೇ. ಘನಾಘನ ಇವಾದ್ರಿತಟೇ ನ್ಯಷೀದನ್ಮಂದಸ್ಮಿತೋದಯತೃಣೀಕೃತವೈರಿಸಂಘಃ

3) ಆಸನಾದ್ಯುಪಚಿತಾಂ ಮಹೀಭುಜಾ । ವ್ಯಾಸಯೋಗಿನಮಮುಂ ವಿರೋಧಿನಃ ॥
ನಾಸಹಂತ ದಮಘೋಷಜಾದಯೋ । ವಾಸುದೇವಮಿವ ಪಾರ್ಥಪೂಜಿತಮ್ ॥

4) ತೇ ಚ ದರ್ಪೋನ್ಮತ್ತಾ ಬಿರುದಪತ್ರಿಕಾಯಾಸ್ತಥಾಭೂತೇನ ಭೇದೇನ ದ್ವಿಗುಣಿತ ರೋಷಾವೇಶಾ ವಿಮತಸುಮತಯೋ ಯೂಥಪತಿಮಿವ ಮತಂಗಜಾಃ ಪ್ರಿಪಾದಮೂಕತಾತಿ ರೇಕೇಣ ಧಿಷಣಾಮಪಿ ತೃಣಾಯಮನ್ಯಮಾನಂ ಬಸವಾಭಟ್ಟನಾಮಾನಂ ಕಂಚನ ಕಾಲಿಂಗಮನೀ ಷಿಣಂ ಪುರಸ್ಕೃತ್ಯ ಭಗವತಾ ತೇನ ತಾಪಸಕೇಸರಿಣಾ ಸಹ ವಿಜಿಗೀಷಯಾ ಪಕ್ಷದ್ವಯ ಸ್ಥಾಪನಾವಶೀಂ ಕಾಮಪಿ ಕಥಾಂ ಪ್ರಾರಭಂತ ॥ ತತ್ರ ಯಥಾಪೂರ್ವಂ ನಿರ್ವ್ಯಾಘಾತೇ ಸಕಲೇ ಸಂಧಾಬಂಧೇ ॥

—ಶ್ರೀವ್ಯಾಸಯೋಗಿಚರಿತಮ್. P. 60.

ಮಾಡಿ ದ್ವೈತಸಿದ್ಧಾಂತವನ್ನು ಸ್ಥಾಪನೆಮಾಡಲಾರಂಭಿಸಿದರು. ಆಗ ಅವರು ಕೋಪತಾಪಗಳಿಲ್ಲದೆ ಪ್ರಶಾಂತಮನಸ್ಕರಾಗಿ ಮುಖದಲ್ಲಿ ನಗೆಮಲ್ಲಿಗೆಯನ್ನು ಅರಳಿಸುತ್ತಾ ಪಂಡಿತರು ಕವಿಗಳು,ರಾಜ್ಯಕಾರ್ಯಧುರಂಧರಾದಿ ಸಭಾಸದರನ್ನು ಅವಲೋಕಿಸುತ್ತಾ ವಾದಮಾಡುತ್ತಿದ್ದರು. ಆಗವರ ಮುಖವು ಅರಳಿದ ತಾವರೆಯಂತೆ ಒಪ್ಪುತ್ತಿತ್ತು. ದಂತಪಂಕ್ತಿಯು ಬಕುಳ ಪುಷ್ಪಗಳ ಸಾಲನ್ನು ಅನುಸರಿಸಿತು ಅವರ ವಾಣಿಯು ಭೋರ್ಗರೆದು ಅವ್ಯಾಹತವಾಗಿ ಹರಿದು ಬರುವ ಉತ್ತುಂಗ ಆಕಾಶ ಗಂಗೆಯ ಗಂಭೀರ ಮಂಗಳತರಂಗೋಪೇತ ಪ್ರವಾಹವನ್ನು ಹೋಲುತ್ತಿತ್ತು. ಅದು ಪ್ರತಿವಾದಿಗಳೆಂಬ ಪದ್ಮಗಳಿಗೆ ಕಳೆಗುಂದಿಸುವ ಚಂದ್ರಿಕೆಯಂತೆ ಕಂಗೊಳಿಸಿತು.[1]

ಸುಧಾಪರಿಮಳದ ಅಲೆಗಳಿಂದ ಶೋಭಿಸುವ ದೇವನದಿಯ ಪ್ರವಾಹದಂತೆಆರ್ಭಟಿಸಿತು, ಶ್ರೀವ್ಯಾಸರಾಜರ ವಾಣಿ! ಅದು ವೇದತ್ರಯಗಳೆಂಬ ಯುವತಿಯು ಧರಿಸಿದ ದುಕೂಲದಂತೆ ಸುವಾಸನೆಭರಿತವಾಗಿತ್ತು! ಹೀಗೆ ಯತಿಪುಂಗವ ಶ್ರೀವ್ಯಾಸಮುನೀಂದ್ರರೆಂಬ ದೇವಗುರುಗಳ (ಬೃಹಸ್ಪತ್ಯಾಚಾರ್ಯರ) ವಾದಸರಣಿಯು ರಾಜಸಭೆಯನ್ನು ಧ್ವನಿಮಯವನ್ನಾಗಿ ಮಾಡಿ ಆ ನಾದಲಹರಿಯಿಂದ ಎಲ್ಲೆಡೆ ವ್ಯಾಪಿಸಿತು [2] ಶ್ರೀವ್ಯಾಸರಾಜರು ವಾದಮಾಡುತ್ತಿರಲು ದೇವೇಂದ್ರನ ವಜ್ರಾಯುಧವೇನಾದರೂ ಪರ್ವತಗಳನ್ನು ಪುಡಿಪುಡಿಮಾಡಲು ಹೊರಟಿದೆಯೋ! ಅಥವಾ ಇದು ಪ್ರಳಯಕಾಲೀನ ಝಂಝಾವಾತದ ಪೆಟ್ಟಿನಿಂದ ಅಲ್ಲೋಲಕಲ್ಲೋಲವಾದ ಸಮುದ್ರದ ಕೋಲಾಹಲವೋ! ಇಲ್ಲವೇ, ವಜ್ರಾಯುಧದ ಹೊಡೆತವನ್ನು ತಾಳಲಾರದೆ ಪರ್ವತ ನಿಕರಗಳು ಭಯಂಕರನಾದ ಮಾಡುತ್ತಾ ಬೀಳುತ್ತಿರುವುದರಿಂದುಂಟಾದ ಭಯಂಕರ ಧ್ವನಿಯೋ? ಅಥವಾ ವರಹಾದೇವರ ದಂಷ್ಟ್ರಗಳಿಂದ ಹೊಡೆಯಲ್ಪಟ್ಟ ಪಾತಾಳ ಲೋಕದ ಅತ್ಯುತ್ಕಟ ನಿನಾದವಾಗಿರಬಹುದೇ ? ಎಂಬಂತೆ ಶ್ರೀಯವರ ಗಂಭೀರವಾದ

---

1) ವಿಕಚವದನಾರಂಭಂ ವಿವಾದಯಿಷೋ ರ್ಯತೇಃ ।
ಬಕುಲಧವಲಾ ದಂತಾ ವಿರೇಜುರಿತಸ್ತತಃ ॥
ಗಗನತಟಿನೀಪೂರಾ ಗಭೀರ (ಮಧ್ವ) ಮತಾಂಬುಧೇಃ ।
ಪ್ರತಿಭಟಸುಧೀಪ್ರಜ್ಞಾಂಬುಜಾವಲಿಚಂದ್ರಿಕಾಃ ॥

2) ಸುಧಾಪರಿಮಿಲೋರ್ಮಿಲಾ ಸ್ಫುರಸರಿತ್ಪ್ರವಾಹಾರ್ಭಟೀ
ಕಿರೀಟ್ಟಿತಟಿಕುಟ್ಟನಪ್ರಕಟಪಾಟವೋದ್ದಾಮರಾಃ ॥
ತ್ರಯೀ ಯುವತಿಕೂಲಿಕಾ ಸುಮನಸೋ ಯತಿವ್ಯಾಸರಾಟ್ ।
ಗಿರೋ ನೃಪಸಭಾಭುವಂ ಧ್ವನಿಮಯೀಮವಾತನ್ವತ ॥

—ಶ್ರೀವ್ಯಾಸಯೋಗಿ ಚರಿತಂ. P 61.

ಧನಿಯು ಪ್ರತಿಪಕ್ಷ ಪಂಡಿತರನ್ನು ತಲ್ಲಣಗೊಳಿಸಿ ಕಂಗೊಳಿಸಿತು.[1]

ಹೀಗೆ ಶ್ರೀನಿವಾಸರಾಜರು ಮತ್ತು ಬಸವಾಭಟ್ಟರುಗಳು ಅತ್ಯಂತ ಪಾಂಡಿತ್ಯಪೂರ್ಣವಾಗಿ ಪ್ರತಿಭಾಪುಂಜರಂಜಿತ ಯುಕ್ತಿ-ಪ್ರತಿಯುಕ್ತಿಗಳಿಂದ ವಾದಮಾಡುತ್ತಾ ಕೋಲಾಹಲಮಾಡುತ್ತಿರಲು ಒಂದು ತಿಂಗಳು ಒಂದೇ ಒಂದು ಕ್ಷಣದಂತೆ ಕಳೆದು ಹೋಯಿತು ! [2]

ಮಾರನೆಯ ದಿವಸ ಶ್ರೀವ್ಯಾಸರಾಜಯತಿಗಳು ತಮ್ಮ ವಾಗ್ವಿಲಾಸ,ಅನುವಾದ ಶೈಲಿ,ಪ್ರಮಾಣೋದಾಹರಣ ಚಾತುರ್ಯ,ಸ್ವಮತ ಸ್ಥಾಪನ ಕೌಶಲ್ಯಗಳಿಂದ ನಸುನಗುತ್ತ ವಾದಮಾಡಿ ಬಸವಾಭಟ್ಟ ಮತ್ತು ಇತರ ಅನೇಕ ಪರವಾದಿಗಳನ್ನು ಲೀಲೆಯಿಂದಲೋ ಎಂಬಂತೆ ನಿರುತ್ತರಗೊಳಿಸಿ ವಿಜಯಶಾಲಿಗಳಾದರು. ಸಭಾಸದಸರೆಲ್ಲರೂ ಬಹು ವಿಸ್ಮಯಾನ್ವಿತರಾಗಿ ರಾಜಗುರುಗಳ ವಾಗ್ವೈಖರಿಯನ್ನು ಕೊಂಡಾಡುತ್ತಿರಲು ಶ್ರೀವ್ಯಾಸಮುನೀಂದ್ರರು ರುದ್ರದೇವರು ತ್ರಿಪುರರನ್ನು ತ್ರಿಶೂಲದಿಂದ ಸಂಹರಿಸಿದಂತೆ ಮೂವರು ಪಂಡಿತರನ್ನು ಜಯಿಸಿದರು. ಚತುರ್ಭುಜಗಳಿಂದ ಜನಾರ್ದನನು ಒಮ್ಮೆಲೇ ನಾಲ್ವರು ಅಸುರರನ್ನು ನಾಶಪಡಿಸಿದಂತೆ ನಾಲ್ವರು ಪಂಡಿತರನ್ನು ನಿರಸನಗೊಳಿಸಿದರು. ತ್ರಿಲೋಕವಿಜಯಿ ಧನಂಜಯನು ತನ್ನ ಶರವೃಷ್ಟಿಯಿಂದ ಅನೇಕರನ್ನು ಪರಾಜಯಗೊಳಿಸಿದಂತೆ ತಮ್ಮ ಅಪೂರ್ವ ವಾಕ್‌ಶರ ವೃಷ್ಟಿಯಿಂದ ಅನೇಕ ಪಂಡಿತರನ್ನು ಗೆದ್ದರು. ಹೀಗೆ ನಿರಾಯಾಸವಾಗಿ ವ್ಯಾಸತೀರ್ಥರು ಪ್ರತಿಪಕ್ಷೀಯ ಪಂಡಿತರೆಲ್ಲರನ್ನೂ ಸೋಲಿಸಿ ತಮ್ಮ ಕೀರ್ತಿಚಂದ್ರಿಕೆಯು ಸಕಲದಿಗಂತರಾಳಗಳಲ್ಲಿಯೂ ಶೋಭಿಸುವಂತೆಮಾಡಿ ವಿಜಯಲಕ್ಷ್ಮಿಯನ್ನಾಲಂಗಿಸಿ ಸರ್ವರನ್ನೂ ಪರಮಾನಂದಗೊಳಿಸಿದರು.[3]

ಶ್ರೀವ್ಯಾಸಯತಿಸಾರ್ವಭೌಮರ ಈ ಅಪೂರ್ವ ಪರವಾದಿ ದಿಗ್ವಿಜಯವನ್ನು ಕಂಡು ಮೇರೆಮೀರಿದ ಆನಂದದಿಂದ ಸಮಸ್ತ ಸಭಾಸದರು ಪ್ರಚಂಡ ಕರತಾಡನ-

---

1) ಕಿಂ ವಾ ಭೂಮಿಧರಾಣೀ ಪತನಪರವಶಃ ಪ್ರೌಢದಂಭೋಲಿಘೋಷಃ ।
ಕಲ್ಪಾಂತೋರುಪ್ರಜೃಂಭಿರಭಸರಭಸಾಕ್ಷುಭಿತಜಲನಿಧಿಃ ಸಾರವಲ್ಲೋಲಪಾಲೀ ಕಿಮ್ ॥
ಕಿಂ ವಾ ದಂಭೋಲಿಧಾರಾಪತನಪರಿಲುಠದ್ಭೂಮಿಭೃದ್ಭೀಮಘೋಷಃ ।
ಕಿಂ ಘೋಣೀಶಾನಘೋಣಾಹತಜಲಧಿಸದನಪ್ರೋತ್ಕಟಧ್ವಾನಪಂಕ್ತಿಃ ॥

2) ಪರಸ್ಪರೋಜ್ಜೃಂಭಿತ ಯುಕ್ತಿಗುಂಭಾಃ । ಸಮುಲ್ಲಸತ್ತಾದೃಶ ವೀರವಾದಾಃ ॥
ಅಥೋ ತದಾನೀಮುಭಯೇಽಪಿ ಧೀರಾಃ ಕ್ಷಣಾದಿವ ತ್ರಿಂಶದಹಾನ್ಯನೈಷುಃ ॥

3) ಅನ್ಯೇದ್ಯುರೇವ ವಿಸ್ಮಯಮಾನಸ್ಸೈಸ್ಸರ್ವೈರಪಿ ಸಭ್ಯೈರುಪಲಾಲ್ಯಮಾನವಾಗ್ವೈಭವಃ ಪ್ರಭಾವಃ ಸ ಭಗವಾನ್....ಫಲ್ಗುನ ಇವ ಶರನಿಕರೈರಮೋಘೈರ್ನಿಗೃಹ್ಯ. ಕಾಂಸ್ತು ದ್ವಿಷಂತಬುಧಲೋಕಾನ್ ಸಲೀಲಮೇವ ನಿರಾಕುರ್ವನ್ನಿಜಯಶಃ ಪ್ರಪಂಚ ಇವ ದಿಶಾಮಂಡಲಂ ಮಹತೀಂ ವಿಜಯಲಕ್ಷ್ಮೀಂ ಸಮಾಶ್ಲಿಷತ್ ॥

—ಶ್ರೀವ್ಯಾಸಯೋಗಿಚರಿತಮ್. P. 61.

ಜಯಘೋಷ ಮಾಡಿದರು. ಆ ಹರ್ಷಧ್ವನಿ-ಕರತಾಡನ ಧ್ವನಿಗಳು ಗಗನವನ್ನೇ ಭೇದಿಸುವಂತಿತ್ತು :

ವಿವಿಧ ದೇಶಗಳಿಂದ ಬಂದಿದ್ದ ಪ್ರತಿಪಕ್ಷಪಂಡಿತರು ತಮಗೊದಗಿದ ಅಪಕೀರ್ತಿಯನ್ನು ಸಹಿಸಲಾರದೆ ನಿಟ್ಟುಸಿರುಬಿಡಹತ್ತಿದರು.[1] ಕಳಿಂಗದೇಶದ ಮಹಾಪಂಡಿತ ಬಸವಾಭಟ್ಟನು ಪರಾಜಿತನಾಗಿ ರಾಜಸಭೆಯಲ್ಲಿ ಬಿಳುಪೇರಿದ ಮುಖದಿಂದ ಕಾಂತಿಹೀನನಾಗಿ ಕುಳಿತನು.[2] ಸಹಿಸಲಾಗದ ಅಪಜಯದಿಂದ ಪರವಾದಿ ಪಂಡಿತರಲ್ಲಿ ಕೆಲವರಿಗೆ ಮೂಗುಗಳೊಡನೆ ಅಹಂಕಾರರಸವು ಒಣಗಿತು. ಮತ್ತೆ ಕೆಲವರಿಗೆ ಬೆವರಿನೊಡನೆ ಸಂತೋಷವು ತೊಲಗಿತು. ಇನ್ನೂ ಕೆಲವರು ಲಜ್ಜೆಯಿಂದ ತಲೆತಗ್ಗಿಸಿ ಕುಳಿತರು. ಮತ್ತೆ ಕೆಲವರು ಆಶ್ಚರ್ಯದೊಡನೆ ಭಯಗೊಂಡರು. ಹೀಗೆ ಪರವಾದಿಗಳಿಗೆ ಆತ್ಮನಿಂದನೆಯಿಂದಲೂ ಭಯದಿಂದಲೂ ತಮ್ಮ ತಮ್ಮ ಮತಸಿದ್ಧಾಂತಗಳಲ್ಲಿ ಸಂದೇಹವುಂಟಾಯಿತು. ಇನ್ನುಳಿದವರಿಗೆ ಆ ದಿನವು ಕನಸಿನಂತೆ ಕಾಣಹತ್ತಿತು.[3]

ಶ್ರೀವ್ಯಾಸರಾಜರನ್ನು ಕಂಡು ಸಾಮ್ರಾಟ್ ನರಸಭೂಪಾಲನು ಮನದಲ್ಲಿ ಆಶ್ಚರ್ಯಪಡುತ್ತಾ ಶ್ಲಾಘನೆಯಿಂದ ಶಿರಃಕಂಪನ ಮಾಡುತ್ತಾ, ಕಣ್ಣುಗಳಲ್ಲಿ ಆನಂದ ಬಾಷ್ಪವನ್ನು ಹರಿಸುತ್ತಾ ಜಯಸ್ತುತಿಗೈದು ರೋಮಾಂಚನ ಕವಚಿತನಾಗಿ ಭಕ್ತಿಯ ಅಂಜಲೀ ಬದ್ಧನಾಗಿ ಗುರುಗಳಿಗೆ ನಮಿಸಿದನು.[4]

ಅನಂತರ ನರಸಭೂಪಾಲನು ಕನ್ನಡನಾಡಿಗೆ ಕೀರ್ತಿಯನ್ನು ತಂದಿತ್ತ ಶ್ರೀವ್ಯಾಸರಾಜರನ್ನು ಅತ್ಯಂತಭಕ್ತಿಭಾವದಿಂದ ಸನ್ಮಾನಿಸಿದನು. ಅವನು ಅತ್ಯಂತವಿನಯ ಭಕ್ತಿಯುತನಾಗಿ ಮುಂದೆಬಂದು ಸಮಸ್ತ ಪರವಾದಿಗಳು ನೋಡುತ್ತಿರುವಂತೆಯೇ ಅತಿ ಶುಭ್ರವಾದ ಬೆಲೆಬಾಳುವ ದುಕೂಲಪೀತಾಂಬರಗಳು, ದೊಡ್ಡದೊಡ್ಡ ಸುವರ್ಣ ಕೊಪ್ಪರಿಗೆಗಳು, ಪದ್ಮರಾಗಮಣಿಖಚಿತವಾದ ಸುವರ್ಣಹಿಡಿಕೆಗಳುಳ್ಳ ಮೃದುವಾದ ನವಿಲುಗರಿಯ ಬೀಸಣಿಕೆಗಳು, ಮುತ್ತು ರತ್ನಖಚಿತವಾದ ಕನಕಮಯ ಪಾದುಕೆಗಳು ಅನೇಕನದಿ-ತಟಾಕ-ಆರಾಮಗಳಿಂದಕೂಡಿದ ಫಲಭರಿತವಾದ ಶ್ರೇಷ್ಠಗ್ರಾಮ-ಭೂಮಿ

---

1) ತಾವದಪಯಶಸಾ ಸಮದೀರ್ಘೀಭವಂತಂ ನಿಶ್ವಾಸಂ ದಧತಾಂ ಮಧ್ಯೇ ತೇಷಾಂ ।

2) ವೈಲಕ್ಷ್ಯಪರಾಜಯತೋಽಪಿ ಕಲಿಂಗಸೂರೇಸ್ತಸ್ಯ ಪ್ರದಾತ್ರ್ಯಮಾನಾ ಮುನಿನಾವಿತೀರ್ಣಾಂ ಮಧ್ಯೇನರೇಂದ್ರಸಭ ಮಪ್ರತಿಭಾಂಗತಸ್ಯ ವೈವರ್ಣ್ಯಮೇವ ವಪುಷಿ ಪ್ರಕಟೀಭೂವ॥

3) ಕೇಷಾಂಚಿನ್ಮ್ಲಾನಾಯಿನಾಸಾಕಮಹಂಕ್ರಿಯಾಪ್ರಾಶುಷ್ಯತ್....ಅಪರೇಷಾಂ ಸಮಾಸರಃ ಸ್ವಪ್ನಸಮಯ ಇವಾಲಕ್ಷತ ॥

4) ತದನು ಯತಿಕುಲಾವತಂಸೋ ವ್ಯಾಸೋಽಪಿ ಚೇತಸಾ ವಿಸ್ಮಯಭರಂ ಶಿರಸಾ ಶ್ಲಾಘಾ-ಕಂಪಂ ಚಕ್ಷುಷಾ ಹರ್ಷಬಾಷ್ಪಂ ವಚಸಾ ವಿಜಯಸ್ತುತಿಂ ವಪುಷಾ ಪುಲಕಿತಮುಕುಲಂ-ಪಾಣಿಪಲ್ಲವೇನಾಂಜಲಿಂ ಯೌಗಪದ್ಯೇನ ಬಿಭ್ರಾಣೇನ ನರಸಮಹೀಪಾಲೇನ......

—ಶ್ರೀವ್ಯಾಸಯೋಗಿಚರಿತಂ. P. 62.

ಗಳು. ಸುವರ್ಣಶಿಬಿಕೆಗಳು, ಚಾಮರ-ಛತ್ರ-ಚೌರಿಗಳು, ಸುವರ್ಣಮಣಿಮಯ ಪೀಠಗಳು-ಹೀಗೆ ಅನರ್ಘ್ಯ ಕಾಣಿಕೆಗಳನ್ನು ಯತಿಕುಲಾವತಂಸರಾದ ಶ್ರೀವ್ಯಾಸರಾಜರಿಗೆ ಸಮರ್ಪಿಸಿ ಸಮಸ್ಕರಿಸಿದನು.[1]

ಆಗ ಶ್ರೀವ್ಯಾಸರಾಜರು ಸಮಸ್ತರಾಜಸಭೆಯೂ ಎದ್ದುನಿಂತು ಬೀಳ್ಕೊಡುತ್ತಿರಲು, ಅನುಸರಿಸಿ ನೂರಾರುಜನರು ಬರುತ್ತಿರಲು, ವಿಜಯಸೂಚಕ ಭೇರಿ-ಕಹಳೆಗಳು ಮೊಳಗುತ್ತಿರಲು, ಸುವರ್ಣಪಾಲಕಿಯಲ್ಲಿ ಕುಳಿತು ಶಿಷ್ಯರು ಜಯಜಯಕಾರ ಮಾಡುತ್ತಿರಲು "ಲೋಕಪಾವನ" ಮಠಕ್ಕೆ ದಯಮಾಡಿಸಿದರು.[2]

o o o o o o

ಶ್ರೀವ್ಯಾಸರಾಜರು ತಮ್ಮಿಂದ ಪರಾಜಿತರಾದ ಬಸವಾಭಟ್ಟ ಮುಂತಾದ ನೂರಾರುಜನ ಪ್ರತಿಪಕ್ಷದ ಪಂಡಿತರುಗಳನ್ನು ತಮ್ಮ ಮಠಕ್ಕೆ ಕರೆಯಿಸಿಕೊಂಡು ಅವರನ್ನು ಅನೇಕ ರಜತ-ಸುವರ್ಣಪಾತ್ರ-ಹಾರ-ಕಂಕಣ, ಶಾಲು-ಪೀತಾಂಬರ ವಿಶೇಷ ಸುವರ್ಣನಾಣ್ಯಾದಿ ಸಂಭಾವನೆಗಳಿಂದ ಸನ್ಮಾನಿಸಿ ಫಲಮಂತ್ರಾಕ್ಷತೆಯನ್ನು ಕರುಣಿಸಿದರು. ಅಂದಿನಸಭೆಯಲ್ಲಿ ಹಾಜರಿದ್ದ ಜನರು. ಪರಾಜಿತಪಂಡಿತರನ್ನೂ ಗೌರವಿಸುವ ವ್ಯಾಸರಾಜರ ವಿದ್ಯಾಪಕ್ಷಪಾತ-ಪಂಡಿತರಲ್ಲಿನ ಅಭಿಮಾನ-ಔದಾರ್ಯಾದಿ ಸದ್ಗುಣಗಳನ್ನು ಕಂಡು ಆಶ್ಚರ್ಯಚಕಿತರಾಗಿ ಶ್ಲಾಘಿಸಿದರು.

ಪರಾಜಿತರಾದ ಪರವಾದಿಪಂಡಿತರು ಗುರುಗಳ ವಿಶಾಲಹೃದಯ, ಸೌಜನ್ಯ, ಔದಾರ್ಯಗಳನ್ನು ಕಂಡು ಮೂಕವಿಸ್ಮಿತರಾಗಿ ಆನಂದಭಾಷ್ಪಹರಿಸುತ್ತಾ ಗುರುಗಳಿಗೆ ಭಕ್ತಿಯಿಂದ ಪ್ರಣಾಮಗೈದು ಸ್ತುತಿಸಿದರು. ಕಳಿಂಗದೇಶದ ಬಸವಾಭಟ್ಟನು ಶ್ರೀಯವರ ಈ ಅಸಾಧಾರಣಸದ್ಗುಣಗಳಿಗೆ ಮಾರುಹೋಗಿ ಅನೇಕಬಗೆಯಾಗಿ ಅವರನ್ನು ಕೊಂಡಾಡಿ ತಾನು ಪ್ರತಿನಿತ್ಯ ಪೂಜಿಸುತ್ತಿದ್ದ ತನ್ನ ಆರಾಧ್ಯದೈವವಾದ ಶ್ರೀರುದ್ರದೇವರ ಪಚ್ಚೆಯ ಲಿಂಗವನ್ನು ಶ್ರೀವ್ಯಾಸರಾಜರಿಗೆ ಭಕ್ತಿಕಾಣಿಕೆಯಾಗಿ ಸಮರ್ಪಿಸಿ ಸಾಷ್ಟಾಂಗವೆರಗಿದನು. ಶ್ರೀವ್ಯಾಸಮುನಿಗಳು ಅದನ್ನು ಆದರಪೂರ್ವಕ ಸ್ವೀಕರಿಸಿ ಶಿರಸಾಧರಿಸಿ ವಿಜಯ ಸೂಚಕವಾದ ಅದನ್ನು ತಾವು ಅರ್ಚಿಸುವುದಾಗಿ ಹೇಳಿ ಬಸವಾಭಟ್ಟನಿಗೆ ವಿಶೇಷಗೌರವಮಾಡಿ ಕಳುಹಿಸಿದರು.[3]

---

1) ....ದುಕೂಲವಸನೈಃ....ಹಾಟಕಕಟಾಹ್ಯೈಶ್ಚ....ಮಣಿಪಾದುಕಯುಗಲಿಕಯಾ.....ಆರಾಮಾಭಿರಾಮೈರ್ಗ್ರಾಮೈಃ, ಕಾಂಚನಶಿಬಿಕಾಚಂಚಚ್ಚಾಮರ...ಮಣಿಪೀಠಿಕಾದಿಭಿಃ

—ಶ್ರೀ ವ್ಯಾ. ಯೊ. ಚ P.62

2) ಶ್ರೀ ವ್ಯಾಸಯೋಗಿಚರಿತಮ್ —P.62

3) ಶ್ರೀವ್ಯಾಸರಾಜ ಸ್ವಾಮಿಗಳ ಮಠದಲ್ಲಿ ಇಂದಿಗೂ ಶಿವರಾತ್ರಿಯ ದಿನ ಬಸವಾಭಟ್ಟನು ಅರ್ಪಿಸಿದ ಪಚ್ಚೆಲಿಂಗವನ್ನು ಪೀಠಾಧಿಪತಿಗಳು ಪೂಜಿಸುವುದನ್ನು ಕಾಣಬಹುದಾಗಿದೆ.

ಶ್ರೀವ್ಯಾಸಮುನೀಂದ್ರರು ವದಾನ್ಯಶಿರೋಮಣಿಗಳಲ್ಲಿ ಅಗ್ರಣಿಯೆನಿಸಿದ ಸಾಮ್ರಾಟ್ ನರಸಭೂಪಾಲನಿಂದ ಪದೇಪದೇ ಸಂಭಾವಿತರಾಗುತ್ತಿದ್ದರು. ಚಕ್ರವರ್ತಿಯು ತಮಗೆ ಸಮರ್ಪಿಸಿದ ಗ್ರಾಮ-ಭೂಮಿ-ಧನಕನಕಾಭರಣಾದಿಗಳನ್ನು ಸದುಪಯೋಗಪಡಿಸಲಾಶಿಸಿದರು. ಅಂತೆಯೇ ಆ ಮಹಾನುಭಾವರು ಅನೇಕಗೃಹಗಳಿಂದ ಯುಕ್ತವಾದ ಅಗ್ರಹಾರಗಳನ್ನು ನಿರ್ಮಾಣಮಾಡಿಸಿ ಶಾಸ್ತ್ರಕೋವಿದರಾದ ನೂರಾರು ಜನ ಪಂಡಿತರಿಗೆ ದಾನವಾಗಿಕೊಟ್ಟು ಆ ಮಹಾಪಂಡಿತರ ಜೀವನವು ಸುಗಮವಾಗಿ, ಅವರು ನಿರಾಲೋಚನೆಯಿಂದ ಪಾಠಪ್ರವಚನಾದಿಗಳಿಂದ ಜ್ಞಾನಪ್ರಸಾರಮಾಡುತ್ತಾ ಸುಖದಿಂದ ಬಾಳುವಂತೆಮಾಡಿ ಅನುಗ್ರಹಿಸಿದರು. ಶ್ರೀಯವರ ವಿದ್ವಜ್ಜನಪಕ್ಷಪಾತ, ಔದಾರ್ಯಾದಿಗಳನ್ನು ಕಂಡು ರಾಜಧಾನಿಯ ಸುಜನರು ಗುರುಗಳನ್ನು ಮುಕ್ತಕಂಠದಿಂದ ಶ್ಲಾಘಿಸುವರು.[1] ಶ್ರೀಗಳವರಿಂದ ಹೀಗೆ ದಾನಪಡೆದು ಧನಿಕರಾದ ವಿಪ್ರವೃಂದವನ್ನು ನೋಡಿ, ಸರ್ವಜ್ಞನಾಗಿದ್ದರೂ ಕೈಲಾಸಾಧಿಪತಿಯಾದ ಶ್ರೀಶಂಕರನು ತನ್ನ ಮಿತ್ರನಾದ ಕುಬೇರನು ಯಾರೆಂಬುದನ್ನು ಅರಿಯಲಾಗದೇ ಹೋದನಂತೆ![2] ಹೀಗೆ ಶ್ರೀವ್ಯಾಸಮುನಿಗಳು ಪ್ರತಿವಾದಿದಿಗ್ವಿಜಯದ್ವಾರಾ ದ್ವೈತಸಿದ್ಧಾಂತದ ವಿಜಯದುಂದುಭಿಯನ್ನು ಮೊಳಗಿಸುತ್ತಾ, ವೈದಿಕಾಚಾರಪ್ರಸಾರದಿಂದ ಧರ್ಮವನ್ನು ಬೆಳಗಿಸುತ್ತಾ, ತತ್ತ್ವೋಪದೇಶಗಳಿಂದ ಮೋಕ್ಷಸಂಪಾದನೆಗೆ ಸಾಧನವಾದ ಹರಿವಾಯುಭಕ್ತಿಯನ್ನು ಜನತೆಯಲ್ಲಿ ನೆಲೆಗೊಳಿಸುತ್ತಾ ತಮ್ಮ ಕೀರ್ತಿಚಂದ್ರಿಕೆಯಿಂದ ವಿರಾಜಿಸಿ ಆ ರಾಜಸಭೆಯಲ್ಲಿ ಚೂಡಾಮಣಿಗಳಂತೆ ಬಹುಕಾಲವಾಸಮಾಡಿದರು.

## ೪೧. ಸಂಸ್ಕೃತ ವಿಶ್ವವಿದ್ಯಾನಿಲಯ

ಶ್ರೀವ್ಯಾಸರಾಜರು ಹಿಂದೆ ಎರಡು ಬಾರಿ ಭಾರತ ಸಂಚಾರ ಕೈಗೊಂಡಾಗ ಕಂಚಿ, ಕಾಶಿ, ಪ್ರಯಾಗ, ಮಿಥಿಲಾ, ನವದ್ವೀಪ ಮುಂತಾದ ಕಡೆಗಳಲ್ಲಿದ್ದ ವಿದ್ಯಾಪೀಠಗಳಿಗೆ ಭೇಟಿಕೊಟ್ಟಾಗ ಅವರಿಗೆ ಅವೆಲ್ಲಕ್ಕಿಂತ ಅತ್ಯಂತ ವ್ಯಾಪಕವಾದ ಸಂಸ್ಕೃತ

---

1) ಕ್ಷೋಣೀವಲ್ಲಕಿ ತಲ್ಲಜೇ ಜಿತಮಹಾಮೇರೂದಯಾಸ್ತಾಚಲ-
ಸ್ಥೂಲಾಭಾಮಿಫಲೀ ವಿಶಾಂತಟಿನೀ ತಂತ್ರೀ ಸಮಾಮೇಷ್ಲಿತೇ ।
ತಸ್ಯಾನೋ ಮಹತೋ ಗುಣೇ ಕತಿಪಯಗ್ರಾಮಾರ್ಘ ಹಸನ್ಯಾದರಂ
ವ್ಯಾಸೋ ಪ್ರಹೃಸಭಾಮುದೇ ಯತಿಪತಿರ್ಗ್ರಾಮಾರ್ಘ ಬಹೂರ್ಘ ವ್ಯಾತನೋತ್ ॥
—ಶ್ರೀ ವ್ಯಾ. ಯೊ. ಚ. —P–64

2) ತಸ್ಮಿನ್ ಯತೌ ವಿತರಣೇನ ಧನಾಧಿನಾಥಾಂ-
ಸ್ತನ್ವತ್ಯಧಿಕ್ಷಿತಿತಲಂ ಸಕಲಾನ್ ಬುಧೇಂದ್ರಾನ್ ।
ಸರ್ವಜ್ಞತಾಮಪಿ ವಹನ್ನ ವಿವೇದ ದೇವಃ
ಕೋ ವಾ ಸಖೇತಿ ಕುಲಶೈಲಸುತಾ ಸಹಾಯಃ ॥
—ಶ್ರೀ ವ್ಯಾ. ಯೊ. ಚ-ಪುಟ–63

ವಿಶ್ವವಿದ್ಯಾನಿಲಯವೊಂದನ್ನು ಪ್ರಾರಂಭಿಸುವ ಹಂಬಲವುಂಟಾಗಿತ್ತು. ಹಿಂದೆ ಭಾರತದ ಆದರ್ಶ ಚಕ್ರವರ್ತಿಗಳ ಆಶ್ರಯದಲ್ಲಿ ಪ್ರಾರಂಭವಾಗಿ ವಿಶ್ವದಲ್ಲೆಲ್ಲಾ ವಿಖ್ಯಾತಿಗಳಿಸಿ ಮೆರೆದಿದ್ದ ನಳಂದಾ, ತಕ್ಷಶಿಲೆಗಳ ಮಾದರಿಯಲ್ಲಿ ಕರ್ನಾಟಕದಲ್ಲಿ ಶ್ರೇಷ್ಠ ವಿಶ್ವವಿದ್ಯಾನಿಲಯವನ್ನು ಪ್ರಾರಂಭಿಸಬೇಕೆಂಬ ಅವರ ಕನಸು ನನಸಾಗುವ ಪರಿಸ್ಥಿತಿ ಕರ್ನಾಟಕದಲ್ಲಿ ಉಂಟಾಗಿದ್ದಿತು. ಕನ್ನಡ ಸಾಮ್ರಾಜ್ಯದ ರಾಜಗುರುಗಳಾದ ಮೇಲೆ ಕನ್ನಡದ ಸಾರ್ವಭೌಮರು ಅವರ ಅವಿಚ್ಛಿನ್ನ ಭಕ್ತರಾಗಿ ಅವರ ಸಲಹೆ, ಉಪದೇಶಗಳಂತೆ ವರ್ತಿಸುತ್ತಾ ಅವರ ಆದೇಶಗಳನ್ನು ಕಾರ್ಯರೂಪಕ್ಕೆ ತರಲು ಸತತಮಸ್ತಕರಾಗಿ ಕಾದಿರುತ್ತಿದ್ದುದರಿಂದ ಸರಿಯಾದ ವಾತಾವರಣವು ಕಲ್ಪಿತವಾಗಿದ್ದಿತು ಅಂತೆಯೇ ಶ್ರೀವ್ಯಾಸರಾಜರು ತಮ್ಮ ಆಶಯವನ್ನು ಸಾಮ್ರಾಟ್ ನರಸಭೂಪಾಲನಲ್ಲಿ ಪ್ರಸ್ತಾಪಿಸಿ ವಿಶ್ವವಿದ್ಯಾನಿಲಯದ ರೂಪರೇಶೆಗಳನ್ನು ಅವನಿಗೆ ಮನದಟ್ಟು ಮಾಡಿಕೊಟ್ಟರು.

ಶ್ರೀವ್ಯಾಸಯತಿಗಳನ್ನು ಆರಾಧ್ಯದೈವವಾಗಿ ತಿಳಿದಿದ್ದ ನರಸಭೂಪಾಲ ಗುರುಗಳ ಆಜ್ಞೆಯನ್ನು ಕಾರ್ಯರೂಪಕ್ಕೆ ತರಲು ಸಿದ್ಧನಾದ, ವ್ಯಾಸಮುನಿಗಳು ವಿಶ್ವವಿದ್ಯಾನಿಲಯದ ಮಹತ್ವ ಅದರ ರೂಪರೇಷೆಗಳನ್ನು ವಿವರಿಸಿ ಹೀಗೆ ಹೇಳಿದರು. "ರಾಜೇಂದ್ರ ! ಈ ವಿಶ್ವವಿದ್ಯಾನಿಲಯವು ಜಗನ್ಮಾನ್ಯವಾಗಬೇಕು. ಕನ್ನಡನಾಡಿನ ಕೀರ್ತಿ ಎಲ್ಲೆಡೆ ಬೆಳಗಬೇಕು. ಈ ವಿಶ್ವವಿದ್ಯಾನಿಲಯದಲ್ಲಿ ವೇದ-ವೇದಾಂಗಗಳು ಉಪನಿಷತ್ತು, ಪುರಾಣ, ಇತಿಹಾಸಗಳು, ಸಾಂಖ್ಯ ಯೋಗ-ಪ್ರಾಚೀನ ಮತ್ತು ನವೀನನ್ಯಾಯ, ವೈಶೇಷಿಕ, ವ್ಯಾಕರಣ, ಛಂದಸ್ಸು, ಭಾಟ್ಟ ಹಾಗೂ ಗೌರವ ಮೀಮಾಂಸಾ, ದ್ವೈತ-ಅದ್ವೈತ-ವಿಶಿಷ್ಟಾದ್ವೈತ ವೇದಾಂತಗಳು, ಕಾವ್ಯ-ನಾಟಕ ಅಲಂಕಾರಾದಿ ಸಾಹಿತ್ಯಶಾಸ್ತ್ರ, ಧರ್ಮಶಾಸ್ತ್ರ, ಆಗಮ, ಜ್ಯೋತಿಷ, ಗಣಿತ ಹೀಗೆ ಭಾರತದ ಸಕಲಶಾಸ್ತ್ರಗಳ ಜೊತೆಗೆ ಸಂಗೀತ, ಶಿಲ್ಪ, ಚಿತ್ರಕಲೆ. ನೃತ್ಯ ಮುಂತಾದ ಕಲೆಗಳ ಅಭ್ಯಾಸಕ್ಕೆ ವ್ಯವಸ್ಥೆ ಮಾಡಬೇಕು. ಹೀಗೆ ವ್ಯಾಪಕರೀತಿಯಿಂದ ಅಧ್ಯಯನಕ್ಕೆ ಅವಕಾಶವೇರ್ಪಟ್ಟರೆ, ದೇಶವಿದೇಶಗಳಿಂದಲೂ ಸಹಸ್ರಾರು ಜನ ವಿದ್ಯಾರ್ಥಿಗಳು ಬಂದು ಇಲ್ಲಿ ಅಧ್ಯಯನ ಮಾಡುವರು. ಅಖಂಡ ಭಾರತದಲ್ಲೇ ಇದೊಂದು ಮಹಾ ವಿಶ್ವವಿದ್ಯಾನಿಲಯವಾಗಿ ಮೆರೆದಾಗ ಕನ್ನಡ ಸಾಮ್ರಾಜ್ಯ ಮತ್ತು ನಿನ್ನ ಕೀರ್ತಿ ವಿಶೇಷವಾಗಿ ಬೆಳಗುವುದು, ಇದರ ಗೌರವ ನಿನಗೆ ದೊರಕಬೇಕೆಂದು ನಾವು ಆಶಿಸುತ್ತೇವೆ" ಎಂದು ಹೇಳಿದರು.

ಗುರುಗಳ ಮಾತುಕೇಳಿ ನರಸಭೂಪಾಲ ರೋಮಾಂಚಿತನಾದ, ಅಪ್ಪಣೆಯಂತೆ ಸಂಸ್ಕೃತ ವಿಶ್ವವಿದ್ಯಾನಿಲಯವನ್ನು ಸ್ಥಾಪಿಸಿ ಸಾಮ್ರಾಜ್ಯ ಭಂಡಾರದಿಂದಲೇ ಅದು ಯಶಸ್ವಿಯಾಗಿ ಮುನ್ನಡೆಯುವಂತೆ ಮಾಡುವುದಾಗಿ ಶ್ರೀಯವರಿಗೆ ಆಶ್ವಾಸನೆ ನೀಡಿದನು.

ಶ್ರೀಯವರು ರೂಪಿಸಿದ ವಿಶ್ವವಿದ್ಯಾನಿಲಯಕ್ಕೆ ಅವಶ್ಯವಾದ ವಿವಿಧ ಕಟ್ಟಡ

ಗಳ ನಿರ್ಮಾಣಕಾರ್ಯ ಪ್ರಾರಂಭವಾಯಿತು. ಒಂದು ಶುಭಮುಹೂರ್ತದಲ್ಲಿ ಸಾಮ್ರಾಟನ ನೇತೃತ್ವದಲ್ಲಿ ವಿಶ್ವವಿದ್ಯಾಲಯದ ಪ್ರಾರಂಭೋತ್ಸವವನ್ನು ಶ್ರೀವ್ಯಾಸರಾಜರು ನೆರವೇರಿಸಿದರು. ನರಸಭೂಪಾಲ ಹಾಗು ವಿದ್ವನ್ಮಂಡಲಿಯ ಪ್ರಾರ್ಥನೆಯಂತೆ ಶ್ರೀ ವ್ಯಾಸಮುನಿಗಳು 'ಕುಲಪತಿ'ಗಳಾಗಿದ್ದು ಆ ಮಹಾಸಂಸ್ಥೆಯನ್ನು ನಿರ್ವಹಿಸುವ ಹೊಣೆ ಹೊತ್ತರು.

ವಿಜಯನಗರದಲ್ಲಿ ಶ್ರೀವ್ಯಾಸತೀರ್ಥರ ಕುಲಪತಿತ್ವದಲ್ಲಿ ವಿಶ್ವವಿದ್ಯಾನಿಲಯವು ಪ್ರಾರಂಭವಾಗುವ ಈ ವಿಚಾರ ಭಾರತದಲ್ಲೆಲ್ಲಾ ವ್ಯಾಪಿಸಿ ಸಹಸ್ರಾರು ಜನ ವಿದ್ಯಾರ್ಥಿಗಳು ವಿವಿಧ ಶಾಸ್ತ್ರಗಳನ್ನು ಕಲಿಯಲು ವಿಜಯನಗರಕ್ಕೆ ಬರಹತ್ತಿದರು. ಶ್ರೀವ್ಯಾಸರಾಜರು ರಾಷ್ಟ್ರದ ನಾನಾಭಾಗಗಳಲ್ಲಿ ಪ್ರಖ್ಯಾತರಾಗಿದ್ದ ಶ್ರೇಷ್ಠಪಂಡಿತರನ್ನು ಕರೆಸಿಕೊಂಡು ಅವರಿಗೆ ಸಕಲ ಸೌಕರ್ಯಗಳನ್ನೇರ್ಪಡಿಸಿಕೊಟ್ಟು ವಿವಿಧಶಾಸ್ತ್ರಗಳಲ್ಲಿ ಪಾಠಪ್ರವಚನವು ಯಶಸ್ವಿಯಾಗಿ ಜರಗುವಂತೆ ಮಾಡಿ ತಾವೇ ಸ್ವತಃ ಪಂಡಿತರು, ವಿದ್ಯಾರ್ಥಿಗಳ ಯೋಗಕ್ಷೇಮ ನೋಡಿಕೊಂಡು,ಅಧ್ಯಯನದ ಮೇಲ್ವಿಚಾರಣೆಯನ್ನೂ ನಿರ್ವಹಿಸುತ್ತಿದ್ದುದರಿಂದ ವಿಶ್ವವಿದ್ಯಾನಿಲಯದ ಕೀರ್ತಿ ಎಲ್ಲೆಡೆ ಹರಡಹತ್ತಿತು. ಕೆಲ ವರ್ಷಗಳಲ್ಲೇ ಸುಮಾರು ಹತ್ತು ಸಹಸ್ರ ಜನ ವಿದ್ಯಾರ್ಥಿಗಳು ಅಲ್ಲಿ ವ್ಯಾಸಂಗಮಾಡಲಾರಂಭಿಸಿದರು. ವಿಜಯನಗರದ ವಿಶ್ವವಿದ್ಯಾಲಯದಲ್ಲಿ ಓದುವ ಅರ್ಹತೆ ಪಡೆಯಲು ವಿದ್ಯಾರ್ಥಿಗಳು ಕಟುಪರೀಕ್ಷೆಗೊಳಗಾಗಬೇಕಿತ್ತು. ಶ್ರೀವ್ಯಾಸರಾಜರು ವಿದ್ಯಾರ್ಥಿಯನ್ನು ದಾಖಲು ಮಾಡುವ ಮೊದಲು ಅವನ ಸದಾಚಾರ, ಶೀಲಗಳಿಗೆ ಬಹು ಮಹತ್ವ ಕೊಡುತ್ತಿದ್ದರು. ವಿದ್ಯೆಗೆ ಮೊದಲು ಪ್ರತಿಯೊಬ್ಬನೂ ಸ್ನಾನ-ಸಂಧ್ಯಾ ಸದಾಚಾರ ಶೀಲ-ಧರ್ಮಸಂಪನ್ನನಾಗಿರುವುದನ್ನು ಗಮನಿಸುತ್ತಿದ್ದರು. ಅದ್ದರಿಂದ ಅಲ್ಲಿ ವ್ಯಾಸಂಗ ಮಾಡುವವರು ಉತ್ತಮ ಶೀಲಸಂಪನ್ನರಾಗಿ ಸನಾತನಧರ್ಮದ ತಳಹದಿಯ ಮೇಲೆ ತಯಾರಾಗುತ್ತಿದ್ದರು. ಆದುದರಿಂದಲೇ ಭಾರತದಲ್ಲೇ ಅತ್ಯುತ್ತಮ ವಿದ್ಯಾಕೇಂದ್ರವೆನಿಸಿ ವಿಜಯನಗರವು 'ವಿದ್ಯಾನಗರ'ವೆಂಬ ತನ್ನ ಹೆಸರನ್ನು ಸಾರ್ಥಕಪಡಿಸಿಕೊಂಡಿತು.

ವಿಜಯನಗರದ ವಿಶ್ವವಿದ್ಯಾಲಯದಲ್ಲಿ ಒಂದೊಂದು ಶಾಸ್ತ್ರವಿಭಾಗಕ್ಕೂ ಅನೇಕ ಉಪನ್ಯಾಸಕರು, ಅಧ್ಯಾಪಕರುಗಳಿದ್ದು ಅವರ ಮೇಲೆ ಪ್ರಧಾನಾಧ್ಯಾಪಕರೂ ಇರುತ್ತಿದ್ದರು.ಒಂದೊಂದು ಶಾಸ್ತ್ರವಿಭಾಗಗಳಿಗೂ ಪ್ರತ್ಯೇಕ ಕಟ್ಟಡಗಳಿದ್ದವು, ಒಂದೊಂದು ಶಾಸ್ತ್ರಗಳಲ್ಲಿಯೂ 700-800ಜನ ವಿದ್ಯಾರ್ಥಿಗಳು ಅಧ್ಯಯನಮಾಡುತ್ತಿದ್ದರು. ಇಂಥ ಹತ್ತಾರು ವಿಭಾಗಗಳ ಮೇಲ್ವಿಚಾರಣೆಯನ್ನು ಕುಲಪತಿಗಳೇ ನಿರ್ವಹಿಸುತ್ತಿದ್ದರು, ಭಾರತದ ಅನೇಕ ಭಾಗಗಳು, ಕನ್ನಡ ಸಾಮ್ರಾಜ್ಯದ ವಿವಿಧ ಭಾಗಗಳಲ್ಲಿದ್ದ ನೂರಾರು ಸಂಸ್ಕೃತ ವಿದ್ಯಾಪೀಠಗಳು, ಈ ವಿಶ್ವವಿದ್ಯಾನಿಲಯದ ಅಂಕಿತಕ್ಕೊಳಪಟ್ಟು ಇಲ್ಲಿನ ಕ್ರಮದಲ್ಲಿಯೇ ಅಲ್ಲಿಯೂ ಪಾಠ ಪ್ರವಚನಗಳು ಜರಗುತ್ತಿತ್ತು,

ವಿಜಯನಗರದ ವಿಶ್ವವಿದ್ಯಾನಿಲಯವು ಚಕ್ರತೀರ್ಥದ ಸಮೀಪದ ಅಚ್ಯುತದೇವ ರಾಜ ದೇವಾಲಯಕ್ಕೆ ಹೊಂದಿಕೊಂಡಿದ್ದಿತು. ಮುಂದೆಈಭಾಗಕ್ಕೆ ಅಚ್ಯುತದೇವರಾಜ ಪುರವೆಂಬ ಹೆಸರಾಯ್ತು. ಈಭಾಗದಲ್ಲಿ ಸುಮಾರು ನೂರಾರು ಎಕರೆಗೂ ಮೀರಿದಷ್ಟು ವಿಸ್ತಾರವಾದ ಪ್ರದೇಶದಲ್ಲಿ ವಿಶ್ವವಿದ್ಯಾಲಯವು ಹರಡಿಕೊಂಡಿದ್ದಿತು. ಅಲ್ಲಿ ಪ್ರತಿಯೊಂದು ಶಾಸ್ತ್ರವಿಭಾಗಕ್ಕೂ ಅನೇಕ ಕಟ್ಟಡಗಳಿದ್ದವು. ವಿದ್ಯಾರ್ಥಿಗಳಿಗೆ ವಸತಿಗೃಹಗಳು, ಅಧ್ಯಾಪಕರು ವಾಸಿಸುವ ಮಂದಿರಗಳು, ಅಧ್ಯಯನ ಶಾಲೆಗಳು, ಪ್ರಯೋಗ ಮಂದಿರಗಳು, ಉಪನ್ಯಾಸ ಮಂದಿರಗಳು, ಸಭಾಭವನಗಳು. ಲಕ್ಷಾಂತರ ತಾಳೆಓಲೆ, ಲಕ್ಷಾಂತರ ಹಸ್ತಲಿಖಿತ ವಿವಿಧ ಶಾಸ್ತ್ರಗಳಿಂದ ಕಂಗೊಳಿಸುವ ವಿಸ್ತಾರವಾದ ಗ್ರಂಥಭಂಡಾರ, ವ್ಯಾಯಾಮಶಾಲೆಗಳು, ಕ್ರೀಡಾಗಾರಗಳು, ಆಟದ ಮೈದಾನಗಳು ವಿಶ್ವವಿದ್ಯಾಲಯದ ಕಾರ್ಯಾಗಾರಗಳು, ಕುಲಪತಿಭವನ, ಫಲಪುಷ್ಪಭರಿತ ಗಿಡಮರ ಬಳ್ಳಿಗಳಿಂದ ಶೋಭಿಸುವ ಉದ್ಯಾನಗಳು, ಸರೋವರಗಳು—ಹೀಗೆಬಹುವಿಸ್ತಾರವಾಗಿ ಸಕಲಸೌಲಭ್ಯಗಳಿಂದ ಕಂಗೊಳಿಸುತ್ತಿದ್ದ ವಿಜಯನಗರದ ಆ ವಿಶ್ವವಿದ್ಯಾನಿಲಯವು ಜಗತ್ತಿನ ವಿವಿಧ ದೇಶ, ದ್ವೀಪಗಳ ಜನರನ್ನೂ, ಭಾರತದ ಎಲ್ಲ ಭಾಗದ ಜನರನ್ನೂ ತನ್ನತ್ತ ಆಕರ್ಷಿಸುತ್ತಿತ್ತು. ಅಂತೆಯೇ ಅದು ಭಾರತದಲ್ಲೇ ಅತ್ಯಂತ ಶ್ರೇಷ್ಠ ವಿದ್ಯಾಕೇಂದ್ರವೆಂದು ಹೆಸರುಗಳಿಸಿತು.

ಈ ವಿಶ್ವವಿದ್ಯಾನಿಲಯದಲ್ಲಿ ಭಾರತದ ಸವರ್ಣ ಹಿಂದೂ ಜನರಲ್ಲದೆ, ಜೈನ, ಬೌದ್ಧ, ಪಾರಸೀಕ, ಯಹೂದ್ಯ, ಕ್ರೈಸ್ತರೂ, ಬ್ರಹ್ಮದೇಶ, ಮಲಯಾ, ಸುಮಾತ್ರ ಸಿಂಗಪುರ, ಸಿಂಹಳ, ನೇಪಾಳ, ಭೂತಾನ ಮುಂತಾದ ರಾಜ್ಯಗಳ ಜನರೂ ತಮತಮಗೆ ಪ್ರಿಯವಾದ ವಿದ್ಯೆಗಳನ್ನೂ, ಸಂಗೀತ, ಸಾಹಿತ್ಯ ಕಲೆಗಳನ್ನೂ ಅಧ್ಯಯನ ಮಾಡುತ್ತಿದ್ದರು. ಇಷ್ಟೊಂದು ವ್ಯಾಪಕವಾದ ವಿಶ್ವವಿದ್ಯಾನಿಲಯದ ಕೇಂದ್ರಬಿಂದು ಶ್ರೀವ್ಯಾಸರಾಜರೇ ಆಗಿದ್ದರೆಂದಮೇಲೆ ಆ ಮಹನೀಯರು ಭಾರತೀಯ ಸನಾತನಧರ್ಮ-ವಿದ್ಯೆ ಸಂಸ್ಕೃತಿ-ಕಲೆಗಳಿಗೆ ಮಾಡಿದ ಮಹೋಪಕಾರವೆಂತಹುದೆಂಬುದರ ಅರಿವಾಗದಿರದು.

ಈ ವಿಶ್ವವಿದ್ಯಾನಿಲಯಕ್ಕೆ ಭಾರತದ ಅನೇಕ ರಾಜರು, ಕನ್ನಡ ಸಾಮ್ರಾಜ್ಯದ ಮಾಂಡಲೀಕರು, ಶ್ರೀಮಂತ ವರ್ತಕರು, ಜಹಗೀರದಾರರುಗಳು ಉದಾರವಾಗಿ ಧನ ಕನಕ ಹಾಗು ವಿಶೇಷ ದತ್ತಿಗಳನ್ನು ಬಿಟ್ಟಿದ್ದರು. ಕನ್ನಡ ಸಾಮ್ರಾಜ್ಯಾಧೀಶರೇ ಇದರ ಸಮಸ್ತ ಖರ್ಚುವೆಚ್ಚಗಳಿಗೆ ಭಂಡಾರದಿಂದ ಹಣವನ್ನು ಒದಗಿಸುತ್ತಿದ್ದರು.

ತುಳುವ ನರಸಭೂಪಾಲನ ಕಾಲದಲ್ಲಿ ಪ್ರಾರಂಭವಾದ ಈ ವಿಶ್ವವಿದ್ಯಾನಿಲಯವು, ವೀರನರಸಿಂಹನ ಕಾಲದಲ್ಲಿ ಹೆಚ್ಚು ಅಭಿವೃದ್ಧಿಸಿ, ಕೃಷ್ಣದೇವರಾಯನ ಆಳ್ವಿಕೆಯಲ್ಲಿ ಅತ್ಯುನ್ನತ ಮಟ್ಟವನ್ನು ಮುಟ್ಟಿ ಸರ್ವಾಂಗೀಣವಾಗಿ ಅಭಿವೃದ್ಧಿಸಿ, ಜಗದ್ವಿಖ್ಯಾತವಾಯಿತು. ಅನೇಕ ವಿದೇಶಿಯರ ಬರಹಗಳಿಂದ ಈ ವಿಶ್ವವಿದ್ಯಾನಿಲಯ ಮತ್ತು ಕುಲಪತಿಗಳಾದ ಶ್ರೀವ್ಯಾಸರಾಜರ ಮಹತ್ವದ ಅರಿವಾಗುವುದು. ನನ್ನೀಜ

ನೆಂಬ ಪೋರ್ಚುಗೀಸಿನ ವ್ಯಾಪಾರಿಯು ವಿಶ್ವವಿದ್ಯಾನಿಲಯದ ಕುಲಪತಿಗಳಾದ ಶ್ರೀ ವ್ಯಾಸರಾಜರನ್ನು ಹೀಗೆ ಉಲ್ಲೇಖಿಸಿದ್ದಾನೆ—"Everyday he (The King of Bisnaga) heares the preaching of a learned Brahmin who never married nor tcuched women;" ಈ ವ್ಯಾಪಾರಿಯು ಒಂದು ಸಲ ವಿಶ್ವವಿದ್ಯಾನಿಲಯದ ಘಟಿಕೋತ್ಸವ ಕಾಲದಲ್ಲಿ ಒಂದು ಮೈಲು ಉದ್ದದ ದೊಡ್ಡ ಮೆರವಣಿಗೆಯಲ್ಲಿ ಮಣಿಖಚಿತ ಸುವರ್ಣ ಪಾಲಕಿಯಲ್ಲಿ ರಾಜವೈಭವದೊಡನೆ ಸಹಸ್ರಾರು ಜನ ವಿದ್ಯಾರ್ಥಿಗಳು, ವಿದ್ವಾಂಸರು, ವಿವಿಧ ವರ್ಣದ ಬೆಲೆಬಾಳುವ ವಸ್ತ್ರಧಾರಿಗಳಾದ ಶಿಬ್ಬಂದಿಗಳು, ಸೈನಿಕರು, ರಾಜಪುರುಷರುಗಳೊಡನೆ ಹೋಗುತ್ತಿದ್ದ ಶ್ರೀ ವ್ಯಾಸರಾಜರನ್ನು ಕಂಡು ಅಚ್ಚರಿಗೊಂಡನಂತೆ ! ಆ ಮಹನೀಯರ ತೇಜಸ್ಸು, ಸಾಮ್ರಾಟನಿಂದ ಪಡೆಯುತ್ತಿದ್ದ ಮಾನ್ಯತೆಗಳನ್ನು ಕಂಡು ಪ್ರಭಾವಿತನಾಗಿ ಅವರ ದರ್ಶನ ಪಡೆದು ಅಮೂಲ್ಯ ಕಾಣಿಕೆಗಳನ್ನು ಸಮರ್ಪಿಸಿ, ಅವರ ಆಶೀರ್ವಾದ ಪಡೆದನಂತ !

ಶ್ರೀವ್ಯಾಸರಾಜಗುರುವರ್ಯರು ಕುಲಪತಿಗಳು ಮಾತ್ರವಾಗಿರದೆ ವಿಶ್ವವಿದ್ಯಾಲಯದ ಪಾಠಪ್ರವಚನಗಳಲ್ಲಿಯೂ ಸಕ್ರಿಯವಾಗಿ ಪಾಲ್ಗೊಳ್ಳುತ್ತಿದ್ದರು. ಅವರು ನ್ಯಾಯ,ವ್ಯಾಕರಣ, ಮೀಂಮಾಸಾ, ವೇದಾಂತಾದಿ ಶಾಸ್ತ್ರಗಳಲ್ಲಿ ಉದ್ಗ್ರಂಥಗಳನ್ನು ಸ್ವತಃ ಶಿಷ್ಯರಿಗೆ ಪಾಠಹೇಳುತ್ತಿದ್ದರು.ಅವರು ಬೇರೆಬೇರೆ ಶಾಸ್ತ್ರಗಳಲ್ಲಿ ಹೇಳುತ್ತಿದ್ದ ಪಾಠಕ್ರಮವೂ ನೂತನ ಬಗೆಯದಾಗಿತ್ತು. ಶ್ರೀವ್ಯಾಸಮುನಿಗಳು ಒಂದೊಂದು ಶಾಸ್ತ್ರಗಳಲ್ಲಿಯೂ,ಪ್ರತಿಭಾವಂತರಾದ ಹತ್ತುಹತ್ತುಜನಪ್ರೌಢವಿದ್ಯಾರ್ಥಿಗಳನ್ನಾರಿಸಿ ಅವರಿಗೆ ಆಯಾ ಶಾಸ್ತ್ರಗಳ ಉದ್ಗ್ರಂಥಗಳನ್ನು ಪಾಠಹೇಳುತ್ತಿದ್ದರು. ಆ ಹತ್ತು ಹತ್ತುಜನ ವಿದ್ಯಾರ್ಥಿಗಳೂ ಒಬ್ಬೊಬ್ಬರು ಹತ್ತುಹತ್ತುಜನ ಕಿರಿಯವಿದ್ಯಾರ್ಥಿಗಳಿಗೆ ಪಾಠಹೇಳುತ್ತಿದ್ದರು. ಅವರೊಬ್ಬೊಬ್ಬರಲ್ಲೂ ಅನೇಕ ವಿದ್ಯಾರ್ಥಿಗಳು ಆಯಾಶಾಸ್ತ್ರಗಳ ಪ್ರಾರಂಭಿಕಗ್ರಂಥಗಳನ್ನು ಅಧ್ಯಯನಮಾಡುತ್ತಿದ್ದರು! ಹೀಗೆ ಒಂದು ವಿಶಿಷ್ಟ ರೀತಿಯಿಂದ ಪಾಠಪ್ರವಚನವು ಜರಗುತ್ತಿದ್ದುದರಿಂದ ಪ್ರತಿಯೊಬ್ಬ ವಿದ್ಯಾರ್ಥಿಯು ಪ್ರಾರಂಭದಿಂದಲೂ ಒಳ್ಳೆಯ ತಳಹದಿಯಮೇಲೆ ನಿಷ್ಠೆಯಿಂದ ವ್ಯಾಸಂಗಮಾಡಿ ಆಯಾಶಾಸ್ತ್ರಗಳಲ್ಲಿ ಉತ್ತಮ ಪಾಂಡಿತ್ಯ ಸಂಪಾದಿಸಲು ಅನುಕೂಲವಾಗಿತ್ತು.

ಈ ವಿಶ್ವವಿದ್ಯಾನಿಲಯದಲ್ಲಿ ಹತ್ತು ಸಹಸ್ರಕ್ಕೂ ಮೀರಿ ವಿದ್ಯಾರ್ಥಿಗಳು ಜ್ಞಾನಾರ್ಜನೆಮಾಡುತ್ತಿದ್ದರು. ಈ ಎಲ್ಲ ವಿದ್ಯಾರ್ಥಿಗಳ ವಸತಿ-ವಸನ-ಭೋಜನ ಸೌಕರ್ಯಗಳನ್ನು ಖುದ್ದಾಗಿ ಶ್ರೀವ್ಯಾಸರಾಜರೇಪರಿಶೀಲಿಸುತ್ತಾ,ಪ್ರೀತ್ಯಾದರಗಳಿಂದ

ಪ್ರತಿಯೊಬ್ಬ ವಿದ್ಯಾರ್ಥಿಯ ಯೋಗಕ್ಷೇಮವನ್ನು ಗಮನಿಸುತ್ತಿದ್ದರು.[1] ಇದರಿಂದ ವಿಜಯನಗರದ ವಿಶ್ವವಿದ್ಯಾನಿಲಯ ವಿಶ್ವವಿಖ್ಯಾತವಾಗುವುದರ ಜೊತೆಗೆ ಶ್ರೀ ವ್ಯಾಸರಾಜಗುರುಸಾರ್ವಭೌಮರ ಖ್ಯಾತಿ ದೇಶವಿದೇಶಗಳಲ್ಲಿಯೂ ವ್ಯಾಪಿಸಿ ಅವರ ಕೀರ್ತಿಯು ದಿಗಂತ ವಿಶ್ರಾಂತವಾಯಿತು.[2]

o o o o o

ತುಳುವ ನರಸಭೂಪಾಲನು ಸ್ವರ್ಗಸ್ಥನಾದ ಮೇಲೆ ಅವನ ಜ್ಯೇಷ್ಠಪುತ್ರನಾದ ವೀರನರಸಿಂಹನು ಕನ್ನಡನಾಡಿನ ಸಾರ್ವಭೌಮನಾದನು. ವೀರನರಸಿಂಹನೂ ತಂದೆಯಂತೆಯೇ ಶ್ರೀವ್ಯಾಸರಾಜರಲ್ಲಿ ಅಧಿಕಭಕ್ತಿವಿನಯಗಳಿಂದ ನಡೆದುಕೊಳ್ಳುತ್ತಿದ್ದನು. ಶ್ರೀವ್ಯಾಸರಾಜರ ಉಪದೇಶದಂತೆ ವರ್ತಿಸುತ್ತಿದ್ದ ವೀರನರಸಿಂಹನು ತಂದೆಯು ಪ್ರಾರಂಭಿಸಿದ್ದ ವಿಶ್ವವಿದ್ಯಾನಿಲಯದ ಅಭಿವೃದ್ಧಿ ಕಾರ್ಯಾಸಕ್ತನಾಗಿ ಗುರುಗಳ ವಿಶ್ವಾಸಕ್ಕೆ ಪಾತ್ರನಾದನು. ಅವನು ಸದ್ಗುಣಿಯೂ, ದೇವ ಗುರುಪೂಜಕನೂ, ಪ್ರಜಾನುರಾಗಿಯೂ ಆಗಿ ಆಶ್ರಿತ ಜನರ ರಕ್ಷಕನಾಗಿ ಧರ್ಮದಿಂದ ರಾಜ್ಯಪಾಲನೆ

---

1. (i) "ವಿಜಯನಗರದ ವಿಶ್ವವಿದ್ಯಾನಿಲಯದೊಳನುದಿನ ಓದುತಿಪ್ಪರು ।
ಹತ್ತುಸಾವಿರದೆಣಿಕೆಯುಳ್ಳ ದ್ವೀಪದ್ವೀಪಾಂತರದ ಭಾರತದ ॥
ಹಲವು ವಿದ್ಯಾರ್ಥಿಗಳ ತಂಡವು ಅವರವರ ಪ್ರತ್ಯೇಕಸ್ಥಳದೊಳುಪಚರಿಸಿ ।
ಅನುಕೂಲಗೈವುತಿರ್ದರು ವ್ಯಾಸರಾಯರು ತಾವೆ ಪ್ರತಿದಿನದಿ ॥
—ರಾಘವೇಂದ್ರಪ್ಪ ಕವಿ ವಿರಚಿತ "ಸಾರಸ್ವತ ಪರಿಣಯ"

(ii) ಅರಸನಿಗೆ ಗುರುವೆನಿಸಿ ಅಷ್ಟಪ್ರಧಾನರೊಳ್ಬನು ವೃದ್ಧನಿರುತಿಹನಾತ ಸನ್ಯಾಸಿ ।
ಇವನ ಅಪ್ಪಣೆಯಂತೆ ರಾಜನು ಅನುದಿನವು ನಡೆಯುವನು ಚಕ್ರಾಧಿಪತ್ಯದ
ಪ್ರೌಢವಿದ್ಯಾಶಾಲೆಯಿಲ್ಲಿಹುದು ॥
ಇದರೊಳಗೆ ಸಂಸ್ಕೃತದ ವಿದ್ಯಾಭ್ಯಾಸ ನಡೆವುದು ತರ್ಕ-ವ್ಯಾಕರಣ-ಸಾಹಿತ್ಯ-ವೇದಾಂತಗಳು
ಬಹುಮುಖ್ಯ-ಉಳಿದ ಜ್ಯೋತಿಷ ವೈದ್ಯ ಅಧ್ಯಯನ ಯಾಜ್ಞಿಕ ವಿಷಯ ಪಕ್ಷಿಕವು
ಆಗಮ ಧರ್ಮಶಾಸ್ತ್ರಗಳು ಸಹಿತವಾಗಿ ॥
ವಾಸ್ತುಶಿಲ್ಪಶಾಸ್ತ್ರವು ವಾಣಿಜ್ಯ ಪ್ರಾಣಿಶಾಸ್ತ್ರಾರ್ಥವು ಮಾನಸಿಕ ಶಾಸ್ತ್ರಗಳು ॥
—ಹರ್ಬರ್ಟ್‌ರಿಂಕನ್ಸನ್‌ಆಂಗ್ಲಗ್ರಂಥದಲ್ಲಿ ಬರೆದಿರು
ವುದರ ಉದ್ಧಾರ—"ಸಾರಸ್ವತ ಪರಿಣಯ"

2. ಈ ವಿಶ್ವವಿದ್ಯಾನಿಲಯವು ಹಾಗೆಯೇ ಮುಂದುವರೆದು ಬಂದಿದ್ದಲ್ಲಿ ಬಹುಶಃ ಜಗತ್ತಿನಲ್ಲಿ ಮತ್ತೆಲ್ಲೂ ಕಾಣಸಿಗದ ಮಹಾವಿದ್ಯಾಕೇಂದ್ರವಾಗಿ ರಾರಾಜಿಸುತ್ತಿತ್ತೇನೋ! ಆದರೆ ವಿಜಯನಗರದ ಪತನವಾಗಿ ಹಿಂದೂ ಸಂಸ್ಕೃತಿಯ ಬದ್ಧದ್ವೇಷಿಗಳಾದ ಯವನರು ಆರು ತಿಂಗಳಕಾಲ ವಿಜಯನಗರದಲ್ಲಿ ನಡೆಸಿದ ಪೈಶಾಚಿಕ ವಿಧ್ವಂಸಕ ನರ್ತನದಿಂದಾಗಿ ಸಂಪೂರ್ಣ ಈ ವಿಶ್ವವಿದ್ಯಾನಿಲಯವು ನಾಶವಾದುದು ಭಾರತೀಯರ ಮುಖ್ಯವಾಗಿ ಕನ್ನಡಿಗರ ದುರ್ದೈವವೆಂದು ಹೇಳಿದರೆ ತಪ್ಪಾಗದು. —ಗ್ರಂಥಕಾರ

ಮಾಡುತ್ತಿದ್ದನು. ಅವನು ತಂದೆಗೆ ಅಪ್ಪನೂ ಅಸಹಾಯಶೂರನೂ ಆಗಿದ್ದ ಸಾಳುವ ತಿಮ್ಮರಸನನ್ನೇ ಮಹಾಮಾತ್ಯನನ್ನಾಗಿ ಮಾಡಿಕೊಂಡಿದ್ದುದಲ್ಲದೆ ಅವನ ಸಹೋದರನಾದ ಗುಂಡುರಾಜನಿಗೆ ಮಹಾದಂಡನಾಯಕ ಪದವಿಯನ್ನಿತ್ತು ಗೌರವಿಸಿದ್ದನು.

ವೀರನರಸಿಂಹನು ಹಂಸವು ಕಮಲಾಕರವನ್ನು ಸೇವಿಸುವಂತೆ ಶ್ರೀವ್ಯಾಸಯೋಗಿಗಳನ್ನು ಪ್ರತಿದಿನವೂ ಸೇವಿಸುತ್ತ ಅವರನ್ನು ಸನ್ಮಾನಿಸುತ್ತಾ ಅವರ ಹಿತೋಪದೇಶದಂತೆ ನಡೆದು ಆದರ್ಶರಾಜನೆಂದು ಹೆಸರುಪಡೆದನು.

ಶ್ರೀವ್ಯಾಸರಾಜರು ಹೀಗೆ ಸಾಮ್ರಾಟರಿಂದ ಸೇವಿತರಾಗಿ ತಮ್ಮ ಪರಿಶುದ್ಧಾಚರಣೆ, ಸನ್ಮಾರ್ಗೋಪದೇಶಗಳಿಂದ ಜಗತ್ತಿನಲ್ಲಿ ಧರ್ಮಾಚರಣೆಯು ನೆಲೆಗೊಳ್ಳುವಂತೆ ಮಾಡುತ್ತಾ. ನೂರಾರು ಗೃಹ, ತಟಾಕಾರಾಮಗಳಿಂದ ಶೋಭಿಸುವ ಅನೇಕ ಅಗ್ರಹಾರಗಳನ್ನು ನಿರ್ಮಾಣಮಾಡಿಸಿ ವಿದ್ಯಾವಂತರೂ, ಸದಾಚಾರಸಂಪನ್ನರೂ ಆದ ನೂರಾರು ಜನ ಭೂಸುರರಿಗೆ ದಾನಮಾಡಿ, ಅವರಿಂದ ಸೇವಿತರಾಗಿ ರಾಜ್ಯದಲ್ಲೆಲ್ಲಾ ಸತ್ಕರ್ಮಾನುಷ್ಠಾನಗಳಿಂದ ಪ್ರಜರು ಬಾಳುವಂತೆ ಮಾಡಿದರು.

ಪರವಾದಿಗಳಿಗೆ ಎದೆನೋವಿನಂತೆ, ಕಲಿಗುಣಗಳಿಗೆ ವಿಷಗ್ರಂಥ ಮುಕುಲದಂತೆ ಶ್ರೀಕಮಲಾಕ್ಷಭಕ್ತಿಗೆ ಬಿರುದಿನ ಡಿಂಡಿಮದಂತೆ, ಧೈರ್ಯಪಂಚಾನನಕ್ಕೆ ಪರ್ವತಕಂದರದಂತೆ, ಮಧ್ವಮತಗೋಪುರಕ್ಕೆ ಮಣಿಮಯ ಕುಂಭದಂತೆ. ನಿಯಮಭಂಡಾರದ ಕಾವಲುಗಾರನಂತೆ ವಿರಾಜಿಸುತ್ತಿದ್ದ ತಪೋನಿಧಿಗಳಾದ ಶ್ರೀವ್ಯಾಸರಾಜರು ಸಕಲ ದುರ್ವಾದಿಕುಲದ ಅಹಂಕಾರವನ್ನು ನಿರ್ಮೂಲಗೊಳಿಸಿ, ಪ್ರಶಾಂತಮನಸ್ಕರಾಗಿ ಸಕಲಧರ್ಮಗಳಿಗೂ ಸಂಜೀವಿನಿಯಂತಿರುವ ಶ್ರೀಮಧ್ವಾಚಾರ್ಯರ ವೈದಿಕತತ್ತ್ವವಾದ ಮತವನ್ನು ಜಗತ್ತಿನಲ್ಲಿ ಸ್ಥಿರಗೊಳಿಸಲು "ತಾತ್ಪರ್ಯಚಂದ್ರಿಕಾ, ತರ್ಕತಾಂಡವ ಹಾಗೂ ನ್ಯಾಯಾಮೃತ" ಮುಂತಾದ ಶ್ರೇಷ್ಠಗ್ರಂಥಗಳನ್ನು ರಚಿಸಿ ಶ್ರೀಹರಿವಾಯುಗಳಿಗೆ ಸಮರ್ಪಿಸಿದರು.

ಶ್ರೀಗಳವರ "ವ್ಯಾಸತ್ರಯ"ವು ಮಹತ್ವಾರ್ಥ ಗರ್ಭಿತವೂ, ಸುರಚಿರಪದ ಬಂಧುರಿತವೂ, ಅಬಾಧಿತ ಯೋಗವ್ಯುತ್ಪತ್ತಿ ಯುಕ್ತವೂ, ಜೀವೇಶ್ವರಭೇದ ಸಾಧಕವೂ, ಜ್ಞಾನಿಜನಸಂಸೇವ್ಯವೂ, ಪ್ರೇರಕವೂ, ಶ್ರೀಹರಿಮಹಿಮಾ ಪ್ರಶಂಸಾಪರವೂ ಪರಪಕ್ಷ ಪಂಡಿತರಿಗೆ ಮರ್ಮಭೇದಕವೂ ಆಗಿತ್ತು.[1] ಶ್ರೀಯವರ ಈ ಅಸಧಾರಣ ಗ್ರಂಥಗಳ ಮಹಿಮೆಯನ್ನುಕೇಳಿ ಸಕಲದಿಕ್ಕು ವಿದಿಕ್ಕುಗಳಿಂದ ಅನೇಕ ಪಂಡಿತರು ಜಲಧಾರೆಯು ಸಮುದ್ರಕ್ಕೆ ಬಂದುಸೇರುವಂತೆ ವಿದ್ಯಾನಗರಿಗೆ ಆಗಮಿಸಿ ಅನ್ವರ್ಥಕವಾದ "ವಿಶ್ವಪಾವನ" ಮಠದಲ್ಲಿ ಶ್ರೀಯವರಲ್ಲಿ ಆಮೂಲಾಗ್ರವಾಗಿ ಆ ಗ್ರಂಥಗಳನ್ನು ಅಧ್ಯಯನಮಾಡಿ ಕೃತಾರ್ಥರಾಗುತ್ತಿದ್ದರು.[2]

---

1) ...... —ಶ್ರೀವ್ಯಾಸಯೋಗಿಚರಿತಮ್ —P–64

2) ತಸ್ಮಾದ್ವ್ರತೀಶ್ವರಮುಪಸ್ಥಿತ ದಿಗಂತರೇಭ್ಯಃ ಶಾಸ್ತ್ರಾಣಿ ಶ್ರುತಾನಿ ಮುಹುರಾದಧಿರೇ ಬುಧೇಂದ್ರಾಃ ।
ಅಶ್ರಾಂತವಿಷ್ಣುಪದಸೇವನಜಾಗರೂಕಾ ವಾಹಿನ್ಯಃ ಸಾಗರಪತೇರಿವ ವಾರಿಪೂರಾಃ ॥
—ವ್ಯಾ. ಯೋ. ಚ.–P–65

ಶ್ರೀವ್ಯಾಸರಾಜಯತಿಸಾರ್ವಭೌಮರ ವದನಸುಧಾಂಶುವಿನಿಂದ ಹೊರ ಹೊಮ್ಮಿದ 'ತಾತ್ಪರ್ಯಚಂದ್ರಿಕೆ' ಎಂಬ ಬೆಳದಿಂಗಳು ಅವರಿಗೆ ಜಗತ್ತಿನಲ್ಲೆಲ್ಲಾ ಹರಡಿ ಕವಿದಿದ್ದ ಮಿಥ್ಯಾಜ್ಞಾನವೆಂಬ ಅಜ್ಞಾನಾಂಧಕಾರವನ್ನು ಪರಿಹರಿಸಿತು. ಆನಂದಪ್ರದವಾದ ಆನಂದತೀರ್ಥರ ಸನ್ಮತವೆಂಬ ಕ್ಷೀರಸಮುದ್ರವು ಹರುಷಭರದಿಂದ ಉಕ್ಕಿ ಹರಿಯಿತು.[3] ವ್ಯಾಸಯೋಗೀಂದ್ರರ ವಿಲಸಿತ ವಾಕ್‌ನರ್ತಕಿಯು ಮಾಡಿದ 'ತರ್ಕತಾಂಡವ'ವೆಂಬ ನೃತ್ಯವಿಲಾಸವನ್ನು ಕಂಡು ವಿದ್ವಜ್ಜನರ ಮನದಲ್ಲಿ ಉಲ್ಲಾಸದ ಉದ್ರೇಕವಾಯಿತು.[4] ಅನುಗ್ರಹಪೂರ್ವಕವಾಗಿ ವ್ಯಾಸತೀರ್ಥರೆಂಬ ಶ್ರೀಹರಿಯು (ಮೋಹಿನೀ)'ನ್ಯಾಯಾಮೃತ'ವೆಂಬ ಸುಧೆ (ಅಮೃತ)ಯನ್ನು ಉಣಬಡಿಸುತ್ತಿರಲು ಭೂದೇವತೆಗಳೆಂಬ ವಿದ್ವಾಂಸರು ಪ್ರತ್ಯರ್ಥಿಗಳನ್ನು ತೃಣವಾಗಿ ಕಂಡರು.[5]

ಮಹಾಮಹಿಮೋಪೇತರಾದ ಶ್ರೀವ್ಯಾಸತೀರ್ಥರ ಪ್ರಚುರಶಾಸ್ತ್ರ ಪ್ರಬಂಧ ಪ್ರಣಯನ ಪ್ರಾವೀಣ್ಯತೆಯನ್ನೂ : ಲೋಕಾಲೋಕಪರ್ವತಗಳವರೆಗೆ ಹರಡಿರುವ ಕೀರ್ತಿಯನ್ನೂ, ಅನೇಕ ದ್ವೀಪಾಂತರದ ರಾಜ-ಮಹಾರಾಜರು ಆಗಾಗ್ಗೆ ಗುರುಗಳಿಗೆ ಮಾಡುತ್ತಿದ್ದ ಪೂಜಾದಿಗಳನ್ನೂ, ಅವರ ಅಪೂರ್ವ ಅಖಂಡ ತೇಜಃಪ್ರಭಾವವನ್ನೂ ದರ್ಶನಮಾತ್ರದಿಂದಾಗುವ ನಿಗ್ರಹಾನುಗ್ರಹ ಸಾಮರ್ಥ್ಯವನ್ನೂ, ದಾತೃತ್ವದಲ್ಲಿ ವಿಖ್ಯಾತವಾದ ಕಲ್ಪವೃಕ್ಷವನ್ನೂ ಮೀರಿಸುವ ವೈಶಿಷ್ಟ್ಯವನ್ನೂ ಕಂಡು ಕಂಡು ಆಶ್ಚರ್ಯಾನಂದಭರಿತನಾಗುತ್ತಿದ್ದ ಸಾಮ್ರಾಟ್ ವೀರನರಸಿಂಹಪ್ರಭುವು ವಿನಯಾತಿಶಯದಿಂದ ಗುರುಗಳ ಗುಣಮಹಿಮಾದಿಗಳನ್ನು ಹೊಗಳುತ್ತಾ, ತನ್ನ ತಂದೆಯಾದ ನರಸ ಭೂಪಾಲನಕಿಂತ ಅತಿಹೆಚ್ಚಾಗಿ ದಶರಥಚಕ್ರವರ್ತಿಯು ವಸಿಷ್ಠಮುನಿಗಳನ್ನು

---

3) ವಿಸ್ಮೃಮರಜಗನ್ಮಿಥ್ಯಾಜ್ಞಾನಾಂಧಕಾರಭಿದಾಕೃತಾ ।
ಮಹಿತವಿಭವಂ ಸಂತನ್ವತ್ಯಾ ಚ ದುಗ್ಧಮಹಾಂಬುಧೇಃ ॥
ವಿಮಲಿತಮಹಾಭೂದ್ಯೋಗಿವ್ಯಾಸಾನನೇಂದುಸಮುತ್ಥಯಾ ।
ಸಪದಿ ಭುವನಂ ಸರ್ವಂ ತಾತ್ಪರ್ಯಚಂದ್ರಿಕಯಾ ತದಾ ॥
—ವ್ಯಾ. ಯೋ. ಚ—ಪುಟ-56

4) ವ್ಯಾಸಯೋಗಿಸಲದುಕ್ತಿನರ್ತಕೀ ಕಲ್ಪಿತಂ ಕಮನತರ್ಕತಾಂಡವಮ್ ।
ಪಶ್ಯ ತಸ್ಸದಸಿ, ಕಸ್ಯ ಮಾನಸೇऽತ್ರ ಪ್ರಾದಿತಮದಂ ವಿಪಶ್ಚಿತಃ ॥

5) ನ್ಯಾಯಾಮೃತಂ ನಿಗಮವಾರಿನಿಧೇಃ ಗೃಹೀತ್ವಾ ।
ಶ್ರೀವ್ಯಾಸಯೋಗಿಹರಿಣಾ ಪ್ರವಿತೀರ್ಯಮಾಣಮ್ ॥
ಪೀತ್ವಾ ಭೃಶಂ, ಸುಮನಸೋ ಧಿಷಣಾಧಿರನ್ಯಾನ್ ।
ಸರ್ವಾನಮಂಸತ, ತೃಣಾಯ, ಸಪತ್ನವರ್ಗಾನ್ ॥
—ಶ್ರೀ ವ್ಯಾ. ಯೋ. ಚ.-P.-65

ಅರ್ಚಿಸುತ್ತಿದ್ದಂತೆ ಭಕ್ತಿಶ್ರದ್ಧಾದಿಗಳಿಂದ ಶ್ರೀವ್ಯಾಸಯೋಗಿಗಳನ್ನು ಪೂಜಿಸಿದನು.

ಹೀಗೆ ಆ ವೀರನರಸಿಂಹನು ಶ್ರೀವ್ಯಾಸರಾಜರನ್ನು ತನ್ನ ಇಷ್ಟದೇವತೆಯಂತೆ ಭಾವಿಸಿ ವಿವಿಧರೀತಿಯಿಂದ ಪೂಜಿಸುತ್ತಾ, ಅವರಿಂದ ತತ್ತ್ವ-ಧರ್ಮೋಪದೇಶಗಳನ್ನು ಪಡೆದು, ಅವರ ಮಾರ್ಗದರ್ಶನದಲ್ಲಿ ಸಕಲ ಪ್ರಜೆಗಳನ್ನೂ ತನ್ನ ಸ್ವಂತ ಮಕ್ಕಳಂತೆ ಕಾಣುತ್ತಾ ಧರ್ಮರತನಾಗಿ ಕನ್ನಡಸಾಮ್ರಾಜ್ಯವನ್ನು ಪರಿಪಾಲಿಸುತ್ತಾ ಕೀರ್ತಿಗಳಿಸಿದನು.

## ೪೨. ಕೃಷ್ಣದೇವರಾಯ ಕನ್ನಡಸಾಮ್ರಾಟನಾದ !

ಸಂಧ್ಯಾಸಮಯ "ವಿಶ್ವಪಾವನ" ಮಠದಲ್ಲಿ ಶ್ರೀವ್ಯಾಸರಾಜರು, ದರ್ಶನಾಕಾಂಕ್ಷಿಗಳಾಗಿ ಬಂದಿದ್ದ ಲೌಕಿಕ ವೈದಿಕ ಭಕ್ತಜನರಿಗೆ ಉಪದೇಶಮಾಡಿ ಆಶೀರ್ವದಿಸಿ ಕಳುಹಿಸಿ ಸಾಯಂದೀಪಾರಾಧನೆಗೆ ಸಜ್ಜಾಗುತ್ತಿರುವಾಗ ಮಠದ ಸರ್ವಾಧಿಕಾರಿಗಳು ಬಂದು "ಸ್ವಾಮಿ, ಮಹಾಮಾತ್ಯರಾದ ತಿಮ್ಮರಸರು ದರ್ಶನಾಕಾಂಕ್ಷಿಗಳಾಗಿ ಬಂದಿದ್ದಾರೆ" ಎಂದು ವಿಜ್ಞಾಪಿಸಿದರು. ಗುರುಗಳು "ಅವರನ್ನು ಗೌರವದಿಂದ ನಮ್ಮ ಏಕಾಂತಮಂದಿರಕ್ಕೆ ಕರೆತನ್ನಿ" ಎಂದಾಜ್ಞಾಪಿಸಿ ಅತ್ತ ತೆರಳಿದರು. ಸರ್ವಾಧಿಕಾರಿಗಳು ತಿಮ್ಮರಸನನ್ನು ಏಕಾಂತಮಂದಿರಕ್ಕೆ ಕರೆತಂದು ಶ್ರೀಯವರ ಭೇಟಿಮಾಡಿಸಿ ತೆರಳಿದರು.

ಚಿಂತಾಕ್ರಾಂತಮುಖದಿಂದ ಒಳಬಂದ ಸಾಳುವ ತಿಮ್ಮರಸು ಗುರುಗಳಿಗೆ ನಮಸ್ಕರಿಸಿ ಅವರು ತೋರಿದ ಚಿತ್ರಾಸನದಲ್ಲಿ ಕುಳಿತ. ಶ್ರೀಗಳವರು "ಮಹಾಮಾತ್ಯರು ಕೃಷ್ಣಗ್ರಹಗೃಹೀತಚಿತ್ತರಾಗಿರುವಂತಿದೆಯಲ್ಲಾ" ಎಂದು ನಕ್ಕರು. ಅವರ ಮಾತುಕೇಳಿ ಚಕಿತನಾದ ತಿಮ್ಮರಸರು "ಸರ್ವಜ್ಞರಿಗೆ ಅರಿವಾಗದಿರುವುದೇನಿದೆ ? ನಾನಿಂದು ಒಂದು ಸಮಸ್ಯೆಯ ಸುಳಿವಿಗೆ ಸಿಕ್ಕಿ ಬಳಲುತ್ತಿದ್ದೇನೆ. ಮುಂದಿನ ದಾರಿ ಕಾಣದೆ ತಮ್ಮ ಮಾರ್ಗದರ್ಶನಕ್ಕಾಗಿ ಬಂದಿದ್ದೇನೆ" ಎಂದರುಹಿದನು.

---

1. ಏವಂ ಭಗವತಸ್ತಸ್ಯ ತಾದೃಕ್ಷಾಂ ಪ್ರಚುರಶಾಸ್ತ್ರಪ್ರಣಯನ ಪ್ರವೀಣತಾಂ, ಲೋಕಾಲೋಕ ಶಿಲಾತಲ ಚಂಕ್ರಮವಿಲಾಸಲೋಲ ಕೀರ್ತಿಸಿತಕರವಾಯಾಪದಶಂಕಾಂ ಕಾರಣಕಾರಣಂ, ಯಶಃ ಪ್ರಸರಣಂ ಚ ದ್ವೀಪಾಂತರಭೂಪಾಲಸಂಪ್ರೇಷಿತ ಪ್ರಧಾನಪುರುಷೈರಸಕೃತ್ ಸಮರ್ಪ್ಯಮಾಣಾನಿ ಬಹುವಿಧೋಪಹಾರ ಪೂಜನಾನಿ ಚ...ವಿಲೋಕಮಾನಃ ಸ ವೀರನರಸಿಂಹಭೂಪತಿ ರಾಕ್ರಮ್ಯಮಾಣ ಇವ ಮೋದೈಃ. ಆಲಿಂಗ್ಯಮಾನ ಇವ ವಿಸ್ಮಯೈ ರಾಲಿಪ್ಯಮಾನ ಇವ ವಿನಯೈರಾರುಹ್ಯಮಾಣ ಇವ ರಣರಣಕೈರವಲಂಬ್ಯಮಾನ ಇವ ಶ್ಲಾಘನೈಃ ಅಜಾದಿವ ದಶರಥೋ ವಸಿಷ್ಠಂ ಪಿತುರಧಿಕಮೇವ ಭಕ್ತಿಭಾರೇಣ ತಂ ಯತಿವರಿಷ್ಠಮಭ್ಯರ್ಚಯಾಮಾಸ ॥

ಶ್ರೀವ್ಯಾಸಯೋಗಿಚರಿತಮ್. P. 66.

ನಸುನಕ್ಕ ಗುರುಗಳು "ಕೃಷ್ಣ ರಕ್ಷಣೆಯ ವಿಚಾರವಲ್ಲವೇ ನಿಮ್ಮನ್ನು ಕಾಡುತ್ತಿರುವುದು ? ನಾವೆಲ್ಲರೂ ಕೃಷ್ಣಗ್ರಹಗೃಹೀತಾತ್ಮರಾಗಿರುವುದರಿಂದ ಅದು ಸ್ವಾಭಾವಿಕವೇ ಅಲ್ಲವೇ ತಿಮ್ಮರಸರೇ ?" ಎಂದೆನಲು ತಿಮ್ಮರಸು "ಭೂತಭವಿಷ್ಯದ್ವರ್ತಮಾನ ವಿಚಾರಗಳನ್ನು ಕರತಲಾಮಲಕವಾಗಿ ಕಾಣುವ ಮಹಾನುಭಾವರಿಗೆ ವೇದ್ಯವಿಲ್ಲದ್ದೇನಿದೆ? ಸನ್ನಿಧಾನದವರು ಅಲೌಕಿಕನಾದ ಶ್ರೀಕೃಷ್ಣಗ್ರಹಗೃಹೀತಾತ್ಮರು! ನಾನಾದರೋ ಪಾಮರ. ನನಗೆ ಲೌಕಿಕ ಕೃಷ್ಣನೆಂಬ ಗ್ರಹಬಾಧಿಸುತ್ತಿದೆ ! ನನ್ನ ಚಿಂತೆಗೆ ಅದೇ ಕಾರಣ" ಎಂದನು. ಶ್ರೀವ್ಯಾಸತೀರ್ಥರು" ಅಮಾತ್ಯರೇ, ನಮ್ಮ ಅಲೌಕಿಕ ಕೃಷ್ಣನ ಅನುಗ್ರಹಕ್ಕೆ ಪಾತ್ರನಾದ, ಲೌಕಿಕ ಕೃಷ್ಣನ ಕ್ಷೇಮಾಭ್ಯುದಯದ ಚಿಂತೆ ನಮಗೂ ಇದೆ. ವಿಷಯವೇನೆಂದು ಸಂಕೋಚವಿಲ್ಲದೆ ತಿಳಿಸಿರಿ"ಎಂದಾಜ್ಞಾಪಿಸಿದರು.

ತಿಮ್ಮರಸು ನಿಟ್ಟುಸಿರುಬಿಟ್ಟು "ಕೃಷ್ಣನಮೇಲೆ ತಮಗಿರುವ ಅನುಗ್ರಹವನ್ನು ಬಲ್ಲೆನಾದ್ದರಿಂದಲೇ ಸನ್ನಿಧಿಗೆ ಬಂದಿರುವೆನು ಗುರುದೇವ ! ನಮ್ಮ ಸಾಮ್ರಾಟರು ಖಾಯಿಲೆಯಿಂದ ಹಾಸಿಗೆಹಿಡಿದು ಮಲಗಿರುವುದು ತಮಗೆ ವೇದ್ಯವೇ ಆಗಿದೆ, ಈಗ ನಾಲ್ಕಾರುದಿನಗಳಿಂದ ಮಹಾಪ್ರಭುಗಳು ನನ್ನಲ್ಲಿ ಏಕಾಂತವಾಗಿ "ಮುಂದೆ ಈ ಮಹಾಸಾಮ್ರಾಜ್ಯವನ್ನು ತಮ್ಮಕುಮಾರನೇ ಆಳುವಂತೆ ಮಾಡಬೇಕೆಂದು ಹೇಳುತ್ತಿದ್ದಾರೆ. ಇಂದು ನನ್ನನ್ನು ಕರೆಸಿಕೊಂಡು ತಿಮ್ಮರಸರೇ,ನೀವು ನನ್ನ ಆಪ್ತರು,ಹಿತೈಷಿಗಳು ನನ್ನ ನಂತರ ನನ್ನ ಪುತ್ರನೇ ಪಟ್ಟಕ್ಕೆ ಬರುವಂತೆ ಮಾಡುವುದಾಗಿ ನೀವು ಪ್ರಮಾಣ ಪೂರ್ವಕವಾಗಿ ವಚನಕೊಡಿರಿ. ಇದಕ್ಕೆ ನನ್ನ ಸಹೋದರರಾದ ಕೃಷ್ಣದೇವ-ಅಚ್ಯುತ ದೇವರು ಮಹಾಪರಾಕ್ರಮಿಗಳಾಗಿ ಪ್ರಬಲಿಸಿರುವುದರಿಂದ ಅಡ್ಡಿಯಾಗಿದೆ, ಅಚ್ಯುತನಕಿಂತ ನನಗೆ ಕೃಷ್ಣದೇವನದೇ ಭಯವಾಗಿದೆ. ಅವನಿರುವವರೆಗೆ ನನ್ನಾಸೆ ಫಲಿಸಲಾರದು! ಆದ್ದರಿಂದ ನನ್ನ ಮಗನ ಅಭ್ಯುದಯಕ್ಕಾಗಿ ಕೃಷ್ಣನ ಬಲಿದಾನವಾಗಲೇಬೇಕಾಗಿದೆ. ನೀವು ಈ ಕಂಟಕವನ್ನು ಪರಿಹರಿಸಿ ಅಥವಾ ಕೃಷ್ಣನ ಕಣ್ಣುಕಿತ್ತಿಸಿಬಿಟ್ಟು ನನ್ನ ಮಗನ ಹಾದಿ ಸುಗಮಮಾಡಿರಿ, ನನಗಾಗಿ ನೀವೀಕಾರ್ಯ ಮಾಡಲೇಬೇಕು, ಹಾಗೆಂದು ನೀವೀಗ ನನಗೆ ವಚನ ಕೊಡಬೇಕು"ಎಂದು ದುಂಬಾಲು ಬಿದ್ದರು. ಅವರ ಮಾತು ಕೇಳಿ ವಜ್ರಾಘಾತವಾದಂತಾಯಿತು. ಏನು ಹೇಳಲೂ ತೋಚದೆ, ಪ್ರಭು ! ಈ ವಿಚಾರವನ್ನು ಯೋಚಿಸಿ ಕಾರ್ಯಪ್ರವೃತ್ತನಾಗಲು ಒಂದೆರಡುದಿನ ಅವಕಾಶ ದಯಪಾಲಿಸಿದಲ್ಲಿ ವಿಚಾರಮಾಡಿ ಪ್ರಭುಗಳ ಆಕಾಂಕ್ಷೆ ಈಡೇರಿಸುವ ಮಾರ್ಗಹುಡುಕಿ, ನಂತರ ಸನ್ನಿಧಿಯಲ್ಲಿ ವಿಜ್ಞಾಪಿಸುತ್ತೇನೆ" ಎಂದು ಹೇಳಿಬಂದೆ. ನನ್ನ ಮನಸ್ಸು ತುಂಬಾ ಉದ್ವಿಗ್ನವಾಯಿತು. ಚಿಂತೆಯಿಂದ ಮುಂದಿನ ದಾರಿ ಕಾಣದಂತಾಗಿ ಸಾಮ್ರಾಜ್ಯ ಹಿತೈಷಿಗಳಾದ ತಮ್ಮ ಸನ್ನಿಧಿಗೆ ಬಂದಿದ್ದೇನೆ, ಈ ವಿಷವರ್ತುಲದಿಂದ ಪಾರಾಗಿ ಕನ್ನಡನಾಡಿನ ಹಿತಸಾಧಿಸಲು ತಾವೇ ನನಗೆ ಮಾರ್ಗ ತೋರಿ ನೆರವಾಗಬೇಕು" ಎಂದು ಕಣ್ಣೀರು ಸುರಿಸುತ್ತಾ ವಿಜ್ಞಾಪಿಸಿದನು.

ಅಮಾತ್ಯರನ್ನು ಸಮಾಧಾನಪಡಿಸುತ್ತಾ ಶ್ರೀಗಳವರು "ನಮ್ಮ ವೀರನರಸಿಂಹನಿಗೆ ಈ ಬುದ್ಧಿಯೇಕೆ ಬಂದಿತು ? ಹೂಂ, ವಿಧಿಯ ಆಟದ ಮುಂದೆ ದೇವತೆಗಳೇ ಪಾರಾಗಲಾರರೆಂದಮೇಲೆ ಪಾಪ, ಹುಲುಮಾನವರ ಪಾಡೇನು ? ಮಹತ್ವಾಕಾಂಕ್ಷೆ–ಸ್ವಾರ್ಥಗಳು ಹೃದಯದಲ್ಲಿ ತಾಂಡವಿಸಹತ್ತಿದಾಗ ಮಾನವ ದಾನವನಾಗುತ್ತಾನೆ ! ಸತ್ಯ–ಧರ್ಮಗಳನ್ನು ಗಾಳಿಗೆ ತೂರಿಬಿಡುತ್ತಾನೆ. ಇದಕ್ಕೆ ವೀರನರಸಿಂಹನೇ ಈಗ ದೃಷ್ಟಾಂತ ! ಇರಲಿ, ನೀವು ಚಿಂತಿಸಬೇಡಿ. ಎಲ್ಲವೂ ಶುಭವಾಗಿ ಪರಿಣಮಿಸುವುದೆಂದು ಶ್ರೀಹರಿ ನಮಗೆ ಪ್ರೇರಿಸುತ್ತಿದ್ದಾನೆ" ಎಂದು ಹೇಳಿದರು.

ಆಗ ತಿಮ್ಮರಸು "ಮಹಾಸ್ವಾಮಿ ನನ್ನ ಮುಂದಿನ ಕರ್ತವ್ಯವೇನು ? ಮಹಾಪ್ರಭುಗಳ ಸ್ವಾರ್ಥಕ್ಕಾಗಿ ಸದ್ಗುಣಪಂಡಿತನೂ, ಅಸಹಾಯಶೂರನೂ, ಗುರುವಿಧೇಯ ಚರಿತನೂ, ಸಾಮ್ರಾಜ್ಯದ ಆಶಾಕಿರಣನೂ, ಪ್ರಜಾವತ್ಸಲನೂ ಆದ ಕೃಷ್ಣದೇವನನ್ನು ಬಲಿಕೊಡುವುದೇ ? ಅಥವಾ ಪ್ರಭುಗಳನ್ನು ಎದುರಿಸಿ ಸಾಮ್ರಾಜ್ಯದ ಹಿತವನ್ನು ಸಾಧಿಸುವುದೇ ? ಗುರುವರ್ಯ ! ನನಗೆ ದಿಕ್ಕೇ ತೋಚದಂತಾಗಿದೆ. ನಿಮಗೆ ಶರಣುಬಂದಿದ್ದೇನೆ ಅನುಗ್ರಹಿಸಬೇಕು" ಎಂದು ಪ್ರಾರ್ಥಿಸಿದನು.

ವ್ಯಾಸತೀರ್ಥರು ಮಂದಹಾಸಬೀರಿ "ಭಯಪಡಬೇಡಿ, ಮಹಾಮಂತ್ರಿಗಳೇ, ನೀವು ಒಂದೆರಡು ದಿನ ಅವಧಿಬೇಡಿರುವುದು ಒಳಿತಾಯಿತು. ಈಗ ಮುಖ್ಯವಾಗಿ ಕೆಲದಿನ ಕೃಷ್ಣದೇವನು ಯಾರ ಕಣ್ಣಿಗೂ ಬೀಳದೆ ರಹಸ್ಯಸ್ಥಾನದಲ್ಲಿರಬೇಕು." ಎಂದೆನಲು ತಿಮ್ಮರಸು—"ಗುರುವರ್ಯ! ದಿನಕ್ಕೆ ನಾಲ್ಕಾರುಬಾರಿ ಸಚಿವಾಲಯಕ್ಕೆ ಬರುತ್ತಿದ್ದ ಕೃಷ್ಣದೇವರಾಯರು ಇಂದು ಬರದಿರುವುದು ಭಯಕ್ಕೆ ಕಾರಣವಾಗಿದೆ. ಅವರಿಗೆ ಅಪಾಯ ಸಂಭವಿಸಿರಬಹುದೇ ಎಂದು ನನ್ನ ಮನಸ್ಸು ಕಾತರಿಸುತ್ತಿದೆ" ಎಂದನು.

ವ್ಯಾಸಮುನಿಗಳು ಹಸನ್ಮುಖಿಗಳಾಗಿ "ಕೃಷ್ಣದೇವ ಸುರಕ್ಷಿತವಾಗಿದ್ದಾನೆ. ಅವನು ಪ್ರಾತಃಕಾಲ ವ್ಯಾಯಾಮಶಾಲೆಯಿಂದ ಇಲ್ಲಿಗೆ ಬಂದಿದ್ದನು. ಅವನಿಗೆ ಕೆಲದಿನ ಏಕಾಂತವಾಗಿರಬೇಕೆಂದು ಹೇಳಿ ನಮ್ಮ ಮಠದ ಪಂಡಿತನೊಡನೆ ನಿಮ್ಮ ಮನೆಗೆ ಕಳಿಸಿದ್ದೇವೆ" ಎಂದರು.

ಆಶ್ಚರ್ಯಾನಂದತುಂದಿಲನಾದ ತಿಮ್ಮರಸು "ನೀವು ಮಹಾಮಹಿಮರು ಗುರುದೇವ. ಕೃಷ್ಣದೇವರಾಯರಲ್ಲಿ ತಮಗೆಂಥ ವಾತ್ಸಲ್ಯ ! ಸಾಮ್ರಾಜ್ಯ ಹಿತಚಿಂತನೆಯಲ್ಲಿ ತಮಗೆಷ್ಟು ಕಾತುರ! ಧನ್ಯನಾದೆ ಸ್ವಾಮಿ. ನನ್ನ ಮುಂದಿನ ಕರ್ತವ್ಯವನ್ನು ಬೋಧಿಸಿ ಅನುಗ್ರಹಿಸಿರಿ" ಎಂದು ವಿನಂತಿಸಿದನು.

ವ್ಯಾಸರಾಜರು "ಅಮಾತ್ಯರೇ, "ಸತ್ಯಂ ಬ್ರೂಯಾತ್ ಪ್ರಿಯಂ ಬ್ರೂಯಾತ್ ನ ಬ್ರೂಯಾತ್ ಸತ್ಯಮಪ್ರಿಯಂ । ಪ್ರಿಯಂ ಚ ನಾನೃತಂ ಬ್ರೂಯಾತ್ ಏಷಧರ್ಮಸ್ಸನಾತನಃ" ಎಂದು ಪ್ರಮಾಣವಿದೆ. ಅಂದರೆ ಸತ್ಯವನ್ನೂ, ಪ್ರಿಯವಾದುದನ್ನೂ ಹೇಳಬೇಕು. ಅಪ್ರಿಯವಾದ ಸತ್ಯವನ್ನು ಹೇಳಬಾರದು. ಪ್ರಿಯವಾಗ

ಲೊದು ಸುಳ್ಳನ್ನೂ ಹೇಳಬಾರದು. ಇದೇ ಸನಾತನವಾದ ಧರ್ಮ, ಆದ್ದರಿಂದ ಪ್ರಭುವಿಗೆ ಸಮಾಧಾನವಾಗುವಂತೆಯೂ ಇರಬೇಕು. ಕನ್ನಡಸಾಮ್ರಾಜ್ಯದ ಹಿತ ರಕ್ಷಣೆಯೂ ಆಗಬೇಕು. ನೀವು ರಾಜತಂತ್ರ ಧುರೀಣರು! ನಿಮಗೆ ನಾವು ಹೆಚ್ಚೇನು ಹೇಳುವುದಿದೆ ? ನಿಮಗೆ ಭಗವಂತನೇ ಪ್ರೇರಣೆಮಾಡಿ ಎಲ್ಲವನ್ನೂ ಶುಭಾಂತ್ಯ ವಾಗುವಂತೆ ಮಾಡಿಸುವನು. ನೀವು ಕೆಲಕಾಲ ಕೃಷ್ಣದೇವ ರಹಸ್ಯವಾಗಿರುವಂತೆ ನೋಡಿಕೊಳ್ಳಿರಿ. ಮತ್ತು ಪ್ರಭುಗಳನ್ನು ಕಂಡು ಅವರಿಚ್ಛೆ ನೆರವೇರಿಸುವುದಾಗಿ ಭರವಸೆ ಕೊಡಿರಿ. ಉಳಿದ ವಿಚಾರ ಮುಂದೆ ಆಲೋಚಿಸೋಣ" ಎಂದು ಹೇಳಿದರು. ತಿಮ್ಮರಸು ಶ್ರೀಯುವರ ಉಪದೇಶಾರ್ಥವಾದವನಂತೆ ನಸುನಕ್ಕು ಗುರುಗಳಿಗೊಂದಿಸಿ ಮನೆಗೆ ತೆರಳಿದನು.

ಮಹಾಮಂತ್ರಿ ತಿಮ್ಮರಸು ಮರುದಿನ ವೀರನರಸಿಂಹ ಪ್ರಭುವನ್ನು ಸಂದರ್ಶಿಸಿ ಅವರ ಆಕಾಂಕ್ಷೆ ಪೂರ್ಣಮಾಡುವುದಾಗಿ ಭರವಸೆ ನೀಡಿದನು. ಮಹಾಪ್ರಭು ಸಂತಸ ಗೊಂಡ, ನಿಶ್ಚಿಂತನಾದ. ಒಂದೆರಡು ದಿನಗಳಾದಮೇಲೆ ತಿಮ್ಮರಸು ಏಕಾಂತವಾಗಿ ಪ್ರಭುಗಳಿಗೆ ಕೃಷ್ಣದೇವನನ್ನು ಸಂಹರಿಸಿರುವುದಾಗಿ ಹೇಳಿ ಸತ್ತಮೇಕೆಯ ಕಣ್ಣು ಗಳನ್ನು ಕೃಷ್ಣದೇವನ ಕಣ್ಣುಗಳೆಂದು ದೊರೆಗೆ ತೋರಿಸಿದನು. ವೀರನರಸಿಂಹ ಹರ್ಷಿತನಾಗಿ ತನ್ನ ಮಗನ ಭವಿಷ್ಯ-ಅಭ್ಯುದಯದ ಹೊಣೆಯನ್ನು ಮಹಾಮಂತ್ರಿಗೆ ವಹಿಸಿ ರಾಜಮುದ್ರಿಕೆಯನ್ನು ಅವನಿಗೆ ಕೊಟ್ಟು ತನ್ನ ನಿಧನಾನಂತರ ಮಗನಿಗೆ ಪಟ್ಟ ಕಟ್ಟಬೇಕೆಂದು ಆಜ್ಞಾಪಿಸಿ, ಗೌರವಿಸಿ ಕಳುಹಿಸಿದನು:

o o o o o o

ವೀರನರಸಿಂಹನು ಮರಣಾಸನ್ನನಾಗಿರುವುದೂ, ಅದೇ ಸಮಯದಲ್ಲಿ ಹತ್ತಾರು ದಿನಗಳಿಂದ ಕೃಷ್ಣದೇವರಾಯನು ಕಾಣೆಯಾಗಿರುವುದು, ಅರಮನೆಯಲ್ಲಿ ಗುಸುಗುಸು ಮಾತಾಡುತ್ತಾ ಎಲ್ಲರೂ ಚಿಂತಾಕ್ರಾಂತರಾಗಿರುವುದನ್ನು ಗಮನಿಸಿ ರಾಜಧಾನಿಯ ಪ್ರಜಾಜನರು ಅದರ ಮರ್ಮವರಿಯಲಾಗದೆ ಮನಬಂದಂತೆ ಮಾತಾಡಹತ್ತಿದರು. ಜನರು ಊಹಾಪೋಹ ಮಾಡಲಾರಂಭಿಸಿದರು. ಕೃಷ್ಣದೇವರಾಯನು ಇದ್ದಕ್ಕಿದ್ದಂತೆ ಕಣ್ಮರೆಯಾಗಿರುವುದರಲ್ಲಿ ಯಾವುದೋ ರಾಜಕೀಯ ತಂತ್ರವಿರಬೇಕೆಂದು ಜನ ಊಹಿಸಿದರು. ವೀರನರಸಿಂಹನು ಮಹಾಪರಾಕ್ರಮಿಯೂ, ಪ್ರಜಾವತ್ಸಲನೂ. ಗುಣಶೀಲನೂ ಜನಪ್ರಿಯನೂ ಆದ ಕೃಷ್ಣದೇವರಾಯನನ್ನು ಕೊಲ್ಲಿಸಿರುವನೆಂಬ ವಾರ್ತೆ ಎಲ್ಲೆಡೆ ಹರಡಿ ಜನರು ದುಃಖಿತರಾದರು. ಸಾಮ್ರಾಟನೇ ತನ್ನ ಪುತ್ರನು ರಾಜ್ಯವಾಳಬೇಕೆಂಬ ದುರಾಶೆಯಿಂದ ಈ ಕ್ರೂರಕರ್ಮವನ್ನು ಮಾಡಿಸಿದ್ದಾನೆಂದು ಜನರು ವೀರನರಸಿಂಹನನ್ನು ದೂಷಿಸಹತ್ತಿದರು. ಕೃಷ್ಣದೇವನ ಶೌರ್ಯ, ಪರಾಕ್ರಮ, ವಿದ್ಯಾವಿನಯ, ಸದಾಚಾರ, ಜನಪ್ರೇಮಾದಿಗಳನ್ನು ನೆನೆನೆನೆದು ಪ್ರಜರು ರಾಜಕೀಯ

ಅಧಿಕಾರಿಗಳು ಸಚಿವ–ಸಾಮಂತರೇ ಮೊದಲಾಗಿ ಸಕಲರೂ ವ್ಯಸನಾಕ್ರಾಂತರಾದರು.

ಕೆಲದಿನಗಳಾದಮೇಲೆ ವೀರನರಸಿಂಹಪ್ರಭುವು ಒಂದುದಿನ ಇಹಲೋಕ ವ್ಯಾಪಾರವನ್ನು ಮುಗಿಸಿ ಕೊನೆಯುಸಿರೆಳೆದನು. ಸಾಮ್ರಾಟನ ನಿಧನದಿಂದ ಸರ್ವರೂ ದುಃಖಭರಿತರಾದರು. ವೀರನರಸಿಂಹನ ಅಂತ್ಯಕ್ರಿಯೆ ಮತ್ತು ಕರ್ಮಾದಿಗಳೆಲ್ಲವೂ ಪೂರ್ಣವಾಯಿತು.

ವೀರನರಸಿಂಹನ ಅಂತ್ಯಕ್ರಿಯೆಗಳೆಲ್ಲವೂ ಸಾಂಗವಾದಮೇಲೆ ಅಮಾತ್ಯ ತಿಮ್ಮರಸು ರಾಜ್ಯಹಿತೈಷಿಗಳ ಸಭೆಯಲ್ಲಿ ಮುಂದಿನ ಸಾಮ್ರಾಟರನ್ನಾರಿಸುವ ವಿಚಾರ ವನ್ನು ಪ್ರಸ್ತಾಪಿಸಿದಾಗ ಸರ್ವರೂ, "ಈಗ ಕೃಷ್ಣದೇವರಾಯರಿದ್ದಲ್ಲಿ ಈ ವಿಚಾರ ವಿನಿಮಯಕ್ಕೆ ಅವಕಾಶವೇ ಇರುತ್ತಿರಲಿಲ್ಲ. ಈ ಮಹಾಸಾಮ್ರಾಜ್ಯಕ್ಕೆ ಅವರೇ ಅರ್ಹರಾಗಿದ್ದರು. ಅವರು ಕಣ್ಮರೆಯಾಗಿರುವುದರಿಂದ ಅವರು ಬದುಕಿರುವ ಬಗೆಗೆ ಸಂದೇಹವಾಗಿದೆ. ಅವರು ಇನ್ನಿಲ್ಲವೆಂದೇ ಎಲ್ಲರೂ ಆಡಿಕೊಳ್ಳುತ್ತಿದ್ದಾರೆ. ಮಹಾ ಮಾತ್ಯರೂ ಈ ಬಗ್ಗೆ ಏನೂ ಹೇಳದೇ ಮೌನವಹಿಸಿದ್ದರಿಂದ ಸಂದೇಹಕ್ಕೆ ಹೆಚ್ಚು ಕಾರಣವಾಗಿದೆ" ಮುಂತಾಗಿ ಮಾತನಾಡಿದರು.

ಆಗ ತಿಮ್ಮರಸು "ನೀವೆಲ್ಲರೂ ಕೃಷ್ಣದೇವರಾಯರೇ ಸಾರ್ವಭೌಮರಾಗ ಬೇಕೆಂದು ಆಶಿಸುತ್ತಿರುವಿರಿ, ಅವರು ಕಣ್ಮರೆಯಾಗಿರುವುದರಿಂದ ವಿವಿಧ ಊಹಾ ಪೋಹವೆದ್ದಿದೆ. ನಿಜ, . ಒಂದು ವೇಳೆ ಕಣ್ಮರೆಯಾಗಿರುವ ಕೃಷ್ಣದೇವರಾಯರು ಬಂದರೇನು ಮಾಡುವಿರಿ ?" ಎಂದು ಪ್ರಶ್ನಿಸಲು ಎಲ್ಲರೂ "ನಮಗಷ್ಟು ಭಾಗ್ಯ ವಿದೆಯೇ ? ಅವರು ಜೀವಂತರಾಗಿರುವರೇ ? ಅಮಾತ್ಯರೇ, ನಿಮ್ಮ ಮಾತು ಸತ್ಯ ವಾಗಲಿ ! ಕೃಷ್ಣದೇವರಾಯರು ಬದುಕಿದ್ದರೆ ..ಅವರು ನಮ್ಮ ದೃಷ್ಟಿಗೆ ಗೋಚರಿ ಸಿದರೆ ಅವರನ್ನೇ ಈ ಮಹಾಸಾಮ್ರಾಜ್ಯದ ಸಾಮ್ರಾಟರನ್ನಾಗಿ ಮಾಡುತ್ತೇವೆ" ಮುಂತಾಗಿ ಸಂತೋಷದಿಂದ ಹೇಳಿದರು.

ಆಗ ತಿಮ್ಮರಸು "ಸಂತೋಷ. ನಾನು ಕೃಷ್ಣದೇವರಾಯರನ್ನು ಹುಡುಕಿಸಿ ಕರೆತರಲು ಎಲ್ಲಾ ಪ್ರಯತ್ನ ಮಾಡುತ್ತೇನೆ. ಮತ್ತೆ ಇನ್ನು ಮೂರುದಿನದ ಮೇಲೆ ಸಭೆಸೇರೋಣ" ಎಂದು ಹೇಳಲು ಅಂದಿನ ಸಭೆಯು ಮುಕ್ತಾಯವಾಯಿತು.

o o o o o

ರಾಜಮಂದಿರದ ಮಂತ್ರಾಗಾರದಲ್ಲಿ ಆಪ್ತಾಲೋಚನೆ ನಡೆದಿದೆ. ದಿವಂಗತ ವೀರನರಸಿಂಹಪ್ರಭುಗಳ ನಿಧನದಿಂದ ಬರಿದಾಗಿರುವ ಸಿಂಹಾಸನದಲ್ಲಿ ಮುಂಡಿಸಿ ಸಾಮ್ರಾಜ್ಯವನ್ನಾಳುವಮಹನೀಯನನ್ನು ನಿರ್ಧರಿಸಲು ರಾಜಗುರುಗಳಾದಶ್ರೀವ್ಯಾಸ ತೀರ್ಥರ ಅಧ್ಯಕ್ಷತೆಯಲ್ಲಿ ಸಾಮ್ರಾಜ್ಯದ ಮಹಾಮಂತ್ರಿಗಳು, ಸಚಿವಮಂಡಲಿ, ಸೇನಾ ನಾಯಕರು, ಮಹಾಮಂಡನಾಯಕರು, ಧನಾಯಕರು, ರಾಜಸಭೆಯ ಪ್ರಮುಖವ್ಯಕ್ತಿ

ಗಳು, ಸ್ವಾಮಿನಿಷ್ಠ ಸೇವಕರು, ನಗರದ ಪ್ರಮುಖಪೌರರು-ರಾಜಬಂಧುಗಳು, ಹೀಗೆ ಎಲ್ಲರೂ ಸೇರಿದ್ದಾರೆ. ದಿವಂಗತ ವೀರನರಸಿಂಹರಾಯರ ಸಹೋದರರಾದ ಅಚ್ಯುತ ದೇವರಾಯ, ರಂಗರಾಯ ಮತ್ತು ಅವರ ಹಿತೈಷಿ ತಿಮ್ಮರಸರ ತಮ್ಮ ಗುಂಡುರಾಜರೂ ಉಪಸ್ಥಿತರಾಗಿದ್ದಾರೆ.

ಆಗ ಎಲ್ಲರ ಪರವಾಗಿ ಮೇಲೆದ್ದು ನಿಂತು ಗುರುಗಳಿಗೊಂದಿಸಿ, ಮಹಾಮಾತ್ಯ ತಿಮ್ಮರಸರು ಹೇಳಲಾರಂಭಿಸಿದರು-"ಕನ್ನಡಸಾಮ್ರಾಜ್ಯದ ಪೂಜ್ಯ ರಾಜಗುರುಗಳೇ, ಸಾಮ್ರಾಜ್ಯ ಹಿತಚಿಂತಕರೇ, ಇಂದು ನಾಡಿನ ಭವಿಷ್ಯವನ್ನು ನಿರ್ಧರಿಸಲು ನಾವಿಲ್ಲಿ ಸೇರಿದ್ದೇವೆ, ಆಳಿದ ಮಹಾಪ್ರಭುಗಳ ನಿಧನದಿಂದಾಗಿ ಸಾಮ್ರಾಜ್ಯ ಸಿಂಹಾಸನ ಬರಿದಾಗಿದೆ. ನಾಡಿನ ಒಳ-ಹೊರ ಶತ್ರುಗಳು, ಆಜೀವಶತ್ರುಗಳಾದ ಬಹಮನಿ ಸುಲ್ತಾನರಿಗೆ ತಮ್ಮ ದ್ವೇಷ ಸಾಧಿಸಿ ಸಾಮ್ರಾಜ್ಯಕ್ಕೆ ಹಾನಿಯನ್ನುಂಟುಮಾಡಲು ಸಂದರ್ಭ ದೊರಕಿದಂತಾಗಿದೆ, ಹಾಗಾಗಲು ಅವಕಾಶವಾಗದಂತೆ ನಾವು ಈ ಮಹಾಸಾಮ್ರಾಜ್ಯವನ್ನಾಳಲು ಸಮರ್ಥರಾದವರನ್ನು ನಿರ್ಧರಿಸಿ, ಅವರಿಗೆ ಪಟ್ಟಕಟ್ಟಿ, ಸಾಮ್ರಾಜ್ಯದ ಹಿತರಕ್ಷಣೆ ಮಾಡುವ ದೊಡ್ಡಹೊಣೆ ನಮ್ಮೆಲ್ಲರ ಮೇಲೆ ಬಿದ್ದಿದೆ. ಈ ಮಹಾತ್ಕಾರ್ಯದಲ್ಲಿ ಪೂಜ್ಯರಾದ ಶ್ರೀವ್ಯಾಸತೀರ್ಥರು ನಮಗೆ ಮಾರ್ಗದರ್ಶನ ಮಾಡಬೇಕೆಂದು ಎಲ್ಲರ ಪರವಾಗಿ ಪ್ರಾರ್ಥಿಸುತ್ತೇನೆ" ಎಂದು ವಿಜ್ಞಾಪಿಸಿ ಕುಳಿತರು. ಸಭೆಯು ನಿಶಬ್ದವಾಯಿತು.

ಆಗ ಧೀರ ಗಂಭೀರಧ್ವನಿಯಿಂದ ಶ್ರೀ ವ್ಯಾಸರಾಜ ಗುರುಗಳು "ಕನ್ನಡ ಸಾಮ್ರಾಜ್ಯದ ಆಧಾರಸ್ತಂಭರಾದ ವೀರಪುರುಷರೇ, ವೀರನರಸಿಂಹ ಪ್ರಭುಗಳನ್ನು ಕಳೆದುಕೊಂಡು ನಾವು ಅನಾಥರಾಗಿದ್ದೇವೆ,ಅನಾಥರಾಗಿರುವ ಸಾಮ್ರಾಜ್ಯಕ್ಕೆ ಈಗ ಸಮರ್ಥನಾದ ನಾಥ ಬೇಕಾಗಿದ್ದಾನೆ, ಇದು ಯಾರ ವೈಯಕ್ತಿಕ ಪ್ರಶ್ನೆಯಲ್ಲ. ಸಮಗ್ರ ಸಾಮ್ರಾಜ್ಯದ ಭವಿಷ್ಯದ ಪ್ರಶ್ನೆಯಾಗಿದೆ ! ನಾವಿಂದು ಸಾಮ್ರಾಜ್ಯದ ಹಿತಕ್ಕಾಗಿ ಪ್ರಾರ್ಥಿಸುತ್ತಾ ಧ್ಯಾನಮಗ್ನರಾಗಿರುವಾಗ ನಮ್ಮ ಹೃದಯ ಪಟಲದಲ್ಲಿ ಭಗವಂತ ತೋರಿಸಿದ ಕನ್ನಡನಾಡಿನ ಭವ್ಯ ಭವಿಷ್ಯದ ಸುಂದರ ದೃಶ್ಯಗಳನ್ನು ಕಂಡು ಪುಳಕಿತರಾದೆವು. ಬಹಿರ್ಮುಖರಾಗಿ ಅದನ್ನೇ ನೆನೆ ನೆನೆದು ಹಿಗ್ಗುತ್ತಿರುವಾಗ ಗುಂಡರಾಜರು ಈ ಸಭೆಗೆ ಬರಬೇಕೆಂದು ಆಹ್ವಾನಿಸಿ ಕರೆತಂದರು. ನಾವು ಸನ್ಯಾಸಿಗಳು, ನಾವು ಯಾರೊಬ್ಬರ ಪಕ್ಷಪಾತಿಗಳೂ ಅಲ್ಲ. ನಾವು ಸರ್ವವನ್ನು ತ್ಯಜಿಸಿದರೂ ಪರಮಾತ್ಮನ ಆಜ್ಞೆಯಂತೆ ಸರ್ವಭೂತರಹಿತೇರತರಾಗಿ ಸಮಸ್ತಲೋಕಕಲ್ಯಾಣ,ಕನ್ನಡ ಸಾಮ್ರಾಜ್ಯದ ಹಿತಸಾಧನೆ ಮಾಡುವುದು ನಮ್ಮ ಕರ್ತವ್ಯವಾಗಿದೆ. ಅಂತೆಯೇ ನಾವಿಲ್ಲಿಗೆ ಬಂದಿದ್ದೇವೆ. ಶ್ರೀಹರಿಯ ಸಂಕಲ್ಪದಂತೆ ನಾವಿಂದು ಧ್ಯಾನದಶೆಯಲ್ಲಿ ಕಂಡ ಸಾಮ್ರಾಜ್ಯದ ಭವಿಷ್ಯದ ಭವ್ಯಚಿತ್ರವನ್ನು ನಿಮಗೆ ಪ್ರಾಮಾಣಿಕವಾಗಿ ನಿರೂಪಿಸುತ್ತೇವೆ.

ಅದು ಇಂದು ನಿಮ್ಮ ಮುಂದಿರುವ ಪ್ರಶ್ನೆಗೆ ದಾರಿದೀಪವಾಗಬಹುದೆಂದು ನಾವು ಭಾವಿಸುತ್ತೇವೆ" ಎಂದರು.

ಸಭೆಯಲ್ಲಿ ವಿದ್ಯುತ್ಸಂಚಾರವಾದಂತಾಯಿತು. ಎಲ್ಲರೂ ವಿಸ್ಮಯ-ಆಶ್ಚರ್ಯ-ಆನಂದಮಗ್ನರಾಗಿ ಗುರುಗಳು ಹೇಳುವುದನ್ನು ಕೇಳಲು ಕುತೂಹಲಾವಿಷ್ಟರಾಗಿ ನಿಶ್ಶಬ್ದರಾಗಿ ಕುಳಿತರು. ಶ್ರೀವ್ಯಾಸರಾಜರು ತಮ್ಮ ಮಾತನ್ನು ಮುಂದುವರೆಸಿ ಹೀಗೆ ಹೇಳತೊಡಗಿದರು-"ನಾವು ಹೇಳುವುದನ್ನು ಸಾವಧಾನವಾಗಿ ಆಲಿಸಿರಿ, ಧ್ಯಾನಾಸಕ್ತರಾಗಿದ್ದ ನಾವು ಇಂದು ಅತ್ಯುನ್ನತಶಿಖರವನ್ನೇರಿದ್ದ ಕನ್ನಡಸಾಮ್ರಾಜ್ಯದ ಸುವರ್ಣಯುಗವನ್ನೇ ಕಂಡೆವು ! ಅನೇಕ ದೇವಾಲಯಗಳು, ಸಿರಿಸಂಪತ್ತಿನಿಂದ ಮೆರೆಯುತ್ತಿದ್ದ ಪ್ರಜಾಜನರು, ಐಶ್ವರ್ಯಪೂರ್ಣವಾದ ರಾಜಭಂಡಾರ, ವಿವಿಧ ಶಿಲ್ಪಕಲೆಗಳನ್ನು ಹೊರಸೂಸುವ ಸುಂದರ ಭವ್ಯಮಂದಿರಗಳು, ಜಗತ್ತನ್ನೇ ಜಯಿಸಲು ಶಕ್ತವಾದ ಗಜ-ತುರಗ-ರಥ-ಸೈನಿಕರಿಂದಕೂಡಿ ಮಹಾಸಮುದ್ರದಂತಿರುವ ಸೈನ್ಯಗಳನ್ನು ಕಂಡೆವು. ಕೈಬಿಟ್ಟುಹೋಗಿದ್ದ ಕನ್ನಡನಾಡಿನ ಅನೇಕಭಾಗಗಳು ಮತ್ತೆ ಸಾಮ್ರಾಜ್ಯಕ್ಕೆ ಸೇರಿ, ಅತ್ಯಂತವಿಸ್ತಾರವಾದ ಸುಖೀಸಾಮ್ರಾಜ್ಯವನ್ನು ಕಂಡೆವು. ಅನೇಕ ವಿದ್ಯಾಕೇಂದ್ರಗಳು ಸಹಸ್ರಸಂಖ್ಯಾತ ವಿದ್ಯಾರ್ಥಿಗಳಿಂದಕೂಡಿ ಸಾಕ್ಷಾತ್ ಸರಸ್ವತಿಯ ಆಸ್ಥಾನದಂತೆ ಮೆರೆಯುತ್ತಿದ್ದ ವಿಶ್ವವಿದ್ಯಾನಿಲಯವನ್ನು ಕಂಡೆವು, ಗುಡಿ ಗುಂಡಾರ ಮಠಗಳಲ್ಲಿ ಭಗವಂತನಸೇವೆ, ವೇದಘೋಷ, ಭಜನೆಗಳಿಂದ ಕಂಗೊಳಿಸುತ್ತಿದ್ದ ರಾಜಧಾನಿಯನ್ನು ಕಂಡೆವು, ಸಲಕವಿದ್ಯೆಗಳು, ಕಲೆಗಳು, ಸಾಹಿತ್ಯ ಕನ್ನಡಭಾಷೆ-ಅಪೂರ್ವವಾಙ್ಮಯವು ಅತ್ಯುನ್ನತಮಟ್ಟಕ್ಕೇರಿದ್ದನ್ನು ಕಂಡೆವು. ಪಂಡಿತರು, ಸಾಹಿತಿಗಳು, ಕವಿಗಳು ಸಂಗೀತ, ಶಿಲ್ಪ ವಿವಿಧ ಕಲೆಗಳಲ್ಲಿ ಪರಿಣತರಾದವರು ರಾಜಮನ್ನಣೆಗೆ ಪಾತ್ರರಾದದ್ದನ್ನು ಕಂಡೆವು. ಅಖಂಡಸಾಮ್ರಾಜ್ಯದ ಪ್ರಜಾಜನರು ಧರ್ಮಿಷ್ಠರಾಗಿ ಸುಖಸಂತೋಷದಿಂದ ನಲಿಯುತ್ತಾ ಶಾಂತಿಸಮಾಧಾನದಿಂದ ಬಾಳುವುದನ್ನು ಕಂಡೆವು. ದೇಶವಿದೇಶ-ದ್ವೀಪಾಂತರದ ರಾಜಮಹಾರಾಜರು, ಭಾರತದೇಶದ ಇನ್ನಿತರ ರಾಜಾಧಿರಾಜರು ಕನ್ನಡಸಾಮ್ರಾಜ್ಯಕ್ಕೆ ವಿಧೇಯರಾಗಿ. ಮಿತ್ರರಾಗಿ ವರ್ತಿಸುವ ಅಪೂರ್ವ ದೃಶ್ಯವನ್ನು ನೋಡಿದೆವು. ಒಟ್ಟಿನಲ್ಲಿ ಕನ್ನಡ ಸಾಮ್ರಾಜ್ಯದ ಸುವರ್ಣಯುಗವನ್ನೇ ಕಂಡು ರೋಮಾಂಚಿತರಾದೆವು !

ಇಂತು ಸಾಮ್ರಾಜ್ಯದ ಅವರ್ಣನೀಯ,ಅಪೂರ್ವ ಅಭ್ಯುದಯಕ್ಕೆ ಕಾರಣ ಪುರುಷ ನಾರೆಂದು ನಾವು ಯೋಚಿಸುತ್ತಿರುವಾಗ "ಕೃಷ್ಣ, ಕೃಷ್ಣ" ಎಂಬ, ಮಧುರ ಧ್ವನಿ ಕೇಳಿಸಿತು! ಆದೇಕ್ಷಣ ಸರ್ವಾಭರಣಭೂಷಿತನಾಗಿ ವಿಲಕ್ಷಣತೇಜಸ್ಸಿನಿಂದ ರತ್ನಸಿಂಹಾಸನದಲ್ಲಿ ಮಂಡಿಸಿ, ಸಚಿವ-ಸಾಮಂತ-ಸೇನಾನಿ-ಮಿತ್ರರಾಜರು-ಪೌರಜಾನಪದರು ಪಂಡಿತ-ಕವಿ-ಸಾಹಿತಿ-ಕಲೆಗಾರರಿಂದ ಓಲೈಸಿಕೊಳ್ಳುತ್ತಾ ಕುಳಿತಿರುವ ಕೃಷ್ಣದೇವ ರಾಯನನ್ನು ಕಂಡು ಪುಳಕಿತಗಾತ್ರರಾಗಿ ಪರಮಾನಂದತುಂದಿಲರಾದೆವು! ಅನಂತರ

ಎಲ್ಲವೂ ಮರೆಯಾಗಿ ಬಹಿರ್ಮುಖರಾದೆವು. ಕನ್ನಡನಾಡಿನ ವೀರಪುತ್ರರೇ ! ಇದು ಭಗವಂತನೇ ನಮಗೆ ದರ್ಶನಮಾಡಿಸಿದ ಕನ್ನಡಸಾಮ್ರಾಜ್ಯದ ಭವ್ಯ ಭವಿಷ್ಯಚಿತ್ರ ವೆಂದು ಆಗಲೇ ನಾವು ನಿಶ್ಚಯಿಸಿದೆವು. ನಮ್ಮ ಅನುಭವವನ್ನು ನಿಮಗೆ ತಿಳಿಸಿದ್ದೇವೆ. ಉಳಿದಿರುವುದು ಏಕಮತಿಕರಾಗಿ ನೀವೆಲ್ಲರೂ ನಿಮ್ಮ ಭಾವೀ ಸಾಮ್ರಾಟನಾರೆಂದು ನಿರ್ಣಯಿಸುವುದು ಮಾತ್ರ !" ಎಂದು ಅಪ್ಪಣೆಕೊಡಿಸಿದರು.

ಅದುವರೆಗೆ ಚಿತ್ರಸ್ಥಪ್ರತಿಮೆಗಳಂತೆ ಕುಳಿತಿದ್ದ ಹರ್ಷಪುಲಕಿತಗಾತ್ರರಾದ ಸಭಾ ಸದರ ಬಾಯಿಂದ "ಪೂಜ್ಯ ಶ್ರೀವ್ಯಾಸತೀರ್ಥರಿಗೆ ಜಯವಾಗಲಿ" ಎಂಬ ಉದ್ಗಾರ ಹೊರಹೊಮ್ಮಿತು ! ನಂತರ ಕೆಲವರು ಮೇಲೆದ್ದು "ಕೃಷ್ಣದೇವರಾಯರು ಕಣ್ಮರೆ ಯಾಗಿದ್ದರಿಂದ ಅವರು ಜೀವಿಸಿರುವರೇ ಎಂದು ನಾವು ಕಳವಳ ಪಟ್ಟಾಗ ಮಹಾ ಮಾತ್ಯರು ಕೃಷ್ಣದೇವರಾಯರನ್ನು ಹುಡುಕಿಸಿ ಕರೆತರುವುದಾಗಿ ಹೇಳಿದ್ದರು" ಎನ್ನುತ್ತಿರುವಂತೆ ಕೃಷ್ಣದೇವ ಸಭೆಯನ್ನು ಪ್ರವೇಶಿಸಿದ! ಅವನನ್ನು ಕಂಡಕೂಡಲೇ ಆಶ್ಚರ್ಯ ಆನಂದಭರಿತರಾದ ಸಮಸ್ತಸಭಾಸದರು "ಕೃಷ್ಣದೇವರಾಯರಿಗೆ ಜಯ ವಾಗಲಿ. ಶ್ರೀಗುರುಪಾದರು ಅಪ್ಪಣೆಕೊಡಿಸಿದಂತೆ ಕೃಷ್ಣದೇವರಾಯರೇ ನಮ್ಮ ಸಾಮ್ರಾಟರಾಗಬೇಕು-ಇದೇ ನಮ್ಮೆಲ್ಲರ ಏಕಾಭಿಪ್ರಾಯ"ಎಂದುಹೇಳಿದರು ಅನಂತರ ಒಬ್ಬೊಬ್ಬರಾಗಿ ಮೇಲೆದ್ದು "ನಮ್ಮ ಮನಸ್ಸಿನಲ್ಲಿರುವುದನ್ನೇ ಭಗವಂತನು ಗುರುಗಳ ದ್ವಾರಾ ನಮಗೆ ದೃಢಪಡಿಸಲು ಈ ಕಾರ್ಯಮಾಡಿದ್ದಾನೆ ! ಶ್ರೀಕೃಷ್ಣದೇವರಾಯರೇ ನಮಗೆ ಸಾಮ್ರಾಟರಾಗಬೇಕು." ಎಂದು ಹರ್ಷಧ್ವನಿಗೈಸಿದರು.

ಶ್ರೀವ್ಯಾಸರಾಜರು ನಗೆಮೊಗದಿಂದ "ನೀವೆಲ್ಲರೂ ಚತುರಮತಿಗಳು. ಸಾಮ್ರಾಜ್ಯದ ಹಿತೈಷಿಗಳು. ಸಾವಧಾನವಾಗಿ ಯೋಚಿಸಿ ಒಂದು ನಿರ್ಣಯಕ್ಕೆ ಬರಬೇಕು. ಕೇವಲ ನಾವು ಹೇಳಿದೆವೆಂದು ಒಪ್ಪಿದಂತಾಗಬಾರದಷ್ಟೆ ? ಎನಲು ಸಭಿಕರು ಏಕಕಂಠದಿಂದ "ಕೃಷ್ಣದೇವರಾಯರೇ ನಮ್ಮ ಸಾಮ್ರಾಟರು. ಸಾಮ್ರಾಟ ಕೃಷ್ಣದೇವರಾಯರಿಗೆ ಜಯವಾಗಲಿ" ಎಂದು ಜಯಘೋಷಮಾಡಿದರು.

ಕೃಷ್ಣದೇವರಾಯ-ತಿಮ್ಮರಸರ ಕಣ್ಣಿನಲ್ಲಿ ಧಾರಾಕಾರವಾಗಿ ಆನಂದಬಾಷ್ಪಹರಿ ಯಿತು. ತಿಮ್ಮರಸು ಮೇಲೆದ್ದು ಗದ್ಗದಕಂಠದಿಂದ "ಮುಂದಿನದಾರಿಗಾಣದೆ ಪರಿತಪಿ ಸುತ್ತಿದ್ದ ನಮಗೆ ಕರ್ತವ್ಯವನ್ನು ಬೋಧಿಸಿ ಅನುಗ್ರಹಿಸಿದ ಗುರುವರ್ಯರಿಗೆ ನಾವು ಚಿರ ಋಣಿಯಾಗಿದ್ದೇವೆ. ಇದೇ ಭಗವತ್ಸಂಕಲ್ಪ, ಸಾಮ್ರಾಜ್ಯಕ್ಕೆ ಹಿತಕರರೆಂಬುದು ಗುರು ಗಳ ನಿರೂಪಣೆಯಿಂದ ಸ್ಪಷ್ಟವಾಗಿದೆ. ನಾನು ಸಮಸ್ತಸಭಿಕರ ಪರವಾಗಿ ಶ್ರೀಯವರಿಗೆ ನಮ್ಮ ಕೃತಜ್ಞತಾಪೂರ್ವಕ ಪ್ರಣಾಮಗಳನ್ನು ಅರ್ಪಿಸುತ್ತೇನೆ"ಎಂದುಹೇಳಿನಮಿಸಿದ.

ಆನಂದಪರವಶನಾಗಿ ಕಣ್ಣೀರುಸುರಿಸುತ್ತಾ ಕುಳಿತಿದ್ದ ಕೃಷ್ಣದೇವರಾಯ ದಿಗ್ಗನೆ ಮೇಲೆದ್ದು ವ್ಯಾಸರಾಜರ ಪಾದಗಳಮೇಲೆ ಶಿರವಿರಿಸಿ "ಪಾಮರನಾದ ನನ್ನ ಮೇಲೆ ತಮ್ಮ ಅನುಗ್ರಹ ಅಪಾರವಾಯಿತು. ಗುರುದೇವ! ನಾನು ಈ ಮಹಾಸಾಮ್ರಾಜ್ಯ

ವನ್ನಾಳಲು ಅರ್ಹನೇ? ತಾವು ಕಂಡ ಸುವರ್ಣಯುಗವನ್ನು ನಿರ್ಮಿಸುವ ಪುಣ್ಯ ನನಗಿದೆಯೆ?" ಎಂದು ಬಿನ್ನವಿಸಲು ಗುರುರಾಜರು ವಾತ್ಸಲ್ಯದಿಂದ ಅವನಶಿರದಮೇಲೆ ತಮ್ಮ ಅಮೃತಹಸ್ತವಿರಿಸಿ "ಕೃಷ್ಣ ! ನಿನ್ನ ಯೋಗ್ಯತೆಯನ್ನು ನೀನರಿಯೆ ! ಈ ಕನ್ನಡಸಾಮ್ರಾಜ್ಯದ ಭಾಗ್ಯರವಿ ನೀನು ! ಈ ಮಹಾಸಾಮ್ರಾಜ್ಯವನ್ನಾಳಲು ಬೇರಾರು ಸಮರ್ಥರಾದರು? ಇದು ಭಗವಂತನ ಸಂಕಲ್ಪ, ಆಜ್ಞೆಯೆಂದು ಭಾವಿಸಿ ಕನ್ನಡರಮಾರಮಣನಾಗಿ ಕನ್ನಡನಾಡಿನ ಸುವರ್ಣಯುಗದ ಕಾರಣಪುರುಷನೆನಿಸಿ ಕೀರ್ತಿಶಾಲಿಯಾಗಿ ಬಾಳು !" ಎಂದು ಆಶೀರ್ವದಿಸಿದರು.

ಕೃಷ್ಣದೇವರಾಯ ಕರಮುಗಿದು "ಮಹಾಸ್ವಾಮಿ, ತಾವು ಸರ್ವದಾ ನನಗೆ ಮಾರ್ಗದರ್ಶಕರಾಗಿ, ಉಪದೇಶಿಸುತ್ತಾ ಕಾಪಾಡುವುದಾಗಿ ಅಭಯವಿತ್ತಲ್ಲಿ ಈ ಎಲ್ಲ ಸಾಮ್ರಾಜ್ಯನಿಷ್ಠರೂ ಇದೇರೀತಿ ಸಹಕರಿಸಿ ಬೆಂಬಲನೀಡುವ ಭರವಸೆ ಕೊಟ್ಟಲ್ಲಿ ತಮ್ಮ ಆಜ್ಞೆಯಂತೆ ವರ್ತಿಸುತ್ತೇನೆ "ಎಂದೆನಲು ಶ್ರೀವ್ಯಾಸಭಗವಾನರು ದರಹಸಿತ ವದನರಾಗಿ "ಕೃಷ್ಣ, ಅಲ್ಲ, ಭಾವಿ-ಸಾಮ್ರಾಟರೇ! ನಮ್ಮ ಆಶೀರ್ವಾದ ಉಪದೇಶ ಗಳು ಸರ್ವದಾ ನಿನಗಿದೆ" ಎಂದರು. ಕೃಷ್ಣದೇವರಾಯ "ಗುರುದೇವ! ನಾನು ಈಗಲೂ ಮುಂದೂ ನಿಮ್ಮ ಪ್ರೀತಿಯ ಕೃಷ್ಣನೇ!ತಾವು ಹಾಗೆ ಕರೆಯುವುದೇ ನನಗೆ ಶ್ರೇಯಸ್ಕರ ಮತ್ತು ತೃಪ್ತಿ" ಎಂದರುಹಿಪಸು.

ಅನಂತರ ಎಲ್ಲಸಭಾಸದಸ್ಯರು ಎದ್ದು ನಿಂತು ಖಡ್ಗಗಳನ್ನು ಹಿರಿದು ತಲೆಬಾಗಿ "ಮಹಾಪ್ರಭು! ಪೂಜ್ಯರಾಜಗುರುಗಳ ಸಮಕ್ಷ ವಿಜ್ಞಾಪಿಸುತ್ತಿದ್ದೇವೆ. ನಮ್ಮಜೀವನ ವನ್ನು ಸಾಮ್ರಾಜ್ಯದ ಮತ್ತು ತಮ್ಮ ಸೇವೆಗಾಗಿ ಮುಡುಪಾಗಿಡುತ್ತೇವೆ!ಸದಾ ನಾವು ತಮಗೆ ಬೆಂಬಲಿಗರಾಗಿ ತಮ್ಮ ಆಜ್ಞೆಗೆ ಬದ್ಧರಾಗಿ ನಡೆಯುತ್ತೇವೆ "ಎಂದು ಪ್ರತಿಜ್ಞಾಬದ್ಧರಾದರು.

ಶ್ರೀಗಳವರು "ಮಹಾಮಂತ್ರಿಗಳೇ, ಒಂದುವಿಧದಿಂದ ಎಲ್ಲವೂ ತೀರ್ಮಾನ ವಾದಂತಾಯಿತಲ್ಲವೇ? ಈಗ ಕೃಷ್ಣದೇವರಾಯರಿಗೆ ಮೊದಲು ವಿವಾಹವಾಗಬೇಕು. ಆನಂತರವೇ ಪಟ್ಟಾಭಿಷೇಕ. ಇದಕ್ಕೆ ಮೊದಲು ವ್ಯವಸ್ಥೆಮಾಡಿರಿ" ಎಂದು ಆಜ್ಞಾಪಿಸಲು, ತಿಮ್ಮರಸು "ಮಹಾಸ್ವಾಮಿ, ನಾನೀಗಾಗಲೇ ಕನ್ಯೆಯನ್ನು ನಿಶ್ಚಯಿಸಿದ್ದೇನೆ. ಶ್ರೀರಂಗಪಟ್ಟಣದ ಅರಸರಾದ ವೀರರಾಜಯ್ಯನವರ ಪುತ್ರಿ ರಾಜಕುಮಾರಿ ಸೌ॥ ತಿರುಮಲಾಂಬಾದೇವಿಯವರು ಸುವರ್ಣಲಕ್ಷಣಸಂಪನ್ನರಾಗಿದ್ದು ಸಾಮ್ರಾಜ್ಞಿಪದಕ್ಕೆ ಅರ್ಹರಾಗಿದ್ದಾರೆ. ಪ್ರಭುಗಳು ಒಪ್ಪಿದಲ್ಲಿ ಕೆಲಸಸುಲಭ" ಎಂದರು.

ವ್ಯಾಸಮುನಿಗಳು ನಸುನಕ್ಕು "ಏನಪ್ಪಾ ಕೃಷ್ಣ ! ನಿನ್ನ ಅಭಿಪ್ರಾಯವೇನು?" ಎಂದು ಪ್ರಶ್ನಿಸಲು ಕೃಷ್ಣದೇರಾಯ ನಾಚಿ ನಂತರ ವಿನೀತನಾಗಿ "ಗುರುವರ್ಯ, ನಾನೂ ಒಮ್ಮೆ ಆ ಕನ್ಯೆಯನ್ನು ಕಂಡಿದ್ದೇನೆ! ಗುರುಗಳು ಆಜ್ಞಾಪಿಸಿದರೆ ನನ್ನ ಅಭ್ಯಂತರ ವಿಲ್ಲ" ಎಂದು ವಿಜ್ಞಾಪಿಸಿದನು.

ವ್ಯಾಸರಾಜರು "ಇನ್ನೇನು ತಿಮ್ಮರಸರೇ! ಮುಂದಿನಕಾರ್ಯದಲ್ಲಿ ತೊಡಗಿರಿ. ಶುಭಸ್ಯ ಶೀಘ್ರಂ! ಮಂಗಳಮಹೋತ್ಸವವನ್ನು ಜರುಗಿಸಿಬಿಡಿ" ಎಂದೆನಲು ತಿಮ್ಮರಸು ತಮ್ಮ ಅಪ್ಪಣೆಯಂತಾಗಲಿ. ವಿವಾಹಕ್ಕೂ, ಪಟ್ಟಾಭಿಷೇಕಕ್ಕೂ ಮುಹೂರ್ತವನ್ನು ನಿಶ್ಚಯಮಾಡಿಸಿ ಸಕಲ ವ್ಯವಸ್ಥೆಯನ್ನು ಮಾಡುತ್ತೇನೆ" ಎಂದು ವಿಜ್ಞಾಪಿಸಿದ ಮೇಲೆ ಅಂದಿನ ಸಭೆಯು ಹರ್ಷಧ್ವನಿಯೊಡನೆ ಮುಕ್ತಾಯವಾಯಿತು.

o o o o o

ಕನ್ನಡನಾಡಿಗೆ ಕೃಷ್ಣದೇವರಾಯ ಸಾರ್ವಭೌಮನಾಗಲಿರುವುದನ್ನು ಕೇಳಿ ಆ ಮಹೋತ್ಸವವನ್ನು ಕಂಡಾನಂದಿಸಲು ಸಾಮ್ರಾಜ್ಯದ ಎಲ್ಲ ಭಾಗಗಳಿಂದ ಸಹಸ್ರಾರು ಜನ ವಿಜಯನಗರಕ್ಕೆ ಆಗಮಿಸುತ್ತಿದ್ದಾರೆ. ಕನ್ನಡನಾಡಿನ ಮಿತ್ರರಾದ ರಾಜಮಹಾರಾಜರು, ಮಂಡಲಾಧಿಪತಿಗಳು ಸಾಮಂತನರಪತಿಗಳು, ದೆಹಲಿ ಬಹಮನಿ ಸುಲ್ತಾನರ ಪ್ರತಿನಿಧಿಗಳು ಹೀಗೆ ಲಕ್ಷಾಂತರಜನರಿಂದ ರಾಜಧಾನಿ ಕಿಕ್ಕಿರಿದು ತುಂಬಿಹೋಗಿದೆ. ರಾಜಧಾನಿಯನ್ನು ಸುಂದರವಾಗಿ ಅಲಂಕರಿಸಲಾಗಿದೆ. ಅರಮನೆಯ ವೈಭವವಂತೂ ವರ್ಣಿಸಲಸದಳ. ಎಲ್ಲೆಲ್ಲಿಯೂ ಸಂಭ್ರಮದ ವಾತಾವರಣ. ಪ್ರಜೆಗಳ ಸಡಗರ ಮೇರೆಮೀರಿದೆ.

ಶುಭ ಮುಹೂರ್ತದಲ್ಲಿ ಶ್ರೀರಂಗಪಟ್ಟಣದ ರಾಜಕುಮಾರಿ ಸೌ॥ತಿರುಮಲಾಂಬಿಕೆಯೊಡನೆ ಕೃಷ್ಣದೇವರಾಯನ ವಿವಾಹವು ಅದ್ದೂರಿಯಿಂದ ನೆರವೇರಿತು.

ವಿವಾಹಮಹೋತ್ಸವವಾದ ಮೂರನೆಯದಿನ ಅಲಂಕೃತ ರಾಜದರ್ಬಾರಿನಲ್ಲಿ ವಾದ್ಯವೈಭವ, ಗಾಯನ, ನರ್ತನ, ವೇದಘೋಷಗಳಾಗುತ್ತಿರಲು, ಮೂವತ್ತೊಂದು ಕುಶಾಲತೋಪುಗಳು ಭೋರ್ಗರೆಯುತ್ತಿರಲು, ವಂದಿಮಾಗಧರು ಬಿರುದುಗಳನ್ನು ಘೋಷಿಸುತ್ತಿರಲು. ಪಂಡಿತರು ಮಂತ್ರಗಳನ್ನು ಪಠಿಸುತ್ತಿರಲು. ಸಮಸ್ತಸಭಾಸದರು ಜಯಜಯಕಾರಮಾಡುತ್ತಿರಲು, ಮಹಾಮಂತ್ರಿ ತಿಮ್ಮರಸು ಪೀತಾಂಬರ-ನವರತ್ನಾಭರಣಗಳಿಂದಲಂಕೃತನಾಗಿ ಧೀರಗಂಭೀರ ನಡಿಗೆಯಿಂದ ಎಲ್ಲರ ಕಣ್ಮನಗಳನ್ನು ಸೆಳೆಯುತ್ತಾ ಬರುತ್ತಿರುವ ಕೃಷ್ಣದೇವರಾಯನಿಗೆ ಹಸ್ತಲಾಘವಕೊಟ್ಟು, ರತ್ನಸಿಂಹಾಸನಕ್ಕೆ ಕರೆತಂದು ಕೂಡಿಸಿದನು.

ಆಗ ಶ್ರೀವ್ಯಾಸತೀರ್ಥರು ಕೃಷ್ಣದೇವರಾಯನ ಶಿರದಮೇಲೆ ಮಣಿಮಯ ಕಿರೀಟವನ್ನಿಟ್ಟು, ರತ್ನಖಚಿತ ಒರೆಯಿಂದೊಪ್ಪುವ ಪಟ್ಟದಕತ್ತಿಯನ್ನು ಕೊಟ್ಟು ಸಕಲ ತೀರ್ಥಗಳನ್ನು ಪ್ರೋಕ್ಷಿಸಿ, ನವರತ್ನ, ಪುಷ್ಪಗಳಿಂದ ಸಾಮ್ರಾಜ್ಯ ಪಟ್ಟಾಭಿಷೇಕವನ್ನು ನೆರವೇರಿಸಿ ಆಶೀರ್ವದಿಸಿದರು. ಆನಂದತುಂದಿಲರಾದ ಸಭಾಸದರು "ಶ್ರೀಕೃಷ್ಣದೇವರಾಯಸಾರ್ವಭೌಮರಿಗೆ ಜಯವಾಗಲಿ" ಎಂದು ಜಯಧ್ವನಿಗೈದರು.

ಅನಂತರ ಮಿತ್ರರಾಜರು ದೆಹಲಿ, ಬಹಮನಿಸುಲ್ತಾನರ ಪ್ರತಿನಿಧಿಗಳು, ಮಂಡಲಾಧೀಶ, ಸಾಮಂತರಾಜರು, ದಳಪತಿಗಳು, ಢಣಾಯಕರು, ಮಹಾದಂಡನಾಯಕರು ಸಚಿವರು, ಮಹಾಮಾತ್ಯರು, ರಾಜಕೀಯ ಹಿರಿಯಾಳುಗಳು, ಪ್ರಮುಖ ಪೌರಜಾನ

ಪದರು, ಧಾರ್ಮಿಕರು, ಪಂಡಿತರು, ಕಲೆಗಾರರು ಹೀಗೆ ಸಹಸ್ರಾರು ಜನರು ಸಾರ್ವಭೌಮನಿಗೆ ಉಡುಗೊರೆ-ಕಾಣಿಕೆಗಳನ್ನು ಸಮರ್ಪಿಸಿದರು, ಅಂದಿನವೈಭವ, ಆನಂದ-ಸಂಭ್ರಮಗಳು ಅವರ್ಣನೀಯ. ರಾಜಧಾನಿಯಲ್ಲಿ, ಸಾಮ್ರಾಜ್ಯದಲ್ಲೆಲ್ಲಾ ಒಂದು ತಿಂಗಳಕಾಲ ಉತ್ಸವವನ್ನು ಆಚರಿಸಲಾಯಿತು. ದೇವಾಲಯ,ಮಠ, ಮಂದಿರಗಳಲ್ಲಿ ಪೂಜೆಗಳಾದವು. ಲಕ್ಷಾಂತರ ಜನರಿಗೆ ಸಂತರ್ಪಣೆಯಾಯಿತು. ವಿವಿಧ ಉತ್ಸವ, ಗಾಯನ, ನರ್ತನ, ಮುಂತಾದ ಸಾಂಸ್ಕೃತಿಕ ಕಾರ್ಯಕ್ರಮಗಳಾದವು. ಮಹಾಪರಾಕ್ರಮಿಯೂ, ಜನಪ್ರಿಯನೂ, ಶತ್ರುಭಯಂಕರನೂ, ಸದ್ಗುಣಮಂಡಿತನೂ, ದೇವಗುರುಪೂಜಕನೂ ಆದ ಕೃಷ್ಣದೇವರಾಯ ಸಾಮ್ರಾಟನಾದುದರಿಂದ ಸರ್ವರೂ ಆನಂದತುಂದಿಲರಾದರು.

o o o o o

ಕೃಷ್ಣದೇವರಾಯನು ಸಾಮ್ರಾಟನಾದಮೇಲೆ ಶ್ರೀವ್ಯಾಸಭಗವಾನರ ಮಾರ್ಗದರ್ಶನದಂತೆ ರಾಜಧಾನಿ ಮತ್ತು ಸಾಮ್ರಾಜ್ಯದ ಸರ್ವತೋಮುಖ ಅಭಿವೃದ್ಧಿ ಮಾಡುವ ಕಾರ್ಯದಲ್ಲಿ ಆಸಕ್ತನಾದನು ಅಂದೇ ವಿಜಯನಗರ ಸಾಮ್ರಾಜ್ಯದ ಸುವರ್ಣಯುಗದ ಬೀಜಾಂಕುರವಾಯಿತು. ರಾಯನು ಹಗಲಿರುಳು ಗುರುಗಳು, ಅಪ್ಪಾಜಿ, ಸಹೋದರರು, ಸಚಿವರು, ಹಿತೈಷಿಗಳಿಗೆ ಸಂತೋಷವಾಗುವಂತೆ, ಪ್ರಜರಿಗೆ ಹಿತವಾಗುವಂತೆ ಕಾರ್ಯಪ್ರವೃತ್ತನಾದನು.

ಕೃಷ್ಣದೇವರಾಯನಲ್ಲಿ ಸರ್ವಲೋಕಕಲ್ಯಾಣಚಾತುರ್ಯ, ಇತರ ರಾಜರ ಯಶಶ್ಚಂದ್ರಿಕೆಯನ್ನು ಸಂಪೂರ್ಣವಾಗಿ ಕಬಳಿಸುವ ಚಕೋರಪ್ರಾಯಸಚ್ಚಾರಿತ್ರ್ಯ, ವೈರಿನಾಶಕ ಶಸ್ತ್ರಸಾಮರ್ಥ್ಯ,ಸಕಲಲೋಕಸಮ್ಮತ ಶಾಸ್ತ್ರಮರ್ಯಾದೆ,ಉದಾತ್ತಚಿತ್ತವೃತ್ತಿ,ದೇವದ್ವಿಜರಲ್ಲಿ ನಿಷ್ಕಪಟವಿಶ್ವಾಸ, ಸದಾ ಧರ್ಮಮಾರ್ಗಪ್ರವೃತ್ತಿ, ಶತ್ರುನಿಗ್ರಹವಿಷಯದಲ್ಲಿ ಅಚಲಸಂಕಲ್ಪ, ಪಂಡಿತಪೋಷಣ ಮತ್ತು ಪ್ರಶಂಸಾಪಾತ್ರತೆ, ಗುಣಪಕ್ಷಪಾತ, ವಿದ್ವತ್ಕವಿ-ಕಲಾಜನರಿಗೆ ಆಶ್ರಯಪ್ರದಾನ, ಇಂದ್ರಿಯನಿಗ್ರಹ, ಅನ್ನದಾನಾಸಕ್ತಿ, ಸಚ್ಛೀಲ-ಹರಿಗುರುಭಕ್ತಿ. ಪರನಾರೀಸೋದರತ್ವ, ಜನಮನರಂಜನಾಧೌರೇಯತೆ, ವಿನಯ-ಸೌಜನ್ಯ-ದೀನಾನುಕಂಪ, ಭುಜಬಲಪರಾಕ್ರಮ, ಸಂಗೀತಸಾಹಿತ್ಯಾದಿ ಸಕಲ ಕಲೆಗಳಲ್ಲಿ ಅತಿಪ್ರೌಢಿಮೆ, ಮುಂತಾದ ಅಸಾಧಾರಣ ಸದ್ಗುಣಗಳು, ಅವನಲ್ಲಿ ಮನೆಮಾಡಿದ್ದವು, ಇವೆಲ್ಲ ಗುಣಗಳೂ ಅವನ ವ್ಯಕ್ತಿತ್ವಕ್ಕೆ ಮೆರಗುಕೊಟ್ಟವು.

ಇಂತು ಭೂಪತಿಗಳಿಗೆಲ್ಲಾ ಶಿರೋಮಣಿಯಾಗಿ, ರಿಪುಕುಲಾಂಧಕಾರನಭಮಣಿಯಾಗಿ, ಧಾನುಷ್ಕಶೇಖರನಾಗಿ, ವೈಜ್ಞಾನಿಕಾಗ್ರೇಸರನಾಗಿ, ಸಕಲವಿದ್ಯಾ ಪಾರಂಗತನಾಗಿ, ಸರ್ವರ ಪ್ರೀತಿಗೌರವಗಳಿಗೆಪಾತ್ರನಾದ ಆ ಕೃಷ್ಣದೇವರಾಯಸಾರ್ವಭೌಮನು

ಸಾಗರಪರ್ಯಂತವಾಗಿ ವಿಸ್ತಾರವಾದ ಭೂಮಿಯಿಂದ ರಾರಾಜಿಸುವ ಕನ್ನಡ ಸಾಮ್ರಾಜ್ಯವನ್ನು ಲೀಲೆಯಿಂದಲೇ ನಿರ್ವಹಿಸುತ್ತಿದ್ದನು.

ಧೈರ್ಯ-ಶೌರ್ಯ-ಪರಾಕ್ರಮ-ಗಾಂಭೀರ್ಯ-ಸೌಜನ್ಯ- ಕಾರುಣ್ಯ- ವಿನಯ ವಿತರಣ ಮೊದಲಾದ ಸದ್ಗುಣ ಸಂಪನ್ನನೂ, ಭಾಗವತಮೂರ್ಧನ್ಯನು ಆದ ಕೃಷ್ಣದೇವರಾಯನು ಅತಿ ಭಕ್ತಿಪೂರ್ವಕವಾಗಿ ತನ್ನ ಕುಲದೇವತೆಯಂತೆ ತ್ರಿಕಾಲಗಳಲ್ಲಿಯೂ,ವ್ಯಾಸರಾಜರನ್ನು ಅತ್ಯಾದರಪೂರ್ವಕವಾಗಿ ಪೂಜಿಸುತ್ತಿದ್ದನು,

ಹೀಗೆ ವ್ಯಾಸರಾಜರು ಸಾರ್ವಭೌಮರಿಂದ ಸೇವಿತರಾಗಿ ಪ್ರಚಂಡ ಪಾಷಂಡ ಕುಮತಗಳೆಂಬ ಪರ್ವತಗಳ ಪಕ್ಷಗಳನ್ನು ಕ್ಷಣಮಾತ್ರದಲ್ಲಿ ವಿಚ್ಛೇದಿಸಲು ಶಕ್ತವಾದ ತಮ್ಮ ವಾಗ್ವಜ್ರಾಘಾತದಿಂದ ವಿರಾಜಿಸುತ್ತಾ, ತಮ್ಮ ಅಸಾಧಾರಣ ಜ್ಞಾನಪ್ರಭಾವದಿಂದ ಭಗವಾನ್ ಸೂರ್ಯದೇವನಂತೆ ಅಜ್ಞಾನಾಂಧಕಾರವನ್ನು ಪರಿಹರಿಸುತ್ತಾ ರಾಜಿಸಿದರು.[2] ಇದರಿಂದ ಪ್ರಪಂಚವು ನೂತನರೂಪ ತಾಳಿದಂತೆ ಕಂಗೊಳಿಸಿತು. ಬಹುಕಾಲದಿಂದ ಮಿಥ್ಯಾಮಿಥ್ಯಾ ಎಂದು ಆರೋಪಿತವಾಗಿದ್ದ ಪ್ರಪಂಚವುಮಿಥ್ಯಾತ್ವ ರೂಪದಿಂದ ಮುಕ್ತವಾಯಿತು....ಜೀವಾತ್ಮ ಪರಮಾತ್ಮರ ಪಾರಮಾರ್ಥಿಕಭೇದವು ನಿರ್ನಿರೋಧವಾಗಿ ಸ್ಥಾಪಿಸಲ್ಪಟ್ಟಿತು. ಜನರಲ್ಲಿ ವಿಚಾರಶಕ್ತಿ ಉಲ್ಬಣಿಸಿ ದೇವತಾ ತಾರತಮ್ಯಪೂರ್ವಕವಾಗಿ ಶ್ರೀಹರಿಸರ್ವೋತ್ತಮತ್ವದಲ್ಲಿ ಅವರ ಬುದ್ಧಿ ಆಸಕ್ತವಾಯಿತು.[3]

ಶ್ರೀವ್ಯಾಸರಾಜರ ಪ್ರಭಾವ, ಮಹಿಮಾತಿಶಯಗಳಿಂದ ಸಕಲ ಸಜ್ಜನರಾದ ಭೂಸುರರು,ನಿತ್ಯಮುಕ್ತಳಾದ ರಮಾದೇವಿಯ ರಮಣನಾದ ಶ್ರೀಮನ್ನಾರಾಯಣನ ಚರಣಾರವಿಂದದಲ್ಲಿ ಭಕ್ತಿಭರಿತವಾದ ಮನಸ್ಸುಳ್ಳವರಾದರು. ಈ ಪ್ರಪಂಚದಲ್ಲಿಯೇ ಶ್ರೀಹರಿಯ ಸಾರೂಪ್ಯವನ್ನು ಪಡೆದರೋ ಎಂಬಂತೆ ಶಂಖ-ಚಕ್ರಾದಿ ಸದ್ವೈಷ್ಣವ

---

1) ತಾದೃಶೇನ ಸಕಲಗುಣ...ಧುರಾಧರ್ಷೇಣ ಶೌರ್ಯಗಾಂಭೀರ್ಯಾಭ್ಯಾಂ. .ಪ್ರವಣೇನ ಭಕ್ತಿವಿನಯಾಭ್ಯಾಂ ಚಿತ್ತಾನುವರ್ತಕೇನ ಭಾಗವತಮೂರ್ಧನ್ಯೇನ ತೇನ ಕೃಷ್ಣಮಹೀಪಾಲೇನ ತ್ರಿಸಂಧ್ಯಂ ಕುಲದೇವತೇವ ಮಕುಟತಟಮಾಲತೀಕುಸುಮಶೇಖರೀಕ್ರಿಯಮಾಣ-ನಖಮಯೂಖಜಾತೇ ಮಹಾನುಭಾವೇ ॥

2) ಮಾರ್ತಾಂಡ ಇವ...ಖಾಂಡನಿಕ ಪಾಷಂಡಮತಾನಿ ಕಥಾವಶೇಷಂ ವಿದಧತಿ ಭಗವತಿ ತಸ್ಮಿನ್ ವ್ಯಾಸಯೋಗಿನಿ ಪುನರಾಹಿತಾವತಾರಮಿವ ಭುವನಮಭೂತ್ ॥

—ಶ್ರೀವ್ಯಾಸಯೋಗಿಚರಿತಮ್-P-68

3) ...ಚಿರಮಾರೋಪಿತಾತ್ಪರಿವಾದಾದಿವ ಮಿಥ್ಯಾತ್ವಾದಮುಚ್ಯತ ಝಟಿತಿ ಪ್ರಪಂಚಃ ...ಜೀವಪರಭೇದಾಪವಾದೇನ ತತ್ತ್ವಬೋಧೇನ ನಿರ್ನಿರೋಧೇನ ಬಭೂವೇ।...ಅರಮರಂ ರಮ್ಯತರತಮ್ಯೇ ದೇವತಾತಾರತಮ್ಯೇ ನಾರಾಯಣಮುಖ್ಯಭಾವ ವಿವರಣಾ....ಪರಾಯಣ ವಿಚಾರಣೋಲ್ಬಣಾ ಜನಾನಾಂ ಧಿಷಣಾ ॥

—ಶ್ರೀವ್ಯಾಸಯೋಗಿಚರಿತಮ್-P-68

ಲಾಂಛನಗಳನ್ನು ಧರಿಸಿ ಶ್ರೇಯೋವಂತರಾದರು 4

ಹೀಗೆ ವಿಜಯನಗರದ ಕನ್ನಡಸಾಮ್ರಾಜ್ಯವು ಶ್ರೀವ್ಯಾಸರಾಜರಿಂದಾಗಿ ವಿವಿಧ ರೀತಿಯಿಂದ ಅಭ್ಯುದಯದ ಮಾರ್ಗದಲ್ಲಿ ಮುನ್ನಡೆಯಿತು.

## ೪೩. ವಿಜಯ ಪರಂಪರೆ

ಯಾವುದೇ ರಾಷ್ಟ್ರ ಸಂಪೂರ್ಣವಾಗಿ ಉನ್ನತಿಯ ಶಿಖರವನ್ನು ಏರಬೇಕಾದರೆ, ಆ ದೇಶ ಸುಖಶಾಂತಿಗಳಿಂದ ಸಮೃದ್ಧವಾಗಬೇಕು. ಆಡಳಿತ ಧರ್ಮ-ನ್ಯಾಯಬದ್ಧವಾಗಿ,ಪ್ರಜೆಗಳಿಗೆ ಹಿತಕರವಾಗಿರಬೇಕು. ಅಲ್ಲಿನ ಸಮಾಜ ಸುಭದ್ರವಾಗಿದ್ದು ಜನರು ಸುಖ-ಸಂತೋಷ-ನೆಮ್ಮದಿಯಿಂದ ಬಾಳುವಂತಾಗಬೇಕು. ಆಗ ಮಾತ್ರ ಆ ರಾಷ್ಟ್ರ, ಸಿರಿ-ಸಂಪತ್ತು, ವಿದ್ಯೆ, ಕಲೆ, ನಾಗರಿಕತೆ ಹೀಗೆ ಹಲವಾರು ಬಗೆಯಿಂದ ಮುಂದುವರೆದು ಲೋಕವಿಖ್ಯಾತಿಯನ್ನು ಗಳಿಸುವುದು

ಕೃಷ್ಣದೇವರಾಯನು ಸಾಮ್ರಾಟನಾದ ಸಮಯ ಒಂದು ಸಂಕ್ರಾಂತಿಕಾಲವಾಗಿತ್ತೆಂದು ಹೇಳಬಹುದು, ದಕ್ಷಿಣಭಾರತದಲ್ಲಿ ಮೇಲಿಂದ ಮೇಲೆ ಶತ್ರುಗಳ ದಾಳಿ, ದಂಗೆಗಳಾಗುತ್ತಿದ್ದವು. ದಕ್ಷಿಣಭಾರತದಲ್ಲಿ ಶಾಂತಿಸ್ಥಾಪನೆಮಾಡಿ, ಶತ್ರುಗಳನ್ನು ಎದುರಿಸಿ, ಕೈಬಿಟ್ಟುಹೋಗಿದ್ದ ನಾಡಿನ ಭಾಗಗಳನ್ನು ಪುನಃ ಪಡೆಯಬೇಕಾಗಿತ್ತು. ನೆರೆಹೊರೆಯ ಹಿಂದೂರಾಜರೊಡನೆ, ಉತ್ತರಭಾರತದ ರಾಜಮಹಾರಾಜರೊಡನೆ ಸ್ನೇಹವನ್ನು ಕಾಯ್ದುಕೊಂಡು, ನ್ಯಾಯಮಾರ್ಗದಲ್ಲಿ ಮುನ್ನಡೆಯಬೇಕಾಗಿದ್ದಿತು. ಸನಾತನ ಧರ್ಮದ ಪುನರುತ್ಥಾನವಾಗಲು ಧಾರ್ಮಿಕ ತಳಹದಿಯ ಮೇಲೆ ಸುಭದ್ರ ಸಮಾಜವನ್ನು ಪ್ರತಿಷ್ಠಾಪಿಸಿ,ಪ್ರಜೆಗಳಲ್ಲಿ,ದೇವರು,ಧರ್ಮಗಳಲ್ಲಿ ನಂಬಿಕೆ ಬೇರೂರುವಂತೆ ಮಾಡಿ ಜನರು ಸತ್ಯ, ಧರ್ಮ, ಸದಾಚಾರ, ಶೀಲಸಂಪನ್ನರಾಗಿ, ಸ್ನೇಹ ಸೌಹಾರ್ದದಿಂದ ಜೀವಿಸುತ್ತಾ ಭಾರತೀಯ ಭವ್ಯ ಸಂಸ್ಕೃತಿಯ ಉಪಾಸಕರಾಗಿ ಉನ್ನತಿಯ ಶಿಖರವನ್ನೇರುವಂತೆ ಮಾಡಬೇಕಾಗಿದ್ದಿತು.

ಈ ಎಲ್ಲ ಆದರ್ಶಗಳೂ, ಭಾವನೆಗಳೂ, ಕೃಷ್ಣದೇವರಾಯನ ಮನಸ್ಸಿನಲ್ಲಿ ಬೇರೂರುವಂತೆಮಾಡಿ, ಅವನ ಮೇಲೆ ಪ್ರಭಾವಬೀರಿದ ಮಹನೀಯರೆಂದರೆ ಶ್ರೀ ವ್ಯಾಸರಾಜಯತಿಪುಂಗವರೆಂದು ಬೇರೆ ಹೇಳಬೇಕಾಗಿಲ್ಲ, ಇದಕ್ಕೆ ಪುಷ್ಟಿ, ಬೆಂಬಲ ವಿತ್ತವರು ಮಹಾಮಂತ್ರಿ ತಿಮ್ಮರಸು ಮುಂತಾದ ರಾಜಕಾರಣ ಪಟುಗಳು.

ಸಾಮ್ರಾಜ್ಯಾಧೀಶನಾದ ಮೇಲೆ ಕೃಷ್ಣದೇವರಾಯನ ಮನಸ್ಸಿನಲ್ಲಿ ಈ ಮಹತ್ಕಾರ್ಯ ಸಾಧನೆಯನ್ನು ಮಾಡುವ ಬಯಕೆ ಅಧಿಕವಾಗಿತ್ತು. ಅಂತೆಯೇ ಒಂದು

---

4) —ಅಕ್ಷೀಣ ಲಕ್ಷ್ಮೀಸಹಾಯಾಚರಣಭಕ್ತಿಭಾಜನಮನಸಾ ಬಭೂವುರಿಹೈವ ಸಾರೂಪ್ಯಭಾಜಾ ಇವ ಶಂಖ-ಚಕ್ರಲಾಂಛನಾಃ.ಸಕಲ ದ್ವಿಜಾತಿಸಂಘಾಃ ॥

—ಶ್ರೀವ್ಯಾಸಯೋಗಿಚರಿತಮ್-P. 6೪

ದಿನ ಕೃಷ್ಣದೇವರಾಯ ತಿಮ್ಮರಸನೊಡನೆ ಬಂದು ಶ್ರೀವ್ಯಾಸರಾಜರಿಗೆ ನಮಸ್ಕರಿಸಿ "ಪೂಜ್ಯ ಗುರುದೇವ ! ನಿಮ್ಮ ಉಪದೇಶವನ್ನು ಕಾರ್ಯರೂಪಕ್ಕೆ ತರಲು ಮನಸ್ಸು ಕಾತರಿಸುತ್ತಿದೆ. ಮೊದಲು ಶತ್ರುನಿಗ್ರಹಕಾರ್ಯ ಕೈಗೊಂಡು ಮುಂದುವರೆಯ ಬೇಕೆಂದಿದ್ದೇನೆ. ಈ ನಮಗೆ ಕಂಟಕಪ್ರಾಯನಾಗಿರುವ ಒರಿಸ್ಸಾದೇಶದ ಪ್ರತಾಪ ರುದ್ರಗಜಪತಿಯ ದೌರ್ಜನ್ಯವನ್ನು ಕೊನೆಗಾಣಿಸಲು ಮೊದಲು ಅವನ ರಾಜ್ಯದ ಮೇಲೆ ದಂಡೆತ್ತಿಹೋಗಲು ಅಪ್ಪಣೆ ದಯಪಾಲಿಸಬೇಕು" ಎಂದು ವಿನಂತಿಸಿದನು.

ಸಾಮ್ರಾಟನ ವಚನವನ್ನಾಲಿಸಿ ಕ್ಷಣಕಾಲ ಧ್ಯಾನಮಗ್ನರಾಗಿ ಆ ನಂತರ ವ್ಯಾಸ ತೀರ್ಥರು "ಸಾರ್ವಭೌಮ ! ನಿನ್ನಾಶೆಯು ಯುಕ್ತವಾಗಿದೆ. ಆದರೆ ದುಡುಕುವುದು ವಿಹಿತವಲ್ಲ. ಯುದ್ಧವು ಕ್ಷತ್ರಿಯರ ಧರ್ಮವಾಗಿದ್ದರೂ ಅದರಿಂದ ರಕ್ತಪಾತ, ಪ್ರಜಾನಾಶವಾಗುವುದು. ಮೊದಲು ನೀನು ಸ್ನೇಹ, ಸೌಹಾರ್ದದಿಂದ ಪ್ರಯತ್ನಿಸ ಬೇಕು. ಅದು ಸಫಲವಾಗದಿದ್ದರೆ, ಸಾಮ, ದಾನ, ಭೇದೋಪಾಯಗಳನ್ನು ಕೈ ಗೊಳ್ಳಬೇಕು. ಅದಾವುದೂ ಯಶಸ್ವಿಯಾಗದಿದ್ದಾಗ ಮಾತ್ರ ಅನಿವಾರ್ಯವಾಗಿ ದಂಡೋಪಾಯದಿಂದ ಶತ್ರುವನ್ನು ಜಯಿಸಬೇಕು. ಯುದ್ಧದಲ್ಲಿ ವಿಜಯವಾದಾಗ ಶರಣಾಗತರನ್ನು ರಕ್ಷಿಸಬೇಕು, ಸೋತವರೊಡನೆ ಸೌಜನ್ಯದಿಂದ, ಮಾನವೀಯತೆ ಯಿಂದ ವರ್ತಿಸಿ ಅವರನ್ನು ನಿನ್ನ ಅಧೀನರನ್ನಾಗಿ ಮಾಡಿಕೋ. ಆ ರಾಜ್ಯದ ಪ್ರಜೆಗಳಿಗೆ ಯಾವ ಆಪತ್ತೂ, ಅಗೌರವವೂ ಆಗದಂತೆ ನೋಡಿಕೊಳ್ಳಬೇಕು. ದೀನ ದಲಿತರು, ಸ್ತ್ರೀಯರು ಮಕ್ಕಳು, ವೃದ್ಧರು, ಅವರ ಆಸ್ತಿಪಾಸ್ತಿ, ಪ್ರಾಣ, ಮಾನ ಗಳಿಗೆ ಧಕ್ಕೆಬಾರದಂತೆ ಕಾಪಾಡಬೇಕು. ಸೋತರಾಜರನ್ನು ಕೀಳಾಗಿ ಕಾಣದೆ ಅವರನ್ನು ಗೌರವ-ಸ್ನೇಹ ಭಾವದಿಂದ ಕಂಡು, ಅವರ ಮನಸ್ಸನ್ನು ಗೆದ್ದು ಅಧೀನರನ್ನಾಗಿ ಮಾಡಿಕೊಳ್ಳಬೇಕು. ಭಾರತದಲ್ಲಿರುವ ಎಲ್ಲ ದೇಶಗಳೂ ಜನರೂ ಭಾರತೀಯರೇ ಆದ್ದರಿಂದ ಅವರ ಧರ್ಮ, ಮತ, ಸಂಪ್ರದಾಯಗಳಿಗೆ ಕಿಂಚಿತ್ತೂ ಅಪೋಹವಾಗ ದಂತೆ, ಅಖಂಡಭಾರತದ ಸಂಸ್ಕೃತಿಯ ರಕ್ಷಕನಂತೆ ವರ್ತಿಸಿ ಕೀರ್ತಿಶಾಲಿಯಾಗಬೇಕು, ರಾಜೇಂದ್ರ ! ನಮ್ಮ ಉಪದೇಶ ನಿನ್ನಲ್ಲಿ ಸದಾಜಾಗೃತವಾಗಿರಲಿ, ಶ್ರೀಹರಿವಾಯು ಗಳು, ಶ್ರೀವಿರೂಪಾಕ್ಷ, ತಾಯಿ ಭುವನೇಶ್ವರಿ ನಿನಗೆ ಸದಾ ರಕ್ಷಕರಾಗಿ ಮಂಗಳ ವನ್ನೀಯಲಿ. ನಿನಗೆ ವಿಜಯವಾಗಲಿ" ಎಂದುಪದೇಶಿಸಿ ಆಶೀರ್ವದಿಸಿದರು.

ಕೃಷ್ಣದೇವರಾಯ ಗುರುಗಳ ಹಿತೋಕ್ತಿಯಿಂದ ಪುಳಕಿತಗಾತ್ರನಾಗಿ "ಗುರು ದೇವರ ಆಜ್ಞೆಯಂತೆ 'ವರ್ತಿಸುತ್ತೇನೆ" ಎಂದು ಆನಂದದಿಂದ ವಿಜ್ಞಾಪಿಸಿದನು. ಅವನಿಗೆ ತನ್ನ ವಿಜಯಯಾತ್ರೆಯು ಗುರುಪೂಜೆಯಿಂದಲೇ ಪ್ರಾರಂಭಿಸುವ ಇಚ್ಛೆ ಯಾಯಿತು. ಈ ಮಂಗಳಕರಸಂದರ್ಭದಲ್ಲಿ ಗುರುಗಳಿಗೆ ಗ್ರಾಮದಾನಮಾಡಿ ಸೇವಿಸ ಬಯಸಿ ಅದನ್ನು ಗುರುಗಳಲ್ಲಿ ನಿವೇದಿಸಿದನು. ಆಗ ವ್ಯಾಸಮುನಿಗಳು ಕಂಚಿಯಲ್ಲಿ ಶ್ರೀವರದರಾಜಸ್ವಾಮಿಗೆ ತಾವು ಒಂದು ಸುವರ್ಣಶೇಷವಾಹನವನ್ನು ನಿರ್ಮಿಸಿ

ಅರ್ಪಿಸಬಯಸಿರುವುದಾಗಿಯೂ, ಪ್ರತಿವರ್ಷ ಶ್ರೀವರದರಾಜಸ್ವಾಮಿಯ ಪ್ರತಿಯೊಂದು ಉತ್ಸವ ಕಾಲದಲ್ಲಿ ಉತ್ಸವದ ನಾಲ್ಕನೆಯ ದಿನ 'ಆವನೀ ಉತ್ಸವ'ವನ್ನು ತಮ್ಮ ಹೆಸರಿನಲ್ಲಿ ನೆರವೇರುವಂತೆ ಮಾಡಬೇಕೆಂಬ ತಮ್ಮ ಆಶಯವನ್ನು ಸಾರ್ವಭೌಮನಿಗೆ ತಿಳಿಸಿದರು.

ಕೃಷ್ಣದೇವರಾಯನು ಗುರುಗಳ ಅಪ್ಪಣೆಯಿಂದ ಸಂತುಷ್ಟನಾಗಿ ಶ್ರೀಶಾಲಿವಾಹನಶಕೆ ೧೪೩೩ (ಕ್ರಿ. ಶ. 1511) ಆಗಸ್ಟ್ ಮಾಹೆಯಂದು ಪಡೈವೀಡು ರಾಜ್ಯದಲ್ಲಿರುವ "ಪೂಲಂಬಾಕ್ಕಂ" ಎಂಬ ಗ್ರಾಮವನ್ನು ಶ್ರೀವರದರಾಜಸ್ವಾಮಿಯ ಆವನೀ ಉತ್ಸವ ನೆರವೇರಿಸಲಿಕ್ಕಾಗಿ ವ್ಯಾಸತೀರ್ಥರಿಗೆ ದಾನವಾಗಿ ಕೊಟ್ಟು, ಅಧಿಕ ಸುವರ್ಣ ನಾಣ್ಯಗಳನ್ನಿತ್ತು, ದೇವರಿಗೆ ಸುವರ್ಣಲೇಪವಾಹನವನ್ನು ಅರ್ಪಿಸಲು ಅನುಕೂಲ ಮಾಡಿಕೊಟ್ಟು ಅನುಗೃಹೀತನಾದನು.[1]

ಕೃಷ್ಣದೇವರಾಯನ ಗುರುಭಕ್ತಿಯನ್ನು ಕಂಡು ಮುದಿಸಿದ ವ್ಯಾಸತೀರ್ಥರು "ರಾಜೇಂದ್ರ ! ದಿಗ್ವಿಜಯಯಾತ್ರೆಗೆ ಮೊದಲು ನೀನು ಮಾಡಿರುವ ಈ ಉತ್ತಮ ಭಗವತ್ಸೇವೆಯಿಂದ ನಮಗೆ ಅತೀವ ಹರ್ಷವಾಗಿದೆ. ನಿನಗೆ ಎಲ್ಲೆಡೆ ದಿಗ್ವಿಜಯ-ಕೀರ್ತಿಪ್ರತಿಷ್ಠೆಗಳು ದೊರಕುವವು" ಎಂದು ಆಶೀರ್ವದಿಸಿದರು. ರಾಯನು ಗುರುಗಳು ಜ್ಯೋತಿಷಿಗಳಿಂದ ವಿಚಾರಪೂರ್ವಕವಾಗಿ ನಿಶ್ಚಯಿಸಿದ್ದಂತೆ 1511ನೇ ವಿಜಯದಶಮಿ ದಿವಸ ಸಮಸ್ತಸೈನ್ಯದೊಡನೆ ದಿಗ್ವಿಜಯಯಾತ್ರೆ ಕೈಗೊಂಡುಹೊರಟನು.

ಂ ಂ ಂ ಂ ಂ

ಕೃಷ್ಣದೇವರಾಯನು ಕ್ರಿ. ಶ. 1510-11 ರಿಂದ 1521-22ರವರೆಗೆ ಅನೇಕ ಯುದ್ಧಗಳನ್ನು ಮಾಡಿ ಎಲ್ಲ ಕದನಗಳಲ್ಲಿಯೂ ಅಸಮಭುಜಬಲ ಪರಾಕ್ರಮದಿಂದ ಹೋರಾಡಿ ವಿಜಯಗಳಿಸಿ ಕನ್ನಡಸಾಮ್ರಾಜ್ಯದ ವಿಜಯಧ್ವಜವನ್ನು ಎಲ್ಲೆಡೆ ಮೆರೆಸಿದನು. ರಾಯನು ಗಳಿಸಿದ ವಿಜಯಪರಂಪರೆಯಲ್ಲಿ ಕೆಲವನ್ನು ಇಲ್ಲಿ ನಿರೂಪಿಸುವುದು ಅಪ್ರಕೃತವಾಗಲಾರದು.

ಹಿಂದೆ ಕಳಿಂಗದ ಕಪಿಲೇಶ್ವರಗಜಪತಿಯು ಸಾಳುವ ನರಸಿಂಹನಿಂದ ಪರಾಜಿತನಾಗಿ ವಿಜಯನಗರದರಸರಿಗೆ ವಿಧೇಯನಾಗಿ ನಡೆದುಕೊಂಡುಬಂದಿದ್ದರೂ, ಮುಂದೆ ಪ್ರತಾಪರುದ್ರಗಜಪತಿಯು ಸಿಂಹಾಸನವೇರಿದಮೇಲೆ ಪ್ರಬಲಿಸಿ ಕನ್ನಡಸಾಮ್ರಾಜ್ಯದ ಗಡಿಗಳಲ್ಲಿ ಧಾಳಿಮಾಡಿ ಲೂಟಿ-ಸುಲುಗೆ-ರಕ್ತಪಾತ ಮಾಡುತ್ತಾ ಗೊಂದಲವೆಬ್ಬಿಸುತ್ತಿದ್ದನು. ಅವನು ಬಹಮನಿ ಸುಲ್ತಾನರ ಸ್ನೇಹಬೆಳೆಸಿ ಹಿಂದುವಾಗಿದ್ದರೂ ವಿಜಯನಗರಕ್ಕೆ ಕಿರುಕುಳಕೊಡಲಾರಂಭಿಸಿದನು. ಅದರಿಂದ ಮೊದಲೇ ಹಿಂದೂಸಾಮ್ರಾಜ್ಯ ಶತ್ರುಗಳಾದ ಬಹಮುನಿಸುಲ್ತಾನರ ಉಪಟಳವು ಅಧಿಕವಾಗಿತ್ತು. ವಿಜಾಪುರದ ಆದಿಲ್‌ಷಹನು ಸಾಮ್ರಾಜ್ಯದ ಉತ್ತರಗಡಿಯಲ್ಲಿ ಮುನ್ನುಗ್ಗಿ ಆ ಪ್ರದೇಶವನ್ನು ಕಬಳಿಸಲು ಹೊಂಚುಹಾಕುತ್ತಿದ್ದನು. ತುಂಗಭದ್ರಾ-ಕೃಷ್ಣಾನದಿಗಳ ಮಧ್ಯಭಾಗ

---

1) Madras Epigraphists, No. 370 of 1919-1920

"ದೋ-ಅಬ್" ಎಂಬ ಹೆಸರಿಂದ ಖ್ಯಾತವಾಗಿದ್ದ ಅಯುಕಟ್ಟಿನ ಸ್ಥಳವಾದ ರಾಯಚೂರು ಪ್ರಾಂತ್ಯವನ್ನು ತನ್ನ ಸ್ವಾಧೀನಪಡಿಸಿಕೊಂಡಿದ್ದನು.

ಇದರ ಜತೆಗೆ ಗೋವೆಯ ಪೋರ್ಚುಗೀಸರು ವಿಜಯನಗರದವರೆಗೆ ಕುದುರೆಗಳನ್ನು ಸರಬರಾಜು ಮಾಡುವುದಾಗಿ ಒಪ್ಪಿಕೊಂಡು ಅನಂತರ ವಿಜಾಪುರದವರ ಚಿತಾವಣೆಯಿಂದ ಮಾತಿಗೆ ತಪ್ಪಿ ನಡೆದಿದ್ದರು. ಯುದ್ಧಕ್ಕೆ ಕುದುರೆಗಳು ಅತ್ಯವಶ್ಯವಾದ್ದರಿಂದ ಪೋರ್ಚುಗೀಸರಿಗೆ ಬಿಸಿತಟ್ಟಿಸಿ ಮತ್ತೆ ಅವರು ವಿಜಯನಗರಕ್ಕೆ ಬೇಕಾದ ಕುದುರೆಗಳನ್ನು ಪೂರೈಸುವಂತೆ ಮಾಡಬೇಕಾಗಿತ್ತು.

ದಕ್ಷಿಣದಲ್ಲಿ ಉಮ್ಮತ್ತೂರು ಮುಂತಾದ ಪ್ರಾಂತ್ಯದ ದೊರೆಗಳು ಪ್ರಬಲರಾಗಿದ್ದು ಅವರನ್ನು ನಿಗ್ರಹಿಸಬೇಕಾಗಿತ್ತು. ವಿಜಾಪುರದ ಆದಿಲ್‌ಷಹ, ಗುಲ್ಬರ್ಗಾದ ಕುತುಬ್‌ಷಹ, ಅಹಮದ್‌ನಗರ, ಬಿದರೆ, ಗೋಲ್ಕೊಂಡಗಳ ಸುಲ್ತಾನರು ವಿಜಯನಗರದ ಪ್ರಬಲ ಶತ್ರುಗಳಾಗಿದ್ದು ಉತ್ಕಲದ ಗಜಪತಿಯೊಡನೆ ಸಂಧಿಮಾಡಿಕೊಂಡು ಎಲ್ಲರೂ ವಿಜಯನಗರದ ನಾಶಕ್ಕಾಗಿ ಹಾತೊರೆಯುತ್ತಿದ್ದರು.

ಇಂಥ ಪರಿಸ್ಥಿತಿಯನ್ನು ಕೃಷ್ಣದೇವರಾಯ ಎದುರಿಸಬೇಕಾಗಿತ್ತು. ರಾಯನು ಅಸಾಮಾನ್ಯಶೌರ್ಯ-ಸಾಹಸಗಳಿಂದ ಪ್ರಚಂಡಪರಾಕ್ರಮದಿಂದ ಇವೆಲ್ಲ ಕಷ್ಟಪರಿಸ್ಥಿತಿಯಲ್ಲಿಯೂ ಅತ್ಯಂತ ಪ್ರಬಲವೂ ಸುಭದ್ರವೂ ಆದ ಸೈನ್ಯವನ್ನು ಸಜ್ಜುಗೊಳಿಸಿ ಯುದ್ಧಸನ್ನದ್ಧನಾದನು. ಈ ವಿಚಾರ ತಿಳಿದು ಗೋವೆಯ ಪೋರ್ಚುಗೀಸರು ಎಚ್ಚರಗೊಂಡು ವಿಜಯನಗರದವರ ಸ್ನೇಹವನ್ನು ತಾವಾಗಿ ಬಯಸಿ ಅವರಿಗೆ ಬೇಕಾದಷ್ಟು ಅಶ್ವಗಳನ್ನು ಸರಬರಾಜುಮಾಡಿ ಒಪ್ಪಂದಮಾಡಿಕೊಂಡರು. ಇದೊಂದು ರಕ್ತಪಾತವಿಲ್ಲದೇ ಪ್ರಪ್ರಥಮವಾಗಿ ಕೃಷ್ಣದೇವರಾಯನಿಗೆ ದೊರೆತ ಮಹಾವಿಜಯವೆಂದು ಹೇಳಬಹುದು.

ಕಳಿಂಗವಿಜಯಯಾತ್ರೆಯಲ್ಲಿ ಸಾಮ್ರಾಜ್ಯದ ಅನೇಕ ಸಾಮಂತರು, ಮಂಡಲಾಧಿಪತಿಗಳು ಭಾಗವಹಿಸಿದರು. ಕೃಷ್ಣದೇವರಾಯನ ಬಂಧುವಾದ ತಿಮ್ಮೋಜನ ಪ್ರಯತ್ನದಿಂದಾಗಿ ಗೇರುಸೊಪ್ಪೆ, ಇಕ್ಕೇರಿ ಮುಂತಾದ ರಾಜರು ಸೈನ್ಯಸಮೇತರಾಗಿ ಬಂದು ರಾಯನನ್ನು ಕೂಡಿಕೊಂಡರು. ರಾಯನಿಗೆ ಬೆಂಬಲವಾಗಿ ಮಹಾಮಂತ್ರಿ ತಿಮ್ಮರಸು ಅವನ ತಮ್ಮ ಗುಂಡರಾಜ, ಕೊಂಡಮರಸಯ್ಯ ಚಿನ್ನೋಜ, ಅಚ್ಯುತದೇವರಾಯ, ಅರವೀಡು ಮನೆತನದ ರಾಮರಾಜ (ಅಳಿಯ ರಾಮರಾಜನ ತಾತ), ಶ್ರೀರಂಗರಾಜ, ಚವ್ವಪ್ಪನಾಯಕ–ಮುಂತಾದ ಮಹಾವೀರರು-ದಂಡನಾಯಕರು, ದಳಪತಿಗಳು, ಢಣಾಯಕರು ಲಕ್ಷಾಂತರ ಶೂರಸೈನಿಕರು ವಿಜಯನಗರದ ಈ ಮಹಾದಿಗ್ವಿಜಯದಲ್ಲಿ ಪಾಲ್ಗೊಂಡರು.

ಈ ವಿಜಯಯಾತ್ರೆಯಲ್ಲಿ ಕೃಷ್ಣದೇವರಾಯನನ್ನು ಮೊದಲು ಎದುರಿಸಿದವನು ಅಮೀರ್‌ಬಾರೀಸ್, ವಿಜಾಪುರದ ಹೊರವಲಯದಲ್ಲಿ ರಾಯನು ಬಾರೀಸನನ್ನು

ಎದುರಿಸಿ ಪರಾಕ್ರಮದಿಂದ ಹೋರಾಡಿ ಜಯಗಳಿಸಿದನು. ಇದೇ ಸಮಯದಲ್ಲಿ ಗುಲ್ಬರ್ಗದ ಸುಲ್ತಾನನು ರಾಯನನ್ನು ದಾಸೀಪುತ್ರನೆಂದು ಹೀಯಾಳಿಸಿದನೆಂಬ ವಾರ್ತೆ ಕೇಳಿ ಕ್ರುದ್ಧನಾದ ರಾಯನು ಗುಲ್ಬರ್ಗಗೆ ಸೈನ್ಯಸಮೇತ ಹೋಗಿ ಸುಲ್ತಾನ ನನ್ನು ಜಯಿಸಿ, ಅಲ್ಲಿ ತನ್ನ ನಂಬಿಕೆಯ ಸೇನಾನಿ ಗುಜ್ಜಾಲಿ ಕಲ್ಯಾಣರಾಯನನ್ನು ಸೈನ್ಯ ಸಮೇತ ಇರಿಸಿ ಅಲ್ಲಿಂದ ಕಳಿಂಗದತ್ತ ಹೊರಟನು.

ಕಳಿಂಗದ ಮೇಲೆ ದಂಡಯಾತ್ರೆ ಕೈಗೊಂಡ ಕೃಷ್ಣದೇವರಾಯನು ಕನ್ನಡದ ಮಹಾಸೈನ್ಯವನ್ನು ಮಿಂಚಿನಂತೆ ನಡೆಯಿಸಿ ಉದಯಗಿರಿಯನ್ನು ಮುತ್ತಿ ಸುಲಭವಾಗಿ ಅದನ್ನು ವಶಪಡಿಸಿಕೊಂಡು ಕೋಟೆಯ ಮೇಲೆ ಕನ್ನಡಸಾಮ್ರಾಜ್ಯದ ವರಾಹಧ್ವಜ ವನ್ನು ಹಾರಿಸಿದನು. ಪ್ರತಾಪರುದ್ರನು ನಾಲ್ಕೈದುಲಕ್ಷ ಸೈನಿಕರು ಗಜತುರಗಯುಕ್ತ ವಾದ ಸೈನ್ಯವನ್ನು ಸಜ್ಜುಗೊಳಿಸಿ ಬರುವುದರೊಳಗೆ ಉದಯಗಿರಿ ರಾಯನ ವಶ ವಾಗಿತ್ತು ! ಅನಂತರ ರಾಯನು ಕುಂದಕೂರು, ಕೊಂಡವೀಡುಗಳನ್ನು ಜಯಿಸಿದನು. ತರುವಾಯ ಕೊಂಡಪಲ್ಲಿಯನ್ನು ಗೆದ್ದನು. ಅಲ್ಲಿ ಉತ್ಕಲದ ಮಹಾರಾಣಿ, ರಾಜ ಕುಮಾರ ರಾಮಚಂದ್ರರು ಸೆರೆಸಿಕ್ಕಿದರು. ಅವರನ್ನು ವಿಜಯನಗರಕ್ಕೆ ಕಳುಹಿಸಿ, ಅಲ್ಲಿಂದ ಮಹಾಸೈನ್ಯದೊಡನೆ ಮುಂದುವರೆದು ಗಜಪತಿಯ ರಾಜಧಾನಿಯಾದ ಶ್ರೀಜಗನ್ನಾಥಪುರಿಯನ್ನು ವಶಪಡಿಸಿಕೊಂಡನು. ಈ ಮಹಾಯುದ್ಧದಲ್ಲಿ ಗಜಪತಿಗೆ ಸಹಾಯಮಾಡಲು ಸಿದ್ಧರಾಗಿದ್ದ ಹದಿನಾರು ಜನ ಸಮರ್ಥರಾದ ಮಹಾಪಾತ್ರರ ಸಹಾಯವು, ತಿಮ್ಮರಸನ ರಾಜತಂತ್ರನೈಪುಣ್ಯದಿಂದ ಗಜಪತಿಗೆ ದೊರಕದಂತಾಗಿ ರಾಯನಿಗೆ ಅದ್ಭುತವಿಜಯವು ಪ್ರಾಪ್ತವಾಯಿತು. ಸಮುದ್ರದಂತೆ ಭೋರ್ಗರೆಯುವ ಕನ್ನಡಸಾಮ್ರಾಜ್ಯದ ಮಹಾಸೈನ್ಯದ, ಹಾಗೂ ಕನ್ನಡವೀರರ ಪರಾಕ್ರಮದ ಮುಂದೆ ನಿಲ್ಲಲಾಗದೆ ಪ್ರತಾಪರುದ್ರಗಜಪತಿಯು ಸಂಪೂರ್ಣವಾಗಿ ಸೋತು ಶರಣಾಗತನಾದನು. ಮತ್ತು ರಾಯನೊಡನೆ ಸಂಧಿಮಾಡಿಕೊಂಡು ತನ್ನ ಮಗಳಾದ ಜಗನ್ಮೋಹಿನಿಯನ್ನು ಕೃಷ್ಣದೇವರಾಯನಿಗೆ ವಿವಾಹಮಾಡಿಕೊಟ್ಟು ಸ್ನೇಹ ಸಂಬಂಧವನ್ನು ಬೆಳೆಸಿದನು. ಈ ಅಪೂರ್ವ ದಿಗ್ವಿಜಯದಿಂದ ಕೃಷ್ಣದೇವರಾಯನ ಶೌರ್ಯಪರಾಕ್ರಮ, ಅಸಮ ಸಾಹಸ, ಸ್ನೇಹ-ಸೌಜನ್ಯ-ಔದಾರ್ಯಾದಿ ಸದ್ಗುಣಗಳು ಬೆಳಕಿಗೆ ಬಂದುದಲ್ಲದೆ ಕನ್ನಡ ಸೈನ್ಯವು ಅಜೇಯವೆನಿಸಿ ರಾಯನಿಗೆ ಅಪಾರ ಕೀರ್ತಿ ಪ್ರತಿಷ್ಠೆಗಳು ಲಬ್ಧವಾದವು. ಈ ಕಳಿಂಗವಿಜಯದ ಜ್ಞಾಪಕಾರ್ಥವಾಗಿ ರಾಯನು "ಗಜಪತಿ ಸಪ್ತಾಂಗಹರಣ" ಎಂದು ಬಿರುದು ಧರಿಸಿದನು.

o o o o o

ಪ್ರತಾಪರುದ್ರಗಜಪತಿಯನ್ನು ಗೆದ್ದು ಅವನ ಮಗಳು ಜಗನ್ಮೋಹಿನಿಯನ್ನು ಮದುವೆಯಾಗಿ ವಿಜಯಲಕ್ಷ್ಮೀ-ವಿಜಯ ವಧುಗಳೊಡನೆ ರಾಜಧಾನಿಗೆ ಹಿಂದಿರುಗಿದ ಕೃಷ್ಣದೇವರಾಯನನ್ನು ಸಮಸ್ತಪ್ರಜರು ಆನಂದೋತ್ಸಾಹಗಳಿಂದ ವೈಭವಪೂರ್ಣ

ವಾಗಿ ಸ್ವಾಗತಿಸಿದರು, ಒಂದು ತಿಂಗಳ ಕಾಲ ಸಾಮ್ರಾಜ್ಯದಲ್ಲಿ, ರಾಜಧಾನಿಯಲ್ಲಿ ವಿಜಯೋತ್ಸವವು ಆಚರಿಸಲ್ಪಟ್ಟಿತು.

ಇದೇ ಸಂದರ್ಭದಲ್ಲಿ ಕೃಷ್ಣದೇವರಾಯನು ವಿಜಯಸೂಚಕವಾಗಿ ಉದಯಗಿರಿಯಿಂದ ತಂದ ಮುದ್ದುಕೃಷ್ಣನನ್ನು ವಿದ್ಯಾನಗರದಲ್ಲಿ ಪ್ರತಿಷ್ಠಿಸಬಯಸಿ ಶ್ರೀವ್ಯಾಸತೀರ್ಥರಲ್ಲಿ ತನ್ನ ಮನದ ಹಂಬಲವನ್ನು ನಿವೇದಿಸಿದನು. ಶ್ರೀಗಳವರು ಸಂತೋಷದಿಂದ ಅವನನ್ನು ಪ್ರೋತ್ಸಾಹಿಸಿದರು. ರಾಯನು ಒಂದು ಸುಂದರ ದೇವಾಲಯ ಕಟ್ಟಿಸಿ ಶ್ರೀವ್ಯಾಸರಾಜರ ಯಾಜಮಾನ್ಯದಲ್ಲಿ ಒಂದು ಶುಭದಿನ ವೈಭವದಿಂದ ಶ್ರೀಕೃಷ್ಣಸ್ವಾಮಿಯ ಪ್ರತಿಷ್ಠಾಪನೆ ಮಾಡಿಸಿ ದೇವರ ಪೂಜಾರಾಧನೆಗಾಗಿ ಅನೇಕ ದತ್ತಿಗಳನ್ನು ಬಿಟ್ಟು ಹರ್ಷಿಸಿದನು.

ಶಾಲಿವಾಹನಶಕೆ ೧೪೩೬ನೇ ಭಾವಸಂವತ್ಸರದ ಫಾಲ್ಗುಣ ಶುಕ್ಲ ತದಿಗೆಯಂದು (ಕ್ರಿ.ಶ, 1514 AD) ವ್ಯಾಸರಾಜರುಗಳ ಅಪ್ಪಣೆಯಂತೆ ಶ್ರೀಕೃಷ್ಣಸ್ವಾಮಿಯ ಪೂಜೆಗೆ ಶ್ರೀವ್ಯಾಸತೀರ್ಥರ ಶಿಷ್ಯರೂ, ಪೂರ್ವಾಶ್ರಮ ವಂಶಬಂಧುಗಳೂ ಆದ ರಾಮಣ್ಣಾಚಾರ್ಯ ಮತ್ತು ಮುಳಬಾಗಿಲು ತಿಮ್ಮಣ್ಣಾಚಾರ್ಯರನ್ನು ಅರ್ಚಕರನ್ನಾಗಿ ನೇಮಿಸಿ ದಾನಶಾಸನ ಮಾಡಿಸಿದನು.[1] ಇದರಂತೆಯೇ ಅದೇ ದಿವಸ ಶ್ರೀ ದೇವರ ಪೂಜಾಕಾಲದಲ್ಲಿ ಪವಮಾನಾಭಿಷೇಕದ ಕೈಂಕರ್ಯಕ್ಕಾಗಿ ವಿದ್ಯಾವಂತರಾದ ಹನ್ನೆರಡು ಜನ ಮಾಧ್ವಬ್ರಾಹ್ಮಣರನ್ನು ವ್ಯವಸ್ಥೆಮಾಡಿ ದಾನಶಾಸನ ಮಾಡಿಸಿದನು.[2]

ವ್ಯಾಸಮುನೀಂದ್ರರು ಕೃಷ್ಣಸ್ವಾಮಿಯ ಪ್ರತಿಷ್ಠೆಯಾದಮೇಲೆ ಕುಂಭಾಭಿಷೇಕ ಮಾಡಿ ತತ್ವನ್ಯಾಸ, ಮಾತೃಕಾನ್ಯಾಸಾದಿಗಳಿಂದ ದೇವರ ವಿಶೇಷ ಸನ್ನಿಧಾನವು ಉಂಟಾಗುವಂತೆ ಪ್ರಾರ್ಥಿಸಿ ಸ್ತುತಿಸಿ.[3] ಅನಂತರ ಮಹಾಮಂಗಳಾರತಿಯನ್ನು ಬೆಳಗಿ

---

1. South Indian Inscription No. 254 (A.R. No. 25 of 1889)
2. " " " No. 255 (A.R. No. 26 of 1889)
3. ಕಂದನಿಗೆ ಕಾಲಿಲ್ಲವಮ್ಮ ಪುಟ್ಟಿ
ದಂದನಿಂದ ಈ ಅಂಬೆಗಾಲು ಬಿಡವಮ್ಮ ॥ ಪ ॥
ಎಂದು ಮುಂತಾಗಿ ಕೃಷ್ಣನನ್ನು ಸ್ತುತಿಸಿ ಕೊನೆಗೆ–
ಘನವಿಜಯ ಶ್ರೀಕೃಷ್ಣರಾಯಗೆ ನಿಮ್ಮ
ಹರವೇರಂಡವ ತೋರಬಂದ ಪರಿಯೋ ।
ಧರೆಗಧಿಕ ವಿದ್ಯಾನಗರವಳಿತೆಂದು ಉದಯ–
ಗಿರಿಯಿಂದ ಬಂದ ಮುದ್ದು ಬಾಲಕೃಷ್ಣನಿಗೆ ॥ ೨ ॥
ಎಂದು ಜಗತ್ತಿನಲ್ಲಿ ವಿದ್ಯಾನಗರವೇ ಶ್ರೇಷ್ಠವೆಂದು ತಿಳಿದು ಜಗದಿಗ್ವಿಜಯಿಯಾದ ಕೃಷ್ಣ
ದೇವರಾಯನಿಗೆ ತನ್ನ ...ಸೌಂದರ್ಯವನ್ನು ತೋರಲು ಉದಯಗಿರಿಯಿಂದ ಈ ಬಾಲ
ಕೃಷ್ಣ ಬಂದಿದ್ದಾನೆ ಎಂದು ವರ್ಣಿಸಿದ್ದಾರೆ.

ವಿಜಯನಗರ ಸಾಮ್ರಾಜ್ಯಕ್ಕೆ, ಕೃಷ್ಣದೇವರಾಯನಿಗೆ ಮಂಗಳವಾಗುವಂತೆ ಪ್ರಾರ್ಥಿಸಿ ಆಶೀರ್ವದಿಸಿದರು.

ಶ್ರೀಕೃಷ್ಣಸ್ವಾಮಿಯ ಪ್ರತಿಷ್ಠೆಯಾಗುವ ಮೊದಲೇ ಹಿಂದೆ ಶಾಲಿವಾಹನ ಶಕೆ ೧೪೩೫ನೇ ಶ್ರೀಮುಖಸಂ|| ಚೈತ್ರಶುಕ್ಲ ಪಂಚಮಿ ದಿವಸ (1513 AD) ರಾಯನು ವ್ಯಾಸರಾಜರ ಅಣತಿಯಂತೆ ವಿಜಯವಿಠಲ ದೇವರಗುಡಿಯ ಜೀರ್ಣೋದ್ಧಾರ ಮಾಡಿದ್ದಲ್ಲದೆ (ಮುಂದೆ ಒಂದು ಅದ್ಭುತ ಶಿಲ್ಪಕಲಾಚಾತುರ್ಯವನ್ನೂ ಸಂಗೀತದ ಸಪ್ತಸ್ವರಗಳನ್ನು ಹೊರಸೂಸುವ ಅನೇಕ ಸ್ತಂಭಗಳಿಂದ ಕಂಗೊಳಿಸುವ ಮುಖ ಮಂಟಪವೊಂದನ್ನು ಕರ್ನಾಟಕ ಸಂಗೀತ ಪಿತಾಮಹರೂ ದಾಸವರೇಣ್ಯರೂ ಆದ ಪುರಂದರದಾಸರಲ್ಲಿರುವ ಗೌರವದ್ಯೋತಕವಾಗಿ ಮುಂದೆ ನಿರ್ಮಿಸಿದನು), ನಿರ್ಮಾಣಮಾಡಿಸಿ ದೇವರ ವಿವಿಧ ಉತ್ಸವ, ನೈವೇದ್ಯ, ಪೂಜಾದಿಗಳಿಗಾಗಿ ಅನೇಕ ದತ್ತಿಗಳನ್ನು ಬಿಟ್ಟಿದ್ದಲ್ಲದೆ ತನ್ನ ಹೆಸರಿನಲ್ಲಿ ನಡೆಯುವ ಅನೇಕ ನೈವೇದ್ಯ ಸಮರ್ಪಣೆಗಳಲ್ಲಿ ತನ್ನ ಗುರುಗಳಾದ ವ್ಯಾಸರಾಜರಿಗೆ ಎರಡು ಪಾಲನ್ನು ಸಲ್ಲಿಸತಕ್ಕದೆಂದು ಶಿಲಾಶಾಸನ ಬರೆಸಿ ಗುರುಗಳಲ್ಲಿ ತನಗಿರುವ ಭಕ್ತಿಯನ್ನು ಪ್ರದರ್ಶಿಸಿದನು.[4]

ಕೃಷ್ಣದೇವರಾಯನು ಪ್ರತಾಪರುದ್ರಗಜಪತಿಯನ್ನು ಜಯಿಸಿದ ಜ್ಞಾಪಕಾರ್ಥ ಕ್ರಿ. ಶ. 1516ರಲ್ಲಿ ತನ್ನಿಬ್ಬರು ರಾಣಿಯರೊಡನೆ ತಿರುಪತಿಗೆ ಹೋಗಿ ತನ್ನ ಮತ್ತು ಇಬ್ಬರು ರಾಣಿಯರ ತಾಮ್ರಪ್ರತಿಮೆಗಳನ್ನು ಮಾಡಿಸಿ ಅದನ್ನು ಶ್ರೀನಿವಾಸ ದೇವರ ಗುಡಿಯಲ್ಲಿ ಇಡಿಸಿ, ದೇವರಿಗೆ ಅನೇಕ ಧನಕನಕಾಭರಣಗಳನ್ನು ಅರ್ಪಿಸಿ.ದತ್ತಿಗಳನ್ನು ಬಿಟ್ಟು, ವಿಜಯನಗರಕ್ಕೆ ಬಂದು ಶ್ರೀವಿರೂಪಾಕ್ಷಸ್ವಾಮಿಯ ಸನ್ನಿಧಿಯಲ್ಲಿ ಶಾಲಿವಾಹನ ಶಕೆ ೧೪೩೮ನೇ ಧಾತು ಸಂವತ್ಸರದ ಮಾರ್ಗಶಿರ ಶುಕ್ಲ ದ್ವಾದಶಿಯ ದಿನದಂದು (ಕ್ರಿ. ಶ, ಡಿಸಂಬರ-1516)"ಕೊಂಡವೀಡು" ವಿಜಯದ ಸ್ಮರಣಾರ್ಥವಾಗಿ ವ್ಯಾಸರಾಜರಿಗೆ ಅನೇಕ ದಾನಗಳನ್ನು, ದತ್ತಿಗಳನ್ನು ಸಮರ್ಪಿಸಿ ಕೃತಾರ್ಥನಾದನು.

ಕೃಷ್ಣದೇವರಾಯನು ತನಗೆ ಪಟ್ಟಾಭಿಷೇಕವಾದಮೇಲೆ ವ್ಯಾಸರಾಜಸ್ವಾಮಿಗಳವರ ಸಲಹೆ-ಮಾರ್ಗದರ್ಶನಗಳಂತೆ ಅನೇಕ ಅಭಿವೃದ್ಧಿಕಾರ್ಯಗಳನ್ನು ಪ್ರಾರಂಭಿಸಿ ಕ್ರಿ. ಶ. 1520ರ ಸುಮಾರಿಗೆ ರಾಜಧಾನಿಯು ಅನೇಕ ಕಲಾತ್ಮಕ ಸೌಧಗಳಿಂದಲೂ, ವಿವಿಧ ಶಿಲ್ಪಕಲಾಚಾತುರ್ಯ ಪ್ರದರ್ಶಕ ಗುಡಿ-ಗುಂಡಾರ-ಮಂದಿರ-ದೇವಪ್ರತಿಮಾದಿಗಳಿಂದಲೂ ಶೋಭಿಸುವಂತೆ ಮಾಡಿದನು. ಅನೇಕ ಸುಂದರವೂ ವಿಸ್ತಾರವೂ ಆದ ಉಪನಗರಗಳನ್ನೂ ಉದ್ಯಾನ, ಸರೋವರಾದಿಗಳನ್ನೂ ನಿರ್ಮಿಸಿದನು. ಇವುಗಳಲ್ಲಿ ವಿಜಯನಾರಸಿಂಹ,ಕಡಲೇಕಾಯಿಗಣಪತಿ,ಸಾಸುವೇಕಾಳುಗಣಪತಿ,ವೀರಭದ್ರ,

---

4. ಈ ಶಿಲಾಶಾಸನವು ಶ್ರೀವಿಜಯವಿಠಲದೇವರ ಗುಡಿಯ ದಕ್ಷಿಣಭಾಗದಲ್ಲಿರುತ್ತದೆ. ಈ ಶಾಸನದಲ್ಲಿ"....ವಿನಿಯೋಗ ನಾನಾವರ್ಗದ ನೈವೇದ್ಯ ಸವಗುರುವುಗಳು ವ್ಯಾಸರಾಯರಿಗೆ ಎರಡುಪಾಲು"ಎಂದು ನಮೂದಿಸಿರುವುದು ಗಮನಾರ್ಹವಾಗಿದೆ.

ಹಜಾರರಾಮಸ್ವಾಮಿ ದೇವಾಲಯ, ಮಾನವಮಿದಿಬ್ಬ, ವಿಜಯದಶಮಿ ದರ್ಬಾರು ಮಂದಿರ, ಭುವನವಿಜಯ, ವಿದ್ಯಾಸಭಾಮಂದಿರ, ಕಮಲಮಹಲು, ಆನೆಯಸಾಲು, ಒಂಟೆಯ ಸಾಲು, ಕೃಷ್ಣಸ್ವಾಮಿಗುಡಿ, ವಿಜಯವಿಠ್ಠಲನ ಗುಡಿ ಮುಂತಾದುವು ಕಲ್ಲಿನ ರಥಗಳು ಖ್ಯಾತಿಗಳಿಸಿವೆ. ವಿವಿಧ ವಿದ್ಯೆಗಳು, ಶಾಸ್ತ್ರಗಳು, ಸಂಗೀತ, ಸಾಹಿತ್ಯ, ನೃತ್ಯ,ಚಿತ್ರ, ಶಿಲ್ಪಕಲೆಗಳು ಉನ್ನತಿಯ ತುಟ್ಟತುದಿಯನ್ನು ಮುಟ್ಟಿದವು. ಸಂಸ್ಕೃತ, ಕನ್ನಡ, ತೆಲಗುಭಾಷೆಗಳಲ್ಲಿ ಅನೇಕ ಕಾವ್ಯಾದಿ ಸಾಹಿತ್ಯಗಳು ಅಪಾರವಾಗಿ ಬೆಳೆದವು. ಆಪೊಂದು ಕಾಲವು ಕನ್ನಡಸಾಮ್ರಾಜ್ಯದ ಸುವರ್ಣಯುಗವೆನಿಸಿತು. ಕೃಷ್ಣದೇವರಾಯ ಸ್ವತಃ ಕವಿ-ಸಾಹಿತಿ-ಗ್ರಂಥಕಾರನಾಗಿದ್ದನು. ಅಂತೆಯೇ ಅವನ ಕಾಲದಲ್ಲಿ ಅನೇಕ ಪ್ರಖ್ಯಾತ ಪಂಡಿತರು, ಜ್ಞಾನಿಗಳು, ಕವಿಗಳು, ಸಾಹಿತಿಗಳು, ಕಲೆಗಾರರು ಸನ್ಮಾನಿತರಾದರು. ಇವೆಲ್ಲದರಲ್ಲೂ ಶ್ರೀವ್ಯಾಸರಾಜರ ಪ್ರಭಾವವಿತ್ತು. ಜಗದ್ವಿಖ್ಯಾತರಾದ ಶ್ರೀವಿಜಯೀಂದ್ರರು, ಶ್ರೀವಾದಿರಾಜರು, ಶ್ರೀನಾರಾಯಣಯತಿಗಳು ಶ್ರೀಸುರೇಂದ್ರರು, ಕೃಷ್ಣಚೈತನ್ಯ, ವಲ್ಲಭಾಚಾರ್ಯರು. ಪಕ್ಷಧರಮಿಶ್ರ, ಗದುಗಿನ ನಾರಾಯಣಪ್ಪ, ಶ್ರೀಪುರಂದರದಾಸರು, ಶ್ರೀಕನಕದಾಸರು, ತಿಮ್ಮಣ್ಣಕವಿ ಕನ್ನಡದ ಧೂರ್ಜಟಿ, ತೆಲಗು ಕವಿಗಳೇ ಮುಂತಾದವರು ಮುಖ್ಯರು. ಹೀಗೆ ಕೃಷ್ಣದೇವರಾಯ ವ್ಯಾಸರಾಜರ ಮಾರ್ಗದರ್ಶನದಲ್ಲಿ, ಅವರ ಸಲಹೆಯಂತೆ ಮುನ್ನಡೆದು ಕನ್ನಡ ಸಾಮ್ರಾಜ್ಯದ ಸುವರ್ಣಯುಗಕ್ಕೆ ಕಾರಣನೆನಿಸಿ ಸಮಸ್ತ ಭಾರತದೇಶವ ಅಷ್ಟೇ ಏಕೆ ದೇಶ-ವಿದೇಶಗಳಲ್ಲಿಯೂ ಅಜರಾಮರ ಕೀರ್ತಿಗಳಿಸಿದನು.

o o o o o

ಕೃಷ್ಣದೇವರಾಯನು ಬಹಮನಿ ಸುಲ್ತಾನರನ್ನು ಅನೇಕಬಾರಿ ಪರಾಭವಗೊಳಿಸಿದ್ದರೂ ಕೈಬಿಟ್ಟು ಹೋಗಿದ್ದ ಕನ್ನಡನಾಡಿನ ಭಾಗಗಳಾಗಿದ್ದ ರಾಯಚೂರು-ಮುದ್ಗಲ್ ಪ್ರಾಂತ್ಯಗಳನ್ನು ಮತ್ತೆ ಸ್ವಾಧೀನಪಡಿಸಿಕೊಳ್ಳುವ ಕಾರ್ಯವಾಗಿರಲಿಲ್ಲ. ಅದೊಂದು ಚಿಂತೆ ರಾಯನಿಗಿದ್ದುದರಿಂದ ಈಗ ಆ ಕಾರ್ಯವನ್ನು ನೆರವೇರಿಸಲು ಅವನು ಉತ್ಸುಕನಾದನು. ಆದರೆ ಆಗ ರಾಯನ ಜಾತಕದ ಪ್ರಕಾರ ಗ್ರಹಗಳು ಕ್ರೂರವಾಗಿದ್ದು ಅವನಿಗೆ ಕಂಟಕವಿದ್ದು, ಅದೇ ಸಮಯದಲ್ಲಿ ಆಕಾಶದಲ್ಲಿ ಧೂಮಕೇತುವು ಕಾಣಿಸಿಕೊಂಡಿದ್ದಿತು. ಅದು ರಾಯನಿಗೆ ಬರಲಿರುವ ಕುಹಯೋಗದ ಪೂರ್ವಭಾವಿ ಸೂಚಕವಾಗಿದ್ದುದರಿಂದ ತಿಮ್ಮರಸು ಮುಂತಾದ ಆತ್ಮೀಯರು ರಾಯಚೂರು ದಿಗ್ವಿಜಯವನ್ನು ಒಂದೆರಡು ವರ್ಷಗಳವರೆಗೆ ಮುಂದುವರೆಸುವುದು, ಯುಕ್ತವೆಂದು ಭಾವಿಸಿ ವ್ಯಾಸರಾಯರಿಂದ ರಾಯನಿಗೆ ಹೇಳಿಸಲು ಗುರುಗಳಲ್ಲಿ ಸಾಮ್ರಾಟನೊಡನೆ ಬಂದರು.

ರಾಯನು ಗುರುಗಳಿಗೆ ನಮಿಸಿ "ಗುರುದೇವ ! ಹಿಂದೆ ನಿಮ್ಮ ಆಶೀರ್ವಾದ ಪಡೆದು ದಿಗ್ವಿಜಯ ಹೊರಟು ತಮ್ಮ ಅನುಗ್ರಹದಿಂದ ವಿಜಯಶಾಲಿಯಾಗಿ

ಬಂದನು. ಈಗಲೂ ನನ್ನ ರಕ್ಷಕರು ತಾವೇ ಆಗಿರುವುದರಿಂದ ತಮ್ಮ ಕಾರುಣ್ಯಾ ಶೀರ್ವಾದ ಬಲದಿಂದ ವಿಜಯವನ್ನು ಸಾಧಿಸುತ್ತೇನೆಂಬ ನಂಬಿಕೆ ನನಗಿದೆ. ತಾವು ಮಾತ್ರ ಹೃತ್ಪೂರ್ವಕವಾಗಿ ಈ ಶಿಷ್ಯನನ್ನು ಆಶೀರ್ವದಿಸಿ ಕೈಬಿಟ್ಟು ಹೋಗಿರುವ ರಾಯಚೂರು-ಮುದ್ಗಲ್ ಪ್ರಾಂತ್ಯಗಳನ್ನು ಮತ್ತೆ ಸಂಪಾದಿಸಿಕೊಂಡು ಬರಲು ಆಶೀರ್ವದಿಸಿ ಕಳಿಸಿಕೊಡಬೇಕು" ಎಂದು ಪ್ರಾರ್ಥಿಸಿದನು.

ಶ್ರೀವ್ಯಾಸರಾಜರು ಸಾಮ್ರಾಟನ ಬಿನ್ನಹವನ್ನಾಲಿಸಿ ಕ್ಷಣಕಾಲ ಧ್ಯಾನಮಗ್ನ ರಾಗಿದ್ದು ನಂತರ ನಸುನಗುತ್ತಾ, "ವತ್ಸ ! ನಿನ್ನ ಜಾತಕದ ಪ್ರಕಾರ ನಿನಗೆ ಕುಹ ಯೋಗದಿಂದ ಕಂಟಕವಿರುವುದು ನಿಜ. ಆ ಕುಹಯೋಗಕ್ಕೆ ಈಗಿನಿಂದಲೇ ಗ್ರಹ ಗಳು ತಮ್ಮ ದೃಷ್ಟಿಬೀರಿ ಕ್ರೂರವಾಗಿರುವಂತೆ ಕಂಡುಬರುತ್ತಿದೆ. ಇವೆಲ್ಲ ಮುಂಬರುವ ಅನಿಷ್ಟ ಸೂಚಕಗಳು. ಆದರೆ ಗ್ರಹಗಳನ್ನು ಸಾತ್ವಿಕ ಪೂಜಾ ರಾಧನೆ, ಜಪ ತಪ ಹೋಮಾದಿಗಳಿಂದ ಸಂತೋಷಪಡಿಸುವುದರಿಂದ ತಾತ್ಕಾಲಿಕ ಅನಿಷ್ಟ ನಿವೃತ್ತಿಯಾಗುವುದರಲ್ಲಿ ಸಂಶಯವಿಲ್ಲ. ಸಂಪೂರ್ಣ ಕುಹಯೋಗ ಬಂದಾಗ ಆ ಕಾಲದಲ್ಲಿ ಅದರ ವಿಚಾರ ಯೋಚಿಸೋಣ. ಈಗ ತಾತ್ಕಾಲಿಕ ಅನಿಷ್ಟ ನಿವೃತ್ತಿ, ಧೂಮಕೇತುವಿನಿಂದ ನಿನಗಾವ ಬಾಧೆ ಆಗದಂತೆ ಮಾಡಲು ನಾವು ಅನೇಕ ಹವನ ಹೋಮ, ಪೂಜಾ, ಜಪತಪಾದಿಗಳು ನೆರವೇರಲು ವ್ಯವಸ್ಥೆ ಮಾಡಿ ನಾವೂ ಸ್ವತಃ ನಿನ್ನ ಕ್ಷೇಮಕ್ಕಾಗಿ ತಪಸ್ಸನ್ನೆಸಗುತ್ತೇವೆ. ರಾಜೇಂದ್ರ! ಅಪಜಯವೆಂಬುದು ನಿನ್ನ ಹತ್ತಿರವೂ ಸುಳಿಯಲಾರದು. ನೀನು ಸರ್ವದಾ ವಿಜಯಶಾಲಿಯಾಗುವೆ, ನಿನ್ನೆಲ್ಲಾ ಆಪತ್ತುಗಳು ಪರಿಹಾರವಾಗಿ ಅಮೋಘವಿಜಯವನ್ನು ಸಾಧಿಸುತ್ತೀಯೇ" ಎಂದು ಫಲಮಂತ್ರಾಕ್ಷತೆಯಿತ್ತು ಆಶೀರ್ವದಿಸಿ ಕಳುಹಿಸಿದರು.

ಕೃಷ್ಣದೇವರಾಯ ಗುರುಗಳ ಅಭಯವಚನದಿಂದ ಹೃಷ್ಟಾಂತಕರಣನಾಗಿ, ಇಮ್ಮಡಿ ಉತ್ಸಾಹದಿಂದ ಮಹಾಸೈನ್ಯದೊಡನೆ ರಾಯಚೂರು ದಿಗ್ವಿಜಯ ಕೈಗೊಂಡು ವಿಜಯನಗರದಿಂದ ಹೊರಟನು.

ವ್ಯಾಸಮುನಿಗಳು, ವಿಜಯನಗರ, ತಿರುಪತಿ, ಕಂಚಿ, ಶ್ರೀರಂಗ, ರಾಮೇಶ್ವರ ಮುಂತಾದ ದೇವಸನ್ನಿಧಿಯಲ್ಲಿ ಕೃಷ್ಣದೇವರಾಯನ ಹೆಸರಿನಲ್ಲಿ ಅವನ ಕ್ಷೇಮಾಭ್ಯು ದಯಗಳಿಗಾಗಿ ಅಭಿಷೇಕ, ಉತ್ಸವ, ಪೂಜಾರಾಧನೆ, ಜಪ, ಪಾರಾಯಣ, ಹವನ ಹೋಮಾದಿಗಳು ಅವ್ಯಾಹತವಾಗಿ ಜರಗುವಂತೆ ವ್ಯವಸ್ಥೆ ಮಾಡಿದುದಲ್ಲದೆ ಸ್ವತಃ ವಿಶೇಷ ಜಪ-ತಪಪೂಜಾರಾಧನಾದಿಗಳನ್ನು ಮಾಡುತ್ತಾ ವಿಶೇಷ ಪ್ರಾರ್ಥನಾದಿ ಗಳನ್ನು ಮಾಡಹತ್ತಿದರು.

o o o o o

ಅಗಾಧ ಸೈನ್ಯದೊಡನೆ ಹೊರಟ ಕೃಷ್ಣದೇವರಾಯನು ರಾಯಚೂರುಕೋಟೆಗೆ ಮುತ್ತಿಗೆಹಾಕಿ ವಿಜಾಪುರದ ಇಸ್ಮಾಯಿಲ್ ಆದಿಲ್ ಷಹನೊಡನೆ ಘೋರಕಾಳಗಕ್ಕಿಳಿ ದನು. ರಾಯಚೂರುಕೋಟೆಗಾಗಿ ಬಹುಮುಖವಾಗಿ ಯುದ್ಧವು ನಡೆಯಿತು. ರಾಯನ

ಜಾತಕದಂತೆ ಗ್ರಹಗಳು ಕ್ರೂರವಾಗಿದ್ದು ಕುಹಯೋಗದ ಪೂರ್ವಭಾವಿ ಅನಿಷ್ಟ ಘಟನೆಗಳು ಸಂಭವಿಸುವ ಭಯವಿದ್ದಿತು. ಆದರೆ ವ್ಯಾಸರಾಜರು ನೆರವೇರಿಸಿದ ಪೂಜಾ, ಹವನ ಹೋಮ-ಜಪತಪಾದಿಗಳ ಪ್ರಭಾವದಿಂದ ಬಂದಿದ್ದ ವಿಪತ್ತು ಪರಿಹಾರವಾಗಿ ಧೂಮಕೇತುವಿನ ಅನಿಷ್ಟಫಲವು ವಿಜಾಪುರದ ಆದಿಲ್‌ಷಹನಿಗೇ ಉಂಟಾಗುವಂತಾಯಿತು. ಅವ್ಯಾಹತವಾಗಿ ಜರುಗಿದ ಘೋರರಕದನದಿಂದಾಗಿ ರಾಯ ಚೂರು ಕೋಟೆ ಮತ್ತು ಆ ಪ್ರಾಂತ್ಯವು ರಾಯನ ವಶವಾಯಿತು. ವಿಜಾಪುರದಸೈನ್ಯ ಕನ್ನಡಸಾಮ್ರಾಜ್ಯದ ಸೈನ್ಯವನ್ನೆದುರಿಸಲಾರದೆ ದಿಕ್ಕಾಪಾಲಾಗಿ ಓಡಿಹೋಯಿತು. ಇಸ್ಮಾಯಿಲ್ ಆದಿಲ್‌ಷಹನು ಸಂಪೂರ್ಣವಾಗಿ ಸೋತು ರಾಯನೊಡನೆ ಸಂಧಿ ಮಾಡಿಕೊಂಡು ರಾಯಚೂರು ಪ್ರಾಂತ್ಯವನ್ನು ಒಪ್ಪಿಸಿದನು. ರಾಯನಿಗೆ ಬಂದಿದ್ದ ಆಪತ್ತು ಪರಿಹಾರವಾಗಿ ಅಸಾಧಾರಣ ವಿಜಯವು ಪ್ರಾಪ್ತವಾಯಿತು. ಅನಂತರ ರಾಯನು ಕಲಿತನದಿಂದ ಹೋರಾಡಿ ಮುದ್ಗಲ್ ಪ್ರಾಂತ್ಯವನ್ನೂ ವಶಪಡಿಸಿ ಕೊಂಡನು. ಎಲ್ಲೆಡೆ ವಿಜಯಲಕ್ಷ್ಮಿಯು ರಾಯನಿಗೆ ವಿಜಯಮಾಲೆ ಹಾಕಿದಳು !

ಇದೇ ಸಮಯದಲ್ಲಿ ಗುಲ್ಬರ್ಗದ ಆಡಳಿತಗಾರನಾಗಿದ್ದ ಅಮೀರ್ ಬರೀದನು ಇಮ್ಮಡಿ ಸುಲ್ತಾನ್ ಅಹಮದ್‌ಷಹನು ಮೃತನಾದ್ದರಿಂದ ಅವನ ಪುತ್ರರು ಸಣ್ಣ ವಯಸ್ಸಿನವರಾಗಿದ್ದುದರಿಂದ ಗುಲ್ಬರ್ಗಾಕ್ಕೆ ತಾನೇ ಸುಲ್ತಾನನಾಗಲು ಹೊಂಚು ಹಾಕುತ್ತಿದ್ದನು. ಈ ವಿಚಾರವನ್ನು ರಾಜಕುಮಾರ ಅಲ್ಲಾವುದ್ದೀನನು ಆತ್ಮೀಯರೊಡನೆ ಕೃಷ್ಣದೇವರಾಯನಿಗೆ ಹೇಳಿಕಳಿಸಿ ತನಗೆ ಸಹಾಯಮಾಡಲು ಕೋರಿದನು. ರಾಯನು ಸಿಂಹಾಸನಕ್ಕೆ ನಿಜವಾದ ವಾರಸುದಾರನಾದ ರಾಜಕುಮಾರ ಅಲ್ಲಾವುದ್ದೀನನಿಗೆ ಪಟ್ಟಕಟ್ಟಬೇಕೆಂದೂ, ವಿರುದ್ಧವಾಗಿ ನಡೆದಲ್ಲಿ ತಾನು ಸೈನ್ಯದೊಡನೆ ಬಂದು ಆ ಕಾರ್ಯ ನಿರ್ವಹಿಸುವುದಾಗಿಯೂ ಬರೀದನಿಗೆ ಹೇಳಿಕಳುಹಿಸಿ ಅಗಾಧ ಸೈನ್ಯದೊಡನೆ ಗುಲ್ಬರ್ಗೆಯತ್ತ ತೆರಳಿದನು. ಇದರಿಂದ ಬರೀದನು ಬೆದರಿದನು. ಕೃಷ್ಣದೇವರಾಯನು ಸೈನ್ಯಸಮೇತನಾಗಿ ಗುಲ್ಬರ್ಗೆಗೆ ಬರುವವೇಳೆಗೆ ಬರೀದನು ಪಟ್ಟಾಭಿಷೇಕಕ್ಕೆ ವ್ಯವಸ್ಥೆಮಾಡಿದ್ದಲ್ಲದೆ ರಾಯನನ್ನು ವಿನಯಪೂರ್ವಕವಾಗಿ ಸ್ವಾಗತಿಸಿದನು. ಕೃಷ್ಣದೇವರಾಯನು ಇಮ್ಮಡಿ ಅಹಮದ್‌ಷಹನ ಮಗನಾದ ಅಲ್ಲಾವುದ್ದೀನನಿಗೆ ಸುಲ್ತಾನನೆಂದು ಪಟ್ಟಾಭಿಷೇಕಮಾಡಿಸಿದನು. ಇದರಿಂದ ಸಂತುಷ್ಟನಾದ ಅಲ್ಲಾವುದ್ದೀನನು ರಾಯನ ಸ್ನೇಹವು ಶಾಶ್ವತವಾಗಿರಬೇಕೆಂದು ಕೋರಿ ಅವನೊಡನೆ ಸ್ನೇಹಸಂಬಂಧವನ್ನು ಬೆಳೆಸಿ ರಾಯನಿಗೆ "ಯವನರಾಜ್ಯ ಸ್ಥಾಪನಾಚಾರ್ಯ" ಎಂಬ ಬಿರುದುಬಾವಲಿಗಳನ್ನೂ ಕಾಣಿಕೆಗಳನ್ನೂ ಅರ್ಪಿಸಿ ತನ್ನ ಕೃತಜ್ಞತೆಯನ್ನು ಪ್ರದರ್ಶಿಸಿದನು,

ಹೀಗೆ ರಾಯನು ಮಹಾವಿಜಯ-ಗೌರವ ಪ್ರಶಸ್ತಿಗಳನ್ನು ಗಳಿಸಿ ವಿಜಯನಗರಕ್ಕೆ ಬಂದನು. ಬಹುವರ್ಷಗಳಿಂದ ಕೈತಪ್ಪಿಹೋಗಿದ್ದ ನಾಡಿನ ಭಾಗವಾದ

ರಾಯಚೂರು ಮುದ್ಗಲ್ ಪ್ರಾಂತ್ಯಗಳನ್ನು ಮತ್ತೆ ಸಂಪಾದಿಸಿಕೊಂಡುಬಂದ ರಾಯನನ್ನು ಸಮಸ್ತ ರಾಜಧಾನಿಯು ಪ್ರಜಾವರ್ಗ ಪ್ರಚಂಡಜಯಕಾರದಿಂದ ಸ್ವಾಗತಿಸಿತು.

ಕೃಷ್ಣದೇವರಾಯನು ರಾಣಿಯರೊಡಗೂಡಿ ರಾಜಗುರು ಶ್ರೀವ್ಯಾಸರಾಜರ ಸನ್ನಿಧಿಗೆ ಬಂದು ಸಾಷ್ಟಾಂಗವೆರಗಿ-"ಗುರುವರ್ಯ, ತಮ್ಮ ತಪಸ್ಸು, ಆಶೀರ್ವಾದ ಫಲಿಸಿತು. ತಮ್ಮ ಭವಿಷ್ಯ ಸತ್ಯವಾಯಿತು. ನನ್ನ ಈ ಎಲ್ಲ ವಿಜಯ-ಅಭ್ಯುದಯಗಳಿಗೆ ತಾವೇ ಕಾರಣರು. ತಮ್ಮ ಕರುಣೆಯ ಕಂದನಾದ ನನ್ನನ್ನು ಯಾವಾಗಲೂ ಇದೇ ರೀತಿ ಅನುಗ್ರಹಿಸುತ್ತಿರಬೇಕು" ಎಂದು ಪ್ರಾರ್ಥಿಸಿದನು.

ಕೃಷ್ಣದೇವರಾಯನ ವಿಜಯದಿಂದ ಅತೀವ ಮುದಗೊಂಡ ವ್ಯಾಸರಾಜಗುರುವರ್ಯರು ರಾಯನ ಧೈರ್ಯ-ಸಾಹಸ, ಅಸಮ ವಿಕ್ರಮಗಳನ್ನು ಕೊಂಡಾಡಿದರು. ರಾಯನು ಹರ್ಷಪುಳಕಿತಗಾತ್ರನಾಗಿ ಗುರುಗಳ ಆಶೀರ್ವಾದ ಪಡೆದು ಅರಮನೆಗೆ ತೆರಳಿದನು.

o o o o o

## ೪೪. ಸ್ವರ್ಣಭಂಡಾರಿಗಳು ಭಕ್ತಿಭಂಡಾರಿಗಳಾದರು !!

ಪಾವನವಾದ ಸಾತ್ವಿಕಾನ್ವಯದ ಸ್ವರ್ಣಭಂಡಾರಿ (ಚಿನ್ನಭಂಡಾರಿ) ಮನೆತನವು ಸಕಲವಿದ್ಯೆ, ಶಾಸ್ತ್ರ, ಸಂಗೀತ, ಸಾಹಿತ್ಯ, ಕಲೆ, ಶೌರ್ಯೌದಾರ್ಯ, ಸದಾಚಾರ, ಶೀಲಾದಿ ಸದ್ಗುಣಗಳಿಗೆ ಮಾತೃಸ್ಥಾನವಾಗಿತ್ತು. ಈ ಮನೆತನದವರಲ್ಲಿ ಭಾರದ್ವಾಜ ಗೋತ್ರದವರಾದ ಢುಂಡಿರಾಜರು ದೇವಗಿರಿ ಯಾದವರ ಆಶ್ರಯದಲ್ಲಿ ಜಮಖಂಡಿ ಪ್ರಾಂತ್ಯದ ಮಾಂಡಲಿಕರಾಗಿದ್ದರು. ಅವರಿಗೆ ನರಹರಿನಾಯಕ, ಕೃಷ್ಣಪ್ಪನಾಯಕ ಮತ್ತು ರಘುನಾಥನಾಯಕರೆಂಬ ಮೂವರು ಪುತ್ರರು, ಈರ್ವರು ಪುತ್ರಿಯರಿದ್ದರು. ರಘುನಾಥನಾಯಕರು ಸಂಸಾರದ ಅಸಾರತೆಯನ್ನರಿತು ವಿರಕ್ತರಾಗಿ ಶ್ರೀಅಕ್ಷೋಭ್ಯತೀರ್ಥರಿಂದ ಸನ್ಯಾಸಪಡೆದು ಶ್ರೀಜಯತೀರ್ಥರೆಂಬ ಹೆಸರಿನಿಂದ ಖ್ಯಾತರಾಗಿ ಶ್ರೀಮದಾಚಾರ್ಯರ ಸಮಗ್ರಗ್ರಂಥಗಳಿಗೆ ಟೀಕೆಗಳನ್ನು ರಚಿಸಿ ಜಗನ್ಮಾನ್ಯರಾದವರು. ಇವರ ಸಹೋದರಿ ಭಾರತೀದೇವಿಯನ್ನು ಬನ್ನೂರಿನ ಪ್ರಾಂತ್ಯಾಧಿಪತಿ ವಲ್ಲಭದೇವನಿಗೆ (ಶ್ರೀವ್ಯಾಸರಾಜರ ಮುತ್ತಾತ) ಕೊಟ್ಟು ಲಗ್ನವಾಗಿತ್ತು. ರಘುನಾಥನಾಯಕರ ಸಹೋದರರಾದ ಕೃಷ್ಣಪ್ಪನಾಯಕರಿಗೆ ವರದಪ್ಪನಾಯಕರೆಂಬ ಪುತ್ರರಿದ್ದರು. ಅವರ ಮೊಮ್ಮಕ್ಕಳು ಕೃಷ್ಣಪ್ಪನಾಯಕರು. ಇವರ ಪುತ್ರರೇ ವರದಪ್ಪನಾಯಕರು. ಇವರಿಗೆ ವಿಠಲನಾಯಕರೆಂದೂ ಹೆಸರಿತ್ತು. ಇವರನ್ನು ಕೃಷ್ಣಪ್ಪನಾಯಕರು ತಮ್ಮ ಪತ್ನಿಯ ಬಂಧುಗಳೂ, ಸಾತ್ವಿಕರೂ, ಮಹಾಶ್ರೀಮಂತರೂ ಆಗಿದ್ದ ವಸಿಷ್ಠ ಗೋತ್ರದ ಕೃಷ್ಣನಾಯಕರಿಗೆ ದತ್ತಕಕೊಟ್ಟಿದ್ದರು.

ಈ ವರದಪ್ಪ (ವಿಠಲ)ನಾಯಕರು ದತ್ತಕ ತಂದೆಯ ಮರಣಾನಂತರ ಕರ್ನಾಟಕ ಸಾಮ್ರಾಜ್ಯಕ್ಕೆ ಸೇರಿದ್ದ ಶಿವಮೊಗ್ಗೆಯ ತೀರ್ಥಹಳ್ಳಿ ತಾಲ್ಲೂಕಿಗೆ ಸೇರಿದ್ದ ಪುರಂ

ದರಪುರದಲ್ಲಿ.(ಪುರಂದರಗಾಯುಲಯ) ವಾಸಿಸಲಾರಂಭಿಸಿದರು. ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ಪ್ರಾಂತ್ಯ ಆಗ ವಿಶೇಷವಾಗಿ ಹಾಪ್ಪಿಕ ವಂಶೀಯರಿಂದ ಕಂಗೊಳಿಸಿತ್ತು. ರತ್ನಪಡಿವ್ಯಾಪಾರ ಅವರ ಉದ್ಯಮವಾಗಿತ್ತು. ಮಹಾಶ್ರೀಮಂತರಾದ ಇವರನ್ನು ಜನ ಗೌರವಿಸುತ್ತಿದ್ದರು.

ಕೆಲಕಾಲಾನಂತರ ವರದಪ್ಪನಾಯಕರು ಶ್ರೀಪಾದರಾಜರು ಮತ್ತು ಕುಲಗುರುಗಳಾದ ಶ್ರೀವ್ಯಾಸರಾಜರ ಅನುಗ್ರಹಕ್ಕೆ ಪಾತ್ರರಾಗಿದ್ದು ಅವರ ಮೂಲಕ ಕನ್ನಡ ಚಕ್ರವರ್ತಿಗಳ ಪರಿಚಯ, ವಿಶ್ವಾಸಗಳು ಬೆಳೆದು ವರದಪ್ಪನಾಯಕರ ವ್ಯಾಪಾರೋದ್ಯಮ ಕನ್ನಡ ರಾಜಧಾನಿ,ಮತ್ತಿತರ ಪ್ರಮುಖ ನಗರಗಳಿಗೂ ಹರಡಿತು. ವರದಪ್ಪ ನಾಯಕರು ಸಾಳುವ ನರಸಿಂಹ, ಮತ್ತೆ ಮುಂದೆ ತಮ್ಮರಾಯ, ನರಸನಾಯಕಾದಿ ಚಕ್ರವರ್ತಿಗಳಿಗೆ ಆಪ್ತರೆನಿಸಿ ಸಾಮ್ರಾಜ್ಯದ ಯುದ್ಧ, ಅಭಿವೃದ್ಧಿಕಾರ್ಯಗಳಿಗೆ ವಿಶೇಷ ಧನಸಹಾಯ ಮಾಡುತ್ತಿದ್ದರು. ಸ್ವಲ್ಪಕಾಲದಲ್ಲೇ ಅವರು ಸಾಮ್ರಾಜ್ಯದ ಸ್ವರ್ಣಭಂಡಾರಿಗಳೆಂದೇ ವಿಖ್ಯಾತರಾದರು.

ವರದಪ್ಪನಾಯಕರು ಹೀಗೆ ಕೀರ್ತಿ-ಗೌರವ-ಸಿರಿ-ಸಂಪತ್ತುಗಳಿಂದ ರಾಜಿಸುತ್ತಿದ್ದರೂ ಅವರಿಗೆ ಬಹುವರ್ಷಗಳಾದರೂ ಪುತ್ರಸಂತಾನವಿಲ್ಲದ್ದರಿಂದ ಚಿಂತೆಗೊಳಗಾದರು. ಕೊನೆಗೆ ಕುಲದೇವನಾದ ತಿರುಪತಿಯ ಶ್ರೀನಿವಾಸನ ಸೇವೆಮಾಡಿ ಅವನ ವರ ಪ್ರಸಾದದಿಂದ ಶಾಲಿವಾಹನಶಕೆ ೧೪೦೬ರಲ್ಲಿ(ಕ್ರಿ.ಶ. 1484) ಓರ್ವ ಸುಪುತ್ರನನ್ನು ಪಡೆದರು. ಶ್ರೀನಿವಾಸದೇವರ ವರದಿಂದ ಜನಿಸಿದ ಮಗನಿಗೆ ಶ್ರೀನಿವಾಸನಾಯಕ ನೆಂದೇ ನಾಮಕರಣ ಮಾಡಿದರು. ವೈದಿಕಸಂಸ್ಕಾರೋಕ್ತ ಕ್ರಮದಲ್ಲಿ ಅವನಿಗೆ ಜಾತ ಕರ್ಮ, ನಾಮಕರಣ. ಅನ್ನಪ್ರಾಶನ, ಚೌಲ, ಅಕ್ಷರಾಭ್ಯಾಸಾದಿಗಳನ್ನು ಕಾಲಕಾಲಕ್ಕೆ ವೈಭವದಿಂದ ನೆರವೇರಿಸಿದ ವರದಪ್ಪನಾಯಕರು ಮಗನಿಗೆ ಗರ್ಭಾಷ್ಟಮದಲ್ಲಿ ಉಪನಯನವನ್ನು ಜರುಗಿಸಿ ಸಕ್ರಮವಾಗಿ ವಿದ್ಯಾಭ್ಯಾಸ ಮಾಡಿಸಿದರು. ಬಾಲ್ಯದಿಂದಲೂ ತೀಕ್ಷ್ಣಮತಿಯೂ ಪ್ರತಿಭಾಸಂಪನ್ನನೂ ಆದ ಶ್ರೀನಿವಾಸನಾಯಕನ ಒಲವು ವಿದ್ಯೆಯ ಕಡೆಗೆ ಹರಿದಿತ್ತು. ಸಂಸ್ಕೃತ, ಕನ್ನಡ, ಪಾರಸೀ ಮುಂತಾದ ಭಾಷೆಗಳಲ್ಲಿ ಪಾರಂಗತ ನಾದುದಲ್ಲದೆ,ವೇದ,ಉಪನಿಷತ್ತು, ಕಾವ್ಯ, ನಾಟಕ, ಅಲಂಕಾರಾದಿಸಾಹಿತ್ಯ ನ್ಯಾಯ ವೇದಾಂತಾದಿಶಾಸ್ತ್ರಗಳು, ಸಂಗೀತ ಮತ್ತಿತರ ಕಲೆಗಳಲ್ಲಿ ಅಸಾಧಾರಣ ಪರಿಣತಿಯನ್ನು ಪಡೆದನು. ಸಂಗೀತ ಅವನಿಗೆ ಹುಟ್ಟಿನಿಂದಲೇ ಒಲಿದುಬಂದ ಸ್ವತ್ತಾಗಿತ್ತು.

ಶಾಂತ್ಯಾದಿಗುಣಮಂಡಿತನಾಗಿದ್ದ ಶ್ರೀನಿವಾಸನಾಯಕ ಐಹಿಕಕಾರ್ಯರಂಗದಿಂದ ದೂರನಾಗಿದ್ದ. ಭಗವಂತನಲ್ಲಿ ಅವನಿಗೆ ಸ್ವಾಭಾವಿಕ ಭಕ್ತಿಶ್ರದ್ಧೆಗಳಿದ್ದವು. ಸರ್ವದಾ ಸುಮಧುರಕಂಠದಿಂದ ಭಗವಂತನ ಮಹಿಮಾದಿಗಳನ್ನು ಹಾಡುತ್ತಾ ಮೈ ಮರೆಯುತ್ತಿದ್ದ. ಶ್ರೀನಿವಾಸನಾಯಕನ ವಿದ್ಯಾಭ್ಯಾಸ ಮುಗಿದೊಡನೆ ವರದಪ್ಪ ನಾಯಕರು ಅವನಿಗೆ ಸತ್ಕುಲಪ್ರಸೂತಳೂ, ಸಂಗೀತ ಸಾಹಿತ್ಯರಸಿಕಳೂ, ಸದ್ಗುಣ

ಮಂಡಿತಳೂ ಆದ "ಸರಸ್ವತಿ" ಎಂಬ ಕನ್ಯೆಯನ್ನು ತಂದುಕೊಂಡು ವಿವಾಹವನ್ನು ನೆರವೇರಿಸಿದರು ಶ್ರೀನಿವಾಸನಾಯಕನ ಸಾಂಸಾರಿಕಜೀವನದಲ್ಲಿ ಪದಾರ್ಪಣಮಾಡಿದ.

*ವರದಪ್ಪ (ವಿಠಲ) ನಾಯಕರು ಪಾರಮಾರ್ಥಿಕ ವಿದ್ಯಾಪಾರಂಗತನಾದ ಮಗನು ತಮ್ಮಂತೆಯೇ ಲೌಕಿಕಕಾರ್ಯಧುರಂಧರನಾಗಿ ತಮ್ಮ ಕಸುಬಿನಲ್ಲಿ ಪರಿಣತ ನಾಗಬೇಕೆಂದು ಬಯಸಿ ಹೇರಳವಾಗಿ ಹೊನ್ನಿತ್ತು ವ್ಯಾಪಾರಮಾಡಲು ಹೇಳಿದರು. ಲೌಕಿಕದಿಂದ ದೂರವಾಗಿ,ಜಿತೇಂದ್ರಿಯನಾಗಿ ಭಗವನ್ನಿಷ್ಠಬುದ್ಧಿಯುಳ್ಳ ಶ್ರೀನಿವಾಸ ನಾಯಕನಿಗೆ ತಂದೆಯ ಆದೇಶ ಅಷ್ಟಾಗಿ ಹಿಡಿಸಲಿಲ್ಲ. ತಂದೆಯು ಕೊಟ್ಟ ಹೊನ್ನನ್ನು ಸಾತ್ವಿಕ ವಿಪ್ರರಿಗೆ ದಾನಮಾಡಿಬಿಟ್ಟ!ಇದರಿಂದ ತಂದೆಗೆ ಬೇಸರವಾದರೂ ಮಗನಿಗೆ ಬುದ್ಧಿಹೇಳಿ ಮತ್ತೆ ವ್ಯಾಪಾರಮಾಡಲು ದ್ರವ್ಯವನ್ನು ನೀಡಿದರು. ಶ್ರೀನಿವಾಸ ನಾಯಕ ಅದನ್ನೂ ಬ್ರಾಹ್ಮಣರಿಗೆ ದಾನಮಾಡಿದ. ಹೀಗೆ ಕೆಲಬಾರಿ ನಡೆಯಿತು. ಮಗದಾರಿಗೆ ಬರಲಿಲ್ಲ. ಬುದ್ಧಿವಾದ ವ್ಯರ್ಥವಾಯಿತು. ಕೊನೆಗೆ ವರದಪ್ಪನಾಯಕರು ಬೇಸತ್ತು ಕೋಪದಿಂದ ಮಗನನ್ನು ಆವೂರಿನಲ್ಲಿದ್ದ ಶ್ರೀದೇವರ ಗುಡಿಯ ಕಂಬಕ್ಕೆ ಕಟ್ಟಿ ಹಾಕಿಸಿ ಗುಡಿಯ ಬಾಗಿಲು ಹಾಕಿಸಿಬಿಟ್ಟರು !

ಇಂದ್ರಿಯಗಳನ್ನು ಜಯಿಸಿ ದೇಹಾಭಿಮಾನವನ್ನೇ ತೊರೆದ ಮಹನೀಯರು ಹಸಿವು-ಬಾಯಾರಿಕೆಗಳನ್ನು ಲೆಕ್ಕಿಸುವರೇ? ಬಾಹ್ಯವ್ಯಾಪಾರ ವರ್ಜಿತನಾಗಿಅಂತರ್ಮು ಖಿಯಾದ ಶ್ರೀನಿವಾಸನಾಯಕಹೃದಯಪೀಠದಲ್ಲಿ ಶ್ರೀಹರಿಯನ್ನು ಪ್ರತಿಷ್ಠಾಪಿಸಿ ಜಗದೀಶನ ಪಾದಕಮಲದಲ್ಲಿ ಮನಸ್ಸುನಿಲ್ಲಿಸಿ, ಧ್ಯಾನಾಸಕ್ತನಾದ. ಒಂದು ದಿನ ವಾಯಿತು, ದಿನಗಳುರುಳಿದವು.ತಂದೆ ಬಾಗಿಲುತೆಗೆಸಿ ಮಗನನ್ನು ನೋಡು ಬರಲಿಲ್ಲ. ಅಶಾಶ್ವತವಾದ ದೇಹವನ್ನುಕೊಟ್ಟ ತಂದೆಯು ಕರುಣೆದೋರದಿದ್ದರೆ, ಸಕಲಚರಾಚರ ಪ್ರಪಂಚಕ್ಕೂ ಒಡೆಯನಾದ, ಎಲ್ಲರಿಗೂ ತಂದೆಯಾದ ಭಗವಂತ ಸುಮ್ಮನಿರಲು ಸಾಧ್ಯವೇ?ಭಕ್ತರ ಕಷ್ಟಕಾರ್ಪಣ್ಯಗಳನ್ನುಕಂಡು ಮನಕರಗುವ ಮಹಾಪ್ರಭು ಲಕ್ಷ್ಮೀ ಸಹಿತನಾಗಿ ಸುವರ್ಣತಾಂಬಾಣದಲ್ಲಿ ಪಕ್ವಾನ್ನಗಳನ್ನಿರಿಸಿಕೊಂಡುಬಂದು ಶ್ರೀನಿವಾಸ ನಾಯಕನಿಗೆ ತನ್ನ ಅಲಭ್ಯದರ್ಶನವಿತ್ತು ತಾಂಬಾಣವನ್ನು ಅವನ ಮುಂದಿರಿಸಿ ತಾಯಿಯು ಮಕ್ಕಳನ್ನು ಸಂತೈಸಿ,ರಮಿಸುವಂತೆ ನಾಯಕನ ಮೈದಡವಿ, ಶಿರಸ್ಸನ್ನು, ಆಘ್ರಾಣಿಸಿ ಮೃದು ಮಧುರಧ್ವನಿಯಿಂದ"ಕುಮಾರ! ಇಕೋ ನೋಡು, ನಿನಗಾಗಿ ಭೋಜನ ತಂದಿರುವೆ-ಊಟಮಾಡಪ್ಪ"ಎಂದನು. ಭಗವಂತನ ದೃಷ್ಟಿವಿಕ್ಷೇಪಮಾತ್ರ

---

* ಶ್ರೀಪುರಂದರದಾಸರ ಜೀವನದ ಮೊದಲ ಕೆಲ ಘಟನೆಗಳ ಮೇಲೆ ಬೆಳಕುಚೆಲ್ಲುವ ಹಲ ಕೆಲ ವಿಷಯಗಳು ಶ್ರೀ ದಾಸರಾಯರ ಮಕ್ಕಳಾದ "ಶ್ರೀಗುರುಪುರಂದರವಿಠ"ರ ಪದ ದಿಂದ ವ್ಯಕ್ತವಾಗುವುದು. ಇಲ್ಲಿ ನಾವು ಗುರುಪುರಂದರವಿಠಲರು ರಚಿಸಿರುವ "ದಾಸರು ಜನ್ಮ ಪಡೆದ ವಿಸ್ತಾರವನು ಕೇಳಿ" ಎಂಬ ಕೃತಿಯಲ್ಲಿ ನಿರೂಪಿಸಿದ ಕಥಾಭಾಗವನ್ನು ಚಿತ್ರಿಸಿದ್ದೇವೆ.

—ಗ್ರಂಥಕರ್ತ.

ದಿಂದ ಕಟ್ಟಿದ್ದ ಹಗ್ಗಗಳು ಬಿಚ್ಚಿಹೋದವು! ನಾಯಕ ಬಂಧಮುಕ್ತನಾದ. ಸಾಕ್ಷಾತ್ ಲಕ್ಷ್ಮೀನಾರಾಯಣರ ದರ್ಶನದಿಂದ ಆನಂದತುಂದಿಲನಾದ ನಾಯಕನು ಆ ಪುರಾಣ ಪುರುಷನಿಗೆ ಸಾಷ್ಟಾಂಗವೆರಗಿ, ಭಕ್ತಿಪರವಶನಾಗಿ ಆನಂದಬಾಷ್ಪ ಸುರಿಸುತ್ತಾ ಭಗವಂತನನ್ನು ಬಗೆಬಗೆಯಿಂದ ಸ್ತುತಿಸಿ 'ದೇವ! ನೀನುಣ್ಣದೆ ನಾನೆಂತು ಊಟಮಾಡಲಿ? ಎಂದು ವಿಜ್ಞಾಪಿಸಲು ಭಕ್ತಾಧೀನನೂ ಕಾರುಣ್ಯಮೂರ್ತಿಯೂ ಆದ ಶ್ರೀಹರಿಯು ಶ್ರೀ-ಭೂ-ದುರ್ಗಾಸಮೇತನಾಗಿ ಭೋಜನಮಾಡಲಾರಂಭಿಸಿದನು! ಗಂಗೆ ಮೊದಲಾದ ದೇವತಾಸ್ತ್ರೀಯರು ಬಂಗಾರದ ತಂಬಿಗೆಯಲ್ಲಿ ನೀರು ಒಡಿಸಿ ಚಾಮರದಿಂದ ಗಾಳಿ ಹಾಕುತ್ತಿದ್ದರು. ಪ್ರಭು ಭುಜಿಸಿದ ಮೇಲೆ ಶ್ರೀನಿವಾಸನಾಯಕನು ಶ್ರೀಹರಿಯ ಉಚ್ಛಿಷ್ಟವನ್ನು ಉಂಡು ತೃಪ್ತನಾದ. ಸುಪ್ರೀತನಾದ ನಾರಾಯಣನು "ಕುಮಾರ! ನೀನು ವೇದಾದಿಶಾಸ್ತ್ರಾರ್ಥ ಸಾರವನ್ನು ಜನಸಾಮಾನ್ಯರಿಗೆ ಕನ್ನಡನುಡಿಯಲ್ಲಿ ಬೋಧಿಸಿ ನನ್ನ ಪಾರಮ್ಯವನ್ನು ಎತ್ತಿಹಿಡಿದು, ಭಾಗವತಧರ್ಮ ಪ್ರಸಾರಕನಾಗಿ ಕೀರ್ತಿಪಡೆಯುವೆ! ನಿನ್ನ ಕೃತಿಗಳು ಶಾಸ್ತ್ರಸಮ್ಮತವಾಗಿದ್ದು ಸಜ್ಜನರ ಉದ್ಧಾರಕ್ಕೆ ಕಾರಣವಾಗುವುದು." ಎಂದು ವರವಿತ್ತು ಆಶೀರ್ವದಿಸಿ ಅದೃಶ್ಯನಾದನು.

ಭಗವಂತನ ಪ್ರೇರಣೆಯಾಯಿತೆಂದು ತೋರುತ್ತದೆ. ಇತ್ತ ವರದಪ್ಪನಾಯಕ ಮಗನು ಏನಾದನೋ ಎಂಬ ಕಾತರ ಔತ್ಸುಕ್ಯಗಳಿಂದ ದೇವಾಲಯದ ಬಾಗಿಲು ತೆಗೆಯಿಸಿ ಒಳಬಂದು ನೋಡಿದನು. ಆಶ್ಚರ್ಯ! ಸುಪ್ರಸನ್ನವದನನಾಗಿ ಮಗ ಭಾವ ಸಮಾಧಿಯಲ್ಲಿದ್ದಾನೆ! ಅವನ ಮುಂದೆ ಬಂಗಾರದ ಹರಿವಾಣ, ತಂಬಿಗೆಗಳು ರಾಜಿಸಿವೆ. ವಿಠಲನಾಯಕನಿಗೆ ಆಗ ಅರಿವಾಯಿತು ತನ್ನ ಪುತ್ರನಯೋಗ್ಯತೆ! ಈ ಮಗನು ಸಾಮಾನ್ಯನಲ್ಲ, ಅವನೊಬ್ಬ ಜ್ಞಾನಿಯೆಂದರಿತು ಪರಮಾನಂದಭರಿತನಾಗಿ ಅವನನ್ನು ಎಬ್ಬಿಸಿ, ಉಪಚರಿಸಿ ಮನೆಗೆ ಕರೆತಂದನು. ಅಂದಿನಿಂದ ಮಗ ಹೇಗಾದರೂ ಇರಲಿ, ಎಂದು ಅವನ ಪಾಡಿಗೆ ಅವನನ್ನು ಬಿಟ್ಟುಬಿಟ್ಟನು. ಶ್ರೀನಿವಾಸನಾಯಕನು ದೇವರು ತನಗೆ ಕರುಣಿಸಿದ ಸುವರ್ಣಹರಿವಾಣ-ತಂಬಿಗೆಗಳನ್ನು ಬ್ರಾಹ್ಮಣರಿಗೆ ದಾನಮಾಡಿಬಿಟ್ಟ. ಧರ್ಮಪತ್ನಿ ಸರಸ್ವತಿಯೊಡನೆ ಗೃಹಸ್ಥಜೀವನದಲ್ಲಿ ನಿರತನಾಗಿ ಸುಖವಾಗಿ ಕಾಲಕಳೆಯಹತ್ತಿದನು. ನಾಯಕನಿಗೆ ತನ್ನ ಪತ್ನಿ ಸರಸ್ವತಿಯನ್ನು ಪರೀಕ್ಷಿಸುವ ಮನಸ್ಸಾಯಿತು. ಪತ್ನಿಗೆ ಹಿಡಿಹೊನ್ನು ನೀಡಿದ. ಪತಿಗೆ ತಕ್ಕ ಪತ್ನಿಯಾಗಿದ್ದಳು ಸರಸ್ವತಮ್ಮ! ಸದ್ಗುಣೆಯೂ, ಸಾತ್ವಿಕಸ್ವಭಾವದವಳೂ, ಭಗವದ್ಭಕ್ತಳೂ ಆದ ಆ ಮಹಾತಾಯಿ ಪತಿಯು ತನಗಿತ್ತ ಹೊನ್ನನ್ನು ಯೋಗ್ಯ ಭೂಸುರರಿಗೆ ಕೃಷ್ಣಾರ್ಪಣಪೂರ್ವಕವಾಗಿ ದಾನಮಾಡಿದಳು. ಅದನ್ನು ಕಂಡು ಶ್ರೀನಿವಾಸನಾಯಕನು ಮೋದಗೊಂಡನು.

ವೃದ್ಧ ತಂದೆ ವರದಪ್ಪನಾಯಕನ ಮಗನು ಪ್ರಬುದ್ಧಮಾನಕ್ಕೆ ಬಂದುದನ್ನು ಕಂಡು ಸಮಾಧಾನದ ಉಸಿರೆಳೆದು ಸಕಲವ್ಯವಹಾರವನ್ನೂ ಮಗನಿಗೊಪ್ಪಿಸಿ ಸ್ವರ್ಗಸ್ಥನಾದ. ಕೆಲವರ್ಷಗಳಾದವು. ಶ್ರೀನಿವಾಸನಾಯಕರಂಥ ಭಗವದ್ಭಕ್ತರೂ ಭಗವಂತನ

ಮಾಯೆಗೆ ಒಳಗಾಗಬೇಕಾಯಿತು! "ಮಮ ಮಯಾ ದುರತ್ಯಯಾ" ಎಂದಿಲ್ಲವೇ ಶ್ರೀಗೀತಾಚಾರ್ಯನಾದ ಶ್ರೀಕೃಷ್ಣ? ಈಶಕೋಟಿಪ್ರವಿಷ್ಟಳಾದ ಸಾಕ್ಷಾತ್ ರಮಾದೇವಿಯೇ ಶ್ರೀಹರಿಯ ಮಾಯೆಗೆ ಸಿಲುಕುವಾಗ ಶ್ರೀನಿವಾಸನಾಯಕರ ಪಾಡೇನು? ಪಾರಮಾರ್ಥಿಕ ಜೀವನವೇ ಶ್ರೇಷ್ಠವೆಂದು ಬಗೆದಿದ್ದ ಶ್ರೀನಿವಾಸನಾಯಕರು ಶ್ರೀಹರಿಯ ಮಾಯೆಗೆ ಸಿಲುಕಿ ಸಂಸಾರದಲ್ಲಿ ಆಸಕ್ತರಾಗಿ ಲೌಕಿಕವ್ಯವಹಾರಗಳಲ್ಲಿ ತಲ್ಲೀನರಾದರು. ಭಗವನ್ನಿಷ್ಠವಾಗಿದ್ದ ಅವರ ಬುದ್ಧಿ ದ್ರವ್ಯನಿಷ್ಠವಾಯಿತು. ದ್ರವ್ಯಸಂಪಾದನೆಯೊಂದೇ ಅವರ ಜೀವಿತದ ಗುರಿಯಾಯಿತು. ಲಕುಮಿ ನಲಿದೊಲಿದ ಮೇಲೆ ಕೇಳುವುದೇನು ? ನಾಯಕರ ಆದಾಯ ಒಂದಕ್ಕೆ ನೂರಾಗಿ, ಸಾವಿರವಾಗಿ, ಲಕ್ಷ್ಯವಾಗಿ,ಕೋಟಿಗಳಿಗೇರಿತು! ಕೊನೆಗೆ ಲೆಕ್ಕವಿಲ್ಲದಷ್ಟು ಸಿರಿಸಂಪತ್ತಿನಲ್ಲಿ ಓಲಾಡತೊಡಗಿದರು.

ಸಿರಿಸಂಪತ್ತು ಹೆಚ್ಚಾದಂತೆಲ್ಲಾ ಅವರು ಲೋಭಿಯಾಗತೊಡಗಿದರು. ಒಂದು ಚಿಕ್ಕಾಸನ್ನೂ ವ್ಯಯಮಾಡದಷ್ಟು ಜಿಪುಣರಾದರು, ದಾನಧರ್ಮ, ಪರೋಪಕಾರ, ಅನ್ನದಾನಾದಿಗಳನ್ನು ನಿಲ್ಲಿಸಿಬಿಟ್ಟರು ನಾಯಕರು. ಇದಕ್ಕೆ ವಿರುದ್ಧವಾಗಿತ್ತು ಅವರ ಪತ್ನಿ ಸರಸ್ವತಮ್ಮನ ಪ್ರವೃತ್ತಿ. ಆಕೆಗೆ ದಾನ-ಧರ್ಮ-ಗುರುಗಳು-ಬ್ರಾಹ್ಮಣರೆಂದರೆ ಬಹಳ ಆದರ. ಬಡವರಿಗೆ ಶ್ರೋತ್ರೀಯ ಬ್ರಾಹ್ಮಣರಿಗೆ ದಾನಮಾಡುವುದರಲ್ಲಿ ಅವಳಿಗೆ ಬಹಳ ಆಸೆ. ಪತಿಯು ತನಗೆ ಕೊಟ್ಟಿದನ್ನು ಪತಿಗೆ ತಿಳಿಯದಂತೆ ಸಾಧ್ಯವಾದಷ್ಟು ದಾನ-ಧರ್ಮ ಮಾಡುತ್ತಿದ್ದಳು. ಒಮ್ಮೊಮ್ಮೆ ಅದು ನಾಯಕರಿಗೆ ತಿಳಿದು ಅಸಾಧ್ಯ ರಗಳೆಯಾಗುತ್ತಿತ್ತು. ಕೊನೆಗೆ ಕೃಪಣನಾದ ಪತಿಗೆ ಹೆದರಿ ಆಕೆ ಸುಮ್ಮನಾಗುತ್ತಿದ್ದಳು. ಶ್ರೀನಿವಾಸನಾಯಕನ ಶ್ರೀಮಂತಿಕೆಯೊಡನೆ ಅವನ ಕಡು ಲೋಭಿತನವೂ ಎಲ್ಲೆಡೆ ಹರಡಿತು.

ಶ್ರೀನಿವಾಸನಾಯಕರಿಗೆ ಲಕ್ಷ್ಮಣನಾಯಕ, ಹೇವಣನಾಯಕ, ಮಧ್ವಪತಿ ಮುಂತಾಗಿ ನಾಲ್ವರು ಪುತ್ರರು ಓರ್ವಪುತ್ರಿ ಜನಿಸಿ ಅಭಿವೃದ್ಧಿಸಿದರು.[1] ಮೂವರು

1. ವಸಿಷ್ಠಗೋತ್ರದ ಶ್ರೀನಿವಾಸನಾಯಕ (ಪುರಂದರದಾಸ) ರಿಗೆ ಲಕ್ಷ್ಮಣದಾಸ. ಹೇವಣದಾಸ-ಮಧ್ವಪತಿ ಮುಂತಾದ ಪುತ್ರರಿದ್ದರೆಂದು ಕೃಷ್ಣದೇವರಾಯನ ಕಾವ. ಶಾಸನದಿಂದ ವ್ಯಕ್ತವಾಗುತ್ತದೆ. ಕಳಿಂಗ ರಾಜನಿಗೆ ಸೇರಿದ್ದ ಕಂದಕೂರು ಎಂಬ ಗ್ರಾಮವನ್ನು ವ್ಯಾಸರಾಜರಿಗೆ ದಾನಮಾಡಿದಾಗ ಅವರ ಆಶಯದಂತೆ ಪುರಂದರದಾಸರ ಮಕ್ಕಳಿಗೆ ಕೃಷ್ಣದೇವರಾಯ ಈ ಗ್ರಾಮದಲ್ಲಿ ಆರುವೃತ್ತಿಗಳನ್ನು ದಾನಮಾಡಿದ್ದಾನೆ-ದಾನಶಾಸನದಲ್ಲಿ ಹೀಗಿದೆ "ಧೀಮಾನ್ ಲಕ್ಷ್ಮಣದಾಸಾಖ್ಯಃ ಶ್ರೀಪುರಂದರದಾಸಜಃ । ವಸಿಷ್ಠಗೋತ್ರಜೋ ವೃತಿ-ದ್ವಯಮುತ್ಕೃತಿ ಯಾಜುಷಃ ॥ ವಸಿಷ್ಠಾನ್ವಯ ಸಂಭೂತಃ ಶ್ರೀಪುರಂದರದಾಸಜಃ । ದ್ವಿಜೋ ಹೇವಣದಾಸಾಖ್ಯಃ ಯಾಜುಷೋಽತ್ರದ್ವಿವೃತ್ತಿಕಃ ॥ ವಸಿಷ್ಠಗೋತ್ರಸಂಭೂತೋ ಶ್ರೀಪುರಂದರದಾಸಜಃ । ಧೀಮಾನ್ ಮಧ್ವಪದಾಸಾಖ್ಯೋ ಯಾಜುಷೋಽತ್ರದ್ವಿವೃತ್ತಿಕಃ॥ —ಕುಹಯೋಗಪರಿಹಾರಾನಂತರ ಈ ದಾನಶಾಸನದಾದಿ ಕಂದಕೂರು ಗ್ರಾಮ ದಾನ ಮಾಡಿದ್ದಾನೆ.

ಪುತ್ರರಿಗೂ, ಮಗಳಿಗೂ ನಾಯಕರು ವೈಭವದಿಂದ ವಿವಾಹಮಾಡಿ ಪತ್ನೀಸುತಾದಿಗಳೊಡನೆ ಸುಖಿಸಹತ್ತಿದರು. ನಾಯಕರ ವ್ಯಾಪಾರ-ವ್ಯವಹಾರಗಳು ಬಹುಮುಖವಾಗಿ ಅಭಿವೃದ್ಧಿಸಿ ಕೊನೆಗೆ ಅವರು ವಿಜಯನಗರ ಸಾಮ್ರಾಜ್ಯದ "ರತ್ನಭಂಡಾರಿ"ಗಳೆನಿಸಿ ಕೃಷ್ಣದೇವರಾಯನಿಂದ "ನವಕೋಟಿನಾರಾಯಣ" ಎಂಬ ಬಿರುದುಪಡೆದು ವಿಖ್ಯಾತರಾದರು. ವಿಜಯನಗರಕ್ಕೆ ರಾಜಕೀಯ–ವ್ಯಾಪಾರಾದಿಕಾರಣಗಳಿಂದ ಅನೇಕ ಬಾರಿ ಅವರು ಬರುತ್ತಿದ್ದರೂ ಒಮ್ಮೆಯಾದರೂ ಅವರು ತಮ್ಮ ಕುಲಗುರುಗಳೂ, ಮಹಾಜ್ಞಾನಿಗಳೂ ಆದ ಶ್ರೀವ್ಯಾಸರಾಜಗುರುಗಳ ದರ್ಶನಕ್ಕೆ ಬರುತ್ತಿರಲಿಲ್ಲ !

ಭಗವದ್ಭಕ್ತನೂ, ದಾನಧರ್ಮಗಳಲ್ಲಿ ಆಸಕ್ತನೂ ಆಗಿದ್ದ ಶ್ರೀನಿವಾಸನಾಯಕ ಹೀಗೆ ಬದಲಾಗಲು ಬಹುಶಃ ಅವನ ತಂದೆಯಿಂದ ವಿಠಲನ ಗುಡಿಯಲ್ಲಿ ಬಂಧಿತನಾಗಿದ್ದಾಗ ಶ್ರೀಹರಿದರ್ಶನವಾಗಿ ಹರಿಯು ಉಚ್ಛಿಷ್ಟವನ್ನುಂಡ ಬಳಿಕ ಮತ್ತೆ ಮಾಂಸ ಪಾನ್ನ ಉಂಡಿದ್ದೇ ಕಾರಣವಾಗಿರಬಹುದು. ಅದರ ಪ್ರಭಾವವೇ ಇಂದಿನ ಅವರ ಸ್ಥಿತಿಗೆ ಕಾರಣವೆಂದು ಹೇಳಲಡ್ಡಿಯಿಲ್ಲ.

ಶ್ರೀನಿವಾಸನಾಯಕರು ಸಾಮಾನ್ಯರಲ್ಲ. ಭಗವನ್ನಾಮಪ್ರಸಾರಕರಾದ ನಾರದ ಮಹರ್ಷಿಗಳೇ ಎಂದು ಜ್ಞಾನಿಗಳು ಹೇಳುತ್ತಾರೆ. ನಾರದಮಹರ್ಷಿಗಳು ಶ್ರೀನಿವಾಸ ನಾಯಕರಾಗಿ ಅವತರಿಸಿದ್ದರೂ ಪರಮಾತ್ಮನ ಮಾಯೆಗೆ ಸಿಕ್ಕಿ ಭಗವಂತನನ್ನೇ ಮರೆತು ಅವನಿಂದ ದೂರಾಗಹತ್ತಿದರು. ಹಿಂದೆ ದ್ವಾಪರದಲ್ಲಿ ಶ್ರೀಕೃಷ್ಣನು "ಕಲಿಯುಗದಲ್ಲಿ ಅವತರಿಸು" ಎಂದು ನಾರದರಿಗೆ ಅಪ್ಪಣೆಮಾಡಿದಾಗ ನಾರದರು ಕಲಿಯುಗದ ಧರ್ಮವನ್ನು ನೆನೆದು ಕಂಪಿಸಿ–"ಪ್ರಭು! ನಿನಾಜ್ಞೆಯಂತೆ ವರ್ತಿಸುವೆನು, ಆದರೆ ನಿನ್ನ ವಿಸ್ಮರಣೆಯಾದರೆ ನನ್ನ ಗತಿಯೇನು?" ಎಂದು ಕೇಳಿದ್ದರು. ಆಗ ಶ್ರೀಕೃಷ್ಣನು "ಅಂತಹ ಸಮಯದಲ್ಲಿ ನಾನೇ ಬಂದು ನಿನ್ನನ್ನು ಎಚ್ಚರಿಸುತ್ತೇನೆ" ಎಂದು ಅಭಯ ನೀಡಿದ್ದನು.

ಅಂತಹ ಸಮಯ ಹತ್ತಿರವಾಯಿತು. ಅಂತೆಯೇ ಶ್ರೀಹರಿ ಅವರನ್ನು ವಿಜಯನಗಕ್ಕ ಹೋಗಿ ತನ್ನ ಪರಮಭಕ್ತರಾದ ಶ್ರೀವ್ಯಾಸತೀರ್ಥರ ದರ್ಶನಪಡೆಯುವ ಒಂದು ಸಂದರ್ಭವನ್ನು ಕಲ್ಪಿಸಿದನು !

ಶ್ರೀನಿವಾಸನಾಯಕರು ಅನೇಕ ಸಲ ವಿಜಯನಗರಕ್ಕೆ ಹೋಗಿದ್ದರೂ ತಮ್ಮ ಕುಲಗುರುಗಳಾದ ಶ್ರೀವ್ಯಾಸತೀರ್ಥರ ದರ್ಶನಪಡೆದಿರಲಿಲ್ಲ. ಯಾವುದಕ್ಕೂ ಸಮಯ ಕೂಡಿಬರಬೇಕಲ್ಲವೇ? ಶ್ರೀಹರಿಯ ಸಂಕಲ್ಪದಂತೆ ಈಗ ಅವರು ಗುರುಗಳ ದರ್ಶನ ಮಾಡುವ ಯೋಗ ಪ್ರಾಪ್ತವಾಯಿತು. ಶ್ರೀಕೃಷ್ಣದೇವರಾಯನು ಸಾರ್ವಭೌಮನಾಗಿ ದಿಗ್ವಿಜಯ ಯಾತ್ರೆಮಾಡಿ ಅಪಾರ ಕೀರ್ತಿಗಳಿಸಿ ಬಂದಮೇಲೆ ಕೃಷ್ಣಪ್ರತಿಷ್ಠಾಕಾಲ

ದಲ್ಲಿ ಸಾಮ್ರಾಜ್ಯದ ಆತ್ಮೀಯರಾಗಿದ್ದ ಶ್ರೀನಿವಾಸನಾಯಕರು ಪತ್ನೀಪುತ್ರಾದಿಗಳೊಡನೆ ಕೃಷ್ಣದೇವರಾಯನ ಆಹ್ವಾನದಂತೆ ಬಂದಿದ್ದರು. ಶ್ರೀನಿವಾಸನಾಯಕರು ಪತ್ನೀ ಪುತ್ರಾದಿಗಳ ವಿಶೇಷಬಲವಂತದಿಂದಾಗಿ ಭಗವತ್ಸಂಕಲ್ಪದಂತೆ ಶ್ರೀವ್ಯಾಸರಾಜಸ್ವಾಮಿಗಳವರ ದರ್ಶನಕ್ಕಾಗಿ "ವಿಶ್ವಪಾವನ" ಮಠಕ್ಕೆ ಆಗಮಿಸಿದರು. ಅಂದು ದೇವರ ಪೂಜೆ, ತೀರ್ಥಪ್ರಸಾದ, ಭೋಜನಗಳಾದ ಮೇಲೆ ಊರಿಗ ಹೊರಡಲು ಗುರುಗಳಲ್ಲಿ ಫಲಮಂತ್ರಾಕ್ಷತೆ ಪಡೆಯಲು ಬಂದರು.

ಏಕಾಂತದಲ್ಲಿದ್ದ ಶ್ರೀವ್ಯಾಸತೀರ್ಥರು ಶ್ರೀನಿವಾಸನಾಯಕರನ್ನು ಕಂಡು ನಸುನಗುತ್ತಾ "ಬರಬೇಕು, ಬರಬೇಕು, ನವಕೋಟಿ ನಾರಾಯಣರು !" ಎಂದು ನುಡಿದು ಕರೆದು ಹತ್ತಿರ ಕೂಡಿಸಿಕೊಂಡು ಕುಶಲಪ್ರಶ್ನೆ ಮಾಡಿದರು.

ಅನಂತರ ಶ್ರೀಗಳವರು—"ನಾಯಕರೇ, ನೀವು ನಮ್ಮ ಮಠದ ಮುಖ್ಯಶಿಷ್ಯರು, ಸದ್ವೈಷ್ಣವರು. ನಮ್ಮ ವಂಶಬಂಧುಗಳು. ನಿಮ್ಮ ತಂದೆ ವರದಪ್ಪನಾಯಕರು ನಮ್ಮಲ್ಲಿ ಅಗಾಧ ಭಕ್ತಿಶ್ರದ್ಧೆಗಳನ್ನಿಟ್ಟುಕೊಂಡು ಪದೇ ಪದೇ ಶ್ರೀಮಠಕ್ಕೆ ಬಂದು ಹೋಗುತ್ತಿದ್ದರು. ಅವರು ಸ್ವರ್ಗಸ್ಥರಾದಮೇಲೆ, ಅವರ ಪುತ್ರರಾದ ನೀವು ಒಮ್ಮೆಯೂ ಮಠಕ್ಕೆ ಬಂದಿಲ್ಲ. ಪರಸ್ಪರ ಗುರುಶಿಷ್ಯ ಸಂಬಂಧ ಸುಮಧುರವಾಗಬೇಕಾದರೆ ಆಗಾಗ್ಗೆ ಮಠಕ್ಕೆ ಬಂದುಹೋಗುತ್ತಿರಬೇಕಲ್ಲವೇ ? ಹಾಗಾದಲ್ಲಿ ಅದು ಶ್ರೇಯಸ್ಸಿಗೆ ಕಾರಣವಾಗುವುದು. ನಮ್ಮ ಆತ್ಮೀಯ ಶಿಷ್ಯರಾದ ನಿಮಗೆ ಶ್ರೀಮೂಲಗೋಪಾಲಕೃಷ್ಣನ ಪ್ರೇರಣೆಯಂತೆ ಕೆಲ ಹಿತೋಕ್ತಿಗಳನ್ನು ಹೇಳಬಯಸುತ್ತೇವೆ. ನಮ್ಮ ಸ್ಪಷ್ಟವಾದ ನುಡಿ ಕೇಳಿ ಅಸಮಾಧಾನ ಪಡಬಾರದು. ನಾವು ನಿಮ್ಮ ಹಿತೈಷಿಗಳು. ಶ್ರೀಹರಿಯು ಪ್ರೇರಣೆಮಾಡಿದ ನಾಲ್ಕು ಮಾತುಗಳನ್ನು ಹೇಳುತ್ತೇವೆ. ಪಾರತ್ರಿಕ ಸಾಧನೆಯೇ ಮನುಷ್ಯನ ಗುರಿ. ಅಂತೆಯೇ ಅದಕ್ಕೆ ಸಹಾಯಕವಾದ ಮಾರ್ಗವನ್ನು ತೋರಿಕೊಡುವುದು ಗುರುಗಳಾದ ನಮ್ಮ ಕರ್ತವ್ಯ.

ಶ್ರೀನಿವಾಸನಾಯಕರೇ, ನೀವೀಗ ಯಾವುದು ತಾರಕವೋ ಉದ್ಧಾರಕವೋ, ಶ್ರೇಯಃಪ್ರದವೋ, ಅಂಥ ಶ್ರೀಹರಿಭಕ್ತಿವಿರಹಿತರಾಗಿ, ಶ್ರೀಹರಿವಿಮುಖರಾಗಿದ್ದೀರಿ. ಭಗವತ್ಪೂಜೆ, ಧ್ಯಾನ, ಚಿಂತನ, ಸಮಸ್ತವಸ್ತುಗಳೊಡನೆ ಆತ್ಮನಿವೇದನ, ಸಮರ್ಪಣಭಾವರಹಿತರಾಗಿದ್ದೀರಿ! ಶ್ರೀಹರಿಯನ್ನು ಬಿಟ್ಟು ಅವನ ಪತ್ನಿಯೊಬ್ಬಳನ್ನು ಮಾತ್ರ ಆರಾಧಿಸುತ್ತಿದ್ದೀರಿ. ಪತಿಸಹಿತಳಾದ ಅವಳನ್ನಾರಾಧಿಸಿದರೆ ಅವಳು ಶಾಶ್ವತವಾಗಿ ಒಲಿಯುವಳು. ಇಲ್ಲದೊಡೆ ಪತಿಯನ್ನು ದೂರಮಾಡಿದ ನಿಮ್ಮನ್ನೂ ಅವಳು ತೊರೆದುಹೋಗುವುದರಲ್ಲಿ ಸಂಶಯವಿಲ್ಲ! ದಾನ ಧರ್ಮಗಳೆಂದರೆ ನೀವು ಮೂಗು ಮುರಿಯುವಿರಿ. ಈ ಲೌಕಿಕಸಂಪತ್ತು ಶಾಶ್ವತವೆಂದು ಭ್ರಮಿಸಿ ಇವೆಲ್ಲವೂ ಅದಾವ ಮಹಾಮಹಿಮನ ಕಾರುಣ್ಯದಿಂದ ಲಬ್ಧವಾಗುವುದೂ, ಸಮಸ್ತವೂ ಅದಾರಿಂದ ಸೃಷ್ಟವಾಗಿ, ಪಾಲಿಸಲ್ಪಟ್ಟು ಕೊನೆಗೆ ನಾಶವಾಗುವುದೋ ಅಂತಹ ಅಲೌಕಿಕನೂ ಶಾಶ್ವತ

ಸುಖಪ್ರದನೂ ಆದ ಶ್ರೀಮನ್ನಾರಾಯಣನನ್ನು ಮರೆತಿರುವಿರಿ. "ಈಶಾವಾಸ್ಯಮಿದಂ ~~ಸರ್ವಂ ಯತ್ಕಿಂಚಜ್ಜಗತ್ಯಾಂ ಜಗತ್ । ತೇನ ತ್ಯಕ್ತೇನ ಭುಂಜೀಥಾ ಮಾ ಗೃಧಃ~~ ಕಸ್ಯಸ್ವಿದ್ಧನಮ್" ಎಂಬ ಈಶಾವಾಸ್ಯೋಪನಿಷತ್ತಿನ ಉಪದೇಶವನ್ನೇ ಕಡೆಗಾಣಿಸಿರುವುದನ್ನು ಕಂಡು ನಮಗೆ ಖೇದವಾಗಿದೆ. ಶಾಸ್ತ್ರಾಧ್ಯಯನ ಮಾಡಿ, ಸದಸದ್ವಿವೇಚನಾಶಕ್ತಿಯುಳ್ಳವರಾಗಿದ್ದರೂ ಅಶಾಶ್ವತವನ್ನೇ ನಂಬಿ ಕುಳಿತಿದ್ದೀರಿ. ಮಾನವನ, ಸುಜೀವಿಯ, ಮುಖ್ಯಧ್ಯೇಯನಾದ ಶಾಶ್ವತಸುಖ ಸಾಧನವಾದ ವೇದಾದಿಶಾಸ್ತ್ರೋಕ್ತ ಶ್ರೀಮನ್ಮಧ್ವತತ್ವಗಳನ್ನೂ ಅದರ ರಹಸ್ಯೋಪದೇಶಗಳನ್ನೂ ಕಡೆಗಣಿಸಿ ಪರಮಪುರುಷಾರ್ಥನಾದ ಶ್ರೀಪುರುಷೋತ್ತಮನಿಂದ ದೂರವಾಗುತ್ತಿದ್ದೀರಿ. ಇದು ನಿಮಗೆ ಶ್ರೇಯಸ್ಕರವಲ್ಲ! ಮಾನವಜನ್ಮ ದೊಡ್ಡದು. ಅದು ಸಾಧನ ಶರೀರ. ಅದು ದೊರಕಿರುವಾಗ ಜ್ಞಾನಸಂಪಾದಿಸಿ, ಭಗವಂತನನ್ನು ಭಕ್ತ್ಯಾದಿಗಳಿಂದ ಆರಾಧಿಸಿ ಸಾಧನಮಾಡಿಕೊಂಡು ಆತ್ಮೋದ್ಧಾರ ಮಾಡಿಕೊಳ್ಳದಿದ್ದರೆ ಮಾನವನಿಗೂ ಪಶುವಿಗೂ ಇರುವ ವ್ಯತ್ಯಾಸವೇನು ? ನಶ್ವರವಾದ ಈ ಸಿರಿಸಂಪತ್ತಿನ ಮೋಹ, ಅದರ ಗಳಿಕೆಯಲ್ಲಿಯೇ ತಲ್ಲೀನರಾಗಿರುವ ನಿಮ್ಮ ಪ್ರವೃತ್ತಿ ಇನ್ನಾದರೂ ಬದಲಾಗಲಿ, ಅಂದರೆ ನಿಮಗೆ ಕಲ್ಯಾಣವಾಗುವುದು.

ನೀವು ಸಂಪಾದಿಸುತ್ತಿರುವ ಈ ಲೌಕಿಕ ಸಂಪತ್ತಿನ ಕೆಲವಂಶವಾದರೂ, ದಾನ ಧರ್ಮ, ಪರೋಪಕಾರ ಜ್ಞಾನಪ್ರಸಾರ, ಭಗವತ್ಸೇವೆಗಳಿಗೆ ಉಪಯೋಗಿಸಬೇಕು. ಅದು ಶಾಸ್ತ್ರಗಳ ಆದೇಶ. ದೇವರು, ದ್ವಿಜರು, ಬಡವರು, ನೊಂದವರಿಗಾಗಿ ನಿಮ್ಮ ಸಂಪತ್ತನ್ನು ವಿನಿಯೋಗಿಸಿರಿ. ಅಂದರೆ ನಿಮಗೆ ಕ್ಷೇಮವಾಗುವುದು. ಮಾತ್ರವಲ್ಲ. ಶ್ರೀಹರಿಯು ಪ್ರಸನ್ನನಾಗಿ ಪೊರೆಯುವನು. ಈಗಿನ ನಿಮ್ಮ ಭ್ರಮೆಯ ಸುಳಿಯಿಂದ ಹೊರಬಂದು ಹರಿಯ "ದಾಸತ್ವ"ವನ್ನು ಸ್ವೀಕರಿಸಿ ಅವನ ಕರುಣೆಗೆ ಪಾತ್ರರಾಗಿ ಉದ್ಧೃತರಾಗಿರಿ" ಎಂದು ಕಳಕಳಿಯಿಂದ ಬೋಧಿಸಿದರು.

ವ್ಯಾಸತೀರ್ಥರ ಉಪದೇಶ ನಾಯಕರ ಮನಸ್ಸಿನಮೇಲೆ ಪರಿಣಾಮಬೀರಿದರೂ ಶ್ರೀಹರಿಯ ಮಾಯೆಗೆ ಸಿಲುಕಿದ ಅವರು ಗುರುಗಳ ಉಪದೇಶವನ್ನು ಅಷ್ಟಾಗಿ ಗಮನಿಸಲಿಲ್ಲ! ಸತ್ಯವಿಚಾರವನ್ನು ಸ್ಪಷ್ಟನುಡಿಗಳಿಂದ ಗುರುಗಳು ಹೇಳಿದ್ದರಿಂದ ತನಗೆ ಅದು ಅಹಿತವೆಂದು ಭ್ರಮಿಸಿದ ನಾಯಕರು ಮನದಲ್ಲೇ ಗುರುಗಳ ಮೇಲೆ ಅಸಮಾಧಾನಗೊಂಡರು. ಆದರೆ ಅದನ್ನು ತೋರುವಂತಿರಲಿಲ್ಲ. ಶ್ರೀಯವರು ಮಹಾತ್ಮರು, ಜ್ಞಾನಿಗಳು, ಶಾಪಾನುಗ್ರಹಶಕ್ತರು ಎಂದವರು ಅರಿತಿದ್ದರು. ಸಮಸ್ತ ಸಾಮ್ರಾಜ್ಯವೇ ಅವರಿಗೆ ಅಂಕಿತವಾಗಿತ್ತು. ಅವರಾಜ್ಞೆಯನ್ನು ನೆರವೇರಿಸಲು ಸಾಮ್ರಾಟನೇ ಟೊಂಕಕಟ್ಟಿ ನಿಲ್ಲುತ್ತಿದ್ದ! ಮೇಲಾಗಿ ಕುಲಗುರುಗಳು, ಅಂಥವರಮೇಲೆ ತನ್ನ ಕೋಪತಾಪಗಳನ್ನು ತೋರಿದರೆ ಏನು ಅನಾಹುತವಾಗುವುದೋ ಎಂಬ ಭಯ ನಾಯಕರಿಗಿತ್ತು. ಅಂತೆಯೇ ತಮ್ಮ ಭಾವನೆಯನ್ನು ಹತ್ತಿಕ್ಕಿ ಮುಗುಳು ನಗೆಯನ್ನು

ಹೊರಟಿಲ್ಲುತ್ತಾ "ಗುರುವರ್ಯ ! ತಾವು ಎಲ್ಲವನ್ನೂ ತ್ಯಾಗಮಾಡಿದ ಸನ್ಯಾಸಿಗಳು, ಎಲ್ಲವನ್ನೂ ತ್ಯಜಿಸಿದ ವಿರಕ್ತರು ಹೇಳಬೇಕಾದುದನ್ನೇ ಅಪ್ಪಣೆ ಕೊಡಿಸಿದ್ದೀರಿ ! ತಮ್ಮ ದೃಷ್ಟಿಯಲ್ಲಿ ಅದು ಸರಿಯಿರಬಹುದು, ಆದರೆ ನಾನು ಸನ್ಯಾಸಿಯಲ್ಲ, ಸಂಸಾರಿ ಮತ್ತು ವ್ಯಾಪಾರೋದ್ಯಮಿ, ನಾನೀಗ ಅನುಸರಿಸುವ ಮಾರ್ಗವೇ ಸರಿಯೆಂದು ಭಾವಿಸಿದ್ದೇನೆ. ಹಾಗೆಂದು ಹೇಳಿ ಅದು ತಪ್ಪಾಗಿದ್ದರೆ, ತಾವೇ ಅಪ್ಪಣೆ ಕೊಡಿಸಿದಂತೆ ಸಮಸ್ತಕ್ಕೂ ಒಡೆಯನಾಗಿ, ಎಲ್ಲರಲ್ಲೂ ಅಂತರ್ಗತನಾಗಿ, ಪ್ರೇರಕನಾಗಿ, ನಿಯಾಮಕನಾಗಿ, ನನ್ನಲ್ಲಿಯೂ ಅಂತರ್ಗತನಾಗಿರುವ ಆ ಪರಮಾತ್ಮನು ನನ್ನನ್ನು ತಿದ್ದಿ ಸರಿಪಡಿಸಲಿ! ಆಗ ಖಂಡಿತವಾಗಿ ತಮ್ಮ ಉಪದೇಶದಂತೆ ನಡೆದು ಶ್ರೀಹರಿಯ ದಾಸನಾಗುತ್ತೇನೆ" ಎಂದರು. ಶ್ರೀಯವರು ಮಂದಹಾಸಬೀರಿ "ತಥಾಸ್ತು"ಎಂದರು. ಅನಂತರ "ಶ್ರೀನಿವಾಸನಾಯಕರೇ, ಈ ಮಾತನ್ನು ಆ ಭಗವಂತನೇ ನಿಮ್ಮಿಂದಲೂ ನಮ್ಮಿಂದಲೂ ನುಡಿಸಿರುವನು ! ಶ್ರೀಹರಿಯು ಖಂಡಿತ ನಿಮ್ಮ ಈ ಬುದ್ಧಿಯನ್ನು ಬದಲಿಸಿ. ಸನ್ಮತಿಯಿತ್ತು ನಿಮ್ಮನ್ನು ತನ್ನ ದಾಸರನ್ನಾಗಿ ಮಾಡಿಕೊಳ್ಳುವನು ! ಆಗಲಾದರೂ ನಮ್ಮ ಉಪದೇಶದಂತೆ ನಡೆಯುವಿರಾ ?" ಎಂದು ಪ್ರಶ್ನಿಸಿದರು.

ಶ್ರೀನಿವಾಸನಾಯಕರು ಗುರುಗಳ ವಚನವನ್ನಾಲಿಸಿ ಅಪ್ರತಿಭರಾದರು. ಆದರೂ ಮನದ ಮುಗುಡವನ್ನು ತೋರ್ಪಡಿಸದೆ ದರಹಾಸಬೀರಿ "ಮಹಾಸ್ವಾಮಿ, ತಮ್ಮ ಪವಿತ್ರ ನಿಜವಾದಲ್ಲಿ ತಮ್ಮ ಅಜ್ಞಾನುವರ್ತಿಯಾಗಿ ಮುನ್ನಡೆಯುವೆನು. ಇನ್ನು ನನಗೆ ಅಪ್ಪಣೆ ದಯಪಾಲಿಸಬೇಕು" ಎಂದು ವಿಜ್ಞಾಪಿಸಿದರು ಶ್ರೀಪಾದಂಗಳವರು ನಾಯಕರಿಗೂ ಪರಿವಾರದವರಿಗೂ ಫಲಮಂತ್ರಾಕ್ಷತೆಯನ್ನಿತ್ತು ಆಶೀರ್ವದಿಸಿದರು ನಾಯಕರು ಪತ್ನೀಪುತ್ರಾದಿಗಳೊಡನೆ ಊರಿಗೆ ಪ್ರಯಾಣ ಬೆಳೆಸಿದರು.

o o o o o

ಶ್ರೀನಿವಾಸನಾಯಕರು ಊರಿಗೆ ಬಂದು ಸೇರಿದರು. ಶ್ರೀವ್ಯಾಸರಾಜರ ಉಪದೇಶವಾದಲಾಗಾಯಿತು ಅವರ ಮನದಲ್ಲಿ ಹೊಯ್ದಾಟ ಪ್ರಾರಂಭವಾಗಿತ್ತು. ಗುರುಗಳ ಮಾತನ್ನೆಲ್ಲಾ ಮೆಲುಕುಹಾಕಹತ್ತಿದರು, ಶ್ರೀಹರಿಯ ಮಾಯೆಗೆ ಒಳಗಾಗಿದ್ದ ಅವರಿಗೆ ಗುರೂಪದೇಶ ರುಚಿಸಲಿಲ್ಲ. ತಾವು ಮಾಡುತ್ತಿರುವುದೇ ಸರಿಯೆಂದವರು ನಂಬಿದ್ದರು. ವಿರಕ್ತರಾದ ಗುರುಗಳಿಗೆ ಸಿರಿಸಂಪತ್ತು ಹೇಯವಾಗಿ ಕಾಣುವುದು ಸಹಜ. ಇದು ಹೇಯವಾದಲ್ಲಿ ಭಗವಂತ ಎಲ್ಲರಿಗೂ ಇವರಲ್ಲೇಕೆ ಆಸಕ್ತಿ ಹುಟ್ಟಿಸುತ್ತಿದ್ದ ? ಎಲ್ಲರೂ ಸಿರಿಸಂಪತ್ತಿಗಾಗಿ ಹಾತೊರೆಯುವಾಗ ನಾನೊಬ್ಬನೇಕೆ ಅದರಿಂದ ಹೊರತಾಗಬೇಕು? ಭಗವಂತನು ಎಲ್ಲೆಡೆ ಇರುವುದು ನಿಜವಾದರೆ ಅವನು ಸಿರಿಸಂಪತ್ತಿನಲ್ಲಿಯೂ ಇರುವನಲ್ಲವೇ ? ಇದು ಗುರುಗಳು ಅರಿಯದ ವಿಷಯವೇನಲ್ಲ. ವಿರಕ್ತರಾದ ಅವರು ಪ್ರತಿಮೆಯಲ್ಲಿ, ಜ್ಞಾನದಲ್ಲಿ ಮತ್ತು ಸರ್ವತ್ರ ಕಂಡು ಆರಾಧಿಸಿದರೆ,

ನಾನು ಸಿರಿಸಂಪತ್ತಿನಲ್ಲಿ ಅವನನ್ನು ಕಂಡು ಆರಾಧಿಸುತ್ತೇನೆ. ಇದರಲ್ಲಿ ತಪ್ಪೇನು ? ಒಂದು ವೇಳೆ ನನ್ನ ಆಚರಣೆ ತಪ್ಪಾಗಿದ್ದರೆ, ನಾನು ಗುರುಗಳಲ್ಲಿ ವಿಜ್ಞಾಪಿಸಿದಂತೆ ಆ ಭಗವಂತ ಎಂದು ನನ್ನನ್ನು ಒಪ್ಪಿದ್ದ [illegible] ಬೋಧಿಸಿ ದರು. ಸರಿ, ಮತ್ತೆ ಪ್ರಾರಂಭವಾಯಿತು, ಅವರ ಧನಾರ್ಜನೆಯ ಪ್ರವೃತ್ತಿ ! ಶ್ರೀಹರಿಯ ಉಚ್ಛಿಷ್ಟವನ್ನುಂಡಬಳಿಕ ಮಾನುಷಾನ್ನವನ್ನು ಉಂಡಫಲ ಅವರ ಮೇಲೆ ತನ್ನ ಪ್ರಭಾವಬೀರಿತು !

ನಾಯಕರ ಪತ್ನೀ ಪುತ್ರಾದಿಗಳೂ ಗುರುಗಳ ಉಪದೇಶವನ್ನು ಶ್ರವಣಮಾಡಿದ್ದರು. ಅದು ಅವರಮೇಲೆ ಸತ್ಪ್ರಭಾವ ಬೀರಿತ್ತು. ನಾಯಕರ ವರ್ತನೆ ಸರಿಯಲ್ಲ ವೆಂದವರು ಮೊದಲಿನಿಂದಲೂ ಭಾವಿಸಿದ್ದರು. ಅವರು ಅನೇಕಬಾರಿ ಗುರುಗಳ ಉಪದೇಶವನ್ನು ನಾಯಕರಿಗೆ ಜ್ಞಾಪಿಸಿ ಗುರುಗಳ ಅಜ್ಞೆಯಂತೆ ನಡೆಯಬೇಕೆಂದು ಪ್ರಾರ್ಥಿಸಿದರು. ಅದರಿಂದ ಪ್ರಯೋಜನವೇನೂ ಆಗದಿರಲು ಪರಿಚಿತ್ತದಲ್ಲಿ ಇದ್ದಂತಾಗಲಿ ಎಂದವರು ಸುಮ್ಮನಾದರು.

ಹಿಂದೆ ನಾರದರಿಗೆ ಶ್ರೀಕೃಷ್ಣ ಅಭಯವಿತ್ತಿದ್ದಂತೆ ನಾರದಾವತಾರಿಗಳಾದ ನಾಯಕರನ್ನು ಎಚ್ಚರಿಸುವ ಕಾಲ ಪ್ರಾಪ್ತವಾಯಿತು. "ಅಪ್ಯಚ್ಯುತೋ ಗುರುದ್ವಾರಾ"ಎಂಬಂತೆ ಎಲ್ಲವನ್ನೂ ಗುರುಮುಖವಾಗಿ ನೆರವೇರಿಸಿ ಅನುಗ್ರಹಿಸುವ ಶ್ರೀಹರಿ ಮೊದಲು ಶ್ರೀವ್ಯಾಸತೀರ್ಥರಿಂದ ಉಪದೇಶಮಾಡಿಸಿದ್ದ. ಈಗ ತಾನೇ ನಾಯಕರನ್ನು ಎಚ್ಚರಿಸಲು ಮುಂದಾದ! ಅದಾದ ಒಂದು ಘಳಿಗೆಯಲ್ಲಿ ವ್ಯಾಸಮುನಿಗಳು "ನೀನು ದಾಸತ್ವ ವಹಿಸುವಂತೆಮಾಡಿ, ನಿನ್ನನ್ನು ತಿದ್ದಿ ಶ್ರೀಹರಿ ತನ್ನ ದಾಸನನ್ನಾಗಿ ಮಾಡಿ ಕೊಳ್ಳುವನು" ಎಂದು ಹೇಳಿದ್ದರೋ ಏನೋ, ಶ್ರೀಹರಿ ಅದನ್ನು ಸತ್ಯಮಾಡಲು ಉದ್ಯುಕ್ತನಾದ.

ಶ್ರೀಹರಿ,ಮುಂದೆ ಅವರಿಂದ ಲೋಕಕಲ್ಯಾಣಾದಿ ಮಹತ್ಕಾರ್ಯವನ್ನು ಮಾಡಿಸಬೇಕಾಗಿದೆ. ಅಂತೆಯೇ ಅವರ ಮೇಲೆ ತಾನು ಹಾಕಿದ್ದ ಮಾಯೆಯನ್ನು ಕಳಚಿ ಅನುಗ್ರಹೋನ್ಮುಖನಾದ. ಆ ಮಹಾಪ್ರಭುವು ಮಗನ ಉಪನಯನದ ನೆಪಹೂಡಿ ವೃದ್ಧಬ್ರಾಹ್ಮಣರೂಪದಿಂದ ಬಂದು ನಾಯಕರಲ್ಲಿ ಸಹಾಯಬೇಡಿದ. ಚಿಕ್ಕಾಸೂ ಬಿಚ್ಚದ ನಾಯಕರು ಇಂದು.ನಾಳೆ ಎಂದು ಕಾಲತಳ್ಳಿದರು.ಆರುತಿಂಗಳು ಅವರಲ್ಲಿಗೆ ಅಂಡಲೆದರೂ ಪ್ರಯೋಜನವಾಗದಿರಲು ಶ್ರೀಹರಿ ನಾಯಕರ ಪತ್ನಿ ಸರಸ್ವತೀಬಾಯಿಯ ಮೂಗುತಿಯ ಪ್ರಕರಣದಿಂದ ನಾಯಕರ ಕಣ್ಣುತೆರೆಸಿದ. ಸ್ವರೂಪತಃ ಜ್ಞಾನಿಗಳಾಗಿದ್ದ ನಾಯಕರಿಗೆ ಜ್ಞಾನೋದಯವಾಯಿತು. ತಮ್ಮ ಹಿಂದಿನ ಕೃತಿಗಾಗಿ ಅವರು ಪಶ್ಚಾತ್ತಪ್ತರಾದರು. ಅವರು ಶ್ರೀಹರಿಯ ಸೇವೆಯನ್ನು ತ್ಯಜಿಸಿ ಮೂರ್ಖನಂತೆ ದ್ರವ್ಯಾರ್ಜನೆಗಾಗಿಯೇ ಕಾಲವ್ಯಯ ಮಾಡಿದೆನಲ್ಲಾ ಎಂದು ದುಃಖಿಸಿದರು. ತಮ್ಮ ನಡವಳಿಕೆಗಾಗಿ ತಮ್ಮನ್ನು ತಾವೇ ನಿಂದಿಸಿಕೊಂಡರು. ಅಶಾಶ್ವತವಾದ

ಐಹಿಕ ಸುಖ-ಧನಾರ್ಜನೆಯಲ್ಲಿಮಗ್ನನಾಗಿ ವ್ಯರ್ಥಕಾಲ ಕಳೆದೆನಲ್ಲಾ ಎಂದು ಪರಿತಪಿ
[illegible]
ವೈರಾಗ್ಯ ಅವರನ್ನಾಶ್ರಯಿಸಿತು. ಐಶ್ವರ್ಯವನ್ನು ತುಚ್ಛವಾಗಿ ಕಂಡರು. ಪತ್ನೀ ಪುತ್ರಾದಿಗಳೊಡನೆ ಮನೆಯಿಂದ ಹೊರಬಿದ್ದು ಒಂದು ತುಳಸಿದಳವನ್ನು ಮನೆಯ ಮೇಲೆ ಹಾಕಿ"ಕೃಷ್ಣಾರ್ಪಣ" ಎಂದುಬಿಟ್ಟರು!* ಯಾವುದನ್ನು ತಾವು ಹಗಲಿರುಳು ಶ್ರಮಿಸಿ ಸಂಪಾದಿಸಿ, ಅದೇ ತಮ್ಮ ಸರ್ವಸ್ವವೆಂದು ಭಾವಿಸಿದ್ದರೋ ಅಂಥ ಸಿರಿ ಸಂಪತ್ತನ್ನು ನಶ್ವರವೆಂದುಭಾವಿಸಿ ಅದರಲ್ಲಿ ಜಿಹಾಸೆಗೊಂಡು ಎಲ್ಲವನ್ನೂ ಬ್ರಾಹ್ಮಣ ರಿಗೆ ದಾನಮಾಡಿಬಿಟ್ಟರು! ಮುಂದಿನ ಮಾರ್ಗದರ್ಶನಕ್ಕಾಗಿ ಸದ್ಗುರು ವ್ಯಾಸರಾಜ ರನ್ನು ಅರಸುತ್ತಾ ಪತ್ನೀಪುತ್ರಾದಿಗಳೊಡನೆ ವಿಜಯನಗರಕ್ಕೆ ತೆರಳಿದರು.

೦ ೦ ೦ ೦ ೦

ಕ್ರಿಸ್ತಶಕ 1517ರ ಸುಮಾರಿಗೆ ಶ್ರೀನಿವಾಸ ನಾಯಕರು ವಿಜಯನಗರಕ್ಕೆ ಬಂದರು. 'ವಿಶ್ವಪಾವನ' ಮಠದಲ್ಲಿ ಶ್ರೀವ್ಯಾಸಭಗವಾನರು ಪ್ರಾತರಾಹ್ನಿಕದಲ್ಲಿ ಮಗ್ನರಾಗಿದ್ದಾರೆ. ಪತ್ನೀಪುತ್ರಾದಿಗಳೊಡನೆ ಬಂದ ಶ್ರೀನಿವಾಸನಾಯಕರು ಗುರು ಗಳಿಗೆರಗಿದರು. ಅವರನ್ನು ಕಂಡ ಗುರುಗಳ ಮುಖವರಳಿತು. "ಬನ್ನಿ ನಾಯಕರೇ, ನಮ್ಮ ವಚನವನ್ನು ಶ್ರೀಹರಿ ಸತ್ಯಮಾಡಿದಂತಿದೆಯಲ್ಲ ! ಶ್ರೀಹರಿಯ ಅನುಗ್ರಹ ವಾಯಿತೆ ?" ಎಂದರು.

ನಾಯಕರು ಕಣ್ಣೀರು ಸುರಿಸುತ್ತಾ ಸಾಷ್ಟಾಂಗವೆರಗಿ, "ಮಹಾತ್ಮರಾದ ತಮ್ಮ ಮಾತೆಂದಾದರೂ ಸುಳ್ಳಾದೀತೇ ಗುರುದೇವ ? ಶ್ರೀಹರಿ ಅದನ್ನು ಸತ್ಯಮಾಡುವ ಮೂಲಕ ನನ್ನ ಕಣ್ಣು ತೆರೆಸಿ ಮುಂದಿನ ಮಾರ್ಗದರ್ಶನಕ್ಕಾಗಿ ತಮ್ಮಲ್ಲಿಗೆ ಬರಲು ಪ್ರೇರಿಸಿದ್ದಾನೆ! ಗುರುಚರಣಕ್ಕೆ ಶರಣಾಗಿ ಬಂದಿದ್ದೇನೆ" ಎಂದರುಹಿದರು. ಶ್ರೀ ವ್ಯಾಸಮುನಿಗಳಿಗೆ ಪರಮಾನಂದವಾಯಿತು.

ಶ್ರೀನಿವಾಸನಾಯಕರು ಕರಜೋಡಿಸಿ"ಸ್ವಾಮಿ,ಗುರ್ವನುಗ್ರಹವಿಲ್ಲದೆ ಜ್ಞಾನ ದೊರಕದಲ್ಲವೇ ? ಈಗ ನಾನು ಜ್ಞಾನಮಾರ್ಗದಲ್ಲಿ ಮುಂದುವರೆದು ಪರಮಾತ್ಮನ ದಾಸನಾಗಿ ಆತ್ಮೋದ್ಧಾರಮಾಡಿಕೊಳ್ಳಲು ನನಗೆ ಜ್ಞಾನದಾನಮಾಡಿ, ಉಪದೇಶಿಸಿ ಉದ್ಧರಿಸಬೇಕು "ಎಂದು ಕೋರಿದರು.

ಶ್ರೀವ್ಯಾಸರಾಜರಿಗೆ ಸಂತೋಷವಾಯಿತು.ಶಿಷ್ಯರಾದ ಅವರಿಗೆ ಪತ್ನೀಪುತ್ರಾದಿ ಗಳೊಡನೆ ಮಂತ್ರಮುದ್ರಾಧಾರಣಮಾಡಿ "ಪುರಂದರವಿಠಲ"ಎಂಬ ಅಂಕಿತದೊಡನೆ ಮಂತ್ರೋಪದೇಶ ಮಾಡಿ ದಾಸದೀಕ್ಷೆಯನ್ನು ಕರುಣಿಸಿ "ಇನ್ನು ಮುಂದೆ ನೀವು 'ಪುರಂದರದಾಸ'ರೆಂಬ ಅಭಿಧಾನದಿಂದ ಲೋಕವಿಖ್ಯಾತರಾಗಿರಿ" ಎಂದು ಆಶೀರ್ವದಿಸಿ

---

* ಸಹಸ್ರಾರು ಜನ ಬ್ರಾಹ್ಮಣರಿಗೆ ದಾನಮಾಡಿದರೆಂದು ಹರಿದಾಸ ಪರಂಪರೆಯವರು ಹೇಳುವರು.

ವರು. ಗುರುಗಳ ಕಾರುಣ್ಯ ದೊರಕಿತು. ಹರಿದಾಸದೀಕ್ಷೆ ವಹಿಸಿದ ಶ್ರೀನಿವಾಸ ನಾಯಕರು ಅಂದಿನಿಂದ ಪುರಂದರದಾಸರಾದರು.

ಗುರುಗಳು ಮಂತ್ರಮುದ್ರಾಧಾರಣ, ಮಂತ್ರೋಪದೇಶಪೂರ್ವಕ "ಪುರಂದರ ವಿಠಲ" ಎಂಬ ಅಂಕಿತಪ್ರದಾನ ಮಾಡಿದಕೂಡಲೇ ಅವರಶರೀರದಲ್ಲಿ ವಿದ್ಯುತ್ಸಂಚಾರ ವಾದಂತಾಯಿತು. ಅದಾವುದೋ ಮಹಾಶಕ್ತಿ ಅವರ ಧಮನಿಗಳಲ್ಲಿ ಸಂಚರಿಸಿದಂತಾಗಿ ಶರೀರ ಪುಳಕಿಸಿತು. ಆನಂದತುಂದಿಲರಾಗಿ ಗದ್ಗದ ಕಂಠದಿಂದ ತಮ್ಮ ಉದ್ಧಾರಕ ಗುರುಗಳನ್ನು ಸ್ತುತಿಸಹತ್ತಿದರು.

"ವ್ಯಾಸರಾಜರ ದಿವ್ಯಚರಣ ಕಂಡೆ ।
ವಿಸು ಜನ್ಮದ ಸುಕೃತ ಫಲದೊರಕಿತೋ ಎನ್ನ ॥
ಸಾಸಿರಕೋಟಿ ಕುಲ ಪಾವನವಾಯಿತು । ಶ್ರೀಶನ ಭಜಿಸುವುದಕಧಿಕಾರಿ ನಾನಾದೆ॥
ದೋಷರಹಿತನಾದ ಪುರಂದರವಿಠಲನ ದಾಸರ ಕರುಣವ ನನ್ನ ಮೇಲೆ ಇರಲಾಗಿ॥"

ಅಂಕಿತವಿತ್ತು ಮಂತ್ರೋಪದೇಶ, ಗುರೂಪದೇಶಮಾಡಿ ಕಾರುಣ್ಯಬೀರಿದ ಗುರುಗಳನ್ನು ಸ್ಮರಿಸುತ್ತಾ—

"ಗುರು ಉಪದೇಶವಿಲ್ಲದ ಜ್ಞಾನ । ಗುರು ಉಪದೇಶವಿಲ್ಲದ ಯೋಗ ॥
ಗುರು ಉಪದೇಶವಿಲ್ಲದ ಕ್ರಿಯೆಗಳು । ಉರುಗನ ಉಪವಾಸದಂತೆ ಕಾಣಿರೋ॥
ಗುರುವ್ಯಾಸರಾಯರೇ ಕರುಣದಿಂದೆನಗೆ। ಪರಮಹಾಮಂತ್ರಗಳ ಉಪದೇಶಿಸಿದರು॥
ಪುರಂದರವಿಠಲನೇ ಪರನೆಂದರುಹಿ । ದುರಿತಭಯವನ್ನೆಲ್ಲ ಪರಿಹರಿಸಿದರಾಗಿ ॥"

.... .... ... ....

"ಅಂಕಿತವಿಲ್ಲದ ದೇಹನಿಷಿದ್ಧ । ಅಂಕಿತವಿಲ್ಲದ ಕಾರ್ಯ ಶೋಭಿಸದು ॥
ಅಂಕಿತವಿಲ್ಲದಿರಬಾರದು ಎಂದು । ಪಂಕಜನಾಭ ಪುರಂದರವಿಠಲನ ॥
ಅಂಕಿತವೆನಗಿತ್ತ ಗುರುವ್ಯಾಸಮುನಿರಾಯ ॥"

ಹೀಗೆ ಅನೇಕ ಬಗೆಯಿಂದ ವ್ಯಾಸರಾಯರನ್ನು ಕೊಂಡಾಡಿ ಅವರ ಕಾರುಣ್ಯವನ್ನು ಸ್ಮರಿಸಿ, ಗುರುವರರನ್ನು ಇನ್ನೊಂದು ಪದದಿಂದ ಸ್ತುತಿಸಲಾರಂಭಿಸಿದರು.

"ವರಮಧ್ವಮತವೆಂಬ ಸಾಗರದೊಳು ಉದ್ಭವಿಸಿದ ಚಂದ್ರನಂತೆ ನೀನು ।
ಕರುಣಾಕರ ಬ್ರಹ್ಮಣ್ಯತೀರ್ಥರ ಕುವರನೆನಿಸಿಕೊಂಡೆ ।
ಗುರುವ್ಯಾಸರಾಯರೇ ಪರಮಗುರುಗಳೊಳು !
ಪುರಂದರವಿಠಲನೇ ಪರದೈವ ಕಾಣಿರೋ ॥"

ಹೀಗೆ ಶ್ರೀವ್ಯಾಸರಾಜರನ್ನು ಸ್ತುತಿಸಿ—

"ಗುರು ವ್ಯಾಸರಾಯರ ಚರಣವೆನಗೆ ಗತಿ ।
ಪುರಂದರವಿಠಲನ ಅರಿತೆ ಇವರಿಂದ ॥"[1]

---

1. ಅಂಕಿತ ಪಡೆದಮೇಲೆ ಪುರಂದರದಾಸರು ಮೊಟ್ಟಮೊದಲು ಮೇಲಿನ ಪದಗಳನ್ನು ರಚಿಸಿದರೆಂದು ಜ್ಞಾನಿಗಳು ಹೇಳುವರು.

ಎಂದು ಗುರುಗಳ ಚರಣಕಮಲಗಳಿಗೆ ಕೃತಜ್ಞತೆಯಿಂದ ಅಭಿನಮಿಸಿದರು.

ವ್ಯಾಸರಾಯರು ಹರ್ಷಭರಿತರಾಗಿ ಶಿಷ್ಯರಾದ ಪುರಂದರದಾಸರನ್ನು ಶ್ಲಾಘಿಸಿ "ನಾವು ಬಿತ್ತಿದ ಬೀಜ ಆಗಲೇ ಫಲಕೊಡತೊಡಗಿದೆ! ಸಂತೋಷ, ದಾಸರೇ, ನಮ್ಮ ಸನ್ನಿಧಿಯಲ್ಲೇ ಇದ್ದು ನೀವು ಹರಿದಾಸಪಂಥದ ನಾಯಕತ್ವ ವಹಿಸಿ,ಹರಿದಾಸ ಸಾಹಿತ್ಯ ನಿರ್ಮಾಣದಿಂದ ಕನ್ನಡ ಜ್ಞಾನಸರಸ್ವತಿಯ ಭಂಡಾರವನ್ನು ತುಂಬಿ, ಪಂಡಿತಪಾಮರರಿಗೆ ಮಹೋಪಕಾರಮಾಡಬೇಕು." ಎಂದುಜ್ಞಾಪಿಸಿ ಮುಂದುವರೆದು

"ಪ್ರಿಯಶಿಷ್ಯರೇ, ಬರಬರುತ್ತಾ ಜನತೆಯಲ್ಲಿ ಜ್ಞಾನದಮಟ್ಟ ಇಳಿಯುತ್ತಿದೆ. ಅದನ್ನು ಮತ್ತೆ ಮೇಲೇರಿಸಲು ನಾವು ಹೆಣಗುತ್ತಿದ್ದೇವೆ.ಸಂಸ್ಕೃತ ಭಾಷೆಯಲ್ಲಿರುವ ವೇದ-ಉಪನಿಷತ್ತು, ಪುರಾಣ-ಇತಿಹಾಸ, ಗೀತಾದಿಶಾಸ್ತ್ರಗಳ ಹಾಗೂ ದ್ವೈತ ಸಿದ್ಧಾಂತಗ್ರಂಥಗಳ ಅಧ್ಯಯನಮಾಡಿ ಸಾಧನಮಾಡಿಕೊಳ್ಳಲಾಗದ ಜನಸಾಮಾನ್ಯರು ಅಗಾಧವಾಗಿದ್ದಾರೆ.ಅವರೆಲ್ಲರ ಕಲ್ಯಾಣವಾಗಬೇಕಾಗಿದೆ.ಈ ಒಂದು ಮಾರ್ಗವನ್ನು ಪೂಜ್ಯರಾದ ಶ್ರೀನರಹರಿತೀರ್ಥರು ಪ್ರಾರಂಭಿಸಿದರು. ಅದನ್ನು ನಮ್ಮ ಗುರುಗಳು ಮುಂದುವರೆಸಿದರು. ಇದನ್ನು ವ್ಯಾಪಕವಾಗಿ ಬೆಳೆಸಲು ಅವರು ನಮಗೆ ಆಜ್ಞಾಪಿಸಿದರು. ನಮ್ಮ ಶಕ್ತ್ಯನುಸಾರ ನಾವು ಅದಕ್ಕಾಗಿ ಶ್ರಮಿಸುತ್ತಿದ್ದೇವೆ. ಈ ಮಹತ್ಕಾರ್ಯ ನಿಮ್ಮ ಮೂಲಕವಾಗಿ ಜರಗಬೇಕೆಂಬುದು ಈಶಸಂಕಲ್ಪ. ಇಂದಿನ ಶುಭಗಳಿಗೆಗಾಗಿ ನಾವು ಬಹುದಿನಗಳಿಂದ ಕಾದಿದ್ದೆವು. ಇಂದು ಶ್ರೀಹರಿಯು ಆ ಕಾರ್ಯವನ್ನು ನಿರ್ವಹಿಸುವ ಶಕ್ತಿಸಂಪತ್ತುಗಳನ್ನು ನಿಮಗೆ ಅನುಗ್ರಹಿಸಿ ನಮ್ಮಿಂದ ಅಂಕಿತ ಉಪದೇಶವನ್ನು ಕೊಡಿಸಿದ್ದಾನೆ.

ನೀವು ಸಂಗೀತಶಾಸ್ತ್ರವಿಶಾರದರು. ವೇದಾದಿಶಾಸ್ತ್ರಗಳ ಉಪದೇಶವನ್ನು ನೀವು ಸುಲಲಿತ ಕನ್ನಡನುಡಿಯಲ್ಲಿ-ಸಂಗೀತದೊಡನೆ ಬೆರೆಸಿ.ಪದ್ಯ-ಸುಳಾದಿ, ಉಗಾಭೋಗಗಳ ರೂಪದಲ್ಲಿ ಜನತೆಗೆ ನೀಡಿ, ನಿಮ್ಮ ಉಪದೇಶದಿಂದ ಜ್ಞಾನಭಕ್ತಿ ಸಂಪನ್ನರಾಗಿ ಸಜ್ಜನರು ಸಾಧನಮಾಡಿಕೊಂಡು ಶಾಶ್ವತಸುಖಭಾಗಿಗಳಾಗುವಂತೆ ಮಾಡಬೇಕು. ಇದು ಶ್ರೀಹರಿವಾಯುಗಳಿಗೆ ಅತ್ಯಂತ ಪ್ರಿಯವಾದ ಕಾರ್ಯ. ಇದು ಶ್ರೀಹರಿವಾಯುಗಳಿಗೆ, ದ್ವೈತಸಿದ್ಧಾಂತಕ್ಕೆ ಮತ್ತು ನಮಗೆ ಹಾಗು ಕನ್ನಡನಾಡಿಗೆ ನೀಡುವ ಅಪೂರ್ವಕೊಡುಗೆಯಾಗಿ ನಿಮ್ಮ ಕೃತಿಗಳು ಜಗನ್ಮಾನ್ಯವಾಗಿ, ಜನತೆಯ ಕಲಿಕಲ್ಮಷಗಳನ್ನು ತೊಳೆದು ಜ್ಞಾನದಾನಮಾಡಿ ಅವರೆಲ್ಲರೂ ಉದ್ಧೃತರಾಗಲು ಕಾರಣವಾಗುವುದು. ನಿಮ್ಮ ಹೆಸರು ಭಾಗವತೋತ್ತಮರ ಗುಂಪಿನಲ್ಲಿ ಅಜರಾಮರವಾಗುವುದು" ಎಂದು ತುಂಬಿದ ಹೃದಯದಿಂದ ಅಪ್ಪಣೆಮಾಡಿ ಆಶೀರ್ವದಿಸಿದರು.

ಪುರಂದರದಾಸರು ಭಕ್ತಿಪುಳಕಿತರಾಗಿ ಆನಂದಾಶ್ರುಹರಿಸುತ್ತಾ "ಅನುಗ್ರಹೀತನಾದೆ ಗುರುದೇವ! ಆಜ್ಞೆಯನ್ನು ಶಿರಸಾಧರಿಸಿದ್ದೇನೆ" ಎಂದು ವಿಜ್ಞಾಪಿಸಿದರು.

ಇವೆಲ್ಲವನ್ನೂ ನೋಡುತ್ತಾ ಭಕ್ತಿಶ್ರದ್ಧಾನ್ವಿತರಾಗಿ ಕಣ್ಣೀರು ಸುರಿಸುತ್ತಾ ನಿಂತಿದ್ದ ಸರಸ್ವತಮ್ಮ ತಮ್ಮ ಪತಿಯ ಪರಿವರ್ತನೆ,ಗುರುಗಳು ಮಾಡಿದ ಅನುಗ್ರಹ ಪತಿಯಿಂದ ಮುಂದಾಗಲಿರುವ ಮಹತ್ಕಾರ್ಯಗಳನ್ನು ನೆನೆದು ಆನಂದಪರವಶಳಾಗಿ ಪತಿಯ ಪಾದಕ್ಕೆರಗಿದಳು.

ಆಗ ಪುರಂದರದಾಸರು ಸರಸ್ವತಮ್ಮನನ್ನು ಸ್ನೇಹ-ಕಾರುಣ್ಯಗಳಿಂದ ಅವಲೋಕಿಸಿ ಆಕೆಯನ್ನು ಮೇಲೆಬ್ಬಿಸಿದರು. ಆಗ ಅವರು "ಈ ಸಾಧ್ವೀಮಣಿಯ ಸಲಹೆ-ಪ್ರಾರ್ಥನೆಗಳಿಗೆ ಕಿವಿಗೊಟ್ಟಿದ್ದರೆ- ನನ್ನ ಜೀವನವೆಂದೋ ಪಾವನವಾಗುತ್ತಿತ್ತು! ಅವಿವೇಕದಿಂದ ಇವಳ ಹಿತವಚನಗಳನ್ನು ಕಡೆಗಾಣಿಸಿದೆ. ಕೊನೆಗೀಗ ಇವಳ ನಿಮಿತ್ತವಾಗಿ ಅಲ್ಲವೇ ಶ್ರೀಹರಿ ನನಗೊಲಿದು ಕಣ್ಣು ತೆರೆಸಿದ! ಗುರುಗಳ ಕಾರುಣ್ಯ ಉಪದೇಶ-ಅಂಕಿತಗಳೂ ದೊರೆಯುವಂತಾಯಿತು" ಎಂದು ಯೋಚಿಸಿದರು. ಅವರ ಹೃದಯ ತುಂಬಿಬಂದು ಹಾಡಿದರು.

ರಾಗ :—ಪಂತುವರಾಳಿ. ತಾಳ :—ಆದಿ.

ಆದದ್ದೆಲ್ಲಾ ಒಳಿತೇ ಆಯಿತು । ಮಾಧವನಂಘ್ರಿಯ ಸೇವಿಸುವುದಕೆ
ಸಾಧನ ಸಂಪತ್ತಾಯಿತು. ॥ಪ.॥
ದಂಡಿಗೆಬೆತ್ತ ಹಿಡಿಯುವುದಕ್ಕೆ । ಮಂಡೆಬಾಗಿ ನಾಚುತಲಿದ್ದೆ ।
ಹೆಂಡತಿಸಂತತಿ ಸಾವಿರವಾಗಲಿ । ದಂಡಿಗೆಬೆತ್ತ ಹಿಡಿಸಿದಳಯ್ಯ ॥೧॥
ಗೋಪಾಳಬುಟ್ಟಿ ಹಿಡಿಯುವುದಕ್ಕೆ । ಭೂಪತಿಯೆಂದು ನಾಚುತಲಿದ್ದೆ ।
ಆ ಪತ್ನೀವ್ರತ ಅತಿಘನವಾಗಲಿ । ಗೋಪಾಳಬುಟ್ಟಿ ಹಿಡಿಸಿದಳಯ್ಯ ॥೨॥
ತುಲಸೀಮಾಲೆ ಹಾಕುವುದಕ್ಕೆ । ಅಲಸನಾಗಿ ತಿರುಗುತಲಿದ್ದೆ ।
ಜಲಜನಾಭ ಶ್ರೀಪುರಂದರವಿಠಲ । ತುಲಸೀಮಾಲೆ ಹಾಕಿಸಿದನು ॥೩॥

ಆಗ ನೆರೆದ ಸಜ್ಜನರೆಲ್ಲರೂ ದಾಸರ ತತ್ವಾರ್ಥಗರ್ಭಿತಪದವನ್ನಾಲಿಸಿ ತಲೆದೂಗಿದರು. ಶ್ರೀನಿವಾಸನಾಯಕರ ಹಿಂದಿನ ವಿಚಿತ್ರಜೀವನ, ಭಗವದನುಗ್ರಹ, ಗುರೂಪದೇಶ, ಇಂದಿನ ಅವರ ಮನಃ ಪ್ರವೃತ್ತಿ, ಸಿರಿಸಂಪತ್ತಿನಲ್ಲಿನ ಜಿಹಾಸೆ, ಜ್ಞಾನಮಾರ್ಗದಲ್ಲಿ ಮುನ್ನಡಿಇಟ್ಟಕೂಡಲೇ ಗುರುಸ್ಫೂರ್ತಿಯಿಂದಲೇ ಪ್ರಾರಂಭವಾದ ಹರಿದಾಸ ಸಾಹಿತ್ಯನಿರ್ಮಾಣಕಾರ್ಯ ಮುಂತಾದವನ್ನು ಕಂಡು ಆಶ್ಚರ್ಯಾನಂದ ಮಗ್ನರಾಗಿ ಈ ಗುರುಶಿಷ್ಯರನ್ನೂ, ಭಗವಂತನ ಲೀಲಾವಿಲಾಸವನ್ನೂ ಕೊಂಡಾಡಿದರು.

ವ್ಯಾಸರಾಜರು,ಪುರಂದರದಾಸರು ಪರಿವಾರಸಹಿತವಾಗಿ ವಾಸಮಾಡಲು ಮಠದ ಸಮೀಪದಲ್ಲಿ-ತುಂಗೆಯದಡದಲ್ಲಿ ಒಂದು ಶಿಲಾಮಂದಿರವನ್ನು ಏರ್ಪಡಿಸಿಕೊಟ್ಟರು.[1]

---

* 1. ಹಂಪೆಯ ತುಂಗಾನದಿಗೆ ಹೊಂದಿಕೊಂಡಿರುವ "ಶ್ರೀಪುರಂದರದಾಸರ ಮಂಟಪ"ವನ್ನು ಇಂದಿಗೂ ಕಾಣಬಹುದಾಗಿದೆ.

ದಾಸರು ಅಲ್ಲಿ ವಾಸಿಸಲಾರಂಭಿಸಿದರು. ಸಿರಿಸಂಪತ್ತಿನಲ್ಲಿ ಮೆರೆದ ದಾಸರು ಓರ್ವ ತಪಸ್ವಿಯಂತೆ, ಸಾಧಕನಂತೆ ಸರಳಜೀವನ ನಡೆಸಹತ್ತಿದರು. ಭಾಗವತಮೂರ್ಧನ್ಯ ರೆನಿಸಿ, ದಾಸಸಾಮ್ರಾಜ್ಯದ ಅಧ್ವರ್ಯುಗಳಾಗಿ ಜ್ಞಾನ-ಭಕ್ತಿ-ವೈರಾಗ್ಯಸಂಪನ್ನರಾಗಿ ಅಸಾಧಾರಣ ಕೃತಿರಚನೆಯಲ್ಲಿ ತಲ್ಲೀನರಾದರು.

ಶ್ರೀನಾರದಾಂಶರಾದ ಪುರಂದರದಾಸರು ಶ್ರೀವ್ಯಾಸರಾಜರ ಶಿಷ್ಯರಾಗಲು ಮತ್ತೊಂದು ಕಾರಣವೂ ಇದೆ. ಕೃತಯುಗದಲ್ಲಿ ಪ್ರಹ್ಲಾದರಿಗೆ ಶ್ರೀನೃಸಿಂಹರೂಪ ದಿಂದೊಲಿದ ಶ್ರೀಹರಿ ಪ್ರಹ್ಲಾದರಿಗೆ "ಭವಂತಿ ಪುರುಷಾ ಲೋಕೇ ಮದ್ಭಕ್ತಾ ಸ್ತ್ವಾಮನುವ್ರತಾಃ", ಅಂದರೆ ಜಗತ್ತಿನಲ್ಲಿ ತಾರತಮ್ಯದಲ್ಲಿ ಶ್ರೇಷ್ಠರಾಗಿದ್ದರೂ ನನ್ನ ಭಕ್ತರು ನಿನ್ನನ್ನು ಅನುಸರಿಸುತ್ತಾರೆ. ಅಥವಾ ನಿನ್ನನ್ನು ಅನುಸರಿಸಿದವರೇ ನನ್ನ ಭಕ್ತರಾಗುತ್ತಾರೆ! ಎಂದು ಅಸಾಧಾರಣವರಗಳನ್ನು ಕೊಟ್ಟಿದ್ದಾನೆ. ಕಲಿಯುಗ ದಲ್ಲಿ ಪ್ರಹ್ಲಾದಾವತಾರಿ ಶ್ರೀವ್ಯಾಸರಾಜರಿಂದಲೇ ಸಜ್ಜನರ ಉದ್ಧಾರವಾಗ ಬೇಕೆಂಬುದು ಶ್ರೀಹರಿಸಂಕಲ್ಪ. ಅಂತೆಯೇ ಸಂಕಲ್ಪವನ್ನು ಅರಿತು,ನಾರದರು ಶ್ರೀಹರಿ ಚಿತ್ತವೆಂದು, ವ್ಯಾಸರಾಜರಿಂದ ಉಪದೇಶಪಡೆದು ಹರಿದಾಸರಾಗಿ ಜ್ಞಾನಪ್ರಸಾರ ಕಾರ್ಯದಲ್ಲಿ ತೊಡಗಿ ಲಕ್ಷಾಂತರ ಪದ-ಪದ್ಯ-ಸುಳಾದಿಗಳಮೂಲಕ ಆಪಂಡಿತಪಾಮರ ರಿಗೆ ಮಹೋಪಕಾರಮಾಡಿದರೆಂದು ತಿಳಿಯಬೇಕು. ಶ್ರೀಹರಿಭಕ್ತರಾದ ಜ್ಞಾನಿಗಳು ಶ್ರೀಹರಿಯ ಚಿತ್ತಕ್ಕನುಗುಣವಾಗಿ ವರ್ತಿಸುವರೆನ್ನಲು ಇದೊಂದು ಉತ್ತಮ ದೃಷ್ಟಾಂತ.

## ೪೫. ಸಾಮ್ರಾಜ್ಯ ಗೌರವರಕ್ಷಣೆ

ಧೈರ್ಯ, ಶೌರ್ಯ, ಗಾಂಭೀರ್ಯ, ಸೌಜನ್ಯ, ದಯೆ, ವಿನಯ, ದಾನ ಶೂರತ್ವಾದಿ ಸದ್ಗುಣಮಂಡಿತನೂ, ಭಾಗವತಮೂರ್ಧನ್ಯನೂ ಆದ ಕೃಷ್ಣದೇವ ರಾಯನು ತನ್ನ ಎಲ್ಲಾ ಅಭ್ಯುದಯಗಳಿಗೂ ಶ್ರೀವ್ಯಾಸರಾಜಯತಿಸಾರ್ವಭೌಮರೇ ಕಾರಣರೆಂದು ನಂಬಿ ಅವರನ್ನು ತನ್ನ ಕುಲದೇವತೆಯಂತೆ ತ್ರಿಕಾಲದಲ್ಲಿಯೂ ಅತ್ಯಂತ ಭಕ್ತಿಪೂರ್ವಕವಾಗಿ ಸೇವಿಸುತ್ತಿದ್ದನು.[2]

ಸಕಲ ಕುಮತವಾದಗಳನ್ನು ನಿರಾಕರಿಸಿ ದ್ವೈತಸಿದ್ಧಾಂತವನ್ನು ನಿಷ್ಕಂಟಕ ಗೊಳಿಸಿ ಷಡ್ದರ್ಶನರಾಜ್ಯಸಾರ್ವಭೌಮರಾಗಿ ಶ್ರೀವ್ಯಾಸಭಗವಾನರು ರಾಜಿಸುತ್ತಿದ್ದರೆ ಅವರ ಕಾರುಣ್ಯಾತಿಶಯಕ್ಕೆ ಪಾತ್ರನಾಗಿ, "ಸಕಲದುಷ್ಟರಾಜರುಗಳನ್ನು ನಿರಾಕರಿಸಿ

---

2. ....ಭಾಗವತಮೂರ್ಧನ್ಯೇನ ತೇನ ಕೃಷ್ಣಮಹೀಪಾಲೇನ ತ್ರಿಸಂಧ್ಯಂ ಕುಲದೇವತೇವ.... ಭಗವತಿ ತಸ್ಮಿನ್ ವ್ಯಾಸಯೋಗಿನಿ ।

—ವ್ಯಾ. ಯೊ. ಚ.—P.68

ಕನ್ನಡಸಾಮ್ರಾಜ್ಯ (ಧರ್ಮಸಾಮ್ರಾಜ್ಯ) ವನ್ನು ನಿಷ್ಕಂಟಗೊಳಿಸಿ ಕರ್ನಾಟಕ ಸಾಮ್ರಾಜ್ಯಸಾರ್ವಭೌಮನಾಗಿ ಕೃಷ್ಣದೇವರಾಯನು ಕಂಗೊಳಿಸುತ್ತಿದ್ದನು.

ವ್ಯಾಸತೀರ್ಥರು ಸಾಮ್ರಾಜ್ಯಸಭೆಯಲ್ಲಿ ಅನೇಕ ದಿಗ್ದಂತಿಪಂಡಿತರನ್ನು ವಾದದಲ್ಲಿ ಜಯಿಸಿ ಕನ್ನಡಸಾಮ್ರಾಜ್ಯದ ಮತ್ತು ಕೃಷ್ಣದೇವರಾಯನ ಕೀರ್ತಿ ದಿಗಂತ ವಿಶ್ರಾಂತವಾಗುವಂತೆಮಾಡಿದ್ದರು. ಬಸವಾಭಟ್ಟ, ಲಿಂಗಣ್ಣಮಿಶ್ರ, ವಾಜಪೇಯಿ, ಕಾಶೀಮಿತ್ರ, ನರಸಿಂಹಾಶ್ರಮಮುನಿ, ಗದಾಧರ, ಪಕ್ಷಧರಮಿಶ್ರ ಮುಂತಾದವರು ವ್ಯಾಸತೀರ್ಥರಿಂದ ಪರಾಜಿತರಾದ ಪ್ರಕಾಂಡಪಂಡಿತರಲ್ಲಿ ಕೆಲವರು. ನಾನಾಶಾಸ್ತ್ರ ಕೋವಿದರಾದ ಇತರ ಪಂಡಿತರಂತೂ ಲೆಕ್ಕವಿಲ್ಲದಷ್ಟು ಜನರಿದ್ದರು ! ಹೀಗೆ ವಾದದಲ್ಲಿ ವ್ಯಾಸಮುನಿಗಳಿಂದ ಪರಾಜಿತರಾದ ಕೆಲದುರ್ವಾದಿಗಳು ಮತ್ತೆ ಶ್ರೀವ್ಯಾಸರಾಜರೊಡನೆ ವಾದಿಸುವ ಧೈರ್ಯವಿಲ್ಲದೆ ತಲೆಮರೆಸಿಕೊಂಡು ವಿಜಯನಗರದ ಶತ್ರು ರಾಜ್ಯಗಳಲ್ಲಿ ಅಡಗಿಕುಳಿತಿದ್ದರು. ಇಂಥವರಲ್ಲಿ ಕೆಲವರು ವಿಜಯನಗರದ ಕೃಷ್ಣದೇವ ರಾಯನ ಮಹಾ ಶತ್ರುವಾಗಿದ್ದ ಕಳಿಂಗದೇಶಾಧಿಪತಿಯ ಆಸ್ಥಾನಕ್ಕೆ ಹೋಗಿ ಆಶ್ರಯಪಡೆದಿದ್ದರು. ಅವರು ವ್ಯಾಸರಾಯರಮೇಲೆ ಸೇಡು ತಿರಿಸಿಕೊಳ್ಳಲು ದ್ವೈತಸಿದ್ಧಾಂತದಮೇಲೆ ಕುತ್ಸಿತದೋಷಾಭಾಸಗಳನ್ನು ಹೇರಿ ಒಂದು ಗ್ರಂಥವನ್ನು ರಚಿಸಿ ಅದನ್ನು ಕಳಿಂಗಾಧಿಪತಿಗಿತ್ತು, "ನಿಮ್ಮ ಶತ್ರು ಕೃಷ್ಣದೇವರಾಯ, ನಮ್ಮ ಶತ್ರು ವ್ಯಾಸತೀರ್ಥರು. ಈ ಗ್ರಂಥದಿಂದ ಅವರಿಬ್ಬರ ತೇಜೋವಧೆಯಾಗುವುದರಲ್ಲಿ ಸಂದೇಹವಿಲ್ಲ. ನೀವು ಈ ಗ್ರಂಥವನ್ನು ಕೃಷ್ಣದೇವರಾಯನಿಗೆ ಕಳಿಸಿಕೊಟ್ಟು ಒಂದು ತಿಂಗಳಲ್ಲಿ ಇದಕ್ಕೆ ಶ್ರೀವ್ಯಾಸರಾಜರಿಂದ ಉತ್ತರ ಗ್ರಂಥ ಬರೆಸಿ ಕಳಿಸಬೇಕು ಇಲ್ಲದಿದ್ದರೆ ಜಯಪತ್ರಿಕೆ ಕಳಿಸಬೇಕು ಎಂದು ಹೇಳಿಕಳಿಸಿರಿ. ಈ ಗ್ರಂಥವನ್ನು ಖಂಡಿಸಲು ಯಾರಿಗೂ ಸಾಧ್ಯವಿಲ್ಲ. ಆಗ ನಿಮ್ಮ ನಮ್ಮ ಅಪಜಯದ ಸೇಡುತೀರಿಸಿದಂತಾಗುವುದು" ಎಂದುಮುಂತಾಗಿ ರಾಜನನ್ನು ಪ್ರಚೋದಿಸಿದರು. ಅದರಿಂದ ಉತ್ಸಾಹಿತನಾದ ಕಳಿಂಗದೇಶಾಧಿಪತಿ ವಿದ್ಯಾಧರಪಾತ್ರನು ತನ್ನ ಸೇನಾಪತಿಯೊಡನೆ ಆಗ್ರಂಥವನ್ನು ವಿಜಯನಗರಕ್ಕೆ ಕಳುಹಿಸಿ ಒಂದುತಿಂಗಳಲ್ಲಿ ಈ ಗ್ರಂಥಕ್ಕೆ ಶ್ರೀವ್ಯಾಸರಾಜರಿಂದ ಖಂಡನಗ್ರಂಥವನ್ನಾದರೂ ಕಳಿಸಬೇಕು. ಇಲ್ಲದಿದ್ದರೆ ನೀವೇ ಖುದ್ದು ಜಯಪತ್ರಿಕೆಯನ್ನು ಕಳಿಸಬೇಕು' ಎಂದು ಸಂದೇಶದೊಡನೆ ಕಳುಹಿಸಿಕೊಟ್ಟನು.

ಕಳಿಂಗರಾಜ್ಯದ ಸೇನಾಧಿಪತಿಯು ಕೃಷ್ಣದೇವರಾಯನ ದರ್ಶನಪಡೆದು ತಮ್ಮ ರಾಜನು ಕಳಿಸಿದ ಗ್ರಂಥವನ್ನು ಸಮರ್ಪಿಸಿ ಒಂದು ತಿಂಗಳಲ್ಲಿ ಉತ್ತರಗ್ರಂಥವನ್ನು ದಯಪಾಲಿಸಬೇಕು ಅಥವಾ ಜಯಪತ್ರಿಕೆಬರೆದುಕೊಡಬೇಕು—ಎಂಬ ಸಂದೇಶವನ್ನು ಅರುಹಿದನು.

ಕಳಿಂಗದೇಶಾಧಿಪತಿಯ ಔದ್ಧತ್ಯವನ್ನು ಕಂಡು ರಾಯನಿಗೆ ಅಸಾಧ್ಯ ಕೋಪವುಂಟಾಯಿತು. ಆದರೂ ಅದನ್ನು ತೋರ್ಪಡಿಸದೆ-ಸೇನಾಧಿಪತಿಗೆ ಸೌಕರ್ಯಗಳನ್ನು

ಏರ್ಪಡಿಸಿಕೊಡುವಂತೆ ಆಜ್ಞಾಪಿಸಿ ಮಹಾಮಂತ್ರಿ ತಿಮ್ಮರಸರೊಡನೆ ಶ್ರೀವ್ಯಾಸತೀರ್ಥರ ದರ್ಶನಕ್ಕಾಗಿ ಹೊರಟನು.

ವ್ಯಾಸತೀರ್ಥರು ಪ್ರಾತರಾಹ್ನಿಕಾದಿ ಸ್ವಾಶ್ರಮೋಚಿತಕರ್ಮಗಳನ್ನೆಸಗಿ ಉಪನ್ಯಾಸಮಂದಿರಕ್ಕೆ ಚಿತ್ತೈಸಿ ಅಲ್ಲಿ ವಿದ್ಯಾಸಿಂಹಾಸನದಲ್ಲಿ ಕುಳಿತು ಪ್ರವಚನವನ್ನು ಪ್ರಾರಂಭಿಸಿದರು, ಅವರ ಮುಂದೆ ಒಂದು ಸುವರ್ಣವ್ಯಾಸಪೀಠವಿತ್ತು, ಅದರ ಮೇಲೆ ಒಂದು ತಾಲಾ ಓಲೆಯಗ್ರಂಥವಿತ್ತು. ಗುರುಗಳು ಅದನ್ನು ತೆರೆದು, ತಮ್ಮೆದುರು ಪಾಠಕ್ಕಾಗಿ ಕುಳಿತಿದ್ದ ಅನೇಕ ಯತಿಶಿಷ್ಯರು, ಸುಪ್ರಸಿದ್ಧ ಪಂಡಿತ ಸಮೂಹ, ಶ್ರೋತ್ರಿಯ ಬ್ರಾಹ್ಮಣರುಗಳು, ಹೀಗೆ ನೂರಾರು ಜನ ಶಿಷ್ಯರಿಗೆ ಉಪನಿಷತ್ತುಗಳ ತತ್ವರಹಸ್ಯಗಳನ್ನು ಉಪದೇಶಿಸಲಾರಂಭಿಸಿದರು. ಆಗ ಗುರುಗಳ ಕಂಠಧ್ವನಿ ಮಧ್ವಮತದ ವಿಜಯಶಂಖದಂತೆ ಧೀರಗಂಭೀರಧ್ವನಿಯಿಂದ ಆ ಪ್ರದೇಶವನ್ನೆಲ್ಲಾ ಶಬ್ದಾಯಮಾನಗೊಳಿಸಿ ವಿಜೃಂಭಿಸುತ್ತಿತ್ತು. ಅವರ ಮುಖಕಮಲದಿಂದ ಮುತ್ತಿನ ಅಕ್ಷರಮಾಲೆಯಂತೆ ಶುಭ್ರವಾದ ದಂತಪಕ್ತಿಗಳ ಮನೋಹರ ಕಾಂತಿಯು ಹೊರಹೊಮ್ಮುತ್ತಿತ್ತು. ಯೋಗಾಸನದಲ್ಲಿ ಕುಳಿತು ತದೇಕಚಿತ್ತರಾಗಿ ಪ್ರವಚನಮಾಡುತ್ತಿದ್ದರು, ಗುರುವರರು.

ಆಗ ರಭಸದಿಂದ ಒಳಬಂದ ದ್ವಾರಪಾಲಕನು ವ್ಯಾಸರಾಜರಿಗೆ ನಮಸ್ಕರಿಸಿ ಕರಜೋಡಿಸಿ ವಿನಯಪೂರ್ವಕವಾಗಿ ವಿಜ್ಞಾಪಿಸಿದನು-"ಮಹಾಸ್ವಾಮಿ, ಸುರಗುರು ಬೃಹಸ್ಪತ್ಯಾಚಾರ್ಯರು, ಪುರೋಹಿತರೇ ಮೊದಲಾದವರಿಂದೊಡಗೂಡಿ, ಸ್ವರ್ಗಾಧಿಪತಿಯಾದ ದೇವೇಂದ್ರನು ಜಗತ್ಪಿತಾಮಹರಾದ ಕಮಲಸಂಭವರಾದ ಚತುರ್ಮುಖ ಬ್ರಹ್ಮದೇವರ ದರ್ಶನಕಾಂಕ್ಷಿಯಾಗಿ ಬಂದಂತೆ ಸಾಮ್ರಾಟ್ ಕೃಷ್ಣದೇವರಾಯನು ಅಮಾತ್ಯರು, ಪುರೋಹಿತರು, ಮುಂತಾದವರಿಂದ ಕೂಡಿಕೊಂಡು ತಮ್ಮ ದರ್ಶನಕ್ಕಾಗಿ ಸಮಯ ನಿರೀಕ್ಷಿಸುತ್ತಾ ಬಾಗಿಲಲ್ಲಿ ಕಾದುನಿಂತಿದ್ದಾರೆ. ಅಪ್ಪಣೆಯಾಗಬೇಕು" ಎಂದು ವಿಜ್ಞಾಪಿಸಿದನು.[1]

ತಪೋಧನರಾದ ವ್ಯಾಸರಾಜ ಗುರುವರರ ಅಣತಿಯಂತೆ ಮಠೀಯ ಪಂಡಿತ ವೈದಿಕವೃಂದದೊಡನೆ ಅಧಿಕಾರಿಗಳು ಕೃಷ್ಣನರಪತಿಯನ್ನು ವೇದಘೋಷದೊಡನೆ ಸ್ವಾಗತಿಸಿ ಕರೆತಂದರು. ಶ್ರೀಗಳವರಿಗೆ ಸಾಷ್ಟಾಂಗವೆರಗಿದ ಸಾಮ್ರಾಟರು-ತಿಮ್ಮರಸರು ಮಠದ ಅಧಿಕಾರಿಗಳು ತೋರಿದ ಚಿತ್ರಾಸನಗಳಲ್ಲಿ ಕುಳಿತರು.

ಇಂಗಿತಜ್ಞರಾದ ವ್ಯಾಸಮುನಿಗಳು ನಗೆಮೊಗದಿಂದ ಭಕ್ತಿರರಸಸಂಚಾರದಿಂದ ಪುಳಕಿತಗಾತ್ರನಾಗಿ ಕುಳಿತಿರುವ ನರೇಂದ್ರನ ಕುಶಲಪ್ರಶ್ನೆಮಾಡಿ "ಸಾರ್ವಭೌಮ, ಅನಿರೀಕ್ಷಿತವಾಗಿ ನೀನೀಗ ಬಂದಕಾರಣವೇನು? ನಿನ್ನ ಮನದಾಶೆಯನ್ನರುಹು. ನಿನ್ನ

---

1. ದ್ವಾರಿ ಕೃಷ್ಣನೃಪತಿಸ್ಸಮೇತ್ಯ ಸಸ್ವಾಮಿನಸ್ಸಹ ಪುರೋಹಿತಾದಿಭಿಃ ।
ದರ್ಶನಾವಸರಮೀಕ್ಷ್ಯತೇಧುನಾ ಪಾಕಶಾಸನ ಇವಾಬ್ಜಜನ್ಮನಃ ॥ —ವ್ಯಾ. ಚ.

ಅಭೀಷ್ಟವನ್ನು ನೆರವೇರಿಸುತ್ತೇವೆ" ಎಂದು ಆಜ್ಞಾಪಿಸಿದರು.

ಗುರುವರ್ಯರು ತಾವಾಗಿಯೇ ತನ್ನಾಗಮನದ ಕಾರಣವನ್ನು ಪ್ರಶ್ನಿಸಿ ಅಭೀಷ್ಟವನ್ನು ಪೂರ್ಣಮಾಡುವುದಾಗಿ ಹೇಳಿದ್ದರಿಂದ ಸಂತೋಷದಿಂದ ವಿನಯಪೂರ್ವಕವಾಗಿ ಅಂಜಲೀಬದ್ಧನಾಗಿ ಹೀಗೆ ವಿಜ್ಞಾಪಿಸಿದನು.[2]

"ಸ್ವಾಮಿನ್, ಗುರುವರ್ಯ! ಹಿಂದೆ ಅನೇಕ ದುಷ್ಟವಾದಿಗಳನ್ನು ತಾವು ನಿಗ್ರಹಿಸಿರುವುದು ಚಿತ್ತಕ್ಕೆ ವೇದ್ಯವೇ ಆಗಿದೆ. ಪ್ರತಿವಾದಿಗಳನ್ನು ಜಯಿಸುವುದರಲ್ಲಿ ಸಮರ್ಥವಾದ ತಮ್ಮ ವಾಗ್ವೈಖರಿಯ ಮುಂದೆ ನಿಲ್ಲಲಾಗದೆ ಓಡಿಹೋಗಿ ತಮ್ಮ ದೇಶದಲ್ಲಿ ತಲೆಮರೆಸಿಕೊಂಡು ಸಂಚರಿಸುತ್ತಿದ್ದ ದುರ್ವಾದಿಪಂಡಿತರು ಇಂದ್ರಜಾಲ ವಿದ್ಯೆಗೆ ಸಜ್ಜಾಸ್ತ್ರದಂತೆಯೂ, ಮಾಯಾಮತಕ್ಕೆ ಪ್ರಾಣರೂಪವೂ, ಮೋಹಕ ಶಾಬ್ದಿಕ ಸಮೂಹಕ್ಕೆ ತತ್ವದಂತೆಯೂ, ಮಿಥ್ಯೆಗೆ ಜನ್ಮಭೂಮಿಯಂತೆಯೂ ಇರುವ ದುಷ್ಟಪಕ್ಷವನ್ನು (ಮಾಯಾಮತ-ದುಷ್ಟಪಕ್ಷಿಯನ್ನು) ಪಂಜರದಲ್ಲಿ ಬಂಧಿಸುವಂತೆ ಗ್ರಂಥರೂಪ ಪಂಜರದಲ್ಲಿ ಬಂಧಿಸಿ ಕಳಿಂಗದೇಶಾಧಿಪತಿಯಾದ ವಿದ್ಯಾಧರಪಾತ್ರನಿಗೆ ಇತ್ತರೆಂದು ತೋರುತ್ತದೆ. ಆ ದುಷ್ಟವಾದಿಗಳಿಂದ ಪ್ರಚೋದಿತನಾದ ಕಳಿಂಗಾಧಿಪತಿಯು "ಇದನ್ನು ವ್ಯಾಸತೀರ್ಥಯೋಗೀಂದ್ರರಿಗೆ ತೋರಿಸಬೇಕು" ಎಂದು ದುಸ್ಸಾಧ್ಯವಾದ ಯುಕ್ತಿಗಳಿಂದ ಲಂಚಿತವಾದ ಆ ಮಹದ್ಗ್ರಂಥವನ್ನು ತನ್ನ ಸೇನಾಪತಿಯೊಡನೆ ನನಗೆ ಕಳುಹಿಸಿದ್ದಾನೆ. ಕನ್ನಡ ಸಾಮ್ರಾಜ್ಯದ ಕೀರ್ತಿಪತಾಕೆಯಂತಿರುವ ಮಹಾನುಭಾವರಾದ ತಮಗೆ ಸವಾಲಿನಂತೆ ಕಳಿಸಿರುವ ಈ ಗ್ರಂಥವನ್ನು ಪರಿಶೀಲಿಸಿ, ನನ್ನಲ್ಲಿ ಪರಮಾನುಗ್ರಹಮಾಡಿ ಕೆಲವೇ ದಿನಗಳಲ್ಲಿ ತಮ್ಮ ಅಪ್ರತಿಹತ ಯುಕ್ತಿಪುಂಜಗಳಿಂದ ಜಡಿಮಳೆಯ ಬಿರುಗಾಳಿಯು ಶರತ್ಕಾಲದ ಮೇಘವೃಂದವನ್ನು ಛಿನ್ನ ಭಿನ್ನಮಾಡುವಂತೆ ಖಂಡಿಸಿ ಗ್ರಂಥ ಬರೆದುಕೊಟ್ಟು ಅನುಗ್ರಹಿಸಬೇಕು." ಹೀಗೆ ಪ್ರಾರ್ಥಿಸಿ ಕೃಷ್ಣಭೂಪಾಲನು ಗ್ರಂಥವನ್ನು ಶ್ರೀವ್ಯಾಸಯೋಗಿಗಳಿಗೆ ಸಮರ್ಪಿಸಿದನು.

ಶ್ರೀವ್ಯಾಸಯೋಗೀಂದ್ರರು ನಸುನಗುತ್ತಾ ರಾಯನಿಗೆ ಅಭಯಪ್ರದಾನಮಾಡಿ ಅವನ ಪ್ರಾರ್ಥನೆಯಂತೆ ಆ ಗ್ರಂಥವನ್ನು ಕ್ಷಣಕಾಲ ಅವಲೋಕಿಸಿ ಮಂದಹಾಸಬೀರಿ ಸಾಮ್ರಾಟನಿಗೆ ಪರಮತದ ಅಪ್ಪೈಫಲ್ಯವನ್ನು ರಹಸ್ಯವಾಗಿ ಸೂಚಿಸಿ, ಭೂಪಾಲನ ಎದುರಿಗೇ ಸ್ಪಷ್ಟವಾಗಿ ಮುಹೂರ್ತಮಾತ್ರದಲ್ಲಿ ಆ ಗ್ರಂಥದಮೇಲೆ ದೂಷಣಾಸವ ಪ್ರಕಾಶನ ರೂಪಗಳಾದ, ವಜ್ರಾಯುಧವನ್ನೂ ಮೀರಿಸಿ ಅಗ್ನಿವರ್ಷಮಾಡುವಂತಿರುವ ಯುಕ್ತಿಪರಂಪರಾರೂಪ ವಾಗ್ವಜ್ರಾಘಾತಗಳನ್ನೆಸಗಿ ಆ ಗ್ರಂಥವನ್ನು ಶತಶಃ ಖಂಡಿಸಿ, ಗ್ರಂಥಬರೆದು ಅದನ್ನು ಖಂಡ್ಯಗ್ರಂಥದೊಡನೆ ಕೂಡಲೇ ಕಳಿಂಗದೇಶಾಧಿ

---

1. ತುಷ್ಯನ್ನಭೀಷ್ಟಾಂ ಸ್ವಯಮೇವ ಪೃಚ್ಛಾಂ ವ್ಯಾತನ್ವತೇ ವ್ಯಾಸಯತೀಶ್ವರಾಯ |
ಕೃತಾಂಜಲಿಃ ಕೃಷ್ಣಧರಾಧಿನಾಥೋ ವಿಜ್ಞಾಪಯಾಮಾಸ ವಿನೀತಪೂರ್ವಮ್ ॥
—ಶ್ರೀ ವ್ಯಾ. ಯೋ. ಚ.

ಪತಿಗೆ ಕಳಿಸುವಂತೆ ಹೇಳಿ ಭೂಪತಿಗಿತ್ತು, "ರಾಜೇಂದ್ರ, ನಿನಗೆ, ನಿನ್ನ, ಸಾಮ್ರಾಜ್ಯಕ್ಕೆ ಮಾನಹಾನಿಯಾಗುವುದನ್ನು ನಾವೆಂದಿಗೂ ಸಹಿಸೆವು. ಅಂತೆಯೇ ಈ ಗ್ರಂಥವನ್ನು ರಚಿಸಿಕೊಟ್ಟಿದ್ದೇವೆ. ಇದರಿಂದ ನಿನ್ನ ಕೀರ್ತಿಯು ಅಪ್ರತಿಹತವಾಗಿ ಎಲ್ಲೆಡೆ ಬೆಳಗುವುದು! ನಿನಗೆ ಮಂಗಳವಾಗಲಿ" ಎಂದಾಶೀರ್ವದಿಸಿ ಫಲಮಂತ್ರಾಕ್ಷತೆಯನ್ನು ಕರುಣಿಸಿದರು.[1]

ಶ್ರೀಗಳವರು ಮಾಡಿದ ಅನುಗ್ರಹದಿಂದ ಪುಳಕಿತಗಾತ್ರನಾದ ಕೃಷ್ಣದೇವ ರಾಯನು "ಗುರುದೇವ ! ಅನುಗ್ರಹೀತನಾದೆ" ಎಂದು ಶ್ರೀಯವರ ಚರಣಗಳಿಗೆ ಅಭಿನಮಿಸಿದನು. ಸಾಮ್ರಾಜ್ಯಕ್ಕೆ, ಭೂಪತಿಗೆ, ರಾಜಗುರುಗಳಿಗೆ ಬರಲಿದ್ದ ಅಪ ಕೀರ್ತಿಯನ್ನು ಕ್ಷಣಾರ್ಧದಲ್ಲಿ ಪರಿಹರಿಸಿದ ವ್ಯಾಸರಾಜರ ಶಿಷ್ಯವಾತ್ಸಲ್ಯವನ್ನುಕಂಡು ಮಂತ್ರಿ ತಿಮ್ಮರಸು "ಗುರುದೇವ, ತಾವಿಲ್ಲದಿದ್ದಲ್ಲಿ ನಮ್ಮ ಗತಿಯೇನಾಗುತ್ತಿತ್ತೋ ಯೋಚಿಸಿದರೂ ಮೈಕಂಪಿಸುವುದು. ಸ್ವಾಮಿ, ಕನ್ನಡ ಸಾಮ್ರಾಜ್ಯ, ಮುಖ್ಯವಾಗಿ ನಮ್ಮ ಸಾರ್ವಭೌಮರ ಗೌರವವನ್ನು ಕಾಪಾಡಿದ ನಿಮಗೆ ಅನಂತ ನಮಸ್ಕಾರಗಳು" ಎಂದು ಗುರುಗಳಿಗೆ ನಮಸ್ಕರಿಸಿದನು. ತನ್ನೆದುರಿಗೆ ಗ್ರಂಥವನ್ನು ಖಂಡಿಸಿ, ಪ್ರತಿ ಗ್ರಂಥವನ್ನು ಮುಹೂರ್ತಮಾತ್ರದಲ್ಲಿ ರಚಿಸಿಕೊಟ್ಟ ಯತಿಪುಂಗವರ ವಾಗ್ವೈಭವ, ಗ್ರಂಥರಚನಾ ವಿಚಕ್ಷಣತೆಗಳನ್ನು ಕಂಡು ವಿಶೇಷ ವಿಸ್ಮಿತಾಂತಃಕರಣನಾಗಿ ಕೃಷ್ಣ ಭೂಪಾಲನು ಶ್ರೀವ್ಯಾಸಯೋಗೀಂದ್ರರಿಗೆ ನಮಿಸಿ ಅಪ್ಪಣೆ ಪಡೆದು ಮಹಾಮಾತ್ಯ ರೊಡನೆ ಅರಮನೆಗೆ ತೆರಳಿದನು.[2]

ಕೃಷ್ಣದೇವರಾಯನು ಕಳಿಂಗದೇಶದ ಸೇನಾಪತಿಯನ್ನು ಕರೆಸಿಕೊಂಡು ಅವನಿಗೆ ವ್ಯಾಸರಾಜರು ರಚಿಸಿಕೊಟ್ಟ ಗ್ರಂಥವನ್ನೂ ಕಳಿಂಗದೇಶಾಧಿಪತಿ ಕಳಿಸಿದ (ಖಂಡ್ಯ ಗ್ರಂಥ)ವನ್ನೂ ಕೊಟ್ಟು "ಸೇನಾನಿಗಳೇ, ನಿಮ್ಮ ಮಹಾರಾಜರು ನೀವು ತಂದಿತ್ತ ಗ್ರಂಥಕ್ಕೆ ತಿಂಗಳೊಪ್ಪತ್ತಿನಲ್ಲಿ ಖಂಡನಗ್ರಂಥಬರೆಸಿಕಳಿಸಬೇಕೆಂದು ಹೇಳಿಕಳಿಸಿದರಷ್ಟೆ, ಆದರೆ ನಿಮ್ಮ ಈ ಗ್ರಂಥವನ್ನು ಅವಲೋಕಿಸಿದಕೂಡಲೇ ಪೂಜ್ಯ ವ್ಯಾಸಭಗವಾನರು ನಿಮ್ಮಗ್ರಂಥವನ್ನು ಶತಶಃ ಖಂಡಿಸಿ ಇಕೋ, ಈ ಪ್ರೌಢಗ್ರಂಥವನ್ನು ರಚಿಸಿಕೊಟ್ಟಿರು ತ್ತಾರೆ, ಹೂಂ, ತೆಗೆದುಕೊಳ್ಳಿ ಗ್ರಂಥಗಳನ್ನು, ಈ ಗ್ರಂಥಕ್ಕೆ ಯೋಗ್ಯತೆಯಿದ್ದರೆ, ನಿಮ್ಮ ಪಂಡಿತರಿಂದ ಖಂಡನಬರೆಸಿ ಒಂದು ತಿಂಗಳಲ್ಲಿ ಕಳಿಸಬೇಕು. ಅಥವಾ ನಿಮ್ಮ

---

1. ....ವ್ಯಾಸತಪೋನಿಧಿರಪಿ ತಾಮಾದಾಯ ರಹಸಿ ಸೂಚಿತವಿಮತಭಾವಮತಿಃ ಪುರಸ್ತಾದೇವ ಭೂಭೃತಸ್ಯ ಮುಹೂರ್ತಮಾತ್ರೇ ವನ್ಹಿಭಿರತಿ ವಜ್ರಪಾತಾದಿಭಿರುಪಪರಿದೂಷಣಾ ನವ ಪ್ರಕಾಶದಾಯಿನೀಭಿರ್ಯುಕ್ತಿಪರಂಪರಾಭಿಃ ಶತಶಃ ಖಂಡಯಿತ್ವಾ ಪುನರಪಿ ಕಳಿಂಗ ದೇಶಾಧಿಪತಿಯೇ ರಘಿಡತಿ ಗ್ರಂಥಮೇನಂ ಪ್ರೇಷಯೇತಿ ತಸ್ಮೈ ಭೂಪತಯೆ ಪ್ರಾದಾತ್॥
—ಶ್ರೀ ವ್ಯಾ. ಯೋ. ಚ.

2. ವಿಲೋಕ್ಯವಾಚಾಂ ವಿಭವಂ ತದೀಯಂ ವಿಶೇಷತೋ ವಿಸ್ಮಯಮಾನಚೇತಾಃ ।
ಕೃಷ್ಣಕ್ಷಿತೀಂದ್ರಃ ಕೃತಸಂಪ್ರಣಾಮಃ ತಸ್ಮಾದನುಜ್ಞಾಪ್ಯ ಸಗೇಹಮಾಪ ॥
—ಶ್ರೀ ವ್ಯಾ. ಯೋ. ಚ.

ರಾಜರೇ ಜಯಪತ್ರಿಕೆಯನ್ನು ಬರೆದು ನಮ್ಮ ಗುರುಗಳಿಗೆ ಕಳಿಸಬೇಕು. ಇಲ್ಲದಿದ್ದರೆ ಕನ್ನಡ ಸಾಮ್ರಾಜ್ಯಕ್ಕೆ ಅಗೌರವ-ಅಪಕೀರ್ತಿಗಳನ್ನು ತರಲು ಪ್ರಯತ್ನಿಸಿದ ನಿಮ್ಮ ಮೇಲೆ ಕಾರ್ಯಕ್ರಮ ಕೈಗೊಳ್ಳಬೇಕಾದೀತು!-ಈ ಸಂದೇಶವನ್ನು ನಿಮ್ಮರಾಜರಿಗೆ ತಿಳಿಸಿರಿ" ಎಂದು ಹೇಳಿಕಳಿಸಿದನು.

ಒಂದೆರಡು ತಿಂಗಳುಗಳಲ್ಲಿ ವಿದ್ಯಾಧರಪಾತ್ರನು ಪಂಡಿತರ ಮಾತುನಂಬಿಹಿಂದು ಮುಂದುಮುಂದಾಲೋಚನೆಯಿಲ್ಲದೆ ವ್ಯಾಸರಾಜರನ್ನು ಪರೀಕ್ಷಿಸಲೆತ್ನಿಸಿದ್ದು ಅವಿವೇಕ ವಾಯಿತೆಂದು ಪಶ್ಚಾತ್ತಪ್ತನಾಗಿ ಸ್ವತಃ ಜಯಪತ್ರಿಕೆ, ಅನರ್ಘ್ಯ ಕಾಣಿಕೆಗಳೊಡನೆ ಶ್ರೀವ್ಯಾಸರಾಜರಿಗೆ ಸಮರ್ಪಿಸಬೇಕೆಂದು ಪ್ರಾರ್ಥನಾ ಪತ್ರದೊಡನೆ ಕಳುಹಿಸಿದನು. ಇದರಿಂದ ಕನ್ನಡಸಾಮ್ರಾಜ್ಯ, ಕೃಷ್ಣಭೂಪತಿ ಮತ್ತು ವ್ಯಾಸಯೋಗಿಗಳ ಕೀರ್ತಿ ದಿಗಂತವಿಶ್ರಾಂತವಾಯಿತು.

## ೪೬. ರತ್ನಾಭಿಷೇಕ

ಮಹಾಕವಿ ಸೋಮನಾಥನು ರಚಿಸಿರುವ "ಶ್ರೀವ್ಯಾಸಯೋಗಿಚರಿತೆ" ಯಲ್ಲಿ ಕೃಷ್ಣದೇವರಾಯನು ಶ್ರೀವ್ಯಾಸರಾಜಗುರುಸಾರ್ವಭೌಮರಿಗೆ ನೆರವೇರಿಸಿದ "ರತ್ನಾಭಿ ಷೇಕ"ಪ್ರಕರಣವು ಒಂದು ಮಹೋನ್ನತ ರಸಘಟ್ಟ. ಸಮಗ್ರ ಕಾವ್ಯದ ಹೃದಯ ದಂತಿರುವ ಈ ಸರಸಬಂಧುರ ಸಂದರ್ಭವು ಕಾವ್ಯಪರಿಶೀಲನ ಪಟುಗಳ ಮನಸ್ಸನ್ನಾ ಕರ್ಷಿಸಿ ಅವರ ಚಿತ್ತಭಿತ್ತಿಯಲ್ಲಿ ಅಚ್ಚಳಿಯದ ಮುದ್ರೆಯನ್ನೊತ್ತುವುದು. ಅನೇಕ ಶಬ್ದಾರ್ಥಾಲಂಕಾರಗಳಿಂದಪರಿಪೂರ್ಣವಾದ ರಸವಂತಿಕೆಗಳಿಂತಿರುವ ಸುಮನೋಹರ ಲಲಿತಪದಪುಂಜಗಳಿಂದ ರಂಜಿಸುವ ಈ ಚಂಪೂಕಾವ್ಯದ ಸೊಬಗನ್ನು ಓದಿ ಆನಂದಿಸ ಬೇಕೇ ವಿನಃ ಅದನ್ನು ವರ್ಣಿಸಿ ತಿಳಿಸಲು ಶಬ್ದಸಂಪತ್ತೇ ಸಾಲದೇನೋ ಎನಿಸುವುದು.

ರತ್ನಾಭಿಷೇಕ ಪ್ರಕರಣದ ಹಿನ್ನೆಲೆ ಮತ್ತು ವಿಷಯನಿರೂಪಣಾಕ್ರಮವು ಅತಿ ರಮಣೀಯವಾಗಿದ್ದು ಸಹೃದಯಹೃದಯಾಹ್ಲಾದಕಾರಿಯಾಗಿರುವುದಲ್ಲದೆ, ಮಹಾ ಕವಿಯ ಕಾವ್ಯರಚನಾಕೌಶಲವು ಸುವ್ಯಕ್ತವಾಗುವುದು. ಸಮಗ್ರ ಕಾವ್ಯವನ್ನು ಚೆನ್ನಾಗಿ ಪರಿಶೀಲಿಸಿದಾಗ ಅತ್ಯಂತ ಕುಶಲ ಕಲೆಗಾರನೊಬ್ಬನು ವಿವಿಧವರ್ಣರಂಜಿತ ಹಾಗೂ ಸುವರ್ಣಸೂಲುಗಳನ್ನಳವಡಿಸಿಕೊಂಡು ತನ್ನೆಲ್ಲಾ ಚಾತುರ್ಯವನ್ನೂ ವಿನಿ ಯೋಗಿಸಿ ಸುರಸರಸ್ವತಿಗೆಉಡುಗೊರೆಗಾಗಿ ಹೆಣೆದಅಪೂರ್ವ ಪಟ್ಟೆಪೀತಾಂಬರದಂತೆ ಈ ವ್ಯಾಸಯೋಗಿಚರಿತೆಯು ಕಾವ್ಯದೇವಿಯ ಉಪಾಸಕರ-ನಿರೀಕ್ಷಕರ ಕಣ್ಮನಗಳನ್ನು ಸೆಳೆದು ಹೃದಯವನ್ನುತಣಿಸಿಮಹದಾನಂದವನ್ನುತಂದೀಯುವುದರಲ್ಲಿಸಂದೇಹವಿಲ್ಲ.

ಸೋಮನಾಥನ ಈ ಚಂಪೂಕಾವ್ಯವು ಸಾಹಿತ್ಯಾಕಾಶದ ಧ್ರುವತಾರೆಯಂತೆ ಸದಾತನವಾಗಿ ಬೆಳಗಿ ಉಳಿಯುವ ಉತ್ತಮಕೃತಿಎಂಬುದನ್ನು ದೃಢಪಡಿಸುವುದಲ್ಲದೆ ಮತ್ತೆಮತ್ತೆ ಪರಿಶೀಲಿಸಿದಂತೆಲ್ಲಾ ನಿತ್ಯನೂತನವಾಗಿ, ಹೊಸಹೊಸ ಭಾವಬಂಧುರ

ವಾಗಿ, ಅರ್ಥವೈಶಿಷ್ಟ್ಯಗಳಿಂದ ವಿಶಿಷ್ಟವಾಗಿ ಗರಿಷ್ಟವಾಗಿ ಕಾವ್ಯದ ವೈಶಿಷ್ಟ್ಯವನ್ನು ಸ್ಪಷ್ಟಗೊಳಿಸುವುದು.

ಕಾವ್ಯದ ಲಕ್ಷಣವನ್ನು ಹೇಳುವಾಗ "ಕಾವ್ಯಂ ಯಶಸೇ ಅರ್ಥಕೃತೇ ವ್ಯವಹಾರವಿದೇ ಶಿವೇತರ ಕ್ಷತಯೇ। ಸದ್ಯಃಪರನಿರ್ವೃತಯೇ ಕಾಂತಾಸಮ್ಮಿತತಯೋಪದೇಶ-ಯುಜೇ ||" ಎಂದಿರುವಂತೆ ಈ ಕಾವ್ಯದಲ್ಲಿ ಅವೆಲ್ಲವೂ ಯಥಾವತ್ತಾಗಿದೆ ಎಂದು ಧೈರ್ಯವಾಗಿ ಹೇಳಬಹುದು. ಕಾವ್ಯದ ವಸ್ತುವು ಉತ್ತಮವಾಗಿದ್ದು, ಚಿತ್ರಿಸುವ ಪಾತ್ರದ ಗುಣಗಳೆಲ್ಲ ನಿತ್ಯಸತ್ಯಭೂತವಾಗಿ ಪಾತ್ರವು ಜೀವಂತವಾಗಿದ್ದಲ್ಲಿ ಕವಿಯ ಸ್ಫೂರ್ತಿಯು ಚಿಗುರೊಡೆದು ಕುಸುಮಿತವಾಗಿ ಸುಗಂಧಸೌರಭವನ್ನು ಬೀರುತ್ತಾ ಕವಿಯರಚನಾಕೌಶಲಕ್ಕೆ ಕಳೆತಂದು, ಆ ಕಾವ್ಯಕ್ಕೆ ಜಗನ್ಮಾನ್ಯತೆಯನ್ನು ತಂದುಕೊಡಲು ಸಮರ್ಥವಾಗುವುದು. ಅದಿಲ್ಲದೆ-ಕಥಾವಸ್ತುವು ಮತ್ತು ಪಾತ್ರಗಳುನಿಸ್ಸಾರವಾಗಿದ್ದು ಸತ್ಯಕ್ಕೆ ಹೊರತಾಗಿ ಕೇವಲ ಕಲ್ಪನೆಯ ಬೆಸಗಿನಿಂದ ಕೂಡಿದ್ದಲ್ಲಿ ಅಂತಹ ಕಾವ್ಯವು ಸತ್ವರಹಿತವಾಗಿ, ನೈಜತೆಯನ್ನು ಕಳೆದುಕೊಂಡು ಕಳಾವಿಹೀನವಾಗುವುದು. ಕಲೆಗಾರನೆಷ್ಟೇ ಕುಶಲನಾಗಿರಲಿ, ಬಣ್ಣಕಟ್ಟಿದ ನೂಲುಗಳಿಂದ ಹೆಣೆದ ಪೀತಾಂಬರವು ಕೊನೆಗೊಮ್ಮೆ ತನ್ನ ನೈಜಬಣ್ಣವನ್ನು ತಳೆದು ಕಳೆಗುಂದುವಂತೆ ಕಾವ್ಯವೂ ಸಹ ಕಳಾಹೀನವಾಗುವುದು. ಆದರೆ ಸೋಮನಾಥ ಕವಿಯು ಆರಿಸಿಕೊಂಡಿರುವ ವಸ್ತುವು ಉತ್ತಮವಾಗಿರುವುದಲ್ಲದೆ, ಸತ್ವಪೂರ್ಣವೂ ಆಗಿರುವುದರಿಂದ, ವರ್ಣಿಸಿರುವ ಪಾತ್ರದ ಗುಣಗಳೆಲ್ಲವೂ ಸತ್ಯಪೂರ್ಣವೂ, ಸ್ವಾಭಾವಿಕವೂ ಆಗಿರುವುದರಿಂದ ಅವನ ಈ ಕಾವ್ಯವೂ ಸ್ವಾಭಾವಿಕ ಗುಣವಿಶಿಷ್ಟ ವರ್ಣರಂಜಿತ ಸದಾತನ ನೂಲುಗಳಿಂದ ಹೆಣೆಯಲ್ಪಟ್ಟ ಸ್ವರ್ಣಪೀತಾಂಬರದಂತೆ ಚೇತೋಹಾರಿಯೂ, ಸಾರ್ವಕಾಲೀನವೂ ಆಗಿದೆಯೆಂದು ಧಾರಾಳವಾಗಿ ಹೇಳಬಹುದು.

ಸೋಮನಾಥನು 16ನೆಯ ಶತಮಾನದಲ್ಲಿ ಶ್ರೇಷ್ಠದರ್ಜೆಯ ಮಹಾಕವಿ ಮಾತ್ರವಲ್ಲದೆ, ಚತುಶ್ಶಾಸ್ತ್ರಗಳಲ್ಲಿ ಪಾರಂಗತನೂ ಆಗಿದ್ದನು. ನ್ಯಾಯ- ವೇದಾಂತ ಮೀಮಾಂಸಾ-ವ್ಯಾಕರಣ-ಸಾಹಿತ್ಯಶಾಸ್ತ್ರಗಳಲ್ಲಿ ಉತ್ತಮಕೃತಿಗಳನ್ನು ರಚಿಸಿ ವಿದ್ವತ್ಪ್ರಪಂಚದಲ್ಲಿ ಖ್ಯಾತನಾಗಿ ಅನೇಕ ರಾಜರಿಂದ ಸನ್ಮಾನಿತನಾಗಿದ್ದನು. ಸೋಮನಾಥನು ಅದ್ವೈತಮತಾನುಯಾಯಿಯಾಗಿದ್ದು ಶ್ರೀವ್ಯಾಸರಾಜರ ಅದ್ಭುತ ವ್ಯಕ್ತಿತ್ವ, ಸಕಲ ದರ್ಶನಗಳಲ್ಲಿ ಅವರಿಗಿದ್ದ ಪ್ರಕಾಂಡಪಾಂಡಿತ್ಯ, ವಾದವಿದ್ಯಾವೈಖರಿ, ಸಿದ್ಧಾಂತ ಸ್ಥಾಪನಾಧೌರೇಯತೇ, ವಿದ್ವಜ್ಜನಪಕ್ಷಪಾತ. ಸರ್ವಜನಾನುಗ್ರಹಾಕಾಂಕ್ಷೆ, ಅಪಾರ ತಪಸ್ಸು, ಸಾತ್ವಿಕ ತೇಜಸ್ಸು, ಮತ್ತಿತರ ಅನಿತರಸಾಧಾರಣ ಔದಾರ್ಯಾದಿಸದ್ಗುಣಗಳಿಂದಪ್ರಭಾವಿತನಾಗಿ ಸ್ವಯಂಸ್ಫೂರ್ತಿಯಿಂದ ಈಮಹಾಕಾವ್ಯವನ್ನು ರಚಿಸಿದ್ದಾನೆ. ಯಾವವೊಂದು ಆಶೋತ್ತರಗಳ ಪ್ರಲೋಭವಿಲ್ಲದೆ ವ್ಯಾಸಯೋಗೀಂದ್ರರ ನೈಜ ವ್ಯಕ್ತಿತ್ವದ ಸತ್ಯಕಥೆಯನ್ನು ಸ್ವಾಭಾವಿಕವಾಗಿ ಚಿತ್ರಿಸಿರುವುದರಿಂದ ಇದು ವಿಬುಧಾ

ನೇಕದಮಾನ್ಯತೆಗಳಿಸಿ ಅಂದಿನಕಾಲದ ಮಹತ್ವಪೂರ್ಣಕಾವ್ಯವೆನಿಸಿ ಹೆಸರುಗೊಂಡಿದೆ.

ಈ ಕಾವ್ಯರಚನೆಯಿಂದ ನಿನಗೇನು ಪ್ರಯೋಜನ ? ಎಂದು ಮತ್ಸರಗ್ರಸ್ಥ ಪಂಡಿತರಿಗೆ ಉತ್ತರಕೊಡಲೋ ಎಂಬಂತೆ ಕಾವ್ಯರಚನೆಯ ಉದ್ದೇಶವನ್ನು "ಶ್ಲಾಘಾ ಕಂಪನಮೇಕಮೇವ ಶಿರಸಃ ಶ್ರೀವ್ಯಾಸಯೋಗಿಶಿತುಃ । ಮೇರೂಣಾಂ ಶತಮರ್ಹತಿ ಕ್ಷಿತಿತಲೇ ವಿದ್ಯಾಸು ವಿದ್ಯಾವತಾವತ್॥" ವಿವಿಧ ವಿದ್ಯೆಗಳಲ್ಲಿ ಪಾರಂಗತರಾದ ಪಂಡಿತ ರಿಗೆ, ತಮ್ಮ ಗುಣವನ್ನು ಗುರುತಿಸಿ ಒಮ್ಮೆ ಶ್ರೀವ್ಯಾಸತೀರ್ಥರು ಶ್ಲಾಘನೆಯಿಂದ ಶಿರಃಕಂಪನಮಾಡಿದರೆ ಸಾಲದೆ ? ಅದು ನೂರು ಮೇರುವಿನ ಸಮಾನವಾಗುವುದು. ಅಂದರೆ ನನ್ನ ವಿದ್ಯೆ. ಅನುಪಾದಕ್ರಮವನ್ನು ಆಲಿಸಿ, ಅಥವಾ ಈ ಕಾವ್ಯವನ್ನು ಆಲಿಸಿ ಶ್ರೀವ್ಯಾಸರಾಜಗುರುವರರು ಒಂದೇ ಒಂದು ಸಲ ಆನಂದದಿಂದ ಶ್ಲಾಘನೆಗಾಗಿ ತಲೆ ದೂಗಿದರೆ ಸಾಕು! ಅದೇ ನನಗೆ ನೂರು ಸುವರ್ಣಗಿರಿಗಳನ್ನು ನೀಡಿದಷ್ಟು ಪ್ರಯೋ ಜನವಾಗುವುದು ! ಅದಕ್ಕಿಂತ ಬೆಲೆಬಾಳುವ ಮಹತ್ಪ್ರಯೋಜನ ಬೇರಾವುದಿದೆ ?" ಎಂದು ಹೆಮ್ಮೆಯಿಂದ ಹೇಳಿಕೊಂಡಿದ್ದಾನೆ.

ಸುರಭಾರತಿಯ ಸುಂದರವೀಣೆಯ ನಿರುಪಮ ಸುಮಧುರದಿಂಚರಗಳಂತಿರುವ ಅಪ್ಪುತಸ್ಯಂದಿ ಗದ್ಯ-ಪದ್ಯಾತ್ಮಕ ಕಾವ್ಯವಾಹಿನಿಯನ್ನು ಹರಿಸಿರುವ ಸೋಮನಾಥ ನಂಥ ಪರಮತೀಯಪಂಡಿತನೊಬ್ಬನು ದ್ವೈತಸಿದ್ಧಾಂತ ತತ್ವಗಳು ಮತ್ತು ಅವನ್ನು ಎತ್ತಿಹಿಡಿದು ಉಪದೇಶಿಸಿದ ಆಚಾರ್ಯ ಶ್ರೀವ್ಯಾಸಭಗವಾನರಲ್ಲಿ ಅವನಿಗಿರುವ ಅತಿಶಯ ಗೌರವ-ಭಕ್ತಿಗಳನ್ನು ತನ್ನ ಅಮರಕೃತಿಯ ಮೂಲಕ ಪ್ರಕಟಿಸಿರುವ ಸಂದರ್ಭವು ಬಹುಶಃ ಕಾವ್ಯಪ್ರಪಂಚದಲ್ಲಿ ಇದೊಂದೇ ಆಗಿರಬಹುದೇನೋ ಎನಿಸುವುದು.

ಅನ್ಯಮತೀಯನಾದ ಅದ್ವಿತೀಯ ಪಂಡಿತಶ್ರೇಷ್ಠನೊಬ್ಬನಿಂದ ಕಾವ್ಯನಾಯಕ ರಾಗಿ ಮೆರೆದ ಶ್ರೀವ್ಯಾಸರಾಜರವ್ಯಕ್ತಿತ್ವದ ಹಿರಿಮೆ ಎಂತಹುದು ? ಇಡೀ ದಕ್ಷಿಣಾ ಪಥಸಾಮ್ರಾಟನಾಗಿದ್ದ ಕೃಷ್ಣದೇವರಾಯನಿಂದ ಕುಲದೇವತೆಯೋಪಾದಿಯಲ್ಲಿ ಅಸ ದೃಶ ರತ್ನಾಭಿಷೇಕಾದಿ ಉನ್ನತೋಪಚಾರಗಳಿಂದ ಉಪಚರಿತರಾದ ಶ್ರೀವ್ಯಾಸ ಯೋಗೀಂದ್ರರ ಘನಗಂಭೀರ ವ್ಯಕ್ತಿತ್ವಕ್ಕೆ ಸೋಮನಾಥ ತನ್ನ ಪಾಂಡಿತ್ಯಪೂರ್ಣ ಕಾವ್ಯ ಕಿರೀಟವನ್ನಿಟ್ಟು ಮೆರೆಸಿದ್ದಾನೆ. ತನ್ನ ಅನುಪಮ ವರ್ಣನಾವೈಖರಿಯ ಕುಸುರು ಕೆಲಸದ ಶಾಲು-ಶಕಲಾತಿಗಳನ್ನು ತೊಡಸಿದ್ದಾನೆ, ಸುಂದರ ನಿರ್ಮಲ ಭಕುತಿಭಾವಗಳ ಮೌಕ್ತಿಕಮಾಲೆಯಿಂದ ಅಲಂಕರಿಸಿದ್ದಾನೆ.

ಸೋಮನಾಥನ ಕಾವ್ಯ ರಸಾಭಿಜ್ಞರಿಗೆ ರಸದೂಟ ! ಭಾವುಕರಿಗೆ ಭಕ್ತಿಯ ಹೊನಲು ! ತನ್ನ ಕಾವ್ಯಕ್ಕೆ ಅಪೇಕ್ಷಿಸಿದ ಸಂಭಾವನೆಯೇನು ? ಶ್ರೀವ್ಯಾಸರಾಜರ ಮೆಚ್ಚಿಕೆಯ ತಲೆದೂಗುವಿಕೆ ! ಅದರ ಮುಂದೆ ಆತನಿಗೆ ಇನ್ನಾವುದೂ ಸಮನಲ್ಲ ! ಇಂಥ ಪಂಡಿತಾಗ್ರಣಿಯನ್ನು ಈ ಭಾವನೆಗೆ ಒಳಪಡಿಸಿದ ಗುರುಗಳ ಜ್ಞಾನ, ತಪಸ್ಸು ವೈರಾಗ್ಯ, ಭಕ್ತಿ, ವಿವೇಕವಿಚಕ್ಷತೆಗಳ ವೈಶಾಲ್ಯವೆಷ್ಟಿರಬೇಕು ? ಇಂಥ ಜ್ಞಾನಿ

ನಾಯಕರನ್ನು, ಪಂಡಿತಪ್ರಕಾಂಡರನ್ನು ಗೌರವಿಸಿ ಏಕತ್ರಮಿಲಿತರಾಗುವ ಮಂಗಳ ಮುಹೂರ್ತಗಳನ್ನು ಒದಗಿಸಿ, ತನಗೂ ತನ್ನ ಸಾಮ್ರಾಜ್ಯಕ್ಕೂ ಜನತೆಗೂ ಮಹ ದುಪಕಾರಮಾಡಿದ್ದಾನೆ ಕನ್ನಡರಮಾರಮಣನೆನಿಸಿದ ಕೃಷ್ಣದೇವರಾಯ.

'ರಾಜಗುರು' ಶ್ರೀ ವ್ಯಾಸರಾಜರ ರತ್ನಾಭಿಷೇಕವನ್ನು ಕೃಷ್ಣದೇವರಾಯ ಅದೆಷ್ಟು ವಿಶ್ವಾಸ-ಭಕ್ತ್ಯಾದರಗಳಿಂದ ನೆರವೇರಿಸಿದನೋ ನಾವರಿಯೆವು. ಆದರೆ ಸೋಮನಾಥ ಮಾಡಿರುವ ಕಾವ್ಯರತ್ನಾಭಿಷೇಕವು ಅನ್ಯಾದೃಶವಾಗಿದ್ದು,ಅದನ್ನೋ ದುವ ಸೌಭಾಗ್ಯ ದೊರಕುವಂತೆ ಮಾಡಿದ ಕವಿಗೆ ಸರ್ವರೂ ಚಿರಋಣಿಯಾಗಿರ ಬೇಕು. ಶ್ರೀವ್ಯಾಸರಾಜರ ಘನಪೆತ್ತ ವ್ಯಕ್ತಿತ್ವವನ್ನು ತನ್ನ ಭಕ್ತ್ಯಾರಾಧನೆಗಳಿಂದ ಅತ್ಯುನ್ನತ ಶಿಖರಕ್ಕೇರಿಸಿದ ಕೀರ್ತಿ ಕೃಷ್ಣದೇವರಾಯನದಾದರೂ ಅದನ್ನು ಸಾರ್ವ ಕಾಲೀನವಾಗಿ ಉಳಿಯುವಂತೆ ಕಾವ್ಯಾರಾಮದಲ್ಲಿ ಮೆರೆಸಿದವನು ಸೋಮನಾಥ! ಅನೇಕ ಶತಕಗಳ ಹಿಂದೆ ನಡೆದುಹೋದ ಆ ಸುಂದರ ಚಿತ್ರವನ್ನು ಕಣ್ಣೆದುರು ತಂದು ನಿಲ್ಲಿಸಿ,ಆ ಮಂಗಳ ಸಮಾರಂಭದಲ್ಲಿ ನಾವೂ ಒಬ್ಬರಾದಂಥ ಅನುಭವವನ್ನು ತಂದುಕೊಟ್ಟ ಸೋಮನಾಥ ನಿರೂಪಿಸಿರುವ ಶ್ರೀವ್ಯಾಸರಾಜರ ರತ್ನಾಭಿಷೇಕ ವೈಭವವನ್ನು ಈಗ ಓದಿ ಆನಂದಿಸಿರಿ!

o o o o o

ಕಳಿಂಗ ದೇಶಾಧಿಪತಿಯು ಕಳಿಸಿದ ಗ್ರಂಥವನ್ನು ಖಂಡಿಸಿ, ಪ್ರತಿಗ್ರಂಥವನ್ನು ರಚಿಸಿಕೊಟ್ಟು ಸಾಮ್ರಾಜ್ಯದ ಗೌರವವನ್ನು ರಕ್ಷಿಸಿದ ಪೂಜ್ಯ ವ್ಯಾಸರಾಜರಲ್ಲಿ ಕೃಷ್ಣ ದೇವರಾಯನಿಗೆ ಅಪಾರಗೌರವಾದರಗಳು ಹೆಚ್ಚಿವೆ. ಶ್ರೀವ್ಯಾಸತೀರ್ಥರ ಈ ದಿಗ್ವಿ ಜಯವು ಕರ್ನಾಟಕ ಸಾಮ್ರಾಜ್ಯದ ಮಹಾದಿಗ್ವಿಜಯವೆಂದು ಭಾವಿಸಿದ ರಾಯನಿಗೆ ಅಪಾರ ಆನಂದವಾಗಿದೆ. ತನಗೂ ಸಾಮ್ರಾಜ್ಯಕ್ಕೂ ಅನೇಕಬಾರಿ ಉಪಕಾರಮಾಡಿ ನಾಡಿನ ಕೀರ್ತಿ ಎಲ್ಲೆಡೆ ಮೆರೆಯುವಂತೆ ಮಾಡಿರುವ ಗುರುವರ್ಯರನ್ನು ವಿಶೇಷರೀತಿ ಯಿಂದ ಸತ್ಕರಿಸಬೇಕೆಂದು ಹಂಬಲಿಸಿದ್ದಾನೆ ಕೃಷ್ಣದೇವರಾಯ. ಕೃಷ್ಣದೇವರಾಯ ತನ್ನ ಭುಜಬಲ ಪರಾಕ್ರಮದಿಂದ ಇತರರಾಜರನ್ನು ಜಯಿಸಿ ಸಂಪಾದಿಸಿದ ಸಂಪತ್ತು ತನ್ನ ಔದಾರ್ಯದ ಪರಮಾವಧಿ, ಕರಕಮಲಗಳ ಕೊಡುಗೆ. ತನ್ನ ಧನಸಂಪತ್ತು, ಕೀರ್ತಿ ಹಾಗೂ ಗುಣರಾಶಿಗಳಿಗನುಗುಣವಾಗಿ ವ್ಯಾಸಭಿಕ್ಷುಗಳನ್ನು ಪೂಜಿಸಲು ಅಪೇಕ್ಷಿ ಸಿದನು.[1] ಅಂತೆಯೇ ಮಂತ್ರಿ ಸಾಮಂತ-ವಿದ್ವಜ್ಜನರ ಸಭೆಸೇರಿಸಿ ವಿಚಾರವಿನಿಮಯ

---

1. ಯಾವಂತೋ ವಿಷಯಾ ಹೃತಾ ಭುಜಬಲಂ ಯಾವತ್ಸಪತ್ನಾಜಿತಾಃ ।
ಯಾವಂತಶ್ಚ ವದಾನ್ಯತಾ ಕರಸರೋಜಾತಾಶ್ಚ ಯಾ ಯಾವತೀ ॥
ಯಾವತ್ಯೋ ಧನಸಂಪದೋ ಗುಣಗಣೋ ಯಾವಾಂಶ್ಚ ಯಾವದ್ಯಶಃ।
ತಾವತ್ಕರ್ತುಮಿಯೇಷ ಪೂಜನಮಸೌ ಶ್ರೀವ್ಯಾಸಭಿಕ್ಷೋರ್ನೃಪಃ ॥
—ಶ್ರೀವ್ಯಾಸಯೋಗಿ ಚರಿತಮ್

ಮಾಡಿ ಶ್ರೀವ್ಯಾಸಭಗವಾನರನ್ನು ಜಗತ್ತಿನಲ್ಲಿ ಸರ್ವಶ್ರೇಷ್ಠ ಗೌರವವೆನಿಸಿದ "ರತ್ನಾಭಿಷೇಕ" ದಿಂದ ಸೇವಿಸಲು ನಿರ್ಧರಿಸಿ ತದಂಗವಾದ ಸಕಲ ವ್ಯವಸ್ಥೆಗಳನ್ನೂ ಮಾಡಿಕೊಂಡು ಪ್ರಮುಖ ಪೌರಜಾನಪದ–ಪುರೋಹಿತಾಮಾತ್ಯರುಗಳನ್ನು ಶ್ರೀವ್ಯಾಸತೀರ್ಥರಲ್ಲಿ ವಿಷಯುವನ್ನರುಹಿ ಸಮಸ್ತ ಬಿರುದುಬಾವಲಿ ರಾಜವೈಭವದಿಂದ ಗುರುವರ್ಯರನ್ನು ಕರೆತರಲು ಕಳಿಸಿದ್ದಾನೆ.

೦ ೦ ೦ ೦ ೦

ವ್ಯಾಸತೀರ್ಥರು ಶಿಷ್ಯಮಂಡಲಿಗೆ ಮಂಗಳಕರವಾದ ಶ್ರೀಮದಾಚಾರ್ಯರ ಸೂತ್ರಭಾಷ್ಯವನ್ನು "ಲೋಕಪಾವನ" ಮಠದಲ್ಲಿ ಪಾಠಹೇಳುತ್ತಿದ್ದಾರೆ. ಅದೇ ಸಮಯಕ್ಕೆ ಸರಿಯಾಗಿ ಸಾಮ್ರಾಟ್ ಕೃಷ್ಣದೇವರಾಯನ ಅಪ್ಪಣೆಯಂತೆ ಅಮಾತ್ಯ-ಪಂಡಿತ-ಪ್ರಧಾನಪುರೋಹಿತಾದಿಗಳು ಸಕಲ ಬಿರುದುಬಾವಲಿಗಳೊಡನೆ ಬಂದು ತಪಸ್ಸಿಗೆ ಮಾತೃಸ್ಥಾನದಂತಿರುವ ಶ್ರೀವ್ಯಾಸಭಗವಾನರಿಗೆ ವಿನಯಾನತ ಕಂಧರರಾಗಿ ನಮಸ್ಕರಿಸಿ ವಿಜ್ಞಾಪಿಸಿದರು :—

"ಪರಮಪೂಜ್ಯ ಗುರುವರ್ಯರೇ, ಕನ್ನಡ ರಮಾರಮಣರು ಮಹೋತ್ಸವವನ್ನು ಏರ್ಪಡಿಸಿದ್ದಾರೆ, ತಮ್ಮನ್ನು ಸಂಭಾವಿಸಲು ನರಪತಿಗಳು ಮಂತ್ರಿಮಂಡಲದೊಡನೆ ಸಭಾಸ್ಥಾನಕ್ಕೆ ಆಗಮಿಸಿದ್ದಾರೆ.ನಗರವನ್ನೂ ರಾಜಬೀದಿಗಳನ್ನೂ ಶೃಂಗಾರವಾಗಿ ಅಲಂಕರಿಸಿರುವುದಲ್ಲದೆ, ಅರಮನೆಯ ಚಿಜ್ಜೆ (ಕಪೋತ)ಗಳ ಮೇಲ್ಭಾಗವನ್ನು ಬಾಣಾಕಾರವಾಗಿ ವೈಜಂತೀ ಮಣಿಗಳಿಂದ ಅಲಂಕರಿಸಲಾಗಿದೆ. ನಗರವು ತಳಿರು ತೋರಣ, ಹಸಿರುವಾಣಿ ಚಪ್ಪರ ಧ್ವಜಪತಾಕೆಗಳಿಂದ ಶೃಂಗರಿಸಲ್ಪಟ್ಟಿದೆ. ಹಗುರವಾದ ನವನವ ಪುಷ್ಪಗಳಿಂದ ರಾಜಮಾರ್ಗ ಆಚ್ಛಾದಿಸಲ್ಪಟ್ಟಿದೆ. ಮಂಗಳವಾದ್ಯ ಘೋಷಗಳಿಂದ ಗಗನಮಾರ್ಗವೆಲ್ಲ ಪೂರ್ಣವಾಗಿದೆ.[2]

"ಭಗವನ್ ! ಇದಾನೀಂಖಲು
ಸ್ವಾಮಿನ್ ಭವಂತಂ ಸ್ವಯಮದ್ಯ ರತ್ನೈಃ ।
ಆಕಾಂಕ್ಷತೇ ಭೂರಮಣೋಽಭಿಷೇಕ್ತುಮ್ ।
ಕೂಟಾಗ್ರಭಾಗಂ ಕುಲಭೂಧರಸ್ಯ ।
ಪ್ರಸೂನಜಾತೈರಿವ ಪಾರಿಜಾತಃ ॥

"ಭಗವನ್, ಕುಲಾಚಲದ ಕೋಡುಗಲ್ಲನ್ನು ಪಾರಿಜಾತ ವೃಕ್ಷವು ತನ್ನ ಪುಷ್ಪ ಸಮೂಹಗಳಿಂದ ವರ್ಷಿಸುವಂತೆ ಈಗ ಭೂರಮಣನಾದ ಕೃಷ್ಣನರಪತಿಯು ತಾನೇ

---

2. "ಸತು ನೃಪತಿರಮಾತ್ಯೈಸ್ಸಾರ್ಧಮಾಸ್ಥಾನಮಾಗಾತ್
ವಲಭಿಷು ವಿಶಿಖಾನಾಂ ವೈಜಯಂತ್ಯೋ ನಿಬದ್ಧಾಃ ।
ತರಲನವಸುಪುಷ್ಪಾಸ್ಸರ್ವತೋ ರಾಜಮಾರ್ಗಾ
ಗಗನತಲಮಶೇಷಂ ಗಾಹತೇ ತೂರ್ಯಘೋಷಃ ॥

ಸ್ವತಃ ರತ್ನಗಳಿಂದ ತಮ್ಮನ್ನು ಅಭಿಷೇಕವಮಾಡಿ ಗೌರವಿಸಲು ಬಲವತ್ತರವಾದ ಆಕಾಂಕ್ಷೆಯಿಂದ ಕೂಡಿದ್ದಾನೆ."

"ಮಹಾಸ್ವಾಮಿ, ಹೀಗೆ ತಮ್ಮಲ್ಲಿರುವ ವಿಶೇಷ ಭಕ್ತಿಯಿಂದ ಪುಲಕಿತಗಾತ್ರ ನಾಗಿರುವ ಆ ಕೃಷ್ಣದೇವರಾಯನನ್ನು ತಮ್ಮ ಆಗಮನದಿಂದ ಬಹುಮಾನಿಸಲು ಪ್ರಸನ್ನರಾಗಬೇಕು. ಓರ್ವ ಭಕ್ತನ ಹೃದಯದ ಒಂದು ಮೂಲೆಯಲ್ಲಿ ಅಭಿವ್ಯಕ್ತ ವಾದ ಪುಷ್ಪಾಂಜಲಿಯೂ ಕೂಡ ಹೇಗೆ ಕುಲದೈವದ ಪ್ರಸಾದವನ್ನು ಸಂಪಾದಿಸಿ ಕೊಡುವುದೋ, ಹಾಗೆಯೇ ತಮ್ಮ ಭಕ್ತನಾದ ಕೃಷ್ಣಭೂಪಾಲನ ಹೃದಯದಲ್ಲೆಲ್ಲಾ ತಮ್ಮ ಅನುಗ್ರಹಕ್ಕಾಗಿ ಭಕ್ತಿರಸಪ್ರವಾಹವೇ ಹರಿಯುತ್ತಿರುವುದರಿಂದ ಅವನ ಪ್ರಾರ್ಥನೆಯನ್ನು ಮನ್ನಿಸಿ ತಾವೀಗ ರಾಜಸಭೆಗೆ ದಯಮಾಡಿಸಿ ಸಾರ್ವಭೌಮನನ್ನು ಬಹುಮಾನಿಸುವ ಕೃಪೆಮಾಡಬೇಕು."[1]

ಪ್ರಧಾನ ಪುರೋಹಿತರ ಮನವಿಯನ್ನಾಲಿಸಿ, ಕ್ಷಣಕಾಲ ತಮ್ಮಲ್ಲೇ ಯೋಚಿಸಿ ಅನಂತರ ಶ್ರೀವ್ಯಾಸತಪೋನಿಧಿಗಳು ಭಕ್ತವ್ಯಾತ್ಸಲ್ಯದಿಂದ ಕರುಣಾಮೃತರಸಾರ್ದ್ರ ಹೃದಯರಾಗಿ "ತಥಾಸ್ತು" ಎಂದು ಹೇಳಿ, ರಾಜಸಭೆಗೆ ಬಿಜಯಮಾಡಿಸಲು ರತ್ನ ಪೀಠದಿಂದ ಮೇಲೆದ್ದರು.[2] ಗೋವಿಂದ ಒಡೆಯರೇ ಮೊದಲಾದ ಕುಶಲಮತಿಗಳಾದ ವಿದ್ವತ್ಪ್ರಕಾಂಡ ಶಿಷ್ಯಮಂಡಲಿಯು ತಮ್ಮನ್ನು ಅನುಸರಿಸಿ ಬರುತ್ತಿರಲು, ಚತುರ್ಮುಖ ಬ್ರಹ್ಮದೇವರ ವದನಾರವಿಂದ ಹೊರಹೊಮ್ಮುವ ಸಕಲ ವೇದವಾಕ್ಕುಗಳಿಂದ ಪುರಸ್ಕೃತವಾದ ಪ್ರಣವದಂತೆ ಶ್ರೀವ್ಯಾಸತೀರ್ಥರು ಮಠದಿಂದ ಮೆಲ್ಲಮೆಲ್ಲನೇ ಹೊರ ಹೊರಟರು.[3] ಕನ್ನಡಸಾಮ್ರಾಜ್ಯದ ಸಮಸ್ತಬಿರುದಾವಳಿ-ವೈಭವಗಳೊಡನೆ ಸುವರ್ಣ ಪಾಲಕಿಯಲ್ಲಿ ಕುಳಿತು ಮೆರವಣಿಗೆಯಿಂದ ಬಿಜಯಂಗೈಯುತ್ತಿರುವಾಗ, ಪಾಲಕಿಯ ಮುಂಭಾಗದಲ್ಲಿ ಮಧ್ವಮತಪೆಂಬ ಮದ್ದಾನೆಯ ಘಂಟಾರವದಂತೆ ಘಂಟಾನಿನಾದವೂ, ಅದಕ್ಕನುಗುಣವಾಗಿ ಹರಿದಾಸ ಪಂಥದವರ ನರ್ತನ, ತಾಳವಾದ್ಯ ಸುತ್ತಿಪಾಠಕರ

---

1. "ತಂ ಭಕ್ತಿಪಲ್ಲವಿತಮಾಗಮನೋತ್ಸವೇನ । ಸ್ವಾಮಿನ್ಸ್ತನೀವ ಬಹುಮಂತುಮುದಾರಕೀರ್ತೇ ॥
ಪುಷ್ಪಾಂಜಲಿಃ ಪ್ರತಿಕಲಂ ಭಗವನ್ನರಸ್ಯ । ಕೋಣೇಪಿ ಯಃ ಕಲಯತೇ ಕುಲದೈವಭಾವಮ್ ॥"

2. "ಏವಂಕಾರಂ, ತೇನ ಪುರೋಧಃ ಪ್ರಧಾನೇನ ಸಂಪ್ರಾರ್ಥ್ಯಮಾನಸ್ಸ ಭಗವಾನ್ ವ್ಯಾಸತಪೋ ನಿಧಿಃ. ಕ್ಷಣಂ ವಿಚಿಂತ್ಯ ಭಕ್ತವತ್ಸಲತಯಾ ಕರುಣಾಮಸೃಣಹೃದಯಃ ಸಭಾಮಭಿಗಮಿಷಯಾ ಮಣಿ ಭ್ರಸೀಠರಾದುದಸ್ಥಾತ್ ॥"

3. "ಗೋವಿಂದತಾಪಸಮುಖೈಃ ಕುಶಲಾಗ್ರಗಣ್ಯೈರಂತೇವಸದ್ಭಿರಖಿಲೈರನುಗಮ್ಯಮಾನಃ । ಮಂದಂಮಠಾತ್ಸನಿರಗಾದ್ವದನಾರವಿಂದಾದ್ವೇದೈಃ ಪುರಸ್ಕೃತ ಇವ ಪ್ರಣವೋ ವಿಧಾತುಃ ॥"
ಶ್ರೀವ್ಯಾಸಯೋಗಿಚರಿತಮ್. P. 71

ಬಿರುದಾವಳಿ ಘೋಷಣೆಗಳು ಶಬ್ದಾಯಮಾನವಾಗುತ್ತಿರಲು[1] ಆ ತಪೋನಿಧಿಗಳ ಮಂಗಳಕರ ಮೆರವಣಿಗೆಯು ಎಲ್ಲ ರಾಜಬೀದಿಗಳನ್ನು ದಾಟಿ ಸರ್ವಜನರ ಪುಷ್ಪ ವೃಷ್ಟಿ ಹರ್ಷಧ್ವನಿ ಜಯಕಾರಗಳೊಂದಿಗೆ ಅರಮನೆಯ ಸನಿಹಕ್ಕೆ ಬಂದಿತು.

ಮೆರವಣಿಗೆಯು ರಾಜಸಂಭಾಂಗಣಕ್ಕೆ ಬಂದಿತು. ಆಗ ಯೋಗೀಂದ್ರರ ತೇಜಃ ಪ್ರಭಾವದಿಂದ ರಾಜಸಭೆಯು ಶರತ್ಕಾಲೀನ ಮೇಘ ಸಮೂಹದಿಂದ ಯುಕ್ತವಾದ ಆಕಾಶವು ಕಮಲಬಾಂಧವನಿಂದ ಪ್ರಕಾಶಿಸುವಂತೆ ಕಂಗೊಳಿಸಿತು.[2] ಶ್ರೀವ್ಯಾಸರಾಜರ ಸವಾರಿಯು ಎತ್ತೆತ್ತ ಹೋಯಿತೋ ಅಲ್ಲಲ್ಲಿನ ಜನಗಳು ಕರಗಳನ್ನು ಮೇಲೆತ್ತಿ ಬದ್ಧಾಂಜಲೀಪುಟರಾಗಿ ಗೌರವವನ್ನು ಸಲ್ಲಿಸುತ್ತಿದ್ದರು. ಹೀಗೆ ಜನರೆಲ್ಲರೂ ಮೇಲೆ ತ್ತಿದ ಬದ್ಧಾಂಜಲೀ ಪುಟಗಳು ಶರತ್ಕಾಲೀನ ನದಿಗಳಲ್ಲಿ ಎದ್ದು ಕಾಣುವ ಕಮಲಪುಷ್ಪ ಗಳ ಮೊಗ್ಗುಗಳಂತೆ ಕಾಣುತ್ತಿತ್ತು.[3] ಶ್ರೀವ್ಯಾಸಮುನೀಂದ್ರರು ಸಭಾಂಗಣಕ್ಕೆ ಚಿತ್ತೈಸಿದ ವಾರ್ತೆಯನ್ನರಿತು, ಸಕಲ ಮಂತ್ರಿಗಳಿಂದೊಡಗೂಡಿ ಕೃಷ್ಣದೇವ ರಾಯನು ಸೂರ್ಯನು ಉದಯಾದ್ರಿಯನ್ನು ಸಮೀಪಿಸುತ್ತಿರಲು ಅರಳಿದ ಪದ್ಮ ಗಳಿಂದ ಘಮಘಮಿತಗಳಾದ ಚಂಚಲ ಮಧುಕರಗಳು ತ್ವರೆಯಿಂದ ಬರುವ ತೆರನಾಗಿ, ವ್ಯಾಸಪ್ರಭುಗಳ ಸನ್ನಿಧಿಗೆ ರಭಸದಿಂದ ಧಾವಿಸಿಬಂದನು.[4]

ಕೃಷ್ಣದೇವರಾಯನು ಶ್ರೀವ್ಯಾಸಯೋಗಿಗಳನ್ನು ಸ್ವಾಗತಿಸಲು ದಿಗ್ಗನೆ ಮೇಲೆದ್ದು ಧಾವಿಸಿದನು. ಆಗ ಅಲ್ಲಿ ನೆರೆದಿದ್ದ ಸಾಮಂತ-ಮಾಂಡಲೀಕಾದಿ ರಾಜವೃಂದವು ಚಕ್ರವರ್ತಿಯು ಬರಲು ಇಬ್ಭಾಗವಾಗಿ ದಾರಿಕೊಟ್ಟಿತು, ಅದು ಚೈತಲಿಯಂತೆ ಕಾಣುತ್ತಿತ್ತು, ಕಾರುಣ್ಯದಿಂದ ತನ್ನನ್ನು ಅನುಗ್ರಹಿಸಲು ಬರುತ್ತಿರುವ ಯತೀಂದ್ರ ರನ್ನು ನರಪತಿಯು ನಿರೀಕ್ಷಿಸಿದನು, ಶ್ರೀವ್ಯಾಸತೀರ್ಥರು ಬಂಗಾರದ ಪಾಲಕಿಯ ಮಧ್ಯಭಾಗದಲ್ಲಿ ಮಂಡಿಸಿದ್ದರು. ಅವರ ಕರಕಮಲವಲ್ಲಿ ತಾಲಾಪತ್ರದಲ್ಲಿ ಬರೆದಶಾಸ್ತ್ರ ಗ್ರಂಥವು ರಾಜಿಸುತ್ತಿತ್ತು. ಅಕ್ಷರಗಳು ಸ್ಪಷ್ಟವಾಗಿ ಕಾಣಲು ತಾಲಾಪತ್ರಗಳಿಗೆ ಕಪ್ಪಾದ ಕಾಡಿಗೆಯ ಮಸಿಯನ್ನು ಸವರಲಾಗಿತ್ತು. ಶ್ರೀಪಾದರ ಕರಾಂಗುಲಿಗಳು

---

1. "ಘಂಟಾಸ್ವನೋ ಮಧ್ವಮತದ್ವಿಪಸ್ಯ । ತ್ರಯೀಮಯಾತಿಸ್ವನಯಿತ್ನುಘೋಷಃ । ತಸ್ಯಾಥ ತಾಲಧ್ವನಿರುಜ್ಜೃಂಭೇ। ಶ್ರೀವ್ಯಾಸಭಿಕ್ಷೋಃ ಶಿಬಿಕಾಪುರೋಗಃ ॥"

2. "ರಾಜ್ಞಾಂ ಸಭಾಂ ಕ್ಷೌಮವಿತಾನಯುಕ್ತಾಂ ಪ್ರಾಜಯದ್ವ್ಯಾಸಯತೀಶ್ವರೋಸೌ । ಶರತ್ಪಯೋವಾವಲಿಸಂಕುಲಾಂತಾ ಆಕಾಶಸೀಮಾನಮಿವಾಬ್ಜ ಬಂಧುಃ ॥

3. "ಯಾಂ ಯಾಮತೀತ್ಯಸ(ಮ)ಮುನಿರ್ವಿಶಿಖಾಮಯಾಸೀತ್ ।
ಸಾ ಸಾ ಸಮುತ್ಥಿತಜನಾಂಜಲಿರಾಜಿಪೂರ್ಣಾ ॥
ಉನ್ನಾಲಮಂಡಸರಸೀರುಹಕುಡ್ಮಲಾನಾಂ ।
ಸಾಧರ್ಮ್ಯಕೇಲಿಮತನಿಷ್ಟ ಶರನ್ನದೀನಾಮ್ ॥"

4. ತಸ್ಮಿನ್ನೃಪಸ್ಸವಿಧಮಾಗತ ಇತ್ಯಮಾತ್ಯೈಸ್ಸಾಕಂ ಸಭಾಂಗಣತಲಾತ್ತ್ವರಿತೈರುದಸ್ಥಾತ್ । ಪೂರ್ವಾಚಲಾಶ್ರಯಿಣಿ ಪೂಷಣಿ. ಪದ್ಮವಾಟಾತ್ಸೌರಭ್ಯಪೂರಣವ ಚಂಚಲಚಂಚರೀಕೈಃ ॥"
—ಶ್ರೀ ವ್ಯಾ. ಯೋ. ಚ-P-72

ಪುಟಗಳನ್ನು ತಿರುಗಿಸುತ್ತಿದ್ದವು. ಅದನ್ನು ನೋಡಿದರೆ ಬಂಗಾರದ ಪಾಲಕಿಯೆಂಬ ಕಮಲಮಧ್ಯದಲ್ಲಿ ಕುಳಿತಿರುವ ವ್ಯಾಸತೀರ್ಥರು ಕಮಲಪುಷ್ಪದ ಮಧ್ಯಕರ್ಣಿಕೆಯಂತೆಯೂ, ತಾಲಾಪತ್ರಗಳಿಗೆ ಹಚ್ಚಿರುವ ಕಾಡಿಗೆಯ ಮಸಿಯಿಂದ ಕಪ್ಪಾದ ಅವರ ಕರಾಂಗುಲಿಗಳು ಮಧುಕರ (ದುಂಬಿ)ಗಳಂತೆಯೂ ಕಾಣುತ್ತಿತ್ತು !

ಹೀಗೆ ಗ್ರಂಥಾವಲೋಕನ ತತ್ಪರರಾದ ವ್ಯಾಸತೀರ್ಥರು ನಾಸಿಕದ ಮೇಲ್ಭಾಗದಲ್ಲಿ ಪ್ರತಿಬಿಂಬಿತವಾದ ನೇತ್ರದ್ವಯದಿಂದ ಅತಿ ಸ್ವಚ್ಛವಾಗಿರುವ ದುಂಡಾದ ಸುಲೋಚನವನ್ನು ಧರಿಸಿದ್ದರು. ಅದು ಗುರುಗಳ ವೃದ್ಧಾಪ್ಯವನ್ನು ಸೂಚಿಸುತ್ತಿತ್ತು. ಧರ್ಮಶಾಸ್ತ್ರಭೂಷಿತರಾದ ಶ್ರೇಷ್ಠ ಯುವಕರು ಉಭಯ ಪಾರ್ಶ್ವಗಳಲ್ಲಿ ಎರಡು ಚಾಮರಗಳನ್ನು ಹಿಡಿದು ಗುರುಗಳನ್ನು ಸೇವಿಸುತ್ತಿದ್ದರು. ಮುಂಭಾಗದಲ್ಲಿ ವೈದಿಕರ ಗುಂಪು ಮಾಡುತ್ತಿದ್ದ ಜಯಕಾರ, ಹರಿದಾಸರು ಪಾದಗಳಲ್ಲಿ ಗೆಜ್ಜೆ ಕಟ್ಟಿ ನರ್ತಿಸುತ್ತಿದ್ದಾಗ ಮಣಿಮಯ ಗೆಜ್ಜೆಗಳ ನಾದದಂತಿರುವ ತಾಳಧ್ವನಿಗಳು ಆಕಾಶ ಮಾರ್ಗವೆಂಬ ಬಂಗಾರದ ಕೊಪ್ಪರಿಗೆಯನ್ನು ತುಂಬುತ್ತಿದ್ದವು. ಶ್ರೀಗಳವರ ಅತ್ತಿತ್ತ ಅನೇಕ ಪಂಡಿತರು ಬರುತ್ತಿದ್ದರು. ಅವರು ಮೂರ್ತೀಭವಿಸಿದ ಶ್ರೀಮಧ್ವಾಚಾರ್ಯರ ಪ್ರಕರಣ ಗ್ರಂಥಗಳಂತಿದ್ದರು. ಇಂಥ ಬ್ರಹ್ಮಜ್ಞಾನಿಗಳಿಂದ ಸಂಸೇವಿತರಾಗಿ ಶೋಭಿಸುತ್ತಿರುವ ಆ ಪರಮಪೂಜ್ಯ ಶ್ರೀವ್ಯಾಸಯತೀಂದ್ರರನ್ನು ಕೃಷ್ಣನರಪತಿಯು ಅತಿ ತ್ವರೆಯಿಂದ ಸಮೀಪಿಸಿ, ಅವರ ಪಾದಾಂಗುಲಿಗಳ ಮಣಿ ಸದೃಶನಖ(ಉಗುರು)ಗಳ ಕಿರಣಗಳನ್ನು ಆಘ್ರಾಣಿಸಲು ಹಾತೊರೆಯುತ್ತಿರುವ ಕಿರೀಟಕಾಂತಿಯಿಂದ ರಂಜಿತನಾಗಿ ಇನ್ನೊಬ್ಬರಿಗೆ ದೊರಕದ ಮಹಾಧನ್ಯತೆಯಿಂದ ಮುದಗೊಂಡನು. (ಗುರುಗಳ ಪಾದಗಳಿಗೆ ನಮಸ್ಕರಿಸಿದನು.)[1]

ಅನಂತರ ಮಂಗಳವಾದ್ಯಗಳು ಘೋರ್ಗರೆಯುತ್ತಿರಲು, ವೇದವಿದ್ಯಾವಿಶಾರದರು ವೇದಮಂತ್ರಗಳನ್ನು ಮಂದ್ರಸ್ವರದಲ್ಲಿ ಪಠಿಸುತ್ತಿರಲು, ಕವಿಸಂದೋಹವು ಆಶುಕವಿತೆಗಳಿಂದ ಗುರುಗಳ ಗುಣಗಳನ್ನು ಬಣ್ಣಿಸುತ್ತಿರಲು ವಾದ್ಯಕೋವಿದರು, ಗಾನವಿಶಾರದರು ಸುಶ್ರಾವ್ಯವಾಗಿ ಗಂಧರ್ವಗಾಯನ ಮಾಡುತ್ತಿರಲು ವೀಣಾ-ವೇಣು-ಮೃದಂಗಾದಿವಾದ್ಯಗಳು ಮೊಳಗುತ್ತಿರಲು, ಭಾಗವತರು, ಹರಿದಾಸರು ನರ್ತನ ಮಾಡುತ್ತಿರಲು ವಂದಿಮಾಗಧಬೃಂದವು ಬಿರುದಾವಳಿಗಳನ್ನು ಘೋಷಿಸುತ್ತಿರಲು, ವಿದ್ವಜ್ಜನರು, ಪೌರಜಾನಪದರು ಪುಷ್ಪವೃಷ್ಟಿಗೈಯುತ್ತಾ ಜಯಜಯಕಾರಮಾಡು

1. "ಉತ್ಥಾಯ ಸ ನಿಖಿಲೈಸ್ಸಾಮಂತಮಹೀಪಾಲೈಃ ರುಚಿತಿ ಸೀಮಂತಿತೋಪಾಂತಸರಣಂ ನರಪತಿರಾತ್ಮಾನಮನುಕಂಪಮಾನುಗ್ರಹೀತುಮಾಪತಂತಂ....... ಮಧ್ವಮುನೀಂದ್ರಪ್ರಕರಣೈರಿವ ಮೂರ್ತಿಮದ್ಭಿಃ ಶಿಷ್ಯಸುಸಂಘೈರಾಸೇವ್ಯಮಾನಪರಿಸರಂ, ತಂ ಭಗವಂತಂ ಯತಿಕುಂಜರಂ ಸರಭಸಮುಪಸೃತ್ಯ ತಚ್ಚರಣನಖಮಣಿಕಿರಣಾಜಿಘ್ರಾವಗ್ರಿಮಭಾಗೇನ ಕಿರೀಟಿನಾ ಮಹತೀಮನನ್ಯಸುಲಭಾಂ ಧನ್ಯತಾಮಾಜಹಾರ"

—ಶ್ರೀ ವ್ಯಾ. ಯೋ. ಚ.–P–72.

ತ್ತಿರಲು ಕೃಷ್ಣದೇವರಾಯನು ಮಹಾಮಹಿಮರಾದ ಶ್ರೀವ್ಯಾಸರಾಜ ಗುರುಸಾರ್ವಭೌಮರನ್ನು ಸ್ವಾಗತಿಸಿ ಉನ್ನತವಾದ ವೇದಿಕೆಗೆ ಕರೆದುತಂದನು.

ಆ ಭವ್ಯವೇದಿಕೆಯಮೇಲೆ ಈ ಮಹೋತ್ಸವಕ್ಕಾಗಿಯೇ ಸಾರ್ವಭೌಮನು ತಯಾರುಮಾಡಿಸಿದ್ದ ಅತ್ಯಂತ ಸುಂದರವಾದ ಸುವರ್ಣಸಿಂಹಾಸನವು ಶೋಭಿಸುತ್ತಿತ್ತು. ಸಿಂಹಾಸನದ ಮೇಲೆ ದೆಹಲಿಯ ಸುಲ್ತಾನನಾದ ಬಾಬರನು ಅತ್ಯಂತ ಭಕ್ತಿಪುರಸ್ಸರವಾಗಿ ಶ್ರೀವ್ಯಾಸರಾಜರಿಗೆ ಕಾಣಿಕೆಯಾಗಿ ಕಳಿಸಿಕೊಟ್ಟಿದ್ದ ವಿಶಿಷ್ಟ ಮೊಗಲ ಸಾಮ್ರಾಜ್ಯದ ಗೌರವವೆನಿಸಿದ ಸುವರ್ಣಕಲಶದಿಂದ ರಾಜಿಸುವ ಹಸರುಛತ್ರಿಯು ಕಂಗೊಳಿಸುತ್ತಿತ್ತು.[1] ಅದರಮೇಲೆ ವಿಸ್ತಾರವಾದ ಕನ್ನಡ ಸಾಮ್ರಾಟನಾದ ಸಾಳುವ ನರಸಿಂಹಭೂಪತಿಯು ಸಮರ್ಪಿಸಿದ್ದ ಶ್ವೇತಛತ್ರವು. ಇವರು ದ್ವೈತಸಾಮ್ರಾಜ್ಯದ ಸಾರ್ವಭೌಮರೆಂದು ಸಾರುತ್ತಾ ವಿರಾಜಿಸುತ್ತಿತ್ತು. ಸಿಂಹಾಸನದ ಎರಡೂಪಾರ್ಶ್ವಗಳಲ್ಲಿ ಸ್ವರ್ಣದಂಡಧಾರಿಗಳು, ಚಾಮರ, ಚೌರಿಗಳನ್ನು ಹಿಡಿದವರು ನಿಂತಿದ್ದರು.

ಸಾಮ್ರಾಟ್ ಕೃಷ್ಣದೇವರಾಯನು ಶ್ರೀವ್ಯಾಸರಾಜಗುರುವರ್ಯರನ್ನು ಭಕ್ತಿಯಿಂದ ಕರತಂದು, ಶರತ್ಕಾಲದಲ್ಲಿ ಕಮಲಪುಷ್ಪದಲ್ಲಿ ರಾಜಹಂಸವನ್ನು ಕೂಡಿಸುವಂತೆ ಈ ಮಹೋತ್ಸವದ ಕಾಣಿಕೆಯಾಗಿ ಸಮರ್ಪಿಸಲಿದ್ದ ಸುವರ್ಣಸಿಂಹಾಸನದಲ್ಲಿ ಪರಮಹಂಸಕುಲತಿಲಕರಾದ ಶ್ರೀವ್ಯಾಸಭಗವಾನರನ್ನು ಕೂಡಿಸಿ ನಮಸ್ಕರಿಸಿದನು.[2]

ಆಗಿನ ದೃಶ್ಯವು ಅತಿಮನೋಹರವಾಗಿದ್ದಿತು. ಶ್ರೀವ್ಯಾಸಯೋಗೀಂದ್ರರಿಗೆ 'ನಾನುಮೊದಲು. ನಾನುಮೊದಲು' ಎಂದು ನಮಸ್ಕರಿಸುತ್ತಿರುವ ಪಂಡಿತಪ್ರಕಾಂಡರ ಕೋಲಾಹಲಸಂಪತ್ತು ಒಂದುಕಡೆಯಾದರೆ, ಮತ್ತೊಂದು ಕಡೆ ನಿಪುಣರಾದ ವಾದ್ಯಗಾರರು ನುಡಿಸುತ್ತಿರುವ ಮಂಗಳವಾದ್ಯಗಳ ಸಂಭ್ರಮ, ಈಮಧ್ಯೆ ಗಡಿಬಿಡಿಯಿಂದ ಅತ್ತಿಂದಿತ್ತ ಉತ್ಸಾಹದಿಂದ ಸಂಚರಿಸುತ್ತಿರುವ ಪುರೋಹಿತರ ಸಡಗರ, ಇನ್ನೊಂದು ಕಡೆ, ಇದೆಲ್ಲವನ್ನೂ ಸಮಷ್ಟಿದೃಷ್ಟಿಯಿಂದ ಪರಿಕಿಸುವಾಗ ಆ ಸಭೆಯು ತಕ್ಷಣವೇ

---

1. ಕೃಷ್ಣದೇವರಾಯನು ಕನ್ನಡಸಾಮ್ರಾಟನಾದಾಗ ದೆಹಲಿಯ ಬಾಬರ್‌ಬಾದುಷನು ಶ್ರೀಕೃಷ್ಣದೇವರಾಯನಿಗೆ ಉಡುಗೊರೆ ಕಳಿಸಿದ್ದಲ್ಲದೆ, ರಾಜಗುರುಗಳಾದ ಶ್ರೀವ್ಯಾಸತೀರ್ಥರಿಗೆ ಒಂಟೆಯ ಮೇಲೆ ಹಸರುಛತ್ರಿಹಿಡಿಸಿಕೊಂಡು ಭೇರಿತಾಡನಮಾಡಿಸಿಕೊಂಡು ಹೋಗುವ ಅಪೂರ್ವಗೌರವವನ್ನು ತನ್ನ ಪ್ರತಿನಿಧಿಗಳ ಜತೆಗೆ ಕಳಿಸಿ ಗೌರವಿಸಿದ್ದನು.
"ಅಬ್ಧೀತಾದೃಶಿ ಯಾವನಾಧಿಪತಿತೋ ಲೇಭೇ ಮಹಾವೈಭವಂ।
ಭೇರ್ಯುಷ್ಟ್ರಾದ್ಯಮನನ್ಯಲಭ್ಯಮುರ ಣಾ ತುಷ್ಟಾನ್ ಮಹಿಮ್ನಾತ್ಮನಃ ॥"
—ಶ್ರೀವಿದ್ಯಾರತ್ನಾಕರತೀರ್ಥರು

2. "ತತ್ರಭೂಪಶ್ಶರತ್ಕಾಲೇ ರಾಜಹಂಸಮಿವಾಂಬುಜೇ ।
ಸ್ವರ್ಣಪೀಠೇ ಸ್ವಯಂದತ್ತೇ ವ್ಯಾಸಭಿಕ್ಷುಂ ನ್ಯವೇಶಯತ್ ॥"
—ಶ್ರೀವ್ಯಾಸಯೋಗಿ ಚರಿತಮ್. P–72.

ಕೌತುಕದಿಂದ ಬ್ರಹ್ಮದೇವರಿಂದ ನಿರ್ಮಿತವಾದ ಸಭೆಯಂತೆ ಕಂಡುಬರುತ್ತಿತ್ತು.[1]

ಆ ಮಹಾಸಭೆಯು ಬ್ರಹ್ಮಸಭೆಯಂತೆ ಕಂಗೊಳಿಸುತ್ತಿತ್ತು. ಶ್ರೀವ್ಯಾಸರಾಜರು ಸುವರ್ಣಸಿಂಹಾಸನದಲ್ಲಿ ಬ್ರಹ್ಮದೇವರಂತೆ ವಿರಾಜಿಸಿದ್ದಾರೆ. ಸಾಮಂತರೇ ಮೊದಲಾದ ರಾಜಸಮುದಾಯವು ಅವರನ್ನು ಸುತ್ತಲೂ ಆವರಿಸಿ ನಿಂತು ತಮ್ಮ ಹಸ್ತಾಂಜಲಿಯನ್ನು ಮೇಲೆತ್ತಿ ವಂದಿಸುತ್ತಿದ್ದಾರೆ. ಆ ರಾಜರು ಥಳಥಳಿಸುವ ಕಿರೀಟಗಳನ್ನು ಧರಿಸಿ ದೇವತೆಗಳಂತೆ ರಾಜಿಸುತ್ತಿದ್ದಾರೆ. ಅವರ ಕಿರೀಟಾಗ್ರಭಾಗದ ದೊಡ್ಡದೊಡ್ಡ ರತ್ನಗಳಲ್ಲಿ ಪ್ರತಿಬಿಂಬಿತರಾಗಿರುವ ವ್ಯಾಸರಾಜರನ್ನು ಇವರೇ ಬ್ರಹ್ಮದೇವರೆಂಬ ಬುದ್ಧಿಯಿಂದ ಮೇಲೆತ್ತಿದ ಹಸ್ತಾಂಜಲೀಪುಟರಾದ ರಾಜರುಗಳ ಆ ಪಾಣಿಪದ್ಮಗಳು ಕಮಲದ ಆಸನಭಾವವನ್ನು ಪ್ರಕಟಿಸುತ್ತಿದೆ. ಕಿರೀಟಧರಿಸಿ ಕರವೆತ್ತಿ ವ್ಯಾಸರಾಜರ ಸುತ್ತ ರಾಜರು ನಿಂತಿರುವುದರಿಂದ ಅವರ ಕರಪದ್ಮಗಳೇ ಕಮಲದಂತೆಯೂ ಅವರ ಮಧ್ಯೆ ಕುಳಿತಿರುವ ಶ್ರೀವ್ಯಾಸರಾಜರು ಕಮಲಾಸನರಾದ ಬ್ರಹ್ಮದೇವರಂತೆಯೂ ಕಂಗೊಳಿಸುತ್ತಿದ್ದರು.[2]

ಆಗ ಕೃಷ್ಣದೇವರಾಯನು ಶ್ರೀವ್ಯಾಸರಾಜರಿಗೆ ರತ್ನಾಭಿಷೇಕಮಾಡಲು ಸಿದ್ಧನಾಗಿ ಮೊದಲು ಶ್ರೀಗುರುಗಳಿಗೆ ತಾನು ಶ್ರೀಮೂಲಗೋಪಾಲಕೃಷ್ಣಪಟ್ಟಾಭಿರಾಮ ದೇವರಿಗಾಗಿ ತಯಾರುಮಾಡಿಸಿದ ಸುಮಾರು ಎರಡೂವರೆ ಅಡಿಉದ್ದ, 3ಅಂಗುಲ ಅಗಲವಿರುವ ನೂರಾರು ದೊಡ್ಡದೊಡ್ಡ ಅನರ್ಘ್ಯಪಚ್ಚೆಗಳಿಂದಲೂ, ಅಂಗೈ ಅಗಲದ ನವರತ್ನಖಚಿತಪದಕಗಳಿಂದಲೂ ಕೂಡಿದ ಪಚ್ಚೆಯ ವೈಜಯಂತೀಮಾಲೆಯನ್ನು ಸಮರ್ಪಿಸಿದನು. ಗುರುಗಳು ಅದನ್ನು ಮಗ್ಗಲು ಸ್ವರ್ಣಪೀಠದಲ್ಲಿರುವ ದೇವರ ಪೆಟ್ಟಿಗೆಗೆ ಸಮರ್ಪಿಸಿದರು.

"ತದನು ಸಕಲದಿಙ್ಮುಖಮುಖರೀಕರಣ ನಿಪುಣತಾಧುರ್ಯೇಷು ಮಂಗಳ ತೂರ್ಯೇಷು. ಭಕ್ತಿವಿನಿಮಯ ಪರಮಾನಂದಕಂದಲಿತ ಸಹೃದಯಯೇಷು ರಾಜನಿಚಯೇಷು, ಸಮಾಪಿತಸಕಲಸಂವಿಧಾನಸಂಪಾದ್ಯಕೃತ್ಯೇಷು ಅಮಾತ್ಯಭೃತ್ಯೇಷು, ನಿರಂತರೋದ್ಘುಷ್ಯಸ್ವಸ್ತ್ಯಯನ ಸೂಕ್ತಿಪದವೀಸಮಾಜಿತೇಷು ಪುರೋಹಿತೇಷು, ನಿರವದ್ಯ

---

1. "ಅಹಮಹಮಿಕಯೇವ ಸ್ವಾಮಿಪಾದಾರವಿಂದ ।
ಪ್ರಣತವಿಬುಧಯೂಥೈಃ ಸ್ವಾಸಿ ಹರ್ಮ್ಯೋಹಲಶ್ರೀಃ ।
ಪ್ರಹತಕುಶಲವಾದ್ಯಾ ಪ್ರಾಂತಧಾವತ್ಪುರೋಧಾಃ
ಕ್ಷಣಮಜನಿ ಸಭಾ, ಸಾ ಕೌತುಕೇನೇವ ಸೃಷ್ಟಾ ॥"

2. ತತ್ರ ಸ್ಫುರನ್ಮುಕುಟಕೋಟಿಷು ಬಿಂಬರೂಪಂ ।
ತಂ ಯೋಗಿನಂ ಸರಸಿಜಾಸನಮೇವ ಬುದ್ಧ್ವಾ ।
ಉನ್ಮಸ್ತಕೀಕೃತ ಕರಾಂಜಲಿವಾರಿಜಾನಿ
ತಸ್ಮೈ ನೃಪಾವಲಿರಿವಾಸನತಾಂ ಚಕಾರ ॥ —ವ್ಯಾ. ಯೋ. ಟಿ. P-73

3. ಇಂದಿಗೂ ಶ್ರೀವ್ಯಾಸರಾಜಸ್ವಾಮಿಗಳವರ ಶ್ರೀಮಠದಲ್ಲಿ ವಿಶೇಷದಿನಗಳಲ್ಲಿ ದೇವರಿಗೆ ಅರ್ಪಿಸುತ್ತಿರುವ ಪಚ್ಚೆಯ ವೈಜಯಂತೀ ಮಾಲೆಯನ್ನು ನೋಡಿ ಆನಂದಿಸಬಹುದು.

ವಿದ್ಯಾವೈಭವ ಶ್ಲಾಘಾಕಂಪಮಾನಶಿರಸ್ಸು ಸುಮನಸ್ಸು, ಪರಿಸರಪಾಪಠ್ಯಮಾನ ನಾನಾವಾದ ವಿಜಯ ಬಿರುದಾವಲೀಪಕ್ಷ್ಮಲಿತ ಚಾಟುಪ್ರಪಂಚೇಷು ಕವಿಸಂಚಯೇಷು, ಆಕೌಮಾರ ಚರಿತಾರಂಭ ಗಂಭೀರ ಯಶಸ್ತುತಿ ಕೇಲಿಕೇಷು, ವಿಸ್ಮಯಸ್ಮಿತ ಪಕ್ಷ್ಮಪುಟಲೋಚನೇಷು ಪೌರಜನಪದೇಷು, ಸ ಕಿಲ ಕೃಷ್ಣಮಹೀಪಾಲಃ ಸ್ವಯಮೇವ ಕರಕಮಲೇನಾದಾಯ ಕನಕಕುಂಭಂ, ಇಮಂ ಭಗವಂತಂ ವ್ಯಾಸತಾಪಸಂ ಆದರಾನ್ಮಣಿಭಿರಭಿಷೇಕ್ತುಮಾರಭತ ॥'

ಅನಂತರ ಮಂಗಳವಾದ್ಯಗಳು ಮೊಳಗಿ ಆ ಘೋಷಗಳು ಸಮಸ್ತದಿಗಂತಗಳನ್ನೂ ಶಬ್ದಾಯಮಾನವಾಗಿ ಮಾಡುತ್ತಿರಲು, ಸಹೃದಯರಾದ ಸಮಸ್ತರಾಜ ಸಮೂಹವು ಭಕ್ತಿಯಿಂದ ವಿನೀತ ಮನಸ್ಕರಾಗಿ ಪರಮಾನಂದಪೂರ್ಣವಾಗುತ್ತಿರಲು, ರತ್ನಾಭಿಷೇಕನಿಮಿತ್ತಕವಾದ ಸಕಲವಿಧವಿಧಿನಿಯಮಾದಿ ವ್ಯವಸ್ಥೆಗಳನ್ನು ಸೇವಕರಾದ ಮಂತ್ರಿಗಳು ಪೂರೈಸುತ್ತಿರಲು, ಅವಿಚ್ಛಿನ್ನವಾಗಿ ಘೋಷಿಸುತ್ತಿರುವ ಸ್ವಸ್ತಿವಾಚನ ಮಂತ್ರಗಳನ್ನು ಪುರೋಹಿತವರ್ಗವು ಪೂರೈಸುತ್ತಿರಲು, ಶ್ರೀವ್ಯಾಸರಾಜ ಯತೀಂದ್ರರ ಅನಿಂದ್ಯ (ಉತ್ಕೃಷ್ಟ)ವಾದ ವಿದ್ಯಾವೈಭವಶ್ಲಾಘನೆಯಿಂದ ಪಂಡಿತ ಮಂಡಲಿಯು ತಲೆದೂಗುತ್ತಿರಲು, ಸಮೀಪದಲ್ಲಿಯೇ ಕವಿಸಮೂಹವು ಶ್ರೀವ್ಯಾಸ ರಾಜತೀರ್ಥರು ನೆರವೇರಿಸಿದ ನಾನಾ ದುರ್ವಾದಿ ದಿಗ್ವಿಜಯ ಬಿರುದಾವಳೀ ರೂಪವಾದ ಮನೋಹರವಾದ ಕಾವ್ಯರಚನೆಮಾಡಿ ಹೇಳುತ್ತಿರಲು, ಶ್ರೀವ್ಯಾಸರಾಜ ಯತೀಶ್ವರರ ಬಾಲ್ಯಾರಭ್ಯ ಪ್ರಕಟಿತವಾದ ಅತಿಗಂಭೀರ ನಿರುಪಮ ಚರಿತ್ರೆಗಳೆಂಬ ಕೀರ್ತಿಸ್ತವನವನ್ನು ಶ್ರವಣಮಾಡಿದ ಪೌರಜಾನಪದರು ಅತ್ಯಾಶ್ಚರ್ಯದಿಂದ ಮಂದಹಾಸಯುಕ್ತರಾಗಿ ಬಿಚ್ಚುಗಣ್ಣುಗಳಿಂದ ಆ ಯತಿವರ್ಯರ ತೇಜಃಪುಂಜ ಮೂರ್ತಿಯನ್ನು ನಿರೀಕ್ಷಿಸುತ್ತಿರಲು, ಕರ್ನಾಟಕ ಸಾಮ್ರಾಜ್ಯಾಧೀಶ್ವರನಾದ ಆ ಕೃಷ್ಣ ಭೂಪತಿಯು ತಾನೇ ತನ್ನ ಕರಕಮಲಗಳಿಂದ ಅನರ್ಘ್ಯರತ್ನಗಳಿಂದ ತುಂಬಿದ ಸುವರ್ಣಕುಂಭವನ್ನು ತೆಗೆದುಕೊಂಡು ಪೂಜ್ಯರಾದ ಭಗವಾನ್ ಶ್ರೀವ್ಯಾಸರಾಜ ತಪಸ್ವಿಗಳನ್ನು ವಿವಿಧ ರತ್ನಸಮೂಹಗಳಿಂದ ಅಭಿಷೇಕ ಮಾಡಲಾರಂಭಿಸಿದನು.

ತಂ ವ್ಯಾಸಭಿಕ್ಷುಂ ಸಕಲೈಸ್ಸರತ್ನೈಃ । ಭೂಪೋಭಿಷಿಂಚನ್ಪುರತೋ ಬುಧಾನಾಂ।
ವಾರಾಶಿಪುತ್ರೀಮಕುಟಾಗ್ರಭಾಗೇ । ಮಾಶಾವಶಾನಾಥ ಇವಾಬಭಾಸೇ ॥"

ಸಮಸ್ತದೇವತೆಗಳ ಎದುರಿನಲ್ಲಿ ಸಾಗರಕುಮಾರಿಯಾದ ಶ್ರೀಲಕ್ಷ್ಮೀದೇವಿಯ ಕಿರೀಟದ ಅಗ್ರಭಾಗವನ್ನು ಚಂದ್ರನು ತನ್ನ ಶೀತಲಕಿರಣಗಳಿಂದ ಅಭಿಷೇಕಮಾಡುತ್ತ ಶೋಭಿಸಿದಂತೆ ಆ ಕೃಷ್ಣದೇವರಾಯ ಮಹಿಪತಿಯು ಸಮಸ್ತ ಭೂದೇವ(ಪಂಡಿತ)ರ ಸಮಕ್ಷದಲ್ಲಿ ಕಿರಣದಂತೆ ಹೊಳೆಯುವ ಸಕಲ ರತ್ನಗಳಿಂದ ಅಭಿಷೇಕಮಾಡಿ ಚಂದ್ರನಂತೆ ಕಂಗೊಳಿಸಿದನು, ಆ ಮಂಗಳಕರ ದೃಶ್ಯ ಅಪೂರ್ವವಾಗಿದ್ದಿತು.

"ಶಾಸ್ತ್ರಾರ್ಣವಾಃ ಷಡಪಿ, ತೇನ ಸುಖೇನ ಪೀತಾಃ ।
ಶ್ರೀವ್ಯಾಸಯೋಗಿಪತಿನೇತಿ ಚಿರಾಯ ಭೀತಾ ।
ಆತ್ಮೋದ್ಭವೈ ರ್ಮಣಿಗಣೈರವನೀಂದ್ರಮೂರ್ತಿಃ ।
ತಸ್ಯಾಭಿಷೇಕಮಕರೋಚ್ಚತುರರ್ಣವೀವ ॥"

ಚತುಸ್ಸಮುದ್ರಪರ್ಯಂತ ಧರಾಧೀಶನಾದ ಕೃಷ್ಣದೇವರಾಯನು ಚತುಸ್ಸಮುದ್ರಫಲಕಾಪರ್ಯಂತ ಭೂತಳದಿಂದಲೂ ರತ್ನಗಳನ್ನು ಸಂಗ್ರಹಿಸಿ ಷಟ್ಶಾಸ್ತ್ರಗಳೆಂಬ ಸಮುದ್ರಪಾನಮಾಡಿದ ಬ್ರಹ್ಮಜ್ಞಾನಿಗಳಾದ ಶ್ರೀವ್ಯಾಸಭಿಕ್ಷುಗಳಿಗೆ ಅಭಿಷೇಕ ಮಾಡಿದನು.[1] ಅದು ಹೇಗೆ ಕಾಣಿಸುತಿತ್ತೆಂದರೆ—

'ಸಮುದ್ರವಸನಾ' ಎನಿಸಿದ ಸಾಕ್ಷಾತ್ ಭೂದೇವಿಯು ಷಟ್ಶಾಸ್ತ್ರ ಸಮುದ್ರಗಳನ್ನೂ ಪಾನಮಾಡಿದ್ದ ವ್ಯಾಸತೀರ್ಥರನ್ನು ಸಂತೋಷಪಡಿಸದಿದ್ದರೆ ಅವರು (ಅಗಸ್ತ್ಯರಂತೆ) ಚತುಸ್ಸಮುದ್ರಗಳನ್ನೇನಾದರೂ ಪಾನಮಾಡಿಬಿಟ್ಟರೆ. ತಾನು ನಿರ್ವಸನಳಾಗಬೇಕಾದಿತೆಂಬ ಭೀತಿಯಿಂದ ತನ್ನಲ್ಲಿ ಉತ್ಪನ್ನವಾದ (ಬಹುರತ್ನಾ ವಸುಂಧರಾ) ರತ್ನಗಳಿಂದ ಕೃಷ್ಣನರಪತಿಯ ರೂಪತಾಳಿ ಶ್ರೀವ್ಯಾಸರಾಜರಿಗೆ ಅಭಿಷೇಕ ಮಾಡಿದಳೇನೋ ಎಂಬಂತೆ ಕಾಣುತ್ತಿತ್ತು !

ಕನ್ನಡ ಸಾಮ್ರಾಟನು ರತ್ನಾಭಿಷೇಕ ಮಾಡುತ್ತಿರುವಾಗ ಶ್ರೀವ್ಯಾಸರಾಜರ ಶಿರೋಭಾಗದಿಂದ "ಖಿಲ ಖಿಲ" ಶಬ್ದ ಮಾಡುತ್ತಾ ರತ್ನಗಳು ಕೆಳಗುರುಳುತ್ತಿದ್ದವು. ಆ ಶಬ್ದವನ್ನು ಆಲಿಸಿದರೆ, ಜಗತ್ತಿನಲ್ಲಿ ಯಾವ ರಾಜ ಅಥವಾ ವಿದ್ವಾಂಸನಾಗಲೀ ನವರತ್ನಗಳಿಂದ ಅಥವಾ ನವರತ್ನಮಾಲಿಕೆಗಳಿಂದ ಈ ಕೃಷ್ಣದೇವರಾಯನಂತೆ ವ್ಯಾಸಮುನೀಂದ್ರರನ್ನು ಪೂಜಿಸುವುದಿಲ್ಲವೋ ಅಂತಹ ರಾಜ ಅಥವಾ ವಿದ್ವಾಂಸರು "ನೀಚರು ನೀಚರು" ಎಂದು ಆ ರತ್ನಗಳು "ಖಿಲ ಖಿಲ" ಶಬ್ದದಿಂದ ನಿಂದಿಸುತ್ತಿರುವಂತೆ ಭಾಸವಾಗುತ್ತಿತ್ತು.[2]

ಕೃಷ್ಣದೇವರಾಯನಿಂದ ಅಭಿಷಿಕ್ತವಾದ ರತ್ನಗಳ ಸಮೂಹವು ಶ್ರೀವ್ಯಾಸರಾಜರ

---

1. ಆರುಶಾಸ್ತ್ರಗಳೆಂಬ ಸಮುದ್ರಗಳನ್ನೂ ವ್ಯಾಸರಾಜಯೋಗಿಗಳು ಸುಲಭವಾಗಿ ಕುಡಿದು ಬಿಟ್ಟಿರುವುದರಿಂದ ಇನ್ನು ತಮ್ಮ ಗತಿಯೇನೆಂಬ ಭಯದಿಂದ ನಾಲ್ಕು ಸಮುದ್ರಗಳೂ ಒಂದಾಗಿಸೇರಿ ಕೃಷ್ಣಭೂಪನ ರೂಪತಾಳಿ, ತಮ್ಮಲ್ಲಿ ಹುಟ್ಟಿದ ಎಲ್ಲಾ ರತ್ನಗಳನ್ನೂ ತೆಗೆದುಕೊಂಡುಬಂದು ವ್ಯಾಸಭಿಕ್ಷುಗಳನ್ನು ಪ್ರಸನ್ನೀಕರಿಸಿಕೊಳ್ಳಲು ವ್ಯಾಸಮುನೀಂದ್ರರಿಗೆ ಅಭಿಷೇಕಮಾಡುತ್ತಿರುವವೋ ಎಂಬಂತೆ ಕಾಣುತ್ತಿತ್ತು. ಅಂದರೆ ರಾಯನುಮಾಡಿದ ಅಭಿಷೇಕಕ್ಕೆ ಉಪಯೋಗಿಸಿದ ರತ್ನಗಳು ಅಸಂಖ್ಯಾತವಾಗಿದ್ದವು ಎಂದು ಭಾವ.
2. —"ಭುವಿ ನೃಪ ಇವ ಕೃಷ್ಣೋ ಭೂಪತಿರ್ವಾ ಬುಧೋ ವಾ ।
ನವಮಣಿಭಿರಮುಂ ಯೋ ನಾರ್ಚತಿ ವ್ಯಾಸಭಿಕ್ಷುಂ ॥
ಸಕಲಮಣಿ ಸಮೂಹ ಸ್ತಂ ವಿನಿಂದನ್ನಿವೋಚ್ಚೈಃ ।
ಖಿಲಖಿಲ ಇತಿ ಶಬ್ದಂ ಕಲ್ಪಯನ್ನಾಪ ಭೂಮಿಮ್॥" —ವ್ಯಾಸಯೋಗಿಚರಿತಮ್

ತೇಜಸ್ಸಿನಿಂದ ಪ್ರಕಾಶಮಾನವಾದ ಸಕಲ ದಿಕ್ತಟಗಳ ಭಿತ್ತಿಭಾಗಗಳಿಂದ ಧಿಕ್ಕರಿಸಲ್ಪಟ್ಟು ಅಪಮಾನದಿಂದ ಭೂಮಿಗೆ ಬಿದ್ದವೋ ಎಂಬಂತೆ ಭೂಮಿಯಲ್ಲಿ ಅಲ್ಲಲ್ಲಿ ಜಾರಿದವು.[1]

ಪ್ರಕಾಶಮಾನವಾದ ವಿವಿಧಕಾಂತಿರಂಜಿತ ರತ್ನ ಸಮುದಾಯದಿಂದ ಶ್ರೀವ್ಯಾಸ ಭಗವಾನರು ಪರಿವೃತರಾಗಿ; ಅವುಗಳನ್ನು ಸಜ್ಜನರಿಗೆ ಶೀಘ್ರವಾಗಿ ದಾನಮಾಡಬೇಕೆಂಬ ಔತ್ಸುಕ್ಯದಿಂದ ಶೋಭಿಸುತ್ತಿರಲು ಲೋಕಾನಂದಕರ ಕಾಂತಿವೃಷ್ಟಿಯನ್ನು ಕರೆಯುವುದನ್ನು ಸೂಚಿಸುವ ಪ್ರಭೆಯ (ಕಾಂತಿಯ) ಪರಿಧಿಯಿಂದ ಶೋಭಿಸುವ ಸೂರ್ಯದೇವನಂತೆ ರಾಜಿಸುತ್ತಿದ್ದರು.[2]

ಆಗ ಈ ಮಹೋತ್ಸವಕ್ಕಾಗಿ ವಿಶೇಷಾಹ್ವಾನದಿಂದ ಆಗಮಿಸಿದ್ದ ಅನೇಕ ನೆರೆಹೊರೆಯ ರಾಜರು, ಸುಲ್ತಾನರು, ಮಹಾಮಾಂಡಲಿಕರು, ಸಾಮಂತರು,ಪ್ರಮುಖ ಪೌರಜಾನಪದರು,ಲೌಕಿಕ ವೈದಿಕ ಧರ್ಮಾಭಿಮಾನಿಗಳು, ಇವರೆಲ್ಲರನ್ನೂ ಕನಕಹರಿ ಪೀಠದಲ್ಲಿ ಕಂಗೊಳಿಸಿ,ತಮ್ಮ ಕರುಣಾರ್ದ್ರ ದೃಷ್ಟಿಯಿಂದ ಅವಲೋಕಿಸುತ್ತಾ ಆಶೀರ್ವದಿಸುತ್ತಿದ್ದ ಶ್ರೀವ್ಯಾಸರಾಜ ಯತಿಸಾರ್ವಭೌಮರಿಗೆ ಭಕ್ತಿಶ್ರದ್ಧಾನ್ವಿತರಾಗಿ ಅನರ್ಘ್ಯ ಕಾಣಿಕೆಗಳನ್ನು ಸಮರ್ಪಿಸಿ ಕೃತಾರ್ಥರಾದರು. ಅವರಲ್ಲಿ ವಿಧರ್ಮೀಯರಾದ ಬಿಜಾಪುರ, ಗುಲ್ಬರ್ಗಾ, ಬಿದಿರೆ ಮುಂತಾದ ಬಹುಮನಿ ಸುಲ್ತಾನರು, ಒಂಟೆಯ ಮೇಲೆ ನಗಾರಿಯ ಬಿರುದು,ಒಂಟೆಯಮೇಲೆ ಹಸಿರು ನಿಶಾನಿಯ ಬಿರುದು,ಒಂಟೆಯ ಮೇಲೆ ಸ್ವರ್ಣಪೀಠದಲ್ಲಿ ಹಸಿರು ಛತ್ರಿಯ ಬಿರುದು ಮುಂತಾದ ಮುಸ್ಲಿಂ ರಾಜರುಗಳ ವಿಶಿಷ್ಟ ಬಿರುದಾವಳಿಗಳು ಮತ್ತು ಅಸಾಧಾರಣವೆನಿಸಿದ ಹಸಿರುಛತ್ರಿಯನ್ನು ಹಿಡಿಸಿಕೊಂಡುಹೋಗುವ ಗೌರವಗಳನ್ನೂ ಧನ-ಕನಕ-ವಸ್ತ್ರಾದಿಗಳನ್ನೂ ಶ್ರೀವ್ಯಾಸತೀರ್ಥರಿಗೆ ಸಮರ್ಪಿಸಿದ್ದು ಒಂದು ಅತಿಶಯವಾಗಿತ್ತು.

ಆ ನಂತರ ಶ್ರೀವ್ಯಾಸರಾಜರು ತಮ್ಮ ಅಸಾಧಾರಣವಾದ ತೇಜಃಪ್ರಭಾವವನ್ನು ತಮ್ಮಲ್ಲಿಯಾಚಿಸಿ ಪಡೆಯಲಾಶಿಸಿ ಧರೆಗಿಳಿದು ಬಂದ,ಜಗತ್ತಿನಲ್ಲಿ ತೇಜಸ್ವಿಯರೆಂದು ಪ್ರಖ್ಯಾತರಾದ ಸೂರ್ಯ ಚಂದ್ರಾಗ್ನಿಗಳೋ ಎಂಬಂತಿರುವ, ನಕ್ಷತ್ರಗಣಪರಿವೃತವಾದ ನವಗ್ರಹ ಸಮೂಹವೋ ಎಂಬಂತಿರುವ, ಕೃಷ್ಣದೇವರಾಯನ ಪರಿಶುದ್ಧ ಭಕ್ತಿಲತೆಯ ಕುಸುಮಗಳಂತಿರುವ ವ್ಯಾಸಮುನಿಗಳ ಪ್ರಖರ ತಪಸ್ಸೆಂಬ ದೇದೀಪ್ಯಮಾನವಾದ ಅಗ್ನಿ ಸ್ಫುಲಿಂಗ (ಕಿಡಿ) ಗಳಂತಿರುವ ಪ್ರಕಾಶಮಾನ ಕಿರಣಸಮೂಹದಿಂದ

---

1) —"ತೇಭಿಶ್ಶೇಷ ಮಣಯೋ ಮಹೀಭುಜಾಂ ತತ್ರ ತತ್ರ ಸಸ್ಪೃಹನಿಪಾತಿತಾಃ ।
ದೀಪಿತಾಖಿಲದಿಗಂತಭಿತ್ತಿನಾ ಧಿಕ್ಕೃತಾ ಇವ ಮುನೀಂದ್ರತೇಜಸಾ ॥"

2) "ಊರ್ಜಸ್ವಲೈರ್ಬಹುವಿಧೈರ್ಮಣಿಭಿರ್ವ್ಯರಾಜೀತ್ ।
ಪ್ರಾಕಾರಿತಸ್ಸಭಗವಾನ್ ಪ್ರಮುಖೋ ಯತೀನಾಂ ॥
ಲೋಕಾಭಿಮೋದನ ವಿಚಕ್ಷಣ ವರ್ಷ ಶಂಸೀ ।
ನಾನಾರುಚಾಂ ಪರಿಧಿನೇವ ಸಪಾಂಶುಮಾಲೀ ॥
—ವ್ಯಾಸಯೋಗಿಚರಿತಮ್—P. 73-74

ವಂಚಿಸಲ್ಪಟ್ಟ, ಆ ಸಭಾತಳದಲ್ಲಿರುವ ಮಂಗಳಕರ ಮಣಿದೀಪಗಳ ಕಾಂತಿಯುಳ್ಳ, ಆ ಅಪರಿಮಿತ ರತ್ನ ಸಮೂಹವನ್ನು ಭೂಸುರರು ರಾಶಿರಾಶಿಮಾಡಿದರು. ಆ ರತ್ನರಾಶಿಗಳಲ್ಲಿ ಅರ್ಧಭಾಗವನ್ನು ಅನೇಕ ಪಂಡಿತರು, ಶ್ರೋತ್ರಿಯ ಬ್ರಾಹ್ಮಣರುಗಳಿಗೆ ಅಗ್ರಹಾರಗಳನ್ನು ನಿರ್ಮಿಸಿ ದಾನಮಾಡಲೊಸುಗ ಕಾದಿರಿಸಿ, ಉಳಿದ ರತ್ನರಾಶಿಗಳನ್ನು ಉತ್ಸವಕ್ಕಾಗಿ ಬಂದಿದ್ದವರಿಗೆ ಶ್ರೀಗಳವರು ಉದಾರವಾಗಿ ದಾನಮಾಡಿದರು. ಶ್ರೀವ್ಯಾಸರಾಜರ ದಾನಕ್ರಮ ಅಪೂರ್ವವಾಗಿದ್ದಿತು.

"ತತ್ರ ಭಗವಾನರ್ಘ ಸರಣಿಲಂಘನ ಜಂಘಾಲಾನ್ಯುಪಾದಾನಾನೀವ ತೇಜಸಾಂ ತ್ರಯಾಣಾಂ, ಅಸದ್ಯಶಸ್ವತೇಜೋ ಬಿಭಿಕ್ಷಿಷಯಾ ಕ್ಷ್ಮಾತಲಮಾಪತಿತಾನಿ ರತ್ನಾನಿ ಕ್ಷೋಣೀಸುರಯತ್ನವಿಶ್ರಾಣಿತಾವಶೇಷಾಣಿ ತಾನಿ ರಾಶಿಂ ಕಾರಯಿತ್ವಾ, ನಾನಾ ದಿಶಾಂಚಲೇಭ್ಯ ಸ್ಸಮಾಗತಾನಾಂ ಕುಂಡಲಾಯ ತುಂಡೀರಾಧಿಪಾನಾಂ, ಕೇಯೂರಾಯ ಕೇರಲಾನಾಂ, ಹಾರಾಯ ಪಾರಶೀಕಾನಾಂ, ಮಕುಟಾಯಲಾಟಾನಾಂ ಅಂಗುಲೀಯಕಾಯ ಕಲಿಂಗಾನಾಂ, ಕಂಕಣಾಯ ಕೊಂಕಣಾನಾಂ, ನಿಷ್ಕಾಯ ತುರುಷ್ಕಾಣಾಂ, ಚೂಡಾಯ ಗೌಡಾನಾಂ, ತರಲಾಯ ಚೋಲಾನಾಂ, ಕಾಂಚೀಗುಣಾಯ ಪಾಂಚಾಲಾನಾಂ. ಅನ್ಯೇಷಾಮಪಿ ಭೂಭುಜಾಂ ವದಾನ್ಯಾಗ್ರಣೀಃ ಸ ಭಿಕ್ಷುಃ ಪ್ರಾದಿಕ್ಷತ್ ॥"

ಆ ರತ್ನರಾಶಿಗಳನ್ನು ತುಂಡೀರದೇಶಾಧಿಪತಿಗೆ ಕರ್ಣಕುಂಡಲಕ್ಕಾಗಿಯೂ, ಕೇರಳ ದೇಶಾಧಿಪತಿಗೆ ಕೇಯೂರ (ಭುಜಕೀರ್ತಿ)ಗಳಿಗಾಗಿಯೂ, ಪಾರಶೀದೇಶಾಧಿಪತಿಗಳಿಗೆ ಹಾರಕ್ಕಾಗಿಯೂ, ಲಾಟಾಧಿಪತಿಗೆ ಕಿರೀಟಕ್ಕಾಗಿಯೂ, ಕಳಿಂಗಾಧಿಪತಿಗೆ ಅಂಗುಳೀಯಕ್ಕಾಗಿಯೂ, ಕೊಂಕಣ ದೇಶಾಧಿಪತಿಗೆ ಕಂಕಣಗಳಿಗಾಗಿಯೂ, ತುರುಷ್ಕ ದೇಶಾಧಿಪತಿಗಳಿಗೆ ನಿಷ್ಕ (ನಾಣ್ಯ)ಗಳಿಗಾಗಿಯೂ, ಗೌಡದೇಶಾಧಿಪತಿಗಳಿಗೆ ಚೂಡಾಮಣಿಗಳಿಗಾಗಿಯೂ, ಚೋಳ ದೇಶಾಧಿಪತಿಗಳಿಗೆ ತರಳ(ಚಪಲಹಾರ)ಗಳಿಗಾಗಿಯೂ ಪಾಂಚಾಲ ದೇಶಾಧಿಪತಿಗೆ ಕಾಂಚೀಗುಣ (ನಡುಪಟ್ಟಿ)ಕ್ಕಾಗಿಯೂ ಉಳಿದ ಸಾಮಂತಾದಿ ರಾಜರಿಗೂ ಆ ರತ್ನಗಳನ್ನು ದಾನಶೌಂಡರಾದ ಶ್ರೀ ವ್ಯಾಸರಾಜ ಮುನೀಂದ್ರರು ಅನುಗ್ರಹಿಸಿದರು.

ಹೀಗೆ ಕೃಷ್ಣದೇವರಾಯನ ಮಹಾ ಔದಾರ್ಯ, ಗುರುಭಕ್ತಿ, ಕೀರ್ತಿ ಮುಂತಾದವು ನಾನಾದೇಶದ ರಾಜ ಮಹಾರಾಜರಿಗೆ ಯಾವಾಗಲೂ ಸ್ಮರಣೆಗೆ ಬರುತ್ತಿರುವಂತೆ ಮಾಡಿ, ತರುವಾಯ ಶ್ರೀವ್ಯಾಸತೀರ್ಥರು ಶ್ರೀಮದಾಚಾರ್ಯರ ವಿದ್ಯಾಸಾಮ್ರಾಜ್ಯದ ಮುಖ್ಯಗುರಿಯಾದ ವಿದ್ವಜ್ಜನ ಪೋಷಣ-ಸನ್ಮಾನಗಳ ಕಡೆ ಗಮನವಿತ್ತು ಅಲ್ಲಿ ಸೇರಿದ್ದ ಅಸಂಖ್ಯ ವಿದ್ವಜ್ಜನರು, ಕವಿ-ಸಾಹಿತಿಗಳು, ಕಲೆಗಾರರಿಗೆ ಉದಾರವಾಗಿ ಬೆಲೆಬಾಳುವ ರತ್ನಗಳನ್ನು ಕೊಡಗೈದೊರೆಗಳಾದ ಆ ಮಹನೀಯರು ದಾನಮಾಡಿದ ಬಗೆನೋಡಿ ಎಷ್ಟು ಹೃದಯಂಗಮವಾಗಿದೆ—

"ಹಸ್ತಾಂಭೋರುಹಮಾಸತಾಂಗುಲಿದಲಂ ವಿಸ್ತಾರಯುದ್ಧಾತ್ಪತಾಂ ।
ವಿದ್ವದ್ರಾಜಿಷು ತತ್ರ ತತ್ರ ಸದಸಿ ವ್ಯಾಸಸ್ಯ ಯೋಗೀಶಿತುಃ ॥
ಯುಷ್ಮಾಭಿರ್ಭುವಿಪಂಚಜನ್ಮಭಿರಿಯಂ ಭೋಕ್ತುಂ ಧ್ರುವಂ ಶಕ್ಯತೇ ।
ರತ್ನಾನಾಂ ಪಟಲೀತಿ ಸೂಚನಮಿವ ವ್ಯಾತನ್ವದಾಲಕ್ಷತ ॥"

ಶ್ರೀವ್ಯಾಸರಾಜರು ರತ್ನರಾಶಿಗೆ ಕೈಹಾಕಿ ಮುಷ್ಟಿಯಲ್ಲಿ ರತ್ನಗಳನ್ನು ಹಿಡಿದು ವಿದ್ವಾಂಸರಿಗೆ ದಾನಮಾಡುವಾಗ ಅವರ ಕರಮುಷ್ಟಿಯು ಸಡಿಲಾಗಿ ಹಸ್ತದ ಐದು ಬೆರಳುಗಳು ವಿಸ್ತಾರವಾಗಿ ಕಂಗೊಳಿಸುತ್ತಿತ್ತು. ಅದು ನಾವೀಗ ನಿಮಗೆ ನೀಡುತ್ತಿರುವ ಈ ಸಂಪತ್ತು ಈ ಲೋಕದಲ್ಲಿ ನೀವು ಐದು ಜನ್ಮಗಳವರೆಗೂ ಭೋಗಿಸಲು ಸಾಧ್ಯವಾಗುವುದು" ಎಂದು ಸೂಚಿಸುವಂತಿತ್ತು !

ಆ ತರುವಾಯ ಯೋಗೀಂದ್ರರು ಕವಿ ಸಮೂಹವನ್ನು ವಿಶೇಷಾಕಾರವಾಗಿ ರತ್ನದಾನಗಳಿಂದ ಸಂಭಾವಿಸಿದರು. ಸಂಭಾವನೆ ಪಡೆದು ಆನಂದೋದ್ರೇಕದಿಂದ ಪ್ರಮತ್ತರಾದ ಕವಿಸಮೂಹವು ಸ್ತುತಿರೂಪಗಳಾದ ಮನೋಜ್ಞ ಆಶುಕವಿತೆಗಳನ್ನು ರಚಿಸಿ ಹೇಳಹತ್ತಿದರು. ಆ ಕಾವ್ಯಕೋಲಾಹಲಗಳಿಂದ ಆ ಸಭೆಯು ವಾತಾಯನ ಮಾರ್ಗದಿಂದ ಹೊರಹೊಮ್ಮಿದ ಧ್ವನಿ ವಿಶೇಷಗಳಿಂದ ಅಲ್ಲೋಲಕಲ್ಲೋಲವಾಯಿತು.[1]

ಶ್ರೀವ್ಯಾಸರಾಜರು ತಮಗೆ ಜರುಗಿದ ರತ್ನಾಭಿಷೇಕದಿಂದ ಲಬ್ಧವಾದ ಸಮಸ್ತ ರತ್ನರಾಶಿಯನ್ನೂ ವಿದ್ವಾಂಸರು ರಾಜಾಧಿರಾಜರಿಗೆ ದಾನಮಾಡಿಬಿಟ್ಟಿದ್ದರಿಂದ ಎಲ್ಲರೂ ಆಶ್ಚರ್ಯದಿಂದ ಅವರ ತ್ಯಾಗವನ್ನು ಕೊಂಡಾಡಿದರು. ಅನಂತರ ಸಭಾಸದರೆಲ್ಲರೂ ಕೃಷ್ಣದೇವರಾಯನನ್ನು ತುಂಬಿಬಂದ ಹೃದಯದಿಂದ ಹೊಗಳಹತ್ತಿದರು.

"ಸಂಪತ್ತೀ ಸ್ಸಕಲದಿಗಂತರಾರ್ಜಿತಾ ಯಾ ತಾದೃಶ್ಯಾನರಸಮಹೀಪಸೂನ್ಯತೇಯಾಃ
ವ್ಯಾತಾನೀ ತ್ಸಮುಚಿತಮೇಷ ಇತ್ಯಶೇಷೈ ಸ್ಸಶ್ಲಾಘೇ ಸದಸಿ ಜನೈಸ್ಸ
ಕೃಷ್ಣರಾಯಃ ॥"

ಪೂರ್ವದಲ್ಲಿ ಅತ್ಯಂತ ಪ್ರಸಿದ್ಧನಾಗಿದ್ದ ತುಳುವ ನರಸಮಹೀಪಾಲನ ಪುತ್ರನಾಗಿ ಹುಟ್ಟಿ, ಸಮಸ್ತ ದಿಗ್ದೇಶಗಳನ್ನೂ ಜಯಿಸಿ ಸಂಪಾದಿಸಿದ ಕೃಷ್ಣದೇವರಾಯಸಾರ್ವಭೌಮನ ಸಂಪತ್ತು ಬಹುಯೋಗ್ಯವಾದದ್ದು. ಖ್ಯಾತ ತಂದೆಗೆ ಮಗನಾಗಿ ಜನಿಸಿ ಬಾಹುಬಲದಿಂದ ಅಪಾರ ಸಂಪತ್ತನ್ನು ಗಳಿಸಿ ಅದನ್ನು ಶ್ರೀವ್ಯಾಸಯೋಗೀಂದ್ರರ ರತ್ನಾಭಿಷೇಕಕ್ಕಾಗಿ ಉಪಯೋಗಿಸಿದ್ದರಿಂದ ಆ ಸಂಪತ್ತು ಸಾರ್ಥಕತೆಯನ್ನು ಪಡೆಯಿತು ! ಎಂದು ಆ ಮಹಾಸಭೆಯಲ್ಲಿ ಸರ್ವರೂ ಏಕಕಂಠದಿಂದ ಕೃಷ್ಣದೇವರಾಯನನ್ನು ಕೊಂಡಾಡಿದರು.

---

1) ಸಂಭಾವನಾವಾಪ್ತಿ ಸಮುನ್ಮದಾನಾಂ ಕವೀಶ್ವರಾಣಾಂ ಕಮನೀಯ ವಾಚಾಂ ।
ಹಲ್ಲೋಹಲ್ಯೈಸ್ಸಾನೃಪತೇಸ್ಸಭಾಸೀ ದುಲ್ಲೋಲ ಕಲ್ಲೋಲಿತ ಜಾಲಮಾರ್ಗಾ ॥
—ವ್ಯಾಸಯೋಗಿ ಚರಿತಮ್, P–74.

ಇಂತು ವಿಶೇಷ ವೈಭವದಿಂದ ಮಹೋತ್ಸವವು ಪೂರ್ಣವಾದ ಮೇಲೆ ಶ್ರೀ ವ್ಯಾಸತೀರ್ಥರು ಸುವರ್ಣ ಸಿಂಹಾಸನದಿಂದ ಮೇಲೆದ್ದು ಅತಿ ವಿಚಕ್ಷಣ ಕರುಣಾರಸ ಸ್ಯಂದಿ ಪುಷ್ಪರಸದ ಹೊರತೊಮ್ಮಿಕೆಯಿಂದ ಪರಿಪೂರ್ಣವಾದ ಕಮಲಮಾಲಿಕೆಯಂತಿರುವ ತಮ್ಮ ಕೃಪಾದೃಷ್ಟಿಯನ್ನು ಕೃಷ್ಣದೇವರಾಯನ ಮೇಲೆ ಬೀರಿ, ಅವನ ಗುರುಭಕ್ತ್ಯಾತಿಶಯಾದಿಗಳನ್ನು ಅತಿಮೃದುಮಧುರ ವಾಕ್ಯಗಳಿಂದ ಶ್ಲಾಘಿಸಿ ನರಪತಿಯನ್ನು ಕೃತಾರ್ಥನನ್ನಾಗಿಸಿ, ಸಾಮ್ರಾಟನೊಡನೆ ಹೊರಟು ಮೊಳಗುತ್ತಿರುವ ಮಂಗಳಕರ ವಾದ್ಯಧ್ವನಿಗಳಿಂದ ಬ್ರಹ್ಮಾಂಡಭಾಂಡವು ತುಂಬುತ್ತಿರಲು, ಮುಂಭಾಗದಲ್ಲಿ ಸಾಮಂತ ರಾಜಕುಮಾರರು ಉಚ್ಚೈಶ್ರವಸ್ಸಿನಂತಿರುವ ದಿವ್ಯಾಶ್ವಗಳನ್ನೇರಿ ತ್ವರೆಯಿಂದಗಮಿಸುತ್ತಿರುವಾಗ ಆ ಅಶ್ವಗಳಗೊರಸುಗಳಿಂದ ಮೇಲೆದ್ದು ಭೂತಲವನ್ನೆಲ್ಲಾ ವ್ಯಾಪಿಸಿರುವ ಧೂಳಿಯಿಂದ ದಿಕ್ತಟಗಳೆಲ್ಲೆಲ್ಲಾ ವ್ಯಾಪಿಸುತ್ತಿರಲು, ಮುಂದೆ ರಾಜಗಾಂಭೀರ್ಯದಿಂದ ಸಾಗಿರುವ ಆನೆಗಳ ಹಣೆಗಳಲ್ಲಿ ಕಟ್ಟಿರುವ ಕನಕ-ಮುಕರಪದಕಗಳು ಕಟಕಟ ಶಬ್ದ ಮಾಡುತ್ತಾ ಆನೆಗಳು ಬರುತ್ತಿರಲು, ಸುವರ್ಣ-ರಜತವೇತ್ರಧಾರಿ ಜನರು ಜಯಧ್ವನಿಮಾಡುತ್ತಾ ಆನೆ-ಕುದುರೆ ಹಾಗೂ-ಶ್ರೀಯವರ ಸವಾರಿಗೆ ದಾರಿಮಾಡಿಕೊಡುತ್ತಿರುವುದರಿಂದ ಉಂಟಾದ ಕೋಲಾಹಲವನ್ನಾಲಿಸಿ ಸೈನಿಕಜನರು ಉತ್ತೇಜಿತರಾಗಿ ಗುಂಪುಗುಂಪಾಗಿ ನಡೆದುಬರುತ್ತಿರಲು, ನ್ಯಾಯವನ್ನು ಅನುಸರಿಸಿದ ಧರ್ಮದಂತೆ ಪ್ರತ್ಯಕ್ಷವಾಗಿ ಹಿಂಬಾಲಿಸಿರುವ ಜನಸಮೂಹಯುಕ್ತರಾಗಿ, ಸುವರ್ಣಪಾಲಕಿಯಲ್ಲಿ ಮಂಡಿಸಿ ಶ್ರೀವ್ಯಾಸರಾಜ ಗುರುಚರಣರು ಮೆರವಣಿಗೆಯಿಂದ ದಯಮಾಡಿಸಿದರು.

ಆ ಪರಮಾದ್ಭುತ ಸಾತ್ವಿಕಮಹೋತ್ಸವವನ್ನು ನೋಡಲು ರಾಜಬೀದಿಯ ಎರಡೂಪಾರ್ಶ್ವಗಳಲ್ಲಿ ಸಾಲುಗಟ್ಟಿನಿಂತಿರುವ ಜನರು ಶ್ರೀವ್ಯಾಸರಾಜರನ್ನು ಸತ್ಕರಿಸಲು ಪುಷ್ಪಮಾಲಿಕೆ-ಫಲತ್ತುಗಳನ್ನು ಕರಾಂಜಲಿಯಲ್ಲಿ ಹಿಡಿದು ಅರ್ಪಿಸುತ್ತಾ ಸಹರ್ಷವಿಭ್ರಮೋತ್ಸಾಹಗಳಿಂದ ಜಯಜಯಕಾರಮಾಡುತ್ತಿದ್ದರು. ಹೀಗೆ ನಿಬಿಡವಾದ ರಾಜಬೀದಿಗಳನ್ನು ದಾಟಿ, ದಂಡಕಮಂಡಲುಧಾರಿಗಳಾದ, ಬ್ರಹ್ಮಜ್ಞಾನಿಗಳಾದ ಅನೇಕ ಪರಮಹಂಸಶಿಷ್ಯಮಂಡಲಿಯಿಂದ ಉಪಾಸಿತರಾಗುತ್ತಾ ಭಗವಾನ್ ಶ್ರೀವ್ಯಾಸತೀರ್ಥರು ಹತ್ತಿರದಲ್ಲಿಯೇ ಕಂಗೊಳಿಸುತ್ತಿದ್ದ ತಮ್ಮ 'ವಿಶ್ವಪಾವನಮಠ' (ಆಶ್ರಮ)ಕ್ಕೆ ದಯಮಾಡಿಸಿದರು.[1]

---

1. —ಏವಂ ಸಮಧಿಗತ ಸಪರ್ಯಾವಿಶೇಷಸ್ಸಭಗವಾನ್ ಸಮುತ್ಥಾಯ ಕನಕಾಸನಾದತಿಪ್ರಗಲ್ಭೇನ ಕರುಣಾರಸಮಂದರೇಣ ಮಕರಂದನಿಷ್ಯಂದಕರಂಬಿತೇನ ಅರವಿಂದದಾಮೇವ ವೀಕ್ಷಣವಿಶೇಷೇಣ ಚ ಸುಧಾಮಾಧುರಿಮಾಂತರ್ವರ್ತಿನೀಭಿರ್ಭಕ್ತಿರಸಶ್ಲಾಘನಭಾರತೀಭಿಶ್ಚ ಕ್ಷಿತಿಪತಿಂ ಕೃತಾರ್ಥೀಕೃತ್ಯ ಸಮಧಿರೂಢಚತುರಂತಯಾನೋ....ರಾಜವೀಥೀಪರಂಪರಾಮತೀತ್ಯ.......ಶಿಷ್ಯಯತಿಕುಲೈರುಪಾಸ್ಯಮಾನಃ ಪ್ರತಿಹಾರಪರಿಸರಂ ಮಹಾಶ್ರಮಮಶಿಶ್ರಿಯತ್ —ವ್ಯಾಸಯೋಗಿ ಚರಿತಮ್-P-75

ಶ್ರೀಪುರಕ್ಕೆ ದಯಮಾಡಿಸಿದ ಶ್ರೀವ್ಯಾಸಯತಿಪುಂಗವರಿಗೆ ಕೃಷ್ಣದೇವ ರಾಯನು ಭಕ್ತಿಯಿಂದ ನಮಸ್ಕರಿಸಿ ವಿನಯಪೂರ್ವಕವಾಗಿ ನಿಂತನು. ಆಗ ಶ್ರೀವ್ಯಾಸ ತೀರ್ಥರು ಮಂದಹಾಸವೀರುತ್ತಾ ಅವನಿಗೆ ಫಲಮಂತ್ರಾಕ್ಷತೆಯನ್ನು ಅನುಗ್ರಹಿಸಿ ಆಶೀರ್ವದಿಸಿ ಅರಮನೆಗೆ ಕಳುಹಿಸಿದರು.[2]

## ೪೭. ಕುಹಯೋಗ ಪರಿಹಾರ

ಕನ್ನಡರಮಾರಮಣನಾದ ಕೃಷ್ಣದೇವರಾಯನಿಗೂ, ಸಾಮ್ರಾಜ್ಯಕ್ಕೂ ಕುಹೂ ಯೋಗರೂಪವಾಗಿ ಒದಗಿಬಂದಿದ್ದ ಮಹಾಕಂಟಕ ಮತ್ತು ವಿಪತ್ತನ್ನು ಪರಿಹರಿಸಲು ಅದನ್ನು ಸ್ವತಃ ತಮ್ಮಮೇಲೆ ತಂದುಕೊಂಡು ತಮ್ಮ ತಪಶಶ್ಶಕ್ತಿ ಹಾಗೂ ಶ್ರೀಹರಿಯ ಅನುಗ್ರಹಬಲದಿಂದ ಆ ದುರಂತದಿಂದ ಕೃಷ್ಣದೇವರಾಯ ಮತ್ತು ಕನ್ನಡನಾಡನ್ನು ಸಂರಕ್ಷಿಸಿ ತಾವೂ ಪಾರಾಗಿ ನಾಡಿಗೆ ಎಂದಿಗೂ ಮರೆಯಲಾಗದ ಮಹೋಪಕಾರವನ್ನು ಮಾಡಿದ ಶ್ರೀವ್ಯಾಸರಾಜರನ್ನೂ, ಅವರ ಮಹಾತ್ಯಾಗ ವನ್ನೂ ಎಷ್ಟು ಹೊಗಳಿದರೂ ಸಾಲದು. ಈಪ್ರೊಂದು ಘಟನೆಯು ಕನ್ನಡ ಸಾಮ್ರಾಜ್ಯದ ಇತಿಹಾಸದಲ್ಲಿ ಸುವರ್ಣಾಕ್ಷರಗಳಿಂದ ಬರೆದಿಡುವಂತಹುದಾಗಿದೆ ಎಂದು ಧೈರ್ಯವಾಗಿ ಹೇಳಬಹುದು.

ಈ ಕಥಾನಕವನ್ನು ನಿರೂಪಿಸುವಮೊದಲು ಕುಹೂಯೋಗವೆಂದರೇನು? ಅದರ ಪರಿಣಾಮಗಳೇನು? ಎಂಬ ವಿಚಾರವನ್ನು ಅರಿಯುವುದು ಅವಶ್ಯವಾದ್ದರಿಂದ ಆ ಬಗ್ಗೆ ಇಲ್ಲಿ ವಿವೇಚಿಸುವುದು ಅಪ್ರಕೃತವಾಗಲಾರದು.[3]

ಅಮರಸಿಂಹನು "ನಷ್ಟೇಂದು ಕಲಾ ಕುಹೂಃ" ಎಂದು ಕುಹಯೋಗದ ಲಕ್ಷಣ ವನ್ನು ನಾಮಲಿಂಗಾನುಶಾಸನದಲ್ಲಿ ಹೇಳಿದ್ದಾನೆ. ಅಮಾವ್ಯಾಸೆಯು ಕಳೆದು ಶುಕ್ಲ ಪ್ರತಿಪತ್ ತಿಥಿಯು ಪ್ರಾರಂಭವಾಗುವ ಸಂಧಿಕಾಲದಲ್ಲಿ ಕುಹೂಯೋಗವುಬರುವುದು. ಕಲೆಗಳನ್ನು ಕಳೆದುಕೊಂಡ ಚಂದ್ರನು ಆ ಕಾಲದಲ್ಲಿ ಕಾಣಿಸುವುದಿಲ್ಲವಾದುದರಿಂದ ಆ ಸಮಯವು ತ್ಯಾಜ್ಯವೆನಿಸುವುದು.

ಮೈಸೂರು ಸಂಸ್ಥಾನದ ಆಸ್ಥಾನಪಂಡಿತರಾಗಿ ಖ್ಯಾತರಾಗಿದ್ದ ಮಹಾವಿದ್ವಾನ್ ಮಂಡಿಕಲ್ ಶ್ರೀರಾಮಶಾಸ್ತ್ರಿಗಳು ತಾವು ರಚಿಸಿರುವ "ಮೇಘಪ್ರತಿಸಂದೇಶ" ಎಂಬ ಗ್ರಂಥದಲ್ಲಿ ಹೀಗೆ "ಜ್ಯೋತಿಸ್ಸಾರಸಂಗ್ರಹವನ್ನು" ವನ್ನು ಉದ್ಧರಿಸಿದ್ದಾರೆ. (ಪುಟ 84)

"ಕುಹೂಯೋಗೋ ನಾಮ ಪರ್ವಪ್ರತಿಪತ್ಸಂಧೌ ವಿಷಘಟಿಕಾಯುಕ್ತೇ ನಷ್ಟೇಂ ದುಕಲೇ ಯತ್ರ ಕಾಲೇ ಚತ್ವಾರೋ ಗ್ರಹಾಃ ಚಾಡಾಲಯೋಗಂ ಪ್ರಾಪ್ಯ ದ್ವಾದಶ

---

2. "ಭಕ್ತ್ಯಾ ಸ ತತ್ರ ಪ್ರವಣೀಕೃತಾಂಗಂ ಕರಾಂಗುಲೀಭಿಃ ಕಲಿತಾಧರೋಷ್ಠಂ ।
ಶ್ರೀವ್ಯಾಸಯೋಗೀ ಸ್ಮಿತಪೂರ್ವವಾಚಾ ತಮನ್ವಜಾನೀತ್ಸದನಾಯ ಗಂತುಮ್ ॥

3. ....ಈ ವಿಚಾರ ವಿವೇಚನೆಯಲ್ಲಿ ಶ್ರೀವ್ಯಾಸಯೋಗಿಚರಿತೆಯ ಆಂಗ್ಲ ಉಪೋದ್ಘಾತವು ನಮಗೆ ಬಹು ಸಹಾಯಕವಾಗಿದೆ. —ಗ್ರಂಥಕಾರ

ಸ್ಥಾಸ್ಸ ಇತಿ ಪರಿಭಾಷಿತಃ । ತದುಕ್ತಂ ಜ್ಯೋತಿಸ್ಸಾರಸಂಗ್ರಹೇ-ರಾಹುಣಾರ್ಕಾರ್ಕಿ ಭೂಪುತ್ರಾಃ ಯದಾ ಚಂಡಾಲತಾಂ ಗತಾಃ । ತತ್ರ ದ್ವಾದಶಗಾಸ್ಸದ್ಯಃ ಸ ರಾಜಾ ನಶ್ಯತಿ ಧ್ರುವಮ್ ॥ ಇತಿ ॥"

**ತಾತ್ಪರ್ಯ :** ಅಮವಾಸ್ಯೆಯು ಕಳೆದು ಶುಕ್ಲಪಕ್ಷದ ಪಾಡ್ಯ ಪ್ರಾರಂಭ ವಾಗುವ ಸಂಧಿಕಾಲದಲ್ಲಿ ಚಂದ್ರನ ಕಲೆಗಳು ಸ್ಪಷ್ಟವಾಗಿ ವಿಷಘಳಿಗೆಯಿಂದ ಯುಕ್ತ ವಾದಾಗ ಲಗ್ನದಿಂದ ಹನ್ನೆರಡನೆಯ ಸ್ಥಾನದಲ್ಲಿ ನಾಲುಗ್ರಹಗಳು ಒಟ್ಟಿಗೆ ಸೇರಿ ಚಂಡಾಲತ್ವವನ್ನು ಪಡೆದು ಕ್ರೂರರಾಗಿ ದುಷ್ಫಲವನ್ನು ಕೊಡುವುದಕ್ಕೆ ಕುಹೂ ಯೋಗವೆಂದು ಹೆಸರು. ಆ ಸಮಯವು ತ್ಯಾಜ್ಯವು. ಆಗ ಚಂದ್ರನು ಕಾಣಿಸುವುದಿಲ್ಲ. ಈವಿಚಾರವಾಗಿ ಜ್ಯೋತಿಶ್ಶಾಸ್ತ್ರಸಂಗ್ರಹದಲ್ಲಿ ಹೀಗೆ ಉಕ್ತವಾಗಿದೆ-ಕುಹಯೋಗಕಾಲ ದಲ್ಲಿ ಶನಿ. ಸೂರ್ಯ, ಅಂಗಾರಕ, ಮತ್ತು ರಾಹುಗಳು ಒಂದೇ ಮನೆಯಲ್ಲಿ, ಅಂದರೆ ಲಗ್ನದಿಂದ ದ್ವಾದಶಸ್ಥಾನದಲ್ಲಿ ಸೇರಿ ಚಂಡಾಲತ್ವವನ್ನು ಪಡೆದಿರುತ್ತಾರೆ. ಹೀಗೆ ನಾಲ್ಕು ಗ್ರಹಗಳು ಲಗ್ನದಿಂದ ಹನ್ನೆರಡೆಯ ಸ್ಥಾನದಲ್ಲಿದ್ದು ಕುಹೂಯೋಗ ಬಂದಾಗ ದೇಶದ ಅಧಿಪತಿಯಾದ ರಾಜನು ತತ್‌ಕ್ಷಣವೇ ಮೃತನಾಗುತ್ತಾನೆ.

ಪ್ರಕೃತ ಕೃಷ್ಣದೇವರಾಯನ ಜಾತಕದ ಪ್ರಕಾರವಾಗಿ ಸ್ವಭಾನುಸಂವತ್ಸರದ ಮಾಘ ಕೃಷ್ಣ ಅಮಾವಾಸ್ಯಾ ಗುರುವಾರ ತಾ॥ 4-2-1524ರಂದು ಜನ್ಮದಿಂದ ಹನ್ನೆರಡನೆಯ ಸ್ಥಾನದಲ್ಲಿ ಶನಿ. ಸೂರ್ಯ, ಅಂಗಾರಕ, ರಾಹುಗಳು ಒಂದೆಡೆ ಸೇರಿ ಅಂದು ಕುಹೂಯೋಗ ಬಂದಿದ್ದು ದೇಶಕ್ಕೂ ರಾಜನಿಗೂ ಪ್ರಾಣಾಪತ್ತು ಇದ್ದುದ ರಿಂದ ಅಂದು ಶ್ರೀವ್ಯಾಸತೀರ್ಥರು ಕನ್ನಡರಾಜ್ಯಸಿಂಹಾಸನವನ್ನೇರಿ ಕುಳಿತು ಕುಹೂ ಯೋಗದ ವಿಪತ್ತನ್ನು ಪರಿಹರಿಸಿ ಕೃಷ್ಣದೇವರಾಯನನ್ನು ಸಂರಕ್ಷಿಸಿದರೆಂದು ತಿಳಿದು ಬರುತ್ತದೆ.

ಶ್ರೀವ್ಯಾಸರಾಜಮಠದ ಪೀಠಾಧಿಪತಿಗಳಾಗಿದ್ದ ಕೀರ್ತಿಶೇಷ ಪೂಜ್ಯ ಶ್ರೀವಿದ್ಯಾ ರತ್ನಾಕರತೀರ್ಥ ಶ್ರೀಪಾದಂಗಳವರು ರಚಿಸಿರುವ ಶ್ರೀವ್ಯಾಸರಾಜಚರಿತಮ್ ಎಂಬ ಪುಟ್ಟಕಾವ್ಯದಲ್ಲಿ-

"ಅಬ್ದೇ ವಿಕ್ರಮನಾಮಕೇಽಂತಿಮದಿನೇ ಮಾಘಸ್ಯ ಕೃಷ್ಣಾಭಿದಂ ।
ಶ್ರೀಮಂತಂ ಗಜಗಹ್ವರಾವನಿಭೃತಂ ಸೋಽಪಾತ್ಕುಹೂತ್ಪಾಪದಃ ॥"

ಅಂದರೆ ವಿಕ್ರಮಸಂವತ್ಸರದ ಮಾಘ ಕೃಷ್ಣ ಅಮವಾಸ್ಯೆ ದಿವಸ[1] ಗಜಗಹ್ವರ (ವಿಜಯನಗರ)ದ ಅರಸನಾದ ಕೃಷ್ಣದೇವರಾಯನನ್ನು ಕುಹಯೋಗವಿಪತ್ತಿನಿಂದ ಕಾಪಾಡಿದರು-ಎಂದು ತಿಳಿದು ಬರುತ್ತದೆ. ಈ ಕಾವ್ಯದ ಪ್ರಕಾರ ಕೃಷ್ಣದೇವರಾಯನ ನಕ್ಷತ್ರ ಶತಭಿಷಾ ಆಗಿದ್ದರೆ ಶ್ರೀವ್ಯಾಸರಾಜರು ತಾ॥ 18-2-1521 ರಂದು

1. ತಾ॥ 18-2-1521

ಕೃಷ್ಣನರಪತಿಯನ್ನು ಕುಹಯೋಗದ ಆಪತ್ತಿನಿಂದ ಸಂರಕ್ಷಿದರೆಂದು ತಿಳಿಯ ಬೇಕಾಗುತ್ತದೆ.

ಹೀಗೆ ಕುಹಯೋಗವು ಬಂದದ್ದು - ಪರಿಹಾರವಾದದ್ದು ಈ ವಿಚಾರದಲ್ಲಿ ಭಿನ್ನಾಭಿಪ್ರಾಯಗಳು ವ್ಯಕ್ತವಾಗುವುದರಿಂದ ಕೃಷ್ಣದೇವರಾಯನಿಗೆ ಕುಹಯೋಗ ಬಂದು ಪರಿಹಾರವಾದದ್ದು ಯಾವಾಗ ? 18-2-1521 ರಂದೇ ? ಅಥವಾ 4-2-1524ರಂದೇ ಎಂಬ ಜಿಜ್ಞಾಸೆಯುಂಟಾಗುವುದು ಸ್ವಾಭಾವಿಕ.

ಇನ್ನು 1915-16ನೇ ಮದ್ರಾಸ್ ಎಫಿಗ್ರಾಫಿಟ್ಸ್ ವರದಿಪ್ರಕಾರವಾಗಿ ಕೃಷ್ಣ ದೇವರಾಯನ ಜನ್ಮನಕ್ಷತ್ರ ಜ್ಯೇಷ್ಠಾ ಎಂದು ತಿಳಿದುಬರುತ್ತದೆ. ಜ್ಯೇಷ್ಠಾನಕ್ಷತ್ರ ವೆಂದಿಟ್ಟುಕೊಂಡರೆ, 1519 ರಿಂದ 1524 ರವರೆಗೆ ಆರುಬಾರಿ ಅಂದರೆ 22-11 1519, 10-11-1520, 29-11-1521, 18-11-1522, 5-11-1823, 25-11-1524- ಹೀಗೆ ಕುಹಯೋಗಗಳು ಬಂದಿರುವುದು ವ್ಯಕ್ತವಾಗುತ್ತದೆ. ಇದರಿಂದಲೂ ಕುಹಯೋಗಪರಿಹಾರವಾದ ವಿಚಾರವಾಗಿ ವಿಧವಿಧ ಅಭಿಪ್ರಾಯ ಗಳು ಕಂಡುಬರುವುದರಿಂದ ನಾವು ಒಂದು ನಿಶ್ಚಿತ ಅಭಿಪ್ರಾಯಕ್ಕೆ ಬರಲು ಕಷ್ಟ ವಾಗುವುದರಿಂದ ಇವೆಲ್ಲಕ್ಕೂ ಒಂದು ಗತಿಕಲ್ಪಿಸುವುದು ಅವಶ್ಯವೆನಿಸುವುದು. ಇದಕ್ಕೆ ಮೈಸುರು ಆಸ್ಥಾನವಿದ್ವಾಂಸರಾಗಿದ್ದ ಶ್ರೀ ಕಾನಕಾನಹಳ್ಳಿ ನರಸಿಂಹಶಾಸ್ತ್ರಿ ಗಳ ಅಭಿಪ್ರಾಯವು ಸಹಾಯಕವಾಗಿದೆ.

ಶ್ರೀನರಸಿಂಹಶಾಸ್ತ್ರಿಗಳು ಕುಹಯೋಗಕ್ಕೆ ಮತ್ತೊಂದು ರೀತಿ ಲಕ್ಷಣವನ್ನು ಹೇಳಿದ್ದಾರೆ. ಲಗ್ನ(ಜನ್ಮ)ದಲ್ಲಿ ದ್ವಾದಶ ಅಥವಾ ಅಷ್ಟಮ ಸ್ಥಾನದಲ್ಲಿ ಶನಿ, ಸೂರ್ಯ, ಅಂಗಾರಕ ಮತ್ತು ಗುರು ಗ್ರಹಗಳು ಒಂದೇ ಮನೆಗೆ ಬಂದು ಸೇರಿದಾಗ ಅದು ಕುಹಯೋಗವೆನಿಸಿ ದೇಶಾಧಿಪತಿಯಾದ ರಾಜನಿಗೆ ಪ್ರಾಣಭಯ, ದೇಶತ್ಯಾಗ, ಧನಕ್ಷಯ ಮುಂತಾದ ವಿಪತ್ತುಗಳುಂಟಾಗುವುದೆಂದು ಪ್ರಮಾಣ ಒಂದನ್ನು ಉದಾ ಹರಿಸಿದ್ದಾರೆ. ಅದು ಹೀಗೆ ಇದೆ—

"ದ್ವಾದಶಾಷ್ಟಮಜನ್ಮಸ್ಥಾಃ ಶನ್ಯಗಾಂಗಾರಕಾ ಗುರುಃ ।
ಕುರ್ವಂತಿ ಪ್ರಾಣಸಂದೇಹಂ ದೇಶತ್ಯಾಗಂ ಧನಕ್ಷಯಂ ॥"

ಈ ಮೇಲಿನ ಪ್ರಮಾಣದೊಡನೆ ಅಮರಸಿಂಹನ "ನಷ್ಟೇಂದು ಕಲಾ ಕುಹೂಃ" ಎಂಬ ಪ್ರಮಾಣವನ್ನಿಟ್ಟುಕೊಂಡು ವಿಚಾರಮಾಡಿದಾಗ, ಶ್ರೀವಿದ್ಯಾರತ್ನಾಕರ ತೀರ್ಥಶ್ರೀಪಾದಂಗಳವರು ಹೇಳುವಂತೆ ವಿಕ್ರಮ ಸಂ॥ ಮಾಘಕೃಷ್ಣ ಅಮಾವಾಸ್ಯಾ (8-2-1521)ದಿನದಂದು ಕುಹಯೋಗವಾಗುತ್ತದೆ.

ಇನ್ನು ಕೃಷ್ಣದೇವರಾಯನ ಪ್ರಸಿದ್ಧ ಜಾತಕದಂತೆ ಕುಂಭಲಗ್ನವಾಗಿರುವುದರಿಂದ ಸ್ವಭಾನು ಸಂವತ್ಸರದ ಮಾಘಕೃಷ್ಣ ಅಮಾವಾಸ್ಯಾ ಗುರುವಾರ ತಾ॥ 4-2-1524 ಅತ್ಯಂತ ಕ್ರೂರವಾದ ಸಂಪೂರ್ಣ ಕುಹಯೋಗ ಲಕ್ಷಣಯುಕ್ತವಾಗಿದೆ.

ಹೀಗೆ ಕೃಷ್ಣದೇವರಾಯನ ನಕ್ಷತ್ರಗಳು ಬೇರೆ ಬೇರೆ ಎಂಬ ವಾದಗಳಿಗನುಸಾರ ವಾಗಿ 1519ರಿಂದ 1524ರ ವರೆಗೆ ಅನೇಕಬಾರಿ ಕುಹಯೋಗ ಬಂದಿರುವುದು ಸ್ಪಷ್ಟವಾಗಿರುವುದರಿಂದ ಶ್ರೀವ್ಯಾಸರಾಜರು ಇವುಗಳಲ್ಲಿ ಒಂದು ಕುಹಯೋಗ

ಕಾಲದಲ್ಲಿ ಕೃಷ್ಣದೇವರಾಯನನ್ನು ಆಪತ್ತಿನಿಂದ ಪಾರುಮಾಡಿದರೆಂಬುದು ಸ್ಪಷ್ಟ ವಾಗುವುದು. ಇನ್ನೂ ವಿಚಾರಮಾಡಿದರೆ 1519ರಲ್ಲಿ ಕೃಷ್ಣದೇವರಾಯನ ಜಾತಕ ಪ್ರಕಾರ ಕುಹಯೋಗವು ಪ್ರಾರಂಭವಾಗಿ ಬೇರೆ ಬೇರೆ ರೀತಿಯ ಕುಹಯೋಗ ಗಳುಂಟಾಗಿ 1524ರಲ್ಲಿ ಸಂಪೂರ್ಣ ಕುಹೂಯೋಗವಾಗಿ ಅದು ಅತ್ಯಂತ ಮಾರಕ ವಾಗಿದ್ದರಿಂದ ಅಂದೇ ಶ್ರೀವ್ಯಾಸರಾಜರು ಕೃಷ್ಣನರಪತಿಯನ್ನು ಕಾಪಾಡಿದರೆಂದು ಹೇಳುವುದು ಸಮಂಜಸವೆನಿಸುವುದು. ಅದಾದನಂತರ ಕೃಷ್ಣದೇವರಾಯನು ತನ್ನ ಮಗ ತಿರುಮಲಮಹಾರಾಯನಿಗೆ ಪಟ್ಟಾಭಿಷೇಕಮಾಡಿರುವುದು; ಶ್ರೀವ್ಯಾಸರಾಯ ರಿಗೆ ವ್ಯಾಸಸಮುದ್ರ (ಕಂದಕೂರು) ದಾನಮಾಡಿರುವುದು; ಅದರ ನಿರ್ಮಾಣಕ್ಕೆ ಶ್ರೀವ್ಯಾಸರಾಜರು ವಿಜಯನಗರವನ್ನು ಬಿಟ್ಟು ವ್ಯಾಸಸಮುದ್ರದಲ್ಲಿ ವಾಸ ಮಾಡಿದ್ದು ಇವೆಲ್ಲವೂ ಪುಷ್ಟಿಕೊಡುತ್ತದೆ.

ಆದರೂ ಪೂಜ್ಯರಾದ ಶ್ರೀವಿದ್ಯಾರತ್ನಾಕರತೀರ್ಥ ಶ್ರೀಪಾದಂಗಳವರ ಕಾವ್ಯದ ಪ್ರಮಾಣವನ್ನು ಉದಾಸೀನಮಾಡುವಂತಿಲ್ಲವಾದ್ದರಿಂದ ರಾಯಚೂರು ಯುದ್ಧವು 1521ರ ಸುಮಾರಿಗೆ ಪ್ರಾರಂಭವಾಗಿ ಆಗ ಕೃಷ್ಣದೇವರಾಯನ ಜಾತಕಪ್ರಕಾರ ಗ್ರಹ ಗಳು ಕ್ರೂರವಾಗಿದ್ದು, ಆಕಾಶದಲ್ಲಿ ಧೂಮಕೇತುವೂ ಕಾಣಿಸಿಕೊಂಡು ಕುಹೂಯೋಗ ಪ್ರಾಪ್ತವಾಗಿ–ಅದು 1524ರಲ್ಲಿ ಸಂಪೂರ್ಣವಾಗಿತ್ತೆಂದು ಭಾವಿಸಬಹುದಾಗಿದೆ. 1521ರಲ್ಲಿ ಕುಹಯೋಗ ಪ್ರಾರಂಭವಾಗಿ ಕೃಷ್ಣದೇವರಾಯನಿಗೆ ರಾಯಚೂರು ಯುದ್ಧಕಾಲದಲ್ಲಿ ವಿಪತ್ತಿದ್ದುದರಿಂದ ಶ್ರೀವ್ಯಾಸರಾಜರು ಆ ಕಂಟಕವನ್ನು ತಮ್ಮ ತಪಶ್ಶಕ್ತಿಯಿಂದ ಪರಿಹರಿಸಿದ್ದರೆಂದೂ 1524ರಲ್ಲಿ ಬಂದಿದ್ದ ಸಂಪೂರ್ಣ ಕುಹಯೋಗ ಕಾಲದಲ್ಲಿ ಸಾಮ್ರಾಜ್ಯಸಿಂಹಾಸನದಲ್ಲಿ ಸ್ವತಃ ಕುಳಿತು ಕೃಷ್ಣದೇವರಾಯನನ್ನು ಶ್ರೀವ್ಯಾಸತೀರ್ಥರು ಸಂರಕ್ಷಿಸಿದರೆಂದು ಭಾವಿಸುವುದರಿಂದ ಎಲ್ಲಾ ಭಿನ್ನಾಭಿಪ್ರಾಯ ಗಳೂ ಪರಿಹಾರವಾಗುವುದು.

ಒಟ್ಟಿನಲ್ಲಿ 1521 ಅಥವಾ 1524ರಲ್ಲಿ ಕುಹಯೋಗವಿದ್ದುದು ಸತ್ಯವಾದ್ದ ರಿಂದ ಶ್ರೀವ್ಯಾಸರಾಜರು ಆ ಕುಹಯೋಗವನ್ನು ಪರಿಹರಿಸಿ ಕನ್ನಡಸಾಮ್ರಾಜ್ಯ ಮತ್ತು ಕೃಷ್ಣದೇವರಾಯನನ್ನು ಸಂರಕ್ಷಿಸಿ ಮಹೋಪಕಾರಮಾಡಿದರೆಂದು ತಿಳಿಯ ಬೇಕು. ಹೀಗೆ ಹೇಳುವುದರಿಂದ ಶ್ರೀವಿದ್ಯಾರತ್ನಾಕರತೀರ್ಥ ಶ್ರೀಪಾದಂಗಳವರ ವಾಕ್ಯವನ್ನೂ ಎತ್ತಿಹಿಡಿದಂತಾಗುವುದು.

ಈಗ ಕುಹಯೋಗ ಪರಿಹಾರವಿಚಾರವನ್ನು ಅರಿಯೋಣ.

.... .... .... .... ....

ಶ್ರೀಕೃಷ್ಣದೇವರಾಯ ಮಹಾಮಂತ್ರಿ ತಿಮ್ಮರಸನೊಡನೆ ಏಕಾಂತ ಮಂದಿರದಲ್ಲಿ ಆಪ್ತಾಲೋಚನೆಯಲ್ಲಿ ಮಗ್ನನಾಗಿದ್ದಾನೆ. ಅಂದು ಬೆಳಿಗ್ಗೆ ಆಸ್ಥಾನರಾಜಪುರೋ

ಿತರು, ಜ್ಯೋತಿಷಿಗಳಾದ ಲೋಲ್ಲ ಲಕ್ಷ್ಮೀಧರಭಟ್ಟರು, ಶ್ರೀರಂಗದ ವರದ ರಾಜೈಂಗಾರ್ಯರು ಮತ್ತು ಗೋವಿಂದನಾರಾಯಣಾಚಾರ್ಯರುಗಳು ಬಹುವಿಧವಾಗಿ ವಿಮರ್ಶಿಸಿ ಬರಲಿರುವ ಅಮಾವಾಸ್ಯಾದಿನ ಕೃಷ್ಣದೇವರಾಯನಿಗೆ ಕುಹಯೋಗ ಕಂಟಕವಿದ್ದು ಗ್ರಹಗಳು ಅತಿಕ್ರೂರವಾಗಿರುವುದರಿಂದ ಕೃಷ್ಣದೇವ ಸಾಮ್ರಾಟರು ಆ ವಿಪತ್ತಿನಿಂದ ಪಾರಾಗುವುದು ಬಹುದುಸ್ಸಾಧ್ಯವೆಂದು ತಿಳಿಸಿಹೋದ ವಿಚಾರವನ್ನು ತಿಮ್ಮರಸು ಸಾಮ್ರಾಟನಲ್ಲಿ ನಿವೇದಿಸಿದ್ದರಿಂದ ರಾಯನು ತುಂಬಾ ಚಿಂತಾಕ್ರಾಂತನಾಗಿದ್ದಾನೆ. ಮಹಾಮಂತ್ರಿಯೂ ವ್ಯಾಕುಲಯುಕ್ತನಾಗಿದ್ದಾನೆ—ಶತಪಥ ತಿರುಗುತ್ತಿದ್ದ ಕೃಷ್ಣದೇವರಾಯನು "ಈಗೇನು ಮಾಡುವುದು ಅಪ್ಪಾಜಿ ?" ಎಂದು ಚಿಂತಾತುರನಾಗಿ ಕೇಳಿದನು.

ತಿಮ್ಮರಸು "ಮಹಾಪ್ರಭು ನಾಲ್ಕಾರುದಿನಗಳಿಂದ ಈ ವಿಚಾರವಾಗಿ ಯೋಚಿಸಿದ್ದೇನೆ. ಈ ಪರಿಸ್ಥಿತಿಯಿಂದ ಪಾರಾಗಲು ನನಗೊಂದು ಉಪಾಯ ಹೊಳೆದಿದೆ" ಎನಲು, ಕೃಷ್ಣದೇವರಾಯನು "ಅದೇನು ಹೇಳಿ ಅಪ್ಪಾಜಿ" ಎಂದು ಅವಸರಿಸಿದನು. "ಮಹಾಸ್ವಾಮಿ, ಜಾತಕದ ವ್ಯಕ್ತಿ ರಾಜ ಅಥವಾ ಸಾಮ್ರಾಟರಾಗಿದ್ದರೆ ಅಂಥವರಿಗೆ ಕುಹಯೋಗವು ದುಷ್ಪರಿಣಾಮವನ್ನು ಬೀರಿಮಾರಕವಾಗಬಹುದು. ಆ ವ್ಯಕ್ತಿ ರಾಜನೇ ಆಗಿರದಿದ್ದರೆ ಅಂಥ ವ್ಯಕ್ತಿಗೆ ಪ್ರಾಣಾಪಾಯದಂಥ ಆಪತ್ತುಗಳುಂಟಾಗಲಾರದೇನೋ ಎನಿಸುತ್ತದೆ ! ಆದರೆ .."ಎಂದು ಅರ್ಧೋಕ್ತಿಯಲ್ಲಿಯೇ ತಿಮ್ಮರಸು ಮೌನವಹಿಸಲು ಸಾಮ್ರಾಟನು "ಆದರೆ....ಹೂಂ ಅರ್ಥವಾಯಿತು. ನಾನು ಸಾಮ್ರಾಟನಾಗಿದ್ದರೆ, ಜಾತಕಪ್ರಕಾರ ನನಗೆ ವಿಪತ್ತುಂಟಾಗುವುದು. ನಾನು ಸಾರ್ವಭೌಮ ಪದವಿಯನ್ನು ಮೊದಲೇ ತ್ಯಜಿಸಿ ಸಾಮಾನ್ಯ ಪ್ರಜೆಯಾದರೆ ಈ ಕಂಟಕದಿಂದ ಉಳಿಯಬಹುದೆಂದಲ್ಲವೇ ನಿಮ್ಮ ಅಭಿಪ್ರಾಯ" ಎಂದನು.

ತಿಮ್ಮರಸು ನಿಟ್ಟುಸಿರು ಬಿಟ್ಟು "ಅಹುದು ಪ್ರಭು" ಎಂದನು. ಆಗ ರಾಯನು "ಅಪ್ಪಾಜಿ, ನಾನು ಸಾಮಾನ್ಯಪ್ರಜೆಯಾಗಬೇಕಾದರೆ ಸಿಂಹಾಸನ ತ್ಯಾಗಮಾಡಬೇಕು ! ಆದರೆ ಆಗ ಸಿಂಹಾಸನದಲ್ಲಿ ಕುಳಿತಿರುವವರಿಗೆ ವಿಪತ್ತೊದಗುವುದಿಲ್ಲವೆಂಬ ಭರವಸೆಯೇನು ? ಪ್ರಾಣದ ಮೋಹಿಸಿ ಆಶೆಯಿಂದ ಸ್ವಾರ್ಥಿಯಾಗಿ ನನಗೆ ಬರಲಿರುವ ಅಪಾಯವನ್ನು ಬೇರೊಬ್ಬರಿಗೆ ಪ್ರಾಪ್ತವಾಗುವಂತೆ ಮಾಡಬೇಕೆ ಅಪ್ಪಾಜಿ. ಹೇಳಿ, ಹೇಳಿ, ನಾನು ಅಷ್ಟು ಹೀನನಾಗಬೇಕೆ ?" ಎಂದೆನಲು ತಿಮ್ಮರಸು "ಕ್ಷಮಿಸಬೇಕು, ಪ್ರಭು ! ನನ್ನ ಅಭಿಪ್ರಾಯ ಅದಲ್ಲ, ತಾತ್ಕಾಲಿಕವಾಗಿ ಸಾಮ್ರಾಜ್ಯವನ್ನು ಬೇರೊಬ್ಬರಿಗೆ ದಾನಕೊಡಬೇಕು, ಕುಹಯೋಗದ ಕಂಟಕಪರಿಹಾರವಾದಮೇಲೆ ಮತ್ತೆ ಪಡೆಯಬೇಕು. ಇದರಿಂದ ತಾವೂ ಪಾರಾಗಿ ಸಾಮ್ರಾಜ್ಯವೂ ತಮ್ಮದಾಗಿ ಉಳಿಯುವಂತಾಗುವುದು" ಎಂದನು.

ಶುಷ್ಕನಗೆಬೀರಿ ರಾಯನು "ದಾನ ಸ್ವೀಕರಿಸಿ ಮತ್ತೆ ಹಿಂದಿರುಗಿಸುವಂಥ ಉದಾರಿ-ತ್ಯಾಗಶೀಲರಾರಿದ್ದಾರೆ ? ಮೇಲಾಗಿ ಅವರಿಗೆ ಅಪಾಯವಾಗುವುದಿಲ್ಲ ವೆಂಬ ನಂಬಿಕೆಯೇನು?" ಎಂದನು.

ತಿಮ್ಮರಸು : ಸಾಮಾನ್ಯರಿಗೆ ಸಾಮ್ರಾಜ್ಯದಾನಮಾಡಿದರೆ ತಮ್ಮಮಾತ್ರ ಅಸ್ತಮಿಸುವುದು. ಅಂಥವರಿಗೆ ದಾನಮಾಡಿಯೂ ಪ್ರಯೋಜನವಿಲ್ಲ. ಈ ಕುಹೂ ಯೋಗವನ್ನು ಎದುರಿಸಲು ಸಮರ್ಥರಾಗಿ, ತ್ಯಾಗಶೀಲರೂ ಆಗಿ ತಮ್ಮನ್ನು ತಾವೇ ರಕ್ಷಿಸಿಕೊಳ್ಳಲು ಸಮರ್ಥರಾದವರಿಂದಮಾತ್ರ ಈ ಕಾರ್ಯ ಸಾಧ್ಯವಾದೀತು!

ಕೃಷ್ಣ ; ಅಂತಹ ಮಹನೀಯರಾರಿದ್ದಾರೆ, ಅಪ್ಪಾಜಿ ?

ತಿಮ್ಮ : ಇದ್ದಾರೆ ಮಹಾಸ್ವಾಮಿ, ಸಾಮ್ರಾಜ್ಯಹಿತೈಷಿಗಳೂ, ಭಗವದನು ಗ್ರಹಪಾತ್ರರೂ ಆದ ಮಹಾತಪಸ್ವಿಗಳೂ ತಮ್ಮ ಉದ್ಧಾರಕಗುರುಗಳೂ ಆದ ಪೂಜ್ಯ ಭಗವಾನ್ ವ್ಯಾಸತೀರ್ಥರಿಲ್ಲವೇ ? ಅವರೊಬ್ಬರಿಂದ ಮಾತ್ರ ಈ ಮಹತ್ಕಾರ್ಯ ಸಾಧ್ಯವೆಂದು ನನ್ನ ಭಾವನೆ !

ಕೃಷ್ಣ : ಏನೆಂದಿರಿ ಅಪ್ಪಾಜಿ ? ನನ್ನ ಪರಮಪೂಜ್ಯ ಗುರುದೇವರನ್ನು ನನ್ನ ಸ್ವಾರ್ಥಕ್ಕಾಗಿ ಈ ಮಹಾವಿಪತ್ತಿಗೆ ಗುರಿಪಡಿಸಬೇಕೆ ? ಛೇ ಛೇ, 'ಶಾಂತಂ ಪಾಪಂ' ಈ ವಿಚಾರವಾದರೂ ನಿಮ್ಮ ತಲೆಯಲ್ಲಿ ಅದು ಹೇಗೆ ಬಂದಿತು ? ಆ ಮಹ ನೀಯರು ಸರ್ವವಿಧದಿಂದ ಈ ವಿಪತ್ತಿನಿಂದ ನನ್ನನ್ನು ರಕ್ಷಿಸಲು ಸಮರ್ಥರು. ನಿಜ, ಆದರೆ ಅವರನ್ನು ಇಂಥ ಕಾರ್ಯಕ್ಕಾಗಿ ನಿಯೋಜಿಸಿ ಇಕ್ಕಟ್ಟಿನಲ್ಲಿ ಸಿಲುಕಿಸಲು ನನಗಿಷ್ಟವಿಲ್ಲ. ನನ್ನ ಹಣೆಯಲ್ಲಿ ಬರೆದಿದ್ದಂತಾಗಲಿಬಿಡಿ.

ತಿಮ್ಮ : ಪ್ರಭು ! ನಾನು ಬಹುವಿಧವಾಗಿ ಯೋಚಿಸಿಯೇ ಈ ಮಾತು ಹೇಳಿದ್ದೇನೆ. ಶ್ರೀವ್ಯಾಸಭಗವಾನರು ಭಗವಂತನನ್ನು ಒಲಿಸಿಕೊಂಡು ಕುಣಿಸಿದ ಮಹಾಮಹಿಮರು. ತಪಸ್ವಿಗಳು. ಅಂಥವರಿಗೆ ಈ ಕುಹೂಯೋಗದಿಂದ ಯಾವ ಅಪಾಯವೂ ಆಗಲಾರದು ಪ್ರಭು ....."

ಕೃಷ್ಣ : (ತಳಮಳಗೊಂಡು)....ಆವರೂ....

ತಿಮ್ಮ : ಯೋಚಿಸಬೇಡಿ ಮಹಾಸ್ವಾಮಿ, ಇದ್ದ ವಿಚಾರವನ್ನು ಅವರಲ್ಲಿ ಅರಿಕೆಮಾಡೋಣ. ಅವರು ಹೇಳಿದಂತೆ ಮಾಡೋಣ, ಈಗ ಆ ಮಹನೀಯರೇ ನಮಗೆ ದಿಕ್ಕು.

ತಿಮ್ಮರಸರ ಮಾತಿಗೆ ಏನೂ ಹೇಳಲೂ ತೋರದಿರಲು ಕೃಷ್ಣದೇವರಾಯನು "ಅಪ್ಪಾಜಿ ನನಗೇನೋ ಇದು ಯುಕ್ತವೆನಿಸುವುದಿಲ್ಲ. ನನ್ನ ಬಾಯಾರ ಈ ಮಾತನ್ನು ಗುರುವರರಿಗೆ ಹೇಳಲಾರೆ ಏನು ಹೇಳುವಿರೋ ನೀವೇ ವಿಜ್ಞಾಪಿಸಿರಿ" ಎಂದು ಹೇಳಿ ಅಮಾತ್ಯರೊಡನೆ ಗುರುಗಳ ದರ್ಶನ ಪಡೆಯಲು "ವಿಶ್ವಪಾವನ ಮಠ"ಕ್ಕೆ ತೆರಳಿದನು.

ಶ್ರೀವ್ಯಾಸತೀರ್ಥರು ಏಕಾಂತಮಂದಿರದಲ್ಲಿ ಗ್ರಂಥಾವಲೋಕನತತ್ಪರರಾಗಿರುವಾಗ ಮಹಾಮಂತ್ರಿಯೊಡನೆ ಬಂದ ಕೃಷ್ಣದೇವರಾಯನನ್ನು ಕಂಡು "ಸಾಮ್ರಾಟರಿಗೆ ಮಹಾಮಂತ್ರಿಗಳಿಗೆ ಸ್ವಾಗತ ಬನ್ನಿ. ಕಳೆದೆರಡುದಿನಗಳಿಂದಲೂ ನಿಮ್ಮ ಆಗಮನವನ್ನು ಪ್ರತೀಕ್ಷಿಸುತ್ತಿದ್ದೇವೆ. ನೀವು ಬಂದುದು ಸಂತೋಷ" ಎಂದರು.

ಗುರುಗಳ ಮಾತು ಕೇಳಿ ಅವರಿಗೆ ಅಚ್ಚರಿಯಾಯಿತು. ತಿಮ್ಮರಸು "ಮಹಾತ್ಮರಿಗೆ ತಿಳಿಯದ ವಿಷಯವೇನಿದೆ? ಸಾಮ್ರಾಜ್ಯ-ಸಾಮ್ರಾಟರ ಹಿತಾಕಾಂಕ್ಷೆಯಿಂದ ಗುರುದೇವರಲ್ಲಿ ಒಂದು ಮಹತ್ವಪೂರ್ಣ ವಿಚಾರದಲ್ಲಿ ಸಲಹೆ, ಮಾರ್ಗದರ್ಶನ ಪಡೆಯಲು ಬಂದಿದ್ದೇವೆ" ಎಂದು ವಿಜ್ಞಾಪಿಸಿದನು.

**ಶ್ರೀಗಳವರು :** (ನಗುತ್ತಾ) ಭಾವೀ ಕುಹೂಯೋಗ ವಿಚಾರ ತಾನೆ ? ನಾವೂ ಐದಾರು ದಿನಗಳಿಂದ ಅದನ್ನೇ ಚಿಂತಿಸುತ್ತಿದ್ದೇವೆ. ಶ್ರೀಮೂಲಗೋಪಾಲ ಕೃಷ್ಣ ಏನೋ ಒಂದು ರೀತಿ ಪ್ರೇರಣೆ ಮಾಡುತ್ತಿದ್ದಾನೆ !

**ಕೃಷ್ಣ :** ಈ ವಿಚಾರವಾಗಿಯೇ ತಮ್ಮ ಮಾರ್ಗದರ್ಶನಕ್ಕಾಗಿ ಬಂದಿದ್ದೇವೆ ಗುರುದೇವ. ತಿಮ್ಮರಸರು ಅದನ್ನು ವಿಜ್ಞಾಪಿಸುತ್ತಾರೆ.

ತಿಮ್ಮರಸು ಅಂದು ಆಸ್ಥಾನ ಜ್ಯೋತಿಷಿಗಳು ಸ್ಪಷ್ಟಪಡಿಸಿದ ಕೂಹೂಯೋಗ ಸಂಬಂಧದ ವಿಚಾರವನ್ನೆಲ್ಲಾ ಸಾದ್ಯಂತವಾಗಿ ವಿಜ್ಞಾಪಿಸಿ ಅನಂತರ "ಮಹಾಸ್ವಾಮಿ ರಾಯಚೂರು ಯುದ್ಧಕಾಲದಲ್ಲಿ ಸಾಮ್ರಾಟರ ಜಾತಕಪ್ರಕಾರ ಪ್ರಾರಂಭವಾದ ಕುಹೂ ಯೋಗವಿಪತ್ತು,ಧೂಮಕೇತುವಿನ ಕಂಟಕಗಳಿಂದ ಭಯಗೊಂಡಿದ್ದ ಮಹಾಪ್ರಭುಗಳನ್ನು ಜಪಪೂಜಾಪುರಸ್ಕಾರಗಳಿಂದಲೂ, ತಮ್ಮ. ತಪಃಪ್ರಭಾವದಿಂದಲೂ ಸಂರಕ್ಷಿಸೋಣವಾಯಿತು. ಮತ್ತು ಮುಂದೂ ಕ್ರೂರ ಆಪತ್ತು ಬಂದಾಗಲೂ ಕಾಪಾಡುವುದಾಗಿ ಅಭಯವಿತ್ತಿದ್ದಿರಿ. ಬರುವ ಅಮಾವಾಸ್ಯೆ ದಿವಸ ಪ್ರಭುಗಳ ಜಾತಕಪ್ರಕಾರ ಸಂಪೂರ್ಣ ಕುಹುಯೋಗವಿದ್ದು ಆ ವಿಪತ್ತಿನಿಂದ ಪಾರಾಗಲು ಸಾಧ್ಯವಿಲ್ಲವೆಂದು ಜ್ಯೋತಿಷಿಗಳು ಹೇಳುತ್ತಿದ್ದಾರೆ. ಈಗೇನು ಮಾಡುವುದೆಂದು ತಿಳಿಯದೇ ಸರ್ವವಿಧದಿಂದ ಸಾಮ್ರಾಜ್ಯ ಮತ್ತು ಪ್ರಭುಗಳನ್ನು ರಕ್ಷಿಸಿಕೊಳ್ಳಲು ತಮ್ಮ ಮಾರ್ಗದರ್ಶನಕ್ಕಾಗಿ ಬಂದಿದ್ದೇವೆ. ಈ ಒಂದು ಕಷ್ಟಪರಿಸ್ಥಿತಿಯಿಂದ ಪ್ರಭುಗಳನ್ನು ರಕ್ಷಿಸಲು ತಾವೊಬ್ಬರೇ ಸಮರ್ಥರು" ಎಂದು ವಿಜ್ಞಾಪಿಸಿದನು.

**ಶ್ರೀ :** ರಾಜನ್, ನಾಲ್ಕಾರುದಿನಗಳಿಂದ ನಾವೂ ಜ್ಯೋತಿಷಗ್ರಂಥಗಳನ್ನು ಪರಿಶೀಲಿಸಿ ಈ ಕುಹಯೋಗದಿಂದ ನಿನ್ನನ್ನು ಸಂರಕ್ಷಿಸುವ ಬಗೆಯನ್ನು ಆಲೋಚಿಸುತ್ತಿದ್ದೇವೆ. ಶ್ರೀಹರಿವಾಯುಗಳೂ ನಮಗೆ "ಸಾಮ್ರಾಟನನ್ನು ರಕ್ಷಿಸು" ಎಂದು ಪ್ರೇರಿಸಿದ್ದಾರೆ! ಈ ವಿಪತ್ತಿನಿಂದ ಪಾರಾಗಲು ಒಂದು ದಾರಿಯಿದೆ. ಅದನ್ನು

ಈಗಾಗಲೇ ತಿಮ್ಮರಸರು ನಿನಗೆ ತಿಳಿಸಿ ನಿನ್ನಲ್ಲಿಗೆ ಕರೆತಂದಿದ್ದಾರೆ ! ಆದರೆ ಅದನ್ನು ಹೇಳಲು ಸಂಕೋಚಪಡುತ್ತಿದ್ದಾರೆ ! ಅಲ್ಲವೇ ಮಹಾಮಂತ್ರಿಗಳೇ ?

ಗುರುಗಳ ವಚನವನ್ನಾಲಿಸಿ ಆಚ್ಚರಿಗೊಂಡು ಒಬ್ಬರ ಮುಖವನೊಬ್ಬರು ನೋಡಿ, ಶ್ರೀವ್ಯಾಸತೀರ್ಥರಿಗೆ ನಮಸ್ಕರಿಸುತ್ತಾ "ಅಹುದು ಗುರುವರ್ಯ, ಭೂತ ಭವಿಷ್ಯದ್ವರ್ತಮಾನಗಳನ್ನು ಕರತಲಾಮಲಕವಾಗಿ ಕಾಣುವ ಮಹಾತ್ಮರಿಗೆ ಆವುದು ತಾನೇ ತಿಳಿಯದು" ಎಂದರು.

"ಸ್ವಾಮಿ,ದೈವಸಂಕಲ್ಪ ಹೇಗಿದೆಯೋ ನಾವರಿಯೆವು. ಆದರೆ ತಾವೀಗ ಜ್ಞಾನ ದೃಷ್ಟಿಯಿಂದರಿತು ಅಪ್ಪಣೆಕೊಡಿಸಿದಂತೆ ಸಾಮ್ರಾಜ್ಯದಾನಮಾಡಿ ಪ್ರಭುಗಳು ಸಾಮಾನ್ಯ ಪ್ರಜೆಯಾದರೆ ಈ ಸಂಕಟದಿಂದ ಪಾರಾಗಬಹುದೇನೋ ಎಂದು ನಾನು ಯೋಚಿಸುತ್ತಿದ್ದೇನೆ" ಎಂದು ತಿಮ್ಮರಸರು ಎಲ್ಲ ವಿಚಾರವನ್ನೂ ವಿಜ್ಞಾಪಿಸಿದರು.

**ಕೃಷ್ಣ :** ಗುರುದೇವ! ಇದು ಅಪ್ಪಾಜಿಯವರ ಅಭಿಪ್ರಾಯ. ನನ್ನ ಸ್ವಾರ್ಥಕ್ಕಾಗಿ ಸನ್ನಿಧಾನದವರನ್ನು ವಿಪತ್ತಿಗೆ ಗುರಿಪಡಿಸಲು ನನಗೆ ಸುತಾರಾಂ ಇಷ್ಟವಿಲ್ಲ. ನನ್ನ ಹಣೆಯಲ್ಲಿ ಬರೆದಂತಾಗಲಿ. ಗುರುಪಾದರು ಈ ಅಲ್ಪನಿಗಾಗಿ ವಿಪತ್ತನ್ನು ಮೈಮೇಲೆ ತಂದುಕೊಳ್ಳುವುದು ಬೇಡ !

**ಶ್ರೀ :** (ಮಂದಹಾಸಬೀರಿ)ಸಾರ್ವಭೌಮ, ನಿನ್ನ ಗುರುಭಕ್ತಿಯನ್ನುಕಂಡು ಪ್ರೀತರಾಗಿದ್ದೇವೆ.ಕೇಳು ರಾಜ, ಪೂಜ್ಯ ಗುರುಗಳಾದ ಶ್ರೀಲಕ್ಷ್ಮೀನಾರಾಯಣ ಮುನಿಗಳು ಈಗೆ 48 ವರ್ಷಗಳ ಹಿಂದೆ ಈ ಕನ್ನಡಸಾಮ್ರಾಜ್ಯ ಮತ್ತು ಸಾಮ್ರಾಟರ ರಕ್ಷಣೆ, ಅಭ್ಯುದಯ. ಧರ್ಮಸಂಸ್ಥಾಪನೆಗಳಿಗಾಗಿ ನಮ್ಮನ್ನು ರಾಜಾಸ್ಥಾನಕ್ಕೆ ಆಶೀರ್ವದಿಸಿ ಕಳಿಸಿದರು. ಸಾಳುವ ನರಸಿಂಹಪ್ರಭುವು ನಮ್ಮನ್ನು ರಾಜಗುರುಗಳೆಂದು ಸ್ವೀಕರಿಸಿ ಸಾಮ್ರಾಜ್ಯದ ಹಿತಚಿಂತನೆಮಾಡುತ್ತಾ ಬರಬೇಕೆಂದು ಪ್ರಾರ್ಥಿಸಿದ. ಆಗ ನಾವು ಶ್ರೀಹರಿವಾಯುಗಳ ಪ್ರೇರಣೆ, ನಮ್ಮ ಗುರುಗಳ ಆದೇಶದಂತೆ ಈ ಮಹಾಸಾಮ್ರಾಜ್ಯವನ್ನು ಧರ್ಮಸಾಮ್ರಾಜ್ಯವನ್ನಾಗಿಸಿ,ಸರ್ವವಿಧದಿಂದ ಇದರ,ಕಲ್ಯಾಣ ಅಭ್ಯುದಯ ಮಾಡಲು ಪ್ರತಿಜ್ಞಾಬದ್ಧರಾಗಿ ರಾಜಗುರುಗಳಾಗಿರಲು ಒಪ್ಪಿದೆವು! ಅಂದಿನಿಂದ ಎಲ್ಲ ಸಾಮ್ರಾಟರ ಶ್ರೇಯಸ್ಸಿಗಾಗಿ,ನಾಡಿನ ಅಭ್ಯುದಯಕ್ಕಾಗಿ ನಮ್ಮ ಯೋಗ್ಯತಾನುಸಾರ ನಮ್ಮ ತಪಸ್ಸನ್ನು ಧಾರೆಯೆರೆದು ಹಿತಚಿಂತನೆಮಾಡುತ್ತಾ ಬಂದಿದ್ದೇವೆ. ನಾವು ಸನ್ಯಾಸಿಗಳು, ನಮ್ಮದೆಂಬುದು ಯಾವುದೂ ಇಲ್ಲ. ಎಲ್ಲವೂ ಭಗವಂತನದು ! ಪರಮಾತ್ಮನ ಸಂಕಲ್ಪ-ಇಚ್ಛೆಗನುಸಾರವಾಗಿ ಕರ್ತವ್ಯನಿರತರಾಗುವುದಷ್ಟೇ ನಮ್ಮ ಕೆಲಸ.ನಾವು ಸನ್ಯಾಸಿಗಳಾಗುವಾಗ"ಅಭಯಂ ಸರ್ವಭೂತೇಭ್ಯಃ" ಎಂದು ಪ್ರತಿಜ್ಞಾಬದ್ಧರಾಗುವುದು ಪದ್ಧತಿ.ಎಲ್ಲ ಭೂತಗಳಿಗೂ ಅಭಯವೀಯಬೇಕಾದ ನಾವು ಆಧ್ಯಾತ್ಮಿಕ, ಸಾಂಸ್ಕೃತಿಕ, ಧಾರ್ಮಿಕ ಉನ್ನತಿಗಾಗಿ ಶ್ರಮಿಸುತ್ತಾ ಕನ್ನಡ ಸಾಮ್ರಾಜ್ಯವನ್ನು ಧರ್ಮಸಾಮ್ರಾಜ್ಯವನ್ನಾಗಿಮಾಡಿ ಹರಿಗುರುಭಕ್ತನಾಗಿ ಭಾಗವತ

ಶಿರೋಮಣಿ ಎನಿಸಿರುವ ನಿನಗೆಬಂದಿರುವ ಈ ಕುಹಯೋಗದ ವಿಪತ್ತನ್ನು ಪರಿಹರಿಸಲು ಅಭಯನೀಡುವುದು ನಮ್ಮ ಪ್ರಮುಖ ಕರ್ತವ್ಯವೇ ಆಗಿದೆ ! ಭಗವಂತನು ನಮ್ಮನ್ನು ಪರೀಕ್ಷಿಸಲು ಈ 'ಅಗ್ನಿದಿವ್ಯ'ವನ್ನು ತಂದೊಡ್ಡಿದ್ದಾನೆಂದು ನಾವು ಭಾವಿಸುತ್ತೇವೆ. ಈ ಪರೀಕ್ಷೆಯಲ್ಲಿ ನಾವು ಉತ್ತೀರ್ಣರಾದರೆ ಮಾತ್ರ ನಾವು ಆ ಮಹನೀಯನ ಆಜ್ಞಾಧಾರಕ ಸೇವಕರೆನಿಸಲು ಅರ್ಹರಾಗುವೆವು. ನಮ್ಮ ಈವರೆಗಿನ ಜ್ಞಾನ-ಭಕ್ತಿ-ವೈರಾಗ್ಯ-ತಪಸ್ಸುಗಳು ಪೂರ್ಣವಾಗುವುದು ! ಇಲ್ಲದಿದ್ದರೆ..ಎಲ್ಲವೂ ವ್ಯರ್ಥ ! "ಹತೋ ವಾ ಪ್ರಾಪ್ಸ್ಯಸೇ ಸ್ವರ್ಗಂ ಜಿತ್ವಾ ವಾ ಭೋಕ್ಷ್ಯಸೇ ಮಹೀಂ" ಧರ್ಮಯುದ್ಧಮಾಡಿ ಮೃತನಾದರೆ ಸ್ವರ್ಗಪಡೆಯುವೆ, ಗೆದ್ದರೆ ಭೂಮಂಡಲವನ್ನಾಳುವೆ !" ಎಂದು ಶ್ರೀಕೃಷ್ಣಪರಮಾತ್ಮನು ಅರ್ಜುನನಿಗೆ ಉಪದೇಶಿಸಿದ್ದಾನೆ. ರಾಜರಿಗೆ ಯುದ್ಧವಿದ್ದಂತೆ ನಮಗೆ ಈ ಅಗ್ನಿದಿವ್ಯ ! ಇದರಲ್ಲಿ ಗೆದ್ದರೆ ಜಗತ್ತಿನಲ್ಲಿ ಕೀರ್ತಿ, ಭಗವಂತನ ಅನುಗ್ರಹ, ಕರ್ತವ್ಯಪರಿಪಾಲನೆಯ ಸಮಾಧಾನ ಲಭಿಸುವುದು. ಈ ಕರ್ತವ್ಯಪಾಲನೆಯಲ್ಲಿ ವಿಫಲರಾದರೆ ಬ್ರಹ್ಮಲೋಕಪ್ರಾಪ್ತಿ. ಆಗಲೂ ಧರ್ಮಸಾಮ್ರಾಜ್ಯ ರಕ್ಷಣೆಯಕ್ಷೇ ಅಸುನೀಗಿದ ಕೀರ್ತಿದೊರಕುವುದು ! ಶ್ರೀಹರಿಯು ನಿನ್ನನ್ನು ರಕ್ಷಿಸಲು ಪ್ರೇರಿಸಿರುವುದರಿಂದ ಅದು ಅವನ ಇಚ್ಛೆಯೇ ಆಗಿದೆ. ಅದಕ್ಕೆ ವಿರುದ್ಧವಾಗಿ ನಡೆಯಲು ನಾವೆಷ್ಟರವರು ? ಆದ್ದರಿಂದ ರಾಜನ್ ! ಇದಕ್ಕಾಗಿ ನೀನು ಚಿಂತಿಸಬೇಡ.

ಗುರುವರ್ಯರಿಗೆ ಸಾಮ್ರಾಜ್ಯ ಮತ್ತು ಚಕ್ರವರ್ತಿಯ ಮೇಲಿರುವ ಅಪಾರ ಕಾರುಣ್ಯ, ಅವರ ನಿಶ್ಚಲ ಮನಸ್ಸು, ಔದಾರ್ಯ, ಉದಾತ್ತಭಾವನೆ, ತ್ಯಾಗಗಳನ್ನು ಕಂಡು ಅವರ ಉಪದೇಶವನ್ನುಕೇಳಿ ಕೃಷ್ಣದೇವರಾಯ-ತಿಮ್ಮರಸರ ಮೈಪುಳಕಿಸಿತು. ಹೃದಯ ತುಂಬಿಬಂದಿತು. ಭಕ್ತ್ಯತಿಶಯದಿಂದ ಕಣ್ಣೀರುದುರಿತು. ಕೃತಾಂಜಲಿಪುಟರಾಗಿ ಮುನೀಂದ್ರರಿಗೆ ಸಾಷ್ಟಾಂಗವೆರಗಿ "ಉದ್ಧೃತರಾದೆವು ಮಹಾಸ್ವಾಮಿ. ತಮ್ಮಂಥ ತಪಸ್ವಿಗಳನ್ನು ಗುರುಗಳಾಗಿ ಪಡೆದ ನಾವೇ ಧನ್ಯರು ! ಇದು ನಿಜವಾಗಿ ಕನ್ನಡನಾಡಿನ-ಜನತೆಯ ಸೌಭಾಗ್ಯ" ಎಂದು ವಿಜ್ಞಾಪಿಸಿದರು.

ವ್ಯಾಸಮುನಿಗಳು ಪರಿಹಾಸಬೀರಿ "ತಿಮ್ಮರಸರೇ, ಈಗಲಾದರೂ ಸಂಕೋಚವಿಲ್ಲದೆ ನಿಮ್ಮ ಅಭಿಪ್ರಾಯವನ್ನು ತಿಳಿಸಿರಿ" ಎಂದರು.

**ತಿಮ್ಮ** :-ಗುರುವರ್ಯ, ಪ್ರಭುಗಳ ವಿಪತ್ತೂ ಪರಿಹಾರವಾಗಬೇಕು. ಸಾಮ್ರಾಜ್ಯವೂ ಅವರಿಗುಳಿಯಬೇಕು. ಈ ದೃಷ್ಟಿಯಿಂದ ಈ ಮಹಾಸಾಮ್ರಾಜ್ಯವನ್ನು ತಮಗೆ ದಾನಮಾಡಬೇಕೆಂದು ನಿರ್ಧರಿಸಿದ್ದೇವೆ. ಇದಕ್ಕೆ ಒಪ್ಪಿ ಅನುಗ್ರಹಿಸಬೇಕು.

**ಶ್ರೀ** :-ಶ್ರೀಹರಿಚಿತ್ತ. ಆಗಲಿ, ಆದರೆ ಎರಡು ಕರಾರುಗಳಿಗೆ ನೀವು ಒಪ್ಪುವುದಾದರೆ ದಾನ ಸ್ವೀಕರಿಸಲು ನಾವು ಸಿದ್ಧರಾಗಿದ್ದೇವೆ.

**ಕೃಷ** :-ಅಪ್ಪಣೆಯಾಗಲಿ, ತಮ್ಮೆಲ್ಲ ಷರತ್ತಿಗೂ ನಮ್ಮ ಸಮ್ಮತಿಯಿದೆ.

**ಶ್ರೀ :** ಇಂದು ಮಾಘ ಕೃಷ್ಣ ಪಾಡ್ಯ. ಇಂದಿನಿಂದ ಹದಿನಾಲ್ಕನೇ ದಿನ ಕುಹೂಯೋಗವಿದೆ. ಅದಕ್ಕೆ ಐದಾರು ದಿನ ಮೊದಲಿನಿಂದ ಎಂಟು ದಿನ ಕಾಲ ಎಲ್ಲ ದೇವಾಲಯಾದಿಗಳಲ್ಲಿ ವಿಶೇಷ ಅಭಿಷೇಕ, ಪೂಜಾರಾಧನೆ, ಅನ್ನದಾನಗಳು ನಮ್ಮ ಮತ್ತು ಪ್ರಭುಗಳ ಹೆಸರಿನಲ್ಲಿ ಜರುಗಬೇಕು. ಮತ್ತು ಚತುರ್ದಶೀ ದಿವಸ ನಮಗೆ ಸಾಮ್ರಾಜ್ಯ ದಾನಮಾಡತಕ್ಕದ್ದು. ಅಮಾವಾಸ್ಯಾದಿನ ಕುಹಯೋಗಕಾಲದಲ್ಲಿ ನಾವು ಸಿಂಹಾಸನಾರೋಹಣಮಾಡುತ್ತೇವೆ.ಆಕಾಲದಲ್ಲಿ ಕೃಷ್ಣದೇವರಾಯರಿಗೆ ಶ್ರೇಯಸ್ಸು-ಪುಣ್ಯಪ್ರಾಪ್ತಿಗಾಗಿ ದೇವಾಲಯ-ಪಂಡಿತರು-ಶ್ರೋತ್ರಿಯ ಬ್ರಾಹ್ಮಣರುಗಳಿಗೆ-ಅಗ್ರಹಾರ, ಗ್ರಾಮ,ಭೂಮಿ,ಗೃಹ, ಧನಕನಕವಸ್ತ್ರಾಭರಣಗಳನ್ನು ನಮ್ಮಿಂದ ದಾನ ಕೊಡಿಸಬೇಕು. ಇದು ಸಾಮ್ರಾಟರ ಶ್ರೇಯಸ್ಸಿಗಾಗಿ ಮಾಡಬೇಕಾದ ಮುಖ್ಯಕಾರ್ಯ. ದಾನಗ್ರಾಹಿಗಳ ಯಾದಿಯನ್ನು ವಿವರದೊಡನೆ ನೀಡುತ್ತೇವೆ. ಅದರಂತೆ ತಾಮ್ರ ಶಾಸನ, ದಾನಪತ್ರಗಳನ್ನು ಸಿದ್ಧಪಡಿಸಬೇಕು—ಇದು ನಮ್ಮ ಮೊದಲನೆಯ ಕರಾರು

**ಕೃಷ್ಣ :** ನನ್ನ ಹಿತಕ್ಕಾಗಿ ಮಾಡಬೇಕಾದ ಧರ್ಮವನ್ನು ನನಗಾಗಿ ತಾವು ಮಾಡಬಯಸಿರುವುದು ತುಂಬಾ ಸಂತೋಷ. ನಮ್ಮ ಸಮ್ಮತಿ ಇದೆ.

**ತಿಮ್ಮ :** ಶ್ರೀಯವರ ಎರಡನೆಯ ಶರತ್ತೇನು ? ಅಪ್ಪಣೆಯಾಗಲಿ.

ಶ್ರೀಯವರು (ನಸುನಕ್ಕು) ಶ್ರೀಹರಿಯ ಕರುಣೆಯಿಂದ ಕುಹೂಯೋಗದ ವಿಪತ್ತಿನಿಂದ ನಾವು ಪಾರಾಗಿ, ಕೃಷ್ಣದೇವರಾಯರೂ ಸಂರಕ್ಷಿತರಾದರೆ, ನಮ್ಮ ಎರಡನೆಯ ಕರಾರನ್ನು ಆ ಮರುದಿನ ತಿಳಿಸುತ್ತೇವೆ. ಕೃಷ್ಣದೇವರಾಯರು ಮತ್ತು ನೀವು ಆ ಕರಾರಿನಂತೆ ನಡೆಯುವುದಾಗಿ ಈಗಲೇ ಪ್ರಮಾಣಪೂರ್ವಕವಾಗಿ ಭರವಸೆ ನೀಡಬೇಕು.

ಸಾರ್ವಭೌಮ—ಮಹಾಮಂತ್ರಿಗಳು ಹರ್ಷಪುಲಕಿತಗಾತ್ರರಾಗಿ ಗುರುಗಳ ಎರಡನೆಯ ಕರಾರೇನೆಂದು ತಿಳಿಯದಿದ್ದರೂ ಸಂತೋಷದಿಂದಲೇ "ಗುರುವರ್ಯರ ಎರಡನೆಯಕರಾರು ಏನೇ ಆಗಿರಲಿ ಅದನ್ನು ನೆರವೇರಿಸುತ್ತೇವೆ."ಎಂದು ಪ್ರಮಾಣ ಪೂರ್ವಕವಾಗಿ ವಚನವಿತ್ತರು.

ಅನಂತರ ಮುಂದೆ ಮಾಡಬೇಕಾದ ವ್ಯವಸ್ಥೆಗಳ, ಕಾರ್ಯಕ್ರಮಗಳ ವಿಚಾರ ವಾಗಿ ಸಮಾಲೋಚನೆಮಾಡಿ ಸಾಮ್ರಾಟರು, ತಿಮ್ಮರಸರು ನಿಶ್ಚಿಂತರಾಗಿ ಆನಂದ ದಿಂದ ಗುರುಗಳ ಅಪ್ಪಣೆಪಡೆದು ಅರಮನೆಗೆ ತೆರಳಿದರು.

o o o o o

ಮಾಘ ಕೃಷ್ಣ ಚತುರ್ದಶೀ. ರಾಜಧಾನಿಯಲ್ಲಿ ವಿಶೇಷಕೋಲಾಹಲ. ಸಾರ್ವ ಭೌಮನಿಗೆ ಬರಲಿದ್ದ ಕುಹಯೋಗವಿಪತ್ತು, ಪೂಜ್ಯವ್ಯಾಸರಾಜರಿಗೆ ಸಾಮ್ರಾಜ್ಯ ದಾನ ಮಾಡುವ ವಿಚಾರ, ಕುಹಯೋಗಕಾಲದಲ್ಲಿ ಗುರುಗಳು ಸಿಂಹಾಸನವೇರಿ ಕುಹ ಯೋಗವನ್ನು ಎದುರಿಸಿ ಕೃಷ್ಣದೇವರಾಯನನ್ನು ಕಾಪಾಡಲು ಸಿದ್ಧರಾಗಿರುವ

ವಿಚಾರಗಳು ಕರ್ಣಾಕರ್ಣಿಕೆಯಾಗಿ ಎಲ್ಲೆಡೆ ಹರಡಿ ಸಮಸ್ತ ಪ್ರಜರೂ ತಮತಮಗೆ ತೋರಿದಂತೆ ಮಾತನಾಡುತ್ತಿದ್ದಾರೆ. ಎಲ್ಲೆಲ್ಲಿಯೂ ಗುಜುಗುಜು ಏನೋ ಭಯ, ಸಂಭ್ರಮ, ದುಃಖ, ಸಂತೋಷ–ಹೀಗೆ ವಿವಿಧ ಭಾವನೆ, ಅವಸ್ಥೆಗಳಲ್ಲಿ ಮುಳಗಿದ್ದಾರೆ ಪ್ರಜಾಜನರು.

ಅರಮನೆಯಲ್ಲಿ ವಿಶೇಷ ಸಂಭ್ರಮ. ತಿಮ್ಮರಸರು ರಾಜಗೌರವದಿಂದ ಶ್ರೀವ್ಯಾಸತೀರ್ಥರನ್ನು ಕರತಂದಿದ್ದಾರೆ. ಮಂಗಳವಾದ್ಯ–ವೇದಘೋಷಗಳಾಗುತ್ತಿವೆ. ರಾಜದರ್ಬಾರಿನಲ್ಲಿ ಜನರು ಕಿಕ್ಕಿರಿದು ತುಂಬಿದ್ದಾರೆ. ಕೃಷ್ಣದೇವರಾಯ ಸಾಧಾರಣ ಪ್ರಜೆಯಂತೆ ವೇಷಭೂಷಣಗಳಿಂದಲಂಕೃತನಾಗಿ ಗುರುವರರನ್ನು ಸ್ವಾಗತಿಸಿ ಅವರಿಗಾಗಿಯೇ ಸಿದ್ಧಪಡಿಸಿದ ಸುವರ್ಣಭದ್ರಾಸನದಲ್ಲಿ ಕೂಡಿಸಿದನು. ಅನಂತರ ಪತ್ನೀಪುತ್ರರು–ಅಮಾತ್ಯಸೇನಾನಿಗಳೊಡನೆ ಕೂಡಿಕೊಂಡು ಸಾಮ್ರಾಜ್ಯದಾನ ಮಾಡಲು ಸಿದ್ಧನಾದನು.

ರಾಜಪುರೋಹಿತರು ಮಂತ್ರವನ್ನು ಹೇಳುತ್ತಿರಲು ಸಂಕಲ್ಪಪೂರ್ವಕವಾಗಿ ಕೃಷ್ಣದೇವರಾಯರು ಮಂತ್ರೋದಕ ಧಾರಾಪುರಸ್ಸರವಾಗಿ ಕನ್ನಡಸಾಮ್ರಾಜ್ಯವನ್ನು ಶ್ರೀವ್ಯಾಸತೀರ್ಥರಿಗೆ ಆನಂದದಿಂದ ದಾನಮಾಡಿದರು. ರಾಜರ ಉಡುಗೆ, ಕಿರೀಟ–ಕರ್ಣಕುಂಡಲ-ಕಂಕಣ-ಹಾರ್ಧಾದಿ ಆಭರಣಗಳು, ಪಟ್ಟದಕತ್ತಿ, ಫಲಪುಷ್ಪಗಳನ್ನಿಡಲಾದ ಅನೇಕ ಸುವರ್ಣ ತಾಂಬಾಣಗಳನ್ನು ವ್ಯಾಸತೀರ್ಥರಿಗೆ ಅರ್ಪಿಸುತ್ತಿರಲು ಅವರದನ್ನು ಸ್ಪರ್ಶಿಸಿ ಮಹಾಮಂತ್ರಿಗಳಿಗೆ ನೀಡುತ್ತಿದ್ದಾರೆ. ಕೊನೆಗೆ ಕೃಷ್ಣದೇವರಾಯ ರತ್ನಖಚಿತ ರಾಜಮುದ್ರಿಕೆಯನ್ನು ಗುರುಗಳ ಬೆರಳಿಗೆ ತೊಡಿಸಿ ಸಾಷ್ಟಾಂಗ ನಮಸ್ಕಾರಮಾಡಿ "ಗುರುದೇವ! ಇಂದಿನಿಂದ ಈ ಸಾಮ್ರಾಜ್ಯ ತಮ್ಮದು. ನೂತನ ಸಾಮ್ರಾಜ್ಯಾಧಿಪತಿಗಳಾದ ತಾವು ನಿಮ್ಮ ಸೇವಕರೂ ಪ್ರಜೆಗಳೂ ಆದ ನಮ್ಮನ್ನು ರಕ್ಷಿಸಿಕೊಂಡುಬರಬೇಕು" ಎಂದು ಆನಂದಬಾಷ್ಪಸಿಕ್ತನಯನನಾಗಿ ವಿಜ್ಞಾಪಿಸಿದನು.

ಶ್ರೀವ್ಯಾಸಯತಿಯುಗಳು ನಗುತ್ತಾ "ಕೃಷ್ಣ ! ಎಲ್ಲರನ್ನೂ ಸಲಹುವವನು ಶ್ರೀ ಮೂಲಗೋಪಾಲಕೃಷ್ಣ ! ಯೋಚಿಸದಿರು, ಆ ಪರಮಾತ್ಮನು ಎಲ್ಲರಿಗೂ ಮಂಗಳವನ್ನು ಕರುಣಿಸುವನು" ಎಂದರು.

ಆಗ ಕೃಷ್ಣದೇವರಾಯ, ಅಚ್ಯುತರಾಯ, ಮಹಾಮಂತ್ರಿ, ಅಳಿಯ ರಾಮರಾಜ, ಸೈನ್ಯಾಧಿಪತಿಗಳು ಇನ್ನಿತರ ಸಚಿವ ಸಾಮಂತ ಪೌರಜಾನಪದರು ಒಬ್ಬೊಬ್ಬರಾಗಿ ಶ್ರೀಯವರ ಮುಂದೆ ಬಂದು ರಾಜಗೌರವವನ್ನು ಸಲ್ಲಿಸಿ ಶಿರಬಾಗಿದರು.

ಮಹಾಮಂತ್ರಿಗಳು "ಇಂದು ಕೃಷ್ಣದೇವರಾಯರು ಸರ್ವರ ಸಮಕ್ಷ ಶ್ರೀವ್ಯಾಸತೀರ್ಥರಿಗೆ ಸಾಮ್ರಾಜ್ಯವನ್ನು ದಾನಮಾಡಿದ್ದಾರೆ. ನಾಳೆ ಪೂಜ್ಯ ಗುರುವರರು ಮಧ್ಯಾಹ್ನ ನಾಲ್ಕು ಘಂಟೆಗೆ ಕರ್ನಾಟಕ ರಾಜ್ಯ ರತ್ನಸಿಂಹಾಸನವನ್ನೇರಿ ಕುಹೂಯೋಗ ಮುಗಿಯುವವರೆಗೆ ಮೂರೂ ಮುಕ್ಕಾಲು ಘಳಿಗೆಯವರೆಗೆ ದರ್ಬಾರು

ನಡೆಸುತ್ತಾರೆ, ಅದೇ ಕಾಲದಲ್ಲಿ ಅನೇಕ ದಾನಗಳನ್ನೂ ನೀಡುತ್ತಾರೆ. ಇದೊಂದು ಅಭೂತಪೂರ್ವ ಸಂದರ್ಭ, ಸರ್ವರೂ ಶುದ್ಧ ಮನಸ್ಸಿನಿಂದ ಈ ಎಲ್ಲ ಕಾರ್ಯ ಕ್ರಮಗಳಲ್ಲಿ ಭಾಗವಹಿಸಿ, ಸಾಮ್ರಾಜ್ಯ ರಕ್ಷಣೆಗಾಗಿ, ಸಿಂಹಾಸನವೇರುವ ಗುರು ಪಾದರಿಗೆ ಗೌರವ ಸಲ್ಲಿಸಿ ಸುಕೃತ ಭಾಗಿಗಳಾಗಬೇಕು" ಎಂದು ಘೋಷಿಸಿದರು. ಆನಂತರ ಸಾಮ್ರಾಜ್ಯದಾನ ಸಮಾರಂಭ ಕಾರ್ಯಕ್ರಮವು ಮುಕ್ತಾಯವಾಯಿತು.

o o o o o

ಶ್ರೀಶಾಲಿವಾಹನ ಶಕೆ ೧೪೪೬ನೆಯ ಸ್ವಭಾನು ಸಂವತ್ಸರದ ಮಾಘ ಕೃಷ್ಣ ಅಮಾವಾಸ್ಯಾ ಗುರುವಾರ (ತಾ|| 4-2-1524).[1] ಶ್ರೀವ್ಯಾಸತೀರ್ಥರು ಭಕ್ತಿಯಿಂದ ದೇವರಪೂಜೆಮಾಡಿ ದೇವರನ್ನು ಭುಜಂಗಿಸಲು ಸಿದ್ಧರಾಗಿ ಮೂಲಗೋಪಾಲಕೃಷ್ಣ ನಲ್ಲಿ ಆವಾಹನೆ ಮಾಡಿದ್ದ ಬಿಂಬಮೂರ್ತಿಯನ್ನು ತಮ್ಮ ಹೃತ್ಕಮಲದಲ್ಲಿ ಮತ್ತೆ ಪ್ರತಿಷ್ಠಾಪಿಸಿ ಧ್ಯಾನಿಸಹತ್ತಿದರು. ಗುರುವರರಿಗೆ ಆಗೊಂದು ವಿಚಿತ್ರ ಅನುಭವ ವಾಯಿತು ! ದೇಹದಲ್ಲಿ ಅವುದೋ ವಿಚಿತ್ರಶಕ್ತಿ ಪ್ರವೇಶಿಸಿ ಮನಸ್ಸು ಪರಮಾನಂದ ಭರಿತವಾದಂತಾಯಿತು. ಅದೇನೆಂದು ಧ್ಯಾನಾಸಕ್ತರಾಗಿಯೇ ನಿರೀಕ್ಷಿಸಲು ಶ್ರೀ ಮೂಲಗೋಪಾಲಕೃಷ್ಣನ ಪ್ರತಿಮೆಯಿಂದ ದಿವ್ಯತೇಜಸ್ಸೊಂದು ಹೊರಟು ತಮ್ಮ ಹೃದಯವನ್ನು ಪ್ರವೇಶಿಸಿ ಬಿಂಬಮೂರ್ತಿಯನ್ನು ಸೇರಿದಂತಾಯಿತು. ಆಗ ವಿಚಿತ್ರ ಕಾಂತಿಯಿಂದ ಮಂದಹಾಸಬೀರುತ್ತಾ ಬಾಲಗೋಪಾಲ ಅಭಯ ಪ್ರಧಾನಮಾಡಿ ಅದೃಶ್ಯನಾದಂತೆ ಭಾಸವಾಯಿತು ! ಶ್ರೀಮೂಲಗೋಪಾಲಕೃಷ್ಣನು ತಮ್ಮನ್ನೂ ಸಾಮ್ರಾಜ್ಯವನ್ನೂ, ಕೃಷ್ಣದೇವರಾಯನನ್ನೂ ಕುಹಯೋಗ ವಿಪತ್ತಿನಿಂದ ರಕ್ಷಿಸಲು ಕಂಕಣಬದ್ಧನಾಗಿ ತಮ್ಮ ಹೃದಯ ಕಮಲದಲ್ಲಿ ನೆಲೆಸಿದನೆಂದು ಅವರಿಗೆ ಅರಿವಾಯಿತು. ಆನಂದ ತುಂದಿಲರಾದ ಗುರುಗಳು ಗದ್ಗದಕಂಠದಿಂದ "ಶ್ರೀಹರಿ, ಮುರಳೀಧರ, ಜಗಜ್ಜನ್ಮಾದಿಕಾರಣ ! ನಿನಗೆ ಈ ಪಾಮರ ಭಕ್ತನಲ್ಲಿ ಅದೆಷ್ಟು ವಾತ್ಸಲ್ಯ ! ಧನ್ಯನಾದೆ ದೇವ ! ಎಂದು ಉದ್ಗಾರತೆಗೆದರು.

ಅಲ್ಲಿಯೆ ಕುಳಿತು ಧ್ಯಾನಾಸಕ್ತರಾಗಿದ್ದ ಶ್ರೀಪುರಂದರದಾಸರು ಆನಂದ ಪುಳಕಿತರಾಗಿ ನಸುನಕ್ಕರು. ಇದನ್ನು ಕಂಡು ಸಮೀಪದಲ್ಲಿದ್ದ ಪಂಡಿತರು "ದಾಸಾರ್ಯರೇ ಗುರುಗಳು ಅದೇಕೆ ಹಾಗೆ ಉದ್ಗಾರತೆಗೆದರು ? ನೀವೇಕೆ ನಗುತ್ತಿರುವಿರಿ ?" ಎಂದು ಪ್ರಶ್ನಿಸಲು ಪುರಂದರದಾಸರಾಯರು ಮಂದಹಾಸಬೀರಿ "ಇಂದು ಕುಹಯೋಗವಿದೆ ಯಲ್ಲವೇ? ಗುರುಗಳು ಆವಿಪತ್ತಿನಿಂದ ರಕ್ಷಿಸಬೇಕೆಂದು ಪೂಜಾಕಾಲದಲ್ಲಿ ಭಗವಂತನಲ್ಲಿ

---

1. ಶ್ರೀವಿದ್ಯಾರತ್ನಾಕರತೀರ್ಥರ ಪ್ರಮಾಣದಂತಾದರೆ ಶಾಲಿವಾಹನಶಕೆ ೧೪೪೩ನೇ ವಿಕ್ರಮ ಸಂ|| ಮಾಘಕೃಷ್ಣಅಮಾವಾಸ್ಯಾ(ತಾ.4-2-1521)ಅಥವಾ ಪುಷ್ಯಕೃಷ್ಣ ಅಮಾವಾಸ್ಯಾ30-1-1521

ವಿಶೇಷ ಪ್ರಾರ್ಥನೆ ಸಲ್ಲಿಸಿದರು. ದೇವರನ್ನು ಭುಜಂಗಿಸುವಾಗ ಶ್ರೀ ಮೂಲ ಗೋಪಾಲಕೃಷ್ಣ ಸಾಕಾರತಾಳಿ ಗುರುಗಳ ಹೃದಯವನ್ನು ಪ್ರವೇಶಿಸಿ ಬಿಂಬಮೂರ್ತಿಯಲ್ಲಿ ನಿಂತು ಅಭಯಪ್ರದಾನಮಾಡಿ ಅದೃಶ್ಯನಾದ ! ಅವರಿಂದ ಭಕ್ತಿಪರವಶರಾಗಿ ಗುರುದೇವರು ಹಾಗೆ ಉದ್ಗರಿಸಿದರು. ಆ ಮಂಗಳಕರದೃಶ್ಯವನ್ನು ಈ ಪಾಮರ ದಾಸನೂ ಕಂಡನು. ಗುರುಗಳನ್ನು ರಕ್ಷಿಸಲು ಆ ದೇವನು ಓಡಿಬಂದು ಹೃದಯಸೇರಿ ತನ್ನ ಭಕ್ತರಲ್ಲಿರುವ ವಾತ್ಸಲ್ಯವನ್ನು ಪ್ರಕಟಿಸಿದ್ದನ್ನು ಕಂಡು ನನಗೆ ನಗು ಬಂದಿತು ಅಷ್ಟೇ!" ಎಂದು ಹೇಳಲು ಸರ್ವರೂ ಅಚ್ಚರಿಗೊಂಡರು.

ಶ್ರೀಗಳವರು ತೀರ್ಥಪ್ರಸಾದವನ್ನು ಕರುಣಿಸಿ ಗಂಧಾಕ್ಷತೆಗಳಿಂದ ಅಲಂಕೃತರಾಗಿ ಎಲ್ಲರಿಗೂ ಭೋಜನಮಾಡಿಸಿ ತಾವು ಮಾತ್ರ ಉಪವಾಸದಿಂದ ಶ್ರೀಹರಿಧ್ಯಾನದಲ್ಲಿ ಆಸಕ್ತರಾದರು.

.... .... .. .... ....

ಮಧ್ಯಾಹ್ನ ನಾಲ್ಕು ಘಂಟೆಯ ಸಮಯ. ಶ್ರೀವ್ಯಾಸರಾಜಗುರುಗಳು ಸಿಂಹಾಸನಾರೋಹಣ ಮಾಡಬೇಕಾದ ಸಮಾರಂಭ ಸಮೀಪವಾಗುತ್ತಿದೆ. ಸಮಸ್ತ ವ್ಯವಸ್ಥೆಗಳೂ ಪೂರ್ಣವಾಗಿದೆ. ರಾಜಸಭೆಯಲ್ಲಿ ರಾಜಬಂಧುಗಳು, ಸಚಿವ-ಸಾಮಂತ-ಸೇನಾನಿ-ದಂಡನಾಯಕ- ಪೌರಜಾನಪದರು- ಪಂಡಿತರು–ಗಾಯಕರು– ಕಲೆಗಾರರು ಹರಿದಾಸರು, ಅಂದು ದಾನಸ್ವೀಕರಿಸಲಿರುವ ದೇವಾಲಯಗಳ ಅಧಿಕಾರಿಗಳು, ವಿದ್ವಾಂಸರು-ಶ್ರೋತ್ರಿಯ ಬ್ರಾಹ್ಮಣರು ತಮತಮಗೆ ವಿಹಿತ ಸ್ಥಾನಗಳಲ್ಲಿ ಮಂಡಿಸಿದ್ದಾರೆ. ಸಮವಸ್ತ್ರಧರಿಸಿದ ಸೈನಿಕರು, ತಾಳಸ್ತುತಿಪಾಠಕರು-ವಂದಿ-ಮಾಗಧರು ಸಿದ್ಧರಾಗಿ ನಿಂತಿದ್ದಾರೆ. ಸಭೆ ಕಿಕ್ಕಿರಿದು ತುಂಬಿದೆ.

ರಾಜಪುರೋಹಿತಾದಿಗಳ ಸೂಚನೆಯಂತೆ ಸಮಸ್ತಬಾಂಧವರು, ಮಹಾಮಂತ್ರಿಗಳು ಪತ್ನಿಪುತ್ರಾದಿಗಳೊಡನೆ ಕೃಷ್ಣದೇವರಾಯನು ಧ್ಯಾನಾಸಕ್ತರಾಗಿರುವ ವ್ಯಾಸರಾಜರ ಸನ್ನಿಧಿಗೆಬಂದು ಸಿಂಹಾಸನಾರೋಹಣ ಮುಹೂರ್ತವು ಸಮೀಪಿಸಿತೆಂದು ವಿಜ್ಞಾಪಿಸಿದನು. ಶ್ರೀಗಳವರು ಮೇಲೆದ್ದು ದೇವರಿಗೆ ನಮಸ್ಕಾರಮಾಡಿ ದೇವರಪೆಟ್ಟಿಗೆಯನ್ನು ಮುಂದೆಮಾಡಿಕೊಂಡು ದಂಡಕಮಂಡಲುಧಾರಿಗಳಾಗಿ ರಾಜಸಭೆಗೆ ಹೊರಡಲು ಸಿದ್ಧರಾದರು. ಕೃಷ್ಣದೇವರಾಯ-ಅಚ್ಯುತದೇವರಾಯರು ಚಾಮರಹಾಕುತ್ತಿರಲು ಗುಂಪ ರಾಜರು ಶ್ವೇತಛತ್ರಿ ಹಿಡಿದಿರಲು, ಮಹಾಮಂತ್ರಿಗಳು ಹಸ್ತಲಾಘವ ನೀಡುತ್ತಿರಲು, ಪಂಡಿತರು ವೇದಘೋಷಮಾಡುತ್ತಿರಲು, ಹರಿದಾಸರು ಭಗವನ್ಮಹಿಮೆಗಳನ್ನು ಹಾಡುತ್ತಿರಲು, ಧೀರಗಂಭೀರನಡೆಯಲ್ಲಿ ತೇಜಃಪುಂಜಮೂರ್ತಿಗಳಾದ ಶ್ರೀವ್ಯಾಸ ರಾಜರು ರಾಜಸಭೆಯನ್ನು ಪ್ರವೇಶಿಸಿದರು. ಅಲ್ಲಿ ಮಂಗಳಗಾನಮಾಡುತ್ತಾ ಸುಮಂಗಲೆಯರು ದೇವರಪೆಟ್ಟಿಗೆಗೆ ಆರತಿಯೆತ್ತಿ ಗುರುಗಳಿಗೆ ಆರತಿಮಾಡಿದರು. ಸಭಾಸದರು ಜಯಕಾರಮಾಡುತ್ತಾ ಗುರುಗಳಿಗೆ ಲಾಜಾಪುಷ್ಪವೃಷ್ಟಿ ಮಾಡಿದರು.

ಶ್ರೀವ್ಯಾಸಭಗವಾನರು ರತ್ನಸಿಂಹಾಸನದ ಸಮೀಪಕ್ಕೆ ಬಂದರು. ಸಿಂಹಾಸನದ ಬಲಪಾರ್ಶ್ವದ ಸ್ವರ್ಣಪೀಠದಲ್ಲಿ ದೇವರಪೆಟ್ಟಿಗೆಯನ್ನು ಮಂಡಿಸಲಾಯಿತು. ಕೃಷ್ಣದೇವರಾಯ ರಾಜಪೋಷಾಕು, ಕೀರಿಟ-ಕರ್ಣಕುಂಡಲ ಕಂಕಣಹಾರಾದಿ ಭೂಷಣಗಳು, ಪಟ್ಟದಕತ್ತಿಗಳನ್ನು ಮತ್ತೊಮ್ಮೆ ಸಮರ್ಪಿಸಲು ಅವನ್ನು ಗುರುಗಳು ಸಿಂಹಾಸನದ ಎಡಭಾಗದ ಸ್ವರ್ಣಪೀಠದಲ್ಲಿಟ್ಟು ರಾಜಮುದ್ರಿಕೆಯನ್ನು ಧರಿಸಿದರು.

ತರುವಾಯ ಮೊದಲೇ ಸೂಚಿಸಿದ್ದಂತೆ ಕೃಷ್ಣದೇವರಾಯ ಅವನ ಪತ್ನಿಯರು, ರಾಜಕುಮಾರ, ಅಚ್ಯುತದೇವರಾಯರು ಸಿಂಹಾಸನದ ಹಿಂಭಾಗಕ್ಕೆ ಹೊಂದಿಕೊಂಡು ಮಂಡಿಸಿದರು. ಆಗ ವ್ಯಾಸಮುನೀಂದ್ರರು ಕರದಲ್ಲಿ ದಂಡವನ್ನು ಹಿಡಿದು ಧ್ಯಾನಿಸಿ, ಮಂತ್ರೋಚ್ಚಾರಣ ಮಾಡುತ್ತಾ ಕೃಷ್ಣದೇವರಾಯನ ಪರಿವಾರವೂ ಸೇರಿದಂತೆ ಸಿಂಹಾಸನವೂ ಸೇರಿದಂತೆ ಒಂದೆರಡು ಮಾರು ಅಂತರವಿರುವಂತೆ ಸಿಂಹಾಸನದ ಸುತ್ತಲೂ ಒಂದು ದೊಡ್ಡ ವರ್ತುಲವನ್ನುಹಾಕಿ ದಿಗ್ಬಂಧನಮಾಡಿ ಸಿಂಹಾಸನದ ಎದುರು ಬಂದುನಿಂತರು.

ರಾಜಪುರೋಹಿತರ ಸೂಚನೆಯಂತೆ ಸಾಮ್ರಾಜ್ಯದ ಮಹಾಮಂತ್ರಿ ತಿಮ್ಮರಸರು ಶ್ರೀಗುರುಸಾರ್ವಭೌಮರಿಗೆ ಹಸ್ತಲಾಘವಕೊಟ್ಟು, ಅವರನ್ನು ಕರ್ನಾಟಕ ಸಾಮ್ರಾಜ್ಯ ರತ್ನಸಿಂಹಾಸನದ ಮೇಲೆ ಕೂಡಿಸಿದರು. ಆಗ 31 ಕುಶಾಲ ತೋಪುಗಳು ಗರ್ಜಿಸಿದವು. ಮಂಗಳವಾದ್ಯ ಮೊಳಗಿತು, ಭೇರಿ ಕಹಳೆಗಳು ಧ್ವನಿಸಿದವು, ಪಂಡಿತರು ವೇದಘೋಷಮಾಡಲಾರಂಭಿಸಿದರು. ಹರಿದಾಸರು ಭಕ್ತಿಪರವಶರಾಗಿ ನರ್ತಿಸುತ್ತಾ ಭಗವಂತನ ಮಹಿಮೆಗಳನ್ನು ಹಾಡುತ್ತಿರಲು, ದರ್ಬಾರಿನ ರಾಜನರ್ತಕಿಯರು, ನರ್ತಿಸಹತ್ತಿದರು.

ವಂದಿಮಾಗಧರು "ಜಯ ಜಯ ರಾಜಾಧಿರಾಜ ರಾಜಪರಮೇಶ್ವರ ಪ್ರೌಢಪ್ರತಾಪ ಅಪ್ರತಿಮವೀರ ಸರ್ವರಾಯರ ಗಂಡ ಚತುಃಸಮುದ್ರಫಲಕಾಪರ್ಯಂತ ಮಹೀಮಂಡಲಾಧೀಶ್ವರ, ಶಂಖಚಕ್ರಾಂಕುಶಕುಠಾರ ಶರಭಗಂಡಭೇರುಂಡ ಧರಣೀವರಾಹಬಿರುದಾಂಕಿತ ದಕ್ಷಿಣಾಪಥ ಪೃಥ್ವೀವಲ್ಲಭ, ವಿಜಯನಗರ ಕರ್ನಾಟಕರತ್ನಸಿಂಹಾಸನಾಧೀಶ್ವರ ಜಯ ಜಯ" ಎಂದು ಸಾಮ್ರಾಜ್ಯಬಿರುದಾವಳಿಗಳನ್ನು ಘೋಷಿಸಿ ಅನಂತರ "ಶ್ರೀಮತ್ಪರಮಹಂಸಪರಿವ್ರಾಜಕಾಚಾರ್ಯತ್ವಾದ್ಯಾಮಂದ ಬಿರುದುಬೃಂದಭೂಷಿತ, ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ ಸಂಸ್ಥಾಪಿತ ದ್ವೈತ ಸಾಮ್ರಾಜ್ಯ ವಿದ್ಯಾಸಿಂಹಾಸನಾಧೀಶ್ವರ, ಶ್ರೀಮೂಲಗೋಪಾಲಕೃಷ್ಣ ಪಟ್ಟಾಭಿರಾಮ ವೇದವ್ಯಾಸಪಾದಪದ್ಮಾರಾಧಕ ಶ್ರೀರಾಜೇಂದ್ರತೀರ್ಥ ಶ್ರೀಪಾದಪೂರ್ವಾದಿಮಠಾಧೀಶ್ವರ, ಸರ್ವತಂತ್ರಸ್ವತಂತ್ರ, ಆಸ್ತಿಕಮತ ಸಂಸ್ಥಾಪನಾಚಾರ್ಯ ಶ್ರೀ ಶ್ರೀಮದ್ವ್ಯಾಸರಾಜಗುರುಸಾರ್ವಭೌಮ ಜಯಜಯ" ಎಂದು ಗುರುವರರ ಬಿರುದಾವಳಿಗಳನ್ನು ಘೋಷಿಸಿದರು.

ಕಾಷಾಯಾಂಬರ ದ್ವಾದಶನಾಮ ಗಂಧಾಕ್ಷತೆ-ತುಳಸೀಮಾಲಾ ಕಮಲಾಕ್ಷ ಮಾಲೆಗಳಿಂದಲಂಕೃತರಾಗಿ ದಂಡಕಮಂಡಲುಗಳಿಂದ ಕಂಗೊಳಿಸುತ್ತಾ ಧರೆಗಿಳಿದು ಬಂದ ಭಗವಾನ್ ದೀನಮಣಿಯಂತೆ ತೇಜಸ್ವಿಗಳಾದ ಶ್ರೀವ್ಯಾಸರಾಜ ಗುರುಸಾರ್ವಭೌಮರು ಮಂದಹಾಸ ವದನಾರವಿಂದರಾಗಿ, ಅಮೃತಸದೃಶ ಕೃಪಾದೃಷ್ಟಿವೀಕ್ಷಣಗಳಿಂದ ಒಮ್ಮೆ ಎಲ್ಲರನ್ನೂ ಅವಲೋಕಿಸಿ ಅಭಯಮುದ್ರೆಯಿಂದ ಆಶೀರ್ವದಿಸಿದರು. ಅಂದಿನ ಆ ವೈಭವ. ಸಂಭ್ರಮ, ಮಂಗಳಕರವಾದ ದೃಶ್ಯವನ್ನು ವರ್ಣಿಸಲಸದಳ ! ಅದನ್ನು ಕಂಡ ಅಂದಿನ ಜನರೇ ಪುಣ್ಯವಂತರು, ಭಾಗ್ಯಶಾಲಿಗಳು !

ಅನಂತರ ಕನ್ನಡಸಾಮ್ರಾಜ್ಯದ ನೂತನ ಸಾಮ್ರಾಟರಾಗಿ ಸಿಂಹಾಸನದಲ್ಲಿ ವಿರಾಜಿಸಿದ್ದ ಆ ಯತಿಸಾರ್ವಭೌಮರಿಗೆ ಪದ್ಧತಿಯಂತೆ ಗೌರವಾರ್ಪಣಸಮಾರಂಭ ಆರಂಭವಾಯಿತು ಅಚ್ಯುತದೇವರಾಯ, ಮಹಾಮಂತ್ರಿ, ಅಳಿಯರಾಮರಾಜ, ಮಹಾದಂಡನಾಯಕರು ತಮ್ಮ ಖಡ್ಗಗಳನ್ನು ಹಿರಿದು ಶಿರಬಾಗಿ ನಮಸ್ಕರಿಸಿ ರಾಜಭಕ್ತಿಯನ್ನು ಸಮರ್ಪಿಸಿದರು, ತರುವಾಯ ಕ್ರಮವಾಗಿ ಸಚಿವ-ಸಾಮಂತ-ಪೌರಜಾನಪದ ವಿದ್ವಜ್ಜನರು ಗೌರವಸಮರ್ಪಣೆ ಮಾಡಿದಮೇಲೆ ದರ್ಬಾರಿನ ಕಾರ್ಯಕ್ರಮ ಪ್ರಾರಂಭವಾಯಿತು.

ಮೊದಲು ಆಸ್ಥಾನ ಮಹಾಪಂಡಿತರೂ. ಸಂಗೀತಭಕ್ತಿಗಳೂ ಆದ ವೀಣಾ ಕೃಷ್ಣಭಟ್ಟರು ಸಿಂಹಾಸನದ ಬಲಪಾರ್ಶ್ವದಲ್ಲಿ ಹಾಕಿದ್ದ ವೇದಿಕೆಯಮೇಲೆ ಕುಳಿತು ಪಾಂಡಿತ್ಯಪೂರ್ಣವಾಗಿ ವೀಣಾವಾದನವನ್ನು ಮಾಡಿದರು. ಅನಂತರ ಆಸ್ಥಾನದಪ್ರಧಾನಗಾಯಕರ ಗಾಯನವಾದಮೇಲೆ ರಾಜನರ್ತಕಿಯ ನೃತ್ಯವಾಯಿತು. ಅದಾದಮೇಲೆ ಅನೇಕ ಕವಿಗಳು ಆಶುಕವಿತೆಗಳಿಂದ ಗುರುವರ್ಯರ ಮಹಿಮೆಗಳನ್ನು ಕೊಂಡಾಡಿದರು.

ಶ್ರೀವ್ಯಾಸರಾಜರ ಅಣ್ಣಾಪನೆಯಂತೆ ಮಹಾಮಂತ್ರಿಗಳು, ರಾಜಭಂಡಾರದ ಅಧಿಕಾರಿಗಳು ದಾನಕ್ಕಾಗಿ ಸಿದ್ಧಪಡಿಸಲಾಗಿದ್ದ ನೂರಾರು ತಾಮ್ರಶಾಸನ, ದಾನಪತ್ರ, ವಸ್ತ್ರಾಭರಣ, ಫಲಪುಷ್ಪಗಳನ್ನಿಡಲಾದ ತಟ್ಟೆಗಳನ್ನು ತೆಗೆದುಕೊಂಡುಬಂದರು. ಗುಂಡರಾಜರು ದಾನಸ್ವೀಕರಿಸುವವರ ಹೆಸರು ಹಿಡಿದು ಕೂಗಿದ ಕೂಡಲೇ ದೇವಾಲಯದ ಅಧಿಕಾರಿಗಳು, ಪಂಡಿತರು, ಶ್ರೋತ್ರಿಯ ಬ್ರಾಹ್ಮಣರು. ಕವಿ, ಗಾಯಕ ಮುಂತಾದವರು ಒಬ್ಬೊಬ್ಬರಾಗಿ ಬಂದು ಶ್ರೀಗಳವರಿಂದ ಗ್ರಾಮ, ಅಗ್ರಹಾರ, ಭೂಸ್ವಾಸ್ತಿ, ಧನಕನಕಾಭರಣವಸ್ತ್ರಾದಿಗಳನ್ನು ದಾನಪಡೆದು ಗುರುಗಳಿಗೆ ನಮಿಸಿ ನೂತನ ಚಕ್ರವರ್ತಿಗಳ ಗುಣಗಾನಮಾಡಿದರು. ಸಭಾಸದರು ಗುರುಗಳ ಔದಾರ್ಯವನ್ನು ಕೊಂಡಾಡಿ ಕರತಾಡನಮಾಡಿ ತಮ್ಮ ಹರ್ಷವನ್ನು ಪ್ರದರ್ಶಿಸಿದರು.[1]

---

1. ತತ್ಸಿಂಹಾಸನಮಾರುಹನ್ ಪ್ರಚುರಭೂದಾನಾದಿ ಸಂಸಾಧಯನ್ ||

—ಶ್ರೀವಿದ್ಯಾರತ್ನಾಕರವಿರಚಿತ—ಶ್ರೀ ವ್ಯಾ. ರಾ. ಚ.

ಆಗ ಆಸ್ಥಾನ ಜ್ಯೋತಿಷಿಗಳು ಮುಂದೆಬಂದು ಕುಹಯೋಗದ ಮುಹೂರ್ತ ಸಮೀಪಿಸಿತೆಂದು ವಿಜ್ಞಾಪಿಸಿದರು. ಶ್ರೀವ್ಯಾಸರಾಜರ ಆಣತಿಯಂತೆ ತಿಮ್ಮರಸರು ಅರಮನೆಯ ರಾಜದ್ವಾರದಿಂದ ಸಿಂಹಾಸನದವರೆಗೆ ಯಾರೂ ಅಡ್ಡ ಇರದಂತೆ ಜನರನ್ನು ಎರಡೂ ಪಾರ್ಶ್ವಗಳಿಗೆ ದೂರಸರಿಸಿ ನಿಲ್ಲಿಸಿದರು. ಮತ್ತು ಎಲ್ಲರೂ ಪರಮಾತ್ಮನನ್ನು ಮನದಲ್ಲೇ ಧ್ಯಾನಿಸುತ್ತಾ ಶಾಂತರಾಗಿ ಕುಳಿತಿರಬೇಕೆಂದೂ ಸಭಿಕರಿಗೆ ನಿವೇದಿಸಿದರು. ಕೂಡಲೇ ಸಭೆಯು ನಿಶ್ಶಬ್ದವಾಯಿತು! ಎಲ್ಲರ ಮನಸ್ಸಿನಲ್ಲಿಯೂ ಏನೋ ಕಳವಳ, ಭೀತಿ, ಮುಂದೇನಾಗುವುದೋ ಎಂದು ಚಿಂತೆ, ಆವರೆಗಿನ ಸಂಭ್ರಮದ ವಾತಾವರಣ ಮಾಯವಾಗಿ ಒಂದುವಿಧ ಅವ್ಯಕ್ತ ಭಯದಿಂದ ಸಭೆಯು ನಿಶ್ಶಬ್ದವಾಗಿ ಕುಳಿತಿದೆ. ಒಬ್ಬರ ಮುಖದಲ್ಲೂ ಕಳೆಯಿಲ್ಲ. ಆದರೂ ಶ್ರೀವ್ಯಾಸತೀರ್ಥರ ಮಹಿಮೆಬಲ್ಲವರಾದ್ದರಿಂದ ಜನರು ಒಂದುರೀತಿ ಧೈರ್ಯತಾಳುತ್ತಿದ್ದಾರೆ. ಹೀಗೆ ವಿಧವಿಧ ಮಾನಸಿಕ ತುಮುಲದಿಂದ ಸಭಾಸದರು ಕಂಗಾಲಾಗಿ ಕುಳಿತಿದ್ದಾರೆ.

ಶ್ರೀವ್ಯಾಸತೀರ್ಥರು ತಮ್ಮ ಹಿಂಭಾಗದಲ್ಲಿ ಭಯಾಕ್ರಾಂತರಾಗಿ ನಿಂತಿರುವ ಕೃಷ್ಣದೇವರಾಯ ಮತ್ತು ಪರಿವಾರದವರಿಗೆ ಏನೇ ಆದರೂ ತಮ್ಮ ಹಿಂಭಾಗದಿಂದ ದಿಂದ ಕದಲದೆ ನಿಂತಿರಬೇಕೆಂದಾಜ್ಞಾಪಿಸಿ ಎಡಕರವನ್ನು ರಾಜಕಿರೀಟ-ಪಟ್ಟದಕತ್ತಿಗಳ ಮೇಲಿಟ್ಟು ಬಲಕರದಲ್ಲಿ ತುಳಸೀಮಾಲೆಯನ್ನು ಹಿಡಿದು ಹೃದಯಕಮಲದಲ್ಲಿ ಭಗವಂತನನ್ನು ಪ್ರತಿಷ್ಠಾಪಿಸಿ ಧ್ಯಾನಿಸುತ್ತಾ ನಿಮೀಲಿತಾರ್ಧನಯನರಾಗಿ ಜಪಮಾಡಲಾರಂಭಿಸಿದರು. ಕುಹಯೋಗದ ವೇಳೆ ಬಂದೇಬಿಟ್ಟಿತು! ಸಭಾಸದರು ರೆಪ್ಪೆಯನ್ನೂ ಬಡಿಯದೆ ಭಯ-ಕಾತರಗಳಿಂದ ಮೌನವಾಗಿ ಕುಳಿತಿದ್ದಾರೆ!

ಆಗ ಇದ್ದಕ್ಕಿದ್ದಂತೆ ಸಿಡಿಲೆರಗಿದ ಮಹಾಶಬ್ದವಾಗಿ ರಾಜದ್ವಾರದ ಮುಂಭಾಗದಲ್ಲಿ ಕಣ್ಣುಕೋರೈಸುವಂತಹ ವಿಚಿತ್ರ ಬೆಳಕುಂಟಾಯಿತು! ಆ ಕಠೋರಶಬ್ದವನ್ನಾಲಿಸಿ ಜನರು ನಡುಗಹತ್ತಿದರು. ಆ ಬೆಳಕಿನ ಕಾಂತಿಪುಂಜ ಒಂದು ಆಕಾರ ತಾಳಿತು! ಅದೇನೆಂದು ಸರ್ವರೂ ನೋಡುತ್ತಿರುವಂತೆಯೇ ಆ ತೇಜೋರೂಪವು ಮೂರುನಾಲ್ಕು ಮಾರು ಉದ್ದವಾದ ದೊಡ್ಡ ಕೃಷ್ಣಸರ್ಪವಾಗಿ ರಾಜದ್ವಾರವನ್ನು ದಾಟಿ ಸಭೆಯನ್ನು ಪ್ರವೇಶಿಸಿ ಸಿಂಹಾಸನದತ್ತ ರಭಸದಿಂದ ಮುನ್ನುಗ್ಗಿತು! ಕುಹಯೋಗ ವಿಪತ್ತು ಸರ್ಪರೂಪವಾಗಿ ಕರ್ತವ್ಯ ನಿರ್ವಹಿಸಲು ಧಾವಿಸಿತು!

ಶ್ರೀವ್ಯಾಸಭಗವಾನರು ಈ ಆಪತ್ತಿನಿಂದ ಪಾರಾಗುವರೇ? ಕೃಷ್ಣದೇವರಾಯನನ್ನು ಕಾಪಾಡುವರೇ? ಕನ್ನಡಸಾಮ್ರಾಜ್ಯದ ವಿಪತ್ತು ಪರಿಹಾರವಾಗಿ ಜನತೆಗೆ ಮಂಗಳವಾಗುವುದೇ? ಮುಂತಾಗಿ ಜನರು ಚಿಂತಾಕ್ರಾಂತರಾಗಿ ಕುಹಯೋಗರೂಪದ ಆ ಭಯಂಕರ ಸರ್ಪವನ್ನೇ ನೆಟ್ಟದೃಷ್ಟಿಯಿಂದ ನಿರೀಕ್ಷಿಸುತ್ತಿದ್ದಾರೆ!

ರಭಸದಿಂದ ಮುಂದುವರೆದ ಆ ಕೃಷ್ಣಸರ್ಪವು ಸಿಂಹಾಸನದ ಸಮೀಪಕ್ಕೆ ಬಂದ ಕೂಡಲೇ ಶ್ರೀವ್ಯಾಸಭಗವಾನರ ಮುಖದಿಂದ "ಸರ್ಪರಾಜ! ತತ್ರೈವ ತಿಷ್ಠ!"

ಎಂಬ ಗಂಭೀರಧ್ವನಿಯು ಹೊರಹೊಮ್ಮಿತು ! ಆಶ್ಚರ್ಯ, ಆ ಸರ್ಪವು ತಟ್ಟನೆ ಅಲ್ಲಿಯೇ ನಿಂತುಬಿಟ್ಟಿತು ! ಸ್ವಲ್ಪ ಸಮಯವಾದ ಮೇಲೆ ಸರ್ಪವು ಕೋಪದಿಂದ ಘೂತ್ಕರಿಸುತ್ತಾ ಮುಂದೆಬರಲು ಯತ್ನಿಸಿತು. ಇದೇನು ವಿಚಿತ್ರ ? ಸರ್ಪವು ಎಷ್ಟು ಪ್ರಯತ್ನಿಸಿದರೂ ಸಿಂಹಾಸನದ ಮುಂದೆ ಶ್ರೀವ್ಯಾಸರಾಜರು ಹಾಕಿದ್ದ ಗೆರೆಯನ್ನು ದಾಟಿಹೋಗಲು ಅಸಮರ್ಥವಾಯಿತು. ಸರ್ಪ ಸುತ್ತಲೂ ತಿರುಗುತ್ತಿದೆ, ಘೂತ್ಕರಿಸಿ ಹೆಡೆ ಅಪ್ಪಳಿಸುತ್ತಿದೆ ! ಆದರೆ ಸಿಂಹಾಸನದ ಬಳಿ ಸುಳಿಯಲೂ ಅಶಕ್ತ ವಾಗಿದೆ ! ಈ ಪರಮಾದ್ಭುತವನ್ನು ಕಂಡು ವಿಸ್ಮಿತರಾಗಿ ಸರ್ವರೂ ಮನದಲ್ಲೇ ಗುರುಗಳ ತಪಶ್ಶಕ್ತಿ-ಮಹಿಮೆಗಳನ್ನು ಕೊಂಡಾಡಹತ್ತಿದರು. ಸರ್ಪವು ದೊಡ್ಡದಾಗಿ ಹೆಡೆಬಿಚ್ಚಿ ಕೋಪದಿಂದ ನೆಲಕ್ಕೆ ಹೆಡೆಯಪ್ಪಳಿಸುತ್ತಿದೆ ! ಆಗ ಶ್ರೀವ್ಯಾಸತೀರ್ಥರಿಗೆ ಏನೋ ಪ್ರೇರಣೆಯಾದಂತಾಯಿತು. ಕೂಡಲೇ ಮಂದಹಾಸ ಬೀರುತ್ತಾ ಶ್ರೀಹರಿ ವಾಯುಗಳನ್ನು ಧ್ಯಾನಿಸಿ ತಾವು ಹೊದ್ದಿದ್ದ ಕಾವಿಶಾಟಿಯನ್ನು ಸರ್ಪರಾಜನ ಮುಂಭಾಗಕ್ಕೆ ಎಸೆದು "ಕರ್ತವ್ಯಂ ನಿರ್ವಾಹ್ಯ ಗಚ್ಛ" ಎಂದು ಉದ್ಗರಿಸಿದರು. ಆ ತಕ್ಷಣವೇ ಆ ಸರ್ಪವು ಸಿಟ್ಟಿನಿಂದ ಘೂತ್ಕರಿಸಿ ತನ್ನ ಹೆಡೆಯನ್ನು ಕಾವಿಯ ಶಾಟಿಯಮೇಲೆ ಅಪ್ಪಳಿಸಿ ದಂಶನ ಮಾಡಿತು !

ಅದ್ಭುತ ! ಅಪೂರ್ವ !! ಪರಮಾಶ್ಚರ್ಯ !!! ಸರ್ಪ ದಂಶಿತವಾದ ಆ ಕಾವೀಶಾಟಿಯು ಇದ್ದಕ್ಕಿದ್ದಂತೆ ಅಗ್ನಿಜ್ವಾಲೆಯಿಂದ ಧಗಧಗನೆ ಉರಿದು ಭಸ್ಮವಾಗಿ ಹೋಗಿಯಿತು !! ಆ ಕೂಡಲೇ ಮಹಾಸರ್ಪವು ಅಲ್ಲಿಂದ ಬಂದದಾರಿಯಲ್ಲಿಯೇ ಹಿಂದಿರುಗಿ ರಾಜದ್ವಾರದ ಹತ್ತಿರ ವಿಚಿತ್ರಕಾಂತಿಬೀರಿ ಅದೃಶ್ಯವಾಯಿತು !

ಶ್ರೀವ್ಯಾಸರಾಜರು ನಗೆಮೊಗದಿಂದ "ಸಭಾಸದರೇ, ಶ್ರೀಹರಿವಾಯುಗಳು ಬಂದಿದ್ದ ವಿಪತ್ತನ್ನು ಪರಿಹರಿಸಿದರು. ಕುಹೂಯೋಗದಿಂದಾಗಬೇಕಾಗಿದ್ದ ಮಹಾ ಸಂಕಟ-ಆಪತ್ತುಗಳ ಅವಧಿ ಮುಗಿಯಿತು. ನಮ್ಮನ್ನು, ಕೃಷ್ಣದೇವರಾಯನನ್ನು ಶ್ರೀಮೂಲಗೋಪಾಲಕೃಷ್ಣ ಸಂರಕ್ಷಿಸಿದ. ಇನ್ನು ಭಯವಿಲ್ಲ" ಎಂದು ಅಪ್ಪಣೆ ಕೊಡಿಸಿದರು.

ಅದುವರೆಗೆ ಭಯ, ಆತಂಕ, ಆಶ್ಚರ್ಯಗಳಿಂದ ಮೂಕಸ್ಮಿತರಾಗಿ ಕುಳಿತಿದ್ದ ಸಭಿಕರೆಲ್ಲರೂ ಆನಂದತುಂದಿಲರಾಗಿ "ಅದ್ಭುತ, ಅಸದೃಶ, ಮಹಾಪವಾಡ, ಮಹಾ ತ್ಮರು, ತಪೋನಿಧಿಗಳು" ಮುಂತಾಗಿ ಉದ್ಗರಿಸಿದರು. ಅಲ್ಲಿ ನೆರೆದಿದ್ದ ಸುಜನ ರೆಲ್ಲರೂ "ಶ್ರೀವ್ಯಾಸಮುನೀಂದ್ರರಿಗೆ ಜಯವಾಗಲಿ, ಕೃಷ್ಣದೇವರಾಯರಿಗೆ ಜಯ ವಾಗಲಿ" ಎಂದು ಜಯಧ್ವನಿಗೈದರು, ಆ ಮಂಗಳ ನಿನಾದ ದಿಕ್ತಟಗಳಲ್ಲಿ ಪ್ರತಿ ಧ್ವನಿಸಿತು.

ಸಿಂಹಾಸನದ ಹಿಂದೆ ನಿಂತು ಎಲ್ಲವನ್ನೂ ಗಮನಿಸುತ್ತಿದ್ದ ಕೃಷ್ಣದೇವರಾಯ ಧಾವಿಸಿಬಂದು ಗುರುಗಳ ಪಾದಗಳಮೇಲೆ ಶಿರವಿರಿಸಿ "ತಮ್ಮ ವಾತ್ಸಲ್ಯ ಅಸಾಧಾರಣ

ಗುರುದೇವ. ಈ ಬಡ ಶಿಷ್ಯನನ್ನು ಸಂರಕ್ಷಿಸಿದ ತಮಗೆ ನಾನು ಚಿರಋಣಿಯಾಗಿದ್ದೇನೆ. ತಮ್ಮ ಈ ಉಪಕಾರವು ಅಖಂಡ ಸಾಮ್ರಾಜ್ಯದ ಪ್ರಜಾನೀಕವು ಎಂದೆಂದಿಗೂ ತೀರಿಸಲಾಗದಂತಹುದು. ಮಹಾಸ್ವಾಮಿ, ನಿಮಗೆ ಅನಂತ ವಂದನೆಗಳು" ಎಂದು ಕಣ್ಣೀರು ಸುರಿಸುತ್ತಾ ಗದ್ಗದ ಕಂಠದಿಂದ ವಿಜ್ಞಾಪಿಸಿದ. ಮಹಾಮಂತ್ರಿ ತಿಮ್ಮರಸು ಪರಿಪಾರದವರಿಗಾದ ಆನಂದ ಅವರ್ಣನೀಯ ! ಮಹಾವಿಪತ್ತು ಪರಿಹಾರವಾಗಿ ಎಲ್ಲವೂ ಮಂಗಳಕರವಾಗಿ ಮುಗಿದಿದ್ದರಿಂದ ಸಂತೋಷ–ಸಂಭ್ರಮ ಭಕ್ತಿ-ಶ್ರದ್ಧಾದಿಗಳಿಂದ ಗುರುಗಳಿಗೆ ನಮಸ್ಕರಿಸಿ ತಿಮ್ಮರಸು "ನಮ್ಮ ಸಾಮ್ರಾಜ್ಯದಮೇಲೆ, ಕೃಷ್ಣದೇವರಾಯರಲ್ಲಿ, ಅನುಗ್ರಹಮಾಡಲು ಸ್ವತಃ ವಿಪತ್ತಿಗೆ ಸಿಲುಕಿದ್ದ ತಮ್ಮ ಅಗಾಧ ತಪಶ್ಶಕ್ತಿ, ಮಹಿಮೆಗಳನ್ನು ಪ್ರದರ್ಶಿಸಿ ತಾವು ದೊಡ್ಡ ಪವಾಡವನ್ನೇ ಪ್ರದರ್ಶಿಸಿದ್ದೀರಿ, ಗುರುದೇವ, ನಿಮ್ಮ ಕಾರುಣ್ಯಕ್ಕೆ ಎಣೆಯಿಲ್ಲ. ಇಕೋ ಕನ್ನಡಜನತೆಯ ಪರವಾಗಿ ನನ್ನ ಅನಂತ ನಮಸ್ಕಾರಗಳನ್ನು ಸ್ವೀಕರಿಸಿರಿ" ಎಂದರು.

ಆಗ ಶ್ರೀಗಳವರು ಕೃಷ್ಣದೇವರಾಯ ತಿಮ್ಮರಸರ ತಲೆಯನ್ನು ಪ್ರೀತಿವಾತ್ಸಲ್ಯಗಳಿಂದ ನೇವರಿಸಿ "ಪ್ರಿಯ ಕೃಷ್ಣ, ತಿಮ್ಮರಸರೇ, ಇದೆಲ್ಲವೂ ಭಗವಂತನ ಅನುಗ್ರಹವೆಂದು ತಿಳಿಯಿರಿ. ಇದರಲ್ಲಿ ನಮ್ಮದೇನೂ ಹೆಚ್ಚೇನೂ ಇಲ್ಲ. ಎಲ್ಲವೂ ಆ ಮಹಾನುಭಾವನ ಸಂಕಲ್ಪದಂತೆಯೇ ನೆರವೇರುವುದು. "ಸಕಲ ಗ್ರಹಬಲ ನೀನೇ ಸರಸಿಜಾಕ್ಷ" ಎಂದು ನಮ್ಮ ಪುರಂದರದಾಸರು ಹಾಡುವುದನ್ನು ನೀವು ಕೇಳಿಲ್ಲವೇ? ಅಷ್ಟೇ ಅಲ್ಲದೆ-

ಏಕಾದಶಸ್ಥೋ ಗೋವಿಂದೋ ಸರ್ವೇಪ್ಯೇಕಾದಶೇ ಸ್ಥಿತಾಃ ॥
ಕಿಂಕುರ್ವಂತಿ ಗ್ರಹಾಸ್ಸರ್ವೇ ಶನ್ಯರ್ಕಾಂಗಾರಕಾದಯಃ ॥"

ಸಕಲಗ್ರಹಗಳಿಗೂ ಬಲಪ್ರದನಾದ ಮಹಾಪ್ರಭು ಶ್ರೀಹರಿಯು ಹನ್ನೊಂದನೆಯ ಸ್ಥಾನವಾದ ಮನಸ್ಸಿನಲ್ಲಿ ವಿರಾಜಿಸುತ್ತಿರಲು ಶನಿ, ಸೂರ್ಯ, ಅಂಗಾರಕಾದಿಗ್ರಹಗಳು ಏನು ತಾನೇ ಮಾಡಬಲ್ಲುವು? ಶ್ರೀಗೋವಿಂದನನ್ನು ಸದಾ ಹೃದಯಕಮಲದಲ್ಲಿ ಪ್ರತಿಷ್ಠಾಪಿಸಿ ಧ್ಯಾನಮಗ್ನರಾದ ಅವರ ದಾಸರಿಗೆ ಬಂದ ವಿಪತ್ತುಗಳೆಲ್ಲವೂ ಅವನ ಅನುಗ್ರಹದಿಂದ ಪರಿಹಾರವಾಗಿ ಮಂಗಳವಾಗುವುದೆಂಬುದನ್ನು ಶ್ರೀಹರಿಯು ಈ ಒಂದು ಘಟನೆಯಿಂದ ತೋರಿಸಿಕೊಟ್ಟಿದ್ದಾನೆ" ಎಂದು ಅಪ್ಪಣೆ ಕೊಡಿಸಿದರು.

ಆ ನಂತರ ಸಭಾಸದರೆಲ್ಲರೂ ಹರ್ಷನಿರ್ಭರರಾಗಿ ಶ್ರೀವ್ಯಾಸರಾಜರ ತಪಸ್ಸು, ಮಹಿಮೆ, ಔದಾರ್ಯ, ಕಾರುಣ್ಯ-ತ್ಯಾಗ, ಭಗವದನುಗ್ರಹಕ್ಕೆ ಪಾತ್ರರಾಗಿರುವಿಕೆ ಮುಂತಾದ ಸದ್ಗುಣಗಳನ್ನು ಮುಕ್ತಕಂಠದಿಂದ ಶ್ಲಾಘಿಸುತ್ತಾ ತಮ್ಮ ತಮ್ಮ ಗೃಹಗಳಿಗೆ ತೆರಳಿದರು.

o o o o o

ಮರುದಿನವೂ ಶ್ರೀವ್ಯಾಸತೀರ್ಥರು ಸಿಂಹಾಸನವನ್ನೇರಿ ದರ್ಬಾರು ನೆರವೇರಿಸಿ ಸಿಂಹಾಸನದಿಂದಿಳಿದು ಕೃಷ್ಣದೇವರಾಯನನ್ನು ಹತ್ತಿರಕರೆದು "ಕೃಷ್ಣ ! ನಾವು

ಎರಡು ಎರಡು ನಿಬಂಧನೆಗಳಿಂದ ಸಾಮ್ರಾಜ್ಯದಾನ ಸ್ವೀಕರಿಸುವುದಾಗಿ ಹೇಳಿದ್ದು ಜ್ಞಾಪಕವಿದೆಯಷ್ಟೆ ?" ಎಂದೆನಲು ಕೃಷ್ಣದೇವರಾಯ ಕರಜೋಡಿಸಿ "ಅಹುದು ಗುರುದೇವ, ನೆನಪಿದೆ" ಎಂದನು. ಆಗ ಶ್ರೀಗಳವರು "ಕೃಷ್ಣ, ನಮ್ಮ ಮೊದಲ ನಿಬಂಧನೆಯನ್ನು ನೀನು ಪೂರೈಸಿದ್ದೀಯೆ, ಈಗ ನಮ್ಮ ಎರಡನೆಯ ಕರಾರನ್ನೂ ಪೂರೈಸಬೇಕು" ಎಂದರು.

ಕೃಷ್ಣ : ಮಹಾಸ್ವಾಮಿ, ಅಪ್ಪಣೆಯಾಗಲಿ. ತಮ್ಮ ಕರಾರನ್ನು ಸಂತೋಷ ದಿಂದ ಪೂರ್ಣಗೊಳಿಸಿ ಕೃತಾರ್ಥನಾಗುತ್ತೇನೆ.

ಶ್ರೀವ್ಯಾಸರಾಜರು "ಸಾರ್ವಭೌಮ ! ಈ ಮಹಾಸಾಮ್ರಾಜ್ಯನಮ್ಮ ನೀನು ಈಗ ಮತ್ತೆ ನಮ್ಮಿಂದ ದಾನಪಡೆದು ಪರಿಪಾಲಿಸಬೇಕು ! ಇದೇ ನಮ್ಮ ಎರಡನೆಯ ನಿಬಂಧನೆ !" ಎಂದರು. ಅದನ್ನು ಕೇಳಿ ಎಲ್ಲರೂ ಆಶ್ಚರಿಯಿಂದ ಗುರುಗಳ ತ್ಯಾಗ ಬುದ್ಧಿ, ಸಾಮ್ರಾಜ್ಯ ಹಿತಾಕಾಂಕ್ಷೆ, ರಾಯನಲ್ಲಿರುವ ಅಪಾರ ವಾತ್ಸಲ್ಯಗಳನ್ನು ಸ್ತುತಿಸಿದರು. ತಿಮ್ಮರಸಂತೂ ಆನಂದಾಬ್ಧಿಯಲ್ಲಿ ವಿಹರಿಸಹತ್ತಿದನು.

ಆಗ ಕೃಷ್ಣದೇವರಾಯನು ವಿಸ್ಮಿತನಾಗಿ "ಗುರುದೇವ, ಇದೇನು ಹೇಳುತ್ತಿರುವಿರಿ ? ದತ್ತಾಪಹಾರ ದೋಷಕ್ಕೆ ನಾನು ಗುರಿಯಾಗಬೇಕೆ ? ಬೇಡ, ಮಹಾಸ್ವಾಮಿ ಆ ಪಾಪಕ್ಕೆ ನನ್ನನ್ನು ಗುರಿಪಡಿಸಬೇಡಿ. ನಾನು ಪುನಃಪೂರ್ವಕವಾಗಿ ದಾನಮಾಡಿದ ಈ ಸಾಮ್ರಾಜ್ಯ ತಮ್ಮದು !" ಎಂದನು.

ವ್ಯಾಸಮುನಿಗಳು ನಸುನಕ್ಕು "ರಾಜೇಂದ್ರ. ನಾವು ಸನ್ಯಾಸಿಗಳು ನಮಗೇಕೆ ಸಾಮ್ರಾಜ್ಯ ? ಶ್ರೀಹರಿಯ ಪ್ರೇರಣೆಯಂತೆ ಈ ನಾಡನ್ನೂ, ನಿನ್ನನ್ನೂ ಸಲಹ ಲೆಂದೇ ಈ ದಾನವನ್ನು ಸ್ವೀಕರಿಸಿದೆವು ಶ್ರೀಹರಿಯು ನಮ್ಮ ಕರ್ತವ್ಯವನ್ನು ಸಫಲಗೊಳಿಸಿ ಕೀರ್ತಿನೀಡಿದ್ದಾನೆ. ಆದರಿಂದಲೇ ನಾವು ತೃಪ್ತರಾಗಿದ್ದೇವೆ. ನೀನು ನಮ್ಮ ಕರಾರನ್ನು ನೇರವೇರಿಸುವುದಾಗಿ ಪ್ರಮಾಣಬದ್ಧನಾಗಿದ್ದೀಯೆ. ನೀನು ಸಾಮ್ರಾಜ್ಯವನ್ನು ಸ್ವೀಕರಿಸಲೇಬೇಕು"ಎಂದೆನಲು.ರಾಯನು" ಗುರುದೇವ ! ದಯ ಮಾಡಿ ನನ್ನನ್ನು ಬಲಾತ್ಕರಿಸಬಾರದು. ತಾವೇ ಸಾಮ್ರಾಜ್ಯವನ್ನಾಳಬೇಕು"ಎಂದನು.

ಶ್ರೀವ್ಯಾಸರಾಯರು "ನಮ್ಮದು ಜ್ಞಾನಸಾಮ್ರಾಜ್ಯ ! ಅದನ್ನು ಶ್ರೀಹರಿಯ ಸಂಕಲ್ಪವಿದ್ದಷ್ಟು ದಿನ ಪಾಲಿಸುತ್ತೇವೆ, ಇದು ಲೌಕಿಕ ಸಾಮ್ರಾಜ್ಯ, ಸನ್ಯಾಸಿಗಳಿಗೆ ಇದು ತಕ್ಕುದಲ್ಲ. ನೀನೇ ಹೇಳಿದಂತೆ ದಾನಪಡೆದ ಈ ಸಾಮ್ರಾಜ್ಯ ನಮ್ಮದೇ ನಿಜ, ನಮ್ಮದಾದ ಇದನ್ನು ನಿನಗೆ ಸಂತೋಷದಿಂದ ಶ್ರೀಹರಿವಾಯುಗಳ ಪ್ರೇರಣೆಯಂತೆ ಮತ್ತೆ ನೀಡುತ್ತಿದ್ದೇವೆ. ಇಲ್ಲಿ ದತ್ತಾಪಹಾರ ದೋಷದ ಪ್ರಶ್ನೆಯೇ ಇಲ್ಲ. ನಾವು ಅನುಗ್ರಹಿಸಿ ಕೊಡುವ ಸಾಮ್ರಾಜ್ಯವನ್ನಾಳಿ ಅಪಾರ ಕೀರ್ತಿಗಳಿಸು, ಇದು ನಮ್ಮ ಅಲ್ಲ; ಶ್ರೀಹರಿವಾಯುಗಳ ಆಜ್ಞೆಯೆಂದು ತಿಳಿ" ಎಂದಾಜ್ಞಾಪಿಸಿ ತಾವೇ ಸ್ವತಃ ಸಂಕಲ್ಪವನ್ನು ಹೇಳಿ ಮಂತ್ರೋದಕಧಾರಾಪುರಸ್ಸರವಾಗಿ ಸಾಮ್ರಾಜ್ಯ ದಾನಮಾಡಿ

ರತ್ನಕಿರೀಟವನ್ನು ಅವನ ಶಿರದಲ್ಲಿಟ್ಟು ರಾಜಖಡ್ಗವನ್ನೂ ಕೊಟ್ಟು, ರಾಜಮುದ್ರಿಕೆಯನ್ನು ಬೆರಳಿಗೆ ತೊಡಿಸಿ ಕರಪಿಡಿದು ಸಿಂಹಾಸನದಲ್ಲಿಕೂಡಿಸಿ ಆಶೀರ್ವದಿಸಿ "ಕೃಷ್ಣದೇವರಾಯಸಾರ್ವಭೌಮನಿಗೆ ಜಯವಾಗಲಿ!" ಎಂದು ಸಂತಸದಿಂದಘೋಷಿಸಿದರು.[1]

ಆಗ ರಾಜಸಭೆಯಲ್ಲಿದ್ದವರೆಲ್ಲರೂ ಉಚ್ಚಕಂಠದಿಂದ "ಕೃಷ್ಣದೇವರಾಯ ಚಕ್ರವರ್ತಿಗಳಿಗೆ ಜಯವಾಗಲಿ" ಎಂದು ಹರ್ಷಧ್ವನಿಗೈದರು. ಮಹಾಮಂತ್ರಿ, ಸೈನ್ಯಾಧಿಪತಿ, ಸಚಿವಮಂಡಲಿ, ರಾಜಬಂಧುಗಳು ಹಾಗೂ ಸಮಸ್ತ ಪ್ರಜರು ಜನಸಾಮಾನ್ಯ ಕೃಷ್ಣದೇವರಾಯನಿಗೆ ಬಂದ ವಿಪತ್ತನ್ನು ಪರಿಹರಿಸಿ, ಮತ್ತೆ ರಾಜನಿಗೆ ಸಾಮ್ರಾಜ್ಯವನ್ನು ಒಪ್ಪಿಸಿಕೊಟ್ಟ ಅಪೂರ್ವತ್ಯಾಗಶೀಲರಾದ ಶ್ರೀವ್ಯಾಸರಾಯರ ಜಗದ್ವಂದ್ಯಮಹಿಮಾತಿಶಯವನ್ನು ಪರಿಪರಿಯಿಂದ ಶ್ಲಾಘಿಸಿದರು.

o o o o o

ಕೆಲದಿನಗಳುರುಳಿದವು. ಶ್ರೀವ್ಯಾಸಯತಿಪುಂಗವರೇನೋ ಸಾಮ್ರಾಜ್ಯವನ್ನು ಕೃಷ್ಣದೇವರಾಯನಿಗೊಪ್ಪಿಸಿಕೊಟ್ಟು ನಿಶ್ಚಿಂತರಾದರು. ಆದರೆ ಅಂದಿನಿಂದ ರಾಯನ ಮನಸ್ಸು ಕದಡಿತು. ಮನಸ್ಸಿಗೆ ಸಮಾಧಾನವಿಲ್ಲವಾಯಿತು. ಏನೋ ಅಪರಾಧಮಾಡಿದವನಂತೆ ಚಟಪಡಿಸಹತ್ತಿದನು. ಪರಮಪೂಜ್ಯಗುರುಗಳು ಮಂಡಿಸಿದ ಸಿಂಹಾಸನದ ಮೇಲೆ ಕುಳಿತು ರಾಜ್ಯವಾಳಲು ಅವನ ಮನಸ್ಸು ಒಪ್ಪದಾಯಿತು. ಬಹುವಿಧವಾಗಿ ಆಲೋಚಿಸಿ ಕೊನೆಗೊಂದುದಿನ ತನ್ನ ಮಗನಿಗೆ ಸಾಮ್ರಾಜ್ಯಾಭಿಷೇಕಮಾಡಿಬಿಟ್ಟರೆ ಈ ಎಲ್ಲ ಚಿಂತೆ ದೂರವಾಗುವುದೆಂದು ಭಾವಿಸಿ ತನ್ನ ಮನದಳಲನ್ನು ಮಹಾಮಂತ್ರಿ ತಿಮ್ಮರಸರಲ್ಲಿ ಪ್ರಸ್ತಾಪಿಸಿದನು. ಆಗ ತಿಮ್ಮರಸು "ಗುರುಗಳು ನಿಮಗೆ ಸಾಮ್ರಾಜ್ಯವನ್ನು ಒಪ್ಪಿಸಿಕೊಟ್ಟಿದ್ದಾರೆ. ಅದನ್ನು ನಿರಾಕರಿಸಿ ಬೇರೆ ಯೋಚನೆಮಾಡುವುದು ಶುಭಾವಹವಲ್ಲ" ಎಂದು ಸ್ಪಷ್ಟವಾಗಿ ತಿಳಿಸಿದರು. ಮಹಾಮಂತ್ರಿಗಳ ಮಾತು ರಾಯನಿಗೆ ರುಚಿಸಲಿಲ್ಲ. ಸಹೋದರ ಅಚ್ಯುತದೇವರಾಯ, ಅಳಿಯ ರಾಮರಾಯ ಮುಂತಾದ ಆತ್ಮೀಯರಲ್ಲಿ ತನ್ನ ಅಭಿಪ್ರಾಯವನ್ನು ಮಂಡಿಸಿ ರಾಜಕುಮಾರ ತಿರುಮಲರಾಯನಿಗೆ ಪಟ್ಟಾಭಿಷೇಕಮಾಡಿ ರಾಜ್ಯಾಡಳಿತದ ಹೊಣೆಯನ್ನು ಅಚ್ಯುತರಾಯ-ರಾಮರಾಯರಿಗೆ ವಹಿಸಿಕೊಟ್ಟು ತಾನು ಮೇಲ್ವಿಚಾರಕನಾಗಿದ್ದು ಸಾಮ್ರಾಜ್ಯ ರಥವು ಸುಸೂತ್ರವಾಗಿ ಸಾಗುವಂತೆಮಾಡಬೇಕೆಂಬ ತನ್ನ ಮನದಾಸೆಯನ್ನು ತಿಳಿಸಲು, ಅವರು ರಾಯನ ಅಭಿಪ್ರಾಯಕ್ಕೆ ಸಮ್ಮತಿಸಿದರು.

---

1. ತಸ್ಮಿಂಹಾಸನಮಾರುಹನ್ ಪ್ರಚುರಭೂದಾನಾದಿ ಸಂಸಾಧಯನ್ ।
ತದ್ರಾಜ್ಯಂ ಪುನರಾರ್ಪಯತ್ ಕ್ಷಿತಿಭೃತೇ ಕೃಷ್ಣಾಭಿಧಾನಾಯ ಸಃ ॥
—ಶ್ರೀವಿದ್ಯಾರತ್ನಾಕರತೀರ್ಥ ವಿರಚಿತ ಶ್ರೀವ್ಯಾಸರಾಜ ಚರಿತಮ್

ಕೃಷ್ಣದೇವರಾಯ ಒಂದು ಶುಭಮುಹೂರ್ತದಲ್ಲಿ 4-5 ವರ್ಷದ ತನ್ನ ಕುಮಾರನನ್ನು "ತಿರುಮಲದೇವಮಹಾರಾಯ" ಎಂಬ ಅಭಿದಾನದಿಂದ ಸಿಂಹಾಸನ ದಲ್ಲಿ ಕೂಡಿಸಿ ಪಟ್ಟಾಭಿಷೇಕ ಮಾಡಿದನು.[1]

ಆ ಸಾಮ್ರಾಜ್ಯಾಭಿಷೇಕ ಶುಭಪ್ರಸಂಗದಲ್ಲಿ ಕೃಷ್ಣದೇವರಾಯನು ತಿರುಪತಿ ಮುಂತಾದ ದೇವಸ್ಥಾನಗಳಿಗೆ ಅನೇಕ ಗ್ರಾಮಭೂಮಿಗಳನ್ನು ದತ್ತಿಬಿಟ್ಟನು. ಇದ ರಂತೆ ತಾನು ಪ್ರತಾಪರುದ್ರಗಜಪತಿಯನ್ನು ಜಯಿಸಿದಾಗ ತಾನು ಸಂಪಾದಿಸಿದ್ದ ಕಂದಕೂರು ಮುಂತಾದ ಗ್ರಾಮಗಳನ್ನೂ, ಅನೇಕ ಭೂಸ್ವಾಸ್ತಿಗಳನ್ನೂ ಶ್ರೀವ್ಯಾಸ ರಾಜಸ್ವಾಮಿಗಳವರಿಗೆ ದಾನಮಾಡಿ ಕೃತಾರ್ಥನಾದನು.[2]

## ೪೮. ವ್ಯಾಸಸಮುದ್ರ ನಿರ್ಮಾಣ

ಕರ್ನಾಟಕಸಾಮ್ರಾಜ್ಯಾಧೀಶನಾದ ಕೃಷ್ಣದೇವರಾಯನು ಕಳಿಂಗದಪ್ರತಾಪರುದ್ರ ಗಜಪತಿಯನ್ನು ಜಯಿಸಿದಾಗ ರಾಯನಿಗೆ ಕಾಣಿಕೆಯ ರೂಪವಾಗಿ ದೊರಕಿದ ಅನೇಕ ಗ್ರಾಮಗಳಲ್ಲಿ ಒಂದು ಕಂದಕೂರು ಎಂಬ ವಿಶಾಲವೂ ಸಂಪದ್ಭರಿತವೂ ಆದ ಗ್ರಾಮ. ಕೃಷ್ಣನರಪತಿಯು ತನಗೆ ಬಂದಿದ್ದ ಕುಹಯೋಗವನ್ನು ಪರಿಹರಿಸಿದ ಉದ್ಧಾರಕ ಗುರು ಶ್ರೀವ್ಯಾಸತೀರ್ಥರಿಗೆ ರಾಜಕುಮಾರ ತಿರುಮಲಮಹಾರಾಯನ ಪಟ್ಟಾಭಿಷೇಕ ಸ್ಮರಣೆಗಾಗಿ ದಾನಮಾಡಿದ ಅನೇಕ ಗ್ರಾಮಗಳಲ್ಲಿ ಈ ಶ್ರೇಷ್ಠವಾದ ಕಂದಕೂರು ಗ್ರಾಮವು ಶ್ರೀವ್ಯಾಸರಾಜರಿಗೆ ಬಹಳ ಪ್ರೀತ್ಯಾಸ್ಪದವಾದ ಗ್ರಾಮವಾಗಿತ್ತು.

ವಿಜಯನಗರಸಾಮ್ರಾಜ್ಯದ ಸಾಳುವ ನರಸಿಂಹನಿಂದಾರಂಭಿಸಿ ಅನೇಕ ಚಕ್ರ ವರ್ತಿಗಳಿಗೆ ಗುರುಗಳಾಗಿ, ಸಲಹೆಗಾರರಾಗಿ, ಮಾರ್ಗದರ್ಶಕರಾಗಿ, ಉಪದೇಶಕರಾಗಿ ಕನ್ನಡಸಾಮ್ರಾಜ್ಯ ಮತ್ತು ಚಕ್ರವರ್ತಿಗಳ ಹಿತಚಿಂತನಮಾಡುತ್ತಾ ರಾಜಗುರುಗಳಾಗಿ ಸುಮಾರು ಐವತ್ತು ವರ್ಷಗಳಕಾಲ ತಮ್ಮ ತಪಸ್ಸನ್ನೆಲ್ಲಾ ಧಾರೆಯೆರೆದ ಲೋಕ ಮಾನ್ಯರಾದ ವ್ಯಾಸತೀರ್ಥರು ಈ ಒಂದು ಅವಧಿಯಲ್ಲಿ ಅನೇಕ ಅಗ್ರಹಾರಗಳನ್ನು ನಿರ್ಮಿಸಿ, ಸಹಸ್ರಾರು ಗೃಹಗಳನ್ನೂ, ವೃತ್ತಿ, ಭೂಸ್ವಾಸ್ಥಿಗಳನ್ನೂ ಯೋಗ್ಯರಾದ ವಿದ್ವಾಂಸರು, ಶ್ರೋತ್ರಿಯರಾದ ಬ್ರಾಹ್ಮಣರು. ಕವಿ-ಕಲೆಗಾರರು, ಸದಾಚಾರಸಂಪನ್ನ ವೇದವಿದ್ಯಾವಿಶಾರದರುಗಳಿಗೆ ದಾನಮಾಡಿ ಲಕ್ಷಬ್ರಾಹ್ಮಣರ ಜೀವನೋಪಾಯ ವನ್ನು ಕಲ್ಪಿಸಿಕೊಟ್ಟು ಜಗತ್ತಿನಲ್ಲಿ ಅಪಾರಕೀರ್ತಿಗಳಿಸಿದ್ದರು. ಇದರ ಜೊತೆಗೆ

---

1) ತಾ|| 8-5-1524.

2) a) Inseription of Madaras Presidencs-VOL. No.I. 363.A.
b) Bellary Copper Plate Grant No. XIII of 1905.
c) ವ್ಯಾಸಸಮುದ್ರನಾಮಕಮುದಾಗ್ರಾಮಂ ನ ಚಾಸ್ಮೈ ನೃಪಃ ।
—ಶ್ರೀವಿದ್ಯಾರತ್ನಾಕರತೀರ್ಥರು.

ಕನ್ನಡನಾಡಿನ ಅನೇಕಕಡೆ ನೂರಾರು ಕೆರೆಗಳನ್ನು ನಿರ್ಮಾಣಮಾಡಿಸಿ ಜನಸಾಮಾನ್ಯರಿಗೆ ಅದರಿಂದ ಮಹೋಪಕಾರವಾಗುವಂತೆ ಮಾಡಿದ್ದರು. ಗುರುಗಳು ವಿದ್ವಜ್ಜನರಲ್ಲಿ, ದೀನದಲಿತ ಜನರಲ್ಲಿ ಎಲ್ಲಾವರ್ಗದ ಜನರಲ್ಲಿ ಪ್ರೀತಿ, ವಿಶ್ವಾಸ, ಸರ್ವರ ಉದ್ಧಾರವಾಗಬೇಕೆಂಬ ಹಂಬಲ, ಸಕಲರ ಅಭ್ಯುದಯ ಕಲ್ಯಾಣಗಳಿಗಾಗಿ ಅವರ ಯತ್ನ- ಇವೆಲ್ಲ ಸಾಮ್ರಾಜ್ಯದಲ್ಲಿ ಮನೆಮಾತಾಗಿತ್ತು.

ಹೀಗೆ ಹಗಲಿರುಳು ಸಕಲಪ್ರಜರ ಏಳಿಗೆಗೆ ಕಲ್ಯಾಣಗಳಿಗಾಗಿಯೇ ಶ್ರಮಿಸುತ್ತಿದ್ದ ವ್ಯಾಸತೀರ್ಥರು ಒಮ್ಮೆ ಕೃಷ್ಣದೇವರಾಯನು ತಮಗೆ ದಾನ ಕೊಟ್ಟಿದ್ದ ಕಂದಕೂರನ್ನು ಪರಿಶೀಲಿಸಲು ಮಿತಪರಿವಾರದೊಡನೆ ಬಂದಾಗ ಅಲ್ಲಿನ ಪ್ರಶಾಂತವಾತಾವರಣವನ್ನು ಕಂಡು ಆನಂದಿಸಿದರು. ಕೆಲಕಾಲ ಅಲ್ಲಿ ಪಾಠಪ್ರವಚನಾಸಕ್ತರಾಗಿ ಕಾಲಕಳೆಯಲು ಅವರು ಆಶಿಸಿದರು.

ರಾಯರ ಸೀಮೆಯೆಂದು ವಿಖ್ಯಾತವಾಗಿದ್ದ ಕಂದಕೂರು ಪ್ರದೇಶವು ಇತರ ವಿಚಾರಗಳಲ್ಲಿ ಉತ್ತಮವಾಗಿದ್ದರೂ ಈ ಪ್ರದೇಶದಲ್ಲಿ ಮಳೆ ಬಹಳಕಡಿಮೆಯಾಗುತ್ತಿತ್ತು. ಭೂಮಿ ಉತ್ತಮವಾಗಿದ್ದರೂ ನೀರಿಲ್ಲದೆ ಬೆಳೆ ಒಣಗಿ ಕ್ಷಾಮಡಾಮರಗಳಿಗೆ ತುತ್ತಾಗುತ್ತಿತ್ತು. ಹೀಗೆ ಕಂದಕೂರಿನಲ್ಲಿ ಎಲ್ಲ ಸೌಕರ್ಯಗಳಿದ್ದರೂ ನೀರಿನ ಅಭಾವದಿಂದ ಅಲ್ಲಿನ ಜನರು ಕಷ್ಟಪಡುತ್ತಿದ್ದರು. ಅದನ್ನು ಕಂಡ ಕರುಣಾಳುಗಳಾದ ವ್ಯಾಸರಾಜರ ಹೃದಯ ಮಿಡಿಯಿತು. ಅಲ್ಲಿ ಒಂದು ವಿಸ್ತಾರವಾದ ಕೆರೆಯನ್ನು ನಿರ್ಮಾಣಮಾಡಿದರೆ ಜನಜೀವನಕ್ಕೂ, ಬೇಸಾಯಕ್ಕೂ ಉಪಕಾರವಾಗಿ ಪ್ರಜರಿಗೆ ಅದರಿಂದ ಪ್ರಯೋಜನವಾಗುವುದೆಂದು ಆಲೋಚಿಸಿ ಕೆರೆ ನಿರ್ಮಿಸಲು ತಾಣವನ್ನು ಪರಿಶೀಲಿಸಿ ಗ್ರಾಮಕ್ಕೆ ಸನಿಹದ ಒಂದು ಪ್ರದೇಶವನ್ನು ಆರಿಸಿ ಅಲ್ಲಿ ದೊಡ್ಡಕೆರೆಯ ನಿರ್ಮಾಣಮಾಡಲು ನಿಶ್ಚಯಿಸಿದರು. ಸಾಮ್ರಾಜ್ಯದ ಚಕ್ರವರ್ತಿಯೇ ಅವರ ಆಜ್ಞೆಯನ್ನು ನೆರವೇರಿಸಲು ಟೊಂಕಕಟ್ಟಿ ನಿಂತಿರುವಾಗ, ರತ್ನಾಭಿಷೇಕ ಕಾಲದಲ್ಲಿ ಇಂತಹ ಲೋಕೋಪಯೋಗಿ ಕಾರ್ಯಗಳಿಗಾಗಿಯೇ ಮೀಸಲಿರಿಸಿದ್ದ ಅಗಾಧ ಸಂಪತ್ತಿರುವಾಗ, ಆ ಮಹನೀಯರ ಸಂಕಲ್ಪವು ಕಾರ್ಯರೂಪಕ್ಕೆ ಬರುವದೊಂದು ಅಗಾಧಕಾರ್ಯವೇ ? ಈ ವಿಚಾರವರಿತ ಗ್ರಾಮಸ್ಥರು ತಮಗಾಗಿ ಗುರುಗಳು ಇಂಥ ಶ್ರೇಷ್ಠಕಾರ್ಯದಲ್ಲಿತೊಡಗಿದ್ದಾರೆಂದು ಸಹಸ್ರಾರು ಜನರು ಆ ನಿರ್ಮಾಣಕಾರ್ಯದಲ್ಲಿ ಬೆಂಬಲಿಗರಾಗಿನಿಂತರು. ಗುರುಗಳು ಸರ್ವಕಾಲದಲ್ಲಿಯೂ ನೀರಿನಿಂದ ಶೋಭಿಸುವ ದೊಡ್ಡಕೆರೆಯ ನಿರ್ಮಾಣಕಾರ್ಯ ಪ್ರಾರಂಭಿಸಿದರು.

ಕೆಲಕಾಲಗಳಲ್ಲೇ ಅತ್ಯದ್ಭುತ ಕೆರೆಯು ನಿರ್ಮಾಣವಾಯಿತು. ಶ್ರೀಗಳವರು ಅದಕ್ಕೆ "ವ್ಯಾಸಸಮುದ್ರ"ಎಂದು ಜನರ ಪ್ರಾರ್ಥನೆಯಂತೆ ನಾಮಕರಣಮಾಡಿದರು.[1]

---

1. ಗ್ರಾಮೇ ವ್ಯಾಸಸಮುದ್ರನಾಮನಿ ತತಸ್ತೇನ ಪ್ರತಿಷ್ಠಾಪಿತೇ । ತೇನಾಖಾನಿಯತೀಶ್ವರೇಣ ಭುವನಶ್ಲಾಘ್ಯಸ್ತಟಾಕೋ ಮಹಾನ್ ॥ —ವ್ಯಾ. ಯೋ. ಚ-P-75

ಮಳೆಗಾಲಕ್ಕೆ ಮೊದಲೇ ಕೆರೆಯು ತಯಾರಾಗಿದ್ದುದರಿಂದ ಮೊದಲೇ ಹೆಚ್ಚು ನೀರಿಂದ ಕೂಡಿದ್ದಂಥ ಆ ಕೆರೆಯು ಮಳೆಯಿಂದಾಗಿ ಅಗಾಧಜಲರಾಶಿಯಿಂದ ಕಂಗೊಳಿಸಿ ಸಮುದ್ರವೆಂಬ ತನ್ನ ಹೆಸರನ್ನು ಸಾರ್ಥಕಗೊಳಿಸಿಕೊಂಡಿತು. ಅಲ್ಲಿನ ಸಕಲ ಜನರಿಗೆ ನೀರಿನ ಸೌಕರ್ಯವಾಗಿ ಜನಸಾಮಾನ್ಯರು ಗುರುಗಳ ಈ ಉದಾರ ಜನಹಿತಕಾರ್ಯವನ್ನು ಮುಕ್ತಕಂಠದಿಂದ ಶ್ಲಾಘಿಸಿದರು.[1]

'ವ್ಯಾಸಸಮುದ್ರ' ಸಿದ್ಧವಾಗಿದ್ದರೂ ಕೆರೆಯುತೂಬಿಗೆ ಅಡ್ಡಲಾಗಿ ಒಂದು ದೊಡ್ಡ ಬಂಡೆಯಿದ್ದು ಅದನ್ನು ತೆಗೆಸದ ವಿನಃ ಆ ಕೆರೆಯ ಪ್ರಯೋಜನ ಬೇಸಾಯಗಾರರಿಗೆ ಆಗುವಂತಿರಲಿಲ್ಲ. ನೂರಾರು ಜನರು ನಾಲ್ಕಾರು ದಿನಗಳಿಂದ ಬಹು ಪ್ರಕಾರವಾಗಿ ಪ್ರಯತ್ನಿಸಿದರೂ ಆ ಬಂಡೆಯನ್ನು ಕದಲಿಸಲು ಶಕ್ತರಾಗಲಿಲ್ಲ. ಅದೇ ವಿಚಾರ ಚಿಂತಿಸುತ್ತಾ ಶ್ರೀವ್ಯಾಸತೀರ್ಥರು ಕೆರೆಯ ಸಮೀಪದ ಒಂದು ವೃಕ್ಷದ ಬುಡದಲ್ಲಿ ಕಟ್ಟೆಯಮೇಲೆ ಕುಳಿತರು.

ಅದೇ ಸಮೀಪದಲ್ಲಿ ಕರಿಯಕಂಬಳಿಯನ್ನು ಹೊದ್ದು ಏಕನಾದ (ತಂಬೂರಿ) ಹಿಡಿದ ವ್ಯಕ್ತಿಯೊಂದು ಬಂದು ಶ್ರೀವ್ಯಾಸರಾಜರಿಗೆ ನಮಸ್ಕರಿಸಿತು. ಆ ವ್ಯಕ್ತಿಯನ್ನು ಕಂಡು ಗುರುಗಳ ಮುಖವರಳಿತು ತುಟಿಯಂಚಿನಲ್ಲಿ ನಗೆಮಲ್ಲಿಗೆಯನ್ನರಳಿಸಿ "ಇದೇನು ಕನಕನಾಯಕರು ಜೋಗಿಯ ವೇಷದಲ್ಲಿ?" ಎಂದು ಪ್ರಶ್ನಿಸಲು ಆ ವ್ಯಕ್ತಿ (ಕನಕನಾಯಕ)—"ಎಲ್ಲಾ ನಮ್ಮ ಕೇಶವನ ಮಹಿಮೆ" ಎಂದಿತು.

ವ್ಯಾಸ : ಅಹುದು ಮತ್ತೆ ! ದಾಸನಾಗುವುದಿಲ್ಲವೆಂದು ಹಟಹಿಡಿದರೆ ಬಿಡುವನೇ ನಮ್ಮ ಶ್ರೀಹರಿ ? ಹಾಗಾದರೆ ನೀನೀಗ ಕವೀಂದ್ರನೆನ್ನು !

ಕನಕ : ಅದೇನೋ ನಾನರಿಯೆ ಕಣಪ್ಪ. ನಿಮ್ಮ ಈ ಮಾತನ್ನಾಲಿಸಿದರೆ ಪಂಡಿತರು ನಕ್ಕಾರು !

ವ್ಯಾಸ : ನಕ್ಕರೆ ಅವರ ಹಲ್ಲೇ ಕಾಣುವುದು! ಅದು ಸರಿ ಕನಕ, ಅಂದಹಾಗೆ ನಿನ್ನ ಕೋಣವೆಲ್ಲಿ ?

ಕನಕ : ಕೋಣ, ಕೋಣ! ಹೂಂ, ಅಹುದು, ಅದನ್ನು ಎಲ್ಲಿಯೋ ನೋಡಿದ ನೆನಪು. ಯಾವಾಗ,ಎಲ್ಲಿ ಎಂಬುದು ಸ್ಪಷ್ಟವಾಗುತ್ತಿಲ್ಲ ವ್ಯಾಸಪ್ಪ ! ನೀವು ಅನುಗ್ರಹಿಸಿದರೆ ಬಹುಶಃ ಅರಿವಾಗಬಹುದೇನೋ !

ವ್ಯಾಸ : ಹಾಗಾದರೆ ನೀನು ನಮ್ಮ ದಾಸನಾಗುವೆಯಾ ?

---

1. ನಿರ್ಮಾಯಾತ್ರ ತಟಾಕಮೇಷ ಯತಿರಾಟ್ ವ್ಯಾಸಾಂಬುಧಿಃ ಸ್ಮೃತಾ ।
—ಶ್ರೀವ್ಯಾಸರಾಜಗುರುಸಾರ್ವಭೌಮಚರಿತಮ್.

2. ಕನಕನಾಯಕರೇ ಜ್ಞಾನಿಗಳಾದ ಕನಕದಾಸರು. ಇವರು ಯಮಧರ್ಮರಾಯನ ಅವತಾರವೆಂದು ಜ್ಞಾನಿಗಳು ಕೊಂಡಾಡುತ್ತಾರೆ.

ಕನಕ : (ಬೆದರಿದವನಂತೆ) ಇದೇನು ಮಾತು ನನ್ನೊಡೆಯಾ ? ಅಂದು ಆ ಜಗನ್ನಾಟಕ ಸೂತ್ರಧಾರಿ ಶ್ರೀಹರಿ ದಾಸನಾಗೆಂದು ನನ್ನನ್ನು ಪೀಡಿಸಿದ ! ಈಗ, ವ್ಯಾಸಪ್ಪ, ನೀವೂ ದಾಸನಾಗೆಂದು ಪೀಡಿಸುವಿರಲ್ಲ! ನಾನು ದಾಸನಾಗುವುದೊಂದು ದೊಡ್ಡ ಕಾರ್ಯವೇ ? ಅಂದು ನಿಮ್ಮ ಪೊಮ್ಮಗನಿಗೆ ಒಲಿದು ಬ್ರಹ್ಮಾಂಡವಿಕ್ರಮನಾದ ತ್ರಿವಿಕ್ರಮನೇ ಅವನ ಮನೆಯ ಬಾಗಿಲು ಕಾಯುತ್ತಾ ದಾಸನಂತೆ ನಟಿಸಲು ಪ್ರಾರಂಭಿಸಿದನೆಂದಮೇಲೆ ನನ್ನ ಪಾಡೇನು ಬಿಡಪ್ಪ, ಹೂಂ ಆಗಲಿ.

ವ್ಯಾಸ : ಸಂತೋಷ, ಕನಕ, ನೀನು ಬಹಳಮಾತುಗಾರ ; ಇರಲಿ, ನೀನೀಗ ಇಲ್ಲಿಗೆ ಬಂದ ಉದ್ದೇಶವೇನು ?

ಕನಕ ; (ನಗುತ್ತಾ) ಈಗ ನೀವೇ ಹೇಳಲಿಲ್ಲವೇ ದಾಸನಾಗೆಂದು ? ಅದಕ್ಕಾಗಿಯೇ ಬಂದಿರುವೆ ವ್ಯಾಸಪ್ಪ !

ವ್ಯಾಸ : ಹಾಗಾದರೆ ನಿನಗೆ ದಾಸದೀಕ್ಷೆ ಬೇಕೇನು ?

ಕನಕ : (ವಿನಮ್ರನಾಗಿ) ಅಹುದು, ಗುರುಸ್ವಾಮಿ ! ಅಂಕಿತ–ಉಪದೇಶಗಳಿಲ್ಲದೆ ಆತ್ಮೋದ್ಧಾರ ಸಾಧ್ಯವಾದೀತೆ ? ಒಡೆಯಾ ಅಂಕಿತವನ್ನು ಅನುಗ್ರಹಿಸಿರಿ.

ವ್ಯಾಸ : (ಮಂದಹಾಸಬೀರಿ) ಅಲ್ಲಪ್ಪೋ ಕನಕ ! ಈಗಾಗಗಲೇ ಆದಿಕೇಶವನ ನಾಮದಿಂದ ಅನೇಕ ಪದಗಳನ್ನು ರಚಿಸಿರುವೆಯಲ್ಲ ! ಭಗವಂತನೇ ಪ್ರೇರಣೆಮಾಡಿ ತನ್ನ ಅಂಕಿತದಿಂದ ಕೃತಿರಚನೆ ಮಾಡಿಸುತ್ತಿರುವಾಗ ಬೇರೆ ಅಂಕಿತವೇಕೆ ? ಆ ಅಂಕಿತವೇ ಶ್ರೀಹರಿಗೆ ಅತ್ಯಂತ ಪ್ರಿಯವಾಗಿದೆ. ಬೇರೆ ಅಂಕಿತ ಬೇಡ. ಅದನ್ನೇ ಮುಂದುವರೆಸು.

ಕನಕ : ಶಂಖದಿಂದ ಬಿದ್ದರಲ್ಲವೇ ನೀರು ತೀರ್ಥವಾಗುವುದು ? ಹರಿ ಒಪ್ಪಿದರೂ ಗುರು ಒಪ್ಪುವತನಕ ಅದಕ್ಕೆ ಮಹತ್ವ ಬರಬಲ್ಲುದೇ ?

ವ್ಯಾಸ : ಕನಕ, ನೀನು ಬಹಳ ಚತುರ ! ಸರಿ, ಶ್ರೀಹರಿಯಿಚ್ಛೆಯೂ ಅದೇ ಆದರೆ ನಾವೇನು ಮಾಡಲು ಸಾಧ್ಯ ? 'ಆದಿಕೇಶವನ ಅಂಕಿತ' ದಿಂದ ಪದಗಳನ್ನು ರಚಿಸು. ಅವು ಜಗದ್ವಿಖ್ಯಾತವಾಗಲಿ, ನಿನಗೆ ಭಗವದನುಗ್ರಹ ಲಭಿಸಲಿ ! ಈಗ ಸಂತೋಷವಾಯಿತೆ ?

ಕನಕ : (ಸಂತಸದಿಂದ ಗುರುಗಳಿಗೆ ನಮಿಸಿ) ಅನುಗೃಹೀತನಾದೆ ಗುರುದೇವ, ನನ್ನಅಂಕಿತವನ್ನೊಪ್ಪಿ ಅದನ್ನೇ ಮುಂದುವರೆಸಿ ಸಾಹಿತ್ಯ ರಚನೆಮಾಡಲುಆಜ್ಞಾಪಿಸಿದಿರಿ. ಇನ್ನು ಮಂತ್ರೋಪದೇಶವನ್ನು ಮಾಡಿ ಈಪಾಮರನನ್ನುಉದ್ಧರಿಸಬೇಪ್ಪಾ.

ವ್ಯಾಸ : ನಿನಗೆ ಮಂತ್ರೋಪದೇಶವೇ ? ಸದ್ಯ ನಾವೀಗ ನಿನಗೆ ಕೋಣ ಮಂತ್ರವನ್ನುಪದೇಶಿಸುತ್ತೇವೆ. ನಮ್ಮೊ ಪರೀಕ್ಷೆಯಲ್ಲಿ ಉತ್ತೀರ್ಣನಾದರೆ ಮುಂದೆ ಸಕ್ರಮವಾಗಿ ಗುರೂಪದೇಶಮಾಡುತ್ತೇವೆ. ಆಗಬಹುದೆ ?

**ಕನಕ :** (ನಕ್ಕು) ವ್ಯಾಸಪ್ಪಾ ! ನೀವೂ ಬಹುಜಾಣರು ! ಈಗ ನಿಮ್ಮ ಕಾರ್ಯವಾಗಬೇಕಾಗಿದೆಯಲ್ಲವೆ ? ಅದಕ್ಕೇ ಈ ಉಪಾಯ ಹೂಡಿದ್ದೀರಿ, ಸರಿ. ಕೋಣಮಂತ್ರವನ್ನೇ ಉಪದೇಶಿಸಿರಿ-ಎಂದು ಹೇಳಿ ಕನಕನಾಯಕರು ಕೆರೆಯಲ್ಲಿ ಸ್ನಾನ ಮಾಡಿ ಶುಚಿರ್ಭೂತರಾಗಿ ಬಂದು ಗುರುಗಳಿಗೆ ನಮಸ್ಕರಿಸಿ ಕರಜೋಡಿಸಿ 'ಹೂಂ ಉಪದೇಶಿಸಿ ಕೋಣಮಂತ್ರವನ್ನು' ಎಂದು ವಿಜ್ಞಾಪಿಸಿದರು.

ಶ್ರೀವ್ಯಾಸತೀರ್ಥರು ನಸುನಗುತ್ತಾ ಕನಕನಾಯಕರ ಕಿವಿಯಲ್ಲಿ ಕೋಣಮಂತ್ರ ವನ್ನುಪದೇಶಿಸಿ "ಕನಕ! ಇದನ್ನು ಶ್ರದ್ಧೆಯಿಂದ ಜಪಿಸು" ಎಂದುಆಜ್ಞಾಪಿಸಿದರು.

ಕನಕ ಸಮೀಪದಲ್ಲಿ ಬೇರೊಂದು ವೃಕ್ಷದಡಿಯಲ್ಲಿ ಕುಳಿತು ಮಂತ್ರವನ್ನು ಜಪಿಸ ಲಾರಂಭಿಸಿದ. ಕೆಲಸಮಯದಲ್ಲಿ ಅಲ್ಲೊಂದು ಅದ್ಭುತಾಕಾರವಾದ ದೇವಲೋಕದ ಕೋಣವೊಂದು ಪ್ರತ್ಯಕ್ಷವಾಯಿತು ! ಕನಕ ನಸುನಕ್ಕು,ವ್ಯಾಸರಾಜರ ಬಳಿಗೆ ಬಂದ. ಕೋಣವು ಅವನನ್ನು ಅನುಸರಿಸಿ ಬಂದಿತು. ಕನಕ ಗುರುಗಳಿಗೆ ನಮಿಸಿ "ಗುರುದೇವ, ತಾವು ಉಪದೇಶಿಸಿದ ಮಂತ್ರ ಫಲಿಸಿತು ! ಇಕೋ ನೋಡಿ ಕೋಣ ಬಂದಿದೆ. ಇದ ರಿಂದ ಸೇವೆಯನ್ನು ಸ್ವೀಕರಿಸೋಣವಾಗಲಿ !" ಎಂದ.

ವ್ಯಾಸಯತಿಗಳು ಹರ್ಷದಿಂದ "ಧನ್ಯ, ಕನಕ ! ನೀನು ಅಸಾಧ್ಯ ಪುರುಷ ! ನೋಡು ಈ ಕೆರೆಯ ತೂಬಿಗೆ ಒಂದು ದೊಡ್ಡ ಬಂಡೆಯು ಅಡ್ಡವಾಗಿದೆ, ಅದನ್ನು ಕದಲಿಸಲಾಗುತ್ತಿಲ್ಲ. ನಿನ್ನೀ ಕೋಣದ ಸಹಾಯದಿಂದ ಆಬಂಡೆಗಲ್ಲನ್ನು ತೆಗೆಸಿಬಿಡು. ಆದರಿಂದ ಸಹಸ್ರಾರು ಜನರಿಗೆ ಉಪಕಾರವಾಗುವುದು" ಎಂದರು.

"ನೀವು ಮಾಡುವುದೆಲ್ಲವೂ ಜನೋಪಕಾರಕಾರ್ಯವೇ ಅಲ್ಲವೇ ವ್ಯಾಸಪ್ಪಾ! ತಮ್ಮ ಅಪ್ಪಣೆಯಂತೆಯೇ ಆಗಲಿ" ಎಂದು ಆ ಕೋಣದ ಜೊತೆಗೆ ಕೆರೆಯ ತೂಬಿನ ಬಳಿಗೆ ಸಾರಿ, ಕೋಣದ ಕಿವಿಯಲ್ಲಿ ಏನೋ ಉಸುರಿದನು. ಆದೇನಾಶ್ಚರ್ಯ! ಆ ಅದ್ಭುತ ಕೋಣವು ಕ್ಷಣಮಾತ್ರದಲ್ಲಿ ತನ್ನ ಸುದೃಢಕಠೋರ ಕೊಂಬುಗಳಿಂದ ತೂಬಿಗೆ ಅಡ್ಡ ಲಾಗಿದ್ದ ಬಂಡೆಗಲ್ಲನ್ನು ಸೀಳಿ ಎತ್ತಿಸೆಯಿತು. ಅನಂತರ ಆ ಮಾರ್ಗವನ್ನು ಸುಗಮ ಗೊಳಿಸಿ ಕನಕನಿಗೆ ಪ್ರದಕ್ಷಿಣೆಹಾಕಿ ತಲೆಬಾಗಿ ಅದೃಶ್ಯವಾಯಿತು.[1]

ಶ್ರೀವ್ಯಾಸಭಿಕ್ಷುಗಳು ಅದನ್ನು ಕಂಡು ಸುಪ್ರೀತರಾಗಿ ಕನಕನನ್ನು ಶ್ಲಾಘಿಸಿ "ಕನಕ ! ಒಂದು ಕಾರ್ಯವಂತೂ ಆದಂತಾಯಿತು. ಸಂತೋಷ. ಇನ್ನೊಂದು ಮಹತ್ಕಾರ್ಯದಲ್ಲಿ ನೀನು ಹಿರಿದಾದ ಪಾತ್ರ ವಹಿಸಬೇಕಾಗಿದೆ.ನಮ್ಮೊಡನೆ ವಿಜಯ

---

1. ಶ್ರೀವಿದ್ಯಾರತ್ನಾಕರತೀರ್ಥರು ತಮ್ಮ ಶ್ರೀವ್ಯಾಸರಾಜಗುರುಸಾರ್ವಭೌಮಚರಿತವೆಂಬ ಗ್ರಂಥದಲ್ಲಿ ಶೂದ್ರರಾಗಿದ್ದ ಕನಕದಾಸರ ಮೂಲಕ ಕರೆಯತೂಬಿಗೆ ಅಡ್ಡವಾಗಿದ್ದ ದೊಡ್ಡ ಬಂಡೆಯನ್ನು ಕೋಣದಶೃಂಗಾಗ್ರದಿಂದ ತೆಗೆಸಿ ಹಾಕಿದ ವಿಚಾರವನ್ನು ಹೀಗೆ ನಿರೂಪಿಸಿದ್ದಾರೆ. "ಶೂದ್ರಂ ಕಂಚನ ಕಾಲವಾಹನಸ್ಮೃಹ ಶೃಂಗಾಗ್ರತೋಽ ಭೀಭಿದತ್ ॥"

ನಗರಕ್ಕೆ ಬರುವೆಯಾ ?" ಎಂದು ಕೇಳಿದರು. ಆಗ ಕನಕನು ದರಹಾಸಬೀರಿ "ವ್ಯಾಸಪ್ಪ, ಒಂದು ಕರಾರಿನ ಮೇಲೆ ಬರುತ್ತೇನೆ" ಎನಲು ಗುರುಗಳು "ಅದೇನು ನಿನ್ನ ಕರಾರು ?" ಎಂದು ಪ್ರಶ್ನಿಸಿದರು.

**ಕನಕ** :—ಸ್ವಾಮಿ, ನಿಮ್ಮ ಗುರುಗಳ ದರ್ಶನ ಮಾಡಿಸುವಂತಿದ್ದರೆ...... ಬರುತ್ತೇನೆ !

ವಿಸ್ಮಿತವರಾದಂತೆ ನಟಿಸುತ್ತಾ ವ್ಯಾಸತೀರ್ಥರು "ಇದೇನು ಹೀಗೆ ಹೇಳುತ್ತಿರುವೆ. ಕನಕ, ನಮ್ಮ ಗುರುಗಳಾದ ಶ್ರೀಬ್ರಹ್ಮಣ್ಯತೀರ್ಥರು ಮತ್ತೊಬ್ಬ ವಿದ್ಯಾಗುರುಗಳಾದ ಶ್ರೀ ಲಕ್ಷ್ಮೀನಾರಾಯಣ ಯತಿಗಳು ಹರಿಪದ ಸೇರಿ ಬಹುವರ್ಷಗಳಾದವು ! ಅವರನ್ನೆಂತು ನಿನಗೆ ಭೇಟಿಮಾಡಿಸುವುದು" ಎಂದು ಪ್ರಶ್ನಿಸಿದರು.

ಆಗ ಕನಕ ನಗುತ್ತಾ "ಅವರಲ್ಲ—ವ್ಯಾಸಪ್ಪ ! ಹಿಂದಿನ....ನಿಮ್ಮ ಅಂದಿನ— ಗುರುಗಳ ದರ್ಶನ ಮಾಡಿಸಿರಿ ಎಂದು ನಾನು ಕೇಳಿದ್ದು !" ಎಂದನು. ವ್ಯಾಸರಾಜ ಮುನಿಗಳೂ ಮಂದಹಾಸಬೀರಿ "ಓಹೋ ಪುರಂದರದಾಸರ ದರ್ಶನಮಾಡಬಯಸಿರುವೆಯಾ ? ಆಗಬಹುದು. ಅವರಿಗೆ ನಿನ್ನನ್ನು ಒಪ್ಪಿಸಬೇಂದೇ ವಿಜಯನಗರಕ್ಕೆ ಬಾರೆಂದು ಕರೆದಿದ್ದು ! ತಿಳಿಯಿತೇ ! ಕನಕ ಶ್ರೀಹರಿದಾಸಪಂಥದ ಅಭ್ಯುದಯ —ಸಾಹಿತ್ಯ ನಿರ್ಮಾಣಗಳಾಗಿ ಲೋಕೋಪಕಾರವಾಗಬೇಕಾಗಿದೆ. ಹರಿದಾಸಪಂಥದ ನಾಯಕತ್ವವನ್ನು ಪುರಂದರದಾಸರಿಗೆ ಒಪ್ಪಿಸಿದ್ದೇವೆ. ನೀನು ಅವರಿಗೆ ಸಹಾಯಕನಾಗಿದ್ದು ದಾಸಸಾಹಿತ್ಯವನ್ನು ಅಗಾಧವಾಗಿ ಬೆಳೆಸಬೇಕು. ಅದೇನಮ್ಮ ಆಶಯ. ಇನ್ನು ಮುಂದೆ ನೀನು ಕನಕನಾಯಕನಲ್ಲ. ಕನಕದಾಸನೆಂದು ಜಗನ್ಮಾನ್ಯನಾಗು ! ವಿಜಯನಗರದಲ್ಲಿ ಗುರೂಪದೇಶಮಾಡುತ್ತೇವೆ" ಎಂದು ಹೇಳಿ ಆಶೀರ್ವದಿಸಿದರು.

ಕನಕದಾಸರು ಸ್ವರೂಪೋದ್ಧಾರಕ ಗುರುಗಳಿಗೆ ಸಾಷ್ಟಾಂಗವೆರಗಿ ಆನಂದ ಬಾಷ್ಪ ಸಿಕ್ತನಯನರಾಗಿ ವಿನಯದಿಂದ "ಅನುಗೃಹೀತನಾದೆ ಗುರುದೇವ. ತಮ್ಮ ಆಜ್ಞೆ ಶಿರಸಾಧರಿಸಿದ್ದೇನೆ" ಎಂದು ವಿಜ್ಞಾಪಿಸಿದ.

ಶ್ರೀವ್ಯಾಸರಾಜರು ಕೆಲಕಾಲ ವ್ಯಾಸಸಮುದ್ರದಲ್ಲಿ ವಾಸಮಾಡಿ ವ್ಯಾಸಸಮುದ್ರದ ಜಲದಿಂದ ಸಹಸ್ರಾರು ಜನರಿಗೆ ಉಪಕಾರವಾಗುವಂತೆ ಮಾಡಿ, ಎಲ್ಲರನ್ನೂ ಮುದಗೊಳಿಸಿ, ತಾವು ಆ ಗ್ರಾಮಕ್ಕೆ ಆಗಾಗ್ಗೆ ಬಂದು ವಾಸಿಸುತ್ತಾ ಪಾಠ ಪ್ರವಚನಾದಿಗಳಿಂದ ಜ್ಞಾನಪ್ರಸಾರ ಮಾಡಲಾಶಿಸಿ, ಅಲ್ಲೊಂದು ವಿಸ್ತಾರವಾದ ಮಠವನ್ನು ಕಟ್ಟಿಸಲು ವ್ಯವಸ್ಥೆಮಾಡಿ ಕನಕದಾಸರೊಡನೆ ವಿಜಯನಗರಕ್ಕೆ ದಯಮಾಡಿಸಿದರು.

o o o o o

ವಿಜಯನಗರಕ್ಕೆ ಒಂದು ಕೆಲದಿನಗಳಾದ ಮೇಲೆ ಶ್ರೀವ್ಯಾಸರಾಜರು ಒಂದು ಶುಭಮುಹೂರ್ತದಲ್ಲಿ ಕನಕದಾಸರಿಗೆ ಶ್ರೀಮಾಧ್ವದೀಕ್ಷೆಯಿತ್ತು ಗುರೂಪದೇಶಮಾಡಿ

ಅನುಗ್ರಹಿಸಿ ಅವರು ಶ್ರೀಪುರಂದರದಾಸರಿಗೆ ಸಹಾಯಕರಾಗಿದ್ದು ಹರಿದಾಸ ಸಾಹಿತ್ಯ ರಚನೆ-ಪ್ರಸಾರ ಕಾರ್ಯಗಳಿಂದ ಲೋಕಕಲ್ಯಾಣವೆಸಗಬೇಕೆಂದು ಆಜ್ಞಾಪಿಸಿದರು, ಶ್ರೀವ್ಯಾಸರಾಜರ ಶಿಷ್ಯತ್ವ-ಗುರೂಪದೇಶಗಳನ್ನು ಹೊಂದಿದ ಶ್ರೀ ಕನಕದಾಸರು ಪರಮಾನಂದಭರಿತರಾಗಿ ಆನಂದಾಶ್ರು ಹರಿಯುತ್ತಿರಲು ಗದ್ಗದಕಂಠದಿಂದ ತಮ್ಮ ಜೀವನ ಸಾರ್ಥಕವಾಯಿತೆಂದು ಭಾವಿಸಿದರು ಆಗ ಅವರ ಮುಖದಿಂದ ಒಂದು ದೇವರನಾಮ ಹೊರಹೊಮ್ಮಿತು—

ರಾಗ :—ಮುಖಾರಿ ತಾಳ :— ಝಂಪೆ

ಬದುಕಿದೆನು ಬದುಕಿದೆನು ಭವ ಎನಗೆ ಹಿಂಗಿತು ॥ ಪ ॥
ಪದುಮನಾಭನ ಪಾದದೊಲುಮೆ ಎನಗಾಯಿತು ॥ ಅ ॥ ಪ ॥
ಹರಿತೀರ್ಥ ಪ್ರಸಾದ ಎನ್ನ ಜಿಹ್ವೆಗೊದಗಿತು ।
ಹರಿಯ ನಾಮಾಮೃತ ಕಿವಿಗೊದಗಿತು ॥
ಹರಿಯದಾಸರು ಎನ್ನ ಬಂಧು ಬಳಗಾದರು ।
ಹರಿಯ ಶ್ರೀಮುದ್ರೆ ಆಭರಣವಾಯಿತು ॥ ೧ ॥
ಮುಕುತರಾದರು ಎನ್ನ ನೂರೊಂದು ಕುಲದವರು ।
ಮುಕುತಿ ಮಾರ್ಗಕೆ ಯೋಗ್ಯ ನಾನಾದೆನೋ ॥
ಅಕಳಂಕ ಶ್ರೀಹರಿ ಭಕುತಿಗೆ ಮನಬೆಳೆದು ।
ರುಕುಮಿಣಿಯರಸ ಕೈವಶವಾದ ಎನಗೆ ॥ ೨ ॥
ಇಂದೆನ್ನ ಜೀವಕ್ಕೆ ಸಕಲ ಸಂಪದವಾಯ್ತು !
ಮುಂದೆನ್ನ ಜನ್ಮ ಸಫಲವಾಯಿತು ॥
ತಂದೆ ಕಾಗಿನೆಲೆಯಾದಿ ಕೇಶವರಾಯ ।
ಬಂದೆನ್ನ ಹೃದಯದಲಿ ನೆಲೆಯಾಗಿ ನಿಂತ ॥ ೩ ॥ 1

---

.1 ಶ್ರೀವ್ಯಾಸರಾಜರು ಕನಕನಾಯಕನಿಗೆ ಮಧ್ವದೀಕ್ಷೆನೀಡಿ, ಗುರೂಪದೇಶ-ಮುದ್ರಾಧಾರಣೆ ಮಾಡಿ ಕನಕದಾಸರೆಂದು ಹೆಸರಿಟ್ಟು ಅವರಿಗೆ ಶ್ರೀಮೂಲಗೋಪಾಲಕೃಷ್ಣನ ಪೂಜೆ ನೋಡಿ ಆನಂದಿಸಲು ಅವಕಾಶಮಾಡಿಕೊಟ್ಟರು. ಪೂಜಾಕಾಲದಲ್ಲಿ ಶ್ರೀಗೋಪಾಲ ಕೃಷ್ಣ ತಮ್ಮ ಹೃದಯದಲ್ಲಿ ಬಂದು ನೆಲೆಸಿದಂತೆ ಅವರಿಗೆ ಅನುಭವವಾಯಿತು ....... ಶ್ರೀಗಳವರು ಭಿಕ್ಷಾಸ್ವೀಕರಿಸಿದಮೇಲೆ ಕನಕದಾಸರಿಗೆ ತೀರ್ಥಪ್ರಸಾದ ಮುದ್ರಾಧಾರಣ ಪ್ರಸಾದಗಳನ್ನು ಕರುಣಿಸಿದರು. ನಾರದಾಂಶರಾದ, ಜ್ಞಾನಿಗಳಾದ ಶ್ರೀಪುರಂದರ ದಾಸರು ಕನಕದಾಸರು ಶ್ರೀಯಮಾಂಶರೆಂದು ಜ್ಞಾನದೃಷ್ಟಿಯಿಂದತಿಳಿದು ಅವರನ್ನಾಲಿಂಗಿಸಿ "ನೀವು ನಮ್ಮ ಪರಲೋಕಬಂಧುಗಳೆಂದು" ಪ್ರೀತಿಪೂರ್ವಕನುಡಿದರು. ಈ ಎಲ್ಲ ಘಟನೆಗಳನ್ನು ಈ ಪದದಲ್ಲಿ ಕನಕದಾಸರು ಸೂಚ್ಯವಾಗಿ ನಿರೂಪಿಸಿ ತಮ್ಮ ಜನ್ಮಸಫಲ ವಾಯಿತೆಂದೂ ಶ್ರೀಗೋಪಾಲಕೃಷ್ಣಾಭಿನ್ನ ಶ್ರೀಪದ್ಮನಾಭನ (ಆದಿದೇವ) ಒಲಿಮೆದೊರೆಯಿತೆಂದೂ ಹರ್ಷನಿರ್ಭರರಾದರು. ಈ ಪದವನ್ನು ವಿವೇಚಿಸಿದಾಗ ಎಲ್ಲ ವಿಚಾರಗಳೂ ಸ್ಪಷ್ಟವಾಗುವುವು. ಗ್ರಂಥಕಾರ

## ೪೯. ಹರಿದಾಸಪಂಥ ಮತ್ತು ದಾಸಸಾಹಿತ್ಯ

ಯುಗಯುಗಗಳಿಂದಲೂ ಹರಿದಾಸರು ಅವರ ಸಾಹಿತ್ಯಗಳು ಅವ್ಯಾಹತವಾಗಿ ಸಾಗಿಬಂದಿದೆ. ಸೃಷ್ಟಿಯ ನಂತರ ಆರಂಭವಾದ ಹರಿದಾಸ ಪರಂಪರೆಯು ಅದ್ಯಾಪಿ ನಡೆದುಬಂದಿರುವುದೆಂದು ಹೇಳಬಹುದು, ಇದರ ಸ್ಪಷ್ಟಚಿತ್ರ ನಮ್ಮ ಚಿತ್ತಭಿತ್ತಿಯಲ್ಲಿ ಒಡಮೂಡಿ ಇದರ ವಿಶ್ವವ್ಯಾಪಕತೆಯು ನಮಗೆ ಅವಗತವಾಗಬೇಕಾದರೆ ಸ್ವಲ್ಪ ಈ ವಿಚಾರವನ್ನು ವಿವೇಚಿಸುವುದು ಅವಶ್ಯವೆನಿಸುವುದು.

ಹರಿದಾಸರೆಂದರೆ ಯಾರು ? ವೇದ-ಪುರಾಣ ಮತ್ತು ಈ ಕಲಿಯುಗಗಳಲ್ಲಿನ ಹರಿದಾಸರು, ಭಗವಂತನ ಸ್ತುತಿರೂಪವಾದ ಅವರ ಸಾಹಿತ್ಯ, ಅದು ನಡೆದುಬಂದ ದಾರಿ, ಭಾರತದ ಇತರ ವೈಷ್ಣವಸಂತರಿಗೂ ಕನ್ನಡದ ಹರಿದಾಸರಿಗೂ ಇವರ ವ್ಯತ್ಯಾಸ ಮಹತ್ವಗಳೇನು ? ಹರಿದಾಸರ ಲಕ್ಷಣ, ಅವರ ನಡೆ-ನುಡಿ, ಭಗವದ್ಭಕ್ತಿ ಉಪಾಸನೆ, ಅವರು ರಚಿಸಿದಸಾಹಿತ್ಯ, ಈ ಸಾಹಿತ್ಯದ ಪ್ರೇರಕಶಕ್ತಿ ಯಾವುದು ? ಕನ್ನಡದಲ್ಲಿ ಹರಿದಾಸ ವಾಙ್ಮಯವನ್ನು ಪ್ರಾರಂಭಿಸಿದ ಮಹನೀಯರು, ಆ ಪರಂಪರೆ, ಹರಿದಾಸ ಸಾಹಿತ್ಯದ ಸುವರ್ಣಯುಗಕ್ಕೆ ಕಾರಣಪುರುಷರು, ಅವರ ವೈಶಿಷ್ಟ್ಯ, ಕನ್ನಡಹರಿದಾಸ ಸಾಹಿತ್ಯದಿಂದ ನಾಡು, ನುಡಿ, ಜನತೆಗಾದ ಮಹೋಪಕಾರ-ಇವೇ ಮುಂತಾದ ವಿಚಾರಗಳನ್ನು ಸ್ಥೂಲವಾಗಿಯಾದರೂ ವಿವೇಚಿಸಿದಾಗ ಅದರ ಮಹತ್ವದ ಅರಿವಾಗುವುದು.

ನಾವು ಈ ಅಧ್ಯಾಯದಲ್ಲಿ ನಮ್ಮ ಯೋಗ್ಯತಾನುಸಾರ ಮೇಲ್ಕಂಡ ಎಲ್ಲ ವಿಷಯಗಳನ್ನು ವಿವೇಚನೆಯೊಡನೆ ಓದುಗರ ಮುಂದಿಡಬಯಸಿದ್ದೇವೆ.[1]

ವೇದಾದಿ ಸಕಲಶಾಸ್ತ್ರಗಳೂ ಶ್ರೀಮನ್ನಾರಾಯಣನೇ ಸರ್ವೋತ್ತಮದೇವತೆ, ಸೃಷ್ಟಿ-ಸ್ಥಿತಿ-ಸಂಹಾರಾದಿಗಳಿಗೆ ಅವನೇ ಕಾರಣ, ರಮಾ-ಬ್ರಹ್ಮ-ರುದ್ರೇಂದ್ರಾದಿ ಸಮಸ್ತದೇವತೆಗಳಿಗೂ ಶ್ರೀಹರಿ ಪರಮಾತ್ಮನೇ ನಿಯಾಮಕನು. ಆ ಮಹಾಪ್ರಭುವು ದೋಷದೂರನೂ, ಅನಂತಕಲ್ಯಾಣಗುಣಪೂರ್ಣನೂ, ಮೋಕ್ಷಪ್ರದಾತನೂ ಅಚಿಂತ್ಯಾದ್ಭುತಶಕ್ತನೂ, ಅಪ್ರತಿಹತಮಹಾಮಹಿಮನೂ ಸ್ವಗತಭೇದವಿವರ್ಜಿತನೂ ಭಕ್ತಬಂಧುವೂ ವೇದೈಕ ವೇದ್ಯನೂ ಆದ ಪರಬ್ರಹ್ಮನೆಂದು ಸಾರುವವು. ಶ್ರುತಿ ಉಪನಿಷತ್, ಸ್ಮೃತಿ, ಇತಿಹಾಸ, ಗೀತಾ, ಪಾಂಚರಾತ್ರ, ರಾಮಾಯಣ, ಪುರಾಣಗಳು, ಹಾಗೂ ಸಕಲಸೂತ್ರಾದಿಗಳೂ ಪರಮಮುಖ್ಯವೃತ್ತಿಯಿಂದ ಶ್ರೀಮನ್ನಾರಾಯ

---

1. ಈ ಅಧ್ಯಾಯ ರಚನೆಯಲ್ಲಿ ನಮಗೆ ಪ್ರಿಯಮಿತ್ರರೂ, ಬಂಧುಗಳೂ ಆಗಿದ್ದ ದಿ॥ ವೇದಾಂತರತ್ನಂ, ಡಾ. ಹುಲಿ. ಕೃ. ವೇದವ್ಯಾಸಾಚಾರ್ಯರ "ಕರ್ನಾಟಕದ ಹರಿದಾಸರು" (A critical Study of Haridasas of Karnataka) ಎಂಬ ಮಹಾ ಗ್ರಂಥವು ಅತ್ಯಂತ ಸಹಾಯಕವಾಗಿದೆ.

ಣನೇ ಸರ್ವೋತ್ತಮನಾದ ಪರಬ್ರಹ್ಮನೆಂದು ಘೋಷಿಸುವವು. ಸಕಲಜೀವರ ದುಃಖಕ್ಕೆ ಕಾರಣವಾಗಿರುವ ಜನನಮರಣರೂಪ ಸಂಸಾರಚಕ್ರದಿಂದ ಬಿಡುಗಡೆಮಾಡಿ, ಆತ್ಯಂತಿಕ ದುಃಖಪರಿಹಾರದ್ವಾರಾ ಸರ್ವಜೀವರ ಮುಖ್ಯಗುರಿಯಾದ ಸ್ವರೂಪಾನಂದಾವಿರ್ಭಾವರೂಪವಾದ ಶಾಶ್ವತಸುಖವನ್ನು ಕೊಡುವ ಮಹಾಕರುಣಾಳುವೇ ಆ ಭಗವಂತನು. ಅವನನ್ನು ಒಲಿಸಿಕೊಂಡು ಅವನ ಅತ್ಯರ್ಥ ಪ್ರಸಾದಕ್ಕೆ ಪಾತ್ರರಾಗಿ ಸುಜೀವಿಗಳು ಸುಖಿಸಬೇಕೆಂದೇ ವೇದಾದಿ ಸಕಲಶಾಸ್ತ್ರಗಳೂ ಪ್ರವೃತ್ತವಾಗಿವೆ, "ಅದುಃಖಮಿತರತ್ ಸರ್ವಂ । ಜೀವಾ ಏವತು ದುಃಖಿನಃ॥ ತೇಷಾಂ ದುಃಖಪ್ರಹಾಣಾಯ ಶ್ರುತಿರೇಷಾ ಪ್ರವರ್ತತೇ ॥", "ನಾರಾಯಣೋಽಸೌ ಪರೋ ವಿಚಿಂತ್ಯಃ ಮುಮುಕ್ಷುಭಿಃ ಕರ್ಮಪಾಶಾದಮುಷ್ಮಾತ್ ॥" ಮುಂತಾಗಿ ಗೇಗೀಯಮಾನನಾಗಿರುವ ಶ್ರೀಹರಿಯನ್ನು ಒಲಿಸಿಕೊಳ್ಳಲು ಮಾಡಬೇಕಾದ ಸಾಧನಮಾರ್ಗದಲ್ಲಿ ಮೊದಲು ಆ ಪ್ರಭುವಿನ ದಾಸರಾಗುವುದು ಅನಿವಾರ್ಯ. ಹೀಗೆ ತಮ್ಮ ಉದ್ಧಾರವನ್ನು ಬಯಸಿ ತಮ್ಮ ಸರ್ವಸ್ವವನ್ನೂ ಶ್ರೀಹರಿಗೆ ಅಂಕಿತಗೊಳಿಸಿ ನಿರಂತರವೂ ಭಕ್ತಿಯಿಂದ ಸೇವಿಸುವವರೇ ಹರಿದಾಸರು. ಇಂತಹ ಹರಿದಾಸರು ಎಲ್ಲ ಕಾಲದಲ್ಲಿಯೂ ಆಗಿ ಹೋಗಿದ್ದಾರೆ.

ಹರಿದಾಸರನ್ನು ಎಣಿಸುವಾಗ ಅಕ್ಷರ ಪುರುಷಳೆನಿಸಿದ ಸಾಕ್ಷಾತ್ ರಮಾದೇವಿಯೇ ಶ್ರೀಹರಿದಾಸರಲ್ಲಿ ಮೊದಲಿಗಳೆನಿಸುವಳು. ಲಕ್ಷ್ಮೀದೇವಿಯ ತರುವಾಯ ಚತುರ್ಮುಖ ಬ್ರಹ್ಮದೇವರು ಮತ್ತು ವಾಯುದೇವರು ಪ್ರಮುಖ ಹರಿದಾಸರು, ಅವರ ನಂತರ ಭಾರತೀ, ಸರಸ್ವತಿ, ಗರುಡ, ಶೇಷ, ರುದ್ರ, ಸೌಪರ್ಣಿ, ವಾರುಣಿ, ಉಮಾದೇವಿಯರೂ, ಆ ನಂತರ ಇಂದ್ರಾದಿ ಸಮಸ್ತ ದೇವತೆಗಳೆಲ್ಲರೂ ಹರಿದಾಸರೇ. ಪುರಾಣ ಯುಗದಲ್ಲಿ ಪ್ರಸಿದ್ಧರಾದ ನಾರದ, ಪ್ರಹ್ಲಾದ, ವಿಭೀಷಣ, ಧ್ರುವ, ಅಂಬರೀಷ, ಶಿಬಿ, ಬಲಿ, ರುಕ್ಮಾಂಗದ, ಗಜೇಂದ್ರ, ಅಜಾಮಿಳಾದಿಗಳು ಭಾಗವತಾಗ್ರಣಿಗಳೆನಿಸಿ ತಮ್ಮ ಹರಿಭಕ್ತಿಯಿಂದ ಹರಿದಾಸರೆಂದು ವಿಖ್ಯಾತರಾಗಿದ್ದಾರೆ. ಹೀಗೆ ಈ ಹರಿದಾಸ ಪರಂಪರೆಯು ಅನಾದಿಕಾಲದಿಂದಲೂ ನಡೆದುಬಂದಿದೆ.

"ಅಸಂಶಯಃ ಸಂಶಯಚ್ಛಿತ್ ಗುರುರುಕ್ತೋ ಮನೀಷಿಭಿಃ । ತಸ್ಮಾದ್ಬ್ರಹ್ಮಾ ಗುರುರ್ಮುಖ್ಯಃ ಸರ್ವೇಷಾಮಪಿ ಸರ್ವದಾ ॥" ಎಂದು ಶ್ರೀಮನ್ಮಧ್ವಾಚಾರ್ಯರು ಹೇಳುವುದರಿಂದ ಚತುರ್ಮುಖ ಬ್ರಹ್ಮದೇವರೇ ಮುಖ್ಯಲೋಕಗುರುಗಳಾದ್ದರಿಂದ ಚೇತನವರ್ಗದಲ್ಲಿ ಅವರೇ ಮೊದಲ ಹರಿದಾಸರು. ಅವರು ಶ್ರೀಹರಿಯನ್ನು ವಿವಿಧ ರೀತಿಯಿಂದ ಕೊಂಡಾಡಿರುವರು. "ನಮೋಽಸ್ತ್ವನಂತಾಯ ದುರಂತಶಕ್ತಯೇ । ವಿಚಿತ್ರವೀರ್ಯಾಯ ಪವಿತ್ರಕರ್ಮಣೇ ॥ ವಿಶ್ವಸ್ಯ ಸರ್ಗಸ್ಥಿತಿಸಂಯಮಾನ್ ಗುಣೈಃ । ಸ್ವಲೀಲಯಾ ಸಂದಧತೇಽವ್ಯಯಾತ್ಮನೇ॥" [—ಭಾಗವತ] ಅಂದರೆ ಶ್ರೀಹರಿಯೇ ಸಮಸ್ತಜಗತ್ತಿನ ಸೃಷ್ಟ್ಯಾದಿಕರ್ತನಾದ ಸರ್ವೋತ್ತಮದೇವತೆಯೆಂದು ಅವರು ಸ್ತುತಿಸಿರುವುದಲ್ಲದೇ ಪಾಂಚರಾತ್ರಾಗಮದಲ್ಲಿನ ಅವರ ಸ್ತುತಿಯೂ ಇದೇರೀತಿ ಬಹು

ವಾರ್ಮಿಕವಾಗಿದೆ. ಬ್ರಹ್ಮದೇವರು 'ಶ್ರೀಹರಿ, ನನ್ನನ್ನು ಶಿವಾದಿಗಳನ್ನು ಬೊಂಬೆಯನ್ನಾಗಿ ಮಾಡಿಕೊಂಡು ಕ್ರೀಡಿಸುವನು' ಎಂದೂ ಹೇಳಿದ್ದಾರೆ.[1] ರುದ್ರದೇವರು ತಮ್ಮ ಪುತ್ರ ಷಣ್ಮುಖನಿಗೆ ಹೀಗೆ ಉಪದೇಶಿಸಿದ್ದಾರೆ–ಶ್ರೀವಿಷ್ಣು ಒಬ್ಬನೇ ಸರ್ವೋತ್ತಮನಾದ ಪರಬ್ರಹ್ಮನು, ಅವನ ಜ್ಞಾನವೇ ಮೋಕ್ಷಸಾಧನವು. ಇದು ಸಕಲ ಶಾಸ್ತ್ರಗಳ ನಿರ್ಣಯ. ಇದಕ್ಕೆ ವಿರುದ್ಧವಾದುದೆಲ್ಲವೂ ಮೋಹಕವು. ಇಷ್ಟೇಅಲ್ಲ, ನನಗೂ ಶ್ರೀಹರಿಗೂ ಸಾಮ್ಯಹೇಳುವುದು, ವಿಷ್ಣುವಿಗಿಂತ ನಾನು ಶ್ರೇಷ್ಠನೆಂದು ಹೇಳುವುದು, ಮುಕ್ತರಾದ ನಮಗೂ ಶ್ರೀಹರಿಗೂ ಅಭೇದವನ್ನು ಹೇಳುವುದು— ಇವೆಲ್ಲ ಮೋಕ್ಷಕ್ಕೆ ಅನರ್ಹರಾದವರನ್ನು ಮೋಹಗೊಳಿಸಲು ಹೇಳಿದ ವಚನಗಳೇ ವಿನಃ ಅವು ಸತ್ಯವಲ್ಲ. ಮೋಕ್ಷದಲ್ಲಿಯೂ ನಮಗೂ ವಿಷ್ಣುವಿಗೂ ಭೇದವಿದ್ದೇಇದೆ. ಇದು ತಥ್ಯವಾದವಿಚಾರ. ಇದರಂತೆ ಉಪಾಸನೆಮಾಡು" ಎಂದು ಉಪದೇಶಿಸಿದ್ದಾರೆ.[2] ಇವೆಲ್ಲವರ ವಿವೇಚನೆಯಿಂದ ಶ್ರೀಹರಿಯೇ ಸರ್ವೋತ್ತಮ. ಉಳಿದ ಚೇತನಪ್ರಪಂಚವೆಲ್ಲವೂ ಅವನ ಅಧೀನ ಎಂಬುದು ಸ್ಪಷ್ಟವಾಗುವುದು. ಈ ಮೇಲಿನ ಪ್ರಮಾಣಗಳಲ್ಲಿ ಕಾಣಬರುವ ಶ್ರೀಹರಿಸ್ತುತಿ ಭಗವಂತನ ವರ್ಣನೆ ಭಗವತ್ತತ್ವಗಳು ಉಪದೇಶರೂಪವಾದುದೆಲ್ಲವೂ ಹರಿದಾಸಸಾಹಿತ್ಯ ಎಂದು ಹೇಳಬಹುದು.

ಪುರಾಣಕಾಲದಲ್ಲಿ ಹರಿದಾಸರಲ್ಲಿ ಪ್ರಹ್ಲಾದರಾಜರು ಆಜನ್ಮ ವೈಷ್ಣವರೆಂದು ಪ್ರಖ್ಯಾತರಾದ ಭಾಗವತಾಗ್ರಣಿಗಳು. ಅವರ ಸ್ತುತಿಗಳೆಲ್ಲವೂ ಉತ್ತಮವಾದವು. ಅದರಲ್ಲಿ ಭಕ್ತನ ಕೊರಗು ಚೆನ್ನಾಗಿ ಚಿತ್ರಿತವಾಗಿದೆ. ಅವರ ಗುರುಗಳಾದ ದೇವರ್ಷಿ ನಾರದರಿಗೆ ಭಾಗವತಧರ್ಮ ಪ್ರಚಾರಕರೆಂಬ ಬಿರುದಿದೆ. "ನಾರಾಯಣನೆಂಬುವ ನಾಮದ ಬೀಜವ ನಾರದ ಬಿತ್ತಿದ ಧರೆಯೊಳಗೆ" ಎಂಬ ಪ್ರಮಾಣದಂತೆ ಜಗತ್ತಿಗೆ ಹರಿದಾಸ್ಯವನ್ನು ಹೇಳಿಕೊಟ್ಟವರೇ ನಾರದರು. ನಾರದರ ಪ್ರಾರ್ಥನೆಯಂತೆ ಭಗವಾನ್ ವೇದವ್ಯಾಸರು 'ಭಾಗವತ'ವನ್ನು ರಚಿಸಿದರು. ನಾರದರು ತಮ್ಮ ಭಾಗವತವೃತ್ತಿಯನ್ನು ವೇದವ್ಯಾಸರಲ್ಲಿ ನಿವೇದಿಸಿಕೊಂಡಿರುವುದು ಹೃದಯಂಗಮವಾಗಿದೆ. ಗಜೇಂದ್ರನು ಮೊಸಳೆಗೆ ಸಿಲುಕಿದಾಗ "ಓಂ ನಮೋ ಭಗವತೇ ತಸ್ಮೈಯತ ಏತಚ್ಚಿ-ದಾತ್ಮಕಂ । ಪುರುಷಾಯಾದಿಬೀಜಾಯ ಪರೇಶಾಯಾಭಿಧೀಮಹಿ॥" ಇತ್ಯಾದಿಯಾಗಿ ನಾನಾಪರಿಪರಿಯಿಂದ ಭಗವಂತನನ್ನು ಪ್ರಾರ್ಥಿಸಿದ್ದಾರೆ. ಕಾಮಭಕ್ತಿಯಿಂದ ಗೋಪಿಕಾಸ್ತ್ರೀಯರು ಶ್ರೀಕೃಷ್ಣನನ್ನು ಒಲಿಸಿಕೊಂಡರು. ಕೃಷ್ಣನನ್ನು ಕಾಣದಾದಾಗ ವಿರಹ

---

1. ನಾಹಂ ನ ಚ ಶಿವೋನ್ಯೇ ಚ ತಚ್ಛಕ್ತ್ಯೇಕಾಂಶಭಾಗಿನಃ ಬಾಲಃ ಕ್ರೀಡನಕೈರ್ಯದ್ವತ್ ಕ್ರೀಡತೇಸ್ಮಾಭಿರಚ್ಯುತಃ ॥"—
2. "ಪರಮೋ ವಿಷ್ಣುರೇವೈಕಃ ತಜ್ಜ್ಞಾನಂ ಮೋಕ್ಷಸಾಧನಂ ಶಾಸ್ತ್ರಾಣಾಂ ನಿರ್ಣಯಸ್ತ್ವೇಷಃ ತದನ್ಯನ್ಮೋಹನಾಯ ಚ॥........ಮಮಾಧಿಕ್ಯಂ ಚ ವಿಷ್ಣುತಃ ಅಭೇದಶ್ಚಾಸ್ಮದಾದೀನಾಂ ಮುಕ್ತಾನಾಂ ಹರಿಣಾ ತಥಾ ಇತ್ಯಾದಿಸರ್ವಂ ಮೋಹಾಯ ಕಥ್ಯತೇ ಪುತ್ರ ನಾನ್ಯಥಾ"—

ದಿಂದ ಬಳಲಿದ ಅವರು ಮಾಡಿದ ಪ್ರಲಾಪ ಸುಪ್ರಸಿದ್ಧವಾಗಿದೆ. ಹೀಗೆ ಭಾಗವತರುಗಳ ಸಂಖ್ಯೆ ಅಪರಿಮಿತವಾಗಿದೆ. ಅವರು ಮಾಡಿದ ಸ್ತೋತ್ರರೂಪಕೃತಿಯೇ ಭಾಗವತಾದಿ ಪುರಾಣಗಳು. ಈ ಭಾಗವತೋತ್ತಮರೆಲ್ಲ ಭಗವಂತನನ್ನು ಗಾಯನ, ಕೀರ್ತನ, ನರ್ತನಾದಿಗಳಿಂದ ಭಜನಮಾಡುತ್ತಿದ್ದರು. "ಸಂತತಂ ಚಿಂತಯಂತೋ ಮಾಂ ಯತಂತಶ್ಚ ದೃಢವ್ರತಾ । ನಮಸ್ಯಂತಶ್ಚ ಮಾಂ ಭಕ್ತ್ಯಾ ನಿತ್ಯಯುಕ್ತಾ-ಉಪಾಸತೇ ॥" ಅಂದರೆ ಹೀಗೆ ಭಜನೆ ಮಾಡುವವರೇ ಯೋಗಿಗಳೆಂದು ಕೃಷ್ಣ ಪರಮಾತ್ಮನು ಗೀತೆಯಲ್ಲಿ ವರ್ಣಿಸಿದ್ದಾನೆ.

ಪದ್ಮಪುರಾಣದಲ್ಲಿ ಭಾಗವತರೆಲ್ಲರೂ ಸೇರಿ ಶ್ರೀಹರಿಯ ಕೀರ್ತನ. ಗಾಯನ. ನರ್ತನಗಳನ್ನು ಮಾಡುತ್ತಿದ್ದ ಪರಿಯು ಬಹು ಮನೋಜ್ಞವಾಗಿ ವರ್ಣಿತವಾಗಿದೆ—

"ಪ್ರಹ್ಲಾದಸ್ತಾಳಧಾರೀ ತರಳಗತಿತಯಾ ಚೋದ್ಧವಃ ಕಾಂಸ್ಯಧಾರೀ ॥
ವೀಣಾಧಾರೀ ಸುರರ್ಷಿಃ ಸ್ವರಕುಶಲತಯಾ ರಾಗಕರ್ತಾರ್ಜುನೋಽಭೂತ್॥
ಇಂದ್ರೋ ವಾದೀನ್ಮೃದಂಗಂ ಜಯಜಯಸುಕರಾ ಕೀರ್ತಯಂತೇ ಕುಮಾರಾಃ।
ತತ್ರಾಗ್ರೇ ಭಾವಕರ್ತಾ ರಸರಚನತಯಾ ವ್ಯಾಸಪುತ್ರಃ ಶುಕೋಽಭೂತ್ ॥"

ಅಂದರೆ ಪ್ರಹ್ಲಾದ. ಉದ್ಧವ. ನಾರದ. ಅರ್ಜುನ. ಇಂದ್ರ. ದೇವಕುಮಾರರು ಮತ್ತು ಶ್ರೀಶುಕಾಚಾರ್ಯರೇ ಮೊದಲಾದ ಭಾಗವತೋತ್ತಮರೆಲ್ಲ ಒಟ್ಟಾಗಿಸೇರಿ ಶ್ರೀಹರಿಕೀರ್ತನೆ ಮಾಡುತ್ತಿದ್ದರಂತೆ !

ಕಲಿಯುಗದಲ್ಲಿ ಅವತರಿಸಿ ಶ್ರೀಹರಿತತ್ವರಹಸ್ಯವನ್ನು ಬೋಧಿಸಿ ಶ್ರೀಹರಿಯನ್ನು ವಿವಿಧರೀತಿಯಿಂದ ಸೇವಿಸಿ ಸ್ತುತಿಸಿ ಅವನ ಪರಮಾನುಗ್ರಹಕ್ಕೆ ಪಾತ್ರರೆನಿಸಿದ ವಾಯ್ವಂಶಸಂಭೂತರಾದ ಶ್ರೀಮನ್ಮಧ್ವಾಚಾರ್ಯರು ಬ್ರಹ್ಮದೇವರ ತರುವಾಯ ಶ್ರೇಷ್ಠ ಹರಿದಾಸರಲ್ಲಿ ಅಗ್ರಗಣ್ಯರು.ಅವರು ಮಾಡಿರುವ ಸ್ತೋತ್ರದಭಾವ ಬಹು ಗಂಭೀರವಾದುದು. ಶ್ರೀವಾಯುದೇವರ ಹನುಮ.ಭೀಮ. ಮಧ್ವ ಎಂಬ ಮೂರು ಅವತಾರಗಳೂ ಶ್ರೀಹರಿಯಸೇವೆಗಾಗಿಯೇ ಮಿಸಲು! ಅವರ ಜೀವನದ ಪ್ರತಿಕ್ಷಣವೂ ದೇಹದ ಪ್ರತಿನರವೂ ಹರಿನಾಮದಿಂದ ತುಂಬಿರುವುವು. ಜೀವೋತ್ತಮರಾದ ಅವರು ಪ್ರತಿಜೀವರಲ್ಲಿಯೂ ಇದ್ದು ಪ್ರತಿದಿನವೂ 21.600ಹಂಸಮಂತ್ರವನ್ನು ಜಪಮಾಡುವರು. ಅವರಿಗೆ ಏಳು ಕೋಟಿ ಮಹಾಮಂತ್ರಗಳ ಸಿದ್ಧಿಯಾಗಿರುವುವು. ಈ ಮಹನೀಯರ ನಡೆಯಲ್ಲಾ ಹರಿಸೇವೆ. ನುಡಿಯಲ್ಲಾ ಹರಿಸ್ತೋತ್ರವೇ. ಮಧುರ ಗಾಯನಕ್ಕೆ ಅನುಕೂಲವಾದ ಶ್ರೀಮಧ್ವಾಚಾರ್ಯರು ರಚಿಸಿದ "ದ್ವಾದಶ ಸ್ತೋತ್ರ"ವು "ಹರಿಗೀತೆ" ಎಂದು ವಿಖ್ಯಾತವಾಗಿದೆ. ಇದೇ ಇಂದಿನ ಕರ್ನಾಟಕ ಹರಿದಾಸಸಾಹಿತ್ಯಕ್ಕೆ ಪ್ರೇರಕಶಕ್ತಿ. ಕೇಂದ್ರಬಿಂದು ಎಂದು ಹೇಳಬಹುದು.

ಆಚಾರ್ಯ ಮಧ್ವರು ವೇದೋಪನಿಷತ್ ಪುರಾಣಾದಿಗಳು ಹಾಗು ಶ್ರೀಬಾದರಾಯಣರ ಬ್ರಹ್ಮಸೂತ್ರಗಳ ಹೃದಯವನ್ನು ಸುಜನರಿಗೆ ನೀಡಿ ಉದ್ಧರಿಸಲು

ರಚಿಸಿದ ವೇದಾಂತಶಾಸ್ತ್ರಗ್ರಂಥಗಳಲ್ಲಿ ತತ್ತ್ವನಿರ್ಣಯ. ಅನುವ್ಯಾಖ್ಯಾನ. ಋಗ್ಭಾಷ್ಯ ತಾತ್ಪರ್ಯನಿರ್ಣಯಾದಿ ಗ್ರಂಥಗಳಲ್ಲಿ ಅಷ್ಟೇ ಏಕೆ, ಕರ್ಮನಿರ್ಣಯಾದಿಗ್ರಂಥಗಳಲ್ಲಿ ಎಲ್ಲೆಲ್ಲಿಯೂ ಶ್ರೀಹರಿಯ ಸ್ತೋತ್ರ ಒಂದಿಲ್ಲೊಂದು ರೂಪದಿಂದ ಬಂದಿದೆ. ಕೆಲವೆಡೆ ಸುಳಿದ ಬಾಳೆಹಣ್ಣಿನಂತೆ ಸುಕರವಾಗಿ ಸಿಕ್ಕುವಂತಿದ್ದರೆ, ಕೆಲವುಕಡೆ ಕಠಿಣವಾದ ಚಿಪ್ಪಿನೊಳಗಿರುವ ಕೊಬ್ಬರಿಯಂತೆ ಅಡಗಿದೆ, ಹರಿಕೀರ್ತನೆ. ಹರ್ಯುತ್ಕರ್ಷ-ಸ್ತವ ! "ನಮಾಮಿ ನಿಖಿಲಾಧೀಶ ಕಿರೀಟಾಘೃಷ್ಟಪೀಠವತ್". ಎಂಬ ಹರಿಯ ಆಪಾದಮಸ್ತಕ ವರ್ಣನೆಯೂ. "ಕೇಶವಕೇಶವ ಶಾಸಕ ವಂದೇ". "ಮತ್ಸ್ಯಕರೂಪ ಲಯೋದಧಿ ವಿಹಾರಿನ್"ಮುಂತಾದ ಭಗವನ್ಮೂರ್ತಿ ವರ್ಣನೆಯೂ ಸಕಲಶಾಸ್ತ್ರಾರ್ಥ ಗರ್ಭಿತವಾಗಿಯೂ ಇದ್ದು ಅತ್ಯಂತ ಭಕ್ತಿಪರವೂ ಆಗಿದೆ. ಸಂಗೀತ ಶೈಲಿಯಲ್ಲಿ ರಚಿತವಾದ ಆಚಾರ್ಯರ "ದ್ವಾದಶಸ್ತೋತ್ರ"ವೇ ಅವರ ಅನುಯಾಯಿಗಳೂ, ಶಿಷ್ಯರೂ ಆದ ಶ್ರೀನರಹರಿತೀರ್ಥರೇ ಮೊದಲಾದ ಎಲ್ಲ ಕನ್ನಡ ಹರಿದಾಸರುಗಳಿಗೆ ಸ್ಫೂರ್ತಿಯಿತ್ತು ಅಸಂಖ್ಯ ಪದ ಪದ್ಯಸುಳಾದಿ ಉಗಾಭೋಗ ಮತ್ತು ಕನ್ನಡ ಕಾವ್ಯಗಳ ರಚನೆಗೆ ಕಾರಣವಾದುದರಿಂದ ಶ್ರೀಮದಾಚಾರ್ಯರೇ ಕನ್ನಡಹರಿದಾಸ ಪರಂಪರೆಯ ಅಧ್ವರ್ಯುಗಳೆಂದು ಧಾರಾಳವಾಗಿ ಹೇಳಬಹುದು.

ಶ್ರೀಮದಾಚಾರ್ಯರ ಸಮಸ್ತ ಗ್ರಂಥಗಳಿಗೆ ಟೀಕೆಗಳನ್ನು ರಚಿಸಿ "ಟೀಕಾಚಾರ್ಯ"ರೆಂದೇ ಪ್ರಸಿದ್ಧರಾದ ಇಂದ್ರಾಂಶ ಸಂಭೂತರೂ ವಾಟ್ಟಿಕಕುಲಶೇಖರರೂ ಆದ ಶ್ರೀಮಜ್ಜಯತೀರ್ಥಗುರುಪಾದರು ಹರಿದಾಸರ ಶ್ರೇಣಿಯಲ್ಲಿ ಅಗ್ರಮಾನ್ಯರು. ಇದಕ್ಕೆ ಹರಿಮಹಿಮಾಪ್ರತಿಪಾದಕಗಳಾದ ಅವರ ಗ್ರಂಥಗಳೇ ಸಾಕ್ಷಿ! ಆದ್ದರಿಂದಲೇ ಅವರು "ಶ್ರೀಮಧ್ವ ಕಲ್ಪವೃಕ್ಷಶ್ಚ ಜಯಾಚಾರ್ಯಸ್ತು ಧೇನವಃ । ಚಿಂತಾಮಣಿಸ್ತು ವ್ಯಾಸಾರ್ಯ ಮುನಿತ್ರಯಮುದಾಹೃತಮ್ ||[1] ಅಂದರೆ "ಶ್ರೀಮಧ್ವ-ಜಯಾರ್ಯ–ವ್ಯಾಸಾರ್ಯರೆಂಬ ಮುನಿತ್ರಯ"ರಲ್ಲಿ ದ್ವಿತೀಯರಾಗಿ ಪುರಾಣ ಪ್ರಸಿದ್ಧರಾಗಿದ್ದಾರೆ.

ಹರಿದಾಸರೆಂದರೆ ಯಾರು ? ಅವರ ಲಕ್ಷಣವೇನು ? ಎಂಬುದನ್ನು ಸಾಮಾನ್ಯವಾಗಿ ಹೀಗೆ ಹೇಳಬಹುದು. ಭಾಗವತಧರ್ಮಾವಲಂಬಿಗಳಾಗಿ ನಿರಂತರವೂ ಹರಿಜ್ಞಾನಾಸಕ್ತರಾಗಿ ಆ ಪರಮಾತ್ಮನ ಸತತ್ತ್ವಗಳನ್ನು ಬೋಧಿಸುತ್ತಾ ಸುಜೀವಿಗಳ(ಜನತೆಯ)ಉದ್ಧಾರ.ಕಲ್ಯಾಣಗಳೇ ಗುರಿಯಾಗುಳ್ಳವರು ಮತ್ತು ಸರ್ವವೂ ಶ್ರೀಹರಿಯದೆಂದರಿತು ನಿಷ್ಕಾಮಭಕ್ತಿಯಿಂದ ಭಗವಂತನನ್ನು ಆರಾಧಿಸುವವರು ಹಾಗೂ ಭಗವಂತನ ಸಾಕ್ಷಾತ್ಕಾರಪಡೆದ ಮಹನೀಯರೇ ಹರಿದಾಸರು. ಇಂಥ ಹರಿಶರಣರು ಎಲ್ಲ ಕಾಲದಲ್ಲಿಯೂ ಭಾರತಾದ್ಯಂತ ಎಲ್ಲ ಭಾಗಗಳಲ್ಲಿಯೂ ಆಗಿಹೋಗಿದ್ದಾರೆ.ಭಾರತದ

1. —ಶ್ರೀಮುಷ್ಣಮಾಹಾತ್ಮ್ಯ.

ಇತರ ವೈಷ್ಣವಸಂತರಕ್ಕಿಂತ ನಮ್ಮ ಕನ್ನಡ ಹರಿದಾಸರು ವೈಶಿಷ್ಟ್ಯಪೂರ್ಣರೆಂದು ಮುಂದಿನ ವಿವರಣೆಯಿಂದ ಸ್ಪಷ್ಟವಾಗುವುದು.

ಹರಿದಾಸ್ಯ, ಅವನ ಅನುಗ್ರಹಕ್ಕಾಗಿ ಸರ್ವಸ್ವವನ್ನೂ ತ್ಯಾಗಮಾಡುವುದು. ಹರಿಯ ಪ್ರಸಾದದಿಂದ ಸಂತೋಷ,ಅದು ಮಿಂತಿಮೀರಿದಲ್ಲಿ ಉದ್ರಿಕ್ತಸ್ಥಿತಿ,ಹರಿವಿರಹ ದಿಂದ ಬಳಲಿಕೆ, ಹರಿಭಕ್ತರಲ್ಲಿ ಭಕ್ತಿ, ಐಹಿಕ ಸುಖಗಳಲ್ಲಿ ಔದಾಸೀನ್ಯ, ಸದಾ ಹರಿ ವಿಚಾರ ಚಿಂತನ, ಹರಿಯನ್ನು ಒಲಿಸಿಕೊಳ್ಳಲು ಪ್ರೇಮ, ಸಖ್ಯ. ಪೈತೃಕವಾತ್ಸಲ್ಯ ಸೇವಕನದೈನ್ಯ, ಸಲಿಗೆಯ ಹುಸಿಮುನಿಸು-ಇತ್ಯಾದಿ ಧರ್ಮಗಳು ಎಲ್ಲ ಹರಿದಾಸ ರಲ್ಲೂ ಕಾಣಬಹುದಾದ ಸಾಮಾನ್ಯಧರ್ಮಗಳು. ಈಕ್ರಮದಲ್ಲಿ ಭಕ್ತಿಯನ್ನು ಮಾಡಿದ ಅನೇಕ ಸಂತರು ಹರಿದರ್ಶನವೆಂಬ ಸಿದ್ಧಿಯನ್ನು ಪಡೆದಿರುತ್ತಾರೆ, ತ್ಯಾಗರಾಜ, ತುಲಸೀದಾಸ, ತುಕಾರಾಮ-ಇವರಿಗೆ ದೇವರ ಸಾಕ್ಷಾತ್ಕಾರವಾಗಿರುವುದು ಅವರ ಚರಿತೆಯಿಂದ ಗೊತ್ತಾಗುವುದು. ಶಾಸ್ತ್ರವನ್ನು ವಿಚಾರಮಾಡಿದರೆ ಈಬಗೆಯ ಭಗವ ತ್ಸಾಕ್ಷಾತ್ಕಾರವೇ ಜೀವನದ ಮುಖ್ಯಧ್ಯೇಯವಲ್ಲವೆಂಬುದು ವ್ಯಕ್ತವಾಗುವುದು. ಭಗ ವಂತನು ರಾಮಕೃಷ್ಣಾದ್ಯವತಾರಗಳನ್ನು ತಾಳಿದಾಗ, ಕೆಲ ಸಾತ್ವಿಕಜೀವಿಗಳು ರಾಮ ಕೃಷ್ಣಾದಿರೂಪಗಳನ್ನು ನೋಡಿ ದೇವರೆಂಬ ಭಾವನೆಪಡೆದರೂ, ಆ ಭಾವನೆ ಬಹು ಕಾಲನಿಲ್ಲದೆ ಮತ್ತೆ ಅವರಿಗೆ ಅಜ್ಞಾನಾವೃತವಾದುದು ಕಂಡುಬಂದಿದೆ.ಹಾಗೆ ಭಕ್ತನಿಗೆ ಬಾಹ್ಯರೂಪದರ್ಶನವಾದರೆ ಭಗವನ್ನಿಷ್ಠತೆ ಏಕಪ್ರಕಾರವಾಗಿರುವುದಿಲ್ಲ. ಆದ್ದ ರಿಂದಲೇ "ಯೋ ವೇದ ನಿಹಿತಂ ಗುಹಾಯಾಮ್ ಪರಮೇ ವ್ಯೋಮನ್" ಅಂದರೆ ಹೃದಯಗುಹೆಯಲ್ಲಿ ತನ್ನ (ಜೀವನ)ಸ್ವರೂಪದ ಬಿಂಬದರ್ಶನಮಾಡಿದವನೇ ನಿಜ ವಾದ ಯೋಗಿ, ಸಿದ್ಧನೆಂದು ಶ್ರುತಿಗಳು ಸಾರುವವು. ಹೃದಯಗುಹೆಯಲ್ಲಿನ ಪರ ಮಾತ್ಮವರ್ಣನೆಯು ವಿಸ್ತಾರವಾಗಿ "ನಾರಾಯಣೋಪನಿಷತ್ತಿ"ನಲ್ಲಿಯೂ ಇನ್ನಿತರ ಉಪನಿಷತ್ತುಗಳಲ್ಲಿಯೂ ಬಂದಿದೆ. ಈ ಭಗವಂತನ ದರ್ಶನವೇ ಜೀವನ ಮುಕ್ತಿಯು. ಇಂತಹ ಭಗವತ್ಸಾಕ್ಷಾತ್ಕಾರ ಪಡೆದವನಿಗೆ ಅಪರೋಕ್ಷಜ್ಞಾನಿ ಎಂದು ಹೆಸರು. "ಓಂ ಸ ಸಾಮಾನ್ಯಾದಪ್ಯುಪಲಬ್ಧೇರ್ಮೃತ್ಯುವನ್ನ ಲೋಕಾಪತ್ತಿಃ ಓಂ" ಎಂದು ಬಾದರಾಯಣರು ಬ್ರಹ್ಮಸೂತ್ರದಲ್ಲಿಯೂ ಸ್ವಯೋಗ್ಯ ಬಿಂಬದರ್ಶನದಿಂದಲೇ ಮೋಕ್ಷ, ಅನ್ಯಥಾ ಇಲ್ಲವೆಂದು ಹೇಳಿದ್ದಾರೆ. ಶ್ರೀಮದಾಚಾರ್ಯರು ಇದಕ್ಕೆ "ನಾರಾಯಣತಂತ್ರ, ಅಧ್ಯಾತ್ಮಪ್ರಕಾಶ" ಪ್ರಮಾಣಗಳನ್ನು ಕೊಟ್ಟು ಸಮರ್ಥಿಸಿ ದ್ದಾರೆ. ಆಚಾರ್ಯರ ಅನುಯಾಯಿಗಳೆಲ್ಲರೂ ಅವರ ಈ ಅಭಿಪ್ರಾಯವನ್ನೇ ಎತ್ತಿ ಹಿಡಿದಿದ್ದಾರೆ. ಇತರ ದರ್ಶನಕಾರರು ಈಬಗೆಯ ಶ್ರೀಹರಿಬಿಂಬಾಪರೋಕ್ಷವಿಚಾರ ಹೇಳಿದಂತೆ ಕಂಡುಬರುವುದಿಲ್ಲ. ಶ್ರೀಮದಾಚಾರ್ಯರೊಬ್ಬರೇ ಈ ವಿಚಾರವನ್ನು ಸ್ಪಷ್ಟೀಕರಿಸಿದ್ದಾರೆ. ಅದರಂತೆ ಭಾರತದ ಇತರ ವೈಷ್ಣವಸಂತರಲ್ಲಿ, ಇತರರ ಜೀವನ ದಲ್ಲಿ ಈರೀತಿಯ ಬಿಂಬಾಪರೋಕ್ಷವಾದುದರ ನಿದರ್ಶನವಿಲ್ಲ. ಇತರ ಸಂತರ ಉಕ್ತಿ

ಯಲ್ಲಿಯೂ ಇದರ ಕುರುಹು ಕಂಡುಬರುವುದಿಲ್ಲ. ಕನ್ನಡಹರಿದಾಸರ ಚರಿತ್ರೆಯಲ್ಲಿ ಇಂತು ಬಿಂಬಾಪರೋಕ್ಷವಾದ ಸಂಗತಿಯು ಬಹಳ ಮುಖ್ಯವಾಗಿ ಕಂಡುಬರುತ್ತದೆ. ಅವರ ಕೃತಿಗಳಲ್ಲಿಯೂ ಇದನ್ನು ನಾವು ವಿಶೇಷವಾಗಿ ಕಾಣಬಹುದು.

"ಅಂತರಂಗದಲಿ ಹರಿಯ ಕಾಣದವ ಹುಟ್ಟುಕುರುಡನೋ" "ಎನ್ನ ಬಿಂಬ ಮೂರುತಿಯ ಪೂಜಿಪೆ ನಾನು" ಎಂಬ ಶ್ರೀಚಂದ್ರಿಕಾರಾಯರ ಕೃತಿಗಳು, ಬಿಂಬೋಪಾಸನೆಯನ್ನು ಮಾಡುವ ವಿಧಾನವನ್ನು ತೋರಿಸುವ ಶ್ರೀಪುರಂದರದಾಸರ "ಕಣ್ಣಿನೊಳಗೆ ನೋಡೋ ಶ್ರೀಹರಿಯ । ಒಳಗಣ್ಣಿನೊಳಗೆ ನೋಡೋ ಮುಜ್ಜಗದೊಡೆಯನಾ", ಮತ್ತು ಹೃದಯಕಮಲವಿವರ ಮಾನಸಪೂಜೆಯನ್ನು ತಿಳಿಸುವ "ಎಲ್ಲಿ ವಿರಾಟಪೂಜೇ ಹೃದಯಕಮಲಅಷ್ಟದಳ ಹೃಷೀಕೇಶ ನಾರಾಯಣಾ ಹಂಸಗಮನ" ಮತ್ತು "ಪಿಂಡಾಂಡದೊಳಗಿನ ಗಂಡನಕಾಣದೆ ಮಂಡೇರಾದರು ಪಂಡಿತರು" ಎಂಬ ಕೀರ್ತನೆಗಳು: ಅಪರೋಕ್ಷವಾದ ಪ್ರತಿಧ್ವನಿಯಾದ ವಿಜಯದಾಸರ "ಅಂತರಂಗದ ಕದವು ತೆರೆಯಿತಿಂದು" ಎಂಬಪದವೂ: ಸ್ವಯಂ ಅನುಭವಪಡೆದು ಬಿಂಬೋಪಾಸನ ಯೋಗವನ್ನು ಅತಿಸ್ಪಷ್ಟವಾಗಿ ಹೇಳುವಗೋಪಾಲದಾಸರ"ಧ್ಯಾನವನೆಮಾಡುಬಿಂಬ ಮೂರುತಿಯ"ಎಂಬಕೃತಿಯೂ;ಪರಮಜ್ಞಾನಿಗಳಾದ ಜಗನ್ನಾಥದಾಸರ "ಅಷ್ಟದಳ ಸದ್ಧೃದಯಕಮಲಾಧಿಷ್ಟಿತನು ತಾನಾಗಿ" (ಹರಿಕಥಾಮೃತಸಾರ)-ಎಂಬ ಪದಗಳು ಕನ್ನಡಹರಿದಾಸರಿಗೆ ಬಿಂಬಾಪರೋಕ್ಷಾನುಭವ ಉಂಟೆಂದೂ,ಅವರೆಲ್ಲರೂ ಅಪರೋಕ್ಷ ಜ್ಞಾನಿಗಳೆಂಬುದನ್ನು ಸ್ಪಷ್ಟವಾಗಿ ತಿಳಿಸುವುವು.

ಮೇಲಿನ ವಿವೇಚನೆಯಿಂದ ಇಂಥ ಅನುಭವು ಸಂಪೂರ್ಣವಾಗಿ ಸತ್ಯ ಹಾಗೂ ಜೀವನದಲ್ಲಿ ಪರಮಾತ್ಮನ ಅನುಗ್ರಹವಿಶೇಷದಿಂದ ಸಾಧಿಸಲು ಸಾಧ್ಯವೆಂಬುದು ಸ್ಪಷ್ಟವಾಗುವುದು. ಶಾಸ್ತ್ರಾನುಸಾರಿಯಾದ ಈ ಸಾಧನಕ್ರಮದಲ್ಲಿ ಮುಂದುವರೆದ ಜ್ಞಾನಿಗಳಲ್ಲದೆ ಇದೇಮಾರ್ಗದಲ್ಲಿ ಮುಂದುವರೆದ ಕನ್ನಡಹರಿದಾಸರು ಈ ಪರಂಪರೆಯನ್ನು ಅನುಸರಿಸುವುದು ಸತ್ಯಸಂಗತಿ. ಇಂಥ ಒಂದು ಅಪೂರ್ವವಾದ ಸಿದ್ಧಿಯನ್ನು ಪಡೆದವರೇ ಆತ್ಮಾರಾಮರು:ಅಂತರಾರಾಮರು ಮತ್ತು ಪರಮಸಿದ್ಧರು. ಆನಂದ ಸ್ವರೂಪನಾದ ಆ ಪರಮಾತ್ಮನನ್ನು ಹೃದಯಗುಹೆಯಲ್ಲಿ ದರ್ಶನಮಾಡುವುದರಿಂದ ಅಜ್ಞಾನರೂಪವಾದ ರಾಗ, ದ್ವೇಷ, ದುಃಖಾದಿ ಸಮಸ್ತವೂ ದೂರವಾಗುವವು. ಲಿಂಗದೇಹಾದಿ ಬಾಧಗಳು ಸಡಲುವವು ಎಂದು "ಭಿದ್ಯತೇ ಹೃದಯಗ್ರಂಥಿಃ ಛಿದ್ಯಂತೇ ಸರ್ವಸಂಶಯಾಃ । ಕ್ಷೀಯಂತೇ ಚಾಸ್ಯ ಕರ್ಮಾಣಿ ತಸ್ಮಿನ್‌ದೃಷ್ಟೇ ಪರಾವರೇ॥"ಎಂಬ ಮುಂಡಕೋಪನಿಷತ್ತು ಸಾರುವುದು. ಮತ್ತು ಸಂಚಿತಾಗಾಮಿಕರ್ಮಗಳ ನಾಶವಾಗುವವು ಎಂದೂ ತಿಳಿಸುವುದು. ಇಂಥ ಭಗವದ್ದರ್ಶನ ಪಡೆದವನು ಅಪರೋಕ್ಷಜ್ಞಾನಿಯೆನಿಸುವನು.ನಮ್ಮಕನ್ನಡಹರಿದಾಸರು ಈ ಗುಂಪಿಗೆಸೇರಿದವರು.

ಹರಿಯೇ ಸ್ವತಂತ್ರಕರ್ತಾ, ತಾನು ಅವನ ಸೇವಕನೆಂಬ ದೃಢಜ್ಞಾನದಿಂದ

ಅಪರೋಕ್ಷಜ್ಞಾನಿಯು ದುರಭಿಮಾನವನ್ನು ಬಿಡುವನು. ಆಭಗವದ್ಧ್ಯಾನದಲ್ಲಿ ತಲ್ಲೀನನಾಗಿ ಅಸಂಪ್ರಜ್ಞಾತ ಸಮಾಧಿ ಸ್ಥಿತಿಯನ್ನು ಹೊಂದುವನು. ಲೋಕಜೀವನಕ್ಕೆ ಅವನ ಜೀವನ ವಿರುದ್ಧವೆನಿಸಿ ದೇವರಿಗಾಗಿ ಅವನ ಜೀವನ ಮೀಸಲಾಗುತ್ತದೆ. ಇದಕ್ಕೆ ಅಂಕಿತವೆಂದು ಹೆಸರು. ನಮ್ಮ ಕನ್ನಡಹರಿದಾಸರಲ್ಲಿ ಅಂಕಿತಕ್ಕೆ ಬಹಳ ಪ್ರಾಮುಖ್ಯವಿದೆ. ತನ್ನ ಮೊದಲಿನ ಜೀವನವನ್ನು ಮರೆತು ಹೊಸ ಜೀವನಪಡೆದು ಸಾಧನಮಾಡಿಕೊಳ್ಳಲು ಉದ್ಧಾರಕಗುರುಗಳಿಂದ ಉಪದೇಶಪಡೆದು ತನಗಿಷ್ಟವಾದ ಒಂದು ಭಗವಂತನ ನಾಮವನ್ನು ಗುರುಗಳಿಂದ ಅಂಕಿತವಾಗಿ ಪಡೆಯುವುದು ಮುಖ್ಯ. ಮುಂದೆ ಆ ಭಗವನ್ನಾಮ (ಅಂಕಿತ)ದಿಂದಲೇ ಅವರು ಪ್ರಸಿದ್ಧರಾಗಿ ಸತತವಾಗಿ ಜ್ಞಾನಸಾಧನೆ, ಧ್ಯಾನ-ಉಪಾಸನಾದಿಗಳಿಂದ ಹೃದಯಗುಹೆಯಲ್ಲಿ ಬಿಂಬರೂಪೀ ಪರಮಾತ್ಮನ ದರ್ಶನಪಡೆದು ತಮ್ಮ ಸರ್ವಸ್ವವನ್ನೂ ಆ ಭಗವಂತನಿಗರ್ಪಿಸಿ ಭಾಗವತ ಧರ್ಮನಿಷ್ಠರಾಗಿ ಆ ಧರ್ಮಪ್ರಸಾರಕರಾಗಿ ಬಾಳುವುದು ಕನ್ನಡಹರಿದಾಸರ ಮತ್ತೊಂದು ವೈಶಿಷ್ಟ್ಯ. ಹೀಗೆ ಅಂಕಿತಪಡೆದು ಅಪರೋಕ್ಷಜ್ಞಾನಿಗಳಾಗಿ ಲೋಕೋಪಕಾರಮಾಡಿದವರೇ ಶ್ರೀಪುರಂದರ, ವಿಜಯ, ಗೋಪಾಲ, ಜಗನ್ನಾಥಾದಿ ಕನ್ನಡಹರಿದಾಸರುಗಳು. ಅವರ ಚರಿತ್ರೆಗಳಲ್ಲಿ ಇಂಥ ಅನುಭವಪಡೆದಿರುವುದಕ್ಕೆ ಹೇರಳ ದೃಷ್ಟಾಂತಗಳಿವೆ. ಅವರು ತಾವು ಅಪರೋಕ್ಷಜ್ಞಾನಿಗಳೆಂಬುದನ್ನು ತಮ್ಮ ನಡೆ ನುಡಿಗಳಲ್ಲಿ ಸ್ಪಷ್ಟವಾಗಿ ತೋರಿಸಿದ್ದಾರೆ. ಅಂಕಿತ, ಅಪರೋಕ್ಷಜ್ಞಾನ ಇವೇ ಇತರ ವೈಷ್ಣವಸಂತರಿಗೂ ನಮ್ಮ ಕನ್ನಡಹರಿದಾಸರಿಗೂ ಇರುವ ವ್ಯತ್ಯಾಸ. ಆದ್ದರಿಂದಲೇ ಇವರು ಇತರ ವೈಷ್ಣವಸಂತರಿಗಿಂತ ಹಿರಿಯಶ್ರೇಣಿಯಲ್ಲಿದ್ದಾರೆ. ಈಗ ಭಾಗವತ ಧರ್ಮಪ್ರಸಾರ ಮತ್ತು ಹರಿದಾಸಸಾಹಿತ್ಯದ ಉಗಮಾದಿಗಳ ಬಗೆಗೆ ಸ್ವಲ್ಪ ವಿಚಾರಮಾಡುವುದು ಅವಶ್ಯವಾಗಿದೆ.

ಜಗತ್ತು ಸೃಷ್ಟವಾದಂದಿನಿಂದ ಭಾಗವತಧರ್ಮಪ್ರಸಾರವು ಅವ್ಯಾಹತವಾಗಿ ನಡೆದುಬಂದಿದೆ. ಹಿಂದೆಯೇ ನಿರೂಪಿಸಿದಂತೆ ಚತುರಾನನಬ್ರಹ್ಮದೇವರೇ ಇದಕ್ಕೆ ಆದಿಪುರುಷರು. ಅವರ ಪುತ್ರರಾದ ನಾರದರು ಭಾಗವತಕ್ಕೆ ಕಾರಣಪುರುಷರಾದುದು ಮಾತ್ರವಲ್ಲದೆ ನಾರಾಯಣನ ನಾಮದ ಬೀಜವನ್ನು ಧರೆಯೊಳಗೆ ಬಿತ್ತಿದರು. ಈ ಭಾಗವತರ ಶ್ರೇಣಿಯಲ್ಲಿ ಪ್ರಹ್ಲಾದ, ಧ್ರುವ, ಕುಚೇಲ ಅಂಬರೀಷ, ರುಕ್ಮಾಂಗದಾದಿಗಳೆಲ್ಲರಿಗೂ ನಾರದರೇ ಗುರುಗಳೆಂದು ಹೇಳಬಹುದು. ಮುಖ್ಯವಾಗಿ ನಾರದರು ಮತ್ತು ಪ್ರಹ್ಲಾದರಾಜರು ಭಾಗವತಧರ್ಮಪ್ರಚಾರಕ್ಕೆ ಬದ್ಧಕಂಕಣರಾಗಿ ನಿಂತರು. ಇವರಿಬ್ಬರೇ ಮತ್ತೆ ಭೂಲೋಕದಲ್ಲಿ ಅವತರಿಸಿ ಭಾಗವತಧರ್ಮವನ್ನು ವಿಶೇಷವಾಗಿ ಪ್ರಸಾರಮಾಡಿದರು. ಕರ್ನಾಟಕ ಹರಿದಾಸಸಾಹಿತ್ಯಕ್ಕೆ ಜೀವಕಳೆ ಬಂದುದು ಪ್ರಹ್ಲಾದಾವತಾರಿಗಳಾದ ಶ್ರೀವ್ಯಾಸರಾಜ-ರಾಘವೇಂದ್ರರು ಮತ್ತು ನಾರದಾಂಶ ಸಂಭೂತರಾದ ಶ್ರೀಪುರಂದರದಾಸರಿಂದ ! ಇಂದಿಗೂ ಕನ್ನಡಹರಿದಾಸರೆಂದರೆ

ಪುರಂದರದಾಸರೆಂಬಭಾವನೆ ಎಲ್ಲಿಡೆ ಮೂಡಿದೆ. ಪ್ರಹ್ಲಾದರು ನಾರದರ ಶಿಷ್ಯರಾದರೂ ಪುರಂದರದಾಸರಿಗೆ ವ್ಯಾಸರಾಜರು ಗುರುಗಳು.

ಶ್ರೀವ್ಯಾಸರಾಜರ ಕಾಲದಲ್ಲಿ ಉಚ್ಛ್ರಾಯಸ್ಥಿತಿಗೆ ಬಂದ ದಾಸಸಾಹಿತ್ಯ ಇವರಿಗಿಂತ ಎರಡುಶತಮಾನ ಮೊದಲೇ ಆರಂಭವಾಯಿತು. ಕನ್ನಡ ಹರಿದಾಸ ಸಾಹಿತ್ಯಕ್ಕೆ ಮಧ್ವಮತವೇ ಜನಕಸ್ಥಾನೀಯವು. ಹಿಂದೆ ಹೇಳಿದಂತೆ ಶ್ರೀಮಧ್ವಾಚಾರ್ಯರಿಂದ ಸ್ಫೂರ್ತಿಪಡೆದ, ಅವರ ಸಾಕ್ಷಾತ್‌ಶಿಷ್ಯರಾದ ಶ್ರೀನರಹರಿತೀರ್ಥರೇ ಕನ್ನಡಹರಿದಾಸ ಸಾಹಿತ್ಯಪ್ರವರ್ತಕರು ಮತ್ತು ಮೊಟ್ಟಮೊದಲು ಕನ್ನಡಪದಗಳನ್ನು ರಚಿಸಿದವರು.

ಶ್ರೀ ಬೇಲೂರು ಕೇಶವದಾಸರು "ಅಚಲಾನಂದದಾಸರೆಂಬ ಭಾಗವತ ಸಂಪ್ರದಾಯದ ಭಕ್ತರು ಕ್ರಿ. ಶ. ಒಂಭತ್ತನೇ ಶತಮಾನದಲ್ಲಿಯೇ, ಅಂದರೆ ಆಚಾರ್ಯರಕಿಂತ ಮೂರುಶತಮಾನಗಳ ಮುಂಚೆಯೇ ಕನ್ನಡದಲ್ಲಿ ಪದಗಳನ್ನು ರಚಿಸಿದ್ದು, ಅವರಿಂದಲೇ ಕನ್ನಡಹರಿದಾಸಸಾಹಿತ್ಯ ಪ್ರಾರಂಭವಾಯಿತೇ ವಿನ ನರಹರಿತೀರ್ಥರಿಂದಲ್ಲ!" ಎಂದು ಅಭಿಪ್ರಾಯಪಟ್ಟಿದ್ದಾರೆ. ಇದು ಸಮಂಜಸವಲ್ಲ. ಕೇಶವದಾಸರು ತಮ್ಮ ಅಭಿಪ್ರಾಯಕ್ಕೆ ಪ್ರಮಾಣವಾಗಿ ಅಚಲಾನಂದರ ಪದದ ಪುಸ್ತಕದಲ್ಲಿ "ಕಾಶೀತಿಸಂಖ್ಯಾ" ಎಂಬ ಉಲ್ಲೇಖ ಉದಾಹರಿಸಿದ್ದಾರೆ. ಆದರೆ ಕಾಶೀತಿಸಂಖ್ಯೆ ಎಂಬುದು ಅವರು ಭ್ರಮಿಸಿರುವಂತೆ ಶಾ.ಶಕೆ ೮೦೧ ಎಂಬುದನ್ನು ಸೂಚಿಸುವುದಿಲ್ಲ. ಪ್ರತ್ಯುತ ಶಾಲಿವಾಹನಶಕೆ ೧೨೮೧ ವಿಳಂಬಿ ಸಂವತ್ಸರವನ್ನು ಸೂಚಿಸುವುದು. ಕೇಶವದಾಸರ ಅಭಿಪ್ರಾಯಕ್ಕೆ ಅಚಲಾನಂದದಾಸರ ಪದಗಳೇ ವಿರುದ್ಧವಾಗಿದ್ದು ಅವು ಅವರು ಶ್ರೀಮಧ್ವಾಚಾರ್ಯರ ತರುವಾಯ ಬಂದವರೆಂಬುದನ್ನುಸ್ಪಷ್ಟಪಡಿಸುವುದು! ಆದ್ದರಿಂದ ಅಚಲಾನಂದದಾಸರು ಶ್ರೀಮದಾಚಾರ್ಯರ ತರುವಾಯ ಬಂದವರು, ಮತ್ತು ಶ್ರೀನರಹರಿತೀರ್ಥರ ಸಮಕಾಲಿಕರೆಂದು ಹೇಳಬಹುದು. ಕಿನ್ನರಿ ವಿದ್ವಾನ್ ಹುಲಗೂರು ಕೃಷ್ಣಾಚಾರ್ಯರ ಪ್ರಾಚೀನಕೀರ್ತನಸಂಗ್ರಹ ಪುಸ್ತಕದಲ್ಲಿ ಶ್ರೀಅಚಲಾನಂದದಾಸರು ರಚಿಸಿದ ಒಂದು ಪದವಿದೆ. ಅದು ಹೀಗಿದೆ—

"ಕೇಳೋ ಜೀವನವೇ ನೀ ಮಧ್ವಮತವನನುಸರಿಸಿ ।
ಶ್ರೀಲೋಲನಂಘ್ರಿಗಳ ನೆನೆದು ಸುಖಿಸೋ ॥"

ಅಚಲಾನಂದದಾಸರು ಆಚಾರ್ಯರಕಿಂತ 300 ವರ್ಷ ಹಿಂದಿನವರಾಗಿದ್ದರೆ ಅವರು ತಮ್ಮ ಪದದಲ್ಲಿ "ಶ್ರೀಮಧ್ವಮತವನನುಸರಿಸಿ" ಎಂದು ಹೇಳಲು ಸಾಧ್ಯವಿಲ್ಲವಷ್ಟೇ? ಆದ್ದರಿಂದ ಅಚಲಾನಂದದಾಸರು ಮಾಧ್ವರೇ ಹೊರತು ಮಾಧ್ವಸಂಪ್ರದಾಯದವರಲ್ಲ. ಮತ್ತು ಶ್ರೀನರಹರಿತೀರ್ಥರ ತರುವಾಯ ಬಂದವರು ಅಥವಾ ಸಮಕಾಲಿಕರೆಂದು ಸಿದ್ಧವಾಗುವುದು.[1] ನರಹರಿತೀರ್ಥರಾದಮೇಲೆ ಆರಾಧ್ಯರೆಂಬ ಅರವತ್ತು

---

1. ಹುಲಗೂರು ಕೃಷ್ಣಾಚಾರ್ಯ ವಿರಚಿತ ಕರ್ನಾಟಕ ಸಂಗೀತವೂ ದಾಸಕೂಟವೂ" P| 91

ಶ್ರೀವಸಂತರು ಪಂಡರಪುರಕ್ಕೆ ಹೋಗಿ ಮಧ್ವಮತಾವಲಂಬಿಗಳಾದ ಐತಿಹ್ಯವಿದೆ. ಅಪರೋಲ್ಲಬ್ಬರು"ಮಂಗನ ಕಿತ್ತಂತಾಯಿತು ಜನ್ಮವು। ಲಿಂಗವ ಕಳಕೊಂಡು ಗಂಗೆಯ ತೀರದಿ।....ಅದ್ವೈತದ್ವಿಜಾಚಾರ್ಯನಾಗಿರೆ ಉದ್ಧರಿಸಿದೆ, ಮಧ್ವಮತದವನೆನಿಸಿ" ಎಂದುಹಾಡಿದ್ದಾರೆ. ಇವರೇ ಮುಂದೆ ಆದ್ಯರೆಂದು ಪ್ರಸಿದ್ಧರಾದರೆಂದೂ, ಅಚಲಾನಂದದಾಸರು ಇವರಶ್ಲೊಬ್ಬರೆಂದು ದಾಸಕೂಟದಲ್ಲಿ ಹೇಳುವ ಪರಿಪಾಟ ಇದೆ. ಇದರಿಂದ ಹರಿದಾಸಪಂಥದ ಆದ್ಯಪ್ರವರ್ತಕರು, ಮತ್ತು ಪ್ರಥಮಕೃತಿಕಾರರು ಶ್ರೀನರಹರಿತೀರ್ಥರೆಂದು ಸಿದ್ಧವಾಗುವುದು.

ಶ್ರೀನರಹರಿತೀರ್ಥರ ಮೊದಲ ಹೆಸರು ಸ್ವಾಮಿ ಶಾಸ್ತ್ರಿಗಳು. ಇವರು ಕಳಿಂಗ ರಾಜ್ಯದ ಮಂತ್ರಿಗಳಾಗಿದ್ದವರು, ಅದ್ವೈತಮತದ ಪ್ರಕಾಂಡ ಪಂಡಿತರು ಅಚ್ಚ ಕನ್ನಡಿಗರು. ಇವರು ಶ್ರೀ ಮಧ್ವಾಚಾರ್ಯರೊಡನೆ ವಾದಮಾಡಿ ಪರಾಜಿತರಾದ ಮೇಲೆ ಅವರ ತೇಜಸ್ಸು ವಿದ್ಯಾದಿಗಳಿಗೆ ಮನಸೋತು ಅವರಿಂದ ಮಾಧ್ವದೀಕ್ಷೆ ಸ್ವೀಕರಿಸಿದ್ದು ಮಾತ್ರವಲ್ಲದೆ, ಸನ್ಯಾಸಾಶ್ರಮವನ್ನು ಸ್ವೀಕರಿಸಿ "ನರಹರಿತೀರ್ಥ"ರೆಂಬ ಹೆಸರಿನಿಂದ ಆಚಾರ್ಯರಾಯರ ಶಿಷ್ಯರಾದರು. ಆಚಾರ್ಯರ ನಾಲ್ಕುಜನ ಪ್ರಮುಖ ಶಿಷ್ಯರಲ್ಲಿ ಇವರು ಎರಡನೆಯವರು. ಶ್ರೀಮದಾಚಾರ್ಯರ ತರುವಾಯ ಅವರ ಆಜ್ಞೆಯಂತೆ ಪದ್ಮನಾಭತೀರ್ಥರ ತರುವಾಯ ಆಚಾರ್ಯರ ವೇದಾಂತ ಸಾಮ್ರಾಜ್ಯವನ್ನಾಳಿ ಪ್ರಖ್ಯಾತರಾದವರು. ನರಹರಿತೀರ್ಥರು ಗುರುಗಳಾದ ಮಧ್ವಾಚಾರ್ಯರ ಅಪ್ಪಣೆಯಂತೆ ಚತುರ್ಯುಗ ಮೂರ್ತಿಯಾದ ಶ್ರೀಬ್ರಹ್ಮಕರಾರ್ಚಿತ ಶ್ರೀಮೂಲ ರಾಮದೇವರನ್ನು ತರಲು ಕಳಿಂಗರಾಜ್ಯಕ್ಕೆ ಹೋಗಿ ಅಲ್ಲಿ ರಾಜನು ಮೃತನಾಗಿ ರಾಣಿಯುಗರ್ಭವತಿಯಾಗಿದ್ದುದರಿಂದ ಅವರೆಲ್ಲರಪ್ರಾರ್ಥನೆಯಂತೆ ಹನ್ನೆರಡುವರ್ಷ ರಾಜ್ಯಭಾರ ನಿರ್ವಹಿಸಿ ಪ್ರಾಪ್ತ ವಯಸ್ಕನಾದ ರಾಜಪುತ್ರನಿಗೆ ಪಟ್ಟಕಟ್ಟಿ 'ಗಜಪತಿ ಭಂಡಾರ' ದಲ್ಲಿದ್ದ ಶ್ರೀಮೂಲ ರಾಮದೇವರನ್ನು ತಂದು ಆಚಾರ್ಯರಿಗೆ ಸಮರ್ಪಿಸಿದರು. ಆಚಾರ್ಯರು 81 ದಿನ ಅದನ್ನು ಪೂಜಿಸಿ ಈ ಪ್ರತಿಮೆಯನ್ನು ತಮ್ಮ ಮಹಾ ಸಂಸ್ಥಾನದ ಆರಾಧ್ಯ ದೇವರನ್ನಾಗಿ ಪೂಜಿಸುತ್ತಾ ಬರುವಂತೆ ಶ್ರೀಪದ್ಮನಾಭ ತೀರ್ಥಾದಿಗಳಿಗೆ ಆಜ್ಞಾಪಿಸಿದರು. ಶ್ರೀ ಪದ್ಮನಾಭ–ನರಹರಿ–ಮಾಧವಾಕ್ಷೋಭ್ಯ ತೀರ್ಥರು ಶ್ರೀ ಮೂಲರಾಮನನ್ನರ್ಚಿಸಿ ಮುಂದೆ ಟೀಕಾರಾಯರು-ಅರ್ಚಿಸಿದರು. ಅವರ ಮಹಾ ಸಂಸ್ಥಾನವಾದ ಶ್ರೀರಾಘವೇಂದ್ರಸ್ವಾಮಿಗಳ ಮಠದಲ್ಲಿ ಶ್ರೀಮೂಲ ರಾಮನು ಈಗ ಪೂಜೆಗೊಳ್ಳುತ್ತಿದ್ದಾನೆ. ತಾವು ಶ್ರೀ ಮೂಲರಾಮನನ್ನು ತಂದ ಸವಿನೆನಪಿಗಾಗಿ ನರಹರಿತೀರ್ಥರು "ರಘುಪತಿ" ಎಂಬ ಅಂಕಿತದಿಂದ ಕನ್ನಡದಲ್ಲಿ ಪದಗಳನ್ನು ರಚಿಸಲಾರಂಭಿಸಿ ಕನ್ನಡ ಹರಿದಾಸ ಸಾಹಿತ್ಯದ ಆಚಾರ್ಯರೆನಿಸಿ ವಿಶ್ವ ಮಾನ್ಯರಾದರು, ಇವರು ನೂರಾರು ಕನ್ನಡ ಕೃತಿಗಳನ್ನು ರಚಿಸಿದ್ದು ಈಗ ಕೆಲವು ಮಾತ್ರ ಉಪಲಬ್ಧವಾಗಿವೆ.

"ಎಂತು ಮರುಳಾದೆ ನಾನೆಂತು ಮರುಳಾ ॥ ಪ ॥

..............

ಸುಜನವಂದಿತನಾದ ನರಹರಿಯ ।

ಭಜಿಸು ಶ್ರೀಶ ಶ್ರೀರಘುಪತಿಯ ॥ ೩ ॥

ಎಂಬ ಅವರ ಈ ಕನ್ನಡ ಕೃತಿಯು ಬಹು ಹೃದಯಂಗಮವಾಗಿದೆ. ಈ ಪದದಲ್ಲಿ ಬಳಲುತ್ತಿರುವ ಅಜ್ಞಾನಿ ಜೀವರುಗಳ ಸ್ಥಿತಿ, ದುಷ್ಕರ್ಮದಿಂದ ಅವರಲ್ಲಿ ಹುಟ್ಟುವ ಬುದ್ಧಿ, ಅದರಂತೆ ಪ್ರವೃತ್ತಿ, ಅದಕ್ಕೆ ವಿರೋಧವಾದ ನಿಜವಾದ ಧರ್ಮ ಇವೆರಡು ಒಂದರ ಮಗ್ಗುಲಲ್ಲೊಂದು ತೋರಿಸಲ್ಪಟ್ಟು ಅವುಗಳಿಗಿರುವ ಅಂತರ, ಮಹದ್ವಿರೋಧ ಬಹು ಹೃದಯಂಗಮವಾಗಿ ಚಿತ್ರಿಸಲ್ಪಟ್ಟಿದೆ. ಇದರಿಂದಲೇ ನರಹರಿತೀರ್ಥರು ಎಂತಹ ಪಕ್ವವಾದ ಹರಿದಾಸರೆಂಬುದು ವ್ಯಕ್ತವಾಗುವುದು. ಇದರಂತೆ ಇವರು ರಚಿಸಿರುವ "ಹರಿಯೇ ಇದು ಸರಿಯೇ", "ತಿಳಿಕೋ ನಿನ್ನೊಳು ನೀನೇ" ಎಂಬ ಪದಗಳೂ ಭಾವಪೂರ್ಣವಾಗಿವೆ.

ಶ್ರೀ ನರಹರಿತೀರ್ಥರ ಆ ನಂತರ ಒಂದು ಶತಮಾನದ ಮೇಲೆ ಶ್ರೀ ಲಕ್ಷ್ಮೀನಾರಾಯಣ ಮುನಿಗಳಿಂದ (ಶ್ರೀಪಾದರಾಜರು) ಹರಿದಾಸ ಸಾಹಿತ್ಯವು ನವಚೈತನ್ಯವನ್ನು ಪಡೆಯಿತು. ಇಂದಿಗೂ ಹರಿದಾಸ ಪರಂಪರೆಯಲ್ಲಿ "ನಮಃ ಶ್ರೀಪಾದರಾಜಾಯ ನಮಸ್ತೇ ವ್ಯಾಸಯೋಗಿನೇ । ನಮಃ ಪುರಂದರಾರ್ಯಾಯ ವಿಜಯಾರ್ಯಾಯ ತೇ ನಮಃ ॥" ಎಂದು ಶ್ರೀಪಾದರಾಜರ ಹೆಸರೇ ಮೊದಲಿಗೆ ಗಣಿಸಲ್ಪಡುವುದು. ಹದಿನೈದನೆಯ ಶತಮಾನದಲ್ಲಿ ಅವತರಿಸಿದ ಶ್ರೀಪಾದರಾಜರು ಆಚಾರ್ಯರ ಪ್ರಥಮ ಶಿಷ್ಯರಾದ ಶ್ರೀಪದ್ಮನಾಭತೀರ್ಥರ ಸತ್ಪರಂಪರೆ "ವಿದ್ಯಾಪೀಠ"ದಲ್ಲಿ ಬಂದ ಶ್ರೀಸ್ವರ್ಣವರ್ಣತೀರ್ಥರ ಶಿಷ್ಯರಾಗಿ ಪೀಠಾಧೀಶರಾಗಿ ಖ್ಯಾತರಾದರು. ಇವರು ಜನಸಾಮಾನ್ಯ ಪಂಡಿತ ಕುಲಶೇಖರರಾದ ಶ್ರೀಮದಾಚಾರ್ಯರ ಮಹಾಸಂಸ್ಥಾನವಾದ ಶ್ರೀ ಕವೀಂದ್ರತೀರ್ಥರ "ದಕ್ಷಿಣಾದಿಪೀಠ"ದಲ್ಲಿ ವಿರಾಜಿಸಿದ ಮಹಾನುಭಾವರಾದ ಶ್ರೀ ವಿಬುಧೇಂದ್ರತೀರ್ಥ ಶ್ರೀಪಾದಂಗಳವರಲ್ಲಿ ಸಕಲಶಾಸ್ತ್ರಗಳನ್ನೂ-ಮುಖ್ಯವಾಗಿ ಶ್ರೀಮದಾಚಾರ್ಯರ-ಟೀಕಾಕೃತ್ಪಾದಪರಂಪರಾ ಪ್ರಾಪ್ತ ಸಂಪ್ರದಾಯವಂತೆ ಸಮಗ್ರ ದ್ವೈತಸಿದ್ಧಾಂತವನ್ನು ವ್ಯಾಸಾಂಗಮಾಡಿ ಮಹಾಪಂಡಿತರೆನಿಸಿದರು. ವಿಜಯನಗರದ ಸಾಳವ ನರಸಿಂಹನಿಗೆ ಗುರುಗಳಾದ ಇವರು ಅವನ ಬ್ರಹ್ಮಹತ್ಯಾದೋಷವನ್ನು ಪರಿಹರಿಸಿ ಸಿಂಹಾಸನದಲ್ಲಿ ಮಂಡಿಸಿ ರಾಜಗುರುಗಳಾದರು. ಸುಮಾರು 1484ರ ಸುಮಾರಿಗೆ ವಿಜಯನಗರದ ಸಾಮ್ರಾಟನಾದ ಸಾಳುವ ನರಸಿಂಹನು ಇವರಿಗೆ ರತ್ನಾಭಿಷೇಕ ಮಾಡಿ ಗೌರವಿಸಿದನು. ಇವರು ಸ್ವಪ್ನ ಸೂಚಿಯಂತೆ ಪಂಢರಪುರದಲ್ಲಿ ಶ್ರೀರಂಗವಿಠಲನನ್ನು ಪಡೆದು ಅದರ ಸ್ಮರಣೆಗಾಗಿ "ರಂಗವಿಠಲ" ಎಂಬ ಅಂಕಿತದಿಂದ ಅನೇಕ ಕನ್ನಡ ಕೃತಿಗಳನ್ನು ರಚಿಸಿ ಕನ್ನಡ ಹರಿದಾಸಪಂಥದ ಪಿತಾಮಹರೆನಿಸಿ

ಮಾನ್ಯರಾದರು ನಷ್ಟ ಪ್ರಾಯವಾಗಿದ್ದ ಕನ್ನಡಹರಿದಾಸಪಂಥ ಹಾಗೂ ಸಾಹಿತ್ಯಕ್ಕೆ ಪ್ರಚೋದನೆ ನೀಡಿ ಸರ್ವವಿಧದಿಂದ ಪೋಷಕರಾಗಿದ್ದು ಅದರ ಅತ್ಯಧಿಕ ಪ್ರಸಾರಕ್ಕೆ ಮುಖ್ಯ ಕಾರಣರಾದರು. ಶ್ರೀಪಾದರಾಜರು ನೂರಾರು ಪದಗಳನ್ನು ರಚಿಸಿದ್ದರೂ ಅವೆಲ್ಲವೂ ಈಗ ಉಪಲಬ್ಧವಾಗಿಲ್ಲದಿರುವುದು ಕನ್ನಡಿಗರ ದೌರ್ಭಾಗ್ಯ, ದೊರಕುವ ನೂರಾರು ಪದಗಳು ಶ್ರೇಷ್ಠಮಟ್ಟದ್ದಾಗಿ ರಸಪುಷ್ಟವಾಗಿವೆ. ಶೈಲಿಯು ಸರಳವಾಗಿದ್ದು. ಮನನಾಟುವಂತಿದೆ. ಕನ್ನಡ ಭಾಷೆಯು ಬಹಳ ಲಲಿತವಾಗಿದ್ದರೂ ಚಿಕ್ಕಟ್ಟಾಗಿದೆ. ಅಲಂಕಾರ ಜೋಡನೆ ಸಂದರ್ಭೋಚಿತವಾಗಿದೆ, ಅವರ ಪದಗಳಲ್ಲಿ ದೈನ್ಯ, ದೇವರೊಡನೆ ಸರಸ, ಭಗವನ್ಮಹಿಮಾ ವರ್ಣನೆಗಳು ಚೆನ್ನಾಗಿ ಚಿತ್ರವಾಗಿದೆ. ಇವರು ನೂರಾರು ಬಿಡಿ ಪದಗಳಲ್ಲದೆ "ಶ್ರೀನರಸಿಂಹ ಪ್ರಾದುರ್ಭಾವ ದಂಡಕ" ಎಂಬ ದಂಡಕ ಶೈಲಿಯ ಕೃತಿಯನ್ನು ರಚಿಸಿದ್ದಾರೆ. ಇದು ಕನ್ನಡ ಸಾಹಿತ್ಯಕ್ಕೆ ಅಪೂರ್ವ ಕೊಡುಗೆಯೆಂದು ಹೇಳಬಹುದು. ಇದರಂತೆ "ಗೋಪೀಗೀತ, ವೇಣುಗೀತ, ಭ್ರಮರಗೀತ. ರುಕ್ಮಿಣೀ ಸತ್ಯಭಾಮಾ ವಿಲಾಸ ಮತ್ತು ಮಧ್ವನಾಮ" ಮುಂತಾದ ಕನ್ನಡ ಕಾವ್ಯಗಳನ್ನು ರಚಿಸಿರುತ್ತಾರೆ. ಇಷ್ಟು ವ್ಯಾಪಕವಾಗಿ ಸಾಹಿತ್ಯ ರಚನೆಮಾಡಿ ಕನ್ನಡ ಹರಿದಾಸ ಭಂಡಾರವನ್ನು ತುಂಬಿ ಅದಕ್ಕೆ ಕಳೆತಂದ ಮಹನೀಯರಲ್ಲಿ ಶ್ರೀಪಾದರಾಜರೇ ಮೊದಲಿಗರೆಂದು ಧಾರಾಳವಾಗಿ ಹೇಳಬಹುದು. ಇವರಿಂದ ಪೋಷಿತವಾದ ಕನ್ನಡ ಹರಿದಾಸಸಾಹಿತ್ಯ ಸುಮಾರು ನೂರಿಪ್ಪತ್ತು ವರ್ಷಗಳು ಅವ್ಯಾಹತವಾಗಿ ಸಾಗಿಬಂದು. ಚೆನ್ನಾಗಿ ಪಸರಿಸಿ. ಅತ್ಯಂತ ತೇಜಸ್ವಿಗಳಾದ ಹರಿದಾಸರನ್ನು ಒಟ್ಟಿಗೇ ನೀಡಿತು. ಇವರು ತಮ್ಮ ಪ್ರಿಯಶಿಷ್ಯರಾದ ಶ್ರೀ ವ್ಯಾಸರಾಜಗುರುವರ್ಯರಿಗೆ ಶ್ರೀ ಹರಿದಾಸಸಾಹಿತ್ಯದ ಅಭಿವೃದ್ಧಿ. ಪೋಷಣೆ. ಪ್ರಸಾರಗಳ ಹೊಣೆಯನ್ನು ಒಪ್ಪಿಸಿ ಕೊಟ್ಟು ಹರಿಪದ ಸೇರಿದರು. ಈ ಮಹಾನುಭಾವರನ್ನು "ಧ್ರುವಾಂಶ"ರೆಂದು ಜ್ಞಾನಿಗಳು ಕೊಂಡಾಡುತ್ತಾರೆ.

ವ್ಯಾಸರಾಜರು ವೈದಿಕ ಹಾಗೂ ಹರಿದಾಸಪರಂಪರೆಯಲ್ಲೂ ಶ್ರೀಪಾದರಾಜರ ಶಿಷ್ಯರು. ಹರಿಭಕ್ತ ಪ್ರಹ್ಲಾದನು ತ್ರೇತಾಯುಗದಲ್ಲಿ ಕಪಿರೂಪದಿಂದವತರಿಸಿ ವಾನರ ಸೈನ್ಯದಲ್ಲಿದ್ದು ಶ್ರೀರಾಮದೇವರ ಸೇವೆಮಾಡಿದನು. ದ್ವಾಪರದಲ್ಲಿ ಬಾಹ್ಲೀಕನಾಗಿ ಶ್ರೀಕೃಷ್ಣೋಪಾಸಕನಾಗಿದ್ದು ಕುರುಕ್ಷೇತ್ರ ಯುದ್ಧದಲ್ಲಿ ಭೀಮಸೇನದೇವರನ್ನು ಪ್ರಾರ್ಥಿಸಿ ಅವರ ಗದಾಪ್ರಹಾರದಿಂದ ಮೃತನಾದನೆಂದು ಶ್ರೀಮದಾಚಾರ್ಯರು "ಮಹಾಭಾರತ ತಾತ್ಪರ್ಯನಿರ್ಣಯ" ದಲ್ಲಿ ಅಪ್ಪಣೆಕೊಡಿಸಿದ್ದಾರೆ. ಬಾಹ್ಲೀಕ ರಾಜನು ಮರಣಕಾಲದಲ್ಲಿ "ಕಲಿಯುಗದಲ್ಲಿ ಮತ್ತೆ ಎರಡು ಬಾರಿ ಜನಿಸಿ ಶ್ರೀಹರಿ ಸೇವೆ ಮತ್ತು ನಿಮ್ಮ ಸೇವೆ ಮಾಡುವಂತೆ ಅನುಗ್ರಹಿಸಬೇಕೆಂದು ಭೀಮಸೇನದೇವರಿಂದ ವರಪಡೆದನೆಂದೂ, ಪ್ರಹ್ಲಾದರೂಪದಲ್ಲಿ ಹಿಂದೆ ಹರಿವರ್ಷಖಂಡದಲ್ಲಿ ಶ್ರೀ ನೃಸಿಂಹದೇವರನ್ನು ಸೇವಿಸುತ್ತಿದ್ದಾಗ, ನಾರದರನ್ನು ಕಂಡು ಕಲಿಯುಗದಲ್ಲಿ ಹುಟ್ಟಿ

ಶ್ರೀಕೃಷ್ಣಾರಾಧನೆ ಮಾಡಬಯಸಿದನೆಂದೂ, ಅಂತೆಯೇ ಶ್ರೀವ್ಯಾಸರಾಜರಾಗಿಯೂ ನಂತರ ಶ್ರೀರಾಘವೇಂದ್ರಸ್ವಾಮಿಗಳಾಗಿಯೂ ಅವತರಿಸಿ, ಮಧ್ವರಾಗಿ ಅವತರಿಸಿದ ಭೀಮಸೇನದೇವರ (ವಾಯುದೇವರ) ಮತ್ತು ಶ್ರೀಹರಿಯ ಸೇವೆಮಾಡಿದನೆಂದೂ, ಸತ್ಯಲೋಕದಲ್ಲಿ ಶ್ರೀಚತುರಾನನ ಬ್ರಹ್ಮದೇವರ ಶಿಷ್ಯನಾಗಿದ್ದ ಕರ್ಮಜದೇವತೆ ಶಂಕುಕರ್ಣನೇ ಇವರ ಮೂಲರೂಪ"ವೆಂದೂ ಜ್ಞಾನಿಗಳು ಕೊಂಡಾಡಿದ್ದಾರೆ.

ವ್ಯಾಸರಾಜರು ಆಚಾರ್ಯ ಮಧ್ವರ ಎರಡು ಮಹಾಸಂಸ್ಥಾನಗಳಲ್ಲೊಂದಾದ ಶ್ರೀರಾಜೇಂದ್ರತೀರ್ಥರ ಪೂರ್ವಾದಿಮಠದ ಶ್ರೀಬ್ರಹ್ಮಣ್ಯತೀರ್ಥರ ಶಿಷ್ಯರಾಗಿ ಆ ಮಹಾಸಂಸ್ಥಾನಾಧಿಪತಿಗಳಾದರು. ಇವರು ಸಕಲಶಾಸ್ತ್ರಪಾರಂಗತರಾದ ಪ್ರಕಾಂಡ ಪಂಡಿತರು. ನೂರಾರುಜನ ಪ್ರಚಂಡಪರವಾದಿಗಳನ್ನು ವಾದದಲ್ಲಿ ಜಯಿಸಿ ದ್ವೈತ ಸಿದ್ಧಾಂತ ಪ್ರತಿಷ್ಠಾಪನೆಮಾಡಿ ಅದು ನಿಷ್ಕಂಟಕವಾಗಿ ರಾಜಿಸುವಂತೆ ಮಾಡಿದ್ದಲ್ಲದೆ ಜಗನ್ಮಾನ್ಯಗಳಾದ "ಚಂದ್ರಿಕಾ, ನ್ಯಾಯಾಮೃತ, ತರ್ಕತಾಂಡವ" ಗಳೆಂಬ ಮಹಾ ಗ್ರಂಥಗಳನ್ನೂ ಇನ್ನಿತರಗ್ರಂಥಗಳನ್ನೂ ರಚಿಸಿ ಮಹೋಪಕಾರಮಾಡಿದರು. ಇವರ ಚಂದ್ರಿಕಾದಿಗ್ರಂಥತ್ರಯವು "ವ್ಯಾಸತ್ರಯ"ವೆಂದೇ ವಿದ್ವತ್ಪ್ರಪಂಚದಲ್ಲಿ ಪ್ರಖ್ಯಾತ ವಾಗಿದೆ. ಇವರು ಎರಡುಬಾರಿ ಭಾರತಾದ್ಯಂತಸಂಚರಿಸಿ ಸಕಲದುರ್ಮತನಿರಾಕರಣ ಪೂರ್ವಕ ಸಿದ್ಧಾಂತಸ್ಥಾಪನೆ, ಶಿಷ್ಯಜನೋದ್ಧಾರ, ಮಹಿಮಾಪ್ರದರ್ಶನಾದಿಗಳಿಂದ ಜಗನ್ಮಾನ್ಯರಾದರು. ಇವರಿಂದ ವೈಷ್ಣವಮತ, ಭಾಗವತಭಕ್ತಿಪಂಥವು ಜಗತ್ತಿ ನಲ್ಲೆಲ್ಲಾ ಪ್ರಸಾರವಾಯಿತು. ಬಂಗಾಲದಲ್ಲಿ ಹಿಂದೆ ವ್ಯಾಸರಾಜರ ಪೂರ್ವಿಕರಾದ ಶ್ರೀರಾಜೇಂದ್ರತೀರ್ಥರು ಮತ್ತು ಶ್ರೀಜಯಧ್ವಜತೀರ್ಥರಿಂದ ವೈಷ್ಣವಪಂಥ ಶ್ರೀ ಹರಿಭಕ್ತಿಯು ಬಂಗಾಲದಲ್ಲಿ ಪ್ರಸಾರವಾಗಿದ್ದು, ಇವರ ಶಿಷ್ಯರಾದ ವಿಷ್ಣುಪುರಿ ಎಂಬ ವರು ಜಯಧ್ವಜತೀರ್ಥರಿಂದ ಮಾಧ್ವದೀಕ್ಷೆ ಸನ್ಯಾಸಗಳನ್ನು ಪಡೆದುಅವರ ಪ್ರತಿ ನಿಧಿಯಾಗಿ ಅಲ್ಲಿ ಭಕ್ತಿಪಂಥವನ್ನು ಚೆನ್ನಾಗಿ ಪ್ರಸಾರಮಾಡಿದ್ದರು. ವ್ಯಾಸರಾಜರು ವಂಗದೇಶಕ್ಕೆ ಹೋದಾಗ ಇವರು ರಾಜೇಂದ್ರಪರಂಪರೆಯವರೆಂದು ಇವರಿಗೆ ಅಸಾ ಧಾರಣ ಗೌರವಾದರಗಳು ದೊರೆತವು. ವ್ಯಾಸರಾಜರು ಅಲ್ಲಿ ಮಧ್ವಮತವನ್ನೂ, ವಿಷ್ಣುಭಕ್ತಿಯನ್ನೂ ಚೆನ್ನಾಗಿ ಪ್ರಸಾರಮಾಡಿ ಶ್ರೀಲಕ್ಷ್ಮೀತೀರ್ಥರಿಗೆ ಆಶ್ರಮವಿತ್ತು ತಮ್ಮ ಪ್ರತಿನಿಧಿಯಾಗಿ ತತ್ವಪ್ರಸಾರಮಾಡಲು ಆಜ್ಞಾಪಿಸಿಬಂದರು. ಈ ಲಕ್ಷ್ಮೀ ತೀರ್ಥರ ಶಿಷ್ಯರೇ ಬಂಗಾಲದ ಪ್ರಖ್ಯಾತ ಸಂತರಾದ ಶ್ರೀಕೃಷ್ಣಚೈತನ್ಯರು.[1] ಇಂದು

---

1. ಹೆಚ್ಚು ವಿವರಕ್ಕೆ ಈ ಗ್ರಂಥದ ಶ್ರೀವ್ಯಾಸರಾಜರ ವಂಗವಿಜಯವೆಂಬ ಅಧ್ಯಾಯವನ್ನು ಓದಿರಿ.
ಕೃಷ್ಣಚೈತನ್ಯರು ವಿಜಯನಗರದಲ್ಲಿ ತಮ್ಮ ಭಕ್ತಿಪಂಥದ ಸ್ಥಾಪಕರೂ ಗುರುಗಳೂ ಆದ ಶ್ರೀ ವ್ಯಾಸರಾಜರ ದರ್ಶನ ಮಾಡಿ ಕೆಲದಿನ ಅವರಿಂದ ತತ್ವೋಪದೇಶ ಶ್ರೀಕೃಷ್ಣಭಕ್ತಿಯ ಮಹತ್ವಗಳನ್ನರಿತು, ದ್ವೈತಸಿದ್ಧಾಂತದ ಮತ್ತು ಭಕ್ತಿಪಂಥಕ್ಕೆ ಆರಾಧ್ಯದೇವನಾದ ಉಡುಪಿಯ ಶ್ರೀಕೃಷ್ಣನ ದರ್ಶನಮಾಡಿ ಅನುಗ್ರಹಿತರಾಗಬೇಕೆಂದು ಆಜ್ಞಾಪಿಸಿ ಕೃಷ್ಣ ದೇವರಾಯನಿಂದ ಅವರ ಪ್ರಯಾಣಕ್ಕೆ ಎಲ್ಲ ವ್ಯವಸ್ಥೆಮಾಡಿಕೊಟ್ಟು ಶ್ರೀಮಠದ ಪಂಡಿತರೊಡನೆ ಉಡುಪಿಗೆ ಕಳುಹಿಸಿದರು. (ಮುಂದಿನ ಪುಟ ನೋಡಿ)

ಜಗತ್ತಿನಾದ್ಯಂತ ಶ್ರೀಕೃಷ್ಣಪಂಥ, ಭಕ್ತಿಪಂಥಗಳು ವ್ಯಾಪಕವಾಗಿ ಬೆಳೆಯಲು ಶ್ರೀ ವ್ಯಾಸ್ಯತೀರ್ಥರೇ ಕಾರಣರು, ಅಂದಮೇಲೆ ಈ ಮಹನೀಯರು ವಿಶ್ವದ ಭಕ್ತಿ ಪಂಥಕ್ಕೆ ನೀಡಿದ ಕಾಣಿಕೆಯು ಮಹತ್ವ, ವೈಶಿಷ್ಟ್ಯಗಳೆಂಥಹುದೆಂಬುದು ಅರಿವಾಗದಿರದು.

ವ್ಯಾಸರಾಜರು ಶ್ರೀಪಾದರಾಜರಲ್ಲಿ ವ್ಯಾಸಂಗಮಾಡುತ್ತಿರುವಾಗಲೇ ಅವರಿಗೆ ಪಂಢರಪುರದಲ್ಲಿ ದೊರಕಿದ್ದ ಮತ್ತೊಂದು ಸಂಪುಟದಲ್ಲಿದ್ದ ಶ್ರೀಕೃಷ್ಣನು ವ್ಯಾಸಯತಿಗಳಿಗೆ ಒಲಿದು, ಪ್ರಸನ್ನನಾಗಿ, ತನ್ನ ಮನಮೋಹಕ ಜಗದ್ವಿಲಕ್ಷಣ ತಾಂಡವ ನೃತ್ಯವಿಲಾಸಗೈದು ಆನಂದಗೊಳಿಸಿದಾಗ ಭಕ್ತಿಪರವಶರಾದ ಶ್ರೀವ್ಯಾಸಮುನಿಗಳು ಮೈಮರೆತು ಆ ಮಂಗಳಕರ ಘಟನೆಯ ಸವಿನೆನಪಿಗಾಗಿ "ಶ್ರೀಕೃಷ್ಣ" ಎಂಬ ಅಂಕಿತದಿಂದ ಶ್ರೀಕೃಷ್ಣನ ತಾಂಡವವಿಲಾಸವನ್ನು ಸ್ತುತಿಸಿ ಕನ್ನಡದಲ್ಲಿ ಪದವನ್ನು ರಚಿಸಿದರು. ಇದು ಹರಿದಾಸಸಾಹಿತ್ಯಭಂಡಾರಕ್ಕೆ ಶ್ರೀವ್ಯಾಸರಾಜರು ಅರ್ಪಿಸಿದ ಮೊದಲ ಕಾಣಿಕೆ.[2] ಅನಂತರ ಗುರುವರರು ನೂರಾರು ಕನ್ನಡ ಕೃತಿಗಳನ್ನು ರಚಿಸಿ ದಾಸಸಾಹಿತ್ಯ ಭಂಡಾರವನ್ನು ತುಂಬಿಸಿ ಕನ್ನಡಭಾಷೆಗೂ, ಹರಿದಾಸ ವಾಙ್ಮಯಕ್ಕೂ ಕಳೆತಂದು ವಿಶೇಷ ಮಹತ್ವವನ್ನು ತಂದುಕೊಟ್ಟರು.

ವ್ಯಾಸತೀರ್ಥರು ವಿಜಯನಗರದ ರಾಜಗುರುಗಳಾಗಿದ್ದಾಗ ಅಲ್ಲಿ ದಕ್ಷಿಣಭಾರತದಲ್ಲೇ ಅದ್ವಿತೀಯವೆನಿಸಿದ ಸಂಸ್ಕೃತ ವಿಶ್ವವಿದ್ಯಾನಿಲಯವನ್ನು ಪ್ರಾರಂಭಿಸಿ, ಅದರ ಕುಲಗುರುಗಳಾಗಿದ್ದು ಹತ್ತಾರುಸಾವಿರಜನ ವಿದ್ಯಾರ್ಥಿಗಳಿಗೆ ಅಶ-ವಸನ-ವಸತಿ ವಿದ್ಯಾರ್ಥಿವೇತನ ಸೌಕರ್ಯಗಳನ್ನೇರ್ಪಡಿಸಿಕೊಟ್ಟು ಸಕಲ ಶಾಸ್ತ್ರಗಳು, ಸಂಗೀತ, ಕುಶಲಕಲೆಗಳಲ್ಲಿ ಪಾರಂಗತರಾಗುವಂತೆಮಾಡಿ ಜ್ಞಾನದಾನಮಾಡಿದರು. ಇವರಲ್ಲಿ ನೂರಾರುಜನ ಸನ್ಯಾಸಿ ಶಿಷ್ಯರು ವ್ಯಾಸಂಗಮಾಡುತ್ತಿದ್ದರು. ವಿಜಯೀಂದ್ರ-ವಾದಿರಾಜ-ಶ್ರೀನಿವಾಸತೀರ್ಥ, ಗೋವಿಂದ ಒಡೆಯರು, ನಾರಾಯಣ ಯತಿಗಳೇ ಮೊದಲಾದ ಶ್ರೇಷ್ಠ ಜ್ಞಾನಿನಾಯಕರನ್ನು, ಇದರಂತೆ ಅಪರೋಕ್ಷಜ್ಞಾನಿಗಳಾದ ಶ್ರೀಪುರಂ

---

ii) ಶ್ರೀವಲ್ಲಭಾಚಾರ್ಯರು ವಿಜಯನಗರಕ್ಕೆ ಬಂದು ವ್ಯಾಸರಾಜರ ದರ್ಶನಮಾಡಿ ಅನುಗ್ರಹೀತರಾಗಿ ಸಂಸ್ಕೃತ ವಿಶ್ವವಿದ್ಯಾಲಯದ ಕುಲಪತಿಗಳೂ ಆದ ಶ್ರೀವ್ಯಾಸರಾಜರ ಅಪ್ಪಣೆಯಂತೆ ಶ್ರೀಕೃಷ್ಣದೇವರಾಯನು ಅವರ ಗೌರವಾರ್ಥವಾಗಿ ಏರ್ಪಡಿಸಿದ್ದ ಮಹಾವಿದ್ವತ್ಸಭೆಯು ಜರುಗಿತೆಂದೂ ಅದರ ಅಧ್ಯಕ್ಷತೆಯನ್ನು ಶ್ರೀವ್ಯಾಸರಾಜರು ವಹಿಸಿದ್ದು ಶ್ರೀವಲ್ಲಭಾಚಾರ್ಯರನ್ನು ಗೌರವಿಸಿ, ಕೃಷ್ಣದೇವರಾಯನಿಂದಲೂ ವಿಶೇಷ ಸನ್ಮಾನ ಮಾಡಿಸಿದರೆಂದೂ ಗದಾಧರನ, "ಸಂಪ್ರದಾಯ ಕುಲದೀಪಿಕಾ" ಗ್ರಂಥದ ಮೂರನೆಯ ಪ್ರಕರಣದಲ್ಲಿ ನಿರೂಪಿಸಿದ್ದಾರೆ.

2. ವಿವರಕ್ಕೆ "ಬಾಲಗೋಪಾಲನರ್ತಿಸಿದ" ಎಂಬ ಅಧ್ಯಾಯವನ್ನು ನೋಡಿ.

ದರದಾಸರು, ಕನಕದಾಸರಂಥ ಮಹಾನುಭಾವರು, ಗದುಗಿನ ನಾರಾಯಣಪ್ಪ ಎಂಬ ಪ್ರಿಯ ಶಿಷ್ಯರುಗಳನ್ನೂ ಜಗತ್ತಿಗೆ ನೀಡಿದಮಹನೀಯರು ವ್ಯಾಸತೀರ್ಥರು. ಇವರ ಶಿಷ್ಯರೆಲ್ಲರೂ ಪ್ರಕಾಂಡಪಂಡಿತರೂ, ಗ್ರಂಥಕಾರರೂ, ಮಹಾತ್ಮರೂ ಆಗಿದ್ದು ದ್ವೈತಸಿದ್ಧಾಂತ ಮತ್ತು ಕನ್ನಡ ಹರಿದಾಸ ಸಾಹಿತ್ಯದ ಸರ್ವತೋಮುಖ ಅಭಿವೃದ್ಧಿಗೆ ಕಾರಣರಾದರು.

ಶ್ರೀವ್ಯಾಸರಾಜರು ಹರಿದಾಸಸಾಹಿತ್ಯದ ಮೂಲಕ ನಾಡು, ನುಡಿ, ಜನತೆಗೆ ಮಾಡಿರುವ ಮತ್ತೊಂದು ಮಹೋಪಕಾರ, ಅನನ್ಯಸಾಧಾರಣವಾದುದು. ಅದನ್ನಿಲ್ಲಿ ಸ್ವಲ್ಪ ನಿರೂಪಿಸುವುದು ಅಪ್ರಕೃತವಾಗಲಾರದು. ವೇದ, ಉಪನಿಷತ್. ಗೀತಾ, ಪುರಾಣ, ಭಾರತಾದಿ ಶಾಸ್ತ್ರಗಳು, ಧರ್ಮಗಳು. ಅವುಗಳ ಉಪದೇಶಗಳು ಇವುಗಳೆಲ್ಲವೂ ಸಂಸ್ಕೃತಭಾಷೆಯಲ್ಲಿಯೇ ಇದ್ದು ಅವು ಕೇವಲ ಪಂಡಿತರ ಸ್ವತ್ತಾಗಿದ್ದಾಗ ಅವುಗಳೆಲ್ಲದರ ಉಪದೇಶಗಳನ್ನು ಪ್ರಪ್ರಥಮವಾಗಿ ಕನ್ನಡ ಭಾಷಯಲ್ಲಿ. ಸರಸಸುಂದರ ಕೃತಿಗಳಲ್ಲಿ ರಚಿಸಿ ಸಂಗೀತ ಬೆರೆಸಿ ಜನಸಾಮಾನ್ಯರಿಗೆ ನೀಡಿದ್ದು ಒಂದು ದೊಡ್ಡ ಸಾಹಸ ಮತ್ತು ಕ್ರಾಂತಿಕಾರಕವೆಂದು ಹೇಳಬಹುದು. ಹೀಗೆ ಸಂಸ್ಕೃತಬಾರದ ಕನ್ನಡ ಜನಸಾಮಾನ್ಯರಿಗೆ ವೇದಾದಿಶಾಸ್ತ್ರಗಳಉಪದೇಶಗಳನ್ನು ನೀಡಿ ಕನ್ನಡ ಭಾಷೆಗೆ ಕಳೆತಂದ ಅವರ ಉಪಕಾರವನ್ನು ಅದಾರುತಾನೇ ಮರೆಯಲು ಸಾಧ್ಯ? ಕನ್ನಡದಲ್ಲಿ ಕೃತಿರಚಿಸಿ ಅದಕ್ಕೆ ತತ್ವಜ್ಞಾನಿಗಳೆಲ್ಲರ ಗೌರವದೊರಕುವಂತೆ ಮಾಡಿದ್ದು ಸಾಮಾನ್ಯಕಾರ್ಯವಲ್ಲ.

ಅಂದು ವೈದಿಕ ಸಂಪ್ರದಾಯದಲ್ಲಿ ಸಂಸ್ಕೃತಭಾಷೆಯನ್ನು ಬಿಟ್ಟು ಕನ್ನಡಾದಿ ಪ್ರಾಕೃತಭಾಷಗಳನ್ನು ಆಶ್ರಯಿಸಿ ತನ್ಮೂಲಕ ಸಾಧನಮಾಡಿಕೊಳ್ಳುವುದು ಅತ್ಯಂತ ನಿಷಿದ್ಧವೆಂಬ ವಾದವು ರೂಢಮೂಲವಾಗಿತ್ತು. "ದಿವ್ಯಭಾಷಾಂ ಪರಿತ್ಯಜ್ಯ ಹ್ಯನ್ಯಭಾಷಾಕೃತಾನಿ ವೈ। ಶಾಸ್ತ್ರಾಣಿ ಯೇ ಪ್ರಶೃಣ್ವಂತಿ ತೇ ವೈ ನಿರಯಗಾಮಿನಃ ॥" ಕರ್ನಾಟಕ ದ್ರಾವಿಡ್ಯೈರ್ಯಾನಿ ರಚಿತಾನ್ಯಾಂಧ್ರಭಾಷಯಾ ಪಂಚಾಸಿ ಯೇ ಪ್ರಶೃಣ್ವಂತಿ ತೇ ವೈ ನಿರಯಗಾಮಿನ ॥" (ಶೇಷಧರ್ಮ-10-59) ಅಂದರೆ ದೇವಭಾಷೆಯಾದ ಸಂಸ್ಕೃತವನ್ನುಬಿಟ್ಟು ಇತರ ಭಾಷೆಗಳಲ್ಲಿ ರಚಿತವಾದ ಶಾಸ್ತ್ರಗಳನ್ನಾರುಕೇಳುವರೋ: ಕನ್ನಡ. ತಮಿಳು. ಆಂಧ್ರಭಾಷಗಳಲ್ಲಿ ರಚಿತವಾದ ವಾಕ್ಯಗಳನ್ನು ಯಾರು ಕೇಳುವರೋ. ಅವರು ನರಕಭಾಗಿಗಳು ಎಂದು ಮುಂತಾಗಿ ಕೆಲಪುರಾಣಗಳಲ್ಲಿ ಉಕ್ತವಾಗಿದೆ. ಇಂತಹ ಪ್ರಮಾಣಗಳಿದ್ದರೂ ವ್ಯಾಸರಾಜರಂಥ ಜ್ಞಾನಿಗಳು ಅದೆಂತು ಕನ್ನಡದಲ್ಲಿ ಶಾಸ್ತ್ರಾರ್ಥಗಳ ಉಪದೇಶಗಳನ್ನು ರಚಿಸಿ ಪ್ರಚಾರಮಾಡಿದರು? ಎಂಬ ಪ್ರಶ್ನೆಯೇಳುವುದು ಸ್ವಾಭಾವಿಕ. ಈ ಪ್ರಮಾಣಗಳ ರಹಸ್ಯ ಆಪಾತತ ತೋರುವ ಅರ್ಥವನ್ನು ಪ್ರತಿಪಾದಿಸುವುದಿಲ್ಲ. ಇಲ್ಲಿ ಸ್ವಲ್ಪ ವಿಚಾರಮಾಡಬೇಕು. ಕನ್ನಡದಲ್ಲಿ ದಾಸಸಾಹಿತ್ಯ ರಚನೆಮಾಡಿದವರು ಸಾಮಾನ್ಯರಲ್ಲ! ಮಹಾಜ್ಞಾನಿಗಳು ಮತ್ತು

ದೈವಾಂಶಸಂಭೂತರೆಂದು ಪ್ರಸಿದ್ಧರಾದವರು ! ಸಂಸ್ಕೃತದಲ್ಲಿ ದಿಗ್ದಂತಿಪಂಡಿತರು. ವಾದವಿದ್ಯಾಕೋವಿದರು. ವೈದಿಕಸಿದ್ಧಾಂತಸ್ಥಾಪನಾಚಾರ್ಯರಾದ ಪೀಠಾಧಿಪತಿಗಳು! ಕನ್ನಡಹರಿದಾಸಪಂಥಕ್ಕೆ ಪ್ರೋತ್ಸಾಹಕವಾಗುವಂತೆ ಸಂಸ್ಕೃತದಲ್ಲಿ "ಹರಿಗೀತೆ"ಯನ್ನು ರಚಿಸಿ ಅದು ಪ್ರೇರಕಶಕ್ತಿಯಾಗುವಂತೆಮಾಡಿದವರು ಸಾಕ್ಷಾತ್ ವಾಯುದೇವರ ಅವತಾರರಾದ, ಜೀವೋತ್ತಮರೂ, ದ್ವೈತಶಾಸ್ತ್ರ ಪ್ರವರ್ತಕರೂ ಆದ ಶ್ರೀಮಧ್ವಾಚಾರ್ಯರು! ಕನ್ನಡಹರಿದಾಸಸಾಹಿತ್ಯದ ಆದ್ಯಾಚಾರ್ಯರೆನಿಸಿ ಮೊದಲಬಾರಿಗೆ ಕನ್ನಡದಲ್ಲಿ ಕೃತಿರಚಿಸಿದವರು ಶ್ರೀಮಧ್ವಾಚಾರ್ಯರ ಪಟ್ಟದಶಿಷ್ಯರಲ್ಲೊಬ್ಬರೂ. ಅವರ ಮಹಾಪೀಠಾಧಿಪತಿಗಳೂ ಆದ ಶ್ರೀನರಹರಿತೀರ್ಥರು! ಮಧ್ವಾಚಾರ್ಯರ ಮಹಾಸಂಸ್ಥಾನಗಳಲ್ಲಿ ಬಂದ ಶ್ರೀ ಶ್ರೀಪಾದರಾಜ-ಶ್ರೀವ್ಯಾಸರಾಜ-ಶ್ರೀವಿಜಯೀಂದ್ರರು ಮತ್ತು ಉಡುಪಿಯ ಸೋದೇಮಠಾಧೀಶರಾದ ಶ್ರೀವಾದಿರಾಜರು- ಇವರೆಲ್ಲರೂ ಸಂಸ್ಕೃತದಲ್ಲಿ ಪ್ರಕಾಂಡಪಂಡಿತರು. ಉದ್ದಾಮ ಶಾಸ್ತ್ರಗ್ರಂಥಗಳನ್ನು ರಚಿಸಿದ ದ್ವೈತಸಿದ್ಧಾಂತ ಸ್ಥಾಪನಾಚಾರ್ಯರುಗಳು! ಇಂಥವರು ಅಶಾಸ್ತ್ರೀಯ ಕಾರ್ಯವನ್ನೇಂದಿಗಾದರೂ ಮಾಡುವರೇ? ಆ ಮಹನೀಯರು ಅನುಸರಿಸಿದ ಮಾರ್ಗವೆಲ್ಲವೂ ಶಾಸ್ತ್ರವಿಹಿತವೇ! ವೇದಾದಿ ಮೂಲಶಾಸ್ತ್ರಗಳೂ. ನಿರ್ಣಾಯಕಶಾಸ್ತ್ರಗಳೂ- ಎಲ್ಲವೂ ಸಂಸ್ಕೃತದಲ್ಲಿಯೇ ಇರುವವು. ನಿತ್ಯನೈಮಿತ್ತಿಕ ಕರ್ಮಾನುಷ್ಠಾನದಲ್ಲಿ. ಸಂಧ್ಯಾದಿಗಳನ್ನೂ. ಶ್ರಾದ್ಧಾದಿಗಳನ್ನೂ. ಶಾಂತಿಪಾಠಗಳನ್ನೂ ಮತ್ತು ಮಂತ್ರಜಪಗಳನ್ನೂ ಯಾರೂ ಕನ್ನಡಾದಿ ಪ್ರಾಕೃತಭಾಷೆಗಳಲ್ಲಿ ಆಚರಿಸುವುದಿಲ್ಲ. ಆದರೆ ಭಗವನ್ಮಹಿಮೆಯನ್ನು ತಿಳಿಯಲು ಭಾಷೆ ಒಂದು ಸಾಧನಮಾತ್ರ. ಆ ಸಾಧನೆ ಕನ್ನಡವಾದರೂ ಒಂದೇ. ಸಂಸ್ಕೃತವಾದರೂ ಒಂದೇ. ಭಾಷೆಯೆ ಮುಖ್ಯವಾದಂಥ ಸಾಧನದಲ್ಲಿ ಅಂದರೆ ಸಂಧ್ಯಾದಿ ಅನುಷ್ಠಾನಗಳಲ್ಲಿ ಸಂಸ್ಕೃತವೇ ಮಾನ್ಯವಾದುದು. ಹರಿದಾಸಸಾಹಿತ್ಯವಾದರೋ ಭಗನ್ಮಹಿಮೆಯನ್ನೂ,ಹರಿಯಲೀಲಾವಿಲಾಸಚರಿತಾದಿಗಳನ್ನೂ, ಶಾಸ್ತ್ರಗಳ ಉಪದೇಶಗಳನ್ನೂ ತಿಳಿಸಿ ಭಗವಂತನಲ್ಲಿ ರತಿಪುಟ್ಟಿಸುವುದಕ್ಕಾಗಿ ರಚಿತವಾದವು. ಅದು ಸಂಸ್ಕೃತದಲ್ಲಿರಬೇಕಾದ ಅಗತ್ಯವಿಲ್ಲ. ಆದ್ದರಿಂದಲೇ ಶ್ರೀಹರಿಕಥಾಮೃತಸಾರದಲ್ಲಿ "ಮಾಧವನ ಗುಣಪೇಳ್ವಪ್ರಾಕೃತ। ವಾದರೆಯು ಸರಿ ಕೇಳಿ ಪರಮಾಹ್ಲಾದ ಬಡದಿಪ್ಪರೇ ನಿರಂತರ ಬಲ್ಲಕೋವಿದರು"! ಎಂದು ಹೇಳಿದ್ದಾರೆ. ಅಷ್ಟೇ ಅಲ್ಲ: "ಸಂಸ್ಕೃತವಿದಲ್ಲೆಂದು ಕುಹುಕಿ ತಿ। ರಸ್ಕರಲೇನಹುದು ಭಕ್ತಿ ಪು। ರಸ್ಕರದಿ ಕೇಳ್ವರಿಗೆ ಒಲಿಯುವನು ಪುಷ್ಕರಾಕ್ಷಸದಾ ॥" ಮತ್ತು "ಕೃತಿಪತಿಕಥಾನ್ವಿತವೆನಿಪ ಪ್ರಾಕೃತವೇ ತಾ ಸಂಸ್ಕೃತವೆನಿಸಿ ಸ। ದ್ಗತಿಯನೀವುದು ಭಕ್ತಿಪೂರ್ವಕ ಕೇಳಿಪೇಳ್ವರಿಗೆ॥" (ಹರಿಕಥಾಮೃತಸಾರ) ಎಂದು ಉದ್ಗರಿಸಿದ್ದಾರೆ! ಅಂದರೆ ಕನ್ನಡವಾದರೂ ಭಕ್ತಿಯಿಂದ ಕೇಳಿದರೆ ಶ್ರೀಹರಿ ಒಲಿಯುವವನು ಎಂದು ಹೇಳಿದ ಶ್ರೀಜಗನ್ನಾಥದಾಸರು ಇನ್ನು ಒಂದು ಹೆಜ್ಜೆ ಮುಂದುವರೆದು— ಶ್ರೀಹರಿಯ ಕಥಾವಿಲಾಸವು

ಪ್ರಾಕೃತದಲ್ಲಿ ರಚಿತವಾಗಿದ್ದರೂ ಅದನ್ನು ಭಕ್ತಿಪೂರ್ವಕ ಕೇಳುವವರಿಗೆ ಆ ಪ್ರಾಕೃತವೇ ಸಂಸ್ಕೃತವೆನಿಸಿ ಸದ್ಗತಿಯನ್ನು ಕೊಡಿಸುವುದೆಂದು ಹೇಳಿದ್ದಾರೆ.

ದಾಸರಾಯರ ಮಾತಿಗೆ ವೇದಾಂತ ಕೃತ್ ಎಂದು ಮಾನ್ಯರಾದ ಸಾಕ್ಷಾತ್ ನಾರಾಯಣಾವತಾರಿಗಳಾದ ಶ್ರೀವೇದವ್ಯಾಸ ದೇವರ ಸಮ್ಮತಿಯೂ ಇದೆ, ಅವರು ಭಾಗವತದಲ್ಲಿ "ಸ್ತ್ರುವೈ ರುಚ್ಚಾವಚೈಃ ಶ್ರೋತೃೈ ಪುರಾಣೈಃ ಪ್ರಾಕೃತೈರಪಿ!"ಅಂದರೆ ಭಗವನ್ಮಹಿಮಾ–ಅವತಾರ ಲೀಲಾವಿಲಾಸ ಕಥೆ ಮುಂತಾದವು, ಪುರಾಣಾದಿಗಳು ಪ್ರಾಕೃತಭಾಷೆಯಲ್ಲಿದ್ದರೂ ಅವನ್ನು ಅವಶ್ಯ ಶ್ರವಣಮಾಡಿ ಶ್ರೀಹರಿಯಲ್ಲಿ ಭಕ್ತಿ ಮಾಡಬೇಕು–ಮುಂತಾಗಿ ಹೇಳಿ ಕನ್ನಡಾದಿ ಪ್ರಾಕೃತಭಾಷೆಗಳಲ್ಲಿದ್ದರೂ ಶ್ರೀಹರಿಯ ಮಹಿಮಾಶ್ರವಣದಿಂದ ಶ್ರೇಯಸ್ಸಾಗುವುದು, ಸಾಧನವಾಗುವುದೆಂದು ಅಪ್ಪಣೆ ಕೊಡಿಸಿರುತ್ತಾರೆ. ಅಂತೆಯೇ ಜ್ಞಾನಿಗಳಾದ, ಶ್ರೀಹರಿಯ ಚಿತ್ತವನ್ನೂ, ಸಂಕಲ್ಪವನ್ನೂ ಬಲ್ಲ ನರಹರಿತೀರ್ಥ–ಶ್ರೀಪಾದರಾಜ–ವ್ಯಾಸರಾಜತೀರ್ಥರುಗಳು ಪರಮಾತ್ಮನ ಪ್ರೇರಣೆಯಂತೆ ಅಪಂಡಿತಪಾಮರರ ಉದ್ಧಾರಕ್ಕಾಗಿ, ಶ್ರೀಹರಿದಾಸ ಸಾಹಿತ್ಯ ಪೋಷಕರಾಗಿ, ಸ್ವತ ಕನ್ನಡದಲ್ಲಿ ಕೃತಿಗಳನ್ನು ರಚಿಸಿ. ವೇದಾದಿ ಶಾಸ್ತ್ರಗಳಲ್ಲಿ ಅಡಗಿರುವ ತತ್ವಸಾರ-ಭಗವನ್ಮಹಿಮೆ-ಲೀಲಾವಿಲಾಸ-ಉಪದೇಶಗಳ ಸಾರವನ್ನು ಜನತೆಗೆ ಅವರಿಗೆ ತಿಳಿಯುವ ಕನ್ನಡದಲ್ಲಿ ನೀಡಿ ಸರ್ವರ ಸಾಧನೆ–ಶ್ರೇಯಸ್ಸುಗಳಿಗೆ ಕಾರಣರಾಗಿ ಮಹೋಪಕಾರ ಮಾಡಿದ್ದಾರೆ.

ಇನ್ನೊಂದು ವಿಚಾರವನ್ನಿಲ್ಲಿ ಸ್ಪಷ್ಟಪಡಿಸುವುದು ಅವಶ್ಯವಾಗಿದೆ. ಶ್ರೀಪಾದರಾಜ-ವ್ಯಾಸರಾಜರು ಮತ್ತು ಇತರ ಹರಿದಾಸರು ಕನ್ನಡಭಾಷೆಯಲ್ಲಿ ಹರಿದಾಸ ಸಾಹಿತ್ಯವನ್ನು ರಚಿಸಿದ್ದರಿಂದಲೇ ಅದು ಜನಸಾಮಾನ್ಯರಲ್ಲಿ ಭಗವದ್ವಿಷಯಕವಾದ ಸಂಸ್ಕಾರವನ್ನೂ ಭಕ್ತಿ ಶ್ರದ್ಧೆಗಳನ್ನೂ ಆಧ್ಯಾತ್ಮಿಕ ಪ್ರಜ್ಞೆಯನ್ನೂ ಮೂಡಿಸಲು ಸಹಾಯಕವಾಯಿತು. ಸಂಸ್ಕೃತ ಭಾಷೆಯಲ್ಲಿಯೇ ರಚಿತವಾಗಿದ್ದಲ್ಲಿ ಅದು ಕೇವಲ ಪಂಡಿತೈಕ ಗಮ್ಯವಾಗಿ ಅದರ ಉದ್ದೇಶವೇ ನೆರವೇರುತ್ತಿರಲಿಲ್ಲ! ಯಾವುದು ಜನತೆಯ ಭಾಷೆಯೋ. ಆ ಭಾಷೆಯಲ್ಲಿ-ನೇರವಾಗಿ ಹೃದಯಕ್ಕೆ ಮುಟ್ಟುವ ಸರಳ ಶೈಲಿಯಲ್ಲಿ ಹರಿದಾಸ ವಾಙ್ಮಯವನ್ನು ಜನತೆಗೆ ನೀಡಿದ್ದರಿಂದ ಅದು ಇಂದಿಗೂ ಉಳಿದುಬಂದು ಜನಪ್ರಿಯವಾಯಿತು. ಸಂಸ್ಕೃತವನ್ನು ತಿರಸ್ಕರಿಸಿ ಪ್ರಾಕೃತವನ್ನು ಅವಲಂಬಿಸಬಾರದು. ಅಂದರೆ ಮೂಲಶಾಸ್ತ್ರಗಳನ್ನು ನಿರಾಕರಿಸಿ ಅವುಗಳಿಗಿಂತ ಕನ್ನಡಾದಿ ಪ್ರಾಕೃತ ಸಾಹಿತ್ಯವೇ ಶ್ರೇಷ್ಠವೆಂಬುದು ಸರಿಯಲ್ಲ. ಆ ಮೂಲಶಾಸ್ತ್ರಗಳಿಗೆ ಅನುಸಾರವಾಗಿ ಅದರಲ್ಲಿನ ಪ್ರಮೇಯ-ತತ್ವಗಳ ಉಪದೇಶಗಳು ಸಂಸ್ಕೃತ ಬಾರದ ಅಧಿಕಾಂಶ ಜನಸಾಮಾನ್ಯರಿಗೆ ತಿಳಿದು ಅವರೆಲ್ಲರ ಕಲ್ಯಾಣವೂ ಆಗಲಿ ಎಂಬುದೇ ಹರಿದಾಸ ವಾಙ್ಮಯದ. ಅದನ್ನು ರಚಿಸಿದವರ ಉದ್ದೇಶ. ಇದು ಅತ್ಯಂತ ಸಮಂಜಸವೆಂದು ಧೈರ್ಯವಾಗಿ ಹೇಳಬಹುದು.

ಇಂದು ಎಲ್ಲೆಡೆಯೂ ಕನ್ನಡಾಭಿಮಾನವು ಮೇರೆ ಮೀರಿ ಬೆಳೆಯುತ್ತಿದೆ. ಪ್ರತಿಯೊಂದೂ ಕನ್ನಡದಲ್ಲೇ ಜರುಗಬೇಕೆಂಬ ಆಶೆ, ಅದಕ್ಕಾಗಿ ಹೋರಾಟವೂ ಜರಗುತ್ತಿದೆ. ಇಂದಿನ ಪರಿಸ್ಥಿತಿಯನ್ನು ಅವಲೋಕಿಸಿದಾಗ ಐದುನೂರು ವರ್ಷಗಳಿಗೂ ಹಿಂದೆಯೇ ತತ್ತ್ವ,ಪ್ರಮೇಯ,ಧರ್ಮ,ಸಾಹಿತ್ಯಕಲೆ ಮುಂತಾಗಿ ಎಲ್ಲವನ್ನೂ ಕನ್ನಡದಲ್ಲೇ ಜನತೆಗೆ ನೀಡಬೇಕೆಂದು ಅವೆಲ್ಲವನ್ನೂ ಕೊಟ್ಯಂತರ ಕನ್ನಡಪದ ಪದ್ಯ ಸುಳಾದಿ ಕಾವ್ಯಗಳ ರೂಪವಾಗಿ ರಚಿಸಿ, ಜನಸಾಮಾನ್ಯರಿಗೆ ನೀಡಿ, ಕನ್ನಡಭಾಷೆ—ಸಾಹಿತ್ಯಗಳನ್ನು ಜನಪ್ರಿಯವಾಗಿ ಮಾಡಿದ ಶ್ರೀಪಾದರಾಜ-ವ್ಯಾಸರಾಜಯತಿವರ್ಯರುಗಳ ದೂರದೃಷ್ಟಿ, ಕನ್ನಡದ ಬಗೆಗಿನ ಅಭಿಮಾನ ಕ್ರಾಂತಿಕಾರಕವಾದ ಅಸಾಧಾರಣ ಸಾಧನೆಯೆಂದು ಘಂಟಾಘೋಷವಾಗಿ ಹೇಳಬಹುದು! ಇದರಿಂದ ಆ ಮಹನೀಯರಿಗೆ ಜನಸಾಮಾನ್ಯರಲ್ಲಿ ದೀನದಲಿತರ ಉದ್ಧಾರದಲ್ಲಿ ಅದೆಷ್ಟು ಮಮತೆ ಇತ್ತೆಂಬುದು ವ್ಯಕ್ತವಾಗುವುದು. ಅಂದು ಆ ಮಹನೀಯರು ಮಾಡಿದ ಉಪಕಾರವೇ ಇಂದು ಜನತೆಗೆ ತಮ್ಮ ಭಾಷೆ-ಸಂಸ್ಕೃತಿ-ಸಾಹಿತ್ಯಗಳಲ್ಲಿ ಅತ್ಯಭಿಮಾನ ಮೂಡಲು ಕಾರಣವಾಗಿದೆಯೆಂದರೂ ತಪ್ಪಾಗದು. ಇಂತು ಕನ್ನಡ ಹರಿದಾಸರು ಮಾಡಿದ ಈ ಮಹೋಪಕಾರ,ಕನ್ನಡ ಜಾಗೃತಿಯನ್ನು ಕನ್ನಡಜನತೆ ಎಂದಿಗೂ ಮರೆಯುವಂತಿಲ್ಲ.

ವ್ಯಾಸರಾಜರ ಶಿಷ್ಯರಲ್ಲಿ ವಿಜಯೀಂದ್ರರು ಮತ್ತು ವಾದಿರಾಜರು ಪ್ರಮುಖರು, ವಿಜಯೀಂದ್ರರು ಶ್ರೀ ಮಧ್ವಾಚಾರ್ಯರ ಮಹಾಸಂಸ್ಥಾನಾಧೀಶ್ವರರಾದ ಶ್ರೀ ಕವೀಂದ್ರ-ವಿಬುಧೇಂದ್ರತೀರ್ಥರ ಮಹಾಪೀಠಾಧಿಪತಿಗಳು. ಸಕಲಶಾಸ್ತ್ರ ವಿಶಾರದರಾದ ಅವರು "ಸರ್ವತಂತ್ರ ಸ್ವತಂತ್ರ"ರೆಂದು ಖ್ಯಾತರಾಗಿದ್ದರು. ಶ್ರೀವ್ಯಾಸರಾಜರ ತರುವಾಯ ದ್ವೈತಸಿದ್ಧಾಂತವನ್ನು ಎತ್ತಿಹಿಡಿದು ನೂರಾರು ಗ್ರಂಥರಚನೆ, ವಾದಿ ದಿಗ್ವಿಜಯ, ಪಾಠಪ್ರವಚನ ದ್ವಾರಾ ಸಿದ್ಧಾಂತವನ್ನು ಪೋಷಿಸಿಕೊಂಡು ಬಂದ ಮಹನೀಯರಿವರು. ಶ್ರೀವ್ಯಾಸರಾಜರ ವಿದ್ಯಾಶಿಷ್ಯರಾದ ಇವರು ಗುರುಗಳ ಆದೇಶದಂತೆ ಕನ್ನಡ ಹರಿದಾಸ ಸಾಹಿತ್ಯಕ್ಕೆ ಮುಖ್ಯ ಪೋಷಕರಾಗಿದ್ದು ಅದನ್ನು ಸರ್ವತೋಮುಖವಾಗಿ ಬೆಳೆಸಿಕೊಂಡು ಬಂದುದಲ್ಲದೆ ಸ್ವತಃ ಅನೇಕ ಪದಗಳನ್ನು "ವಿಜಯೀಂದ್ರ" ಎಂಬ ಅಂಕಿತದಿಂದ ರಚಿಸಿ ಕನ್ನಡ ಹರಿದಾಸ ಭಂಡಾರವನ್ನು ತುಂಬಿದರು.

"ಯೋಗಿವರ್ಯ ವ್ಯಾಸರಾಯರೆಂಬ ವಿಚಿತ್ರಮೇಘ। ಬೇಗ ವಿಷ್ಣುಪದ ತೋರಿಸುತ್ತಾ ಬಂದಿತಿದಿಕೋ॥", "ಚಂದಿರ ರಾಮನರಾಣಿ ಸೀತೆಯ ಮುಖದಂದಕೆ ಸೋತು ಲಜ್ಜೆಯಿಂದ ರಾತ್ರಿಚರನಾದ॥" ಮುಂತಾದ ಪದಗಳನ್ನೂ,"ಪರಬೊಮ್ಮ ಹರಿಯು ತಾ ನರರರೂಪತಾಳಿದ, ನರನಾದ ದಶರಥನ ಮನೆಗೇಹದಲಿ ಅವತರಿಸಿ . ॥" ಎಂದು ಪ್ರಾರಂಭವಾಗುವ ಒಂದು ಅಪೂರ್ವ ಸುಳಾದಿಯನ್ನೂ ರಚಿಸಿರುವುದಲ್ಲದೆ, ಇದರಂತೆ ಅನೇಕ ಪದ ಪದ್ಯ-ಸುಳಾದಿಗಳನ್ನು ರಚಿಸಿ ಕನ್ನಡ

ಹರಿದಾಸ ಸಾಹಿತ್ಯಕ್ಕೆ ಕಳೆತಂದರು. ಶ್ರೀ ವಿಜಯೀಂದ್ರರು ವಾಯುಗಣಕ್ಕೆ ಸೇರಿದ (ಋಜು ಗಣಸ್ಥರು) ದೇವಾಂಶರೆಂದು ಜ್ಞಾನಿಗಳು ಅವರನ್ನು ಕೊಂಡಾಡುವರು.

ಸೋದೇಮಠಾಧೀಶರಾದ ಶ್ರೀವಾದಿರಾಜರು ಶ್ರೀವ್ಯಾಸರಾಯರ ಮತ್ತೊಬ್ಬ ಪ್ರಮುಖಶಿಷ್ಯರು. ಇವರು ಸರ್ವಶಾಸ್ತ್ರಗಳನ್ನೂ ಶ್ರೀವ್ಯಾಸತೀರ್ಥರಲ್ಲಿಯೇ ಅಧ್ಯಯನಮಾಡಿದ ಭಾಗ್ಯಶಾಲಿಗಳು. ಇವರು ಶ್ರೀಹಯಗ್ರೀವದೇವರ ಉಪಾಸಕರು. ಭಾರತಾದ್ಯಂತ ತೀರ್ಥಕ್ಷೇತ್ರಗಳನ್ನು ಸಂಚರಿಸಿ ಆಯಾ ಕ್ಷೇತ್ರತೀರ್ಥಸ್ಥ ಭಗವನ್ಮೂರ್ತಿಗಳು, ಮತ್ತು ಮಹಿಮಾದಿಗಳನ್ನು ವರ್ಣಿಸಿ ಸಂಸ್ಕೃತದಲ್ಲಿ "ತೀರ್ಥಪ್ರಬಂಧ"ವೆಂಬ ಉತ್ಕೃಷ್ಟಕಾವ್ಯವನ್ನು ರಚಿಸಿದ್ದಾರೆ. ಇವರ ರುಕ್ಮಿಣೀಶವಿಜಯ ಮಹಾಕಾವ್ಯವು ಸಂಸ್ಕೃತ ಸಾಹಿತ್ಯಕ್ಕೆ ಅವರು ನೀಡಿದ ಮಹಾಕೊಡುಗೆಯಾಗಿದೆ. ಇದರಂತೆ 50–60 ಸಣ್ಣಪುಟ್ಟಕಾವ್ಯ-ಸ್ತೋತ್ರಾದಿಗಳನ್ನು ಸಂಸ್ಕೃತದಲ್ಲಿ ರಚಿಸಿರುವರು. ಶ್ರೀಗಳವರ ಯುಕ್ತಿಮಲ್ಲಿಕಾ–ಲಕ್ಷಾಭರಣಾದಿ ವೇದಾಂತಗ್ರಂಥಗಳು ದ್ವೈತ ಶಾಸ್ತ್ರದ ಅಮೋಘಕೃತಿಗಳೆನಿಸಿವೆ. ಇದರಂತೆ ಶ್ರೀವ್ಯಾಸರಾಜರ ವಿದ್ಯಾಶಿಷ್ಯರಾದ ಇವರು, ಗುರುಗಳು ಹಾಕಿಕೊಟ್ಟ ಮಾರ್ಗದಲ್ಲಿ ಮುನ್ನಡೆದು ಹಯವದನ ಎಂಬ ಅಂಕಿತದಿಂದ ನೂರಾರು ಪದಗಳನ್ನು ರಚಿಸಿ ಹರಿದಾಸಸಾಹಿತ್ಯಕ್ಕೆ ಅಸಾಧರಣ ಕೊಡುಗೆ ನೀಡಿದ್ದಾರೆ. ಇದಲ್ಲದೆ "ಲಕ್ಷ್ಮೀಶೋಭಾನೆ. ತಾತ್ಪರ್ಯನಿರ್ಣಯ ಕನ್ನಡಅನುವಾದ ಕಾವ್ಯ, ವೈಕುಂಠವರ್ಣನೆ, ಗುಂಡಕ್ರಿಯಾ, ಸ್ವಪ್ನಗದ್ಯ"ಮುಂತಾದ ಕನ್ನಡ ಕಾವ್ಯಗಳನ್ನು ರಚಿಸಿ ಮಹೋಪಕಾರವಾಡಿದ್ದಾರೆ. ವಿಜಯೀಂದ್ರ ವಾದಿರಾಜರಂಥ ಜ್ಞಾನಿನಾಯಕರು ಕನ್ನಡಹರಿದಾಸಸಾಹಿತ್ಯಕ್ಕೆ ನೀಡಿರುವ ಕೊಡುಗೆಗಳನ್ನು ಯಾರೂ ಮರೆಯುವಂತಿಲ್ಲ ವಾದಿರಾಜರು ಭಾವೀ ಬ್ರಹ್ಮಪಟ್ಟಕ್ಕೆ ಬರುವ ಲಾತವ್ಯರೆಂಬ ಋಜುಗಣಸ್ಥರೆಂದು ಜ್ಞಾನಿಗಳು ಕೊಂಡಾಡುವರು.

ಪುರಂದರದಾಸರು ಕನ್ನಡದಾಸಸಾಹಿತ್ಯದ ಅತ್ಯುನ್ನತಿಯ ಕಾಲದ ಮಹೋನ್ನತವ್ಯಕ್ತಿ. ಪುರಂದರದಾಸರ ಹೆಸರು ದಾಸಸಾಹಿತ್ಯದ ಜೊತೆಗೆ ಒಂದಾಗಿ ಇಂದಿಗೂ ಅಮರವಾಗಿದೆ. ಇವರನ್ನು ಗುರುಗಳಾದ ವ್ಯಾಸರಾಜರೇ ಕೊಂಡಾಡಿದ್ದಾರೆ. ದಾಸರು ರಚಿಸಿದ ಪದ–ಪದ್ಯ–ಸುಳಾದಿ–ಉಗಾಭೋಗಗಳನ್ನೊಳಗೊಂಡ ಅಗಾಧ ಸಾಹಿತ್ಯವನ್ನು ವ್ಯಾಸರಾಜರು "ಪುರಂದರೋಪನಿಷತ್" ಎಂದು ವ್ಯಾಸಪೀಠದ ಮೇಲಿಟ್ಟು ಗೌರವಿಸಿದರೆಂದಮೇಲೆ ಆ ದಿವ್ಯಸಾಹಿತ್ಯದ ಹಿರಿಮೆ-ಗರಿಮೆಗಳೆಂತಹುದೆಂಬುದು ವೇದ್ಯವಾಗುವುದು. ಪುರಂದರದಾಸರ ಹೆಸರು ಕನ್ನಡ ದಾಸಸಾಹಿತ್ಯ ಪರಂಪರೆಯಲ್ಲಿ ಚಿರಸ್ಥಾಯಿಯಾಗಿನಿಲ್ಲಲು ಅವರು ನೀಡಿರುವ ಅಮೋಘಸಾಹಿತ್ಯವೇ ಕಾರಣ. ಅವರು ಒಟ್ಟು ನಾಲ್ಕುಲಕ್ಷದ ಇಪ್ಪತ್ತೈದುಸಾವಿರ ಪದಗಳನ್ನು ರಚಿಸಿರುವರು. "ವಾಸುದೇವನ ನಾಮಾವಳಿಯಕ್ಲಪ್ತಿಯನು ವ್ಯಾಸರಾಯರ ದಯದಿಂದ ಬಣ್ಣಿಪೆನು ! ಕೇದಾರ-ರಾಮೇಶ್ವರ-ಕೇರಳ ಭೂತಳದ ಪಾದಾರವಿಂದ ಕ್ಷೇತ್ರ

ಪ್ರತಿಕ್ಷೇತ್ರವು ಆದರದಿಂದ ಲಕ್ಷದಿಪ್ಪತ್ತೈದುಸಾವಿರ ಕೃತಿಯು! ವೇದಶಾಸ್ತ್ರಪುರಾಣ ಸಮ್ಮತದಿಂದ॥೧॥" ಎಂದು ಪ್ರಾರಂಭವಾಗುವ ಏಳುನುಡಿಯ ಪದದಲ್ಲಿ ಶ್ರೀದಾಸರೇ ವಿವರವಾಗಿ ತಿಳಿಸಿದ್ದಾರೆ ದಾಸರಾಯರ ಕೃತಿರಚನೆಯ ಕ್ರಮ ಈ ವಿಧವಾಗಿದೆ—

| | | |
|---|---|---|
| 1. | ಕೇದಾರದಿಂದ ರಾಮೇಶ್ವರ ಪರ್ಯಂತ ಸಕಲತೀರ್ಥ-ಕ್ಷೇತ್ರಗಳ ಮಹಿಮೆ ಮತ್ತು ಸ್ಥಳಪುರಾಣಸಹಿತ— | 125000 |
| 2. | ಮಧ್ವಾಚಾರ್ಯರು ಮತ್ತು ಅವರ ಪರಂಪರೆಯಲ್ಲಿ ವ್ಯಾಸರಾಯರವರೆಗೆ ಸ್ತೋತ್ರ, ತಂತ್ರಸಾರ, ದೇವತಾತಾರತಮ್ಯ– | 5000 |
| 3. | ಬ್ರಹ್ಮಲೋಕಾದಿ ದೇವತಾಲೋಕಗಳ ವರ್ಣನೆ— | 90000 |
| 4. | ಪುರಾಣಕಥಗಳ ಸಾರ— | 90000 |
| 5. | ದೇವತಾಮೂರ್ತಿಧ್ಯಾನ, ಅವರ ಕೀರ್ತಿಮಾನ-ಗಂಡಕೀ ಮಹಾತ್ಮೆ, ಕಲ್ಯಾಣಚರಿತೆಗಳು— | 60000 |
| 6. | ಆಹ್ನಿಕಪದ್ಧತಿ, ಏಕಾದಶೀ-ಜಯಂತೀ ನಿರ್ಣಯ, ಶ್ರುತಿಸ್ಮೃತಿಗಳ ಸಹಿತ— | 16000 |
| 7. | ಸುಳಾದಿಗಳು— | 64000 |
| 8. | ದೇವರನಾಮಗಳು— | 25000 |
| | ಒಟ್ಟುರಚನೆ : | 425000 |

ಇಷ್ಟು ವಿಸ್ತಾರವಾದ ಸಾಹಿತ್ಯ ಒದಗಿಸಿಕೊಟ್ಟಿದ್ದರಿಂದಲೇ ಇವನ್ನು ವ್ಯಾಸರಾಯರು "ಪುರಂದರೋಪನಿಷತ್" ಎಂದು ಕರೆದರು. ಮತ್ತು ಶಿಷ್ಯರಾದರೂ ಇವರನ್ನು "ದಾಸರೆಂದರೆ ಪುರಂದರ ದಾಸರಯ್ಯ !" ಎಂದು ಹೊಗಳಿದರು. ದಾಸರ ಶೈಲಿ ಅತ್ಯಂತ ಸರಳ, ಭಾವ ಬಹಳ ಚೇತೋಹಾರಿ, ಅಂತೆಯೇ ಇಂದಿಗೂ ಅವರ ನೂರಾರು ಪದಗಳು ಕನ್ನಡಿಗರ ಬಾಯಿಯಲ್ಲಿ ತಾನೇತಾನಾಗಿ ನೆಲೆಸಿಹೋಗಿವೆ.

ಪುರಂದರದಾಸರು ಕರ್ನಾಟಕ ಸಂಗೀತಪಿತಾಮಹರೆನಿಸಿದ್ದಾರೆ. ಕನ್ನಡಭಾಷೆಯಲ್ಲಿ ಸಂಗೀತಕ್ಕೆ ಮೊಟ್ಟಮೊದಲು ಸಾಹಿತ್ಯವನ್ನು ಪುರಂದರದಾಸರು ಮತ್ತು ಪರಂಪರೆಯವರು ಒದಗಿಸಿಕೊಟ್ಟು ಕರ್ನಾಟಕ ಸಂಗೀತಕ್ಕೆ ಒಂದು ಸ್ವರೂಪಕೊಟ್ಟು ಪ್ರಸಾರಮಾಡಿದ್ದರಿಂದ ಇವರನ್ನು ಅಂದಿನಿಂದ ಇಂದಿನವರೆಗೆ ಸಮಸ್ತವಾಗ್ಗೇಯಕಾರರು ಮತ್ತು ಸಂಗೀತಗಾರರು, ಲಕ್ಷಣಗ್ರಂಥ, ಸಂಗೀತಗ್ರಂಥಕಾರರುಗಳು ಬಹುಭಕ್ತಿಯಿಂದ 'ಕರ್ನಾಟಕಸಂಗೀತ ಪ್ರವರ್ತಕರು, ಪಿತಾಮಹರು' ಮುಂತಾಗಿ ಗೌರವಿಸುತ್ತಾ ಬಂದಿದ್ದಾರೆ. ಕನ್ನಡಹರಿದಾಸಸಾಹಿತ್ಯಕ್ಕೆ ಸಂಗೀತವನ್ನು ಬೆರೆಸಿ ಗಾಯನಕ್ರಮದಲ್ಲಿ ಪ್ರಸಾರಮಾಡಿದಕೀರ್ತಿ ಮೊಟ್ಟಮೊದಲು ಶ್ರೀಪಾದರಾಜ-ವ್ಯಾಸರಾಜ–

ಪುರಂದರದಾಸರಿಗೆ ಸಲ್ಲುವುದು. ಇದೊಂದು ಅಭೂರ್ವಕೊಡುಗೆ ಎಂದು ಹೇಳಲು, ಹೆಮ್ಮೆಯೆನಿಸುವುದು. ಕನ್ನಡಪದಗಳಿಗೆ ಸಂಗೀತ ಬೆರೆಸಿ ಗಾಯನಕ್ಕೆ ಅನುಕೂಲ ವಾಗುವಂತೆ ಮಾಡಿ ಜನತೆಗೆ ನೀಡಿದ್ದರಿಂದ ಅದು ಸರ್ವರನ್ನೂ ಆಕರ್ಷಿಸಿ, ಜನಪ್ರಿಯವಾಗಿ ತನ್ನ ಗುರಿಸಾಧಿಸಿತೆಂದು ಹೇಳಬಹುದು.

ಶ್ರೀಪುರಂದರದಾಸರ ನಾಲ್ವರು ಮಕ್ಕಳೂ ದಾಸದೀಕ್ಷೆವಹಿಸಿ ಹರಿದಾಸರಾದರು. ಅವರು "ವರದಪುರಂದರವಿಠಲ", "ಗುರುಪುರಂದರವಿಠಲ", "ಅಭಿನವಪುರಂದರ ವಿಠಲ" ಮತ್ತು "ಗುರುಮಧ್ವಪತಿ" ಎಂಬ ಅಂಕಿತದಿಂದ ಸಹಸ್ರಾರು ದೇವರ ನಾಮಗಳನ್ನು ರಚಿಸಿ ದಾಸವಾಙ್ಮಯದ ಬೆಳವಣಿಗೆಗೆ ಕಾರಣರಾದರು. ಈ ನಾಲ್ವರೂ ಕ್ರಮವಾಗಿ ಚಂದ್ರ, ಸೂರ್ಯ, ಬೃಹಸ್ಪತಿ ಮತ್ತು ಭೃಗುಋಷಿಗಳ ಅಂಶರೆಂದು ಶ್ರೀವಿಜಯದಾಸರು ಹೊಗಳಿದ್ದಾರೆ.

ಕನ್ನಡಹರಿದಾಸಸಾಹಿತ್ಯಕ್ಕೆ ಅಪೂರ್ವಕಾಣಿಕೆಗಳನ್ನಿತ್ತು ದಾಸವಾಙ್ಮಯವನ್ನು ಶ್ರೀಮಂತಗೊಳಿಸಿದ ಇನ್ನೊಬ್ಬ ಮಹನೀಯರು ಶ್ರೀಕನಕದಾಸರು. ಇವರು 'ಆದಿಕೇಶವ' ಎಂಬ ಅಂಕಿತದಿಂದ ಕೃತಿಗಳನ್ನು ರಚಿಸಿದ್ದಾರೆ. ಕನಕದಾಸರು ಬಿಡಿಯಾಗಿ ಸಾವಿರಾರು ಪದಗಳನ್ನು ಮಾಡಿರುವುದಲ್ಲದೇ "ಮೋಹನತರಂಗಿಣಿ, ಹರಿಭಕ್ತಿಸಾರ, ನಳಚರಿತ್ರೆ, ನರಸಿಂಹಸ್ತವ, ರಾಮಧ್ಯಾನಚರಿತ್ರೆ" ಮುಂತಾದ ಕನ್ನಡಕಾವ್ಯಪ್ರಬಂಧ ಗಳನ್ನು ರಚಿಸಿರುವರು. ಕನಕದಾಸರ ಮುಂಡಿಗೆಗಳಂತೂ ಪಂಡಿತರಿಂದಲೂ ಬಿಡಿಸ ಲಾಗದ ಸಮಸ್ಯೆಗಳು ! ಇವರ ಕೃತಿಯಲ್ಲಿ ಪದಲಾಲಿತ್ಯ, ಶಬ್ದಕ್ಕಿಂತ ಹೆಚ್ಚಾಗಿ ಅರ್ಥದ ಬಿಕ್ಕಟ್ಟು, ಹೃದಯಕ್ಕೆ ನಾಟುವಂತಹ ಪದಗಳು, ನಿರ್ದಾಕ್ಷಿಣ್ಯ ಮಾತುಗಳು ಎದ್ದು ತೋರುವುವು. ಮಾರಿ ಮಸಣಿ ಮೊದಲಾದ ಕ್ಷುದ್ರದೇವತೆಗಳನ್ನು ಪೂಜಿ ಸುವ ಅಸಂಸ್ಕೃತರ ಮೇಲೂ ಪರಿಣಾಮ ಮಾಡುವಂತಹ ಅನೇಕ ಪದಗಳನ್ನು ರಚಿಸಿರುವರು. ಈ ಪದಗಳಲ್ಲಿನ ಶಬ್ದಗಳು ಆ ಜನರಲ್ಲಿ ನಿತ್ಯಬಳಕೆಯಲ್ಲಿರು ವಂತಹವೇ. ಕನಕದಾಸರು ಆ ಜನರಲ್ಲಿದ್ದ ಎಷ್ಟೋ ಅಂಧಾಚಾರಗಳನ್ನು ನಿಲ್ಲಿಸಿ ಅವರಲ್ಲಿ ಹರಿಭಕ್ತಿಮೂಡುವಂತೆ ಮಾಡಿದರು. ಇದೊಂದು ದೊಡ್ಡ ಸಮಾಜ ಸುಧಾರಣೆ ಎಂದೇ ಹೇಳಬೇಕು. ಮೊದಲು ಶ್ರೀವೈಷ್ಣವಪಂಥದ ಅನುಯಾಯಿ ಗಳಾಗಿದ್ದ ಕನಕನಾಯಕರು ಶ್ರೀಹರಿಯ ಅಪ್ಪಣೆಯಂತೆ ಶ್ರೀವ್ಯಾಸರಾಜರ ಶಿಷ್ಯರಾಗಿ ಅಂಕಿತಪಡೆದು ಮಾಧ್ವಮತಾನುಯಾಯಿಗಳಾದರು. ವ್ಯಾಸರಾಜರಿಂದ ಉಪದೇಶ ಪಡೆದು ಅವರ ಶಿಷ್ಯರಾದ ಇವರು ಹರಿಶರಣರಗುಂಪಿನಲ್ಲಿ ಒಂದು ಶಿರೋಮಣಿ ಯಂತೆ ಶೋಭಿಸುವರು. ಇವರು ಯಮಾಂಶರೆಂದು ಹರಿದಾಸರು ಹೊಗಳುವರು.

ವ್ಯಾಸರಾಜರ ಪ್ರಭಾವಕ್ಕೊಳಗಾದ ಹರಿಶರಣರ ಗುಂಪಿನಲ್ಲಿ ಮತ್ತೊಬ್ಬ ಮಹನೀಯನೆಂದರೆ ಗದುಗಿನ ನಾರಾಯಣಪ್ಪ. ಈತ ಮಾಧ್ವಸಂಪ್ರದಾಯದವನು, ವ್ಯಾಸರಾಜರ ಶಿಷ್ಯ. ಪುರಂದರದಾಸರ ಗೆಳೆಯ, ಇವನು ಕನ್ನಡ ಮಹಾಭಾರತವನ್ನು ರಚಿಸಿಕೊಂಡು ಬಂದು ಪುರಂದರದಾಸರದ್ವಾರಾ ಗುರುಗಳಾದ ವ್ಯಾಸರಾಜರನ್ನು

'ವಿಶ್ವಪಾವನಮಠ'ದಲ್ಲಿ ಸಂದರ್ಶಿಸಿ ತಾನು ರಚಿಸಿರುವ ಮಹಾಕಾವ್ಯವನ್ನು ಪರಿಶೀಲಿಸಿ ಆಶೀರ್ವದಿಸಬೇಕೆಂದು ಪ್ರಾರ್ಥಿಸಿದ. ಶ್ರೀವ್ಯಾಸರಾಜರು ಆ ಗ್ರಂಥವನ್ನು ಆಮೂಲಾಗ್ರ ಪರಿಶೀಲಿಸಿ ಪರಮಾನಂದಭರಿತರಾಗಿ ಆ ಮಹಾಕಾವ್ಯದ ಮಹತ್ವವನ್ನು ನಿರೂಪಿಸುವ "ಅರಸುಗಳಿಗಿದು ವೀರ ದ್ವಿಜರಿಗೆ। ಪರಮವೇದದಸಾರ ಯೋಗೀಶ್ವರರ ತತ್ತ್ವ ವಿಚಾರ ಮಂತ್ರೀಜನಕೆ ಬುದ್ಧಿಗುಣ। ವಿರಹಿಗಳ ಶೃಂಗಾರ ವಿದ್ಯಾಪರಿಣತರಲಂಕಾರ ಕಾವ್ಯಕೆ ಗುರುವೆನಲು ವಿರಚಿಸಿದ ಕುಮಾರವ್ಯಾಸ ಭಾರತವ ॥" ಎಂಬ ಪದ್ಯವನ್ನು ರಚಿಸಿಕೊಟ್ಟು "ಕುಮಾರವ್ಯಾಸ" ಎಂದು ಗೌರವಿಸಿದರು. ವ್ಯಾಸಮುನಿಗಳ ಆಣತಿಯಂತೆ ವಿದ್ಯಾಪಕ್ಷಪಾತಿಯಾದ ಕೃಷ್ಣದೇವರಾಯನೂ ನಾರಾಯಣಪ್ಪನನ್ನು ವಿಶೇಷವಾಗಿ ಸನ್ಮಾನಿಸಿದನು. ಈತನ ಕಾವ್ಯದಲ್ಲೆಲ್ಲಾ ವಿಷ್ಣುಭಕ್ತಿ ಹಾಸುಹೊಕ್ಕಾಗಿ ಹರಿದು ಬಂದಿದೆ. ಇಂತಹ ವಿಷ್ಣುಸರ್ವೋತ್ತಮತ್ವ, ವಾಯುದೇವರ ಮಹಿಮೆಯನ್ನು ಎತ್ತಿಹಿಡಿಯುವ ಕಾವ್ಯ ಮಾಧ್ವನಿಂದಲ್ಲದೆ ಬೇರೊಬ್ಬರಿಂದ ನಿರ್ಮಿಸಲು ಸಾಧ್ಯವಿಲ್ಲ! ನಾರಾಯಣಪ್ಪನ ಕಾವ್ಯವೇ ಇದಕ್ಕೆ ಸಾಕ್ಷಿಯಾಗಿದೆ. ನಾರಾಯಣಪ್ಪನು ತನ್ನ ಕಾವ್ಯರಚನೆಯ ಮಂಗಳಾಚರಣದಲ್ಲಿ ಹೇಳಿರುವ ಈ ಪದ್ಯವನ್ನು ನೋಡಿದರೆ ಇವನು ಮಾಧ್ವನೆಂದು ಸ್ಪಷ್ಟವಾಗುವುದು.

"ವಂದಿತಾಮರ ಸೇವ್ಯನಾಯಕ
ನಂದಮುನಿಯತಿಚಕ್ರವರ್ತಿಯು
ಕಂದ ನತಸಂಸಾರಕಾನನ ಘನದವಾನಳನು ।
ನಂದನಂದನ ಸನ್ನಿಭನು
ಸಾನಂದದಿಂದಲೀ ನಮ್ಮವನು ಕೃಪೆ
ಯಿಂದ ಸಲಹುಗೆ ದೇವ ಜಗದಾರಾಧ್ಯ ಗುರುರಾಯ ॥[1]

ಈ ಪದ್ಯದಲ್ಲಿ ಮಧ್ವಾಚಾರ್ಯರನ್ನು ಸ್ತುತಿಸಿದ್ದಾನೆ. ಇದರಂತೆ ಕುಂತೀದೇವಿಯು ವಾಯುದೇವರಿಂದ ಭೀಮಸೇನದೇವರನ್ನು ಪಡೆದ ಸಂದರ್ಭವನ್ನು ವರ್ಣಿಸುವಾಗ—

"ಎಂದ ಬಳಿಕರವಿಂದಲೋಚನೆ
ಯೆಂದು ಸಾಕ್ಷಾದ್ದೇವಮಧ್ವರ
ತಂದೆಯನು ಋಜುಗಣದ ಮುಖ್ಯಪ್ರಾಣದೇವನನು ॥"

ಎಂದಿರುವುದಂತೂ ನಾರಾಯಣಪ್ಪನು ಶುದ್ಧ ಮಾಧ್ವನೆಂದೇ ಸಾರುವುದು. ಇದರಂತೆ ಅನೇಕ ಪ್ರಕರಣಗಳಲ್ಲಿ ಈತನು ಶ್ರೀಹರಿವಾಯುಗಳ ಮಹತ್ವವನ್ನು ಎತ್ತಿಹಿಡಿದಿದ್ದಾನೆ. ಇವೆಲ್ಲವನ್ನೂ ಪರಿಶೀಲಿಸಿದಾಗ ಇವನು ಮಾಧ್ವಮಾತ್ರವಲ್ಲ, ಶ್ರೀವ್ಯಾಸ

1. ಮೈಸೂರು ಓರಿಯಂಟಲ್ ಲೈಬ್ರರಿಯಿಂದ ಪ್ರಕಟವಾದ ನಾರಾಯಣಪ್ಪನ ಕನ್ನಡ ಭಾರತ ಕಥಾಮಂಜರಿ ನೋಡಿರಿ.

ರಾಜರ ಅನುಗ್ರಹಕ್ಕೆ ಪಾತ್ರನಾದ ಶಿಷ್ಯನೆಂದು ಸ್ಪಷ್ಟವಾಗುವುದು. ಶ್ರೀಪುರಂದರ ದಾಸರು ಒಂದು ಸುಳಾದಿಯಲ್ಲಿ—

"ಹರಿಶರಣರೆನ್ನ ಮನೆ ಮೆಟ್ಟಲು ಮನೆ ।
ಪಾವನ್ನವಾಯಿತು ಆಆಆ ।
ಹರಿಶರಣರೆನ್ನ ಕೂಡಿ ಮಾತಾಡೆ ಮನವು ।
ಕರಣಂಗಳು ಪಾವನ್ನ ಆಆಆ ॥
.... .. ............................
ಹರಿ ಗದುಗಿನ ವೀರನಾರಾಯಣಸ್ವಾಮಿ ।
ಹರಿ ಪುರಂದರವಿಠಲರೇಯ ಆಆ॥"

ಎಂದು ಹಾಡಿ ಕುಮಾರವ್ಯಾಸನ ಕಾವ್ಯವನ್ನು ಅದರಲ್ಲಿ ಪರತತ್ವನಾದ ಶ್ರೀಕೃಷ್ಣನನ್ನು ಹೊಗಳಿರುವುದನ್ನು ವರ್ಣಿಸಿರುವುದಲ್ಲದೆ ನಾರಾಯಣಪ್ಪನು ತಮ್ಮ ಮನೆಗೆ ಬಂದು ಮಾತನಾಡಿ ಊಟಮಾಡಿದನೆಂದು ಹೇಳಿಕೊಂಡಿದ್ದಾರೆ. ಇದರಿಂದಲೂ ಕನ್ನಡಭಾರತದಲ್ಲಿ ಅಲ್ಲಲ್ಲಿ ಶ್ರೀಮದಾಚಾರ್ಯರ ತಾತ್ಪರ್ಯ ನಿರ್ಣಯದಲ್ಲಿ ಹೇಳಿರುವುದನ್ನೇ ನಿರೂಪಿಸಿರುವುದು- ಅವನು ಮಾಧ್ವಹರಿಶರಣನೆಂದು ಸ್ಪಷ್ಟಪಡಿಸುವುದು. ವಿಜಯೀಂದ್ರ, ವಾದಿರಾಜ, ಪುರಂದರ, ಕನಕ, ನಾರಾಯಣಪ್ಪ, ತಿಮ್ಮಣ್ಣಕವಿ ಮುಂತಾದ ಮಹಾಜ್ಞಾನಿಗಳನ್ನು, ಹರಿಶರಣರನ್ನು, ಶ್ರೇಷ್ಠಕವಿಗಳನ್ನು ಕನ್ನಡ ನಾಡಿಗೆ ನೀಡಿದ ಮಹಾನುಭಾವರು ಶ್ರೀವ್ಯಾಸರಾಜಗುರುಗಳು.

ಹೀಗೆ ಹದಿನಾರು-ಹದಿನೇಳನೆಯ ಶತಮಾನದಲ್ಲಿ ವಿಜಯನಗರದ ಕನ್ನಡ ಸಾಮ್ರಾಜ್ಯದ ಸುವರ್ಣಯುಗವೆನಿಸಿದ ಕೃಷ್ಣದೇವರಾಯನ ಕಾಲದಲ್ಲಿ ಶ್ರೀಪಾದ ರಾಜರಿಂದ ವಿಶೇಷಾಕಾರವಾಗಿ ಪ್ರವರ್ತಿಸಲ್ಪಟ್ಟ ಹರಿದಾಸಸಾಹಿತ್ಯವು ಶ್ರೀವ್ಯಾಸ ರಾಜರಿಂದ ಸರ್ವತೋಮುಖವಾಗಿ ಅಭಿವೃದ್ಧಿಸಿತು. ರಾಜಗುರುಗಳಾದ ಶ್ರೀವ್ಯಾಸ ರಾಜರ ಸನ್ನಿಧಿಯಲ್ಲಿ ಮೇಲೆ ನಿರೂಪಿಸಿದ ಜ್ಞಾನಿಗಳೆಲ್ಲರೂ ಒಟ್ಟಾಗಿಸೇರಿ ಶ್ರೀವ್ಯಾಸ ರಾಜರ ನಿರ್ದೇಶನ, ಪುರಂದರದಾಸರ ನಾಯಕತ್ವದಲ್ಲಿ ಅಪೂರ್ವ ಕನ್ನಡಹರಿದಾಸ ಸಾಹಿತ್ಯ ನಿರ್ಮಾಣದಲ್ಲಿ ತೊಡಗಿ ಲಕ್ಷಾಂತರ ಕನ್ನಡಪದ-ಪದ್ಯ-ಸುಳಾದಿ-ಕಾವ್ಯಗಳ ರಚನೆಯ ದ್ವಾರಾ ಸಮುದ್ರದಂತೆ ಅಗಾಧವೂ ವಿಸ್ತಾರವೂ ಆದ ಹರಿದಾಸ ವಾಙ್ಮಯ ಭಂಡಾರವನ್ನು ನಾಡಿಗೆ ನೀಡಿ ಕನ್ನಡಭಾಷೆಗೆ ಮಹತ್ವ ನುತ್ತು ಕಳೆ ಯನ್ನು ತಂದಿತ್ತು ಇಂದಿಗೂ ಆ ಅಮರಸಾಹಿತ್ಯವು ಕನ್ನಡಜನತೆಯಲ್ಲಿ ಕನ್ನಡಾಭಿ ಮಾನ ಮತ್ತು ಸ್ಫೂರ್ತಿಯನ್ನು ಪ್ರಚೋದಿಸುವಂತೆ ಮಹೋಪಕಾರ ಮಾಡಿ ಸರ್ವರ ಗೌರವಾದರ, ಕೃತಜ್ಞತೆಗಳಿಗೆ ಪಾತ್ರರಾಗಿದ್ದಾರೆ.

ಹೀಗೆ ಹದಿಮೂರನೆಯ ಶತಮಾನದಲ್ಲಿಯೇ ಶ್ರೀನರಹರಿತೀರ್ಥರಿಂದ ಆರಂಭ ವಾದ ಕನ್ನಡಹರಿದಾಸಸಾಹಿತ್ಯವು ಮುಂದೆ ಶ್ರೀಪಾದರಾಜರಿಂದ ಪುಷ್ಪಿತವಾಯಿತು.

ಶ್ರೀವ್ಯಾಸರಾಜರಿಂದ ಫಲಭರಿತವಾಯಿತು, ಆ ಅಮೃತಫಲವನ್ನು ಶ್ರೀಪುರಂದರದಾಸರಿಂದ ಕನಕದಾಸರವರೆಗೆ ಜನತೆಯು ಸವಿದು ಕೃತಾರ್ಥವಾಯಿತು. ಈ ಒಂದು ಕಾಲ ಕನ್ನಡ ಹರಿದಾಸ ವಾಙ್ಮಯದ ಸುವರ್ಣಯುಗವೆನಿಸಿತು. ಈ ಸುವರ್ಣಯುಗದಲ್ಲಿ ಕಂಗೊಳಿಸಿದ ಬಹುಜನ ಹರಿದಾಸರು ಕೇವಲ ದೇವೋನ್ಮಾದಿಗಳಷ್ಟೇ ಅಲ್ಲದೆ, ಭಗವದಪರೋಕ್ಷ ಜ್ಞಾನಿಗಳೂ, ದೇವಾಂಶ ಸಂಭೂತರೂ ಆಗಿದ್ದು, ಅವರ ರಚನೆಗಳೆಲ್ಲವೂ ಹರಿದಾಸ ಸಾಹಿತ್ಯಕ್ಕೆ ಅಮೂಲ್ಯ ಕಾಣಿಕೆಯಾಗಿವೆ. ಇವರ ಒಂದೊಂದು ವಾಕ್ಯವೂ ಉಪನಿಷತ್ತಿನ ವಾಕ್ಯಗಳಂತೆ ಬಹು ಸರಳವೂ, ಬಹ್ವರ್ಥಗರ್ಭಿತವೂ ಆಗಿರುವವು. ಈ ಮಹನೀಯರಲ್ಲಿ ಶ್ರೀಪಾದರಾಜರು, ವ್ಯಾಸರಾಜರು, ವಿಜಯೀಂದ್ರರು, ವಾದಿರಾಜರಂಥ ಮಹಾಪಂಡಿತ, ತತ್ವಜ್ಞಾನಿ ಪೀಠಾಧಿಪತಿಗಳೂ, ಪುರಂದರದಾಸರಂಥ ಜ್ಞಾನಿಗಳಾದ ದಾಸಶ್ರೇಷ್ಠರೂ, ಕನಕದಾಸರಂಥ ಶೂದ್ರ ಜನ್ಮದ ಅಪರೋಕ್ಷಜ್ಞಾನಿಗಳೂ, ನಾರಾಯಣಪ್ಪ, ತಿಮ್ಮಣ್ಣರಂಥ ಕವಿಶ್ರೇಷ್ಠರೂ ಇದ್ದು ಜೀವನದ ಎಲ್ಲ ಕ್ಷೇತ್ರಗಳಲ್ಲೂ ಪರಿಣತರಾಗಿದ್ದವರು ಹರಿದಾಸ ದೀಕ್ಷೆಪಡೆದು ಕನ್ನಡಸಾಹಿತ್ಯವನ್ನು ಪೋಷಿಸಿದ್ದು ಕನ್ನಡನಾಡಿನ ಭಾಗ್ಯೋದಯವೆಂದು ಹೇಳಬೇಕು. ಇಂತಹ ಅಪೂರ್ವ ಜ್ಞಾನಿಗಳಿಗೆ ಗುರುಗಳೂ ಪೋಷಕರೂ, ಸ್ಫೂರ್ತಿಯ ಚಿಲುಮೆಯೂ ಆಗಿದ್ದವರು ಶ್ರೀವ್ಯಾಸರಾಜಗುರುಸಾರ್ವಭೌಮರು! ಈ ಮಹನೀಯರಿಗೆಲ್ಲಾ ಆಶ್ರಯ ದೊರೆತುದು ಕರ್ನಾಟಕ ಸಾಮ್ರಾಟನಾದ ಕೃಷ್ಣದೇವರಾಯನಲ್ಲಿ! ಇದು ಮತ್ತೊಂದು ಕನ್ನಡ ಸಾಹಿತ್ಯದ ವೈಶಿಷ್ಟ್ಯ! ಇಂಥ ಜ್ಞಾನಗೋಷ್ಠಿ ಮಾಧ್ವಸಮಾಜಕ್ಕೂ ಅತ್ಯಂತ ಉಪಕಾರವಾಯಿತು.

ಹಿಂದೆ ಪುರಾಣಗಳಲ್ಲಿ ಉಕ್ತವಾದ ನಾರದ-ಪ್ರಹ್ಲಾದಾದಿ ಭಾಗವತ ಶ್ರೇಷ್ಠರುಗಳ ಸಮ್ಮಿಲನವು ಕಲಿಯುಗದಲ್ಲಿ ನರದೇಹದಲ್ಲಿ ಈಗ ಇನ್ನೊಮ್ಮೆ ಆದುದರಿಂದಲೇ ಇಂಥ ಶ್ರೇಷ್ಠ ಭಕ್ತಿಸಾಹಿತ್ಯವು ಹೊರಹೊಮ್ಮಿತು. ಇದರ ಪರಿಣಾಮವು ಕನ್ನಡ ಸಾಹಿತ್ಯ ಮತ್ತು ಜನತೆಯ ಮೇಲೆ ಶಾಶ್ವತವಾಗಿ ಆಯಿತು. ಮಾತ್ರವಲ್ಲ, ಮುಂದೆ ಶ್ರೀವ್ಯಾಸರಾಜಾವತಾರಿಗಳಾದ ಶ್ರೀರಾಘವೇಂದ್ರಸ್ವಾಮಿಗಳವರಿಂದ ಈ ಹರಿದಾಸ ಪಂಥವು ಪೋಷಿತವಾಗಿ ಮುಂದೆ ಶ್ರೀವಾದೀಂದ್ರತೀರ್ಥ-ಶ್ರೀವಸುಧೇಂದ್ರ-ಶ್ರೀವರದೇಂದ್ರ–ಶ್ರೀಭುವನೇಂದ್ರತೀರ್ಥರು ಹಾಗೂ ಶ್ರೀವ್ಯಾಸತತ್ವಜ್ಞತೀರ್ಥರಂಥ ಜ್ಞಾನಿಗಳಿಂದ ಮತ್ತು ಶ್ರೀವಿಜಯದಾಸ, ಶ್ರೀಗೋಪಾಲದಾಸ, ಶ್ರೀಜಗನ್ನಾಥ ದಾಸರಂಥ ಮಹಾಮಹಿಮರಿಂದ ವಿಶೇಷಾಕಾರವಾಗಿ ಅಭಿವೃದ್ಧಿಸಿ, ಅಸಾಧಾರಣ ಹರಿದಾಸ ಸಾಹಿತ್ಯ ಸೃಷ್ಟಿಗೂ ಕಾರಣವಾಯಿತೆಂದು ಧಾರಾಳವಾಗಿ ಹೇಳಬಹುದು. ಇಂಥ ಅಪೂರ್ವ ಕೊಡುಗೆಗಳನ್ನಿತ್ತು ಕನ್ನಡನಾಡು, ಜನತೆ, ಸಂಸ್ಕೃತಿ ಮತ್ತು ಭಾಷೆಗಳಿಗೆ ಮಹೋಪಕಾರ ಮಾಡಿದ ಎಲ್ಲ ಹರಿದಾಸರಿಗೆ ಪ್ರೇರಕಶಕ್ತಿ ಕೇಂದ್ರಬಿಂದುವೆನಿಸಿದ ಶ್ರೀವ್ಯಾಸರಾಜಗುರುಸಾರ್ವಭೌಮರ ಉಪಕಾರವನ್ನು ಅದಾವ ಅಭಿಮಾನಿ ಕನ್ನಡಿಗನು ತಾನೆ ಮರೆಯಲು ಸಾಧ್ಯ ?

## ೫೦. ಜ್ಞಾನಿಗಳ ಸರಸಗೋಷ್ಠಿ

ಶ್ರೀವ್ಯಾಸರಾಜರು ಶ್ರೀಪುರಂದರದಾಸರಿಗೆ ಹರಿದಾಸಪಂಥದ ನಾಯಕತ್ವವನ್ನು ವಹಿಸಿಕೊಟ್ಟು, ಶ್ರೀಕನಕದಾಸರನ್ನು ಅವರಿಗೆ ಬೆಂಬಲಿಗರಾಗಿದ್ದು ಸಹಾಯ ಮಾಡುತ್ತಾ ಹರಿದಾಸ ಸಾಹಿತ್ಯ ರಚನೆಯಿಂದ ಜನಸಾಮಾನ್ಯರ ಉದ್ಧಾರಮಾಡಬೇಕೆಂದು ಆಜ್ಞಾಪಿಸಿದ್ದಂತೆ ಆ ಮಹನೀಯರಿಬ್ಬರೂ ಅಗಾಧ ಸಾಹಿತ್ಯ ನಿರ್ಮಾಣದಿಂದ ಹರಿದಾಸ ವಾಙ್ಮಯ ಭಂಡಾರವನ್ನು ತುಂಬಿ ಆಪಂಡಿತಪಾಮರರು, ಸಕಲ ಸಜ್ಜನರಿಗೂ ಮಹೋಪಕಾರ ಮಾಡಹತ್ತಿದರು. ವ್ಯಾಸರಾಜರು ಪುರಂದರದಾಸ-ಕನಕದಾಸರಲ್ಲಿ ವಿಶೇಷ ಪ್ರೇಮತೋರುತ್ತಾ, ಮಠದಲ್ಲಿ ಅವರನ್ನು ಹೆಚ್ಚಾಗಿ ಗೌರವ ಆದರಗಳಿಂದ ಅವರಿಗೆ ಪ್ರಾಶಸ್ತ್ಯನೀಡಿ ಅನುಗ್ರಹಿಸುತ್ತಿದ್ದರು.

ಪುರಂದರದಾಸರು, ಅವರ ಪುತ್ರರು. ಕನಕದಾಸರುಗಳು ವೇದಾದಿ ಶಾಸ್ತ್ರಸಾರಗಳನ್ನೂ, ಮಧ್ವಮತದ ಸತ್ತತ್ವಗಳನ್ನೂ, ಧರ್ಮ, ಭಗವದ್ಭಕ್ತಿ-ಸದಾಚಾರ-ನೀತಿ ಶೀಲ-ವ್ಯವಹಾರಾದಿ ಮಹತ್ವ, ಅದರ ಆಚರಣೆಯಿಂದ ದೊರಕುವ ಭಗವದನುಗ್ರಹಾದಿ ವಿಚಾರಗಳನ್ನು ಮನೆಮನೆಗಳಿಗೂ ತಲುಪಿಸಿ-ಉಪದೇಶಿಸಿ, ತತ್ವ-ಧರ್ಮ ಸಂಸ್ಕೃತಿಗಳಲ್ಲಿ ಜನತೆಯಲ್ಲಿ ಒಲವುಂಟಾಗುವಂತೆ ಮಾಡುತ್ತಾ, ಅದರಿಂದ ಸಕಲರೂ ಸದಸದ್ವಿವೇಕಶೀಲರಾಗಿ ಆತ್ಮೋದ್ಧಾರ ಮಾರ್ಗದಲ್ಲಿ ಮುನ್ನಡೆವಂತೆ ಮಾರ್ಗದರ್ಶನ ಮಾಡುತ್ತಿದ್ದರು. ಅವರು ಸಮಾಜದ ಡಂಭಾಚಾರ. ಓರೆ-ಕೋರೆಗಳನ್ನು, ಕುಂದು-ಕೊರತೆಗಳನ್ನು ಎತ್ತಿತೋರಿ, ತಮ್ಮ ಉಪದೇಶದಿಂದ ಸಮಾಜವನ್ನು ಸನ್ಮಾರ್ಗದಲ್ಲಿ ಕೊಂಡೈದು ಎಲ್ಲೆಲ್ಲಿಯೂ ಶ್ರೀಹರಿಭಕ್ತಿ, ಧರ್ಮಶ್ರದ್ಧೆ, ಸದಾಚಾರ ಶೀಲ, ಸತ್ಯಗಳು ಕಂಗೊಳಿಸುವಂತೆ ಮಾಡುತ್ತಾ ಗುರುಗಳ ಪ್ರಶಂಸೆಗೆ ಪಾತ್ರರಾದರು. ವ್ಯಾಸರಾಜರು ತಾವು ಪೀಠಾಧಿಪತಿಗಳಾಗಿದ್ದುದರಿಂದ ಈ ಕಾರ್ಯವನ್ನು ಸ್ವತಃ ಮಾಡಲು ಸಾಧ್ಯವಾಗಿರಲಿಲ್ಲವಾದ್ದರಿಂದ ಇಂಥ ಮಹತ್ಕಾರ್ಯವನ್ನು ಪುರಂದರ-ಕನಕದಾಸಾದಿಗಳ ದ್ವಾರಾ ನೆರವೇರಿಸಿದರು. ಇದು ವ್ಯಾಸಮುನಿಗಳು ಮಾಡಿದ ಒಂದು ಕ್ರಾಂತಿಕಾರಿ ಸಮಾಜಸುಧಾರಣಾ ಕಾರ್ಯವೆಂದು ಹೇಳಲಡ್ಡಿಯಿಲ್ಲ.

ಈ ಮಹತ್ಕಾರ್ಯವು ಸರ್ವರ ಮೆಚ್ಚಿಗೆಗೂ ಪಾತ್ರವಾಗಿತ್ತು. ಕನಕದಾಸರಿಗೆ ಶ್ರೀಗಳವರು ಹೆಚ್ಚು ಪ್ರಾಶಸ್ತ್ಯಕೊಡುತ್ತಿದ್ದುದು ಮಠದ ಕೆಲಜನರಿಗೆ, ಪಂಡಿತರಿಗೆ ನುಂಗಲಾರದ ತುತ್ತಾಗಿತ್ತು. ಕನ್ನಡ ಸಾಮ್ರಾಜ್ಯದ ಜನತೆ, ಶ್ರೀಮಠದ ಸಮಸ್ತ ಪಂಡಿತರೂ ಶ್ರೀವ್ಯಾಸರಾಜರು ಮಾಡುವ ಪ್ರತಿಯೊಂದು ಕಾರ್ಯವೂ ಭಗವತ್ಪ್ರೀತಿಕರವೂ, ನಾಡು-ನುಡಿಗಳ ಏಳಿಗೆಗೆ ಕಾರಣವೂ, ಸರ್ವಜನ ಕಲ್ಯಾಣಕಾರಕವೂ ಎಂದು ನಂಬಿದ್ದರೂ, ಪಂಡಿತರಾಗಿದ್ದು, ಗುರುಗಳ ಮಹಿಮೆಯನ್ನು ಅವರ ಉದಾರಭಾವಗಳನ್ನು ಪ್ರತಿದಿನ ಕಾಣುತ್ತಿದ್ದರೂ ಹಿಂದೆ ಹೇಳಿದಂತೆ ಕೆಲ ಅಜ್ಞ-ಅಸೂಯಾಪರಚಿ ಹಕಿಗಳು ಕನಕದಾಸರಿಗೆ ದೊರಕುತ್ತಿದ್ದ ಪ್ರಾಶಸ್ತ್ಯ; ಗೌರವಗಳನ್ನು ಸಹಿಸಲಾಗದೆ

ಒಳಗೇ ಅಸಮಾಧಾನದಿಂದ ಕುದಿಯುತ್ತಿದ್ದರು. ಕನಕದಾಸರ ನಿಜ ಯೋಗ್ಯತೆಯನ್ನರಿಯದ ಆ ಕುಹಕಿಗಳು ಅಲ್ಲಲ್ಲಿ, ಹಿಂದೆ ಮುಂದೆ ವ್ಯಾಸಮುನಿಗಳನ್ನೂ, ಕನಕದಾಸರನ್ನೂ ಆಡಿಕೊಳ್ಳುತ್ತಿದ್ದರು.

ಇದೆಲ್ಲವನ್ನೂ ಪುರಂದರದಾಸರು ಕುಹಕಿಗಳು, ಅಜ್ಞಜನರು. ಮಠದ ಕೆಲ ದಿಂಡೇರು ಕನಕದಾಸರನ್ನು ಆಡಿಕೊಳುವುದನ್ನು ಶ್ರೀವ್ಯಾಸರಾಜರಲ್ಲಿ "ಕನಕದಾಸನ ಮೇಲೆ ದಯಮಾಡೆ ವ್ಯಾಸಮುನಿ ! ಮಠದ ಜನರೆಲ್ಲರೂ ಆಡಿಕೊಂಬುವರು"ಎಂಬ ಪದರಚಿಸಿ–ವಿಜ್ಞಾಪಿಸಿದರು. ವ್ಯಾಸರಾಜರು ಕುಹಕಿಗಳಿಗೆ ಅನೇಕ ಬಗೆಯಾಗಿ ಅವರ ಯೋಗ್ಯತೆಯನ್ನು ನಿರೂಪಿಸಿ ಕನಕದಾಸರ ಮಹತ್ವವನ್ನು ತೋರಿಕೊಟ್ಟರು.

ಕುಹಕಿಗಳು ತಮ್ಮ ತಪ್ಪನ್ನು ಒಪ್ಪಿಕೊಂಡು,ಕನಕದಾಸರಲ್ಲಿ ಕ್ಷಮೆಬೇಡಿ,ಅಂದಿನಿಂದ ಅವರಲ್ಲಿ ಗೌರವದಿಂದ ವರ್ತಿಸತೊಡಗಿದರು ಈ ಒಂದು ಉದಾಹರಣೆಯು ಶ್ರೀವ್ಯಾಸರಾಜರು ಉಚ್ಚ–ನೀಚ-ಎಂಬುದನ್ನು ಪರಿಗಣಿಸದೆ. ಅವರವರ ಸ್ವರೂಪ ಯೋಗ್ಯತೆಯನ್ನರಿತು ಜ್ಞಾನಿಗಳನ್ನು ಗೌರವಿಸುತ್ತಾ, ಅನುಗ್ರಹಿಸುತ್ತಾ, ತಮ್ಮ ಆಚರಣೆಯಿಂದ ಜಗತ್ತಿಗೆ ಆದರ್ಶರಾಗಿದ್ದರೆಂಬುದನ್ನು ಸ್ಪಷ್ಟಪಡಿಸುವುದು.

... .... ....

ಶ್ರೀವ್ಯಾಸರಾಜರು, ಪುರಂದರದಾಸರು, ಕನಕದಾಸರು ಅನೇಕ ವೇಳೆ ಜನಸಂಪರ್ಕವಿಲ್ಲದ ಏಕಾಂತ ಉಪವನ-ನದೀತೀರದಲ್ಲಿ ಕಳೆಯುತ್ತಿದ್ದರು. ಅದೊಂದು ಜ್ಞಾನಿಗಳ ಸರಸಗೋಷ್ಠಿಯಾಗುತ್ತಿತ್ತು. ಪ್ರತಿ ನಿಮಿಷವೂ ರಸನಿಮಿಷಗಳಾಗಿರುತ್ತಿದ್ದವು, ಒಮ್ಮೆ ವ್ಯಾಸರಾಜರು-ಪುರಂದರದಾಸರು ತುಂಗಭದ್ರೆಯ ನದಿಯಾಚೆ ಒಂದು ವನದಲ್ಲಿ ಕುಳಿತು ಮಾತನಾಡುತ್ತಿದ್ದರು.ಜ್ಞಾನಿಗಳು ಸೇರಿದಾಗ ಅವರಾಡುವ ಮಾತುಗಳೆಲ್ಲವೂ ಪರಮಾತ್ಮ ವಿಷಯಕವಾಗಿದ್ದು ಆಧ್ಯಾತ್ಮ ಅನುಭವಗಳ ವಿವೇಚನಾತ್ಮಕ ರಸಘಟ್ಟಗಳೇ ಅಲ್ಲವೇ! ಅವರು ತಮ್ಮ ತಮ್ಮ ಅನುಭವಗಳನ್ನು ಪರಸ್ಪರ ವಿನಿಮಯ ಮಾಡಿಕೊಳ್ಳುತ್ತಾ ಶ್ರೀಹರಿ. ಅವನ ಭಕ್ತರು. ಅವರ ಹಿರಿಮೆ-ಗರಿಮೆ, ದೇವರ ಭಕ್ತವಾತ್ಸಲ್ಯ, ಕಾರುಣ್ಯ. ಆ ಮಹಾಪ್ರಭುವಿನಲ್ಲಿ ಭಕ್ತರು ನಡೆದುಕೊಳ್ಳಬೇಕಾದ ರೀತಿಗಳನ್ನು ಚರ್ಚಿಸುತ್ತಿದ್ದರು. ಆಗವರು ಒಮ್ಮೆ ನಗುವರು,ಮತ್ತೊಮ್ಮೆ ಅಳುವರು, ರೋಮಾಂಚಿತರಾಗಿ ನರ್ತಿಸುವರು, ಮತ್ತೆ ಕಣ್ಣುಮುಚ್ಚಿ ಮೌನವಾಗಿ ಧ್ಯಾನರತರಾಗುವರು! ಹೀಗೆ ನಡೆದಿತ್ತು ಅವರ ವರ್ತನೆ. ಆ ವನದಲ್ಲಿ ಹತ್ತಿರದಲ್ಲೇ ಕುರಿಗಳನ್ನು ಮೇಯಿಸುತ್ತಾ ಓರ್ವ ವೃದ್ಧ ಕುರುಬನು ಇವರ ಎಲ್ಲ ವರ್ತನೆಗಳನ್ನು ಗಮನಿಸುತ್ತ ಅವರ ನಡುವಳಿಕೆಯನ್ನು ಕಂಡು ವಿಸ್ಮಿತನಾಗಿ ಅವರನ್ನೇ ನೋಡುತ್ತಾ ಕುಳಿತಿದ್ದನು.

ಆಗ ಪುರಂದರದಾಸರು"ಸ್ವಾಮಿ, ಈಗ ನಮ್ಮ ಕನಕದಾಸರಿರಬೇಕಾಗಿತ್ತು !" ಎಂದರು. ಗುರುಗಳು "ನಿಜ, ಅವನಿದ್ದರೆ ಸ್ವಾರಸ್ಯವಾಗಿರುತ್ತದೆ. ಇಂದೇಕೆ ಕನಕ

ಬರಲಿಲ್ಲ ? ಅವನಿದ್ದರೇ ಚೆನ್ನ, ಅಲ್ಲವೇ ? ಅವನನ್ನು ಕರೆಸೋಣವೇ ? ಕರೆ ತರಲು ಇಲ್ಲಿ ಯಾರೂ ಇಲ್ಲವಲ್ಲ"ಎಂದರು, ಆಗ ದಾಸರು ದೂರದಲ್ಲಿ ಕುಳಿತಿದ್ದ ಕುರುಬನನ್ನು ಕರೆದು "ಸ್ವಾಮಿ, ಇವನು ಕರತರುತ್ತಾನೆ" ಎಂದರು. ವ್ಯಾಸ ರಾಜರೂ ಆ ಮುದುಕನನ್ನು ಕೈಬೀಸಿ ಬಾ ಎಂದು ಕರೆದರು, ಆತನಿಗೆ ಶ್ರೀಗಳವರು ರಾಜಗುರುಗಳೆಂದು ತಿಳಿದಿತ್ತು. ಅವರಲ್ಲಿಗೆ ಬರಲು ಭಯವಾಯಿತು. ಮತ್ತೆ ಗುರುಗಳು ಕರೆದಿದ್ದರಿಂದ ಹೆದರುತ್ತಲೇ ಬಂದು "ನನ್ನದೇನು ತಪ್ಪಾಯ್ತು ಗುರು ಸ್ವಾಮಿ ? ಇಲ್ಲಿ ಕುರಿ ಮೇಯಿಸಿದ್ದು ತಪ್ಪಾ ? ಈಸಲ ಕ್ಷಮ್ಸಿಬಿಡಿ, ಇನ್ನು ಮ್ಯಾಕೆ ಇಲ್ಲಿ ಮೈಸೋಕಿಲ್ಲ !" ಎಂದ.

ಗುರುಗಳು ನಗುತ್ತಾ "ನೀನು ಕುರಿ ಮೇಯಿಸಲು ನಮ್ಮ ಅಭ್ಯಂತರವಿಲ್ಲಪ್ಪಾ, ನಾವು ಹೇಳುವ ಕೆಲಸ ಮಾಡುವೆಯಾ ?" ಎನಲು, ಮುದುಕನು "ಆಗ್ಬೋದು ಒಡೆಯಾ, ಆದ್ರೆ ನನ್ನೀಕುರಿಯನ್ನು ಕಾಯೋರ್ಯಾರು ?" ಎಂದ.

ದಾಸರು ನಗುತ್ತಾ "ನಾವು ನೋಡ್ಕೋತೇವಪ್ಪಾ, ಗುರುಗಳು ಹೇಳಿದಂತೆ ಮಾಡು" ಎನಲು ಆತ "ಮುದ್ಕನ್ನ ತಮಾಷೆಮಾಡ್ತೀರಾ ಬುದ್ದಿ ?" ಎಂದ.

ಶ್ರೀಗಳವರು "ವಿನೋದ ಅಲ್ಲಪ್ಪಾ,ನೋಡಿಲ್ಲಿ ನಮ್ಮ ಕನಕ ಎಲ್ಲಿದ್ದಾನೆ ನಿನಗೆ ಗೊತ್ತ ? ನೀನು ಅವನನ್ನು ಕರದುಕೊಂಡು ಬಂದರೆ ನೀನು ಕೇಳಿದ್ದು ಕೊಡು ತ್ತೇವೆ" ಎಂದಾಗ ಆ ಕುರುಬನು"ಕೇಳಿದ್ದು ಕೊಡ್ತೀರಾ ಬುದ್ಯೋರಾ ? ಅಂಗಿದ್ರೆ ಕನಕಪ್ಪನ್ನ ಕರೆತರ್ತಿವ್ನಿ" ಎಂದನು. ಶ್ರೀಗಳವರು "ಆಗಲಿ, ನೀನು ಹೋಗಿ ಕನಕ ನನ್ನು ಇಲ್ಲಿಗೆ ಕರೆದುಕೊಂಡು ಬಾ" ಎಂದರು. ಕುರುಬ 'ಆಗ್ಲಿ ನನ್ನೊಡೆಯಾ ನಿಂವಾದ್ವೇಗತಿ" ಎಂದು ಹೇಳಿ ನದಿಯನ್ನು ದಾಟಿ ಕನಕದಾಸರಿದ್ದಲ್ಲಿಗೆ ಬಂದ, 'ಓಯ್ ಕನಕಪ್ಪಾ, ನಿಮ್ಮ ಗುರುಸ್ವಾಮಿಗೋಳು ನಿನ್ನ ಕರೀತಾ ಔವ್ರೆ, ಬಾ, ಓಗೋವಾ" ಎಂದ.

ಕನಕದಾಸರು "ಅಲ್ಲಿ ಯಾರ್‍ಯಾರಿದ್ದಾರೆ ? ಅವರೇನು ಮಾಡುತ್ತಿದ್ದಾರೆ ?" ಎಂದು ಪ್ರಶ್ನಿಸಿದರು, ಮುದುಕ 'ಗುರುಸ್ವಾಮಿ, ದಾಸಪ್ಪ ಇಬ್ರೂ ಅವ್ರೆ. ಅದೇ ನೇನೋ ಮಾತಾಡ್ಕಂತಿದ್ರು, ಆದೇನಪ್ಪಾ ಕನಕಪ್ಪಾ, ಅವ್ರು ಒಮ್ಮೆ ನಗ್ತಿದ್ರು, ಇನ್ನೊಮ್ಮೆ ಅಳ್ತಿದ್ರು, ಮತ್ತೆ ಕಣ್ಣುಮುಚ್ಕೊಂಡ್ ಕೂಡ್ತಿದ್ರು. ನನ್ನ ಕರ್‍ದವ್ರೇ ಲೋ,ಕನಕಪ್ಪನ್ನ ಕರ್‍ಕೊಂಡ್ಬಾ, ನೀಕೇಳಿದ್ ಕೊಡ್ತೇವೆ ಅಂದ್ರಪ್ಪ, ಬಾ ಬೇಗ ಹೋಗೋವಾ" ಎಂದು ಬಡಬಡಿಸಿದನು.

ಕನಕದಾಸರು ನಗುತ್ತಾ 'ಲೋ ನಿನ್ನ ಅದೃಷ್ಟ ಚೆನ್ನಾಗಿದೆ. ಅವರು ನಿನಗೇನು ಬೇಕು ಎಂದು ಕೇಳಿದರೆ ನೀನು ಸ್ವಾಮಿ,ನೀವು ಅತ್ತರಲ್ಲಾ, ಅದರಲ್ಲಿ ಸ್ವಲ್ಪ ನನಗೆ ಕೊಡಿ, ನೀವು ನಕ್ಕಿದ್ದರಲ್ಲಿ ಸ್ವಲ್ಪ ಕೊಡಿ, ಕಣ್ಣುಮುಚ್ಚಿ ದೇವ್ರನ್ನ ಧ್ಯಾನಿಸಿದಿರಲ್ಲ, ಅದರಲ್ಲೂ ಸ್ವಲ್ಪ ನನಗೆ ಕೊಟ್ಟುಬಿಡಿ, ನನಗೆ ಇನ್ನೇನುಬೇಡ! ಎಂದು ಕೇಳಿಬಿಡು,

ಆದರಿಂದ ನಿನಗೆ ಮುಂದಿನ ಜನ್ಮದಲ್ಲಿ ಒಳ್ಳೆಯದಾಗುತ್ತದೆ. ದೇವ್ರು ನಿನಗೆ ಒಲಿಯು ತ್ತಾನೆ'ಎಂದು ಹೇಳಿಕೊಟ್ಟರು. ಅವರ ಮಾತು ಕೇಳಿ ಆ ವೃದ್ಧ ಕುರುಬ ಬೆರಗಾಗಿ 'ಕನಕಪ್ಪ! ಮುಂದಿನ್ ಜನ್ಮದಾಗೆ ನಂಗೊಳ್ಳೆದಾಗೋದಿದ್ರೆ, ನಂಗೊಂದಾಸೆ ಇದೆ ಕನಕಪ್ಪಾ', ಎಂದಾಗ ಕನಕದಾಸರು 'ಅದೇನಪ್ಪಾ ನಿನ್ನಾಸೆ?' ಎಂದರು. ಆಗ ಆ ಮುದುಕ 'ಕನಕಪ್ಪಾ,ನೀನು ನಮ್ಮವ. ಆದ್ರೂ ಸ್ವಾಮ್ಯೋರು ನಿಂಗೆ ಬಲೇ ಮರ್ವಾದೆ ಮಾಡ್ತಾರೆ. ಮುಂದಿನ್ ಜನ್ಮದಾಗೆ ನಾನೂ ನಿನ್ನಂಗೇ ದಾಸ ಆಗ್ಬೇಕು,ದೇವ್ರ ಮಗೆ ಆಗ್ಬೇಕು. ಅಂಗೆ ಆಗೋಂಗೆ ಸ್ವಾಮ್ಗೋಳ್ನ ಕೇಳ್ತಿನ್ನಿ!' ಎಂದು ಹೇಳಿ ಕನಕದಾಸ ರೊಡನೆ ಗುರುಗಳೆಡೆಗೆ ಬಂದನು. ಅವರನ್ನು ಕಂಡೊಡನೆ ಗುರುಗಳು ದಾಸರು ನಕ್ಕರು. ವ್ಯಾಸರಾಜರು 'ಪಾಪ, ಕನಕನನ್ನು ಕರೆತಂದಿದ್ದಾನೆ ಈ ಮುದುಕ. ಇವ ನಿಗೇನಾದರೂ ಕೊಡಬೇಡವೇ ದಾಸರೇ ?' ಎಂದಾಗ ಪುರಂದರದಾಸರು 'ನಿಜ ಸ್ವಾಮಿ ಇವನಿಗೆ ಚೆನ್ನಾಗಿಯೇ ಕೊಡಬೇಕು' ಎಂದರು. ಗುರುಗಳು ಹಸನ್ಮುಖಿ ಗಳಾಗಿ 'ನಿನಗೇನು ಬೇಕಪ್ಪಾ ?' ಎಂದು ಕೇಳಲು ಮುದುಕ ಸ್ವಾಮ್ಯೋರಾ ! ನೀವು ಈ ದಾಸಪ್ಪಾ ನಗ್ತಿದ್ರಲ್ಲಾ, ಅಳ್ತಿದ್ರಲ್ಲಾ, ಕಣ್ಣುಮುಚ್ಚಿ ದೇವರ್ನ ನೆನಸ್ತಿದ್ರಲ್ಲಾ, ಅದೆಲ್ಲದರಾಗೂ ನಂಗೆ ಈಟೀಟು ಕೊಟ್ಬುಡಿ ಸಾಕು'ಎಂದು ಅಡ್ಡಬಿದ್ದು ಕೋರಿದನು.

ದಾಸರು ನಗುತ್ತಾ 'ಇದು ಈ ಮುದುಕನ ಮಾತಲ್ಲಾ ಮಹಾಸ್ವಾಮಿ,ತಾವು ಹೇಳಿದಂತೆ ಕನಕ ಬರುತ್ತಲೂ ಪ್ರಾರಂಭವಾಯ್ತಲ್ಲ ಚಮತ್ಕಾರ!' ಎಂದರು.ವ್ಯಾಸ ಮುನಿಗಳು 'ಎಲಪ್ಪೋ.ನಿಜ ಹೇಳು, ನಿನಗೀ ಮಾತನ್ನು ಯಾರು ಹೇಳಿಕೊಟ್ಟರು?' ಎಂದು ಪ್ರಶ್ನಿಸಿದರು. ವೃದ್ಧ ಕೈಜೋಡಿಸಿ "ನನ್ನಂಥ ಹಳ್ಳಿಮುಕ್ಕನ್ಗೆ ಇನ್ಯಾರ್ ಹೇಳಿಕೊಡ್ತಾರೇ ? ನಮ್ಮ ಈ ಕನಕಪ್ಪನೇ ಹೇಳ್ಕೊಟ್ಟ. ಮುಂದಿನ್ ಜನ್ಮದಾಗೆ ನಂಗೆ ಒಳ್ಳೇದಾಗ್ತೈತಂತೆ! ಕನಕಪ್ಪನ ಮಾತೇಂದ್ರೆ ನಂಗೆಲ್ಲ ದೇವ್ರಮಾತಿದ್ದಾಂಗೆ! ಬುದ್ಧ್ಯೋರಾ! ಮುಂದಿನ್ ಜನ್ಮದಾಗೆ ನಾನೂ ನಂಕನಕಪ್ನಂಗೆ ದೇವರ್‌ದಾಸನಾಗ ಬೇಕು, ಅಂಗೆ ಹರಸಿ ನಾಕೇಳಿದ್ನ ಕೊಟ್ಬುಡಿ" ಎಂದು ಕೋರಿದನು.

ವ್ಯಾಸರಾಜರು "ಸರಿಯಪ್ಪ, ನಮ್ಮ ಕನಕ ಮಾಡೋದೆಲ್ಲಾ ಇಂಥಾ ಒಳ್ಳೇ ಕಾರ್ಯಾನೇ. ಆಗಲಿ,ನೀನು ಕೇಳಿದ್ದನ್ನು ಕೊಟ್ಟಿದ್ದೇವೆ.ನಿನಗೆ ಒಳ್ಳೆಯದಾಗುವುದು ಹೋಗು" ಎಂದು ಆಶೀರ್ವದಿಸಿದರು.[1]

ಆ ವೃದ್ಧ ಮುದುಕನನ್ನು ಕಳಿಸಿದ ಮೇಲೆ ಪುರಂದರದಾಸರು ನಸುನಗುತ್ತಾ "ಕನಕದಾಸರೇ, ಪಾಪ, ಆ ಕುರುಬನಿಗೇನೋ ಮುಂದಿನ ಜನ್ಮದಲ್ಲಿ ದಾಸನಾಗಿ ಹರಿ

---

1 ಈ ವೃದ್ಧ ಕುರುಬನೇ ಮುಂದೆ ಜಗನ್ನಾಥದಾಸರಾಗಿ ಜನಿಸಿ ಅನಿತರಸಾಧಾರಣ ಕೃತಿಗಳನ್ನು ರಚಿಸಿ, ಮಹಾಜ್ಞಾನಿಗಳೆಂದು ಸರ್ವಮಾನ್ಯರಾಗಿ ಕೀರ್ತಿಗಳಿಸಿದರು. ಅವರು ಒಂದು ಪದ ದಲ್ಲಿ ತಮ್ಮ ಜನ್ಮವಿವರವನ್ನು ತಿಳಿಸುತ್ತಾ ಶ್ರೀವ್ಯಾಸರಾಜರ ಅನುಗ್ರಹದಿಂದ ತಾವು ಈ ಜನ್ಮದಲ್ಲಿ ಬಂದಿರುವುದಾಗಿ ತಿಳಿಸಿದ್ದಾರೆ.

ಯನ್ನು ಸೇವಿಸುವ ಭಾಗ್ಯಲಭಿಸಿತು. ಅವನ ವಿಚಾರವಾಯಿತು. ಈಗ ನಮ್ಮ ಮೂರು ಜನರ ವಿಚಾರವೇನು ? ನಾವು ಮತ್ತೇ ಹುಟ್ಟಬೇಕೆ?" ಎಂದು ನಗುತ್ತಾ ಪ್ರಶ್ನಿಸಿದರು. ಕನಕದಾಸರು "ಹೂಂ, ದಾಸರಾಯರೇ ನೀವು ಹುಟ್ಟಲೇ ಬೇಕಾಗುತ್ತದೆ. ಆದರೆ ಅದು ದೂರ, ಬಹುಕಾಲದಮೇಲೆ ನೀವೂ ಜನಿಸಿ ಮತ್ತೆ ಹರಿಸೇವೆ ಮಾಡುತ್ತೀರಿ. ಆಗಲೂ ನಿಮಗೆ ತಂಬೂರಿ ಗೆಜ್ಜೆ ತಪ್ಪಿದ್ದಲ್ಲ. ಹಿಂದೂ. ಇಂದು ಮುಂದೂ ಅದೇ ನಿಮ್ಮ ವೈಶಿಷ್ಟ್ಯ" ಎಂದು ಗಹಗಹಿಸಿ ನಕ್ಕರು. ವ್ಯಾಸ ಮುನೀಂದ್ರರು ಗಂಭೀರರಾಗಿ "ಶ್ರೀಶೇಜ್ಞ್ಯ, ನಮ್ಮ ವಿಚಾರವೇನು?" ಎಂದು ದರಹಾಸ ಬೀರಿದರು.

ಕನಕದಾಸರು ನಗುತ್ತಾ "ಎಲ್ಲಾ ತಿಳಿದಿದ್ದರೂ ಈ ದಾಸನನ್ನೇಕೆ ಪರೀಕ್ಷಿಸುವಿರಿ ? ಮಹಾಸ್ವಾಮಿ, ತಾವೂ ತಮ್ಮ ಕೊನೆಯ ಅವತಾರಕ್ಕೈಗೊಂಡು ಅವತರಿಸಬೇಕಲ್ಲವೇ ? ಆದರೆ, ಗುರುದೇವ! ನಿಮ್ಮ ಅದೃಷ್ಟ ಜಗತ್ತಿನಲ್ಲಿ ಇನ್ಯಾರಿಗೂ ಇಲ್ಲ. ನೋಡಿ ! ಹಿಂದೂ, ಇಂದೂ, ಮುಂದೂ ನೀವು ಆನೆಯ ಮೇಲೆ,ರಥದಲ್ಲಿ,ಪಾಲಕಿಯಲ್ಲಿ ಮೆರೆಯಬೇಕೆಂಬುದೇ ಶ್ರೀಹರಿಸಂಕಲ್ಪ ! ಅವನಿಗೆ ನಿಮ್ಮಲ್ಲಿ ಮತ್ಯಾರಲ್ಲೂ ಇಲ್ಲದ ವಿಶೇಷ ಮಮತೆ!ವಾತ್ಸಲ್ಯ! ಸ್ವಾಮಿ; ಆಹಾ, ನಿಮ್ಮ ಮುಂದಿನ ಜನ್ಮದಲ್ಲಿ ಅಖಂಡ ವಿಶ್ವವನ್ನೇ ಪಾವನಗೊಳಿಸಿ, ಶ್ರೀಹರಿಯ ಪ್ರತಿನಿಧಿಗಳಾಗಿ ಜಗತ್ತಿನಲ್ಲಿ ಮೆರೆಯುತ್ತೀರಿ ! ಆಗಲೂ ನಿಮಗೆ ಈ ಕಾಪಿಸಾಟಿ ಬಿಟ್ಟಿದ್ದಲ್ಲ !" ಎಂದು ನಸುನಕ್ಕರು.

ಶ್ರೀವ್ಯಾಸರಾಜರು : ಸರಿ, ಕನಕ, ನಿನ್ನ ವಿಚಾರ ಹೇಳು.

ಕನಕ : ಊಹೂಂ ನಾನಿನ್ನು ಮತ್ತೆ ಜನಿಸಿ ಕಷ್ಟಪಡಲಾರೆ, ಈಗ ಅನುಭವಿಸಿದ್ದೇ ಸಾಕು. ನಿಮ್ಮ ದಯೆಯಿಂದ ಈ ಕುರುಬನಿಗೆ ಇನ್ನೇಕೆ ಆ ಕಷ್ಟ.

ವ್ಯಾಸ : (ನಗುತ್ತಾ) ಏಕೆ ಕನಕ ? ಕೋಣನ ಮೇಲೆ ಮೆರೆಯಬೇಕೆಂದು ಆಶೆಯೇ ? ಸಾಧ್ಯವಿಲ್ಲ. ನಾವೆಲ್ಲ ಮತ್ತೆ ಜನಿಸುವಾಗ ನೀನು ಬರಲೇಬೇಕು. ಈಗ ಕುರುಬನಾಗಿ ಬಂದೆ. ಮುಂದೆ ಹೊಲೆಯನಾಗಿ ಭಾ. ಆಗಲೂ ನಿನಗೆ ಈ ಕಂಬಳಿಯೇ ಗತಿ! ಅಲ್ಲವೇ ದಾಸರೇ ? ಅನಂತರ ಬೇಕಾದರೆ ಶಾಶ್ವತವಾಗಿ ನಿನ್ನ ಕೋಣದ ಮೇಲೆ ಮೆರೆಯುವಂತೆ !

ದಾಸರು : ಅಹುದಹುದು, ನೀನೂ ಮತ್ತೆ ಕಂಬಳಿಹೊದ್ದು ಬರಲೇಬೇಕು.

ಕನಕ : (ಮಂದಹಾಸ ಬೀರಿ) ಸರಿ, ಸ್ವಾಮಿ ನಿಮ್ಮಪ್ಪಣೆ ! ಹೊಲೆಯನಾಗಿಯೇ ಬರುತ್ತೇನೆ. ಆಗಲೂ ನೀವೇ ನನ್ನನ್ನು ಉದ್ಧರಿಸುವುದಾಗಿ ಮಾತು ಕೊಡಿ. ಅಂದರೆ ಬರುತ್ತೇನೆ !

ವ್ಯಾಸರಾಜರು ನಸುನಕ್ಕು "ಆಗಲಿ ಕನಕ ! ನಿನ್ನಿಚ್ಛೆಯನ್ನು ಪೂರೈಸುತ್ತೇವೆ. ಈಗ ನಿನಗೆ ತೃಪ್ತಿಯಾಯಿತೆ?"ಎಂದಾಗ ಕನಕದಾಸರೂ ನಗುತ್ತಾ "ಉದ್ಧೃತನಾದೆ

ಗುರುದೇವ' ಎಂದು ನಮಸ್ಕರಿಸಿದರು. ಹೀಗೆ ಆ ಜ್ಞಾನಿಗಳು ಸೇರಿದಾಗಲೆಲ್ಲ ಅನೇಕ ಸ್ವಾರಸ್ಯಕರ ಘಟನೆಗಳು ಜರುಗುತ್ತಿದ್ದವು. ಆ ಜ್ಞಾನಿಗಳ ಸರಸಗೋಷ್ಠಿ ಆಧ್ಯಾತ್ಮ ರಂಗದ ಇತಿಹಾಸದಲ್ಲಿ ಸ್ವರ್ಣಾಕ್ಷರದಲ್ಲಿ ಬರೆದಿಡುವಂತಹುದೆಂದರೆ ತಪ್ಪಾಗದು.

## ೫೧. ದೈವೀವಿಚಿತ್ರಾಗತಿಃ

ಯಾವುದೇ ಒಂದು ರಾಷ್ಟ್ರ, ರಾಜ್ಯ, ವಂಶ, ಮನೆತನಗಳಲ್ಲಿ ಅನೇಕ ಊಹಿಸಲಾದ ಘಟನೆಗಳು ಜರಗುವುದು ಅಸ್ವಾಭಾವಿಕವೇನಲ್ಲ. ಅವೆಲ್ಲವೂ ಭಗವಂತನ ಇಚ್ಛೆ, ಸಂಕಲ್ಪಗಳಂತೆ ನಡೆದುಹೋಗುವುವು, ಅದನ್ನೇ ಪ್ರಾಜ್ಞರು ದೈವೀವಿಚಿತ್ರಾಗತಿಃ ಎಂದು ಉದ್ಗರಿಸುವರು. ಇದಕ್ಕೆ ಕನ್ನಡನಾಡೂ ಹೊರತಾಗಿರಲಿಲ್ಲ. ಸುಮಾರು ಕ್ರಿಸ್ತಶಕ 1525-26 ರಿಂದ 1539 ರವರೆಗೆ ಕನ್ನಡಸಾಮ್ರಾಜ್ಯದಲ್ಲಿ, ಶ್ರೀಮದಾಚಾರ್ಯರ ಮಹಾಸಂಸ್ಥಾನಗಳಲ್ಲಿ ಇಂಥ ಘಟನೆಗಳು ಜರುಗಿಹೋದವು, ಅದನ್ನಿಲ್ಲಿ ಸ್ಥೂಲವಾಗಿ ನಿರೂಪಿಸಬಯಸುತ್ತೇವೆ.

ಕ್ರಿ. ಶ. 1525 ರಲ್ಲಿ ಕನ್ನಡ ರಮಾರಮಣನಾದ ಕೃಷ್ಣದೇವರಾಯನ ಕುಹಯೋಗವನ್ನು ಕಳೆದು ರಕ್ಷಿಸಿ. ಪುನಃ ಸಾಮ್ರಾಜ್ಯವನ್ನು ಹೃತ್ಪೂರ್ವಕವಾಗಿ ಶ್ರೀವ್ಯಾಸರಾಜರು ದಾನಮಾಡಿ ಒಪ್ಪಿಸಿಕೊಟ್ಟು ಸಾಮ್ರಾಟನಾಗಿ, ಪ್ರಜಾರಂಜಕನಾಗಿ, ಕೀರ್ತಿಶಾಲಿಯಾಗಿ ಸುಖದಿಂದ ಬಾಳು ಎಂದು ಅಜ್ಞಾಪಿಸಿದರು. ಕೃಷ್ಣದೇವರಾಯ ಗುರುಗಳ ಆಜ್ಞೆಯಂತೆ ವರ್ತಿಸಿದ್ದರೆ ನಾಡಿನ ಇತಿಹಾಸವೇ ಉಜ್ವಲವಾಗಿ ಬೆಳಗುತ್ತಿತ್ತೋ ಏನೋ ! ಆದರೆ ರಾಯನು ತಾನಿರುವಾಗಲೇ ತನ್ನ ಮಗ ಸಾಮ್ರಾಟನಾಗಿ ಮೆರೆಯುವುದನ್ನು ಕಾಣಬಯಸಿ ಮಹಾಮಂತ್ರಿ ಮತ್ತು ಆತ್ಮೀಯರ ಹಿತವಚನವನ್ನು ದುರ್ಲಕ್ಷಿಸಿ ಆರುವರುಷದ ತನ್ನಮಗನನ್ನು ಕನ್ನಡ ರತ್ನಸಿಂಹಾಸನದಲ್ಲಿ ಕೂಡಿಸಿ ತಿರುಮಲ ಮಹರಾಜ ಎಂಬ ಹೆಸರಿನಿಂದ ಸಾಮ್ರಾಜ್ಯಾಭಿಷೇಕ ಮಾಡಿಬಿಟ್ಟ, ಅದು ಭಗವತ್ಸಂಕಲ್ಪದಲ್ಲಿ ಇರಲಿಲ್ಲ, ಅಂತೆಯೇ ಆ ಬಾಲಸಾಮ್ರಾಟನು ಸರ್ಪದಂಶನ ಅಥವಾ ವಿಷಪ್ರಯೋಗಕ್ಕೆ ಒಳಗಾಗಿ ಮೃತನಾದನು. ಕೃಷ್ಣದೇವರಾಯನ ಆಶಾಸೌಧ ಕಳಚಿ ಬಿದ್ದಿತು ! ರಾಯ ಅಪಾರ ದುಃಖಕ್ಕೆ ಈಡಾಗಿ ಮಗನ ಮರಣಕ್ಕೆ ಮಹಾಮಂತ್ರಿ ತಿಮ್ಮರಸು, ಅವನ ಸೋದರ ಗುಂಡರಾಜರೇ ಕಾರಣವೆಂದು ತಪ್ಪಾಗಿತಿಳಿದು ಮಹಾಮಂತ್ರಿಯ ಕಣ್ಣುಕಿತ್ತಿಸಿಬಿಟ್ಟ. ಗುಂಡರಾಜನನ್ನು ದೇಶಭ್ರಷ್ಟನನ್ನಾಗಿಮಾಡಿ ಓಡಿಸಿದ. ಯಾವ ತಿಮ್ಮರಸು ಶ್ರೀವ್ಯಾಸರಾಜರ ಆದೇಶದಂತೆ ರಾಯನ ಕಣ್ಣುಗಳನ್ನು ಉಳಿಸಿ, ಅವನನ್ನು ಸಾಮ್ರಾಟನನ್ನಾಗಿಮಾಡಿ ಆವನ ಸಕಲ ಅಭ್ಯುದಯಗಳಿಗೆ ಕಾರಣನಾಗಿದ್ದನೋ ಅಂಥ ಸ್ವಾಮಿನಿಷ್ಠ ಸೇವಕ, ಹಿತೈಷಿ, ಅತ್ಯಂತ ದಕ್ಷನಾದ ತಿಮ್ಮರಸನ ಕಣ್ಣುಕಿತ್ತಿಸಿ ಸೆರಮನೆಗೆ ಹಾಕಿಸಿದ್ದು ದೈವೀವಿಚಿತ್ರಾಗತಿಗೆ ಒಂದು ಸರಿಯಾದ ಉದಾಹರಣೆಯಾಗಿದೆ.

ಸಾಮ್ರಾಟನಾಗಿ ಸುಖವಾಗಿ ಬಾಳು' ಎಂದು ಆಶೀರ್ವದಿಸಿದ ಶ್ರೀವ್ಯಾಸರಾಜರ ಅಪ್ಪಣೆಯಂತೆ ಜೀವನದಲ್ಲಿ ಮೊದಲಬಾರಿಗೆ ಮೀರಿನಡೆದ ಕೃಷ್ಣದೇವರಾಯ ಪುತ್ರನನ್ನು ಕಳೆದುಕೊಂಡು ಅಪಾರ ದುಃಖಕ್ಕೆ ಪಾತ್ರನಾಗಿ ಸುಖೋಪಭೋಗಗಳಿಂದ ವಂಚಿತನಾದ. ಇದರಿಂದ ಬೇಸರಗೊಂಡ ವ್ಯಾಸತೀರ್ಥರು ವಿಜಯನಗರವನ್ನು ತ್ಯಜಿಸಿ ವ್ಯಾಸಸಮುದ್ರಕ್ಕೆ ಹೋಗಿ ನೆಲೆಸಿದರು. ದುಃಖಿತನಾದ ರಾಯ ತನ್ನ ತಪ್ಪಿನ ಪ್ರಾಯಶ್ಚಿತಕ್ಕಾಗಿಯೋ ಎಂಬಂತೆ ರಾಜ್ಯಭಾರವನ್ನು ಅಚ್ಯುತದೇವರಾಯ-ಅಳಿಯ ರಾಮರಾಜರಿಗೆ ವಹಿಸಿ ತೀರ್ಥಕ್ಷೇತ್ರಯಾತ್ರೆಗೆ ತೆರಳಿದ.

ಕೃಷ್ಣದೇವರಾಯ 1527ರ ಹೊತ್ತಿಗೆ ಯಾತ್ರೆಮುಗಿಸಿಕೊಂಡು ವಿಜಯನಗರಕ್ಕೆ ಮರಳಿದನು. ರಾಜರುಗಳು ರಾಜಧಾನಿಯನ್ನು ತ್ಯಜಿಸಿ ವ್ಯಾಸಸಮುದ್ರದಲ್ಲಿ ನೆಲಸಿರುವ ವಿಚಾರವರಿತು, ಇವೆಲ್ಲಕ್ಕೂ ತಾನೇ ಕಾರಣನೆಂದು ಪಶ್ಚಾತ್ತಪ್ತನಾದ ರಾಯನು ಸಹೋದರ ಅಚ್ಯುತರಾಯನನ್ನು ಶ್ರೀಗಳವರ ಸನ್ನಿಧಿಗೆ ಬಿನ್ನಹ ಪತ್ರದೊಡನೆ ಕಳಿಸಿ ಅವರನ್ನು ವಿಜಯನಗರಕ್ಕೆ ಕರೆಯಿಸಿಕೊಂಡನು. ಕರುಣಾಳುಗಳೂ, ಶಿಷ್ಯವತ್ಸಲರೂ ಆದ ವ್ಯಾಸರಾಜರು ವಿಜಯನಗರಕ್ಕೆ ಬಂದು ಮತ್ತೆ 'ರಾಜಗುರು' ಸ್ಥಾನವನ್ನಲಂಕರಿಸಿ ಎಂದಿನಂತೆಯೇ ರಾಯನಲ್ಲಿ ಪ್ರೀತಿಮಾಡುತ್ತಾ ಮಾರ್ಗದರ್ಶನ ಮಾಡತೊಡಗಿದರು.ಪ್ರತಿದಿನ ಕೃಷ್ಣ ದೇವರಾಯ ಪತ್ನಿಯರೊಡನೆ ಗುರುಸನ್ನಿಧಿಗೆ ಬಂದು ತತ್ವ, ಧರ್ಮ. ಭಗವತ್ಕಥಾವಿಲಾಸಗಳ ಉಪದೇಶ ಪಡೆಯುತ್ತಿದನು. ಈ ಹೊತ್ತಿಗೆ ರಾಯನ ಪುತ್ರವಿಯೋಗ ಶೋಕಪ್ರಾ ಶಮನವಾಗಿತ್ತು. ಅವನ ಮನಃಪರಿವರ್ತನೆಯಾಗಿತ್ತು. ಅವನು ಶಾಂತಿಪ್ರಿಯನಾಗಿದ್ದ. ಅಂತೆಯೇ ಗುರುಗಳ ಉಪದೇಶದಂತೆ ನೆರೆಹೊರೆಯ ರಾಜರು, ಸಾಮಂತರು. ಆತ್ಮೀಯರೊಡನೆ ಸ್ನೇಹದಿಂದಿರುತ್ತಿದನು. ರಾಯನು ಹಿಂದೆ ವ್ಯಾಸರಾಜರ ಆದೇಶದಂತೆ ವೀರಭದ್ರಗಜಪತಿಯನ್ನು ಕ್ಷಮಿಸಿ ಕಾಪಾಡಿದಂತೆ ತನ್ನಿಂದ ಅನವಶ್ಯವಾಗಿ ಜರುಗಿದ ಅನ್ಯಾಯವನ್ನು ಸರಿಪಡಿಸಲು ಶ್ರೀವ್ಯಾಸರಾಜರ ಸಲಹೆ, ಆದೇಶದಂತೆ ಸಾಳುವ ತಿಮ್ಮರಸನ ತಮ್ಮನನ್ನು ಕರೆಸಿಕೊಂಡು ಗೌರವಿಸಿ ಗುಂಡರಾಜನೊಡನೆ ಸ್ನೇಹ-ವಿಶ್ವಾಸಗಳಿಂದಿರುತ್ತಿದನು.ಇದರಂತೆ ಕಳಿಂಗದ ವೀರರುದ್ರಗಜಪತಿಯೊಡನೆ ಶಾಂತಿಸಂಧಾನಮಾಡಿಕೊಂಡು ಹಿಂದಿನ ದ್ವೇಷತ್ಯಜಿಸಿ ಬಾಂಧವ್ಯವನ್ನು ವರ್ಧಿಸಿಕೊಂಡನು. ಮಾತ್ರವಲ್ಲ, ಶಾಲಿವಾಹನಶಕೆ 1448ನೇ ವ್ಯಯಸಂವತ್ಸರದಲ್ಲಿ (20-8-1526) ಕೃಷ್ಣವೇಣಿತೀರದಲ್ಲಿ ಇಬ್ಬರೂ ಕಲೆತು ಒಂದು ಶಾಸನ ಮೂಲಕ ಅಂಡವಿಲ್ಲಿ ದತ್ತಿಬಿಟ್ಟಿದ್ದು ಗಮನಾರ್ಹನವಾಗಿದೆ.[1] ಶ್ರೀವ್ಯಾಸರಾಜರ ಈ ಸಕಾಲಿಕ ಉಪದೇಶ ಮಾರ್ಗದರ್ಶನದಂತೆ ನಡೆದಿದ್ದರಿಂದ ಸಾಮ್ರಾಜ್ಯದಲ್ಲಿ ಆಗಬಹುದಾಗಿದ್ದ ಕ್ಷೋಭೆ, ಕ್ರಾಂತಿಗಳು

---

1. Indian Ephemesis Vol I Part II P 35.
and Madras Epigraphical Report 1912-13.

ತಪ್ಪಿ ಜನರು ಶಾಂತಿ ಸಮಾಧಾನಗಳಿಂದ ಬಾಳುವಂತಾಯಿತು. ಇದೇಕಾಲದಲ್ಲಿ ಕೃಷ್ಣ ದೇವರಾಯನು ಸಾಮ್ರಾಜ್ಯದ ಆಡಳಿತದ ಮುಖ್ಯ ಹೊಣೆಯನ್ನು ಸಹೋದರ ಅಚ್ಯುತದೇವರಾಯನಿಗೆ ಒಪ್ಪಿಸಿ, ಅವನಿಗೆ ಬಲಗೈಯಾಗಿ ಸಹಾಯಮಾಡುವ ಹೊಣೆಯನ್ನು ತನ್ನ ಅಳಿಯಂದಿರಾದ ಅರವೀಟಿಮನೆತನದ ರಾಮರಾಜ,ತಿರುಮಲ ರಾಜ ಮತ್ತು ವೆಂಕಟಾದ್ರಿಗಳಿಗೆ ವಹಿಸಿಕೊಟ್ಟು ತಾನು ಮೇಲ್ವಿಚಾರಣೆ ಮಾತ್ರ ಮಾಡುತ್ತಾ ತನ್ನೆಲ್ಲಾ ಸಮಯವನ್ನೂ ಶ್ರೀವ್ಯಾಸರಾಜರ ಸನ್ನಿಧಿಯಲ್ಲೇ ಕಳೆಯುತ್ತಾ ಅವರಿಂದ ತಾತ್ವಿಕ, ಧಾರ್ಮಿಕೋಪದೇಶ ಪಡೆಯುತ್ತಾ ಆಧ್ಯಾತ್ಮಶೀಲ ನಾಗಿ ಶಾಂತಿ ಸಮಾಧಾನಗಳಿಂದ ಕಾಲ ಕಳೆಯುತ್ತಿದ್ದನು.

ಕೃಷ್ಣದೇವರಾಯನು ಶಾಲಿವಾಹನ ಶಕೆ ೧೪೪೯ನೇ ಸರ್ವಜಿತ್ ಸಂ॥ಕಾರ್ತಿಕ ಶುಕ್ಲ ಉತ್ಥಾನ ದ್ವಾದಶೀ ಮಂಗಳವಾರ (5-11-1527 ರಂದು) ಗುರುವ್ಯಾಸ ರಾಜರಿಗೆ ಬಂಕಾಪುರ ಪ್ರಾಂತ್ಯದಲ್ಲಿ ಅನೇಕ ಗ್ರಾಮಭೂಮಿಗಳನ್ನು ಶ್ರೀ ವಿಜಯ ವಿಠ್ಠಲ ದೇವರಗುಡಿಯಲ್ಲಿ ದಾನಮಾಡಿ ಕೃತಾರ್ಥನಾದನು.[1]

ಂ ಂ ಂ ಂ

ಶ್ರೀವ್ಯಾಸರಾಜರಲ್ಲಿ ಕೇಶವಾದಿ ಇಪ್ಪತ್ನಾಲ್ಕುಜನ ಸನ್ಯಾಸಿಶಿಷ್ಯರು.ಕೆಲ ಪೀಠಾಧಿಪತಿಗಳೂ ಶಿಷ್ಯವೃತ್ತಿವಹಿಸಿ ಸಕಲಶಾಸ್ತ್ರಗಳನ್ನೂ ಅಧ್ಯಯನಮಾಡುತ್ತಿದ್ದರು. ಆ ಮಹನೀಯರಲ್ಲಿ ಸಹಸ್ರಾರುಜನ ವ್ಯಾಸಾಂಗಮಾಡಿ ಶ್ರೇಷ್ಠಪಂಡಿತರೆಂದು ಖ್ಯಾತರಾದರು.

ಇವರೆಲ್ಲರಲ್ಲೂ ವಿಷ್ಣುತೀರ್ಥರು,ವಾದಿರಾಜತೀರ್ಥರುಗಳು ಶ್ರೀವ್ಯಾಸತೀರ್ಥರಿಗೆ ಅತ್ಯಂತ ಪ್ರೀತ್ಯಾಸ್ಪದರಾದ ಶಿಷ್ಯರಾಗಿದ್ದರು.ವಿಷ್ಣುತೀರ್ಥರು ಷಾಷ್ಟಿಕಕುಲಶಿರೋರತ್ನರಾದ ಶ್ರೀಮದಾಚಾರ್ಯರ ಮಹಾಸಂಸ್ಥಾನಾಧೀಶರೂ, ಆಚಾರ್ಯರ ಸಕಲಭಾಷ್ಯಗಳಿಗೆ ಟೀಕೆಗಳನ್ನು ರಚಿಸಿ ಶ್ರೀಟೀಕಾಚಾರ್ಯರೆಂದೇ ವಿಖ್ಯಾತರಾಗಿದ್ದ ಪರಮಪೂಜ್ಯ ಶ್ರೀಜಯತೀರ್ಥಮುನಿಗಳ ಪೂರ್ವಾಶ್ರಮ ಅಣ್ಣಂದಿರಾದ ಶ್ರೀನರಹರಿನಾಯಕರ ಪ್ರಪೌತ್ರರ ಪುತ್ರರು.ಪೂರ್ವಾಶ್ರಮದ ಹೆಸರು ವಿಠ್ಠಲಾಚಾರ್ಯರೆಂದು.ವ್ಯಾಸರಾಜರ ವಂಶಬಂಧುಗಳು. ಇವರಿಗೆ ವ್ಯಾಸರಾಜರು ಸನ್ಯಾಸವಿತ್ತು ಶ್ರೀವಿಷ್ಣುತೀರ್ಥರೆಂದು ಹೆಸರಿಟ್ಟು ಅವರಿಗೆ ಬಾಲ್ಯದಿಂದಲೂ, ಸಾಹಿತ್ಯ, ವ್ಯಾಕರಣ, ವೇದಾಂತ, ನ್ಯಾಯ ಮೀಮಾಂಸಾದಿ ಸಕಲಶಾಸ್ತ್ರಗಳನ್ನೂ ಪಾಠಹೇಳಿ ಅದ್ವಿತೀಯ ಪಂಡಿತರನ್ನಾಗಿ ಮಾಡಿದ್ದರು.ವಿಷ್ಣುತೀರ್ಥರೆಂದರೆ ಗುರುಗಳಿಗೆ ಪಂಚಪ್ರಾಣ. ಇನ್ನಾರಲ್ಲೂಮಾಡದ ಅಸಾಧಾರಣ ಪ್ರೀತಿವಾತ್ಸಲ್ಯಗಳನ್ನು ಅವರಲ್ಲಿ ಮಾಡುತ್ತಿದ್ದರು. ವಿಷ್ಣುತೀರ್ಥರು ಅಸಾಧಾರಣಮೇಧಾವಿಗಳೂ, ಕುಶಾಗ್ರಮತಿಗಳೂ,ಏಕಸಂಧಿಗ್ರಾಹಿಗಳೂ ಪ್ರತಿಭಾಶಾಲಿಗಳೂ ಆಗಿ ಗುರುಗಳನ್ನೇ ವಿಸ್ಮಯಗೊಳಿಸುವ ಪ್ರಕಾಂಡಪಾಂಡಿತ್ಯದಿಂದ ಗುರುಗಳಲ್ಲಿ ಅನಿತರಸಾಧಾರಣ ಭಕ್ತಿ-ಶ್ರದ್ಧೆ,ಗೌರವಗಳಿಂದ, ಅವರನ್ನು ಎಡಬಿಡದೆ ಸೇವಿಸುತ್ತಾ ಧನ್ಯಜೀವಿಗಳಾಗಿ, ಸರ್ವಸಜ್ಜನರ ವಿಶೇಷ ಭಕ್ತ್ಯಾದರಗಳಿಗೆ

1. ತಾಮ್ರಶಾಸನ-ಶಿವಮೊಗ್ಗ-85. ತಾಮ್ರಶಾಸನ-ಚನ್ನಪಟ್ಟಣ-153.

ಪಾತ್ರರಾಗಿದ್ದರು. ಶ್ರೀವ್ಯಾಸರಾಜರ ಮತ್ತೊಬ್ಬ ಪ್ರಕಾಂಡಪಂಡಿತರಾದ ಶಿಷ್ಯರು ಉಡುಪಿಯ ಶ್ರೀಸೋದೆಮಠಾಧೀಶರಾಗಿದ್ದ ಶ್ರೀವಾದಿರಾಜತೀರ್ಥರು. ಅವರು ಬಾಲ್ಯದಿಂದಲೂ ಮಹಾಮೇಧಾವಿಗಳಾಗಿದ್ದು ಉತ್ತಮ ಕವಿಗಳೂ, ವಿದ್ಯಾವಿಶಾರದರೂ ಆಗಿದ್ದರು. ಅಂದು ದ್ವೈತಸಿದ್ಧಾಂತದ, ಷಡ್ದರ್ಶನಗಳಿಗೆ ಏಕಮೇವಾದ್ವಿತೀಯರೆನಿಸಿ ಜ್ಞಾನಿಗಳಿಗೆಲ್ಲಾ ಚಕ್ರವರ್ತಿಗಳೆನಿಸಿ. ಭಾರತಾದ್ಯಂತ ವಿದ್ವನ್ಮಂಡಲಿ, ರಾಜಾಧಿರಾಜ-ಚಕ್ರವರ್ತಿಗಳಿಂದ ಸಂಸೇವ್ಯರಾಗಿದ್ದ ವ್ಯಾಸರಾಜರೇ ತಮಗೆ ಸರಿಯಾದ ವಿದ್ಯಾಗುರುಗಳೆಂದು ನಂಬಿದ್ದ ವಾದಿರಾಜತೀರ್ಥರು ವಿಜಯನಗರಕ್ಕೆ ಬಂದು ವ್ಯಾಸತೀರ್ಥರ ಚರಣಕಮಲಗಳ ಸನ್ನಿಧಿಯಲ್ಲಿ ಕುಳಿತು ಸಕಲ ಶಾಸ್ತ್ರಗಳು ಮುಖ್ಯವಾಗಿ ಸಮಗ್ರ ದ್ವೈತವೇದಾಂತಶಾಸ್ತ್ರಗ್ರಂಥಗಳನ್ನೂ ಚಂದ್ರಿಕಾ, ನ್ಯಾಯಾಮೃತ, ತರ್ಕತಾಂಡವಗಳೆಂಬ ಶ್ರೀನೃಸಿಂಹದೇವರ ಮೂರು ಕಣ್ಣುಗಳಂತಿದ್ದ 'ವ್ಯಾಸತ್ರಯ' ಗ್ರಂಥಗಳನ್ನೂ ಆಮೂಲಾಗ್ರವಾಗಿ ವ್ಯಾಸಂಗ ಮಾಡಿ ಗುರುಗಳ ವಿಶೇಷ ಪ್ರೀತಿ,ಕಾರುಣ್ಯ. ವಾತ್ಸಲ್ಯಗಳಿಗೆ ಪಾತ್ರರಾದರು ವಿಷ್ಣುತೀರ್ಥ-ವಾದಿರಾಜತೀರ್ಥರು-ವ್ಯಾಸರಾಜರ ಎರಡುಕಣ್ಣುಗಳಂತಿದ್ದ ಪರಮಶಿಷ್ಯರುಗಳೆಂದು ಸರ್ವರಿಂದ ಸ್ತುತ್ಯರಾದರು.ವಿಷ್ಣುತೀರ್ಥ ವಾದಿರಾಜತೀರ್ಥರು ಪ್ರಥಮ ದರ್ಶನದಿಂದಲೇ ಪರಸ್ಪರ ಆಕರ್ಷಿತರಾಗಿ ಪರಮ ಮಿತ್ರರಾದರು. ಗುರುಗಳಲ್ಲಿ ವ್ಯಾಸಾಂಗಮಾಡಿದ್ದನ್ನು ಇಬ್ಬರೂ ಕುಳಿತು ಮನನಮಾಡಿ.ಗುರುಗಳ ವಿದ್ಯಾವೈಭವ ಪಾಠಪ್ರವಚನ ಕೌಶಲ್ಯ, ಶಿಷ್ಯಾಭಿಮಾನ-ಅನುಗ್ರಹಗಳನ್ನು ಚರ್ಚಿಸುತ್ತಾ ಆನಂದ ಪರವಶರಾಗಿ ಗುರುಗಳನ್ನು ಎಡೆಬಿಡದೆ ಸೇವಿಸುತ್ತಾ ಅವರ ಅಪಾರ ಪ್ರೀತಿಗೆ ಪಾತ್ರರಾಗಿದ್ದರು ವ್ಯಾಸತೀರ್ಥರು ತಮ್ಮುತ್ತರುವಾಯ ದ್ವೈತಸಿದ್ಧಾಂತ ಸಂರಕ್ಷಣೆ ಪರವಾದಿದಿಗ್ವಿಜಯ ಪೂರ್ವಕ ಸಿದ್ಧಾಂತಸ್ಥಾಪನೆ-ಅಸಾಧಾರಣ ಗ್ರಂಥರಚನೆ.ಪಾಠ ಪ್ರವಚನಾದಿಗಳಿಂದ ತಮ್ಮ ಹೆಸರನ್ನು ಅಜರಾಮರಗೊಳಿಸುವ ಶಿಷ್ಯರೆಂದು ನಂಬಿದ್ದರು.ಅದರಂತೆ ಅನೇಕವೇಳೆ ಭವಿಷ್ಯನುಡಿದಿದ್ದರು. ವ್ಯಾಸರಾಜರ ಆ ನಂಬಿಕೆ ಅವರ ಭವಿಷ್ಯ ಸತ್ಯವಾದ ವಿಚಾರ,ಮುಂದಿನ ದ್ವೈತಸಿದ್ಧಾಂತದ ಇತಿಹಾಸವು ಇಂದಿಗೂ ಸಾಕ್ಷೀ ಭೂತವಾಗಿ ಕಂಗೊಳಿಸುತ್ತಾ ಇರುವುದನ್ನು ಸಜ್ಜನರೆಲ್ಲರೂ ತಿಳಿದಿದ್ದಾರೆ.

ಸುಮಾರು ಕ್ರಿ. ಶ. 1530ರ ಸುಮಾರಿಗೆ ಎರಡನೆಯ ಬಾರಿ ದಿಗ್ವಿಜಯ ಕೈಗೊಂಡು ಶ್ರೀಮದಾಚಾರ್ಯರ ಮಹಾಸಂಸ್ಥಾನಾಧೀಶ್ವರರೂ. ಸರ್ವತಂತ್ರ ಸ್ವತಂತ್ರರೂ, ಮಾನಸಪೂಜಾಧುರಂಧರರೂ, ಮಹಾತಪಸ್ವಿಗಳೂ ಆದ ಶ್ರೀ ಸುರೇಂದ್ರತೀರ್ಥರು ದಯಮಾಡಿಸಿದಾಗ ಶ್ರೀವ್ಯಾಸರಾಜರು.ಕೃಷ್ಣದೇವರಾಯನಿಗೆ ಆಜ್ಞಾಪಿಸಿ ಸಮಸ್ತರಾಜಗೌರವ-ವೈಭವಗಳಿಂದ ಸ್ವಾಗತಿಸಿ ಕರತಂದು "ವಿಶ್ವಪಾವನ ಮಠ"ದಲ್ಲಿ ಬಿಡಾರಮಾಡಿಸಿದರು. ಉಭಯಗುರುಗಳೂ ಪಾತ್ವಿಕ ಕುಲಬಂಧುಗಳು.

ಜ್ಞಾನಿಗಳು ಭೂತಭವಿಷ್ಯದ್ ವರ್ತಮಾನ ವಿಚಾರಗಳನ್ನರಿತವರು. ಅಂಥ ಮಹನೀಯರ ಮಿಲನ ಅದೆಂತಹುದಾಗಿರಬಹುದು? ಸುರೇಂದ್ರರು ಬಂದ ಉದ್ದಿಶ್ಯವರಿತಿದ್ದ ವ್ಯಾಸಮುನಿಗಳು ತಮ್ಮ ಪ್ರಾಣಪದಕದಂತಿದ್ದ ವಿಷ್ಣುತೀರ್ಥರನ್ನು ಸುರೇಂದ್ರರಿಗಾಗಿಯೇ ಸಾಕಿ-ಸಲಹಿ-ಮಹಾಪಂಡಿತರನ್ನಾಗಿಮಾಡಿ, ಸಮರ್ಪಿಸಲು ಕಾತರಿಸುತ್ತಿದ್ದರು. ಆ ಸಮುಹೂರ್ತವೀಗ ಬಂದೊದಗಿತು. ಅಂತೆಯೇ ಸುರೇಂದ್ರರ ಅಪೇಕ್ಷೆಯಂತೆ. ಅವರಿಗಾಗಿಯೇ ಸಿದ್ಧಪಡಿಸಿ ಕಾಯುತ್ತಿದ್ದ ವ್ಯಾಸರಾಜರು ವಿಷ್ಣುತೀರ್ಥರನ್ನು ಸುರೇಂದ್ರರಿಗೆ ಸಮರ್ಪಿಸಿದರು. ಆನಂದತುಂದಿಲರಾದ ಸುರೇಂದ್ರರು ಮಹಾಸಂಸ್ಥಾನ ಸಂಪ್ರದಾಯನುಸಾರವಾಗಿ ಮುಂಡನ, ದಂಡಪಲ್ಲಟ, ಮಂತ್ರ ಮುದ್ರಾಧಾರಣ, ಸ್ವಕೀಯ ಮಹಾಸಂಸ್ಥಾನ ಕ್ರಮಾಗತ ಗುರೂಪದೇಶ, ಮಹಾಮಂತ್ರಗಳ, ಅರವತ್ನಾಲ್ಕು ಕಲೆಗಳ ಉಪದೇಶಾದಿಗಳನ್ನು ಮಾಡಿ ಶ್ರೀಮನ್ಮಧ್ವಾಚಾರ್ಯರ ಎರಡು ವೇದಾಂತ ಸಾಮ್ರಾಜ್ಯ ಮಹಾಸಂಸ್ಥಾನಗಳಲ್ಲೊಂದಾದ ಶ್ರೀಕವೀಂದ್ರತೀರ್ಥರ 'ದಕ್ಷಿಣಾದಿಮಠ'ದ ದಿಗ್ವಿಜಯ ವಿದ್ಯಾಸಿಂಹಾಸನದಲ್ಲಿ ನೂತನ ಯತಿಗಳನ್ನು(ವಿಷ್ಣುತೀರ್ಥರನ್ನು)ಕುಂಡಿಸಿ "ಶ್ರೀವಿಜಯೀಂದ್ರತೀರ್ಥ ಶ್ರೀಪಾದಂಗಳವರು"ಎಂಬ ಮಹಾಸಂಸ್ಥಾನನಾಮದಿಂದ ವೇದಾಂತ ಸಾಮ್ರಾಜ್ಯಾಭಿಷೇಕಮಾಡಿ ತಮ್ಮ ಉತ್ತರಾಧಿಕಾರಿ ಶಿಷ್ಯರನ್ನಾಗಿ ಮಾಡಿಕೊಂಡರು. ಅಂದಿನ ವೈಭವ-ಸಂಭ್ರಮ, ವರ್ಣಿಸಲು ಅಸದಳ,[1] ಕೆಲಕಾಲ ವಿಜಯನಗರದಲ್ಲಿದ್ದ ಸುರೇಂದ್ರತೀರ್ಥರು ಪ್ರಿಯ ಶಿಷ್ಯ ವಿಜಯೀಂದ್ರತೀರ್ಥರೊಡನೆ ವ್ಯಾಸರಾಜರು ಮತ್ತು ಕೃಷ್ಣದೇವರಾಯರಿಂದ ಬೀಳ್ಕೊಂಡು ಮಹಾಸಂಸ್ಥಾನದೊಡನೆ ದಕ್ಷಿಣಭಾರತದ ದಿಗ್ವಿಜಯ ಯಾತ್ರೆಗೆ ದಯಮಾಡಿದರು.

o o o o o

ಸುರೇಂದ್ರತೀರ್ಥರು ವಿಜಯೀಂದ್ರತೀರ್ಥರೊಡನೆ ದಿಗ್ವಿಜಯ ಯಾತ್ರೆ ಕೈಗೊಂಡು ವಿಜಯನಗರದಿಂದ ತೆರಳಿದ ಮೇಲೆ ಆತ್ಮೀಯ-ಪ್ರಾಣಪದಕದಂತಿದ್ದ ಶಿಷ್ಯರ ವಿಯೋಗದಿಂದ ಶ್ರೀವ್ಯಾಸಮುನಿಗಳಿಗೆ ಕೆಲದಿನ ಬಹಳ ಕಳಕಳಿ ಬೇಸರವಾಗಿತ್ತು. ಇದರಂತೆ ಪರಮಮಿತ್ರರೂ, ಸತೀರ್ಥರೂ ಆಗಿದ್ದ ವಾದಿರಾಜರಿಗೂ ಬಹಳ ಬೇಸರವಾಗಿತ್ತು. ಆ ಹೊತ್ತಿಗೆ ಶ್ರೀವ್ಯಾಸರಾಯರಲ್ಲಿ ವ್ಯಾಸಂಗ ಮಾಡಬೇಕಾಗಿದ್ದುದೆಲ್ಲವೂ ಪೂರ್ಣವಾಗಿತ್ತು. ಮತ್ತು ಉಡುಪಿಯಲ್ಲಿ ಅವರ ಪರ್ಯಾಯವೂ ಸಮೀಪವಾಗುತ್ತಿತ್ತು, ಅಂತೆಯೇ ವಾದಿರಾಜಗುರುವರ್ಯರು ಪೂಜ್ಯ ಗುರುಗಳಾದ ವ್ಯಾಸರಾಜರಲ್ಲಿ ಎಲ್ಲ ವಿಚಾರವನ್ನೂ ಅರಿಕೆಮಾಡಿ ಕ್ರಿ. ಶ. 1532ರಲ್ಲಿ ತಾವು ವ್ಯಾಸರಾಜರ ಸಲಹೆಯಂತೆ ಎರಡು ವರ್ಷ ಕಾಲ

---

1. ಶ್ರೀಸುರೇಂದ್ರ-ವ್ಯಾಸರಾಜರ ಸಮಾಗಮ ಶ್ರೀವಿಜಯೀಂದ್ರರ ಪಟ್ಟಾಭಿಷೇಕ ಮುಂತಾದ ಎಲ್ಲ ಕಥಾಭಾಗ-ವಿವರಗಳನ್ನು ಈ ಗ್ರಂಥದ "ಶ್ರೀರಾಘವೇಂದ್ರಗುರುಸಾರ್ವಭೌಮರು" ಎಂಬ ಐದನೆಯ ಉಲ್ಲಾಸದಲ್ಲಿ ನಿರೂಪಿಸುತ್ತಿರುವುದರಿಂದ ಇಲ್ಲಿ ವಿವರವಾಗಿ ಬರೆದಿರುವುದಿಲ್ಲ.

ಪರ್ಯಾಯ ಪೀಠದಲ್ಲಿ ಕುಳಿತು ಶ್ರೀಕೃಷ್ಣನ ಸೇವೆ ಮಾಡುವುದಾಗಿ ವಿಜ್ಞಾಪಿಸಿ ಆ ಕಾಲಕ್ಕೆ ಉಡುಪಿಗೆ ದಯಮಾಡಿಸಿ ತಮ್ಮನ್ನು ಅನುಗ್ರಹಿಸಬೇಕೆಂದು ಪ್ರಾರ್ಥಿಸಿದರು. ವ್ಯಾಸರಾಜರು ಅವರ ಗುರುಭಕ್ತಿ. ಶ್ರದ್ಧೆಗಳಿಂದ ಸುಪ್ರೀತರಾಗಿ ಅವರಿಗೆ ಅನೇಕ ಕರ್ತವ್ಯಗಳನ್ನು ಉಪದೇಶಿಸಿ, ತಾವು ಪರ್ಯಾಯಕ್ಕೆ ಖಂಡಿತವಾಗಿ ಬರುವುದಾಗಿ ಅಭಯವಿತ್ತರು. ಆಗ ವಾದಿರಾಜರು ಗುರುಗಳನ್ನು ಬಿಟ್ಟು ಹೋಗಬೇಕಲ್ಲಾ ಎಂಬ ದುಃಖದಿಂದಕಣ್ಣೀರು ಸುರಿಯುತ್ತಿರಲು ಗುರುಗಳಪಾದಗಳನ್ನು ಹಿಡಿದು ನಮಸ್ಕರಿಸಿ ಗದ್ಗದ ಕಂಠದಿಂದ "ಪೂಜ್ಯ ಗುರುದೇವ! ತಮ್ಮ ಶಿಷ್ಯನಲ್ಲಿ ಸಂಪೂರ್ಣ ಅನುಗ್ರಹಾಶೀರ್ವಾದಗಳಿರಬೇಕು" ಎಂದು ಪ್ರಾರ್ಥಿಸಿದರು. ಗುರುಗಳ ಕಣ್ಣಿನಲ್ಲಿಯೂ ಶಿಷ್ಯ ಪ್ರೇಮ, ಅವರ ಅಗಲಿಕೆಯಿಂದ ಕಣ್ಣೀರು ಹರಿಯಿತು. ವಾದಿರಾಜರ ಶಿರದಮೇಲೆ ತಮ್ಮ ಅಮೃತಹಸ್ತವಿರಿಸಿ ಆಶೀರ್ವದಿಸಿ "ಪ್ರಿಯಶಿಷ್ಯರೇ, ಶ್ರೀಹರಿವಾಯುಗಳು ಸರ್ವದಾ ನಿಮ್ಮನ್ನು ಪೊರೆದು, ನಿಮ್ಮಿಂದ ಅಸಾಧಾರಣ ಸೇವೆ ಸ್ವೀಕರಿಸಿ, ಲೋಕಾ ಕಲ್ಯಾಣಾದಿ ಮಹತ್ಕಾರ್ಯಗಳನ್ನು ಮಾಡಿಸಿ, ನಿಮಗೆ ಅಖಂಡ ಕೀರ್ತಿ ಪ್ರತಿಷ್ಠೆಗಳನ್ನು ಅನುಗ್ರಹಿಸುವರು" ಎಂದು ಹೇಳಿದರು. ಆ ನಂತರ ವಾದಿರಾಜರು ಗುರುಗಳ ಅಪ್ಪಣೆ ಪಡೆದು ಸಂಸ್ಥಾನದೊಡನೆ ಉಡುಪಿಗೆ ದಿಗ್ವಿಜಯಗೈದರು.

ಂ ಂ ಂ ಂ ಂ

ಕನ್ನಡ ರಮಾರಮಣನಾದ ಕೃಷ್ಣದೇವರಾಯ ಕ್ರಿ. ಶ. 1530ರ ಸುಮಾರಿಗೆ ಆರೋಗ್ಯ ಕೆಟ್ಟು ಹಾಸಿಗೆಹಿಡಿದು ಮಲಗಿದನು. ಔಷಧೋಪಚಾರಗಳಿಂದಾವ ಪ್ರಯೋಜನವೂ ಆಗಲಿಲ್ಲ, ಒಂದುದಿನ ವೈದ್ಯರ ಸಲಹೆಯನ್ನೂ ಗಮನಿಸದ ಕೃಷ್ಣದೇವರಾಯನು ಮೇನೆಯಲ್ಲಿ ಕುಳಿತು 'ವಿಶ್ವಪಾವನ ಮಠ'ಕ್ಕೆ ಬಂದನು. ಅಶಕ್ತನಾದ ಸಾಮ್ರಾಟನನ್ನು ಗುರುಗಳು ಕಾರುಣ್ಯ ಪೂರ್ಣರಾಗಿ ಸ್ವಾಗತಿಸಿ ಏಕಾಂತಮಂದಿರಕ್ಕೆ ಕರೆದೊಯ್ದರು ಅಲ್ಲಿ ರಾಯನು ತನ್ನ ಅವಸಾನಕಾಲ ಪ್ರಾಪ್ತವಾಗುತ್ತಿದೆಯೆಂದೂ, ತನ್ನ ತರುವಾಯ ಮುಂದೆ ಸಾಮ್ರಾಜ್ಯಕ್ಕೆ ತನ್ನ ಸಹೋದರನಾದ ಅಚ್ಯುತದೇವ ರಾಜನೇ ಸರ್ವವಿಧದಿಂದ ಅರ್ಹನಾಗಿರುವುದರಿಂದ ಅವನಿಗೆ ಪಟ್ಟಾಭಿಷೇಕ ಮಾಡಿ ತನ್ನ ಕರ್ತವ್ಯ ನಿರ್ವಹಿಸಿ ನಿಶ್ಚಿಂತನಾಗಿ ಅಸುನೀಗಲು ಬಯಸುವುದಾಗಿ ವಿಜ್ಞಾಪಿಸಿ "ಗುರುದೇವ! ಅತಿ ಶೀಘ್ರವಾಗಿ ಈ ಕಾರ್ಯ ನೆರವೇರಬೇಕು. ತಾವು ಖುದ್ದು ನಿಂತು ನನ್ನಿಂದ ಈ ಶುಭಕಾರ್ಯ ಮಾಡಿಸಿ ನನ್ನ ಮನಸ್ಸಿಗೆ ಶಾಂತಿ ಸಮಾಧಾನಗಳನ್ನು ಕರುಣಿಸಬೇಕು, ನನ್ನ ಅನಂತರ ಪ್ರಿಯ ಅಚ್ಯುತದೇವರಾಯನಲ್ಲೂ ತಾವು ನನ್ನಲ್ಲಿ ಮಾಡಿದಂತೆಯೇ ಅನುಗ್ರಹ ಮಾಡುತ್ತಾ 'ರಾಜಗುರು'ಗಳಾಗಿದ್ದು ಅವನಿಗೆ ಸರ್ವವಿಧದಿಂದ ಮಾರ್ಗದರ್ಶನ ಮಾಡಿ ಅವನ ಮತ್ತು ಕನ್ನಡ ಸಾಮ್ರಾಜ್ಯದ ಕ್ಷೇಮ ಚಿಂತನ ಮಾಡಬೇಕು" ಎಂದು ಪ್ರಾರ್ಥಿಸಿದನು,

ವ್ಯಾಸರಾಜರಿಗೆ ಅವನ ಮಾತುಕೇಳಿ ಒಂದು ರೀತಿಯಿಂದ ಮನಸ್ಸಿಗೆ ಅತ್ಯಂತ ಸಮಾಧಾನವೂ, ಒಂದು ರೀತಿಯಿಂದ ಇಂಥ ಅಸಾಮಾನ್ಯನಾದ, ಆದರ್ಶ ಸಾರ್ವಭೌಮನ ಅಂತ್ಯ ಸಮೀಪವಾಗುತ್ತಿದೆಯಲ್ಲಾ ಎಂಬುದಾಗಿ ದುಃಖವೂ ಉಂಟಾಗಿ ಸರ್ವಸಂಗ ಪರಿತ್ಯಾಗ ಮಾಡಿದ್ದರೂ ಶಿಷ್ಯಾಭಿಮಾನದಿಂದ ಆ ತಪಸ್ವಿಗಳ ಕಣ್ಣಲ್ಲಿ ನೀರುದುರಿದವು, ಅವನನ್ನು ಸಾಂತ್ವನಗೊಳಿಸಿ "ಕೃಷ್ಣ ! ನಿನ್ನಿಚ್ಛೆಯನ್ನು ಖಂಡಿತ ನೆರವೇರಿಸುತ್ತೇವೆ, ಚಿಂತಿಸಬೇಡ" ಎಂದು ಅಭಯವಿತ್ತು ಆಶೀರ್ವದಿಸಿದರು.

ವ್ಯಾಸರಾಜರ ಸಲಹೆಯಂತೆ ಕೃಷ್ಣದೇವರಾಯನು ಶಾಲಿವಾಹನಶಕೆ 1452ನೇ ವಿರೋಧಿ ಸಂವತ್ಸರ ವೃಶ್ಚಿಕಮಾಸದ ಕೃಷ್ಣ ಪಂಚಮೀ (1530 AD) ಶುಭದಿನದಂದು ಅಚ್ಯುತದೇವರಾಯನಿಗೆ ಸಾಮ್ರಾಜ್ಯ ಪೀಠದಲ್ಲಿ ಪಟ್ಟಾಭಿಷೇಕ ಮಹೋತ್ಸವವನ್ನು ನೆರವೇರಿಸಿ, ರಾಜಗುರುಗಳಿಂದ ಆಶೀರ್ವಾದಮಾಡಿಸಿ ಸಾಮ್ರಾಜ್ಯಾಡಳಿತವನ್ನು ವಹಿಸಿಕೊಟ್ಟು, ಅಳಿಯನಾದ ರಾಮರಾಜ, ತಿರುಮಲ ರಾಯಾದಿಗಳನ್ನು ಮಹಾ ಮಂತ್ರಿಗಳಾಗಿದ್ದು ಅಚ್ಯುತದೇವರಾಯ ಸಾಮ್ರಾಟನಿಗೆ ಸಹಾಯಕರಾಗಿರಬೇಕೆಂದು ವ್ಯವಸ್ಥೆಮಾಡಿದನು. ಈ ಘಟನೆಯೂ ದೈವೀವಿಚಿತ್ರಾಗತಿಃ ಎನ್ನಲು ಒಂದು ಉತ್ತಮ ಉದಾಹರಣೆಯಾಗಿದೆ.[1]

ಅನಂತರ ಕೃಷ್ಣದೇವರಾಯನು ನಿಶ್ಚಿಂತನಾಗಿ ಪ್ರತಿದಿನ ಶ್ರೀವ್ಯಾಸರಾಜರ ಸನ್ನಿಧಿಗೆ ಹೋಗಿ ತಾನು ಸ್ವರ್ಗಸ್ಥನಾಗಲು ಅವರ ಆಶೀರ್ವಾದರೂಪ ಶಕ್ತಿ ಪಡೆಯುತ್ತಿದ್ದನು. ಒಂದು ದಿನ ತಾನು ಇನ್ನು ಬದುಕುವುದಿಲ್ಲವೆಂದು ಮನಗಂಡು ಕೃಷ್ಣದೇವರಾಯನು ಗುರುವ್ಯಾಸರಾಜರ ಪಾದಹಿಡಿದು "ಗುರುದೇವ ! ನನ್ನ ಕಾಲ ಮುಗಿಯಿತು. ನನಗೆ ಪರಲೋಕದಲ್ಲಿ ಸದ್ಗತಿಯಾಗುವಂತೆ ಆಶೀರ್ವದಿಸಿರಿ" ಎಂದು ಪ್ರಾರ್ಥಿಸಿದನು. ಶ್ರೀಯವರು ರಾಯನಿಗೆ ಹೃತ್ಪೂರ್ವಕವಾಗಿ ಆಶೀರ್ವದಿಸಿ ಫಲ ಮಂತ್ರಾಕ್ಷತೆಯಿತ್ತು ಕಳುಹಿಸಿದರು.[2]

ಇದಾದ ಒಂದೆರಡು ದಿನಗಳಲ್ಲಿಯೇ ಕೃಷ್ಣದೇವರಾಯನು ಸ್ವರ್ಗಸ್ಥನಾದನು.[3]

---

1. ತತ್ರಾಂತರೇ ಸಖಿಲು ಕೃಷ್ಣ ನೃಪೋನುಜಸ್ಯ । ಸಾಮ್ರಾಜ್ಯಮಚ್ಯುತಸ್ಯ ಸಲಘೋಜಪರಾಕ್ರಮಸ್ಯ । ಹಸ್ತೇಪಿಹಿತಭರಣಶಾಸನಲಕ್ಷಣೇನ(ಸ್ಯ)ಮಸ್ತೇಮಣಿಸ್ತಬಕಿತಂ ಮುಕುಟಂ ನ್ಯಧತ್ತ"
2. ಕೃಷ್ಣಭೂಮಿಪತಿರಾಯಪೋಽಽಪಥಾ। ವ್ಯಾಸತಾಪಸಮಣಿಂ ಸಸೂಕ್ಷ್ಮಧೀಃ। ಸ್ವರ್ಗಮಾರ್ಗಸುಖಸಂಪ್ರವೃತ್ತಯೇ । ಜೀಟಿಕಾಮಿವ ಜಿಘೃಕ್ಷುರಾಗಮತ್"
3. ತತ್ರ ಸ ಮಹೀಪತಿರ್ಭಗವಂತಂ ಯತಿಮಘುಮಂತಂ ಸಮುಸೃತ್ಯ ವಿದಾಯವಪರಲೋಕ ಪದಾಧಿರೋಹಿಣೀಮಿವ ತಸ್ಯ ಮಹತೀಮಾಶಿಷಮಾಪರೇಣಾದಾಯ ಪ್ರಯಾಣೇ ಲೀಲಾ ವಿಷಯೀಕೃತ ನಂದನಸ್ಯ ದೇವಕೀನಂದನಸ್ಯ ಪುನರಪಿ ಸ್ಮಾರಯನ್ನಂಬರೌಕಃ ಕದಂಬಾನಿ ಬಹುಜನ್ಮಸುಕೃತೇನ ವಾಸವಾಸ್ಯವ್ಯಭಾವಮಭಜತಃ ॥

—ಶ್ರೀವ್ಯಾಸಯೋಗಿಚರಿತಮ್-P.76-77

ಕರ್ನಾಟಕ ಸಾಮ್ರಾಜ್ಯದ ಭಾಗ್ಯರವಿ ಅಸ್ತಂಗತನಾದನು. ಜಗತ್ತಿನಲ್ಲೆಲ್ಲಾ ಆದರ್ಶವಾದ, ಭಾರತದ ಏಕೈಕ ಹಿಂದೂಸಾಮ್ರಾಜ್ಯವೆಂಬ ಕೀರ್ತಿ ವಿಶ್ವವಿಖ್ಯಾತವಾಗುವಂತೆ ಮಾಡಿ ಕನ್ನಡ ಸಾಮ್ರಾಜ್ಯದ ಕೀರ್ತಿ ಪ್ರತಿಷ್ಠೆಗಳು ಸಾರ್ವಕಾಲೀನವಾಗಿ ವಿಶ್ವದ ಇತಿಹಾಸದಲ್ಲಿ ರತ್ನಾಕ್ಷರಗಳಿಂದ ಕೆತ್ತಿಸಿ ಮೆರೆದ ಮಹಾಪ್ರಭುವು ದಿವಂಗತನಾದನು. ಸಮಸ್ತ ಕನ್ನಡನಾಡು, ಪಂಡಿತ-ಗಾಯಕ-ಕವಿ-ಕಲೆಗಾರರು, ಪ್ರಜೆಗಳು ದುಃಖ ಸಮುದ್ರದಲ್ಲಿ ಮುಳುಗಿದರು.

ಕೃಷ್ಣದೇವರಾಯನ ತರುವಾಯ ಕನ್ನಡ ಸಾಮ್ರಾಜ್ಯದ ಚಕ್ರವರ್ತಿಯಾದ ಅಚ್ಯುತದೇವರಾಯನು ಶ್ರೀವ್ಯಾಸರಾಜಗುರುಸಾರ್ವಭೌಮರಲ್ಲಿ ತನ್ನಅಣ್ಣನಂತೆಯೇ ಅತ್ಯಂತ ಭಕ್ತಿ-ಗೌರವಗಳಿಂದ ನಡೆದುಕೊಂಡು ಅವರ ಉಪದೇಶ, ಸಲಹೆ, ಮಾರ್ಗದರ್ಶನಗಳಂತೆ ರಾಜ್ಯಭಾರಮಾಡುತ್ತಾ, ಸಕಲ ಶತ್ರುಗಳನ್ನೂ ತನ್ನ ಬಾಹುಬಲದಿಂದ ಜಯಿಸಿದರೂ ಎಲ್ಲರೊಡನೆ ಮೈತ್ರಿಯಿಂದ ವರ್ತಿಸುತ್ತಾ, ಸಕಲ ಪ್ರಜೆಗಳ ಹಿತಚಿಂತನೆಯಲ್ಲಿ ಆಸಕ್ತನಾಗಿ ಸಾಮ್ರಾಜ್ಯವನ್ನು ಅಭಿವೃದ್ಧಿಸುತ್ತಾ, ದೇವ-ದ್ವಿಜ-ಗುರುಹಿರಿಯರಲ್ಲಿ ವಿಧೇಯನಾಗಿ ನಡೆದುಕೊಂಡು ಸಕಲರ ಪ್ರೇಮಾದರಗಳಿಗೂ, ಅಪಾರ ಕೀರ್ತಿಗೂ ಪಾತ್ರನಾದನು.

o o o o o

ಶ್ರೀವ್ಯಾಸರಾಜರು, ನೂತನ ಸಾಮ್ರಾಟನಾದ ಅಚ್ಯುತದೇವರಾಯನು ಮಹಾಪರಾಕ್ರಮಿಯೂ, ವಿನಯಾದಿಸಂಪನ್ನನೂ, ಗುರುವಿಧೇಯಚರಿತನೂ, ಪ್ರಜಾರಂಜಕನೂ ಆದ ರಾಜನೆಂದು ಎಲ್ಲರ ಪ್ರಶಂಸೆಗೆಪಾತ್ರನಾಗಿ ಕನ್ನಡನಾಡಿನ ಅಭಿವೃದ್ಧಿಯಲ್ಲಿ ಅಳಿಯ ರಾಮರಾಜ ಮುಂತಾದ ಆತ್ಮೀಯಬಂಧುಗಳು ಹಾಗೂ ಸ್ವಾಮಿನಿಷ್ಠ ಸೇವಕರ ಸಹಾಯ ಸಹಕಾರಗಳನ್ನು ಪಡೆದು ಕೀರ್ತಿಗಳಿಸುತ್ತಿರುವುದನ್ನು ಕಂಡು ಬಹುವಾಗಿ ಹರ್ಷಿಸುತ್ತಿದ್ದರು. ಕೀರ್ತಿಶೇಷ ಕೃಷ್ಣದೇವರಾಯನ ಶ್ರೇಯಸ್ಸಿಗಾಗಿ ಮುಳೂರು, ಕೋಲಾರ, ಆರಳುಮಲ್ಲಿಗೆ ಮುಂತಾದ ಕಡೆಗಳಲ್ಲಿ ಭಗವಂತನ ಪ್ರತಿಮೆಗಳನ್ನು ಪ್ರತಿಷ್ಠಾಪಿಸಿದಂತೆ ; ಅಚ್ಯುತರಾಯನ ಅಭ್ಯುದಯಕ್ಕಾಗಿ ಸಾಮ್ರಾಜ್ಯದ ಅನೇಕಕಡೆಗಳಲ್ಲಿ ಶ್ರೀಹರಿಯ ವಿವಿಧ ಅವತಾರ ಪ್ರತಿಮೆಗಳನ್ನು ಪ್ರತಿಷ್ಠಾಪಿಸಿದರು.

ಹೀಗೆ ಪ್ರತಿಷ್ಠಿಸಿದ ದೇವರುಗಳಲ್ಲಿ ವಿಜಯನಗರದಲ್ಲಿ ಪ್ರತಿಷ್ಠಿಸಿದ ಶ್ರೀಯೋಗವರದನರಸಿಂಹದೇವರು ಅತಿಮುಖ್ಯವೆಂದು ಹೇಳಬಹುದು. ವ್ಯಾಸರಾಜರು ಅಚ್ಯುತದೇವರಾಯನ ಪ್ರಾರ್ಥನೆಯಂತೆ ಶಾಲಿವಾಹನ ಶಕೆ 1454ನೇ ನಂದನನಾಮಸಂವತ್ಸರದ ಶ್ರಾವಣ ಬಹುಳ ಬಿದಿಗೆಯ ಶುಭದಿನದಂದು (18-7-1534) ಶ್ರೀವಿಜಯವಿಠಲದೇವರಗುಡಿಯ ಸಭಾಂಗಣದಲ್ಲಿ ಶ್ರೀಯೋಗವರದನರಸಿಂಹದೇವರನ್ನು ಪ್ರತಿ

ಷ್ಠಾಪಿಸಿದರು. ಅಚ್ಯುತದೇವರಾಯ ಈ ಪ್ರತಿಷ್ಠಾಸಮಾರಂಭಕ್ಕಾಗಿ ಹೇರಳವಾಗಿ ದ್ರವ್ಯವನ್ನು ಖರ್ಚುಮಾಡಿ, ವಿಶೇಷ ದಾನಧರ್ಮಗಳನ್ನು ನೆರವೇರಿಸಿ ವ್ಯಾಸರಾಜ ಗುರುಗಳಿಗೆ ಅಪಾರ ಕಾಣಿಕೆಗಳನ್ನು ಸಮರ್ಪಿಸಿ ಕೃತಾರ್ಥನಾದನು.[1]

## ೫೨. ಉಡುಪಿ ಯಾತ್ರೆ

ಸಾರ್ವಭೌಮ ಅಚ್ಯುತರಾಯನು ಒಂದುದಿನ ವ್ಯಾಸರಾಜರ ದರ್ಶನಕ್ಕೆ ಬಂದು "ಗುರುದೇವ, ತಮ್ಮ ಪ್ರಿಯ ವಿದ್ಯಾಶಿಷ್ಯರಾದ ಪೂಜ್ಯ ಶ್ರೀ ವಾದಿರಾಜತೀರ್ಥರು ತಾವು ಕೃಷ್ಣಮಠದ ಪೀಠವೇರಿ ನೆರವೇರಿಸಲಿರುವ ಪರ್ಯಾಯಕ್ಕೆ ಬರಬೇಕೆಂದು ಶ್ರೀಮುಖ ಕಳಿಸಿದ್ದಾರೆ. ಅದರಲ್ಲಿ ಅವರು "ನಮ್ಮ ಗುರುಪಾದರಾದ ಪೂಜ್ಯ ಶ್ರೀ ವ್ಯಾಸಯೋಗೀಂದ್ರರಿಗೂ ವಿಜ್ಞಾಪನಾಪತ್ರ ಬರೆದುಕೊಂಡು ಪರ್ಯಾಯಕ್ಕೆ ದಯಮಾಡಿಸಬೇಕೆಂದು ಕೋರಿದ್ದೇವೆ. ನೀವು ಮತ್ತು ಶ್ರೀಗುರುಚರಣರು ಅವಶ್ಯವಾಗಿ ಶ್ರೀಕೃಷ್ಣಪರ್ಯಾಯಕ್ಕೆ ಬಂದು ಉತ್ಸವವನ್ನು ಯಶಸ್ವಿಗೊಳಿಸಿಕೊಡಬೇಕಾಗಿ ಅಪೇಕ್ಷಿಸುತ್ತೇವೆ—ಎಂದು ನನಗೆ ಆದೇಶ ನೀಡಿದ್ದಾರೆ. ಎಲ್ಲ ವಿಚಾರವನ್ನೂ ಅರಿಕೆ ಮಾಡಿದ್ದೇನೆ. ಅಪ್ಪಣೆಯಾದಂತೆ ನಡೆಯಲು ಸಿದ್ಧನಿದ್ದೇನೆ" ಎಂದುವಿಜ್ಞಾಪಿಸಿದನು.

ಶ್ರೀ ವ್ಯಾಸತೀರ್ಥರು "ರಾಜನ್, ನಮ್ಮ ಪ್ರೀತ್ಯಾಸ್ಪದ ಶಿಷ್ಯರಲ್ಲಿ ಶ್ರೀ ವಾದಿರಾಜರು ಜ್ಞಾನಿಗಳು. ಅವರು ಪರ್ಯಾಯಕ್ಕೆ ಆಹ್ವಾನಿಸಿ ನಮಗೂ ಬರೆದುಕೊಂಡಿದ್ದಾರೆ. ದ್ವೈತಸಿದ್ಧಾಂತಭಾಗೀರಥಿಯು ಹೊರಹೊಮ್ಮಿದ, ಶ್ರೀಮದಾಚಾರ್ಯರ ಜನ್ಮಭೂಮಿಯೂ ಕಾರ್ಯಕ್ಷೇತ್ರವೂ ಆಗಿದ್ದ ಆ ಪವಿತ್ರ ಕ್ಷೇತ್ರಕ್ಕೆ ಹೋಗಿ ನಮ್ಮ ಉದ್ಧಾರಕ ಸ್ವಾಮಿಯಾದ ಶ್ರೀಕೃಷ್ಣನ ದರ್ಶನಪೂಜಾದಿಗಳಿಂದ ಪುನೀತರಾಗಲು ಆಶಿಸಿದ್ದೇವೆ. ಶೀಘ್ರವಾಗಿ ನಾವು ಯಾತ್ರೆಗೆ ಹೊರಡಲಿದ್ದೇವೆ. ಕನ್ನಡ ಸಾಮ್ರಾಟನೂ, ಶ್ರೀಹರಿಭಕ್ತನೂ ಆದ ನೀನೂ ನಮ್ಮ ಜೊತೆಗೆ ಬಂದರೆ ನಮಗೆ ಸಂತೋಷವಾಗುವುದು. ಇದರಿಂದ ನಿನ್ನ ಮತ್ತು ಸಾಮ್ರಾಜ್ಯದ ಅಭ್ಯುದಯವಾಗುವುದು ಎಂದು ಆಜ್ಞಾಪಿಸಿದರು.

ಅಚ್ಯುತ ದೇವರಾಯನು ಮುದಗೊಂಡು "ಮಹಾಸ್ವಾಮಿ, ನಾನು ಮಿತ ಪರಿವಾರದೊಡನೆ ಹೊರಡಲಾಶಿಸಿದ್ದೇನೆ. ಗುರುಪಾದರು ಮಹಾಸಂಸ್ಥಾನದೊಡನೆ ತಮ್ಮ ಈ ಶಿಷ್ಯನ ಜೊತೆಯಲ್ಲೇ ದಯಮಾಡಿಸಲು ಸಕಲವ್ಯವಸ್ಥೆಯನ್ನೂ ಮಾಡುತ್ತೇನೆ. ಒಂದು ಸುಮುಹೂರ್ತವನ್ನು ತಾವು ನಿಷ್ಕರ್ಷಿಸಿ ಆಜ್ಞಾಪಿಸಿದಲ್ಲಿ ಅನುಕೂಲವಾಗುವುದು" ಎಂದು ಬಿನ್ನವಿಸಿದನು. ಶ್ರೀಯವರು "ಗೀತಾಜಯಂತಿಯ ತರುವಾಯ ಮಾರ್ಗಶಿರ ಶುಕ್ಲತ್ರಯೋದಶೀದಿನ ಪ್ರಯಾಣಕ್ಕೆ ಪ್ರಶಸ್ತವಾಗಿದೆ" ಎಂದು ಹೇಳಲು

---

1. South Indian Epigraphy for 1922-23. Inscription No.716 of 1922.

ಅಂದೇ ಯಾತ್ರೆಗೆ ಹೊರಡಲು ಎಲ್ಲ ವ್ಯವಸ್ಥೆ ಮಾಡುವುದಾಗಿ ವಿಜ್ಞಾಪಿಸಿ ಅಚ್ಯುತ ದೇವರಾಯನು ಫಲಮಂತ್ರಾಕ್ಷತೆ ಸ್ವೀಕರಿ ಅರಮನೆಗೆ ತೆರಳಿದನು.

o o o o o

ಉಡುಪಿಯಲ್ಲಿ ಮೊದಲು ಶ್ರೀಅಷ್ಟಮಠಾಧೀಶರು ಒಬ್ಬೊಬ್ಬರು ಎರಡೆರಡು ತಿಂಗಳು ಕಾಲ ಶ್ರೀಕೃಷ್ಣಪೂಜಾ,ಪಾಠಪ್ರವಚನಾದಿಕಾರ್ಯಮಾಡುವಸಂಪ್ರದಾಯ ವಿದ್ದು ಅದು 1532ರವರೆಗೆ ನಡೆದುಬಂದಿತ್ತು. ಶ್ರೀವಾದಿರಾಜಗುರುಚರಣರು-ಶ್ರೀವ್ಯಾಸರಾಜ ಗುರುಸಾರ್ವಭೌಮರಲ್ಲಿ ಸಕಲ-ಸಚ್ಛಾಸ್ತ್ರಗಳನ್ನು ವ್ಯಾಸಂಗಮಾಡಿ ಗುರುಗಳ ಸನ್ನಿಧಾನದಲ್ಲಿದ್ದಾಗ ಶ್ರೀ ವ್ಯಾಸರಾಜರು"ಎರಡು ವರ್ಷಗಳ ಕಾಲ ಪೂಜಾ ರಾಧನೆಯ ಪರ್ಯಾಯವನ್ನು ಏರ್ಪಡಿಸಿದರೆ ವಿಶೇಷಾಕಾರವಾಗಿದೇವರಸೇವೆಮಾಡ ಬಹುದು. ಮತ್ತು ಎರಡು ವರ್ಷ ಕಾಲ ಪಾಠಪ್ರವಚನ ನೇರವೇರಿಸಲೂ ಅನುಕೂಲ ವಾಗುವುದು. ಅಲ್ಲಿನ ಅಭಿವೃದ್ಧಿಕಾರ್ಯಗಳನ್ನೂ ಮಾಡಬಹುದು. ಮತ್ತೆ 14 ವರ್ಷ ಕಾಲ ದೇಶಸಂಚಾರ, ಸಿದ್ಧಾಂತಪ್ರಸಾರ, ತೀರ್ಥಕ್ಷೇತ್ರ ಯಾತ್ರೆ ಮಾಡಲೂ ಅನುಕೂಲವಾಗುವುದು"ಎಂದು ಸಲಹೆ ನೀಡಿ "ನಿಮಗಿದು ಯುಕ್ತವೆನಿಸಿದರೆಅದರಂತೆ ಆಚರಿಸಬಹುದು"ಎಂದು ಅಪ್ಪಣೆಮಾಡಿದಾಗ ಶ್ರೀವಾದಿರಾಜರಿಗೆ ಗುರುಗಳ ಸಲಹೆ ಮನಸ್ಸಿಗೆ ಹಿಡಿಸಿತು. ಆಗ ಅವರು "ಗುರುವರ್ಯ, ನಮ್ಮ ಪರ್ಯಾಯ ಸಮೀಪಿ ಸುತ್ತಿರುವುದರಿಂದ ಈಗಲೇ ನಾವು ಉಡುಪಿಗೆ ಹೋಗಿ ಇತರ ಮಠಾಧೀಶರೊಡನೆ ಸಮಾಲೋಚನೆಮಾಡಿ ನಮ್ಮ ಪರ್ಯಾಯವನ್ನು ತಮ್ಮಸಲಹೆಯಂತೆಯೇನೆರವೇರಿ ಸಲು ಯತ್ನಿಸುತ್ತೇವೆ"ಎಂದು ಹೇಳಿ ಶ್ರೀಗುರುವರರ ಅಪ್ಪಣೆಪಡೆದು ಉಡುಪಿಗೆ ಪ್ರಯಾಣಬೆಳೆಸಿ ಎರಡು ವರ್ಷಗಳ ಪರ್ಯಾಯದ ಸಂಪ್ರದಾಯವನ್ನು ಸರ್ವಯತಿ ಗಳ ಸಮ್ಮತಿಯಂತೆ ತಮ್ಮ ಪರ್ಯಾಯದಿಂದಲೇ ಪ್ರಾರಂಭಿಸಲು ಪೂರ್ವಭಾವಿ ಸಿದ್ಧತೆ ಮಾಡಿಕೊಂಡು, ಶ್ರೀಕೃಷ್ಣಮಠ, ಶ್ರೀಸೋದೇಮಠ, ರಥಬೀದಿಗಳನ್ನು ತಳಿರು, ತೋರಣ. ಧ್ವಜಪತಾಕೆಗಳಿಂದ ಶೃಂಗರಿಸಿ ಪರ್ಯಾಯ ಪೀಠವೇರಲು ಎಲ್ಲ ಸನ್ನಾಹಗಳನ್ನೂ ಮಾಡಿಕೊಂಡೇ ಶ್ರೀವ್ಯಾಸರಾಜ—ಅಚ್ಯುತದೇವರಾಯರಿಗೆ ಪರ್ಯಾಯಕ್ಕೆ ಆಹ್ವಾನ ಕಳಿಸಿದ್ದರು.

ಕನ್ನಡ ಸಾಮ್ರಾಜ್ಯದ ರಾಜಗುರುಗಳೂ, ಜ್ಞಾನಿನಾಯಕರೂ ಶ್ರೀಮದಾಚಾರ್ಯ ಮಹಾಸಂಸ್ಥಾನಾಧೀಶರೂ ಆದ ಶ್ರೀವ್ಯಾಸರಾಜ ಗುರುಸಾರ್ವಭೌಮರು ಮತ್ತು ಕನ್ನಡ ಚಕ್ರೇಶ್ವರರೂ ಪರ್ಯಾಯಕ್ಕೆ ಆಗಮಿಸುವ ವಿಚಾರ ತಿಳಿದು ಎಲ್ಲ ಕಡೆಗಳಿಂದ ಹತ್ತಿಪ್ಪತ್ತು ಸಹಸ್ರಜನ ಶ್ರೀಕೃಷ್ಣಭಕ್ತರಾದ ಆಸ್ತಿಕರು ಉಡುಪಿಗೆ ಬಂದುಸೇರಿದರು.ಪರ್ಯಾಯಪೀಠವೇರುವ ಶ್ರೀವಾದಿರಾಜರು ತಮ್ಮ ವಿದ್ಯಾಗುರು ಗಳೂ, ಮಹಾಸಂಸ್ಥಾನಾಧಿಪತಿಗಳೂ ಆದ ವ್ಯಾಸರಾಜರನ್ನು ಹಾಗೂ ಸಾಮ್ರಾಟ ನನ್ನು ಸ್ವಾಗತಿಸಲು ಸಮಸ್ತಬಿರುದುಬಾವಲಿ,ಪೂರ್ಣಕುಂಭ, ಮತ್ತು ಮಂಗಳವಾದ್ಯ

ಗಳೊಡನೆ ಅಷ್ಟಮಠದ ಪಂಡಿತರು, ಧಾರ್ಮಿಕರುಗಳನ್ನು ತಮ್ಮ ಪೀಠದ ಅಧಿಕಾರಿಗಳನ್ನು ಉಡುಪಿಯ ಎಲ್ಲೆಯಲ್ಲಿ ನಿರ್ಮಿಸಿದ್ದ ಹಸರುವಾಣಿ ಚಪ್ಪರದ ಬಳಿಗೆ ಕಳಿಸಿದ್ದರು.

ಸ್ವಲ್ಪ ವೇಳೆಯಲ್ಲಿಯೇ ವ್ಯಾಸರಾಜರು,ಸಾಮ್ರಾಟನೊಡಗೂಡಿ ಚಿತ್ತೈಸಿದರು. ಕನ್ನಡ ಸಾಮ್ರಾಜ್ಯದ. ಶ್ರೀಮದಾಚಾರ್ಯರಮಹಾಪೀಠದ ಸಮಸ್ತ ಬಿರುದುಬಾವಲಿಗಳೊಡನೆ, ಆನೆ, ಒಂಟೆ. ಕುದುರೆ, ಸಮವಸ್ತ್ರಧರಿಸಿದ ಸೈನಿಕರು ಸಾಲು ಸಾಲುಗಟ್ಟಿ ಬಂದುಸೇರಿದರು. ಪರ್ಯಾಯಪೀಠದ ಅಧಿಕಾರಿಗಳು ಮಠಗಳಪ್ರತಿನಿಧಿಗಳು ಪಂಡಿತರು,ಆಸ್ತಿಕರು ಭಕ್ತರುಗಳು ಪೂರ್ಣಕುಂಭದೊಡನೆಸ್ವಾಗತಿಸಿ. ಶ್ರೀವಾದಿರಾಜ ಶ್ರೀಪಾದಂಗಳವರಆಶಯದಂತೆ ಪರ್ಯಾಯಮಠದಸುವರ್ಣಪಾಲಕಿಯಲ್ಲಿಶ್ರೀಮೂಲಗೋಪಾಲಕೃಷ್ಣಪಟ್ಟಾಭಿರಾಮ ವೇದವ್ಯಾಸದೇವರ ಪೆಟ್ಟಿಗೆಯನ್ನಿಟ್ಟು ಅಲಂಕರಿಸಿ ನಂತರ ಮಹಾಸಂಸ್ಥಾನದ ಬಂಗಾರದಪಾಲಕಿಯಲ್ಲಿ ಶ್ರೀಯವರನ್ನು ಮಂಡಿಸಿದರು. ಸಾಮ್ರಾಟ್ ಅಚ್ಯುತದೇವರಾಯರು ಅಲಂಕೃತ ಸುಂದರ ಶ್ವೇತಹಯವನ್ನೇರಿದರು, ಪರ್ಯಾಯ ಮಠದ ಅಧಿಕಾರಿಗಳು ಮತ್ತು ಪುರಪ್ರಮುಖರೊಬ್ಬರು ಚಾಮರ ಹಾಕುತ್ತಿರಲು ವಾದ್ಯವೈಭವ. ಹರಿದಾಸರ ಭಜನೆ, ಪಂಡಿತರ ವೇದಘೋಷ ತಾಳಸ್ತುತಿಪಾಠಕರ ಬಿರುದಾವಳೀ ಘೋಷಣೆಗಳೊಡನೆ ಮೆರವಣಿಗೆ ಹೊರಟಿತು. ಉಡುಪಿ ಸೀಮಾದಿಂದ ಶ್ರೀಕೃಷ್ಣ ಮಠದವರೆಗೆ ಹತ್ತಾರು ಸಹಸ್ರಜನರು ರಸ್ತೆಯ ಉಭಯ ಪಾರ್ಶ್ವದಲ್ಲಿ ನಿಂತು ಕರತಾಡನ-ಜಯ ಜಯಕಾರ ಮಾಡುತ್ತಾ, ಲಾಜಾಪುಷ್ಪವೃಷ್ಟಿ ಮಾಡುತ್ತಿರಲು ಹೆಜ್ಜೆ ಹೆಜ್ಜೆಗೆ ಸುಮಂಗಲಿಯರು ಕದಲಾರತಿ ಎತ್ತುತ್ತಿರಲು ಪೌರರು, ಧಾರ್ಮಿಕರು ಪುಷ್ಪಾಹಾರಗಳನ್ನರ್ಪಿಸುತ್ತಿರಲು ಮೆರವಣಿಗೆಯು ರಥದ ಬೀದಿಗೆ ಬಂದಾಗ ಏಳು ಮಠದ ಶ್ರೀಯತಿವರ್ಯರು ಶ್ರೀವ್ಯಾಸರಾಜರನ್ನು, ಸಾಮ್ರಾಟರನ್ನು ಸ್ವಾಗತಿಸಿದರು. ಅಲ್ಲಿ ಸಾಮ್ರಾಟ ಕುದುರೆಯಿಂದಿಳಿದು ಸುವರ್ಣ ಹಿಡಿಕೆಯ ಚಾಮರ ಹಾಕುತ್ತಾ ಗುರುಗಳನ್ನು ಸೇವಿಸುತ್ತಿರಲು ಶ್ರೀಯವರು ಪಾಲಕಿಯಲ್ಲಿ ಮಂಡಿಸಿ ಶ್ರೀಕೃಷ್ಣಮಠದ ಮಹಾದ್ವಾರದ ಬಳಿ ಬಂದರು.

ಕೃಷ್ಣಮಠದ ಮುಂದೆ ಗುರುಗಳ ಆಗಮನವನ್ನು ನಿರೀಕ್ಷಿಸುತ್ತಾ ನಿಂತಿದ್ದ ಶ್ರೀವಾದಿರಾಜರು ಗುರುಗಳುಬಂದ ರೀತಿ,ವೈಭವವನ್ನು ಕಂಡು ಮೈಮರೆತುಹಾಡಿದರು.

ರಾಗ :-ಕೇದಾರ ತಾಳ :-ಛಾಪು

ಆನೆಬರುತ್ತಿದಿಕೋ ವ್ಯಾಸರಾಯರೆಂಬಾನೆ ಬರುತಿದಿಕೋ ॥ ಪ ॥

....................................................

ಮುರಿಯಲು ದುರುಳರ ಗರುವವನೆ ಮುನ್ನ ।
ಸಿರಿಹಯವದನನ ಅರಮನೆಯ ಪಟ್ಟದ ॥ ३ ॥

ಆನಂತರ ಗುರುದರ್ಶನದಿಂದ ಪುಳಕಿತಗಾತ್ರರಾಗಿ ಗುರುಪಾದರತ್ತ ಧಾವಿಸಿ

ಒಂದು ಸಾಷ್ಟಾಂಗವೆರಗಲಿರುವಾಗ ವ್ಯಾಸರಾಜರು ಅವರನ್ನು ಭರದಿಂದ ಆಲಿಂಗಿಸಿದರು. ಗುರುಶಿಷ್ಯರಿಬ್ಬರ ಕಣ್ಣಿನಲ್ಲಿಯೂ ಆನಂದಬಾಷ್ಪ ಹರಿಯುತ್ತಿದೆ. ಸಾಮ್ರಾಟ ಈ ಗುರುಶಿಷ್ಯ ವಾತ್ಸಲ್ಯ-ಭಕ್ತಿಗಳನ್ನು ಕಂಡು ಬೆರಗಾದ. ಅರಮನೆಯ ದೃಶ್ಯವನ್ನು ಕಂಡು ಸಹಸ್ರಾರು ಜನ "ಆಹಾ ಎಂಥ ಗುರುಗಳು ! ಎಂಥಾ ಶಿಷ್ಯರು ! ಈ ಪಾವನ ನೋಟವನ್ನು ಕಂಡ ನಾವೇ ಧನ್ಯರು" ಎಂದು ಉದ್ಗರಿಸಿದರು. ಅನಂತರ ವಾದಿರಾಜರು ಅಚ್ಯುತದೇವರಾಯನು ನಮಸ್ಕರಿಸಿದಾಗ ಅವನನ್ನು ಆಶೀರ್ವದಿಸಿ ಗುರುಗಳಿಗೆ ಹಸ್ತಲಾಘವವಿತ್ತು, ಸಾಮ್ರಾಟರನ್ನು ಸ್ವಾಗತಿಸಿಕರೆತಂದು ಶ್ರೀಕೃಷ್ಣನ ದರ್ಶನಮಾಡಿಸಿದರು. ದೇವರ ದರ್ಶನದಿಂದ ಆನಂದತುಂದಿಲರಾದ ಶ್ರೀವ್ಯಾಸಮುನಿಗಳು "ಶಮಯನ್ ಭವಸಂತಾಪಂ । ರಮಯನ್ ಸಾಧುಚಾತಕಾನ್ । ಕೃಷ್ಣಮೇಘಃ ಕೃಪಾದೃಷ್ಟಿವೃಷ್ಟ್ಯಾ ಪುಷ್ಣಾತು ಮಾಮಪಿ ॥" ಎಂದು ಸ್ತುತಿಸಿ ನಮಸ್ಕರಿಸಿದರು.

ಅಂದು ಕೃಷ್ಣನಿಗೆ ಮೋಹಿನಿಯ ಅಲಂಕಾರವನ್ನು ಮಾಡಿದ್ದರು. ಆ ವೈಭವವನ್ನು ಕಂಡು ಭಕ್ತಿಪ್ರಕರ್ಷದಿಂದ ರೋಮಾಂಚಿತರಾಗಿ ತದೇಕದೃಷ್ಟಿಯಿಂದ ಜಗತ್ತನ್ನೇ ಮೋಹಗೊಳಿಸುವ ಮೋಹಿನೀರೂಪದಿಂದ ಕಂಗೊಳಿಸುತ್ತಿದ್ದ ಶ್ರೀಕೃಷ್ಣನನ್ನು ನೋಡುತ್ತಿರುವಾಗ ಅವರಿಗೆ ಸಾಕ್ಷಾತ್ ಶ್ರೀವಿಷ್ಣು ಅಮೃತಮಥನಕಾಲದಲ್ಲಿ ತಾನು ಸ್ವೀಕರಿಸಿದ್ದ ಮೋಹಿನೀರೂಪವನ್ನೇ ತೋರಿಸುತ್ತಾ ಮಂದಹಾಸ ಬೀರಲಾರಂಭಿಸಿದಂತಾಯಿತು. ಕೂಡಲೇ ಅವರ ಮುಖದಿಂದ ಶ್ರೀಕೃಷ್ಣನ ಅಂದಿನ ರೂಪದ ಸರ್ವಾಂಗವರ್ಣನಪರವಾದ ಒಂದು ಅದ್ಭುತ ದಂಡಕ ರೂಪ ಕೃತಿಯು ಹೊರಹೊಮ್ಮಿತು !

ರಾಗ :-ರೇಗುಪ್ತಿ ತಾಳ :-ಆದಿ

"ಮರುಗ ಮೊಲ್ಲೆ ಮಲ್ಲಿಗೆ ಜಾಜಿ ಸಂಪಿಗೆ । ತುರುಬಿನೊಳೊಪ್ಪುವ ಚೂಡಾರತುನ ಮಾಣಿಕದ ಮೆರೆವ ಚಂದ್ರ ಸೂರಿಯ ಮುಡಿಯೊಳೊಪ್ಪೆ । ಕರುಳುಗೂದಲು ಬೈತಲೆ ಥಳಪುಗಳ ಮೃಗನಾಭಿ ತಿಲಕನೊಸಿಲಲಿ ಹಚ್ಚಿ ಬಟ್ಟು । ಮದನಸಿಂಗಾಡಿ ಸೋಲಿಸುವ ಪುರ್ಬುಗಳ ಕಡುತೆ ಗಂಗಳ ಥಾಳ ಜಗವ ಮೋಹಿಸುತಲಿಪ್ಪ। ಕಡೆಗಣ್ಣಿಗೊಂಪು ಹೆಚ್ಚಿಯ ರೇಖೆಗಳ ಬೆಡಗು ಮುತ್ತಿನಮೂಗುತಿ ನಾಸಿಕದಲ್ಲಿ ॥"
ಆವರಿಗೆ ವಾದಿರಾಜರು ಪುರಂದರದಾಸರು ವ್ಯಾಸತೀರ್ಥರು ಮೋಹಿನೀ ಅಲಂಕಾರವನ್ನು ವರ್ಣಿಸುತ್ತಿದ್ದಾರೆಂದು ಭಾವಿಸಿ ಭಕ್ತಿಯಿಂದ ಕೇಳುತ್ತಿದ್ದರು. ಆದರೆ ಮುಂದೆ ಅವರು "ಮೆರೆವ ಚಂದ್ರ ಸೂರಿಯ ಮುಡಿಯೊಳೊಪ್ಪೆ" ಮುಂತಾಗಿ ವರ್ಣಿಸಲು ಆಶ್ಚರಿಗೊಂಡು ವಾದಿರಾಜರು ವ್ಯಾಸರಾಯರು ತಕ್ಷಣ ಕಣ್ಣುಮುಚ್ಚಿ ಧ್ಯಾನಾಸಕ್ತರಾದರು. ತಮ್ಮ ಹೃದಯ ಭೂಮಿಯಲ್ಲಿ ಅವರಿಗೆ ಉಡುಪಿಯ ಕೃಷ್ಣ, ಅವನನ್ನು ವರ್ಣಿಸುತ್ತಿದ್ದ ವ್ಯಾಸರಾಜರು, ಮತ್ತು ತಾವೂ ಅಲ್ಲಿರುವುದನ್ನು ಕಂಡರು. ನಂತರ

ಅವೆಲ್ಲವೂ ಮರೆಯಾಗಿ ವ್ಯಾಸರಾಜರು ವರ್ಣಿಸುತ್ತಿರುವ ಸಾಕ್ಷಾತ್ ಶ್ರೀಹರಿಯು ಅಮೃತಮಥನ ಕಾಲದ ಮೋಹಿನಿಯರೂಪವೇ ಮಂದಹಾಸದಿಂದ ನಲಿಯುತ್ತಿರುವುದನ್ನು ಅವರು ಕಂಡರು. ಮೈರೋಮಾಂಚನಗೊಂಡು ಭಕ್ತ್ಯತಿಶಯದಿಂದ ಆನಂದಾಶ್ರುವಿನಿಂದ ಎವೆಯಿಕ್ಕದೆ ಆ ಅದ್ಭುತ ಸೌಂದರ್ಯದಿಂದ ಕಂಗೊಳಿಸುವ ರೂಪವನ್ನು ನೋಡುತ್ತಾ ತಮ್ಮ ಜನ್ಮಸಾರ್ಥಕವಾಯಿತೆಂದು ಆನಂದದಿಂದ ಮೈಮರೆತರು. ಶ್ರೀವ್ಯಾಸರಾಜರು ಹಾಡುತ್ತಲೇ ಇದ್ದಾರೆ.

"ಕಡುಕೆಂಪು ಅಧರ ಚುಬುದಂತಗಳ ಥಳಥಳಿಸುವ ಕದಪಿನ ಮೇಲೊಪ್ಪುವ ಹೊಳೆವೋವಾಲೆ ಕೊಪ್ಪು ಮೋರೆಗಳನಳನಳಿಸುವ ಎಳೆ ನೀಲದ ಬಾವುಲಿ। ಹೊಳೆವ ಆಣೆ ಮುತ್ತಿನ ಮುತ್ತಿನಗೊಂಚಲುಗಳ ಶಂಖ ತ್ರಿರೇಖೆಯಿಂದೊಪ್ಪುವ ಗಳದಲ್ಲಿ। ಕುಂಕುಮಕಸ್ತೂರಿ ಅಗುರುಚಂದನದ ಮುತ್ತಿನಮಲಕು ಪದಕಸರ ಕೊರಳಲ್ಲಿ। ಹತ್ತಿಗಟ್ಟಿದ ವಾಗ್ದೊರಳು ಮುತ್ತುಗಳ ಮುತ್ತು ಮಾಣಿಕ ನವರತ್ನ ಚಿಂತಾಕ। ವತ್ತಿ ಸೇರಿದ ಕಂಠಮಾಲೆ ಸರಗಳ ಹವಳದಸರ ಏಕಾವಳಿ ಸರಗಳು। ಪರಿ ಪರಿ ಒಪ್ಪುವ ಪದಕ ತಾಳಿಗಳ ಕರಿಯ ಸೊಂಡಲ ಸೋಲಿಸುವ ತೋಳ್ಗಳ ಮೇಲೆ। ಮೆರೆವ ಭುಜ ಕೀರ್ತಿ ತೊಳಗಳ ಬಂದಿಗಳ ರಘುಡಿಪ್ಪೋ ದುಂಡು ರಕ್ಷಣೆಯಮಣಿ ತಾಯಿತ್ತು। ಮೆರೆವ ಪಮ್ಪೂರ ತಾಯಿತಿ ಕಾಂತಿಗಳ ಕಡಗಕಂಕಣಾಸುರಿಗೆ ಬಿಚ್ಚು ಬಳೆಗಳು ।ಹಿಡಿ ಪುಡಿಯಲ್ಲಿ ವಜ್ರದ ಥಳುಪುಗಳ ಕಡುಮೋಹವಾದ ಮುರುಡಿಯ ಸರಪಣಿ। ರಘುಡಿವ ಮುಂಗೈಯು ಪುರಾರಿಕವಡೆಯ ಜಾತಿಪವಳ ಕೈಕಟ್ಟು ಮುಂಗೈಯಲ್ಲಿ। ಖ್ಯಾತಿ ಪಡೆದ ಮುತ್ತಿನ ಕಂಕಣಗಳ ಅರುಣನ ಉದಯ ಸೋಲಿಸುವ ಅಂಗೈಯಲ್ಲಿ। ಪಿಡಿದು ಕಡೆವ ಕಡಗೋಲು ನೇಣಗಳ ಬೆರಳ ಮುದ್ರಿಕೆರಂಗು ನೀಲಮಾಣಿಕ್ಯಗಳು।ಪ್ರತಿ ಫಲಿಸುವ ಚಂದ್ರಕಾಂತಿಯು ಬೆಳ್ಳುಗುರು। ಕನಕಕಲಶ ಕುಚಗಳ ಮೇಲೊಪ್ಪುವ/ ಮಿನುಗುವ ಚಂದ್ರಗಾವಿಯ ರವಿಕೆಗಳ। ಉರದಲೊಪ್ಪುವ ಶ್ರೀವತ್ಸಕೌಸ್ತುಭ ರತ್ನ। ಮೆರೆದ ವೈಜಯಂತಿಮಾಲೆ ಶೋಭಿಸುವ। ಉರದ ತ್ರಿವಳಿ ನಾಭಿ ಕಟಿಯಮೇಲೊಪ್ಪುವ। ಪದುಮಪಚ್ಚೆಯ ಚುಂಗು ನೆರೆಯ ಸೊಬಗಿನ ನಡುವಿನೊಳೊಪ್ಪುವ ಚಲತಮದೊಡ್ಯಾಣವು। ಕಡುಮುದ್ದು ಉಡಿಗಂಟೆ ರಘುಥಿತ ನೀವಳದ ಉರುಟು ಕದಳಿ ಕದಂಬದಂತೆ ಪೀಪೋಡೆಗಳ। ಮೆರೆವ ಜಾನುಜಂಘ ಚರಣಕಮಲದ ಮೆರೆವ ಕಾಲಂದಿಗೆ ಕಿರುಗೆಜ್ಜೆ ಸರಪಳಿ। ವೀರಮುದ್ರಿಕೆ ಮೆಂಟಿಕೆಯ ಪಿಲ್ಲೆಗಳ ಅಂಕುಶಧ್ವಜ ವಜ್ರರೇಖೆಯಿಂದೊಪ್ಪುವ। ಕುಂಕುಮಾಂಕಿತವಾದ ನಖಚಂದ್ರಿಕೆಯ ಶಂಕೆಯಿಲ್ಲದೆ ಶಕಟನ ತುಳಿದಪಾದ। ಬಿಂಕದಿಂದಲಿ ಕಾಳಿಂಗನ ಶಿರದಿ,ನಿಶ್ಶಂಕನಾಗಿ ತುಳಿದ ಮುದ್ದು ಪಾದ । ದುರುಳಕೌರವನ ಧರೆಗೆ ಕೆಡಹಿದಪಾದ ಶರಣಜನರು ಸೇದೆಸುವ ಶ್ರೀಪಾದ। ಶಿರಿಯರಸಿಯು ಸೇವಿಸುವ ಶ್ರೀಪಾದ ನಿರುತ ಸೇವಿಪನಮ್ಮ ಗುರುಮಧ್ವಮುನಿಯ/ ಹೃದಯಕಮಲ ವಾಸವಾಗಿಪ್ಪ **ಶ್ರೀಕೃಷ್ಣನ** ಪದಮಚರಣಕ್ಕೆ ನಮೋ ನಮೋ ನಮೋ ಎಂಬೆನಾ ॥"

ಹೀಗೆ ಹಾಡಿ ಶ್ರೀವ್ಯಾಸರಾಜರು ಮತ್ತೊಮ್ಮೆ ಸಾಷ್ಟಾಂಗವೆರಗಿ ಕೈಜೋಡಿಸಿ ನಿಂತರು. ವಾದಿರಾಜರು, "ಗುರುದೇವ ! ಇಂದು ತಮ್ಮ ಅನುಗ್ರಹದಿಂದ ಸಾಕ್ಷಾತ್ ಮೋಹಿನಿಯ ದರ್ಶನವೇನವಮಗಾಯಿತು. ಧನ್ಯರಾದೆವು" ಎಂದರು. ಪುರಂದರದಾಸರು ನಗುತ್ತಾ "ಈ ಪಾಮರನೂ ಧನ್ಯನಾದ ಮಹಾಸ್ವಾಮಿ" ಎಂದಾಗ ಶ್ರೀಯವರು ಅವರೀರ್ವರನ್ನೂ ಪ್ರೇಮದಿಂದೀಕ್ಷಿಸಿ *'ಹೃದಯ ಕಮಲದಲ್ಲಿ ಪದುಮನಾಭನ ಕಾಂಬ ಮುದಮುನಿಪಾದ ಸೇವಿಪ ಕವಿಗಳಿಗೆ ಅದು ಸ್ವಾಭಾವಿಕ' ಎಂದು ನಕ್ಕರು.

ಅನಂತರ ವಾದಿರಾಜಸ್ವಾಮಿಗಳು ವ್ಯಾಸಮುನಿಗಳಿಗೆ, ಸಾಮ್ರಾಟರಿಗೆ ಪರಿವಾರದವರಿಗೆ ಪ್ರಸಾದವನ್ನು ಕೊಟ್ಟು ಗುರುಗಳೊಡನೆ ಸಭಾವನಕ್ಕೆ ಬಂದರು,

ಶ್ರೀ ಉಡುಪಿಯ ಎಲ್ಲ ಪೀಠಾಧೀಶರು, ರಾಜಕೀಯ ಮುಖಂಡರು, ಪಂಡಿತರು ಧರ್ಮಾಭಿಮಾನಿಗಳು. ಶಿಷ್ಯ-ಭಕ್ತ ಜನರಿಂದ ಕಿಕ್ಕಿರಿದು ತುಂಬಿದ್ದ ಸಭೆಯಲ್ಲಿ ವ್ಯಾಸರಾಜರು, ವಾದಿರಾಜರು ಇತರ ಉಡುಪಿಯ ಪೀಠಾಧಿಪತಿಗಳು ಹಾಗೂ ಕನ್ನಡ ಸಾಮ್ರಾಟರು ಆಸನಾಸೀನರಾದ ಮೇಲೆ ವೇದಘೋಷದೊಡನೆ ಸಭೆ ಪ್ರಾರಂಭವಾಗಿ ಉಡುಪಿಯ ಎಲ್ಲ ಮಠಾಧೀಶರೂ ಶ್ರೀವ್ಯಾಸರಾಜರನ್ನು ಅಚ್ಯುತದೇವರಾಯನನ್ನು ಆದರದಿಂದ ಸ್ವಾಗತಿಸಿ ಸೂಕ್ತರೀತಿಯಲ್ಲಿ ಭಾಷಣ ಮಾಡಿದಮೇಲೆ ಪರ್ಯಾಯ ಪೀಠಾಧೀಶರಾದ ಶ್ರೀವಾದಿರಾಜಯತೀಂದ್ರರು ತಮ್ಮ ವಿದ್ಯಾಗುರುಗಳ ಜ್ಞಾನಭಕ್ತಿ ವೈರಾಗ್ಯ-ತಪಸ್ಸು, ಶಿಷ್ಯಪ್ರೇಮ, ಸಾಮ್ರಾಜ್ಯರಕ್ಷಣೆ, ಮಹಾಮಹಿಮೆ, ಗ್ರಂಥರಚನೆ ಪರವಾದಿ ದಿಗ್ವಿಜಯ. ದ್ವೈತಸಿದ್ಧಾಂತ ಸ್ಥಾಪನೆ-ವಿದ್ವಜ್ಜನ-ಆಶ್ರಿತ ಜನರಲ್ಲಿನ ವಾತ್ಸಲ್ಯ-ಲೋಕಕಲ್ಯಾಣ ದೀಕ್ಷೆ ಮುಂತಾದ ಗುರುಗಳ ಸದ್ಗುಣವನ್ನು ವರ್ಣಿಸಿ ತಮ್ಮ ಕೋರಿಕೆಯಂತೆ ಸಾಮ್ರಾಟರನ್ನು ಕರೆದುಕೊಂಡು ತಮ್ಮ ಪರ್ಯಾಯಕ್ಕೆ ಬಂದುದಕ್ಕಾಗಿ ತಮ್ಮ ಕೃತಜ್ಞತಾಪೂರ್ವಕ ನಮನಗಳನ್ನರ್ಪಿಸಿ ಭಾಷಣಮಾಡಿದ ತರುವಾಯ ಶ್ರೀವ್ಯಾಸಯತಿಗಳು ಸೂಕ್ತರೀತಿಯಿಂದಉಪದೇಶಭಾಷಣಮಾಡಿದರು. ಸಾಮ್ರಾಟ್ ಅಚ್ಯುತದೇವರಾಯ ಗುರುಪಾದರಿಗೆ ಮತ್ತು ತಮಗೆ ನೀಡಿದ ಭವ್ಯ ಸ್ವಾಗತಕ್ಕಾಗಿ ಶ್ರೀ ಪರ್ಯಾಯಪೀಠಾಧೀಶರಿಗೆ ತನ್ನ ಕೃತಜ್ಞತಾಪೂರ್ವಕ ವಂದನೆಗಳನ್ನು ಸಲ್ಲಿಸಿದ ಮೇಲೆ ಕಾರ್ಯಕ್ರಮ ಮುಕ್ತಾಯವಾಯಿತು.

ಸ್ವಾಗತ ಸಮಾರಂಭವು ಮುಗಿದಮೇಲೆ ಶ್ರೀ ವಾದಿರಾಜತೀರ್ಥರು ಗುರುಗಳು ಹಾಗೂ ಸಾಮ್ರಾಟರೊಡನೆ ಕೆಲಕಾಲ ಏಕಾಂತವಾಗಿ ಮಾತನಾಡಿ ಆ ತರುವಾಯ ಅಚ್ಯುತದೇವರಾಯರಿಗೆ ಏರ್ಪಡಿಸಿದ್ದ ಭವ್ಯಮಂದಿರಕ್ಕೆ ಅವರನ್ನು ಗೌರವದಿಂದ ಕರೆದೊಯ್ದು ಬಿಡಾರಮಾಡಿಸುವಂತೆ ಅಧಿಕಾರಿಗಳಿಗೆ ಆಜ್ಞಾಪಿಸಿ, ತರುವಾಯ ಶ್ರೀ ವ್ಯಾಸರಾಜ ಗುರುಗಳನ್ನು ತಮ್ಮ ಮಠದ ಮುಖ್ಯಾಧಿಕಾರಿಗಳು ಹಾಗೂ ಪಂಡಿತರುಗಳ

*. ಕವಿಗಳಿಗೆ ಎಂದರೆ ಇಲ್ಲಿ ಅಪರೋಕ್ಷಜ್ಞಾನಿಗಳಿಗೆ ಎಂದು ತಿಳಿಯಬೇಕು.

ಜೊತೆಗೆ ತಾವು ವಿಶೇಷ ಶ್ರದ್ಧೆಯಿಂದ ಅಲಂಕರಿಸಿದ್ದ ಶ್ರೀ ರಾಜೇಂದ್ರತೀರ್ಥ ಶ್ರೀಪಾದಂಗಳವರ ಮಠಕ್ಕೆ ಕಳುಹಿಸಿಕೊಡಲು ವ್ಯವಸ್ಥೆಮಾಡಿ ಗುರುಗಳನ್ನು ಕೃಷ್ಣ ದೇವಾಲಯದ ಮಹಾದ್ವಾರದವರೆಗೆಬಂದು ಬೀಳ್ಕೊಟ್ಟರು. ವ್ಯಾಸರಾಜರು ತಮ್ಮ ಮಠಕ್ಕೆ ಬಂದು ವಿಶ್ರಾಂತಿ ಪಡೆದರು.

.... .... .... ....

ಮರುದಿನದಿಂದ ವ್ಯಾಸರಾಜರು ಮತ್ತು ಅವರ ಸಲಹೆಯಂತೆ ಅಚ್ಯುತದೇವ ರಾಯರು ಶ್ರೀಕೃಷ್ಣ ಪರ್ಯಾಯೋತ್ಸವಾಂಗವಾಗಿ ಶ್ರೀಕೃಷ್ಣನಿಗೆ ಸುಮಾರು ಒಂದು ತಿಂಗಳವರೆಗೆ ವಿವಿಧ ಉತ್ಸವ ಸಮಾರಂಭಗಳನ್ನೇರ್ಪಡಿಸಿದ್ದಲ್ಲದೆ ಶ್ರೀಕೃಷ್ಣದೇವರಿಗೆ ಅಮೂಲ್ಯರತ್ನಾಭರಣಗಳು, ಧನ, ಕನಕ ವಸ್ತ್ರಾದಿಗಳು, ಪೀತಾಂಬರಗಳನ್ನು ಕಾಣಿಕೆಯಾಗಿ ಸಲ್ಲಿಸಿದರು. ಪರ್ಯಾಯ ಪೀಠಾಧೀಶರು ಮತ್ತಿತರ ಉಡುಪಿಯ ಪೀಠಾಧಿಪತಿಗಳಿಗೆ ವಿಶೇಷ ಪಾದಪೂಜೆ,ಭಿಕ್ಷಾದಿಗಳನ್ನೇರ್ಪಡಿಸಿ, ಶ್ರೀವ್ಯಾಸರಾಜರು ಮಠದ ಅಧಿಕಾರಿಗಳಿಂದಲೂ,ಸಾಮ್ರಾಟನು ಸ್ವತಃ ಪಾದಪೂಜೆಮಾಡಿ ಅನರ್ಘ್ಯ ಧನ ಕನಕವಸ್ತ್ರಾಭರಣಗಳನ್ನಿತ್ತು ಗೌರವಿಸಿದನು. ಅಷ್ಟಮಠದ ಯತಿಗಳು ಶ್ರೀಮದಾ ಚಾರ್ಯ ಮಹಾಸಂಸ್ಥಾನಾದಿಪತಿಗಳಾದ ವ್ಯಾಸರಾಜ ಗುರುಗಳಿಗೆ ತಮ್ಮ ಮಠೀಯ ಅಧಿಕಾರಿಗಳಿಂದ ಪಾದಪೂಜೆ ಮಾಡಿಸಿ,ಧನಕನಕ ವಸ್ತ್ರಾಭರಣಗಳನ್ನು ಕಾಣಿಕೆಯಾಗಿ ಸಲ್ಲಿಸಿ ಗೌರವಿಸಿದರು. ಮತ್ತು ಭಿಕ್ಷೆಗಳನ್ನೇರ್ಪಡಿಸಿದರು ಅಚ್ಯುತದೇವರಾಯರಿಗೆ ಪರಿವಾರದವರಿಗೆ ವಿಶೇಷ ಔತಣಗಳಾದವು.

ಪ್ರತಿದಿನ ವ್ಯಾಸರಾಜರು ಶ್ರೀಕೃಷ್ಣನ ಮುಂಭಾಗದ ಮಂಟಪದಲ್ಲಿ ಮಹಾ ಸಂಸ್ಥಾನ ಪೂಜೆಮಾಡುತ್ತಾ ಸ್ವತಃ ಪೂಜಿಸಿ, ನಿವೇದನ ಸಮರ್ಪಿಸಿ ಮಹಾ ಮಂಗಳಾರತಿ ವಿವಿಧ ರೀತಿಯಿಂದ ಸ್ತುತಿಸುತ್ತಾ ಆನಂದನಿರ್ಭರರಾಗುತ್ತಿದ್ದರು. ಪ್ರತಿನಿತ್ಯ ಸಹಸ್ರಾರುಜನ ಬ್ರಾಹ್ಮಣಸುವಾಸಿನಿಯರಿಗೆ ತೀರ್ಥಪ್ರಸಾದ ವಿನಿಯೋಗ ಭೂರಿಭೋಜನ ಸಕಲಯತಿಗಳೂ ಚೌಕಿಯಲ್ಲಿ ಕುಳಿತು ಭಿಕ್ಷಾಸ್ವೀಕಾರಾದಿಗಳೂ ಜರ ಗುತ್ತಿತ್ತು. ಆ ಉತ್ಸವಗಳು ಅಷ್ಟಮಠಗಳ ಯತಿಗಳೊಡನೆ ವ್ಯಾಸರಾಜರ ಆ ಸಮ್ಮಿಲನ, ವ್ಯಾಸರಾಜರ ಅಧ್ಯಕ್ಷತೆಯಲ್ಲಿ ಪ್ರತಿದಿನ ನೆರವೇರುತ್ತಿದ್ದ ವಿದ್ವತ್ಸಭೆ' ವಾಕ್ಯಾರ್ಥ, ವಿದ್ಯಾರ್ಥಿಗಳಪರೀಕ್ಷೆ,ಪುರಂದರದಾಸರ ನೇತೃತ್ವದಲ್ಲಿ ಜರಗುತ್ತಿದ್ದ ಭಜನೆ,ನರ್ತನ,ಶ್ರೀವ್ಯಾಸ-ಹರಿದಾಸರ ವಾಙ್ಮಯಗಳ ವಿವೇಚನಾತ್ಮಕ ಉಪನ್ಯಾಸ ಗಳು, ಎಲ್ಲ ಶ್ರೀಗಳವರ ಉಪದೇಶ ಭಾಷಣಗಳು,ಶ್ರೀಕೃಷ್ಣನ ವಿವಿಧ ಉತ್ಸವ ಗಳು,ಸಾಂಸ್ಕೃತಿಕ ಕಾರ್ಯಕ್ರಮಗಳ ವೈಭವ, ಸಂಭ್ರಮಗಳು ಅವರ್ಣನೀಯ. ಆ ಮಂಗಳಕರ ದೃಶ್ಯವನ್ನು ಕಂಡಾನಂದಿಸಿದ ಅಂದಿನ ಜನರೇ ಪುಣ್ಯವಂತರು.

ವಿದ್ವತ್ಸಭೆಯು ಕೊನೆಯ ದಿವಸ ವ್ಯಾಸರಾಜರು ಅಧ್ಯಕ್ಷಪೀಠದಲ್ಲಿದ್ದು ವಿದ್ವ ತ್ಪೂರ್ಣವಾದ ಉಪದೇಶ ಭಾಷಣಮಾಡಿ ವಾದಿರಾಜ ಸ್ವಾಮಿಗಳವರ ಜ್ಞಾನ-ಭಕ್ತಿ

ವೈರಾಗ್ಯ ಗುರುಭಕ್ತಿ ಮುಂತಾದ ಅಸಾಧಾರಣಗುಣಗಳನ್ನು ಹೊಗಳಿ, ಅವರಿಂದ ಮುಂದೆ ಪರವಾದಿನಿರಾಕರಣಪೂರ್ವಕ ದ್ವೈತಸಿದ್ಧಾಂತಸ್ಥಾಪನೆ,ಗ್ರಂಥರಚನೆಗಳಿಂದ ಅಪಂಡಿತಪಾಮರರ ಉದ್ಧಾರವಾಗುವುದು ಮುಂತಾಗಿ ಹೇಳಿ ಸರ್ವರನ್ನೂ ಆನಂದ ಗೊಳಿಸಿದರು. ಸಮಾರೋಪಭಾಷಣಮಾಡಿದ ವಾದಿರಾಜರ ಒಂದೊಂದು ಮಾತೂ ಅವರಿಗೆ ಹರಿವಾಯುಗಳಲ್ಲಿ ಮತ್ತು ವಿದ್ಯಾಗುರುಗಳಾದ ಪೂಜ್ಯ ವ್ಯಾಸರಾಜರಲ್ಲಿದ್ದ ಭಕ್ತಿಗೌರವಗಳನ್ನು ಎತ್ತಿತೋರುತ್ತಿದ್ದವು. ವಾದಿರಾಜ ಸ್ವಾಮಿಗಳು ಶ್ರೀಮದಾಚಾರ್ಯರ ಮಹಾಸಂಸ್ಥಾನಕ್ಕೆ ಮಹಾಸಂಸ್ಥಾನಾಧಿಪತಿಗಳಾದ ಯತಿಗಳಿಗೆ ಪರಂಪರೆಯಿಂದ ಉಡುಪಿಯ ಶ್ರೀಕೃಷ್ಣಮಠದಲ್ಲಿ ದೊರಕುತ್ತಿದ್ದ ವಿಶೇಷ ಗೌರವವನ್ನೆಲ್ಲಾ ಸಲ್ಲಿಸಿದ್ದಲ್ಲದೆ ತಮ್ಮ ಗುರುಗಳಿಗೆ ಭಕ್ತಿಯಿಂದ ಕೆಲ ವೈಶಿಷ್ಟ್ಯಪೂರ್ಣಗೌರವ ಗಳನ್ನು ಮಾಡಿ ಸರ್ವರನ್ನೂ ಸಂತೋಷಪಡಿಸಿದರು.

ವ್ಯಾಸರಾಜರು ಅಚ್ಯುತದೇವರಾಯನಿಗೆ ಹೇಳಿ ಶ್ರೀಕೃಷ್ಣನಿಗೂ ಪರ್ಯಾಯ ಪೀಠದ ಶ್ರೀಸೋದೆಮಠಕ್ಕೂ, ಅನೇಕ ಗ್ರಾಮ, ಭೂಸ್ವಾಸ್ತಿ, ತಸ್ತೀಕು ಮುಂತಾಗಿ ಪತ್ತಿಬಿಡಿಸಿದ್ದಲ್ಲದೆ ಶ್ರೀಕೃಷ್ಣಮಠದ ಅಭಿವೃದ್ಧಿಗಾಗಿ, ಅನ್ನದಾನಕ್ಕಾಗಿ,ವಿಶೇಷೋತ್ಸವಗಳಿಗಾಗಿ ಹೇರಳವಾಗಿ ಧನಕನಕಾದಿಗಳನ್ನು ಕೊಡಿಸಿದರು. ಶ್ರೀಯುವರ ಮತ್ತು ಸಾಮ್ರಾಟನ ಶ್ರೀಕೃಷ್ಣಭಕ್ತಿ-ಶ್ರೀಮದಾಚಾರ್ಯರ ಜನ್ಮಸ್ಥಳ-ಕಾರ್ಯರಂಗದಲ್ಲಿನ ಶ್ರದ್ಧೆ ಈ ವಿಚಾರಾದಿಗಳಿಂದ ಶ್ರೀವಾದಿರಾಜಗುರುಚರಣರು, ಇತರ ಉಡುಪಿ ಮಠಾಧೀಶರು, ಧಾರ್ಮಿಕರು ಪರಮಾನಂದಭರಿತರಾಗಿ ಅವರನ್ನು ಕೊಂಡಾಡಿದರು.

ಸುಮಾರು ಒಂದು ತಿಂಗಳ ಕಾಲ ಉಡುಪಿಯಲ್ಲಿ ವಾಸಮಾಡಿದ್ದ ಶ್ರೀವ್ಯಾಸ ರಾಜರು ಶ್ರೀಕೃಷ್ಣದರ್ಶನ-ಸೇವನಾದಿಗಳಿಂದ ಕೃತಾರ್ಥರಾಗಿ ಆನಂದದಿಂದ ಮಹಾ ಸಂಸ್ಥಾನದೊಡನೆ ಅಚ್ಯುತದೇವರಾಜ-ಪರಿವಾರದಿಂದೊಡಗೂಡಿ ವಿಜಯನಗರಕ್ಕೆ ಪ್ರಯಾಣ ಬೆಳೆಸಿದರು.

## ೫೩. ಮಹಾಕವಿ ಸೋಮನಾಥನಲ್ಲಿ ಅನುಗ್ರಹ

ಸೋಮನಾಥನು ಹದಿನಾರನೆಯ ಶತಮಾನದ ಪೂರ್ವಾರ್ಧದಲ್ಲಿದ್ದ ಮಹಾಕವಿ ಅವನು ಸ್ಮಾರ್ತಬ್ರಾಹ್ಮಣನಾಗಿದ್ದರೂ-ಅದ್ವೈತಮತಾನುಯಾಯಿಯಾಗಿದ್ದರೂ, ಶ್ರೀಹರಿಯಲ್ಲಿ ಅಪಾರ ಭಕ್ತಿಯುಳ್ಳವನಾಗಿ,ಮತೀಯದುರಭಿಮಾನವಿಲ್ಲದೆಭಾರತದ ಮತತ್ರಯಾಚಾರ್ಯರು,ಆ ಪೀಠಪರಂಪರೆಯನ್ನೂ,ಅನುಯಾಯಿಗಳನ್ನೂ ಗೌರವ ದಿಂದ ಕಾಣುತ್ತಿದ್ದನು. ಅವನು ಗುಣಗ್ರಾಹಿಯೂ, ಉದಾರಚರಿತನೂ, ಸರ್ವ ಪಂಡಿತರಲ್ಲೂ ಪ್ರೀತಿಯುಳ್ಳವನೂ, ಜ್ಞಾನಿಗಳಲ್ಲಿ ಅಪಾರ ಭಕ್ತಿಯುಳ್ಳವನೂ ಆಗಿದ್ದನು. ಸೋಮನಾಥನ ಮುತ್ತಾತನ ತಂದೆ ಯಜ್ವರ ಭಟ್ಟಭಾಸ್ಕರ. ಅವನ ಮಗ (ಮುತ್ತಾತ) ದೇವರಾಜ ಸೋಮವೀಥಿ (ಸೋಮನಾಥ)ಅವನ ಮಗ ಭಟ್ಟಗಯಾ ಮುಕ್ತಿಭಾಸ್ಕರ. ಇವನ ಪೌತ್ರನೇ ಮಹಾಕವಿ ಸೋಮನಾಥ. ಸೋಮನಾಥನ ಮುತ್ತಾತನ ತಂದೆಯಾದ ಯಜ್ವರ ಭಟ್ಟಭಾಸ್ಕರನು ಮಹಾಪಂಡಿತ. ಅನೇಕ ಶಿಷ್ಯ

ರನ್ನು ತಯಾರುಮಾಡಿದ ಧೀಮಂತ. ಅವನ ಪೌತ್ರನಾದ ದೇವರಾಜಸೋಮಯಾಜಿ ಅಥವಾ (ಮೊದಲನೆಯ) ಸೋಮನಾಥನೂ ಶ್ರೇಷ್ಠಪಂಡಿತ, ಕವಿ. ಅವನ ಮಗ ಭಟ್ಟಗಯಾ ಮುಕ್ತಿಭಾಸ್ಕರನು ಅನೇಕ ಶಾಸ್ತ್ರಗಳಲ್ಲಿ ಪಾರಂಗತ, ಅನೇಕ ಗ್ರಂಥ ಗಳನ್ನು ರಚಿಸಿ ಖ್ಯಾತನಾಗಿದ್ದನು. ಅವನು ತುಂಡೀರಮಂಡಲದ ಕಂಚಿಗೆ ಸಮೀಪದ ಗೋವಿಂದರಾಜಪುರಾಗ್ರಹಾರದಲ್ಲಿ ವಾಸಮಾಡುತ್ತಿದ್ದನು.

ಅವನು ಉತ್ತರಭಾರತದಲ್ಲಿ ಎಲ್ಲ ಕ್ಷೇತ್ರತೀರ್ಥಗಳ ಯಾತ್ರೆಯಾಗಿ ಹೊರಟು ಅನೇಕ ಕಡೆ ರಾಜರುಗಳಿಂದ ಮಾನಿತನಾಗಿದ್ದುದಲ್ಲದೆ, ಗಯಾಕ್ಷೇತ್ರದಲ್ಲಿ ಬಹುಕಾಲ ವಾಸಮಾಡಿ ಗೌಡರಾಜನಿಂದ ವಿಶೇಷವಾಗಿ ಗೌರವಿತನಾಗಿದ್ದನು. ಅವನ ಹೆಸರು ಮತ್ತು ತಾತನ ಹೆಸರು ಒಂದೇ ಆಗಿದ್ದುದರಿಂದಲೂ ಜನರು ಅವನನ್ನು ಭಟ್ಟ ಗಯಾ ಮುಕ್ತಿಭಾಸ್ಕರನೆಂದು ಕರೆಯುತ್ತಿದ್ದರು. ಅವನು ಕರ್ನಾಟಕಕ್ಕೆ ಬಂದಾಗ ಕನ್ನಡ ಸಾಮ್ರಾಟನಾಗಿದ್ದ ಬುಕ್ಕಮಹಾರಾಯನು ವಿಜಯನಗರದಲ್ಲಿ ಅವನನ್ನು ಗೌರವಿಸಿ ಗ್ರಾಮಭೂಮಿ, ಧನ-ಕನಕಾದಿಗಳಿಂದ ಸನ್ಮಾನಿಸಿದ್ದನು. ಮುಂದೆ ಮುಮ್ಮಡಿ ಹರಿಹರನ ಕಾಲದಲ್ಲಿ ಮತ್ತೆ ವಿಜಯನಗರಕ್ಕೆ ಬಂದಾಗ ಮುಮ್ಮಡಿ ಹರಿಹರನು ಭಟ್ಟಗಯಾ ಮುಕ್ತಿ ಭಾಸ್ಕರನ ಪಾಂಡಿತ್ಯಾತಿಶಯದಿಂದ ಪ್ರಭಾವಿತ ನಾಗಿ ಆತನಿಗೆ ಪಲ್ಲಕ್ಕಿ, ಛತ್ರಿ-ಚಾಮರಮುಂತಾದ ಗೌರವಗಳನರ್ಪಿಸಿ ಸನ್ಮಾನಿಸಿದನು.

ಇಂತು ಪ್ರಖ್ಯಾತನಾದ ಭಟ್ಟಗಯಾ ಮುಕ್ತಿ ಭಾಸ್ಕರನ ಪೌತ್ರನೇ "ಶ್ರೀವ್ಯಾಸ ಯೋಗಿಚರಿತಮ್" ಎಂಬ ಅತ್ಯಂತ ಶ್ರೇಷ್ಠ ಚಂಪೂಕಾವ್ಯವನ್ನು ರಚಿಸಿದ ಭಾಗ್ಯಶಾಲಿ ಯಾದ ಮಹಾಕವಿ ಸೋಮನಾಥನು, ಈ ಸೋಮನಾಥನ ಸೋದರಮಾವನೇ ತುಂಡೀರಮಂಡಲದಲ್ಲಿದ್ದ ಚಂಪೂಭಾರತ ಕಾವ್ಯವನ್ನು ರಚಿಸಿದ ಅನಂತಭಟ್ಟ.

ಮಾಘಕವಿಯ ಶಿಶುಪಾಲವಧಕಾವ್ಯಕ್ಕೆ ವ್ಯಾಖ್ಯಾನವನ್ನು ಬರೆದ ವಲ್ಲಭ ದೇವನು ಮಹಾಕವಿ ಸೋಮನಾಥನ ನಂತರ ಬಂದವನು. ಅಂದರೆ 1540ರ ತರು ವಾಯದಲ್ಲಿ ಬಂದವನು. ಆದ್ದರಿಂದಲೇ ಅವನು ಸೋಮನಾಥನಕಿಂತ ಅರ್ವಾಚೀ ನನು. ಅಂತೆಯೇ ವಲ್ಲಭದೇವನನ್ನು ತನ್ನ ವ್ಯಾಖ್ಯಾನದಲ್ಲಿ ಕವಿಗಳನ್ನು ಗೌರವಿಸು ವಾಗ "ಸುಕವೀನಾಂ ಶ್ರೇಷ್ಠವಿದುಷಾಂ ವರರುಚಿ-ಸುಬಂಧು-ಸೋಮನಾಥ-ಭವಭೂತಿ ಕ್ರೀಡಾನಂದ-ಕಾಳಿದಾಸ- ಬಿಲ್ಹಣ-ಭಾರವಿ-ಬಾಣ-ಮಯೂರಾದೀನಾಂ ಕೀರ್ತಿಃ ಖ್ಯಾತಿಯಶಸ್ತ್ರತಯಾ ದುರಾಶಾದುರಭಿಲಾಷಸ್ತಯಾ" ಎಂದು ಖ್ಯಾತಕವಿಗಳಗಳ ಜೊತೆಗೆ ಮಹಾಕವಿಸೋಮನಾಥನನ್ನು ಹೊಗಳಿ ಇವರಂತೆ ಕೀರ್ತಿಗಳಿಸಲು ಮಾಘ ಕವಿಯು "ಶಿಶುಪಾಲವಧಕಾವ್ಯ"ವನ್ನು ರಚಿಸಿದನೆಂದು ಹೇಳಿದ್ದಾನೆ. ಇದೂಸಹ ಮಾಘ ಕವಿಯೂ, ಅದರ ವ್ಯಾಖ್ಯಾನಕಾರನಾದ ವಲ್ಲಭದೇವನೂ ಸೋಮನಾಥನ

ಕಿಂತ ಅರ್ವಾಚೀನರೆಂದು ಹೇಳಲು ಒಂದು ಮಹತ್ವಪೂರ್ಣ ಪ್ರಮಾಣವಾಗಿದೆ.[1]

... .... .... .... ....

ವ್ಯಾಸರಾಜರು ಉಡುಪಿಯಿಂದ ಹಿಂದಿರುಗಿದ ಕೆಲಕಾಲವಾದ ಮೇಲೆ ವ್ಯಾಸರಾಜರ ವಿದ್ಯಾಶಿಷ್ಯರಲ್ಲೊಬ್ಬರಾದ ಮತ್ತು ಶ್ರೀಅಕ್ಷೋಭ್ಯತೀರ್ಥರು ಸ್ಥಾಪಿಸಿದ ಸಂಸ್ಥಾನದ ಪೀಠಾಧಿಪರೂ ಆದ ಶ್ರೀನಾರಾಯಣಯತಿಗಳು ತಮ್ಮ ಶಿಷ್ಯನಾದ ತುಂಡೀರಮಂಡಲದ ಗೋವಿಂದತೀರ್ಥ ಪುರನಿವಾಸಿಯಾದ ಮಹಾಕವಿ ಸೋಮನಾಥನಿಗೆ ಶ್ರೀಮುಖಬರೆದು ವಿಜಯನಗರಕ್ಕೆ ಬಂದು "ರಾಜಗುರು". ವ್ಯಾಸತೀರ್ಥ ಗುರುಪಾದರ ದರ್ಶನಮಾಡಿ ಅನುಗೃಹೀತನಾಗಬೇಕೆಂಬ ಆದೇಶವನ್ನು ಓರ್ವಶಿಷ್ಯನೊಡನೆ ಮಹಾಕವಿಗೆ ಕಳಿಸಿದ್ದರು.

ಸೋಮನಾಥನು ಆಗತಾನೆ ತೀರ್ಥಯಾತ್ರೆ ಮುಗಿಸಿಕೊಂಡು ಗೋವಿಂದತೀರ್ಥಪುರಾಗ್ರಹಾರಕ್ಕೆ ಬಂದಿದ್ದನು. ಅವನಿಗೆ ಅನೇಕಜನ ಪಂಡಿತರಾದ ಶಿಷ್ಯರು, ಮಿತ್ರರೂ ಇದ್ದರು. ಅವರೊಡನೆ ಯಾತ್ರಾವಿಚಾರವನ್ನು ವಿವರಿಸುತ್ತಿರುವಾಗ ಅವನಿಗೆ ಶ್ರೀನಾರಾಯಣಯತಿಗಳ ನಿರೂಪಬಂದಿತು. ಅದನ್ನು ಓದಿ ಆನಂದಭರಿತನಾಗಿ ತಾನು ಗುರುಗಳಂತೆ ಭಾವಿಸಿದ್ದ ಶ್ರೀನಾರಾಯಣಯತಿಗಳ ಪತ್ರವನ್ನು ಪಂಡಿತರ ಮುಂದೆ ಓದಿ "ಅಹೋ ವಾಚಾಮಗೋಚರ ಶಿಷ್ಯಪರಮಾಣೌ ಮಯಿ ನಾರಾಯಣ ತಪೋನಿಧೇರ್ಮಹಾನಯಂ ವಾತ್ಸಲ್ಯಭಾರಃ" (—ಶ್ರೀವ್ಯಾಸಯೋಗಿಚರಿತಮ್-ಪುಟ-79). ಆಹಾ. ಅನೇಕಶಿಷ್ಯರಲ್ಲಿ ಸಾಮಾನ್ಯ ಸಣ್ಣ ಶಿಷ್ಯನಾದ ನನ್ನಲ್ಲಿ ತಪೋನಿಧಿಗಳಾದ ಶ್ರೀನಾರಾಯಣಯತಿಗಳಿಗಿರುವ ಶಿಷ್ಯವಾತ್ಸಲ್ಯವನ್ನು ವರ್ಣಿಸಲು ಪದಗಳೇ ಕಾಣುತ್ತಿಲ್ಲವಲ್ಲಾ!" ಎಂದುದ್ಗರಿಸಿ ತನ್ನ ಶಿಷ್ಯಮಂಡಲಿ- ಕವಿಜನರೊಡನೆ ಹೊರಟ

---

1. ಮಾಘಕವಿಯು ಸೋಮನಾಥನಕಿಂತ ಅರ್ವಾಚೀನನೆನಲು ಇನ್ನೊಂದು ಪ್ರಮಾಣವನ್ನೂ ಹೇಳಬಹುದು. ಮಾಘಕವಿ ರಚಿಸಿದ ಕಾವ್ಯವನ್ನೂ ಹೊಗಳಿ ಇದರಕ್ಕಿಂತ ಉತ್ತಮಕಾವ್ಯ ಬರೆದಿರುವವರು ಯಾರೂ ಇಲ್ಲ ಎಂದು ಕೆಲವರು ಸವಾಲುಹಾಕಿದಾಗ ಒಂದೇ ತಿಂಗಳಿನಲ್ಲಿ ಶ್ರೀವಾದಿರಾಜತೀರ್ಥರು "ಶ್ರೀರುಕ್ಮಿಣೀಶವಿಜಯ" ಮಹಾಕಾವ್ಯವನ್ನು ರಚಿಸಿ ಸವಾಲೆಸೆದವರಿಗೆ ಕೊಟ್ಟಾಗ ಅವರು ಮಾಘನ ಕಾವ್ಯಕ್ಕಿಂತ ಶ್ರೀವಾದಿರಾಜರಕಾವ್ಯವು ಶ್ರೇಷ್ಠವೆಂದು ಸ್ತುತಿಸಿದರೆಂಬ ಪರಂಪರಾಗತಪ್ರಮಾಣವಿದೆ. ಶ್ರೀವಾದಿರಾಜರು 16ನೇ ಶತಮಾನದವರು. ಅವರು ಉತ್ತರಾರ್ಧದಲ್ಲಿ ಜಗನ್ಮಾನ್ಯಗ್ರಂಥಗಳನ್ನು ರಚಿಸಿಮಾನ್ಯರಾದರು. ಅಂದ ಮೇಲೆ ಮಾಘ-ವಲ್ಲಭದೇವ-ಶ್ರೀವಾದಿರಾಜರು ಸಮಕಾಲೀನರೆಂದು ಸಿದ್ಧವಾಗುವುದು (ಶ್ರೀವಾದಿರಾಜರು ಸೋಮನಾಥನು ವ್ಯಾಸಯೋಗಿಚರಿತೆ. ರಚಿಸಿದಾಗ (1535) ಮೂವತ್ತೈದು ವಯಸ್ಸಿನವರಾಗಿದ್ದರು.

ವಿಜಯನಗರಕ್ಕೆ ಕ್ರಿ. ಶ. 1535 ಸುಮಾರಿಗೆ ಬಂದನು.[1] ಸೋಮನಾಥನು ಮೊದಲು ಶ್ರೀನಾರಾಯಣಯತಿಗಳ ದರ್ಶನಪಡೆದು ಕವಿಮಿತ್ರರು, ಶಿಷ್ಯರುಗಳೊಡನೆ ನಾರಾಯಣಯತಿಗಳಿಗೆ ಭಕ್ತಿಪೂರ್ವಕವಾಗಿ ನಮಸ್ಕರಿಸಿ ಅವರನ್ನು ಮುಂದು ಮಾಡಿಕೊಂಡು ಶ್ರೀವ್ಯಾಸಯೋಗೀಂದ್ರರ "ವಿಶ್ವಪಾವನಮಠ"ದ ಮಹಾದ್ವಾರದ ಬಳಿಗೆ ಬಂದನು. ಮೊದಲು ನಾರಾಯಣಯತಿಗಳು ಶ್ರೀವ್ಯಾಸತೀರ್ಥರಲ್ಲಿಗೆ ಬಂದು ಸೋಮನಾಥ ಕವಿಯು ಗುರುಗಳ ದರ್ಶನಾನುಗ್ರಹಾಕಾಂಕ್ಷಿಯಾಗಿ ಬಂದಿರುವುದನ್ನು ವಿಜ್ಞಾಪಿಸಿ ಗುರುಗಳ ಅಪ್ಪಣೆಯಂತೆ ಸೋಮನಾಥನನ್ನು ಆದರದಿಂದ ಕರೆದು ತಂದರು.

ಆಗ ವ್ಯಾಸರಾಜರು ಭದ್ರಾಸನದಲ್ಲಿ ಮಂಡಿಸಿದ್ದರು. ಸಕಲಶಾಸ್ತ್ರಪಾರಂಗತರಾದ ಪಂಡಿತಮಂಡಲಿ, ಕವಿ-ಗಾಯಕ- ಕಲೆಗಾರರು, ಧರ್ಮಾಭಿಮಾನಿ ರಾಜಪುರುಷರು ಪರದೇಶ, ದ್ವೀಪಾಂತರವಾಸಿ ರಾಜರ ಪ್ರತಿನಿಧಿಗಳು, ಅನೇಕ ಸನ್ಯಾಸಿ ಶಿಷ್ಯರುಗಳು- ವಿದ್ಯಾರ್ಥಿಗಳೇ ಮೊದಲಾಗಿ ಸಹಸ್ರಾರು ಜನರಿಂದ ತುಂಬಿತುಳುಕುತ್ತಿದ್ದ ಆ ಸರಸ್ವತೀ ಪೀಠದಲ್ಲಿ ಸಕಲರಿಂದ ಓಲೈಸಿಕೊಳ್ಳುತ್ತಾ ಅನಿತರಸಾಧಾರಣ ತೇಜಸ್ಸು, ಗಾಂಭೀರ್ಯಗಳಿಂದ ಕಾಷಾಯಾಂಬರಧಾರಿಗಳಾಗಿ ಸುವರ್ಣ ಸುಲೋಚನಧಾರಿಗಳಾಗಿ ಮಂದಸ್ಮಿತರಾಗಿ ತಮ್ಮ ಕೃಪಾದೃಷ್ಟಿಪೀಯೂಷವರ್ಷಣದಿಂದ ಸರ್ವರನ್ನು ಅನುಗ್ರಹಿಸುತ್ತಾ ಉಪದೇಶಮಗ್ನರಾಗಿರುವ ಯತಿಸಾರ್ವಭೌಮರ ಪಾದದರ್ಶನಮಾತ್ರದಿಂದ ಸೋಮನಾಥನು ತನ್ನ ಜನ್ಮಸಫಲವಾಯಿತೆಂದು ಭಾವಿಸಿದನು.[2]

ಶ್ರೀವ್ಯಾಸರಾಜರನ್ನು ಪ್ರಥಮತಃ ತಾನು ಕಂಡ ದೃಶ್ಯವನ್ನು ಸೋಮನಾಥನು ತನ್ನ ಕಾವ್ಯದಲ್ಲಿ ಹೀಗೆ ವರ್ಣಿಸಿದ್ದಾನೆ-"ಅಗಣೇಯಾನುಭಾವೈರ್ಯೋಗಿಭಿಃ ಅಂತೇವಸದ್ಭಿಃ ಸನಕಾದಿಭಿಸ್ಸರಸಿಜಾಸನಸ್ಯೇವಸಂಸೇವ್ಯಮಾನಸ್ಯ"-ಎಣಿಸಲಳವಲ್ಲದ ಪರಮಹಂಸರಾದ ಶಿಷ್ಯರು. ಭೂದೇವತೆಗಳಾದ ವಿದ್ವಜ್ಜನರಿಂದ ಸಂಸೇವಿತರಾಗಿರುವ ವ್ಯಾಸಯೋಗೀಂದ್ರರು ಸನಕಾದಿಗಳು—ದೇವತೆಗಳಿಂದ ಸೇವ್ಯಮಾನರಾದ ಕಮಲಾಸನರಾದ ಬ್ರಹ್ಮದೇವರಂತೆ ಕಂಗೊಳಿಸುತ್ತಿದ್ದರು !

ಅತಿ ಭಕ್ತಿಶ್ರದ್ಧೆಗಳಿಂದ ನಮಿಸಿ ನಿಂತ ಸೋಮನಾಥನನ್ನು ಕಂಡು ಆನಂದಿಸಿ ಶ್ರೀವ್ಯಾಸಯೋಗಿಗಳು "ವತ್ಸ ! ಸೋಮನಾಥಕವೇ ! ಕಾರುಣ್ಯೇನ ಕಮಲಾ

---

1. ಶಿಷ್ಯೇಣಾಥಗುರೋಶ್ಚಮಂತ್ರಮಹತಾ ದೇದೀಪ್ಯಮಾನಸ್ಸದಾ ।
ತೇನಾಶು ಪ್ರಸರದ್ಘನೀಘಣತಿಃ ಶ್ರೀಸೋಮನಾಥಃ ಕವಿಃ ॥
ಕಾಲೇಕಂಧಲದೀಪ್ರಸಾಲಕಲಿಕಾಜಲೇ ಶುಭಂಯಸೌ ದಿನೇ ।
ವೀಥೀವೇಲ್ಲಿತ ತುಂಗಕೇತನಲತಾಂ ವಿದ್ಯಾಪುರೀಂ ಪ್ರಾವಿಶತ್ ॥
—ಶ್ರಿ, ವ್ಯಾ. ಯೋ. ಚ.

2. ಪ್ರಥಮಂ ವಿಲೋಕ್ಯ ಚರಣೌ ವ್ಯಾಸಸ್ಯ ಯೋಗಿಶಿಶುಃ। ದೃಷ್ಟಿಃ ಸ್ವಾಂ ಸಫಲಾಂ ವ್ಯಧಕ್ತ ಯುಗಲೀಂ ಶ್ರೀಸೋಮನಾಥಃ ಕವಿಃ —ವ್ಯಾಸಯೋಗಿಚರಿತಮ್ ಪುಟ. 81.

ಸಹಾಯಸ್ಯ ವರ್ಧಸೇ ಕಿಮು ವ್ಯಾಹತೇನ ಮಂಗಲೇನ?"— ವತ್ಸ, ಸೋಮನಾಥ! ಕಮಲಾಸಹಾಯನಾದ ಶ್ರೀಮನ್ನಾರಾಯಣನ ಕಾರುಣ್ಯದಿಂದ ನೀನು ಸಂತತ ಮಂಗಳದಿಂದ ವರ್ಧಿಸುತ್ತಿರುವೆಯಾ?" ಎಂದು ಪ್ರಶ್ನಿಸಿದರು. ಆಗ ಸೋಮನಾಥನು "ಗುರುವರ್ಯ! ತಮ್ಮ ಕೃಪಾಕಟಾಕ್ಷವು ಈ ಪಾಮರ ಶಿಷ್ಯನ ಮೇಲಿರಲು ನನಗೆ ಸದಾ ಮಂಗಳವಲ್ಲದೆ ಬೇರೇನಿದೆ! ತಮ್ಮ ಆಶೀರ್ವಾದದಿಂದ ಕುಶಲದಿಂದಿದ್ದೇನೆ. ಮಹಾನುಭಾವರೇ, ಬಹುವರ್ಷಗಳ ನನ್ನ ಆಶಾವೃಕ್ಷವಿಂದು ಫಲಿಸಿತು. ಪೂರ್ವಾರ್ಜಿತ ಪುಣ್ಯವಿಶೇಷದಿಂದ ತಮ್ಮ ಪಾವನಚರಣಕಮಲ ದರ್ಶನದಿಂದ ಕೃತಾರ್ಥನಾದೆ" ಎಂದು ವಿಜ್ಞಾಪಿಸಿದನು.

ಆಗ ವ್ಯಾಸರಾಜರು "ಮಹಾಕವಿ! ನಿನಗೆ ಸ್ವಾಗತ. ಪ್ರಿಯಶಿಷ್ಯರಾದ ನಾರಾಯಣ ಯತಿಗಳಿಂದ ನಿನ್ನ ವಿದ್ಯಾವೈಭವಗಳನ್ನು ಕೇಳಿ ಹರ್ಷಿಸಿದ್ದೆವು. ನಿನ್ನ ಆಗಮನದಿಂದ ನಮಗೆ ಪ್ರಮೋದವಾಗಿದೆ. ನೀನು ಕೆಲಕಾಲ ನಮ್ಮ ಮಠದಲ್ಲಿದ್ದು ನಿನ್ನ ವಿದ್ಯೆ, ಕಾವ್ಯರಚನಾ ಚಾತುರ್ಯಾದಿಗಳಿಂದ ನಮ್ಮನ್ನು ಸಂತೋಷಗೊಳಿಸು" ಎಂದಾಜ್ಞಾಪಿಸಿ ಸೋಮನಾಥ ಹಾಗೂ ಅವನ ಶಿಷ್ಯರು, ಮಿತ್ರರುಗಳಿಗೆ ಸಕಲವಿಧ ಸೌಕರ್ಯಗಳನ್ನೇರ್ಪಡಿಸಿಕೊಡಲು ಶ್ರೀಮಠದ ಅಧಿಕಾರಿಗಳಿಗೆ ಆದೇಶ ನೀಡಿ ಮಹಾಸಂಸ್ಥಾನ ಪೂಜೆಗಾಗಿ ಭದ್ರಾಸನದಿಂದೆದ್ದು ಹೊರಟರು,

o o o o o

ಸೋಮನಾಥ ಕವಿಯು ಪ್ರತಿದಿನ ವಿಜಯನಗರದ ಸಂಸ್ಕೃತ ವಿಶ್ವವಿದ್ಯಾನಿಲಯದಲ್ಲಿ ಸಹಸ್ರಾರು ಜನ ವಿದ್ವಜ್ಜನ–ಕವಿ ಸಾಹಿತಿಗಳಿಂದ ಕೂಡಿದ್ದ ಮಹಾಸಭೆಯಲ್ಲಿ ತನ್ನ ಸಕಲಶಾಸ್ತ್ರ ಪ್ರಾವೀಣ್ಯವನ್ನೂ, ತಾನು ರಚಿಸಿದ ವಿವಿಧ ಕಾವ್ಯ, ನಾಟಕಾಲಂಕಾರಾದಿ ಗ್ರಂಥಗಳನ್ನು ಓದಿ, ಆಶು ಕವಿತೆಗಳಿಂದಲೂ ವ್ಯಾಸರಾಜರನ್ನು ಪರಮಾನಂದಗೊಳಿಸಿ ಅವರಿಂದ ವಿವಿಧ ಬಹುಮಾನಗಳನ್ನು ಪಡೆಯುತ್ತಾ ಸಕಲ ಪಂಡಿತರ ಗೌರವಕ್ಕೆ ಪಾತ್ರನಾಗುತ್ತಿದ್ದನು.

ಆಗ ಸೋಮನಾಥನಿಗೆ ವ್ಯಾಸಯೋಗೀಂದ್ರರ ಬಗ್ಗೆ ಒಂದು ಶ್ರೇಷ್ಠ ಕೃತಿಯನ್ನು ರಚಿಸುವ ಹಂಬಲವುಂಟಾಯಿತು. ಅವನು ಅವರೆಗೆ ತಾನು ಅನೇಕ ವಿದ್ವಜ್ಜನ ಧಾರ್ಮಿಕರಿಂದ ಮತ್ತು ನಾರಾಯಣ ಯತಿಗಳಿಂದ ಕೇಳಿ ತಿಳಿದಿದ್ದ ವಿಚಾರಗಳನ್ನು ಸಂಗ್ರಹಿಸಿ, ತಾನು ವಿಜಯನಗರದಲ್ಲಿದ್ದಾಗ ಪ್ರತ್ಯಕ್ಷವಾಗಿ ಕಂಡು ಅಚ್ಚರಿಗೊಂಡಿದ್ದ ಅನೇಕ ವಿಚಾರಗಳನ್ನೆಲ್ಲಾ ಸೇರಿಸಿ, ಶ್ರೀವ್ಯಾಸರಾಜ ಗುರುವರ್ಯರ ರಮ್ಯಚರಿತ್ರೆ, ಮಹಿಮೆ, ಜ್ಞಾನ–ಭಕ್ತಿ–ವೈರಾಗ್ಯ, ತಪಸ್ಸು, ಪರವಾದಿ ದಿಗ್ವಿಜಯ, ವೈಭವ, ದ್ವೈತಸಿದ್ಧಾಂತ ಪ್ರತಿಷ್ಠಾಪನೆ, ಅಸಾಧಾರಣ ಗ್ರಂಥರಚನೆ, ತೀರ್ಥಕ್ಷೇತ್ರ, ಸಂಚಾರ, ಪಾಠಪ್ರವಚನ ಚಾತುರ್ಯ, ರಾಜಾಧಿರಾಜ ಮಾನ್ಯತೆ, ವಿಜಯನಗರದ ಆರುಜನ ಸಾಮ್ರಾಟರಿಗೆ ರಾಜಗುರುಗಳಾಗಿದ್ದು ಕನ್ನಡಸಾಮ್ರಾಜ್ಯ,

ಧರ್ಮ, ಸಂಸ್ಕೃತಿ, ಸಕಲ ಕಲೆಗಳು, ವಿದ್ವಜ್ಜನರ ಸಂರಕ್ಷಣೆ ಅಭಿವೃದ್ಧಿಗಳಿಗಾಗಿ ಸಂಸ್ಕೃತ ವಿಶ್ವವಿದ್ಯಾನಿಲಯವನ್ನು ಸ್ಥಾಪಿಸಿ ಹತ್ತಾರು ಸಹಸ್ರ ಜನ ವಿದ್ಯಾರ್ಥಿಗಳಿಗೆ ಸಮಸ್ತ ಅನುಕೂಲಗಳನ್ನೇರ್ಪಡಿಸಿಕೊಟ್ಟು ವಿವಿಧ ಶಾಸ್ತ್ರಾಧ್ಯಯನದ್ವಾರಾ ಜ್ಞಾನ ಪ್ರಸಾರವನ್ನು ಅಖಂಡವಾಗಿ ಮಾಡುತ್ತಿದ್ದ ಅವರ ಉದಾತ್ತ ಭಾವನೆ, ಅನುಗ್ರಹ, ವಿವಿಧ ಕಾರ್ಯ ಚಟುವಟಿಕೆಗಳು, ಶ್ರೀಗಳವರ ವಂಶ, ಬಾಲ್ಯ, ವಿದ್ಯಾಭ್ಯಾಸಾದಿ ಸಮಸ್ತ ವಿಷಯ ಪರಿಪ್ಲುತವಾದ ಶ್ರೀಯವರ ರಮ್ಯ ಉದಂತವನ್ನು ಚಂಪೂಕಾವ್ಯ ರೂಪವಾಗಿ ರಚಿಸಲಾಶಿಸಿ ಹಗಲಿರುಳು ಕುಳಿತು ಮೂರು ನಾಲ್ಕು ತಿಂಗಳುಗಳಲ್ಲೀ ರಚಿಸಿ, ತನ್ನ ಮೇರು ಕೃತಿಯಾದ "ಶ್ರೀವ್ಯಾಸಯೋಗಿ ಚರಿತಮ್" ಮಹಾಕಾವ್ಯ ವನ್ನು ತನಗೆ ಪೂಜ್ಯರಾದ ಶ್ರೀನಾರಾಯಣಯೋಗಿಗಳಿಗೆ ತೋರಿಸಿದನು. ಅದನ್ನು ಕಂಡು ಪರಮಾನಂದ ತುಂದಿಲರಾದ ಅವರು ಅದನ್ನು ವಿದ್ವತ್ಸಭೆಯಲ್ಲಿ ಓದಿ ಶ್ರೀ ಗುರುಪಾದರಿಗೆ ಸಮರ್ಪಿಸಬೇಕೆಂದು ಸಲಹೆ ನೀಡಿದರು. ಅವರಿಂದ ಮಹಾಕವಿಗೆ ಆನಂದವಾಯಿತು. ಈ ವಿಚಾರವು ನಾರಾಯಣಯತಿಗಳ ದ್ವಾರಾ ಅಚ್ಯುತದೇವ ರಾಯನಿಗೆ ತಿಳಿದು ಹರುಷದಿಂದ ಅವನು ರಾಜಗುರುಗಳ ಸಮಕ್ಷ ವಿದ್ವನ್ಮಂಡಿತವಾದ ರಾಜಸಭೆಯಲ್ಲಿ ಆ ಮಹಾ ಕಾವ್ಯವನ್ನು ಓದಬೇಕೆಂದು ಹೇಳಿ ಅದಕ್ಕೆ ಸಕಲ ವ್ಯವಸ್ಥೆ ಮಾಡಿಸಿದನು.

ಸಾಮ್ರಾಟರ ಆದೇಶದಿಂದ ಸೋಮನಾಥನಿಗೆ ಮಹದಾನಂದವಾಯಿತು. ಅದೊಂದು ತನಗೆ ದೊರೆತ ಮಹಾಗೌರವವೆಂದು ಭಾವಿಸಿ ವಿದ್ವಜ್ಜನರಿಂದ ತುಂಬಿದ ರಾಜಸಭೆಯಲ್ಲಿ ಶಿಷ್ಯರಾದ ಗಾನವಿಶಾರದರೂ ಅವಳಿ ಸಹೋದರರೂ ಆದ ಕಂಬು ಕಂಠ ಕಲಕಂಠರೆಂಬ ತರುಣರಿಂದ ಶ್ರೀ ವ್ಯಾಸರಾಜ ಗುರುಪಾದರ ಮುಂದೆ ಅವರ ಕಟಾಕ್ಷ ವೀಕ್ಷಣರೂಪ ಪ್ರಸಾದಸೂಚಕ ಅನುಮತಿಯಂತೆ ಸಮಸ್ತ ವಿದ್ವಜ್ಜನರ ಸಮೂಹದ ಶ್ರವಣಗಳಿಗೆ ಆಭರಣದಂತಿರುವ ಉಪಮಾನವೀಯವಳವಲ್ಲದ "ಶ್ರೀ ವ್ಯಾಸಯೋಗಿ ಚರಿತಮ್" ಕಾವ್ಯವನ್ನು ವಾಚನ ಮಾಡಿಸಿದನು.

ಕಂಬುಕಂಠ-ಕಲಕಂಠರು ಒಂದೊಂದು ಘಟ್ಟಿಗಳನ್ನು ಒಂದೊಂದು ದಿನದಂತೆ ಆರು ಉಲ್ಲಾಸಯುಕ್ತವಾದ ಆ ಮಹಾಕಾವ್ಯವನ್ನು ಸುಸ್ವರ ಕಂಠದಿಂದ ವಾಚನ ಮಾಡಿದರು, ಆಗ ವಿದ್ವಜ್ಜನರು, ಕವಿಗಳು, ಸಾಹಿತಿಗಳು "ಸಾಧು ಸಾಧು" ಎಂದು ಹರ್ಷಧ್ವನಿಗೈದರು. ಶ್ರೀವ್ಯಾಸರಾಜರು ಕರುಣಾರಸಪೂರ್ಣ ನೇತ್ರರಾಗಿ, ಸೋಮ ನಾಥನನ್ನು ನೋಡಿ ಶಿರಃಕಂಪನ ಮಾಡುದ್ದತ್ತಿರು. ಸಮಸ್ತ ವಿದ್ವಾಂಸರೂ ಏಕ ಕಂಠದಿಂದ ಶ್ರೀ ವ್ಯಾಸರಾಜರ ಜಯಜಯಕಾರ ಮಾಡಿದರು. ಮತ್ತು ಸೋಮನಾಥ ಕವಿಯನ್ನು ಮುಕ್ತಕಂಠದಿಂದ ಶ್ಲಾಘಿಸಿದರು. ಆ ನಂತರ ಸೋಮನಾಥನು ಆ ಮಹಾ ಚಂಪೂಕಾವ್ಯವನ್ನು ಭಕ್ತಿಶ್ರದ್ಧೆಗಳಿಂದ ವ್ಯಾಸರಾಜರ ಪಾದಕಮಲಗಳಲ್ಲಿ ಸಮರ್ಪಿಸಿ ಸಾಷ್ಟಾಂಗ ನಮಸ್ಕಾರ ಮಾಡಿದನು. ಆ ಕಾವ್ಯವನ್ನಾಲಿಸಿ ಅಚ್ಯುತ ದೇವರಾಯನಿಗಾದ ಸಂತೋಷ ವರ್ಣಿಸಲು ಅಸದಳ !

ವ್ಯಾಸಭಗವಾನರು ಅಂದಿನ ವಿದ್ವತ್ಸಭೆಯಲ್ಲಿ ಅತ್ಯಂತ ಶ್ರೇಷ್ಠ ಕೃತಿಯನ್ನು ರಚಿಸಿ ಸುರಸರಸ್ವತಿಯ ವಾಙ್ಮಯ ಭಂಡಾರಕ್ಕೆ ಅಸದೃಶ ಕೊಡುಗೆ ನೀಡಿದ ಸೋಮನಾಥನನ್ನು ಸಮಕಾಲಿಕ ಕವಿಗಣದಲ್ಲಿ ಅಗ್ರೇಸರನಾದ ಮಹಾಕವಿಯೆಂದು ಶ್ಲಾಘಿಸಿ ವಿಜಯನಗರದ ಸಂಸ್ಕೃತ ವಿಶ್ವವಿದ್ಯಾನಿಲಯದ ಪರವಾಗಿ ಕುಲಪತಿಗಳಾಗಿ ತಾವು ಸೋಮನಾಥ ಮಹಾಕವಿಯನ್ನು ವಿದ್ವದ್ಯೋಗ್ಯ ರೀತಿಯಲ್ಲಿ ಸನ್ಮಾನಿಸುತ್ತಿರುವುದಾಗಿ ಹೇಳಿ ಸುವರ್ಣಹಾರ, ಕಂಕಣ, ಶಾಲುಜೋಡಿ, ಪೀತಾಂಬರ ಕನಕ ನಾಣ್ಯಗಳನ್ನು ಫಲಮಂತ್ರಾಕ್ಷತೆಯೊಡನಿತ್ತು ಆಶೀರ್ವದಿಸಿದರು. ಸುಮಾರು ಎಂಬತ್ತುವರ್ಷ ವಯಸ್ಸಿನ ಸೋಮನಾಥನು ಆಗ ಸಭೆಯಲ್ಲಿ ಮೈಮರೆತು ಮಾತನಾಡಿ "ಈ ಮಹಾಕೃತಿಯನ್ನು ಹಣಕ್ಕಾಗಿ, ಗೌರವಕ್ಕಾಗಿ, ಕೀರ್ತಿಗಾಗಿ ರಚಿಸಿದವನಲ್ಲ ! ಕೆಲ ಅಸೂಯಾಪರರಾದ ಕುಮತಿಗಳು ನನ್ನ ಈ ಕಾವ್ಯರಚನೆಗೆ ಕಾರಣವನ್ನು ಅನ್ಯಥಾ ಭಾವಿಸಿ ನಿಂದಿಸುತ್ತಿರುವುದಾಗಿ ಕೇಳಿದ್ದೇನೆ. ನನ್ನೀ ಕೃತಿಗೆ ಬಹುಮಾನವೆಂದರೆ ವ್ಯಾಸಭಗವಾನರ ಒಂದೇ ಒಂದು ಶಿರಃಕಂಪನ ! ಅದೇ ನನಗೆ ನೂರು ಸುವರ್ಣ ಮೇರುವಿಗೆ ಸದೃಶವಾಗಿದೆ.[1] ಇಂತಹ ವಿಭೂತಿಪುರುಷರ, ಮಹಾಮಹಿಮರ ಚರಿತೆಯನ್ನು ರಚಿಸುವಭಾಗ್ಯ ನನಗೆ ದೊರೆತುದು ನಮ್ಮ ಪೂರ್ವೀಕರ ಪುಣ್ಯವೆಂದೇ ನಾನು ನಂಬಿದ್ದೇನೆ. ಗುರುಪಾದರ ಪೂರ್ಣಾನುಗ್ರಹ ಈ ಪಾಮರನಲ್ಲಿ ಶಾಶ್ವತವಾಗಿರಬೇಕೆಂದು ಪ್ರಾರ್ಥಿಸುತ್ತೇನೆ"ಎಂದನು. ಆಗ ಸರ್ವರೂ ಹರ್ಷಧ್ವನಿ ಕರತಾಡನಗಳಿಂದ ಸೋಮನಾಥನನ್ನು ಕೊಂಡಾಡಿದರು.

ಸ್ವಾಭಾವಿಕವಾಗಿ ವಿದ್ವಜ್ಜನ ಪಕ್ಷಪಾತಿಯೂ, ಉದಾರಿಯೂ, ವಿದ್ಯಾವಂತರನ್ನು ಸದಾ ಗೌರವಿಸುವವನೂ ಆದ ಕನ್ನಡ ಸಾಮ್ರಾಜ್ಯಾಧೀಶನಾದ ಅಚ್ಯುತದೇವರಾಯನು ಮರುದಿನ ಸೋಮನಾಥನನ್ನು ಪಾಲಕಿಯಲ್ಲಿ ವಿಜೃಂಭಣೆಯಿಂದ ಮೆರೆಸಿ ಕರತಂದು ರಾಜಸಭೆಯಲ್ಲಿ ಶ್ರೀವ್ಯಾಸಭಿಕ್ಷುಗಳ ಸಮಕ್ಷ ಸಾಮ್ರಾಜ್ಯಕ್ಕೆ ಯೋಗ್ಯವಾದ ರೀತಿಯಲ್ಲಿ ಮುತ್ತಿನಹಾರ, ರತ್ನಪದಕ, ಕರ್ಣಕುಂಡಲ, ರತ್ನಖಚಿತ ಸಿಂಹಲಲಾಟ ಕಡಗಗಳು, ಶಾಲುಜೋಡಿ, ಜರಿಯಉಷ್ಣೀಷ, ಬೆಲೆಬಾಳುವ ಪೀತಾಂಬರಗಳು, ಸುವರ್ಣರಜತ ನಾಣ್ಯಗಳನ್ನು ಸ್ವತಃ ನೀಡಿ ಶ್ರೀವ್ಯಾಸಯೋಗಿ ಚರಿತೆಯನ್ನು ಶಿರದಲ್ಲಿಟ್ಟು ಕುಳಿತ ಮಹಾಕವಿಯನ್ನು ಭೂಸ್ವಾಸ್ತಿದಾನ ಪೂರ್ವಕ ಸನ್ಮಾನಿಸಿದನು.

ಅನೇಕ ಪಂಡಿತರು "ವ್ಯಾಸಯೋಗಿ ಚರಿತಮ್" ಚಂಪೂಕಾವ್ಯದ ಐತಿಹಾಸಿಕ ಮಹತ್ವ, ಶ್ರೀವ್ಯಾಸರಾಜರ ಅಗಮ್ಯಮಹಿಮೆ-ವಿದ್ಯಾವೈಭವ-ಲೋಕಕಾರುಣ್ಯ,

---

1) ಭೋ ಭೋ ಮತ್ಸರಕುತ್ಸಿತಾನ್ ಸುಮತಯೋ ದುರ್ವೈದುಷೀಗರ್ವಿತಾನ್
ಆಕಾಶಾದವತಾರಭಾಗಿನ ಇವಾ ಹಂ ಯೂ ನ್ಸಮಾಘೌಕ್ಯ ಕಿಮ್ |
ಶ್ಲಾಘಾಕಂಪನಮೇಕಮೇವ ಶಿರಸಃ ಶ್ರೀ ವ್ಯಾಸಯೋಗೀಶಿತುಃ
ಮೇರೂಣಾಂ ಶತಮರ್ಹತಿ ಕ್ಷಿತಿತಲೇ ಶ್ರೀವಿದ್ಯಾಸುವಿದ್ಯಾವತಿಃಮ್ ॥ ೧೪ ॥
—ಶ್ರೀವ್ಯಾಸಯೋಗಿ ಚರಿತಮ್—P-3

ವಿದ್ವಜ್ಜನ ಪಕ್ಷಪಾತ, ಪಂಡಿತಾದಿಗಳಿಗೆ ಅವರು ನೀಡುತ್ತಿರುವ ಆಶ್ರಯ, ಪ್ರೋತ್ಸಾಹ ವಿಜಯನಗರದ ವಿಶ್ವವಿದ್ಯಾನಿಲಯವನ್ನು ಸ್ಥಾಪಿಸಿ ಹತ್ತಾರು ಸಹಸ್ರ ಜನ ವಿದ್ಯಾರ್ಥಿಗಳಿಗೆ ಜ್ಞಾನದಾನಮಾಡುತ್ತಾ, ಇಂದು ಭಾರತದಲ್ಲೇ ಏಕೈಕ ಸಂಸ್ಕೃತ ವಿಶ್ವವಿದ್ಯಾನಿಲಯವೆಂದು ಖ್ಯಾತಿಗಳಿಸುವಂತೆ ಮಾಡಿರುವುದು ಮುಂತಾದ ಶ್ರೀ ಗುರುಗಳ ವೈಶಿಷ್ಟ್ಯಾದಿಗಳನ್ನೂ, ಮಹಾಕವಿ ಸೋಮನಾಥನ ಪಾಂಡಿತ್ಯ-ಪ್ರತಿಭೆ, ಕಾವ್ಯರಚನಾ ಚಾತುರ್ಯಾದಿಗಳನ್ನೂ, ಅಚ್ಯುತದೇವರಾಯನ ಔದಾರ್ಯವನ್ನೂ ಬಣ್ಣಿಸಿ ಭಾಷಣಮಾಡಿ ಈ "ಶ್ರೀ ವ್ಯಾಸಯೋಗಿ ಚರಿತಮ್" ಚಂಪೂಕಾವ್ಯವು ವಿದ್ವತ್ಪ್ರಪಂಚದಲ್ಲಿ ವಿಖ್ಯಾತವಾಗಿ ಸೋಮನಾಥ ಕವಿಗಳ ಕೀರ್ತಿ ದಿಗಂತ ವಿಶ್ರಾಂತ ವಾಗುವುದರಲ್ಲಿ ಸಂದೇಹವಿಲ್ಲ" ಎಂದು ಏಕಕಂಠ್ಯರಾಗಿ ಘೋಷಿಸಿದರು. ಪ್ರಚಂಡಕರ ತಾಡನ ಹರ್ಷಧ್ವನಿಗಳಿಂದ ಸಮಸ್ತರಾಜಸಭೆಯು ತನ್ನ ಆನಂದವನ್ನು ವ್ಯಕ್ತಪಡಿಸಿತು

ಸೋಮನಾಥ ಕವಿಯು ವ್ಯಾಸತೀರ್ಥರ ಅನುಗ್ರಹದಿಂದ ತನಗೆ ಭಾರತದೇಶ ದಲ್ಲೇ ಏಕೈಕ ಹಿಂದೂ ಸಾಮ್ರಾಜ್ಯವೆನಿಸಿದ ವಿಜಯನಗರದ ಕನ್ನಡಸಾಮ್ರಾಜ್ಯಾ ಧೀಶನಿಂದ ಇಂಥ ಗೌರವ ಸನ್ಮಾನಗಳು ದೊರಕಿತೆಂದು ಶ್ರೀಗಳವರಿಗೆ ಸಾಷ್ಟಾಂಗ ವೆರಗಿ ತನ್ನ ಭಕ್ತಿಶ್ರದ್ಧೆಗಳನ್ನು ವಿನಮ್ರಭಾವದಿಂದ ವಿಜ್ಞಾಪಿಸಿದನು.

ಸೋಮನಾಥ ಕವಿಯು ಮುಂದೆ ನಾಲ್ಕಾರುದಿನ ವಿಜಯನಗರದಲ್ಲಿದ್ದು ತನ್ನ ಮಿತ್ರರು, ಶಿಷ್ಯರುಗಳೊಡನೆ ಶ್ರೀ ವ್ಯಾಸತೀರ್ಥರ ಆಶೀರ್ವಾದ ಫಲಮಂತ್ರಾಕ್ಷತೆ ಪಡೆದು ಗೋವಿಂದತೀರ್ಥಪುರಾಗ್ರಹಾರಕ್ಕೆ ಪ್ರಯಾಣಬೆಳೆಸಿದನು.

## ೫೪. ಕೃಷ್ಣಭಕ್ತಿಯ ಪರಾಕಾಷ್ಠತೆ !

ಶ್ರೀವ್ಯಾಸರಾಜರು ಬರಬರುತ್ತಾ ರಾಜಕೀಯ, ಹಾಗೂ ಇನ್ನಿತರ ಲೌಕಿಕ ಕಾರ್ಯಗಳಲ್ಲಿ ನಿರಾಸಕ್ತರಾದರು. ಅವರು ಬಹುಹೊತ್ತು ಸ್ವಾಶ್ರಮೋಚಿತ ನಿತ್ಯ-ನೈಮಿತ್ತಿಕಕರ್ಮಾಚರಣ, ಪಾಠಪ್ರವಚನ, ಪೂಜಾ, ಉಪದೇಶಾದಿಗಳಿಗಾಗಿ ವಿನಿಯೋ ಗಿಸಿ ಉಳಿದಸಮಯದಲ್ಲಿ ಮೌನವಾಗಿ, ಹೃದಯಕಮಲದಲ್ಲಿ ತಮ್ಮ ಬಿಂಬಮೂರ್ತಿ ಯನ್ನು ಧ್ಯಾನಿಸಿ ಸ್ತುತಿಸುತ್ತಾ ಅಸಂಪ್ರಜ್ಞಾತಸಮಾಧಿಯಲ್ಲಿ ಕುಳಿತುಬಿಡುವರು. ಆಗ ಅವರ ಮುಖದಲ್ಲಿ ತಾಂಡವಿಸುವ ಅಲೌಕಿಕ ತೇಜಸ್ಸು ಎಲ್ಲರನ್ನೂ ವಿಸ್ಮಯ ಗೊಳಿಸುತ್ತಿತ್ತು. ಅವರ ಅನುಗ್ರಹಪಾತ್ರರಾದ ಅನೇಕ ಪಂಡಿತ ಶಿಷ್ಯರು, ಧಾರ್ಮಿಕ ರಿಗೆ, ಶ್ರೀಯವರು ಭಾವಸಮಾಧಿಯಲ್ಲಿ ಭಗವದ್ಧ್ಯಾನರತರಾಗಿರುವಾಗ, ಅವರ ಸುತ್ತಲೂ ಅದೊಂದು ಬಗೆಯ ಅದ್ಭುತರಮ್ಯಪ್ರಶಾಂತವಾದ, ಹಾಲುಬೆಳದಿಂಗಳಿ ನಂಥ ಕಾಂತಿಪುಂಜ, ಶಿರೋಭಾಗದಲ್ಲಿ ಬೆಳಗುವ ವಿವಿಧವರ್ಣರಂಜಿತ ಪ್ರಭಾವಲಯ ಗಳು ಒಮ್ಮೊಮ್ಮೆ ಕಂಡುಬರುತ್ತಿತ್ತು ! ಅದನ್ನು ಕಂಡು ಪಂಡಿತರು, ಧಾರ್ಮಿಕರು ದೇವಲೋಕದಿಂದ ಧರೆಗಿಳಿದುಬಂದ ಮಹಾಭಗವದ್ಭಕ್ತರಾದ ಮಹಾತ್ಮರಿವರೆಂದು ಮನಗಂಡು ಭಕ್ತ್ಯಾನಂದ ಪುಳಕಿತಗಾತ್ರರಾಗಿ, ಇಂಥ ಗುರುವನ್ನು ಸೇವಿಸುವ

ಭಾಗ್ಯ ತಮಗೆ ದೊರೆಕಿರುವುದಲ್ಲಾ ಎಂದು ಪರವಶರಾಗಿ,ಧ್ಯಾನಸ್ಥ ಗುರುಪುಂಗವರಿಗೆ ಸಾಷ್ಟಾಂಗವೆರಗುವರು.ಇಂಥ ಅನೇಕಘಟನೆಗಳು ಅನೇಕರಅನುಭವಕ್ಕೆ ಬಂದುಅವರು ಭಕ್ತಿಪ್ರಕರ್ಷದಿಂದ ತಮ್ಮಅನುಭವಗಳನ್ನು ಪರಸ್ಪರಹೇಳಿಕೊಂಡುಹರ್ಷಿಸುತ್ತಿದ್ದರು

ಪುರಂದರದಾಸರು, ಶ್ರೀಕನಕದಾಸರು ತಿರುಪತಿ, ಕಾಗಿನೆಲ್ಲಿಗಳಿಗೆ ಯಾತ್ರೆಗಾಗಿ ಹೋದವರು ಎರಡು ಮೂರು ತಿಂಗಳಾದರೂ ಇನ್ನೂ ಹಿಂದಿರುಗಿ ಬಂದಿರಲಿಲ್ಲ. ಗುರುಗಳಿಗೆ, ಆತ್ಮೀಯರೂ, ಅಪರೋಕ್ಷಜ್ಞಾನಿಗಳೂ, ಭಾಗವತೋತ್ತಮರೂ ಆದ ಅವರಿಲ್ಲದಿರುವುದರಿಂದ ಮನಸ್ಸಿಗೆ ಬಹಳ ಬೇಸರವಾಗಿತ್ತು. ಪ್ರಿಯವಸ್ತುವಿನ ವಿರಹಾನುಭವವುಳ್ಳವರಿಗೆ ಅದರ ಅನುಭವವಿರುತ್ತದೆ. ಇದೇ ಪರಿಸ್ಥಿತಿಯಲ್ಲೇ ಗುರುಗಳ ಆರೋಗ್ಯ ಅಷ್ಟು ಚೆನ್ನಾಗಿರದೆ ಅವರು ಬಹಳ ಕೃಶರಾಗಿದ್ದರು, 93 ವರ್ಷಗಳ ವಾರ್ಧಿಕ್ಯ, ನಿಶ್ಯಕ್ತಿ, ಬಳಲಿಕೆಗಳಿದ್ದರೂ ಅವರ ಮುಖದಲ್ಲಿ ಪ್ರಖರ ವರ್ಚಸ್ಸು, ದಿವ್ಯಕಾಂತಿ ಬೆಳಗುತ್ತಿತ್ತು. ತರುಣರಂತೆಯೇ ಅವರು ಪ್ರತಿದಿನ ಸ್ನಾನ ಆಹ್ನೀಕ, ಜಪ, ತಪ–ದೇವಪೂಜಾ, ಪಾಠ-ಪ್ರವಚನ, ಶಿಷ್ಯಭಕ್ತಜನರಿಗೆ ಧಾರ್ಮಿಕೋಪದೇಶಾದಿಗಳನ್ನೆಲ್ಲಾ ಎಂದಿನಂತೆಯೇ ನೆರವೇರಿಸುತ್ತಿದ್ದರು.

ವಿಳಂಬಿ ಸಂವತ್ಸರದ ಫಾಲ್ಗುಣ ಶುಕ್ಲಪೂರ್ಣಿಮಾ ದಿವಸ ವ್ಯಾಸಭಗವಾನರು ಬೆಳಗಿನಿಂದ ಸಂಜೆವರೆಗಿನ ಕರ್ತವ್ಯ, ರಾತ್ರಿ ದೀಪಾರಾಧನೆಗಳನ್ನು ನೆರವೇರಿಸಿದರು. ಅಂದೇಕೋ ಅವರಿಗೆ ಮನಸ್ಸಿಗೆ ಬಹಳ ಆನಂದ, ಉಲ್ಲಾಸಗಳುಂಟಾಗಿತ್ತು. ಸುಪ್ರಸನ್ನಚಿತ್ತರಾಗಿದ್ದ ಅವರಿಗೆ ತುಂಗತರಂಗಿಣಿಯ ತೀರದಲ್ಲಿ ಕೆಲಕಾಲವಿದ್ದು ಶ್ರೀಹರಿಯನ್ನು ಧ್ಯಾನದಿಂದ ಸೇವಿಸುವ ಬಯಕೆಯಾಯಿತು. ಮಠದ ಅಧಿಕಾರಿಯನ್ನು ಕರೆದು ಮೇನೆಯನ್ನು ತರಿಸುವಂತೆ ಅಜ್ಞಾಪಿಸಿದರು. ರಾತ್ರಿ ಎಂಟು ಘಂಟೆಯಸಮಯದಲ್ಲಿ ಗುರುಗಳೇಕೆ ಮೇನೆಯನ್ನು ತರಿಸಹೇಳಿದರೆಂದು ಅರ್ಥವಾಗದೆ, ಗುರುಗಳ ಆರೋಗ್ಯವೂ ಚೆನ್ನಾಗಿರದಿದ್ದರಿಂದ ಶಂಕಿಸುತ್ತಲೇ ಅತ'ಮಹಾಸ್ವಾಮಿ, ಸನ್ನಿಧಾನದವರ ಆರೋಗ್ಯ ಸರಿಯಿಲ್ಲ, ಈಗ ಹೊರಗೆ ಹೊರಡುವುದು ಉಚಿತವೇ? ಸೇವಕನನ್ನು ಕ್ಷಮಿಸಬೇಕು"ಎಂದು ವಿಜ್ಞಾಪಿಸಿದ. ಶ್ರೀಯವರು ಮಂದಹಾಸಬೀರಿ "ತುಂಗಭದ್ರೆಯ ತೀರದಲ್ಲಿ ಸ್ವಲ್ಪವೇಳೆ' ಭಗವದ್ಧ್ಯಾನರತರಾಗಿ ಬರುತ್ತೇವೆ. ನಮಗಾಗಿ ಚಿಂತಿಸುವ ಕಾರಣವಿಲ್ಲ. ಮೇನೆ ಬರಲಿ"ಎಂದರು. ಎದುರುತ್ತರಕೊಡಲು ಧೈರ್ಯವಿಲ್ಲದೆ ಅಧಿಕಾರಿ ಮೇನೆಯನ್ನು ಸಿದ್ಧಪಡಿಸಿ ವಿಜ್ಞಾಪಿಸಿದ. ಶ್ರೀಯವರು ಆಪ್ತ ದ್ವಾರಪಾಲಕನೊಡನೆ ಹೊರಟು ಮೇನೆಯಲ್ಲಿ ಕುಳಿತರು. ಗುರುಗಳ ಸೇವೆಗಾಗಿ ಕಾತರಿಸುತ್ತಿದ್ದ ಎಂಟುಜನ ಬ್ರಾಹ್ಮಣರು ಗುರುಗಳ ಅಪ್ಪಣೆಯಂತೆ ಮೇನೆಯನ್ನು ಹೊತ್ತು ತುಂಗಭದ್ರಾನದಿಯಕಡೆ ಹೊರಟರು. ಒಂದು ಸ್ಥಳದಲ್ಲಿ ಮೇನೆಯಿಂದಿಳಿದು ಗುರುಗಳು ತಾವು ಬರುವವರೆಗೆ ಅಲ್ಲಿ ಕಾದಿರಲು ಬ್ರಾಹ್ಮಣರಿಗೆ ತಿಳಿಸಿ ದ್ವಾರಪಾಲಕನೊಡನೆ ತುಂಗೆಯ ದಡದತ್ತ ಸಾಗಿದರು,

ಶ್ರೀಗಳವರು ಸ್ವಲ್ಪದೂರನಡೆದು ಒಂದೆಡೆ ನಿಂತು ಸುತ್ತಲೂ ಪರಿಕಿಸಿದರು.

ಅದೊಂದು ಪ್ರಶಾಂತವಾದ ಪ್ರದೇಶ. ವಿವಿಧ ಫಲಭರಿತ ವೃಕ್ಷಗಳು. ಪುಷ್ಪವಾಟಿಕೆಗಳು, ಲತಾಕುಂಜಗಳು, ಬಗೆಬಗೆ ಕುಸುಮಗಳಿಂದ ಕಂಗೊಳಿಸುವ ತರು-ಲತೆ-ಬಳ್ಳಿಗಳಿಂದ ಶೋಭಿಸುತ್ತಿದೆ. ತುಂಗಭದ್ರೆಯು ಕಲಕಲರವದಿಂದ ಸಳಸಳನೆ ಹರಿಯುತ್ತಿದ್ದಾಳೆ. ಅಂಬರದಲ್ಲಿ ಪೂರ್ಣಿಮೆಯ ಪೂರ್ಣಚಂದ್ರನು ಶೀತಲಕಿರಣಗಳನ್ನು ಹರಡಿ ಸುಂದರ ಬೆಳದಿಂಗಳ ನಗೆಯಿಂದ ರಾಜಿಸುತ್ತಿದ್ದಾನೆ. ಮಂದಮಾರುತನು ಮೆಲ್ಲ ಮೆಲ್ಲನೆ ಬೀಸುತ್ತಾ ವಿವಿಧ ಪುಷ್ಪ ಸುಗಂಧ ಸೌರಭಗಳನ್ನು ಪೂಸುತ್ತಾ ಆಹ್ಲಾದವೀಯುತ್ತಿದ್ದಾನೆ. ಅಲ್ಲಿನ ವಾತಾವರಣ ಮನಮೋಹಕವೂ ಪ್ರಶಾಂತವೂ ಆಗಿದ್ದು ಸಂತಸ ಸಂತತಿಯನ್ನೀಯುತ್ತಿದೆ. ಶ್ರೀವ್ಯಾಸಮುನೀಂದ್ರರು ತುಂಗೆಯಲ್ಲಿ ಮಿಂದು ಕೃಷ್ಣಾಜಿನದಲ್ಲಿದ್ದ ಕಾಷಾಯ ವಸ್ತ್ರಗಳನ್ನು ಧರಿಸಿ ಅಜಮನವಮಾಡಿ ತುಂಗೆಯ ದಡದ ರಮ್ಯ ಉಪವನದಲ್ಲಿದ್ದ ಚಂದ್ರಶಿಲಾ ವೇದಿಕೆಯಿಂದಾವೃತವಾದ ಒಂದು ಮಾವಿನ ಮರದ ಬಳಿಗೆ ಬಂದರು. ದ್ವಾರಪಾಲಕನು ವೇದಿಕೆಯ ಮೇಲೆ ಕೃಷ್ಣಾಜಿನ ಮತ್ತು ಕರವಸ್ತ್ರವನ್ನು ಹಾಸಿ ಅಪ್ಪಣೆಪಡೆದು ಮೇನೆಯಿದ್ದಲ್ಲಿಗೆ ತೆರಳಿದನು. ಗುರುಗಳು ಅದರ ಮೇಲೆ ಕುಳಿತು ಮತ್ತೊಮ್ಮೆ ಸುತ್ತಲೂ ನಿರೀಕ್ಷಿಸಿದರು.

ಆಗ ಅವರ ಕಣ್ಣಿಗೆ ಕಂಡ ದೃಶ್ಯ ಶ್ರೀಕೃಷ್ಣನ ಲೀಲಾವಿಲಾಸ ಭೂಮಿಯಾದ ಬೃಂದಾವನವನ್ನು ನೆನಪಿಗೆ ತಂದಿತು! ಆ ರಮಣೀಯ ಪ್ರದೇಶವೇ ಬೃಂದಾವನ, ತುಂಗೆಯೇ ಯಮುನೆ, ತರುಲತೆಗಳೇ ಗೋಪಸ್ತ್ರೀಯರು, ಶುಕಪಿಕಗಳ ಮಂಜುಳ ಧ್ವನಿಯೇ ಕೃಷ್ಣನ ಕೊಳಲಿನ ಧ್ವನಿ! ಚಂದ್ರಿಯ ಚಲ್ವಿನಲ್ಲಿ ಮಂದಾನಿಲನ ಮಧುರ ಸ್ಪರ್ಶದಿಂದ ತಲೆದೂಗುತ್ತಿರುವ ಕುಸುಮಿತ ತರುಲತೆಗಳ ಚಲನೆಯೇ ಗೋಪಸ್ತ್ರೀಯರಾಡುತ್ತಿರುವ ರಾಸಕ್ರೀಡೆಯಂತೆ ಅವರಿಗೆ ಭಾಸವಾಯಿತು! ಆಗ ಯತಿಪುಂಗವರ ಹೃದಯದಲ್ಲಿ ಶ್ರೀಕೃಷ್ಣಭಕ್ತಿತರಂಗಿಣಿಯು ಪುಟಿದೆದ್ದಿತು!

ಪರಮಾನಂದ ತುಂದಿಲರಾದ ಶ್ರೀವ್ಯಾಸಮುನಿಗಳು ಪದ್ಮಾಸನಾಸೀನರಾಗಿ ಹೃತ್ಪುಂಡರೀಕದಲ್ಲಿ ಪುಂಡರೀಕಾಕ್ಷನಾದ ಶ್ರೀಮುರುಳಿಲೋಲನನ್ನು ಪ್ರತಿಷ್ಠಾಪಿಸಿ ಧ್ಯಾನಮಗ್ನರಾದರು. ಸ್ವಲ್ಪ ವೇಳೆಯಲ್ಲಿಯೇ ಅವರ ಹೃತ್ಪೀಠದಲ್ಲಿ ಸುರಸುಂದರ ಲೋಕಮೋಹಕ ಲಾವಣ್ಯಶೋಭಿತನಾದ ಬಾಲಗೋಪಾಲನು ಅಭಿವ್ಯಕ್ತನಾಗಿ ನಗೆ ಮೊಗದಿಂದ ದರ್ಶನವಿತ್ತು ಅಭಯ ನೀಡುತ್ತಾ ನಿಂತನು ! ಗುರುವರ್ಯರು ಆ ಪರಂಧಾಮನನ್ನು ಆನಂದದಿಂದೀಕ್ಷಿಸುತ್ತಾ ಮಾನಸಪೂಜಾ ಕ್ರಮದಿಂದಾರಾಧಿಸಿ ಮಂತ್ರಪುಷ್ಪಾಂಜಲಿಯನ್ನು ಸಮರ್ಪಿಸಿದ ಕೂಡಲೇ ಕೃಷ್ಣನು ಕಣ್ಮರೆಯಾದನು. ಬಾಲಗೋಪಾಲನು ಅದೃಶ್ಯನಾದ್ದರಿಂದ ಖಿನ್ನರಾದ ಶ್ರೀಗಳವರು "ಕೃಷ್ಣಾ, ನಿನ್ನ ಭಕ್ತನಲ್ಲಿ ದಯವೇಕೆಬಾರದು ? ಬೃಂದಾವನದ ನೆನಪಾಗಿ ಅಲ್ಲಿಗೆ ಓಡಿಹೋಗಿದೆಯಾ ? ಗೋವಿಂದ, ನಿನ್ನ ಸಂತತ ಸನ್ನಿಧಾನದಿಂದ ಕಂಗೊಳಿಸಿದ್ದ ಆ ಬೃಂದಾವನದ ಸುಕೃತವದೆಷ್ಟು ಅಮೋಘ! ನಿನ್ನ ಬಾಲಲೀಲೆಗಳನ್ನು ಕಂಡಾನಂದಿಸಿದ ಆ ಗೋಪಗೋಪಿಯರುರೆಷ್ಟು ಧನ್ಯರು! ಆ ಮಂಗಳಕರ ದೃಶ್ಯವನ್ನೊಮ್ಮೆ ನೋಡಲು ನಿನ್ನ

ಈ ದಾಸನು ಅರ್ಹನಲ್ಲವೇ? ಏಕೆ ಕಣ್ಮರೆಯಾದೆ ಪ್ರಭು! ಕರುಣೆದೋರು" ಎಂದು ಭಕ್ತಿಯಿಂದ ಪ್ರಾರ್ಥಿಸುತ್ತಿದರು.

ಆಶ್ಚರ್ಯ! ಧ್ಯಾನಸ್ಥರಾಗಿದ್ದ ಗುರುಗಳ ಹೃತ್ಕಮಲದಲ್ಲಿ ಮಿಂಚೊಂದು ಮಿನುಗಿದಂತಾಯಿತು. ! ಆ ದಿವ್ಯಪ್ರಕಾಶದಲ್ಲಿ ಅವರಿಗೆ ಸಾಕ್ಷಾತ್ ಬೃಂದಾವನದ ದರ್ಶನವೇ ಆಯಿತು! ಭಕ್ತ್ಯುದ್ರೇಕದಿಂದ ಶ್ರೀಕೃಷ್ಣನ ಲೀಲಾವಿಲಾಸ ಭೂಮಿಯಾದ ಬೃಂದಾವನದ ಸೊಬಗನ್ನು ವಿಸ್ಮಿತಸ್ಮಿತಪಕ್ಷ್ಮಪುಟಲೋಚನರಾಗಿ ನೋಡುತ್ತಿದ್ದಾರೆ ಶ್ರೀವ್ಯಾಸಭಗವಾನರು.

ಅವರು ತಮ್ಮ ಹೃದಯಭೂಮಿಯಲ್ಲಿ ಕಂಡ ನೋಟ ಅತಿಮನೋಹರ. ವಿವಿಧ ಫಲಗಳ ಭಾರದಿಂದ ತಲೆಬಾಗಿದಂತಿರುವ ವೃಕ್ಷಗಳು; ಶುಕ-ಪಿಕಗಳ ಕಲರವ ದುಂಬಿಗಳ ಗಳರವಗಳು ಶ್ರೀಕೃಷ್ಣನನ್ನು ಸ್ತುತಿಸುತ್ತಾ ಗಾನಮಾಡುತ್ತಿರುವಾಗ ಅಪ್ಸರರಂತೆ ಶ್ರೀಕೃಷ್ಣನ ಮೇಲೆ ಪೂಮಳೆಗರೆಯುತ್ತಿರುವುದನ್ನು ಕಂಡರು! ಗರಿಬಿಚ್ಚಿ ಮೈಮರೆತು ನರ್ತಿಸುತ್ತಿರುವ ನವಿಲುಗಳ ಹಿಂಡು ನಂದನಂದನನಿಗೆ ಪರಾಕು ಹೇಳಿ ಸ್ವಾಗತಿಸುತ್ತಿರುವುದನ್ನು ಅವಲೋಕಿಸಿದರು! ಶ್ರೀಗೋಪಾಲನ ಕೊಳಲಧ್ವನಿ ಕೇಳಿ ಯಮುನಾ ನದಿಯಲ್ಲಿ ಸುಖದ ಸಂಭ್ರಮದಿಂದ ಮೈಮರೆತು ಅರೆಗಣ್ಣು ಮುಚ್ಚಿ ಕಮಲಗಳಮೇಲೆ ಮೌನವಾಗಿ ಪರಮಹಂಸಕುಲದಂತೆಶ್ರೀಕೃಷ್ಣಧ್ಯಾನರತವಾಗಿರುವ ಹಂಸ ಸಮುದಾಯವನ್ನು ಕಂಡಾನಂದಿಸಿದರು! ಶ್ರೀಕೃಷ್ಣನ ಪಾದನಖದ ಕಾಂತಿಯೆಂಬ ಪೂರ್ಣಚಂದ್ರನ, ಕಳಂಕರಹಿತವಾದ ಬೆಳದಿಂಗಳನ್ನು ಸವಿಯುತ್ತಿರುವ ಸುಖಾತಿರೇಕದಿಂದ ಸೊಕ್ಕಿ, ಯೋಗಿಗಳಂತೆ ಸಮಸ್ತವನ್ನೂ ಮರೆತಿರುವ ಚಕೋರ ಪಕ್ಷಿಗಳನ್ನು ನೋಡಿ ವಿಸ್ಮಿತರಾದರು! ಅಲ್ಲಿ ಅನೇಕ ಗೋಪಿಯರು, ಗೋವುಗಳು, ಕರುಗಳಿದ್ದವು. ಅವು ತಮ್ಮ ಮುಂದೆ ಸುಳಿದಾಡುತ್ತಿರುವ ಶ್ರೀಕೃಷ್ಣನ ಸುರಸೌಂದರ್ಯವನ್ನು ಕಣ್ಣರಳಿಸಿ ಮನದಣಿಯ ನೋಡುತ್ತಾ ಪರವಶರಾಗಿ ಮನ್ಮಥಜನಕನಾದ ಬಾಲಕೃಷ್ಣನ ಅದ್ಭುತ ಸೌಂದರ್ಯವನ್ನು ಅಗಲವಾದ ಕಣ್ಣುಗಳಿಂದ ಸವಿಯುವ ಗೋಪಿಯರು, ತಮ್ಮ ಕರುಗಳನ್ನೂ ಮರೆತು ಆವಾಗಲೂ ಶ್ರೀಕೃಷ್ಣನಲ್ಲೇ ನೆಟ್ಟ ದೃಷ್ಟಿಯಿಟ್ಟು ನೋಡುತ್ತಾ ಮುದಿಸುತ್ತಿರುವ ಗೋವುಗಳನ್ನು ಕಂಡು ಗುರುಗಳ ಮೈಪುಳಕಿಸಿತು! ತೋಳುಗಳೆಂಬ ದಂಡಿಗೆಯಿಂದ ಹೀಲಿಚಾಮರವನ್ನು ತಾವರೆಯ ಕೊಡೆಯಂತೆ ಮೇಲೆತ್ತಿ ಹಿಡಿದು ನಂದಕುಮಾರನನ್ನು ಓಲೈಸಿ ಒಲಿಸಿಕೊಂಡು ಮುಕ್ತರಂತೆ ಶ್ರೀಹರಿಯ ಸಾಲೋಕ್ಯಸುಖಾನುಭವ ಮಗ್ನರಾದ ಗೋಪಬಾಲಕರನ್ನು ಕಂಡು ಗುರುಗಳು ಮೈಮರೆತರು !

ಅಲ್ಲೇ ಮತ್ತೊಂದು ದೃಶ್ಯ ! ಬಾಲಗೋಪಾಲ ಕೊಳಲೂದುತ್ತಾ ಬರುತ್ತಿದ್ದಾನೆ. ಮನವನ್ನು ಸೂರೆಗೊಳ್ಳುವ ಆ ಮಂಜುಳಮುರಳೀನಾದವನ್ನು ಕೇಳಿ, ಮನೆ ಮನೆಗಳಿಂದ ಹೊರಗೋಡಿಬಂದು, 'ಜಯಜಯ ಶ್ರೀಮನ್ನಾರಾಯಣ,

ಪದ್ಮನಾಭ, ಶ್ರೀಕೃಷ್ಣ, ಪರಾಕ್' ಎಂದು ಶ್ರೀಕೃಷ್ಣನನ್ನು ಹೊಗಳುತ್ತಾ ಲಕ್ಷ್ಮೀ ದೇವಿಯಂತೆ ಕರಗಳಲ್ಲಿರುವ ತಳಿಗೆಗಳಿಂದ ಕದಲಾರತಿ ಎತ್ತಿ ಮಾಧವನ ಮೋಹಕ ಸೌಂದರ್ಯವನ್ನು ತಮ್ಮ ಕಣ್ಣುಗಳಿಂದ ಹೀರುತ್ತಿರುವ ವ್ರಜಸುಂದರೀಸಮುದಾಯ ವನ್ನು ಕಂಡು ಗುರುಪಾದರು ಧನ್ಯರಾದರು ! ವ್ರಜದ ಮನೆಮನೆಗಳಲ್ಲಿ ಮೊಸರು ಕಡೆಯುತ್ತಾ 'ಇಂದಿರೇಶ, ಬ್ರಹ್ಮೇಂದ್ರಾದಿವಂದಿತ, ಶ್ರೀಕೃಷ್ಣ' ಎಂದು ಅಂದಿನ ಶ್ರುತಿಯೇ ಒಪ್ಪುವಂತೆ ಸ್ತುತಿಸಿ, ಶ್ರೀಬಾಲಗೋಪಾಲನಿಗೆ ಪಾಲ್ಮೊಸರು ಬೆಣ್ಣೆ ಗಳನ್ನಿತ್ತು ಕೃಷ್ಣನೊಡನೆ ಸರಸವಾಡುತ್ತಿರುವ ಭಾಗ್ಯಶಾಲಿಗಳಾದಇಂದುಮುಖಿಯ ರಾದ ಸುಂದರ ಗೋಪಾಂಗನೆಯರನ್ನು ಕಂಡರು !

ಶ್ರೀವ್ಯಾಸರಾಜರು ತಾವು ಕಂಡ ಅದ್ಭುತದೃಶ್ಯದಿಂದ ಮೈಮರೆತರು. ಆಗ ಅವರಲ್ಲಿ ಕೃಷ್ಣಭಕ್ತಿಯುಕ್ಕೇರಿಹರಿಯುಹತ್ತಿತ್ತು,ಆಗಲೇ ಆ ಎಲ್ಲದೃಶ್ಯಗಳೂಮಾಯ ವಾದವು. ಸಮಾಧ್ಯವಸ್ಥೆಯಿಂದ ಎಚ್ಚೆತ್ತ ಗುರುಗಳು "ಆಹಾ, ಬೃಂದಾವನ, ಯಮುನೆ,ಗೋಪಗೋಪಿಯರು, ಗೋವು-ಕರುಗಳು,ಪುಷ್ಪವಾಟಿಕೆ-ನಿಕುಂಜ-ಲತಾ ಬಳ್ಳಿಗಳು ಎಂಥ ಪುಣ್ಯಮಾಡಿದ್ದವೋ ಕಾಣೆನಲ್ಲಾ! ಸಾಕ್ಷಾತ್, ಪರಮಾತ್ಮನ ಸತತ ಸನ್ನಿಧಾನ,ಸ್ಪರ್ಶಾಲಾಪಗಳಿಂದ ಅವೆಲ್ಲ ಧನ್ಯವಾದವಲ್ಲವೇ? ನನಗೆ ಆ ಭಾಗ್ಯದೊರಕ ಲಿಲ್ಲವಲ್ಲ ! ಕೃಷ್ಣಾ,ಕೃಷ್ಣಾ ಏಕಿಂತು ನಿರ್ದಯನಾದೆ ಈ ದಾಸನಲ್ಲಿ, ದಯಾಸಾಗರ? ದೇವ! ಮತ್ತೆ ನೀನೆನಗೆ ಜನ್ಮವಿತ್ತರೆ, ಬೃಂದಾವನದ, ಯಮುನೆಯ, ನವಿಲುಗಳ ಜನ್ಮವನ್ನಾದರೂ ಕೊಡಬಾರದೆ ? ಕರುಣಿಸು ಗೋಪಾಲ, ಅನುಗ್ರಹಿಸು" ಮುಂತಾಗಿ ವಿವಿಧ ರೀತಿಯಿಂದ ಸ್ತುತಿಸಿ ಮೈಮರೆತು ಭಕ್ತಿಯ ಪರಾಕಾಷ್ಠತೆಯ ತುಟ್ಟತುದಿಯನ್ನು ಮುಟ್ಟಿದರು.

ಭಕ್ತ್ಯುದ್ರೇಕದಿಂದ ರೋಮಾಂಚಿತರಾಗಿದ್ದ ಗುರುಗಳ ಕಣ್ಣಿನಿಂದ ಆನಂದಾಶ್ರು ಹರಿಯುತ್ತಿತ್ತು. ಆಗ ವ್ಯಾಸರಾಜರ ಮುಖದಿಂದ ಒಂದು ನೂತನ ಭಕ್ತಿಗೀತೆಯು ಹೊರಹೊಮ್ಮಿತು !

ರಾಗ : ಗೌಳಿಪಂತು ಅಟತಾಳ

ಎಂದಿಗಾದರೂ ಒಮ್ಮೆ ಕೊಡು ಕಂಡ್ಯ ಹರಿಯೇ ॥ ಪ ॥
ಬೃಂದಾವನಪತಿ ದಯದಿಂದಲೆನಗೆ ॥ ಅ ॥
ಫಲಭಾರಗಳಿಂದತಲೆವಾಗಿ ಶುಕಪಿಕ ಕಲಕಲದೊಳು ನಿನ್ನ ತುತಿಸಿತುಂಬಿಗಳ।
ಗಳರವದಿಂಪಾಡಿಅಪ್ಸರರಂತೆ ಪೂ। ಮಳೆಗಳೆರವ ತರುಲತೆಜನ್ಮವನು ॥ ೧ ॥
ಕೊಳಲಶ್ರುತಿಯಕೇಳಿಸುಖದಸಂಭ್ರಮದಲಿ।ಹೊಲಬುತಿಪ್ಪತಾವುಅರಗಣ್ಣುಮುಚ್ಚಿ।
ನಳಿನಾಸನದಿ ಮೌನಗೊಂಡು ಪರಮಹಂಸ।ಕುಲದಂತೆ ಧ್ಯಾನಿಪ ಹಂಸಜನ್ಮವನು॥೨॥
ನಖಗಳೆಂಬ ಸಂತತಪೂರ್ಣಚಂದ್ರನ್ನ । ಅಕಳಂಕನವಚಂದ್ರಿಕೆಯನ್ನ ಸವಿದು ॥
ಸುಖದಸುಗ್ಗಿಗಳಲ್ಲಿ ಸೊಕ್ಕಯೋಗಿಗಳಂತೆ।ಅಖಿಳವಮರೆವ ಚಕೋರಜನ್ಮವನು॥೩॥

ಭಾವಜನಯ್ಯನ ಕಡುಚೆಲುವಿಕೆಯನ್ನು। ಭಾವಿಸಿ ನಿಡುಗಂಗಳಿಂದ ದಣಿದುಂಡು ॥
ಗೋಪಳೇರಂತೆ ಮನೆಮಕ್ಕಳಹಿಂಗಿ ನಿನ್ನ। ಆವಾಗ ಈಕ್ಷಿಸುವ ಗೋವ್ಗಳಜನ್ಮವನು ॥೪॥
ತೋಳದಂಡಿಗೆಮಾಡಿ ಹೀಲಿಯ ಚಾಮರವ। ಮೇಲೆ ಎತ್ತಿದ ತಾವರೆಗೊಡೆಯಿಂದ ॥
ಓಲೈಸಿ ನಿನ್ನನು ಒಲಿಸಿ ಮುಕುತರಂತೆ। ಸಾಲೋಕ್ಯಸುಖವುಂಬ ಗೋಪರಜನ್ಮವನು ॥೫॥
ಕೊಳಲಧ್ವನಿಯ ಕೇಳಿ ಎದುರುಗೊಳ್ಳುತ ನಿನ್ನ। ನಳಿನನಾಭಾ ಅವಧಾರೆಂದು ಪೊಗಳೇ ॥
ತಳಿಗೆ ಆರತಿಯೆತ್ತಿ ಲಕ್ಷ್ಮೀಯಂತೆ ನಿನ್ನ। ಚೆಲುವ ಸವಿದಂಥ ಗೋಪೇರಜನ್ಮವನು ॥೬॥
ಇಂದಿರೆಯರಸ ಬ್ರಹ್ಮೇಂದ್ರಾದಿವಂದಿತ। ಎಂದು ಮೊಸರು ಕಡೆಯುತ್ತಲಿ ನಿನ್ನ ॥
ಅಂದಿನಪ್ರತಿಯೇ ಉಪ್ಪವಡಿಪ ವ್ರಜ। ದಿಂದುಮುಖಿಯರ ಜನ್ಮವ ಸಿರಿಕೃಷ್ಣ ॥೭॥

ಆಹಹ ! ಎಂಥ ಸರಸಸುಂದರಭಾವನೆ ! ಆದೆಂತಹ ಪರಿಪಕ್ವಭಕ್ತಿ, ನಮ್ಮ ವ್ಯಾಸಮುನಿಗಳದು? ಶ್ರೀಕೃಷ್ಣಗ್ರಹಗೃಹೀತಾತ್ಮರಾದ ಶ್ರೀಯತಿಕುಲತಿಲಕರು ಶ್ರೀನಂದಗೋಪಾಲನನ್ನು ಮತ್ತೆ ಪ್ರಾರ್ಥಿಸಹತ್ತಿದರು. ಹೇಕೃಷ್ಣ, ಮುಕುಂದ, ಮುರಾರಿ! ಅಂದಿನ ದ್ವಾಪರದ ಬೃಂದಾವನ ಮತ್ತೆ ಬಂದೀತೇ ? ಅಲ್ಲಿಯವರೆಗೆ ನಾನೆಂತು ಕಾಯಲಿ, ಹೂಂ. ಹೋಗಲಿ ದೇವ! ಮತ್ತೆನಗೆ ನೀನು ಜನ್ಮವೀಯುವುದಾದರೆ ನಿನ್ನಲ್ಲಿಯೇ ರತನಾದ ಸದ್ವೈಷ್ಣವಜನ್ಮವನ್ನಾದರೂ ದಯಪಾಲಿಸು! ಇಷ್ಟಾದರೂ ನೀನು ಕರುಣಿಸಲೇಬೇಕು, ಕಂಡ್ಯಾ?" ಎಂದು ಶ್ರೀಕೃಷ್ಣನನ್ನು ಪ್ರಾರ್ಥಿಸಲಾರಂಭಿಸಿದರು.

ರಾಗ : ರೇಗುಪ್ತಿ — ಆಟತಾಳ

ಜನುಮಜನುಮದಲಿ ಕೊಡು ಕಂಡ್ಯ ಕೃಷ್ಣ[1] ॥ ಪ ॥
ಅನಿಮಿತ್ತಬಂಧು ಕೃಷ್ಣ ದಯದಿಂದಲೆನಗೆ ॥ ಅ ॥
ಮೆರೆವ ಊರ್ಧ್ವ ಪುಂಡ್ರ ಎರಡಾರುನಾಮವು ।
ಕೊರಳೊಳು ತುಳಸಿಯ ವನಮಾಲೆಯು ॥
ಮೆರೆವ ಶಂಖಚಕ್ರ ಭುಜದೊಳೊಪ್ಪುತ ನಿಮ್ಮ ।
ಸ್ಮರಿಸುತ್ತ ಹಿಗ್ಗುವ ವೈಷ್ಣವ ಜನುಮವ ॥ ೧ ॥
ಹರಿಯೇ ಸರ್ವೋತ್ತಮ, ರಾಣಿ ಲಕುಮಿ, ಬೊಮ್ಮ ।
ಹರ ಇಂದ್ರಾದ್ಯಖಿಳರು ತವ ಸೇವಕರು ॥

---

1) ಈಪದದ ಪರಿಶೀಲನೆಯಿಂದ ಶ್ರೀವ್ಯಾಸರಾಜರೇ ಪ್ರಹ್ಲಾದರೆಂಬುದು ಸ್ಪಷ್ಟವಾಗುವುದು. 1, ಪ್ರಹ್ಲಾದರು "ದಾಸಸ್ತವಾಹಂ ಭೂಯಾಸಂ ದೇವಜನ್ಮಾಂತರೇಷ್ವಪಿ" - ವ್ಯಾಸರಾಜರು 'ಜನುಮ ಜನುಮದಲಿ', ಪ್ರಹ್ಲಾದರು ಬೇಡಿದ್ದು ಜನ್ಮ ಜನ್ಮದಲ್ಲೂ ಹರಿಭಕ್ತಿ. ವ್ಯಾಸರಾಜರೂ "ನವವಿಧ ಭಕ್ತಿ"ಯನ್ನೇ ಬೇಡಿದ್ದಾರೆ. ಪ್ರಹ್ಲಾದರೇ 'ಸಂತೃಪ್ತೋಯಂ ವಾಯುಮತಂ ಸ ದೈವ' ಎಂದರು. ವ್ಯಾಸರಾಜರೂ "ಶ್ರೀಮನ್ಮಧ್ವಮತೇ" ಮುಂತಾಗಿ 'ಮುಂತಾಗಿ 'ವಾಯುಮತವನ್ನೇ ಆಶ್ರಯಿಸಬೇಕೆಂದು' ಉಪದೇಶಿಸಿದ್ದಾರೆ. ಒಂದೇ ಬಗೆಯಾದ ಇಚ್ಛೆ ನಡೆ-ನುಡಿಗಳು ಇವರು ಪ್ರಹ್ಲಾದರೆಂದೇ ಸ್ಪಷ್ಟಪಡಿಸುವುದು. —ಗ್ರಂಥಕರ್ತ

ವರ ತಾರತಮ್ಯ ಪಂಚಭೇದ ಸತ್ಯವೆಂದು
ನೆರೆ ಪೇಳುವ ವಾಯುಮತದ ಸುಜ್ಞಾನವ ॥ ೨ ॥
ಸಕಲ ವಿಬುಧೋತ್ತಮರಲ್ಲಿ ಸಮ್ಪ್ರೀತಿಯು ।
ಸುಖತೀರ್ಥರಲಿ ಮುಖ್ಯ ಗುರುಭಾವನೆಯು ॥
ಮುಕುತಿ ಪ್ರದಾಯಕ ಸಿರಿಕೃಷ್ಣ ನಿನ್ನಲ್ಲಿ ।
ಅಕಳಂಕವಾದ ನವವಿಧ ಭಕುತಿಯನ್ನು ॥ ೩ ॥

ಇಂತು ಪ್ರಾರ್ಥಿಸುತ್ತಾ ಶ್ರೀವ್ಯಾಸಮುನೀಂದ್ರರು ಮತ್ತೆ ಧ್ಯಾನಸ್ಥರಾದರು. ಆಗವರ ಹೃದಯ ಮಂಟಪದಲ್ಲಿ ಶ್ರೀ ಬಾಲಕೃಷ್ಣ ಹಸನ್ಮುಖದಿಂದ ದರ್ಶನವಿತ್ತು "ಭಕ್ತರಾಜ! ನಿನ್ನ ಭಕ್ತಿಪಾಶದಿಂದ ನನ್ನನ್ನು ಬಂಧಿಸಿರುವೆ. ನೀನು ಬೃಂದಾವನದ ತರು-ಲತೆ-ಶುಕ,ಪಿಕ-ಹಂಸ,ಗೋವತ್ಸಗಳು,ಗೋಪಗೋಪಿಯರ ಜನ್ಮವನ್ನಾದರೂ ಕೊಡೆಂದು ಪ್ರಾರ್ಥಿಸಿದ್ದೀಯೋ ! ಕುಮಾರ, ಜಗತ್ತಿನಲ್ಲಿ ಮತ್ತಾರಲ್ಲೂ ಮಾಡದ ಅನುಗ್ರಹವನ್ನು ಮಾಡಿ ಸದಾ ನಿನ್ನಲ್ಲೇ ನೆಲೆನಿಂತಿರುವೆ. ನಿನಗೆ ಸಮಾನರಾದ ಭಾಗ್ಯಶಾಲಿಗಳು ಮೂರು ಲೋಕಗಳಲ್ಲೂ ಬೇರಾರೂ ಇಲ್ಲ! ಅಂದು 'ಮೂರುಜನ್ಮಗಳಲ್ಲಿ ನಿನಗೆ ನಾನು ದಾಸನಾಗಿದ್ದು ಸೇವಿಸುವಂತೆ ವರಪ್ರದಾನಮಾಡು' ಎಂದು ಕೇಳಿದ್ದು ಮರೆತೆಯಾ? ಅದರಂತೆ ಎರಡು ಜನ್ಮಗಳಲ್ಲಿ ನೀನು ಈಗಾಗಲೇ ನನ್ನನ್ನು ಅನಿತರ ಸಾಧಾರಣ ರೀತಿಯಿಂದ ಸೇವಿಸಿ ನನ್ನ ಶ್ರೇಷ್ಠಭಕ್ತನೆನಿಸಿರುವೆ. ಇನ್ನು ಈಗ ನೀನು ಪ್ರಾರ್ಥಿಸಿದಂತೆ ಕೇವಲ ವೈಷ್ಣವ ಮಾತ್ರವಲ್ಲ,ಸದ್ವೈಷ್ಣವ ಕುಲಚಕ್ರವರ್ತಿಯಾಗಿ ಅಸಾಧಾರಣ ರೀತಿಯಿಂದ ನನ್ನ ಸತ್ತತ್ವ ಸ್ಥಾಪನೆ, ಗ್ರಂಥರಚನೆ,ಅಪಂಡಿತ ಪಾಮರರ ಉದ್ಧಾರ,ದೀನ-ದಲಿತರು,ಅಖಂಡವಿಶ್ವದ ಜನತೆಯ ಕಲ್ಯಾಣಮಾಡಲು ಅವತರಿಸಬೇಕಾಗಿದೆ.ಆ ನಂತರ ನಿನ್ನ ಮೂಲರೂಪ ಸೇರಿ ನನ್ನ ಸನ್ನಿಧಿಯಲ್ಲಿ ಸದಾ ಸುಖಿಸುವೆ, ಅದಕ್ಕೆ ಅರ್ಧಶತಮಾನಕ್ಕೂ ಮಿಕ್ಕಿ ಕಾಲವಿದೆ, ಆ ನಿನ್ನ ಅವತಾರಕ್ಕೆ ಭೂಮಿಕೆ,ವಾತಾವರಣ,ಪರಿಸರಗಳ ರಚನೆಯಾಗಬೇಕಾಗಿದೆ. ಇಂದಿನ ಅವತಾರದ ಕಾರ್ಯ ಮುಗಿದಿದೆ. ಮುಂದಿನ ಲೋಕಕಲ್ಯಾಣದ ಮಹಾ ಅನುಪಮ ಅವತಾರವಾಗಬೇಕಾಗಿದೆ. ಅದಕ್ಕೆ ಈಗ ನಿನ್ನೀ ಅವತಾರ ಪರಿಸಮಾಪ್ತಿ ಅನಿವಾರ್ಯವಾಗಿದೆ. ನಿನಗೆ ಮಂಗಳವಾಗಲಿ"ಎಂದು ಆದೇಶನೀಡಿ ಶ್ರೀಕೃಷ್ಣನು ಮುಗುಳುನಗೆ ಬೀರುತ್ತಾ ತನ್ನ ಪುಟ್ಟ ಮಂಗಳಕರ ಕರಗಳಿಂದ ಬಾ ಬಾ ಎಂದು ಕರೆದು ಅದೃಶ್ಯನಾದಂತೆ ಗುರುಗಳಿಗೆ ಭಾಸವಾಯಿತು.

ಧ್ಯಾನಸ್ಥಿತಿಯಿಂದ ಎಚ್ಚರಗೊಂಡ ಶ್ರೀವ್ಯಾಸರಾಜರ ಮೈ ಪುಳಕಿಸಿತು,ದೇಹದಲ್ಲೆಲ್ಲಾ ಅದಾವುದೋ ಒಂದು ದಿವ್ಯಶಕ್ತಿ ತೇಜಸ್ಸು ಪಸರಿಸಿದಂತಾಯಿತು.ಭಕ್ತ್ಯುದ್ರೇಕದಿಂದ ಆನಂದಬಾಷ್ಪ ಮಿಡಿಯಿತು. ವಿನಯ ಭಕ್ತಿ ಪುರಸ್ಸರವಾಗಿ "ದೇವ ! ನಿನ್ನ ಅಪ್ಪಣೆಯಂತಾಗಲಿ" ಎಂದು ಮನದಲ್ಲೇ ಪ್ರಾರ್ಥಿಸಿದರು. ಆಗ ಅವರ

ಮನಸ್ಸು ಆನಂದಪೂರ್ಣವಾಗಿತ್ತು, ಪ್ರಶಾಂತವಾಗಿತ್ತು. ಗುರುಗಳು ಆನಂದದಿಂದ ಮೇಲೆದ್ದು ಮೇನೆಯ ಬಳಿಗೆ ಬಂದು ಮೇನೆಯಲ್ಲಿ ಕುಳಿತರು, ಮೇನೆ 'ವಿಶ್ವಪಾವನ ಮಠ'ವನ್ನು ತಲುಪಿತು. ಶ್ರೀಗಳವರು ಪ್ರಸನ್ನವದನರಾಗಿ ವಿಶ್ರಾಂತಿಪಡೆದರು.

## ೫೫. ಅವತಾರದ ಪರಿಸಮಾಪ್ತಿ

ದಿಗ್ವಿಜಯ ಯಾತ್ರೆಯಲ್ಲಿದ್ದ ಶ್ರೀವಿಜಯೀಂದ್ರತೀರ್ಥ ಶ್ರೀಪಾದಂಗಳವರಿಗೆ ಶ್ರೀವ್ಯಾಸರಾಜರು ದೇಹಾಲಸ್ಯದಿಂದ ಬಳಲುತ್ತಿರುವ ವಿಚಾರವು ವಿಜಯನಗರದ ಒಬ್ಬಿಬ್ಬ ಪಂಡಿತರಿಂದ ತಿಳಿದು ಮನಸ್ಸಿಗೆ ಬಹಳ ಚಿಂತೆಯಾಯಿತು. ಪೂಜ್ಯ ಶ್ರೀ ಸುರೇಂದ್ರತೀರ್ಥಯತಿಪುಂಗವರಿಗೂ ಆ ವಿಚಾರ ತಿಳಿದು ಅವರಿಗೆ ಬಹಳ ಕಳವಳ ವಾಯಿತು. ಅವರು ಪ್ರಿಯಶಿಷ್ಯರಾದ ಶ್ರೀವಿಜಯೀಂದ್ರರನ್ನು ಹತ್ತಿರ ಕರೆದು "ಪ್ರೀತ್ಯಾಸ್ಪದ ಶಿಷ್ಯರೇ, ಹಿರಿಯ ಶ್ರೀಪಾದಂಗಳವರು ದೇಹಾಲಸ್ಯದಿಂದಿರುವ ಈ ಸಮಯದಲ್ಲಿ, ನಿಮ್ಮ ಎಲ್ಲ ವಿಧ ಅಭ್ಯುದಯಗಳಿಗೆ ಕಾರಣರೂ, ನಿಮ್ಮ ಕೀರ್ತಿಪ್ರತಿಷ್ಠೆಗಳನ್ನು ಕೇಳಿ ಸದಾ ಆನಂದದಿಂದ ಹಿಗ್ಗುವ ಪೂಜ್ಯರೂ ಆದ್ದರಿಂದ ಈಗ ನೀವು ಕೆಲಕಾಲ ಅವರ ಸಮೀಪದಲ್ಲಿದ್ದು ಸೇವಿಸಿ ಅನುಗ್ರಹೀತರಾಗುವುದು ಅವಶ್ಯ ಮತ್ತು ನಿಮ್ಮ ಕರ್ತವ್ಯ. ನೀವು ನಾಳೆಯೇ ವಿಜಯನಗರಕ್ಕೆ ಹೊರಡಬೇಕು. ನಾವು ಹಿರಿಯ ಶ್ರೀಪಾದಂಗಳವರ ಆರೋಗ್ಯಭಾಗ್ಯಕ್ಕಾಗಿ ಶ್ರೀಮೂಲರಘುಪತಿ ವೇದವ್ಯಾಸ ದೇವರಲ್ಲಿ ಪ್ರಾರ್ಥಿಸುತ್ತಿರುವುದಾಗಿ ನಮ್ಮ ಪ್ರೇಮಾಸ್ಪದ ಬಂಧುಗಳೂ ಪರಲೋಕ ಬಂಧುಗಳೂ ಆದ ಶ್ರೀವ್ಯಾಸಯೋಗೀಂದ್ರರಲ್ಲಿ ವಿಜ್ಞಾಪಿಸಿರಿ" ಎಂದಾಜ್ಞಾಪಿಸಿದರು. ಗುರುಪಾದರ ಮಾತುಕೇಳಿ ಗುರುದರ್ಶನಕ್ಕೆ ಅಪ್ಪಣೆ ದೊರಕಿತೆಂಬ ಆನಂದದಿಂದ ವಿಜಯೀಂದ್ರರು "ಗುರುಗಳ ಆಜ್ಞೆಯಂತೆ ನಡೆಯುತ್ತೇನೆ" ಎಂದು ವಿಜ್ಞಾಪಿಸಿದರು.

ಮರುದಿನ ವಿಜಯೀಂದ್ರರು ಚಿಕ್ಕಸಂಸ್ಥಾನದೊಡನೆ ಮಿತಪರಿವಾರ ಸಹಿತರಾಗಿ ಹೊರಟು ವಿಳಂಬ ಸಂವತ್ಸರದ ಫಾಲ್ಗುಣ ಕೃಷ್ಣ ಪಾಡ್ಯದಂದು ವಿಜಯನಗರವನ್ನು ತಲುಪಿ ಶ್ರೀ ವಿಶ್ವಪಾವನ ಮಠಕ್ಕೆ ದಯಮಾಡಿಸಿದರು. ಶ್ರೀವಿಜಯೀಂದ್ರರು ಬರುತ್ತಿರುವ ವಿಚಾರವರಿತ ಶ್ರೀವ್ಯಾಸಮುನೀಂದ್ರರಿಗೆ ಅಪಾರಸಂತೋಷವಾಯಿತು. ಪ್ರೀತ್ಯಾಸ್ಪದವಿಜಯೀಂದ್ರರು ಬರುವರೆಂದು ಅವರಿಗೆ ಬಹಳ ಉತ್ಸಾಹ, ಸಂಭ್ರಮ ಎಲ್ಲಿಲ್ಲದ ಸಡಗರ, ಮಹಾದ್ವಾರದಲ್ಲಿ ಮಠದ ಸಮಸ್ತ ಬಿರುದಾವಳಿ ಪೂರ್ಣಕುಂಭದೊಡನೆ ಶ್ರೀನಿವಾಸತೀರ್ಥರೇ ಮೊದಲಾದ ಪರಮಹಂಸ ಮಂಡಲಿ ಮತ್ತು ಮಠದ ಅಧಿಕಾರಿಗಳು ಪಂಡಿತ ಮಂಡಲಿಯು ಶ್ರೀ ವಿಜಯೀಂದ್ರರನ್ನು ಸ್ವಾಗತಿಸುತ್ತಿರುವಾಗಲೇ ಶ್ರೀವ್ಯಾಸತೀರ್ಥರು ಮಹಾದ್ವಾರ ದಾಟಿ ಪ್ರಿಯಶಿಷ್ಯರತ್ತ ಧಾವಿಸಿ ಭರದಿಂದಾಲಂಗಿಸಿದರು. ಶ್ರೀವಿಜಯೀಂದ್ರರು ಗುರುಪಾದರಿಗೆ ಸಾಷ್ಟಾಂಗನಮಸ್ಕಾರ ಮಾಡಿದರು. ಹರುಷಭರದಿಂದ ಆನಂದಬಾಷ್ಪವು ಈರ್ವರ ಕಣ್ಣಿನಿಂದಲೂ ಹರಿಯುತ್ತಿರಲು ವ್ಯಾಸಮುನಿಗಳು ವಿಜಯೀಂದ್ರರನ್ನು ಮೇಲೆಬ್ಬಿಸಿ, ಕರಪಿಡಿದು ಸಭಾಭವನಕ್ಕೆ

ಕರತಂದರು. ನೆರೆದ ಜನಸ್ತೋಮ 'ಶಿಷ್ಯವಾತ್ಸಲ್ಯ, ಗುರುಭಕ್ತಿಗಳಿಗೆ ಶ್ರೀವ್ಯಾಸರಾಜ-ವಿಜಯೀಂದ್ರರಿಗೆ ಸರಿಸಾಟಿ ಬೇರಾರೂ ಇಲ್ಲ' ಎಂದು ಉಭಯ ಗುರುಗಳನ್ನು ಸ್ತುತಿಸಿ ಜಯಕಾರ ಮಾಡಿದರು.

.... .... .... ....

ಅಂದು ಸಂಜೆ ದೀಪಾರಾಧನೆಯಾಗಿ ವಿಶ್ರಾಂತಿಯಲ್ಲಿರುವಾಗ ವ್ಯಾಸರಾಜರು ಶ್ರೀವಿಜಯೀಂದ್ರರನ್ನು ಏಕಾಂತವಾಗಿ ಹತ್ತಿರಕೂಡಿಸಿಕೊಂಡು ಅವರ ಅಭ್ಯುದಯ ವಿಚಾರಾದಿಗಳನ್ನು ಕೇಳಿ ತಿಳಿದು ಸಂತೋಷಿಸಿದರು. ಮತ್ತು ತಮ್ಮ ಆರೋಗ್ಯಾದಿ ವಿಚಾರಗಳನ್ನು ತಿಳಿಸಿ "ಪ್ರಿಯಶಿಷ್ಯರೇ, ಬಹುದಿನಗಳಿಂದ ನಿಮ್ಮನ್ನು ಕರೆಸಿಕೊಂಡು ಕೆಲ ಮುಖ್ಯವಿಚಾರಗಳನ್ನು ತಿಳಿಸಲು ಮನಸ್ಸು ಹಾತೊರೆಯುತ್ತಿತ್ತು. ನೀವೀಗ ಬಂದುದು ನಮಗೆ ಪರಮಾನಂದವಾಗಿದೆ. ಶ್ರೀಹರಿವಾಯುಗಳೇ ನಮ್ಮ ಮನವಾಸೆ ಪೂರೈಸಲು ನಿಮ್ಮನ್ನು ಇಲ್ಲಿಗೆ ಕರೆಸಿಕೊಂಡಿದ್ದಾರೆ ಎಂದು ನಾವು ಭಾವಿಸುತ್ತೇವೆ" ಎಂದರು. ವಿಜಯೀಂದ್ರರು"ಗುರುದೇವ! ತಮ್ಮನ್ನು ಸೇವಿಸುವ ಭಾಗ್ಯ ದೊರೆತುದು ನನ್ನ ಸುದೈವ. ಬಹುವರ್ಷಗಳಿಂದ ತಮ್ಮ ದರ್ಶನಮಾಡಿ ಕೆಲಕಾಲ ಸೇವಿಸುವ ಬಯಕೆಯಿತ್ತು. ಅದೀಗ ಪೂರ್ಣವಾಯಿತು, ಧನ್ಯನಾದೆ" ಎಂದರು,

ವ್ಯಾಸಮುನಿಗಳು ನಗುತ್ತಾ "ಪ್ರೀತ್ಯಾಸ್ಪದರಾದ ವಿಜಯೀಂದ್ರರೇ, ನೀವು ನಮ್ಮನ್ನು ದೈಹಿಕವಾಗಿ ಹೆಚ್ಚುದಿನ ಸೇವಿಸಲಾರಿರಿ! ನಿಮಗಾಗಿಯೇ ಕಾದಿದ್ದೆವು. ನೀವು ಬಂದಿದ್ದರಿಂದ ನಮ್ಮಾಸೆ ಪೂರೈಸಿತು. ನಾವು ಕೆಲ ಆದೇಶಗಳನ್ನು ನೀಡ ಬಯಸಿದ್ದೇವೆ. ಅದನ್ನು ನೀವು ಪೂರ್ಣಮಾಡಿದಲ್ಲಿ ಅದೇ ನೀವು ನಮಗೆ ಮಾಡುವ ಅಸಾಧಾರಣ ಸೇವೆಯಾಗುವುದು" ಎಂದಾಜ್ಞಾಪಿಸಿದರು. ವಿಜಯೀಂದ್ರರ ಗುರುಗಳ ವಚನವನ್ನಾಲಿಸಿ ಕಳವಳದಿಂದ "ಗುರುದೇವ. ಹೀಗೇಕೆ ಹೇಳುತ್ತಿರುವಿರಿ? ತಮ್ಮ ಮಾತು ಕೇಳಿ ನಮಗೆ-ಭಯಕಾತುರಗಳುಂಟಾಗುತ್ತಿದೆ" ಎಂದರು.

ವ್ಯಾಸರಾಜರು ನಸುನಕ್ಕು"ಭಯಕಾತರಗಳಿಗೆ ಕಾರಣವಿಲ್ಲ. ಭಗವತ್ಸಂಕಲ್ಪಕ್ಕೆ ಯಾರೂ ಹೊರತಲ್ಲವಷ್ಟೇ ? ನಮ್ಮ ಕಾಲ ಮುಗಿಯುತ್ತಾ ಬಂದಿದೆ. ಶ್ರೀಹರಿವಾಯುಗಳು ನಮ್ಮ ಅವತಾರ ಕಾರ್ಯವನ್ನು ಪೂರ್ಣಗೊಳಿಸಿದ್ದಾರೆ. ಶ್ರೀಹರಿಯಿಂದ ನಮಗೆ ಕರೆಬಂದಿದೆ. ನೀವು ಜ್ಞಾನಿಗಳು. ಧೀರರು. ನಾವು ಕಣ್ಮರೆಯಾಗುತ್ತೇವೆಂದು ದುಃಖಿಸಬಾರದು. ಈ ವಿಚಾರ ರಹಸ್ಯವಾಗಿರಲಿ. ನಾವು ತದಿಗೆ ದಿವಸ ನಮ್ಮ ಪ್ರಿಯಶಿಷ್ಯರಾದ ಶ್ರೀನಿವಾಸತೀರ್ಥರಿಗೆ ಮಹಾಸಂಸ್ಥಾನವನ್ನೊಪ್ಪಿಸಿ ಕೊಟ್ಟು ಚತುರ್ಥಿಯಂದು ಶ್ರೀನಾರಾಯಣಧ್ಯಾನರತರಾಗುತ್ತೇವೆ. ನೀವೀಗ ನಮಗೊಂದು ವಚನ ನೀಡಬೇಕು"ಎಂದರು.

ಗುರೇಗಳ ವಚನವಾಲಿಸಿ ವಿಜಯೀಂದ್ರರಿಗೆ ಅಪಾರ ದುಃಖವಾಯಿತು. ಇನ್ನು

ಹೆಚ್ಚುಕಾಲ ಗುರುಗಳನ್ನು ಸೇವಿಸುವ ಭಾಗ್ಯವಿಲ್ಲವಾಯಿತಲ್ಲಾ ಎಂದು ತಳಮಳ ವಾಯಿತು. ಕಣ್ಣುಗಳಿಂದ ದುಃಖಾಶ್ರು ಹರಿಯತೊಡಗಿತು. ಗದ್ಗದ ಕಂಠದಿಂದ ಗುರುಗಳ ಪಾದ ಹಿಡಿದು "ಗುರುವರ್ಯ, ನಮ್ಮನ್ನು ಅನಾಥರನ್ನಾಗಿ ಮಾಡಿಬಿಡು ವಿರಾ ? ಮುಂದೆ ನಮಗಾರು ಮಾರ್ಗದರ್ಶಕರು ?...."ಎಂದು ಕೇಳಿದರು.

ಶ್ರೀವ್ಯಾಸ: (ಮಂದಹಾಸದಿಂದ) ಪ್ರಿಯ ವಿಜಯೀಂದ್ರರೇ, ಜಗನ್ನಾಥನಾದ ಶ್ರೀಮೂಲರಾಮನೇ ನಿಮಗೆ ನಾಥನಾಗಿರುವಾಗ ನೀವೆಂತು ಅನಾಥರಾಗುವಿರಿ ? ಶ್ರೀಮದಾಚಾರ್ಯ-ಟೀಕಾಕೃತ್ಪಾದರ ಪೂರ್ಣಾನುಗ್ರಹ ನಿಮ್ಮಲ್ಲಿದೆ, ನಮ್ಮ ಮತ್ತು ಶ್ರೀಸುರೇಂದ್ರತೀರ್ಥರ ಆಶೀರ್ವಾದಗಳು ಸರ್ವದಾ ನಿಮಗಿದೆ. ಜ್ಞಾನಿಗಳಾದ ನಿಮ್ಮ ಗುರುಪಾದರೇ ನಿಮಗೆ ಮಾರ್ಗದರ್ಶಕರು. ನಮ್ಮ ಮೂರು ಮಾತುಗಳನ್ನು ನೆರವೇರಿಸುವುದಾಗಿ ನೀವೀಗ ವಚನಕೊಡಬೇಕು. ನಮ್ಮ ತರುವಾಯ ದ್ವೈತ ಸಿದ್ಧಾಂತವನ್ನು ಪರವಾದಿ ದಿಗ್ವಿಜಯ, ಗ್ರಂಥರಚನೆ, ಪಾಠಪ್ರವಚನಗಳಿಂದ ಪರಿ ಪುಷ್ಟಗೊಳಿಸಿ ದ್ವೈತವಿಜಯದುಂದುಭಿಯನ್ನು ಮೊಳಗಿಸಿ, ಶ್ರೀ ಸದ್ವೈಷ್ಣವ ಸಿದ್ಧಾಂತವನ್ನು ಕಾಪಾಡಿಕೊಂಡು ಬರಬೇಕು. ಅದಕ್ಕೆ ನೀವೊಬ್ಬರೇ ಸಮರ್ಥರು ! ಭಾರತೀಯ ಜನತೆಗೆ ಮಾರ್ಗದರ್ಶನಮಾಡಿ ಭಾರತದ ಸತ್ಪರಂಪರೆಯಂತೆ ಜನರು ಧರ್ಮಿಷ್ಠರಾಗಿ ಬಾಳುವಂತೆ ಮಾಡಿ ಕೀರ್ತಿಗಳಿಸಬೇಕು. ಕುಂಭಕೋಣದಲ್ಲಿ ಒಂದು ಶ್ರೇಷ್ಠ ವಿದ್ಯಾಪೀಠವನ್ನು ಸ್ಥಾಪಿಸಿ ಅದು ಜಗತ್ತಿಗೆ ಆದರ್ಶ ವಿದ್ಯಾಪೀಠವಾಗಿ ಅವ್ಯಾಹತವಾಗಿ ಜ್ಞಾನಕಾರ್ಯ ನೆರವೇರುವಂತೆ ಮಾಡಬೇಕು. ಮೂರನೆಯದಾಗಿ ನಮ್ಮ ಮಹಾ ಸಂಸ್ಥಾನವು ನಿರ್ಬಾಧವಾಗಿ ಮುಂದುವರೆದು ಬರಲು ನೀವು ನಮ್ಮ ಶ್ರೀನಿವಾಸತೀರ್ಥರಿಗೆ ಹಿರಿಯಣ್ಣನಂತೆ ಬೆಂಬಲಿಗರಾಗಿದ್ದು ಎಲ್ಲ ವಿಚಾರಗಳಲ್ಲೂ ಅವರಿಗೆ ಸಲಹೆ ನೀಡುತ್ತಾ ಬಂದು ಶ್ರೀಮದಾಚಾರ್ಯರ ಈ ಎರಡು ಮಹಾ ಸಂಸ್ಥಾನಗಳಲ್ಲಿ ಪರಸ್ಪರ,ಸೌಹಾರ್ದ್ರ,ಪ್ರೀತಿ ವಿಶ್ವಾಸಗಳು ಅಭಿವೃದ್ಧಿಸಿ ದ್ವೈತ ಸಿದ್ಧಾಂತದ ಸರ್ವಾಂಗೀಣ ಅಭ್ಯುದಯವಾಗುವಂತೆ, ಶ್ರೀಹರಿವಾಯುಗಳಿಗೆ ಪ್ರೀತಿಕರವಾದ ಕಾರ್ಯಾಸಕ್ತರಾಗಿ ಜಗತ್ತಿಗೆ ಸನ್ಮಾರ್ಗ ಪ್ರದರ್ಶನ ಮಾಡುತ್ತಾ ಸ್ನೇಹದಿಂದಿರುವಂತೆ ಮಾಡಬೇಕು" ಎಂದು ಆಜ್ಞಾಪಿಸಿದರು.

ಶ್ರೀವಿಜಯೀಂದ್ರರಿಗೆ ಗುರುಗಳು ತಮ್ಮ ಮೇಲೆ ಹೊರಿಸುತ್ತಿರುವ ದೊಡ್ಡ ಹೊಣೆಯನ್ನು ನೆನೆದು ರೋಮಾಂಚನವಾಯಿತು. ಆಗ ಅವರೇ "ಗುರುದೇವ ! ನಮಗೆ ಆ ಸಾಮರ್ಥ್ಯವಿದೆಯೇ, ನಾವಷ್ಟು ಭಾಗ್ಯಶಾಲಿಗಳೇ? ತಾವು ಸದಾ ನಮಗೆ ಪ್ರೇರಕಶಕ್ತಿಯಾಗಿದ್ದು, ಅನುಗ್ರಹಾಶೀರ್ವಾದಗಳಿಂದ ಈ ಮಹತ್ಕಾರ್ಯವನ್ನು ನೆರವೇರಿಸಲು ಶಕ್ತಿಯನ್ನು ದಯಪಾಲಿಸಬೇಕು. ತಮ್ಮ ಆಶೀರ್ವಾದದಿಂದ ತಾವು ಅಪ್ಪಣೆ ಕೊಡಿಸಿದ ಕಾರ್ಯಗಳನ್ನು ತಮ್ಮ ಪಾದಸಾಕ್ಷಿಯಾಗಿಯೂ ನೆರವೇರಿಸು ತ್ತೇವೆ" ಎಂದು ಗುರುಗಳ ಪಾದಹಿಡಿದು ನಮಸ್ಕರಿಸಿ ವಿಜ್ಞಾಪಿಸಿದರು.

ಶ್ರೀವ್ಯಾಸರಾಜರು ಪ್ರೇಮಭರದಿಂದ ವಿಜಯೀಂದ್ರರನ್ನಾಲಿಂಗಿಸಿ, ಅವರ ಶಿರದ ಮೇಲೆ ತಮ್ಮ ಅಮೃತಕರವನ್ನಿರಿಸಿ "ನಮ್ಮ ತರುವಾಯ ದ್ವೈತಸಿದ್ಧಾಂತದ ಸರ್ವಾಭಿವೃದ್ಧಿಗಳನ್ನು ನಿಮ್ಮಿಂದ ನೆರವೇರಿಸಿ ಶ್ರೀಹರಿವಾಯುಗಳು ಅನುಗ್ರಹಿಸುವರು. ಇದಕ್ಕೆ ನಮ್ಮ ಹೃತ್ಪೂರ್ವಕ ಆಶೀರ್ವಾದವಿದೆ" ಎಂದು ಹರಸಿದರು. ಆಗ ಶ್ರೀ ವಿಜಯೀಂದ್ರರ ದೇಹದಲ್ಲಿ, ನರನಾಡಿಗಳಲ್ಲಿ ಅವುದೋ ಒಂದು ಅದ್ಭುತಶಕ್ತಿ ಪ್ರವಹಿಸಿದಂತಾಗಿ ವಿಜಯೀಂದ್ರರು ಹರ್ಷಾತಿರೇಕದಿಂದ ಗುರುಗಳಿಗೆ ನಮಸ್ಕರಿಸಿ "ಧನ್ಯನಾದೆ, ಗುರುದೇವ. ಕೃತಾರ್ಥನಾದೆ. ತಮ್ಮಾಣತಿಯನ್ನು ಖಂಡಿತವಾಗಿ ನೆರವೇರಿಸಲು ಶ್ರಮಿಸುತ್ತೇನೆ" ಎಂದು ವಿಜ್ಞಾಪಿಸಿದರು.

ಆ ನಂತರ ಪೂರ್ವಾಶ್ರಮದ ಪ್ರೀತಿಯ ಸೋದರಳಿಯಂದಿರೂ, ಶ್ರೀಮಹಾಸಂಸ್ಥಾನದ ಉತ್ತರಾಧಿಕಾರಿಗಳೂ ಆದ ಶ್ರೀನಿವಾಸತೀರ್ಥರನ್ನು ಕರೆಯಿಸಿಕೊಂಡು ಅವರಿಗೆ ಬಹು ವಿಧವಾಗಿ ಉಪದೇಶಮಾಡಿ ಶ್ರೀವಿಜಯೀಂದ್ರರ ಸಲಹೆಯಂತೆ ವರ್ತಿಸುತ್ತಾ ಅಣ್ಣ-ತಮ್ಮಂದಿರಂತೆ ಬಾಳಿ ಶ್ರೀಮದಾಚಾರ್ಯರ ಉಭಯ ಮಹಾಸಂಸ್ಥಾನಗಳ ಕೀರ್ತಿಪ್ರತಿಷ್ಠೆಗಳನ್ನು ಬೆಳಗಿಸಬೇಕೆಂದೂ, ಉಳಿದ ವಿಚಾರಗಳನ್ನು ವಿಜಯೀಂದ್ರರು ತಿಳಿಸುವರೆಂದೂ ಆಜ್ಞಾಪಿಸಿ ಆಶೀರ್ವದಿಸಿದರು. ಶ್ರೀನಿವಾಸತೀರ್ಥರು "ಮಹದಾಜ್ಞೆ" ಎಂದು ವಿಜ್ಞಾಪಿಸಿದರು.

o o o o o

ಯಾತ್ರೆಗೆ ಹೋಗಿದ್ದ ಪುರಂದರದಾಸರು ಮರುದಿನ ಬಂದರು. ಇದರಿಂದ ಶ್ರೀವ್ಯಾಸರಾಜರಿಗೆ ಪರಮಾನಂದವಾಯಿತು. ನಗುತ್ತಾ "ದಾಸರೇ ನೀವು ಸಕಾಲಕ್ಕೆ ಬರುವಿರೋ ಇಲ್ಲವೋ ಎಂದು ನಮಗೆ ಕಳವಳವಾಗಿತ್ತು. ನೀವು ಬಂದುದು ನಮಗೆ ಬಹಳ ಸಂತೋಷಕ್ಕೆ ಕಾರಣವಾಗಿದೆ" ಎಂದರು. ದಾಸರಾಯರು ಬಹುಚಿಂತಾಕ್ರಾಂತರಾದವರಂತೆ ಕಂಡುಬಂದರು, ವ್ಯಾಸರಾಜರು "ಏಕೆ ದಾಸರೇ, ಬಹು ಕಳವಳಗೊಂಡಂತಿರುವಿರಿ" ಎಂದಾಗ ದಾಸರಾಯರು ನಿಟ್ಟುಸಿರುಬಿಟ್ಟು "ಹರಿಚಿತ್ತಕ್ಕೆ ಹೊರತಾರು ? ಇನ್ನು ಹೆಚ್ಚು ಕಾಲ ಗುರುಪಾದದರ್ಶನ, ಮಾತುಕಥೆ. ಉಪದೇಶಗಳನ್ನು ಪಡೆಯುವ ಭಾಗ್ಯ ನನಗಿಲ್ಲವಾಗುವುದಲ್ಲಾ ಎಂದು ನನಗೆ ಅತೀವ ದುಃಖವಾಗುತ್ತಿದೆ ಗುರುವರ್ಯ ! ಅಂತೆಯೇ ಉಳಿದ ಯಾತ್ರೆಯನ್ನು ಮಾನಸಿಕಮಾಡಿ ತಮ್ಮ ದರ್ಶನಕ್ಕಾಗಿ ಧಾವಿಸಿಬಂದೆ" ಎಂದರುಹಿವರು.

ವ್ಯಾಸಭಗವಾನರು ನಸುನಕ್ಕು "ಜ್ಞಾನಿಗಳೂ, ಸಕಲವನ್ನೂ ತಿಳಿದವರೂ ಆದ ನೀವೇ ಹೀಗೆ ಮಾಡಿದರೆ ಹೇಗೆ ದಾಸರೇ ? ಭಗವಚ್ಚಿತ್ತಕ್ಕೆ ಉಪಾಯವಿಲ್ಲವಷ್ಟೆ?" ಎಂದು ಹೇಳಿ ತಮಗಾದ ಅನುಭವ ಶ್ರೀಕೃಷ್ಣನ ಆದೇಶಗಳನ್ನು ಅವರಿಗೆ ಸಾದ್ಯಂತವಾಗಿ ತಿಳಿಸಿ ವಿಜಯೀಂದ್ರರ ಆಗಮನ, ಅವರಿಗೆ ತಾವು ಹೊರಿಸಿರುವ ಹೊಣೆ,

ತೃತಿಯಾದಿನ ಶ್ರೀನಿವಾಸತೀರ್ಥರಿಗೆ ಮಹಾಸಂಸ್ಥಾನವನ್ನು ವಹಿಸಿಕೊಡುವವಿಚಾರ ಗಳನ್ನೂ ತಿಳಿಸಿ ಅವರಿಗೆ ಬೆಂಬಲವಾಗಿದ್ದು ಶ್ರೀಹರಿವಾಯುಗಳಸೇವೆಮಾಡಬೇಕೆಂದು ಆಜ್ಞಾಪಿಸಿದರು. ಪುರಂದರದಾಸರು ಗುರುಗಳ ಪಾದಹಿಡಿದು ಕಣ್ಣೀರುಸುರಿಸಿ "ಈ ಜನ್ಮದಲ್ಲಿ ಇನ್ನು ಇದಿಷ್ಟೇ ಲಾಭ. ತಮ್ಮ ಅಪ್ಪಣೆಯಂತೆ ವರ್ತಿಸುತ್ತೇನೆ" ಎಂದು ವಿಜ್ಞಾಪಿಸಿದನು, ಅನಂತರ ಶ್ರೀಗಳವರು ತಮ್ಮ ಮನೀಷೆಯನ್ನು ಮಠದ ಪಂಡಿತಮಂಡಲಿ, ಶಿಷ್ಯರು, ಆತ್ಮೀಯರು, ಅಧಿಕಾರಿಗಳು ಹಾಗೂ ಸಾಮ್ರಾಟ್ ಅಚ್ಯುತದೇವರಾಯನಿಗೂ ವಿವರಿಸಿ ಮಹಾಸಂಸ್ಥಾನವನ್ನು ಶ್ರೀನಿವಾಸತೀರ್ಥರಿಗೆ ಒಪ್ಪಿಸಿಕೊಡಲು ಸಮಸ್ತ ವ್ಯವಸ್ಥೆಯನ್ನು ನೇರವೇರಿಸಲು ಆಜ್ಞಾಪಿಸಿದರು.

೦ ೦ ೦ ೦ ೦

ವಿಳಂಬಿನಾಮಸಂವತ್ಸರದ ಫಾಲ್ಗುಣ ಬಹುಳ ತದಿಗೆ ಶ್ರೀಲೋಕಪಾವನಮಠ ದಲ್ಲಿ ಮಹಾಸಂಭ್ರಮ. ಸಹಸ್ರಾರುಜನ, ರಾಜಧಾನಿಯ ಪುರಜನರು, ಧರ್ಮಾಭಿ ಮಾನಿಗಳು, ಪಂಡಿತರು, ರಾಜಕೀಯ ಮುಖಂಡರು, ಸಾಮ್ರಾಟ್ ಅಚ್ಯುತದೇವ ರಾಯ, ಅಳಿಯರಾಮರಾಜ ಮುಂತಾದವರು ಬಂದಿದ್ದಾರೆ. ಮಂಗಳವಾದ್ಯಗಳಾಗು ತ್ತಿವೆ. ವಿದ್ವಾಂಸರು ವೇದಘೋಷಮಾಡುತ್ತಿದ್ದಾರೆ. ವಿಶಾಲವಾದ ವೇದಿಕೆಯ ಮೇಲೆ ಹಾಕಿರುವ ಸುವರ್ಣಸಿಂಹಾಸನದಲ್ಲಿ ಶ್ರೀಶ್ರೀನಿವಾಸತೀರ್ಥರನ್ನು ಮಂಡಿಸಿ ಶ್ರೀವ್ಯಾಸತೀರ್ಥರು, ಶ್ರೀವಿಜಯೀಂದ್ರರು ಮತ್ತಿತರ ಆತ್ಮೀಯ ಶಿಷ್ಯರು ಸಹಾಯ ಮಾಡುತ್ತಿರಲು ಸಾಮ್ರಾಜ್ಯಾಭಿಷೇಕಮಾಡಿ ಶ್ರೀನಿವಾಸತೀರ್ಥರಿಗೆ ಶ್ರೀಮದಾ ಚಾರ್ಯರ ಮಹಾಸಂಸ್ಥಾನಾಧಿಪತ್ಯವನ್ನೂ, ರಾಜಗುರುತ್ವವನ್ನೂ, ವಿಜಯನಗರದ ಸಂಸ್ಕೃತವಿಶ್ವವಿದ್ಯಾನಿಲಯದ ಕುಲಪತಿತ್ವವನ್ನೂ ಒಪ್ಪಿಸಿಕೊಟ್ಟು ಆಶೀರ್ವದಿಸಿದರು

ಅನಂತರ ಸಾಮ್ರಾಟರಿಗೂ, ರಾಮರಾಯರಿಗೂ ತಮ್ಮಲ್ಲಿ ಮಾಡುತ್ತಿರು ವಂತೆಯೇ ನೂತನ ಜಗದ್ಗುರುಗಳಲ್ಲಿಯೂ ಶ್ರದ್ಧಾಭಕ್ತಿಗಳನ್ನುಮಾಡಿ ಮಹಾ ಸಂಸ್ಥಾನವು ಯಶಸ್ವಿಯಾಗಿ ಮುಂದುವರೆಯಲು ಸಹಾಯಕರಾಗಿರಬೇಕೆಂದು ಆಜ್ಞಾಪಿಸಿದರು. ಶ್ರೀನಿವಾಸತೀರ್ಥರಿಗೆ ನಮಸ್ಕರಿಸಿದ ಅಚ್ಯುತರಾಜ-ರಾಮರಾಜರು ನೂತನ ರಾಜಗುರುಗಳ ಅಪ್ಪಣೆಯಂತೆ ವರ್ತಿಸುವುದಾಗಿ ವಿಜ್ಞಾಪಿಸಿ ರಾಜಗೌರವ ಕಾಣಿಕೆಗಳನ್ನು ಸಮರ್ಪಿಸಿದರು. ಅನಂತರ ಪಂಡಿತರು, ಶಿಷ್ಯರು, ಧರ್ಮಾಭಿಮಾನಿ ಗಳು ಶ್ರೀನಿವಾಸತೀರ್ಥರಿಗೆ ಕಾಣಿಕೆಗಳನ್ನರ್ಪಿಸಿ ನಮಸ್ಕರಿಸಿದರು. ನೂತನ ಮಹಾ ಸಂಸ್ಥಾನಾಧಿಪತಿಗಳು ಸರ್ವರಿಗೂ ಫಲಮಂತ್ರಾಕ್ಷತೆ ಅನುಗ್ರಹಿಸಿ ಆಶೀರ್ವದಿಸಿ ದರು. ಹೀಗೆ ಸಮಾರಂಭವು ಅತ್ಯಂತ ವೈಭವದಿಂದ ಮುಕ್ತಾಯವಾಯಿತು.

ಅಂದುರಾತ್ರಿ ದೀಪಾರಾಧನೆ, ಶ್ರೀವ್ಯಾಸರಾಜ, ವಿಜಯೀಂದ್ರ, ಶ್ರೀನಿವಾಸ ತೀರ್ಥರ ಉಪದೇಶಭಾಷಣಗಳಾಗಿ ಸರ್ವರಿಗೂ ಫಲಮಂತ್ರಾಕ್ಷತಾ ಪ್ರದಾನವಾಗಿ ಸರ್ವರೂ ತೆರಳಿದಮೇಲೆ ಶ್ರೀವ್ಯಾಸರಾಜರು ಶ್ರೀವಿಜಯೀಂದ್ರ-ಶ್ರೀನಿವಾಸ

ತೀರ್ಥರನ್ನು ವಿಶ್ರಾಂತಿಗೆ ಕಳಿಸಿ ನೂರಾರುಜನ ಆತ್ಮೀಯ ಶಿಷ್ಯ-ಭಕ್ತಧರ್ಮಾಭಿಮಾನಿಗಳೊಡನೆ ಕುಳಿತು ಭಗವದ್ವಿಷಯಗಳನ್ನು ಚರ್ಚಿಸುತ್ತಾ ಇದ್ದರು. ನಂತರ ಶ್ರೀ ಪುರಂದರದಾಸರನ್ನು ಕರೆದು, ಇಂದು ರಾತ್ರಿಪೂರ್ತಿ ನಿಮ್ಮ ಭಜನೆಯಾಗಲಿ, ಜಾಗರಣೆಯಿಂದ ಕಾಲಕಳೆಯೋಣ ಎಂದು ಹೇಳಿದರು. ಗುರುಗಳ ಅಪ್ಪಣೆಯಂತೆ ದಾಸರು ಭಜನೆ ಪ್ರಾರಂಭಿಸಿದರು. ಶ್ರೀವ್ಯಾಸರಾಜರೂ ಮಧ್ಯೆ-ಮಧ್ಯೆ ಶ್ರೀಹರಿ ಗುಣಸ್ತವನ ಮಾಡುತ್ತಾ ಆ ರಾತ್ರಿಯನ್ನು ಕಳೆದರು.

೦ ೦ ೦ ೦ ೦

ಶ್ರೀಶಾಲಿವಾಹನ ಶಕೆ ೧೪೬೧ನೇ ಶ್ರೀವಿಳಂಬಿಸಂವತ್ಸರದ ಫಾಲ್ಗುಣಕೃಷ್ಣ ಚತುರ್ಥೀ ಸ್ಥಿರವಾರದಂದು (ಕಿ. ಶ. 1539ನೇ ಮಾರ್ಚಿಮಾಹೆ) ಬೆಳಗಿನಝಾವ ನಾಲ್ಕು ಘಂಟೆಗೆ ಶ್ರೀವ್ಯಾಸರಾಜರು ಸ್ನಾನಾಹ್ನಿಕಜಪತಪಾನುಷ್ಠಾನಗಳನ್ನು ಮುಗಿಸಿ ಆಸನಾಸೀನರಾದರು. ಶ್ರೀಪುರಂದರದಾಸರು, ಪ್ರಮುಖಪಂಡಿತಶಿಷ್ಯರು, ನೂರಾರು ಜನ ಧರ್ಮಾಭಿಮಾನಿಗಳು ಶ್ರೀಗಳವರಿಗೆ ನಮಸ್ಕರಿಸಿ ಕುಳಿತರು. ಶ್ರೀಪುರಂದರದಾಸರು ಖಿನ್ನಮುರಾಗಿ ಕರಜೋಡಿಸಿ ಕುಳಿತಿದ್ದಾರೆ. ಅವರ ಕಣ್ಣುಗಳಿಂದ ಧಾರಾಕಾರವಾಗಿ ನೀರುಹರಿಯುತ್ತಿದೆ.

ಆದರೆ ಶ್ರೀವ್ಯಾಸರಾಜರು ಅತ್ಯಂತ ಹರ್ಷಚಿತ್ತರಾಗಿದ್ದಾರೆ. ಮುಖದಲ್ಲಿ ಅಲೌಕಿಕ ತೇಜಸ್ಸು ಬೆಳಗುತ್ತಿದೆ. ಮಂದಹಾಸವದನಾರವಿಂದರಾದ ಶ್ರೀವ್ಯಾಸರಾಜ ಯತಿಸಾರ್ವಭೌಮರು ಶ್ರೀಹರಿಯ ಅಚಿಂತ್ಯಾದ್ಭುತಮಹಿಮಾತಿಶಯಗಳನ್ನು ಭಕ್ತ ಶಿಷ್ಯಜನರಿಗೆ ಭಕ್ತಿಪರವಶರಾಗಿ ಉಪದೇಶಿಸುತ್ತಿದ್ದಾರೆ. ಗುರುವರ್ಯರ ಮುಖದಿಂದ ಗಂಗಾಪ್ರವಾಹದಂತೆ ಶ್ರೀಹರಿತತ್ವಭಾಗೀರಥಿಯು ಹೊರಹೊಮ್ಮಿ ಸರ್ವರನ್ನೂ ಪರವಶಗೊಳಿಸುತ್ತಿದೆ. ಸಕಲರೂ ಭಕ್ತಿಭಾವದಿಂದ ಗುರುಗಳ ಉಪದೇಶವನ್ನು ಶ್ರವಣಮಾಡುತ್ತಿದ್ದಾರೆ. ಶ್ರೀಯುವರ ಉಪದೇಶ ಮುಗಿಯಿತು. ಗುರುಗಳು ಸಕಲರಿಗೂ ಭಗವಂತನು ಸನ್ಮಂಗಳಗಳನ್ನು ಕರುಣಿಸಲೆಂದು ಹೇಳಿ ಆಶೀರ್ವದಿಸಿದರು. ಅನಂತರ ಪುರಂದರದಾಸರನ್ನು ಹತ್ತಿರಕರೆದು ಸ್ವಲ್ಪಹೊತ್ತು ಅವರೊಡನೆ ಮಾತನಾಡುತ್ತಿದ್ದು ಆ ತರುವಾಯ ಕರದಲ್ಲಿ ತುಳಸೀಮಣಿಯ ಸರವನ್ನು ಹಿಡಿದು ಜಪಿಸುತ್ತಾ ಧ್ಯಾನಸ್ಥರಾದರು, ದಾಸರಾಯರು ತದೇಕ ಚಿತ್ತರಾಗಿ ಗುರುಸಾರ್ವಭೌಮರ ಮುಖವನ್ನು ನೋಡುತ್ತಾ ಕುಳಿತರು.....

ಸ್ವಲ್ಪ ಕಾಲವಾದ ಮೇಲೆ ಶ್ರೀಗಳವರು ಕಣ್ತೆರೆದು ಒಮ್ಮೆ ಸುತ್ತಲೂ ನೋಡಿ ನಗುಮುಖದಿಂದ ಶ್ರೀಹರಿಯನ್ನು ಮನಸಾ ಪ್ರಾರ್ಥಿಸಹತ್ತಿದರು.

"ಜಗಜ್ಜನ್ಮಾದಿಕಾರಣ, ರಮಾರಮಣ, ಭಕ್ತಜನಸಂರಕ್ಷಣ, ಸಕಲಾನಿಷ್ಟಹರಣ, ಪುರುಷೋತ್ತಮ, ಶ್ರೀಕೃಷ್ಣ ! ಮುಂದೆ ಮಾಡಬೇಕಾದ ನಿನ್ನ ವಿಶೇಶ ಸೇವೆಗಾಗಿ

ನಿನ್ನ ಆಣತಿಯಂತೆ ಇಂದಿನ ನನ್ನ ಅವತಾರವನ್ನು ಪರಿಸಮಾಪ್ತಿಗೊಳಿಸುತ್ತಿದ್ದೇನೆ. ಪ್ರಭು ! ಮುರಳೀಮೋಹನ, ಶ್ರೀಮೂಲಗೋಪಾಲಕೃಷ್ಣ ! ಅವತಾರವನ್ನು ಮುಗಿಸಲಿರುವ ಈ ಶುಭ ಪ್ರಸಂಗದಲ್ಲಿ ಮೊದಲು ನಿನ್ನ ಅಪ್ರಾಕೃತ ಸುಂದರ ಪಾದ ಪದ್ಮಗಳ ದರ್ಶನಮಾಡಲು ಮನಸ್ಸು ಕಾರಿಸುತ್ತಿದೆ, ಚತುರ್ದಶ ಭುವನಸ್ಥ ಸಮಸ್ತರಿಂದ ಸಂಸೇವ್ಯಮಾನವಾದ ಆರಾಧಕ ಭಕ್ತಜನರ ಸಂಸಾರಬಂಧವನ್ನು ಪರಿಹರಿಸಿ ಶಾಶ್ವತಾನಂದಪ್ರದವಾದ ಮೋಕ್ಷವೀಯಲು ಸಮರ್ಥವಾದ ನಿನ್ನ ಅಪ್ರಾಕೃತ ಪಾದಾರವಿಂದಗಳ ದರ್ಶನವಿತ್ತು ಕಾಪಾಡು ಪ್ರಭು"—ಎಂದು ಅರ್ಥಿಸಿದರು. ಆಗ ಅವರ ಮುಖದಿಂದ

"ಸಂಚಿತಯೇದ್ಭಗವತಶ್ಚರಣಾರವಿಂದಂ
ವಜ್ರಾಂಕುಶ ಧ್ವಜ ಸರೋರುಹಲಾಂಛನಾಢ್ಯಮ್ ।
ಉತ್ತುಂಗರಕ್ತ ವಿಲಸನ್ನಖ ಚಕ್ರವಾಲ-
ಜ್ಯೋತ್ಸ್ನಾಭಿರಾಹೃತಮಹದ್ ಹೃದಯಾಂಧಕಾರಮ್ ॥"

ಎಂಬ ಭಾಗವತ ಶ್ಲೋಕವು ತಾನಾಗಿ ಹೊರಹೊಮ್ಮಿತು !

ಆಗ ಅಲ್ಲಿ ಒಂದು ದಿವ್ಯ ಪ್ರಕಾಶವು ಗೋಚರಿಸಿತು ! ಅದ್ಭುತ ಪ್ರಕಾಶವನ್ನು ಕಂಡು ಸರ್ವರೂ ಅದೇನೆಂದು ಆಶ್ಚರ್ಯದಿಂದ ಪರಿಕಿಸಹತ್ತಿದರು. ಆದರೆ ಅವರಿಗೆ ಕೇವಲ ಪ್ರಕಾಶಪುಂಜವು ಮಾತ್ರ ಕಾಣುತ್ತಿತ್ತೇ ವಿನಃ ಮತ್ತೇನೂ ಗೋಚರಿಸಲಿಲ್ಲ

ಶ್ರೀವ್ಯಾಸರಾಜರ ಮುಂದೆ ಬೆಳಗುತ್ತಿದ್ದ ದಿವ್ಯಭವ್ಯಪ್ರಕಾಶದಲ್ಲಿ ಅಖಿಲಾಂಡ ಕೋಟಿ ಬ್ರಹ್ಮಾಂಡನಾಯಕನಾದ ಶ್ರೀಬಾಲಕೃಷ್ಣನ ಸುಂದರವಾದ ಅಪ್ರಾಕೃಪಾದ ಗಳು ಮಾತ್ರ ವ್ಯಾಸರಾಜಗುರುವರ ದೃಷ್ಟಿಗೆ ಗೋಚರಿಸಿದವು! ಕಮಲದಳಗಳಂತೆ ಕೆಂಪಾದ, ಜನಮೋಹಕವಾದ ಆ ಪಾದಗಳಸೌಂದರ್ಯ ಅವರ್ಣನೀಯ. ರತ್ನಖಚಿತ ವಾದ ಪಾಲ್ಗಡಗಗಳು, ಸುವರ್ಣ ಗೆಜ್ಜೆಯಿಂದಶೋಭಿಸುವ ನವರತ್ನಮಯಮಂಜೀರ, ಗೊಲಸುಗಳು, ಸುರುಚಿರ ಕನಕಮಯ ಕಾಲಂದಿಗೆಗಳು, ಕಾಲ್ಬೆರಳುಗಳಲ್ಲಿ ತಳತಳಿಸುವ ನವರತ್ನದುಂಗುರಗಳಿಂದ ಜಗತ್ತನ್ನೇ ಮೋಹಗೊಳಿಸುವ, ಬ್ರಹ್ಮರುದ್ರೇಂದ್ರಾದ್ಯ ಮರವೃಂದ, ಸಮಸ್ತ ಮುಮುಕ್ಷುಗಳಿಂದ ಸಂಸೇವ್ಯವಾದ, ಉಪಾಸ್ಯವಾದ ಪರ ಮಾತ್ಮನ ಎರಡುಪಾದಗಳನ್ನು ಕಂಡು ಶ್ರೀವ್ಯಾಸರಾಜರಿಗೆ ರೋಮಾಂಚನವಾಯಿತು. ಭಕ್ತಿಪಾರವಶ್ಯದಿಂದ ಕಂಠಗದ್ಗದವಾಯಿತು, ಕಣ್ಣುಗಳಿಂದ ಆನಂದಾಶ್ರುಮಿಡಿಯಿತು. ಭಾವನಾಪರವಶರಾದ ಗುರುಗಳು "ದೇವ, ಮತ್ಕುಲಸ್ವಾಮಿನ್, ಮಹಾಪ್ರಭು ! ಧನ್ಯನಾದೆ. ಈ ದಾಸನ ಮನವಿಗೆ ಒಲಿದು ತೋರಿದ ನಿನ್ನ ಪಾವನಪದಪದ್ಮಗಳಿಗೆ ಅನಂತನಮಸ್ಕಾರಗಳು ! ಇಕೋ, ಪ್ರಭು ನಿನ್ನ ಆದೇಶದಂತೆ ನಿನ್ನಪಾವನಪದಗಳ ಸ್ಪರ್ಶಮಾಡಿ ಕೃತಾರ್ಥನಾಗಿ ಅವತಾರವನ್ನು ಮುಗಿಸುತ್ತಿದ್ದೇನೆ. ದಾಸನಲ್ಲಿ ಕರುಣೆ ದೋರು ಕರುಣಾಕರ ! ಜಯ ಜಯ ಶ್ರೀಮೂಲಗೋಪಾಲಕೃಷ್ಣ" ಎನ್ನುತ್ತಾ

ಶ್ರೀವ್ಯಾಸರಾಜರು ಮುಂದೆಬಾಗಿ ಶ್ರೀಕೃಷ್ಣನಪಾದಗಳನ್ನು ತಮ್ಮ ಕರಗಳಲ್ಲಿಹಿಡಿದು ಪಾದಗಳ ಮೇಲೆ ಶಿರವಿರಿಸಿ ತಮ್ಮ ಅವತಾರ ಕಾರ್ಯವನ್ನು ಪರಿಸಮಾಪ್ತಿಗೊಳಿಸಿ ಶ್ರೀನಾರಾಯಣಧ್ಯಾನರತರಾದರು !

ಶ್ರೀವ್ಯಾಸರಾಜರು ಶ್ರೀಕೃಷ್ಣನ ಪಾದಸ್ಪರ್ಶದೊಡನೆ ಇಹಲೋಕವ್ಯಾಪಾರ ಮುಗಿಸಿ ಶ್ರೀಹರಿಪದ ಸೇರಿದ್ದನ್ನು ಮಹಾನುಭಾವರಾದ ಶ್ರೀಪುರಂದರದಾಸರು ಕಂಡು ಪ್ರ್ಯವರೆತರು. ಅಲ್ಲಿ ಸೇರಿದ್ದ ನೂರಾರುಜನ ಆಸ್ತಿಕರು, ಪಂಡಿತರು, ಧರ್ಮಾಭಿಮಾನಿಗಳು ಶ್ರೀಗಳವರು ಮುಂದೆಬಾಗಿ ತಮ್ಮ ಎರಡು ಕರಗಳನ್ನೂ ಮುಂದೆಚಾಚಿ ತಮ್ಮ ಕರಗಳ ಮೇಲೆ ಶಿರವಿರಿಸಿ ನಿಶ್ಚಲರಾದುದನ್ನು ಕಂಡು ಇದೇಕೆ ಗುರುಗಳಿಂತಾಚರಿಸುತ್ತಿರುವರೆಂದು ಕೌತುಕದಿಂದ ನೋಡಹತ್ತಿದರು. ಅವರಿಗೆ ಗುರುಗಳು ಶ್ರೀಕೃಷ್ಣನ ಪಾದಸ್ಪರ್ಶ ಮಾಡುತ್ತಿದ್ದಂತೆಯೇ ಯೋಗಶಕ್ತಿಯಿಂದ ಅವತಾರಪರಿಸಮಾಪ್ತಿ ಮಾಡಿದ್ದು ತಿಳಿಯಲೇ ಇಲ್ಲ !

ಇದ್ದಕ್ಕಿದಂತೆ ಮೇಲೆದ್ದು ಶ್ರೀಪುರಂದರದಾಸರು ಆಕಾಶದತ್ತ ನೋಡುತ್ತಾ "ಗುರುಸಾರ್ವಭೌಮ ! ತಂದೇ, ನಮ್ಮನ್ನು ಅನಾಥರನ್ನಾಗಿಮಾಡಿ ಶ್ರೀಹರಿಯ ಸಭೆಗೆ ಚಿತ್ತೈಸಿದಿರಾ ! ಗುರುದೇವ, ನಮಗಿನ್ನಾರುಗತಿ" ಎಂದು ಗುರುಗಳ ಸದ್ಗುಣಗಳನ್ನು ನೆನೆದು ಕಣ್ಣೀರು ಸುರಿಸುತ್ತಾ ಪ್ರಲಾಪಿಸಹತ್ತಿದರು. ದಾಸರಾಯರ ಉದ್ಗಾರ ಕೇಳಿದ ನೆರೆದಜನರಿಗೆ ವಜ್ರಾಘಾತವಾದಂತಾಯಿತು ! ಹ್ಞಾಂ, ಗುರುಸಾರ್ವಭೌಮರು ದೇವರಯಾತ್ರೆಮಾಡಿದರೇ ? ಆಹಾ, ಎಂಥಾ ಜ್ಞಾನಿಗಳು, ಯೋಗಶಕ್ತಿಯಿಂದ ದೇಹತ್ಯಾಗಮಾಡಿ ಮಹಾನುಭಾವರು ಮುಕುಂದನ ಪಾದಾರವಿಂದಸೇರಿದ್ದು ನಮಗೆ ತಿಳಿಯಲೇಇಲ್ಲವಲ್ಲಾ ಹಾಯ್ ಹಾಯ್, ಇಂಥ ಗುರುಗಳನ್ನು ನಾವು ಮತ್ತೆ ಕಾಣುವೆವೇ ? ನಾವೆಂಥ ನಿರ್ಭಾಗ್ಯರು" ಮುಂತಾಗಿ ದುಃಖಿಸಿದರು.

ಶ್ರೀಪುರಂದರದಾಸರು ಆಕಾಶದತ್ತಲೇನೋಡುತ್ತಿರುವಾಗ ಅವರು ಅಲ್ಲೊಂದು ಅದ್ಭುತವನ್ನೇ ಕಂಡರು ! ಅವರು ಕಂಡದೃಶ್ಯ ಅಸದೃಶವಾಗಿತ್ತು. ಆ ಪರಮ ಮಂಗಳಕರ ದೃಶ್ಯವನ್ನು ದಾಸರಾಯರು ಭಕ್ತಿಪರವಶರಾಗಿ ವರ್ಣಿಸಲಾರಂಭಿಸಿದರು-

ರಾಗ : ತಾಳ :

ಚಿತ್ತೈಸಿದ ವ್ಯಾಸರಾಯ ಚಿತ್ತಜನಯ್ಯನ ಸಭೆಗೆ ॥ ಪ ॥
ಮುಕ್ತಮುತ್ತೈದೆಯರೆಲ್ಲ ಎತ್ತೆ ರತ್ನಾರತಿಯ ॥ ಅ ॥
ಏರಿರತ್ನವರ್ತೇರ ಸೂರ್ಯಮಂಡಲಕೇರಿ ।
ಸಾರೆ ಸತ್ಯಲೋಕಕೆ ಸಂಭ್ರಮದಿ ॥
ಘೋರೆಂದು ವಾದ್ಯಕಹಳೆ ಸುರಿಸುವ ಹೂವಿನ ಮಳೆಯಿಂ ।
ದಾರತಿಯೆತ್ತಿದರ್‍ಮುಕ್ತಿ ಕನ್ಯೆಯರು ॥ ೧ ॥
ಪಾಡೆ ಗಂಧರ್ವರ್ ಕೊಂಡಾಡೆ ಮಾಗಧವೃಂದ

ಕೂಡಲು ಅಮರಕನ್ನೇರು ಮೇಳದಿ ॥
ನೋಡಲು ಸುರರು ಕೈಗೊಡಲು ಹರಿದಾಸರು ।
ಮಾಡುತ ವಿಷ್ಣುಮಂಗಳ ಗುಣಕಥನವ ॥ ೨ ॥
ವಿಳಂಬಿ ಸಂವತ್ಸರ ವಿಜಯನಗರದಲ್ಲಿ ।
ಫಾಲ್ಗುಣಚತುರ್ಥೀ ಸ್ಥಿರವಾರದಿ ॥
ಬೆಳಗೊಪ್ಪರ್ಯ್ನಾವದಿ ಕುಳಿತು ಪದ್ಮಾಸನದಿ ।
ನಳಿನಾಕ್ಷನಾರಾಯಣನೆಂದು ಕೈಮುಗಿದು ॥ ೩ ॥
ಧರೆಯೊಳು ಪರಿಪರಿ ಇಂತಿಷ್ಟ ಸಾಧನ ।
ಸಂಪೂರ್ಣವಾಯಿತು ಇವರಿಗೆಂದು ॥
ಇರಬಾರದಿವರೆಂದು ಯೋಗಮಾರ್ಗದಲಿಂದ ।
ಕರೆಯಲು ಬಂದರು ಕಮಲಾಕ್ಷನ ದೂತರು ॥ ೪ ॥
ಅರವಿಂದಾಸನಯ್ಯ
ಪುರಂದರವಿಟ್ಠಲನು ।
ಸಿರಿಸಹಿತ ಬಂದು
ಕರಪಿಡಿದೆತ್ತಿದ್ದು ಕಂಡೆ ॥ ೫ ॥

* * * * *

ಶ್ರೀವ್ಯಾಸರಾಜಗುರುಸಾರ್ವಭೌಮರು ನಾರಾಯಣಧ್ಯಾನಪರರಾದ ವಿಚಾರ ಶ್ರೀವಿಜಯೀಂದ್ರರು ಮತ್ತು ಶ್ರೀನಿವಾಸತೀರ್ಥರಿಗೆ ತಿಳಿದು ಅವರು ಅಂಥಾ ಮಹಾತ್ಮರಾದ ಗುರುಪಾದರನ್ನು ಕಳೆದುಕೊಂಡಿದ್ದಕ್ಕಾಗಿ ಅತ್ಯಂತದುಃಖಿತರಾಗಿ ವಿಧವಿಧದಿಂದ ಗುರುಗಳ ಗುಣಗಳನ್ನು ವರ್ಣಿಸಿ, ಅವರ ಶಿಷ್ಯಸ್ತೋಮವನ್ನು ನೆನೆದು ಕಣ್ಣೀರಿಟ್ಟರು. ಗುರುಪಾದರು ದೇವರಯಾತ್ರೆಮಾಡಿದ ವಿಚಾರ ರಾಜಧಾನಿಯಲ್ಲೆಲ್ಲಾ ಹರಡಿ ಸಹಸ್ರಾರುಜನ ಗುರುಗಳ ಚರಮದರ್ಶನಕ್ಕಾಗಿ ಧಾವಿಸಿಬರಹತ್ತಿದರು. ಅಚ್ಯುತದೇವರಾಯ, ಅಳಿಯ ರಾಮರಾಜರು ಅತ್ಯಂತ ದುಃಖಿತರಾಗಿ ಗುರುಗಳ ಕೊನೆಯದರ್ಶನಮಾಡಿ ಶ್ರದ್ಧಾಂಜಲಿಯನ್ನರ್ಪಿಸಿದರು. ಅಳಿಯ ರಾಮರಾಜರು ಶ್ರೀ ವ್ಯಾಸತೀರ್ಥರ ಮತ್ತು ಶ್ರೀ ವಿಜಯೀಂದ್ರರ ಸನ್ನಿಧಿಗೆ ಬಂದು ಶ್ರೀವ್ಯಾಸರಾಜರ ಬೃಂದಾವನ ಪ್ರತಿಷ್ಠೆಯು ಕನ್ನಡಸಾಮ್ರಾಜ್ಯದ ಸಮಸ್ತಬಿರುದು ಬಾವಲಿಗಳೊಡನೆ ಮೆರವಣಿಗೆಯಿಂದ ವೈಭವಯುತವಾಗಿನೆರವೇರಬೇಕೆಂಬ ಸಾಮ್ರಾಟರ ಆಶಯವನ್ನು ವಿಜ್ಞಾಪಿಸಿ ಅವರ ಮತ್ತು ಶ್ರೀನಿವಾಸತೀರ್ಥರ ಅಪ್ಪಣೆಪಡೆದು ಅದಕ್ಕೆ ವ್ಯವಸ್ಥೆ ಮಾಡಿದರು.

ಮೊದಲೇ ಶ್ರೀವ್ಯಾಸರಾಜಗುರುಗಳು ಪುರಂದರದಾಸರಲ್ಲಿ ತಿಳಿಸಿದ್ದಂತೆ ಶ್ರೀವ್ಯಾಸರಾಜರ ಬೃಂದಾವನವನ್ನು ಉಭಯ ಮಠಾಸಂಸ್ಥಾಪದ ಪೂರ್ವಾಚಾರ್ಯರುಗಳಾದ

ಶ್ರೀಪದ್ಮನಾಭ, ಶ್ರೀಜಯತೀರ್ಥ. ಶ್ರೀಕವೀಂದ್ರ, ಶ್ರೀವಾಗೀಶತೀರ್ಥರ ಬೃಂದಾವನ ಸನ್ನಿಧಿಯಿಂದ ಕಂಗೊಳಿಸುವ ತುಂಗಭದ್ರೆಯ ಪವಿತ್ರ ನಡುಗಡ್ಡೆಯಲ್ಲಿ ನೆರವೇರಿಸಲು ನಿಶ್ಚಯಿಸಲಾಯಿತು. ಕನ್ನಡ ಸಾಮ್ರಾಜ್ಯದ ಸಮಸ್ತ ಬಿರುದಾವಳಿಗಳು ವಾದ್ಯವೈಭವ ವೇದಘೋಷಗಳೊಡನೆ ಶ್ರೀವ್ಯಾಸರಾಜರ ಪ್ರಾಕೃತ ದೇಹವನ್ನು ಸುವರ್ಣಪಾಲಕಿಯ ಲ್ಲಿಟ್ಟು ಅಲಂಕರಿಸಿ ಬ್ರಾಹ್ಮಣರು ಪಲ್ಲಕ್ಕಿಯನ್ನು ಹೊತ್ತು ಮೆರವಣಿಗೆಯಿಂದ ತುಂಗೆಯ ನಡುಗಡ್ಡೆಗೆ ತೆಗೆದುಕೊಂಡು ಬಂದು ಶ್ರೀ ಪದ್ಮನಾಭತೀರ್ಥರ ಸನ್ನಿಧಿ ಯಲ್ಲಿ ಮಹಾ ಸಂಸ್ಥಾನ ಸಂಪ್ರದಾಯದಂತೆ ವೈದಿಕವಿಧಿಪೂರ್ವಕವಾಗಿ ನಿಕ್ಷೇಪ ಮಾಡಿ ಬೃಂದಾವನ ಪ್ರತಿಷ್ಠೆ ಮಾಡಲಾಯಿತು.

ಅಂದು ಶ್ರೀ ಶ್ರೀನಿವಾಸತೀರ್ಥರು ಮತ್ತು ಶ್ರೀ ವಿಜಯೀಂದ್ರತೀರ್ಥರು ಶ್ರೀವ್ಯಾಸರಾಜಗುರುಸಾರ್ವಭೌಮರ ಬೃಂದಾವನ ಸನ್ನಿಧಿಯ ಸಮೀಪದಲ್ಲೇ ದೇವರ ಪೂಜಾರಾಧನೆಗಳನ್ನು ನೆರವೇರಿಸಿ ಗುರುಪಾದರ ಮಹಾಸಮಾರಾಧನೆಯನ್ನು ವಿಜೃಂಭಣೆಯಿಂದ ನೆರವೇರಿಸಿದರು. ಶ್ರೀ ವ್ಯಾಸರಾಜರ ಬೃಂದಾವನವನ್ನು ಪೀತಾಂಬ ರಾದಿಗಳು, ಪುಷ್ಪಮಾಲಿಕೆಗಳು. ಗಂಧಾಕ್ಷತೆಗಳಿಂದ ಅಲಂಕರಿಸಿ ಶ್ರೀ ವಿಜಯೀಂದ್ರರ ಮಾರ್ಗದರ್ಶನದಲ್ಲಿ ಶ್ರೀನಿವಾಸತೀರ್ಥರು ಶ್ರೀಮೂಲಗೋಪಾಲಕೃಷ್ಣ ಪಟ್ಟಾಭಿ ರಾಮವ್ಯಾಸದೇವರನ್ನು ಸುವರ್ಣತಟ್ಟೆಯಲ್ಲಿ ಬೃಂದಾವನದ ಮೇಲಿಟ್ಟು ಕನಕಾಭಿಷೇಕ ಮಾಡಿ. ಹಸ್ತೋದಕವನ್ನು ಸಮರ್ಪಿಸಿ ಮಹಾಮಂಗಳಾರತಿಯನ್ನು ಮಾಡಿದರು.

ಆ ತರುವಾಯ ಗದ್ಗದಕಂಠದಿಂದ ಕಣ್ಣೀರು ಸುರಿಸುತ್ತಾ ಶ್ರೀ ಶ್ರೀನಿವಾಸ ತೀರ್ಥರು ಗುರುಗಳ ಮೇಲೆ ಚರಮಶ್ಲೋಕವನ್ನು ರಚಿಸಿ ಪಠಿಸಿ ಸಮರ್ಪಿಸಿದರು.

"ಅರ್ಥಿಕಲ್ಪಿತಕಲ್ಪೋಽಯಂ ಪ್ರತ್ಯರ್ಥಿಗಜಕೇಸರೀ ।
ವ್ಯಾಸತೀರ್ಥಗುರುರ್ಭೂಯಾದಸ್ಮದಿಷ್ಟಾರ್ಥಸಿದ್ಧಯೇ ॥"

ಅನಂತರ ಅಲಂಕಾರಬ್ರಾಹ್ಮಣರ ಪೂಜಾ, ತೀರ್ಥಪ್ರಸಾದವಿನಿಯೋಗ ಸಹ ಸ್ರಾರು ಜನರಿಗೆ ಮೃಷ್ಟಾನ್ನಭೋಜನ–ದಕ್ಷಿಣಾಪ್ರದಾನಗಳಾದವು. ಮೂರುದಿನ ವಿದ್ವತ್ಸಭೆಯನ್ನು ಜರುಗಿಸಿ ವಿದ್ವಾಂಸರು, ವಿದ್ಯಾರ್ಥಿಗಳು, ಕವಿ. ಗಾಯಕರು. ಹರಿ ದಾಸರುಗಳಿಗೆ ಸಂಭಾವನಾ ಪ್ರದಾನ ಮಾಡಲಾಯಿತು.

ಉತ್ತರಾರಾಧನೆಯ ದಿವಸ ಶ್ರೀ ವಿಜಯೀಂದ್ರರು ಶ್ರೀ ವ್ಯಾಸತೀರ್ಥರ ಬೃಂದಾವನದ ಮುಂದೆ ನಿಂತು ಪರಿಪರಿಯಿಂದ ಸ್ತುತಿಸಿ ಗುರುಗಳ ಮಹಿಮಾವರ್ಣನ ಪರವಾದ ಸ್ತೋತ್ರವನ್ನು ರಚಿಸಿ ಸಮರ್ಪಿಸಿ ನಮಸ್ಕರಿಸಿದರು.

## ಸ್ತೋತ್ರಗಳು

### ಶ್ರೀಮದ್ವಿಜಯೀಂದ್ರತೀರ್ಥ ಶ್ರೀಪಾದವಿರಚಿತಮ್

### ಶ್ರೀವ್ಯಾಸರಾಜಗುರುಸಾರ್ವಭೌಮ ಸ್ತೋತ್ರಮ್

ಶ್ರೀಗುರುಭ್ಯೋನಮಃ

ವಂದೇ ಮುಕುಂದಮರವಿಂದಭವಾದಿವಂದ್ಯಂ
ಇಂದಿಂದಿರಾಪ್ರತತಮೇಚಕಮಾಕಟಾಕ್ಷಮ್ ।
ಬಂದೀಕೃತಾಮರಮಮಂದಮತಿಂ ವಿಪದ್ಯಾ-
ದಾನಂದತೀರ್ಥಹೃದಯಾಂಬುಜಮತ್ತಭೃಂಗಂ ॥ ೧ ॥
ಶ್ರೀವ್ಯಾಸಯೋಗೀ ಹರಿಪಾದರಾಗೀ ಭಕ್ತಾತಿಪ್ರಾಗೀ ಹಿತದಕ್ಷಸದ್ಧೀಃ ।
ತ್ಯಾಗೀ ವಿರಾಗೀ ವಿಷಯೇಷು ಭೋಗೀ
ಮುಕ್ತೌ ಸದಾ ಗೀತಸುರೇಂದ್ರ ಸಂಗೀ ॥ ೨ ॥
ಲಕ್ಷ್ಮೀಶಪಾದಾಂಬುಜ ಮತ್ತಭೃಂಗಃ ಸದಾ ದಶಪ್ರಜ್ಞನಯ ಪ್ರಸಂಗಃ ।
ಅದ್ವೈತವಾದೇ ಕೃತಮೂಲಭಂಗಃ
ಮಹಾಯತೀಶೋ ವಿಷಯೇಷ್ವಸಂಗಃ ॥ ೩ ॥
ಸದಾ ಸದಾಯುಕ್ತ ಮಹಾನುಭಾವಃ ಭಕ್ತಾಘತೂಲೋಚ್ಚಯ ತೀವ್ರದಾಹಃ ।
ದೌರ್ಜನ್ಯ ವಿಧ್ವಂಸನ ದಕ್ಷರಾವಃ
ಶಿಷ್ಯಾರ್ಥ್ಯ ಯೋ ಯಚ್ಛತಿ ದಿವ್ಯಗಾವಃ ॥ ೪ ॥
ಅದ್ವೈತ ದಾವಾನಲ ಕಾಲಮೇಘಃ ರಮಾರಮಸ್ನೇಹ ವಿದಾರಿತಾಘಃ ।
ವಾಗ್ವೈಖರೀ ನಿರ್ಜಿತ ಸಜ್ಜನೌಘಃ
ಮಾಯಾಮತವ್ರಾತಹಿಮೇ ನಿದಾಘಃ ॥ ೫ ॥
ಮಧ್ವಸಿದ್ಧಾಂತ ದುಗ್ಧಾಬ್ಧಿ ವೃದ್ಧಿ ಪೂರ್ಣಕಲಾಧರಃ ।
ವ್ಯಾಸರಾಜಯತೀಂದ್ರೋ ಮೇ ಭೂಯಾದೀಪ್ಸಿತ ಸಿದ್ಧಯೇ ॥ ೬ ॥
ಯನ್ನಾಮ ಗ್ರಹಣಾದೇವ ಪಾಪರಾಶಿಃ ಪಲಾಯತೇ ।
ಸೋऽಯಂ ಶ್ರೀವ್ಯಾಸಯೋಗೀಂದ್ರೋ ನಿಹಂತು ದುರಿತಾನಿ ಸಃ ॥ ೭ ॥
ಯನ್ಮೃತ್ತಿಕಾದರ್ಶನಮಾತ್ರಭೀತಃ ಕ್ಷಿತಿಪಿಶಾಚಸ್ತದನುವ್ರತೇಭ್ಯಃ ।
ದತ್ವಾ ಧನಂ ವಾಂಛಿತ ಮಾಪ್ಯ ತಸ್ಮಾ
ತ್ತೈರ್ವಾರ್ಜಿತೋऽಯಾದಚಿರೇಣ ಮುಕ್ತಿಮ್ ॥ ೮ ॥
ಯತ್ಕಾಶಿಕಾನಾಸಿಕಾಕ್ತ ಜಲಾನ್ನಿಃಶಂಕಿತೇ ನರೇ ।
ವ್ಯಾಘ್ರೋ ಮಹಾನಪಿ ಸ್ಪ್ರಷ್ಟುಂ ನಾಶಕ್ತಸ್ತ್ವಾಮಿಹಾಶ್ರಯೇ ॥ ೯ ॥
ದ್ವಾತ್ರಿಂಶತ್ಸಪ್ತಶತಕ ಮೂರ್ತೀರ್ಹನುಮತಃ ಪ್ರಭೋಃ ।
ಪ್ರತಿಷ್ಠಾತಾ ಸ್ಮೃತಿಖ್ಯಾತಸ್ತಂ ಭಜೇ ವ್ಯಾಸಯೋಗಿನಮ್ ॥ ೧೦ ॥

ಸೀಮಾನಂ ತತ್ರತತ್ರೈತ್ಯ ಕ್ಷೇತ್ರೇಷು ಚ ಮಹಾಮತಿಃ ।
ವ್ಯವಸ್ಥಾಪ್ಯಾತ್ರ ಮರ್ಯಾದಾಂ ಲಬ್ಧವಾಂಸ್ತಮಿಹಾಶ್ರಯೇ ॥ ೧೧ ॥
ಮಧ್ವದೇಶಿಕ ಸಿದ್ಧಾಂತ ಪ್ರವರ್ತಕ ಶಿಖಾಮಣಿಃ ।
ಸೋಽಯಂ ಶ್ರೀವ್ಯಾಸರಾಜೇಂದ್ರೋ ಭೂಯಾದೀಪ್ಸಿತಸಿದ್ಧಯೇ ॥ ೧೨ ॥
ಭೂತಪ್ರೇತಪಿಶಾಚಾದ್ಯಾಃ ಯಸ್ಯ ಸ್ಮರಣಮಾತ್ರತಃ ।
ಪಲಾಯಂತೇ ಶ್ರೀನೃಸಿಂಹಸ್ಥಾನಂ ತಮಹಮಾಶ್ರಯೇ ॥ ೧೩ ॥
ವಾತಜ್ವರಾದಿರೋಗಾಶ್ಚ ಭಕ್ತ್ಯಾ ಯಮುಪಸೇವಿನಃ ।
ದೃಷ್ಟಮಾತ್ರಸ್ಯ ನಶ್ಯಂತಿ ಪಿಶಾಚಾಶ್ಚ ತಮಾಶ್ರಯೇ ॥ ೧೪ ॥

ತಾರಪೂರ್ಣಂ ಬಿಂದುಯುಕ್ತ ಪ್ರಥಮಾಕ್ಷರ ಪೂರ್ವಕಮ್ ।
ಚತುರ್ಥ್ಯಂತಂ ಚ ತನ್ನಾಮ ನಮಃ ಶಬ್ದಾಂತಭೂಷಿತಮ್ ॥ ೧೫ ॥
ಪಾತಯಂತಂ ಮಧ್ವನಯಂ ಮೇಘಗಂಭೀರಯಾ ಗಿರಾ ।
ಧ್ಯಾಯನ್ನಾವರ್ತತೇ ಯಸ್ತು ಭಕ್ತ್ಯಾ ಮೇಧಾಂ ಸವಿಂದತೇ ॥ ೧೬ ॥
ರತ್ನಸಿಂಹಾಸನಾರೂಢಂ ಚಾಮರೈರಭಿವೀಜಿತಮ್ ।
ಧ್ಯಾಯನ್ನಾವರ್ತತೇ ಯಸ್ತು ಮಹತೀಂ ಶ್ರಿಯಮಾಪ್ನುಯಾತ್ ॥ ೧೭ ॥
ಪ್ರಹ್ಲಾದಸ್ಯಾವತಾರೋಽಸಾವಹೀಂದ್ರಸ್ಯಾನುಪ್ರವೇಶವಾನ್ ।
ತೇನ ತತ್ಸೇವಿನಾಂ ನೄಣಾಂ ಸರ್ವಮೇತದ್ಭವೇದ್ಧ್ರುವಮ್ ॥ ೧೮ ॥
ನಮೋ ವ್ಯಾಸಮುನೀಂದ್ರಾಯ ಭಕ್ತಾಭೀಷ್ಟಪ್ರದಾಯಿನೇ ।
ನಮತಾಂ ಕಲ್ಪತರವೇ ಭಜತಾಂ ಕಾಮಧೇನವೇ ॥ ೧೯ ॥
ವ್ಯಾಸರಾಜಗುರೋ ಮಹ್ಯಂ ತ್ವತ್ಪಾದಾಂಬುಜ ಸೇವನಾತ್ ।
ದುರಿತಾನಿ ವಿನಶ್ಯಂತು ಯಚ್ಛ ಶೀಘ್ರಂ ಮನೋರಥಾನ್ ॥ ೨೦ ॥
ಯೋ ವ್ಯಾಸತ್ರಯಸಂಜ್ಞಕಾನ್ ದೃಢತರಾನ್ ಮಧ್ವಾರ್ಯಶಾಸ್ತ್ರಾರ್ಥಕಾನ್
ರಕ್ಷದ್ವಜ್ರಶಿಲಾಕೃತೀನ್ ಬಹುಮತಾನ್ ಕೃತ್ವಾ ಪರೈರ್ದುಸ್ತರಾನ್ ।
ಪ್ರಾಯಚ್ಛನ್ನಿಜಪಾದಪದ್ಮಸರಸೀಜಾಸಕ್ತನೄಣಾಂ ಮುದಾ
ಸೋಽಯಂ ವ್ಯಾಸಮುನೀಶ್ವರೋ ಭವತು ಮೇ ತಾಪತ್ರಯಶಾಂತಯೇ
॥ ೨೦ ॥

ಮಧ್ವಭಕ್ತೋ ವ್ಯಾಸಶಿಷ್ಯ ಪೂರ್ಣಪ್ರಜ್ಞಮತಾನುಗಃ
ವ್ಯಾಸರಾಜಮುನಿ ಶ್ರೇಷ್ಠಃ ಪಾತು ನಃ ಕೃಪಯಾ ಗುರುಃ ॥ ೨೨ ॥
ವ್ಯಾಸರಾಜೋ ವ್ಯಾಸರಾಜ ಇತಿ ಭಕ್ತ್ಯಾ ಸದಾಜಪನ್ ।
ಮುಚ್ಯತೇ ಸರ್ವದುಃಖೇಭ್ಯಸ್ತದಂತರ್ಯಾಮಿಣೋ ಬಲಾತ್ ॥ ೨೩ ॥
ಸ್ತುವನ್ನನೇನ ಮಂತ್ರೇಣ ವ್ಯಾಸರಾಜಾಯ ಧೀಮತೇ ।
ಅಭಿಷೇಕಾರ್ಚನಾದೀನ್ಯಃ ಕುರುತೇ ಸಹಿ ಮುಕ್ತಿಭಾಕ್ ॥ ೨೪ ॥

ಗುರುಭಕ್ತ್ಯಾ ಭವೇದ್ವಿಷ್ಣುಭಕ್ತಿರವ್ಯಭಿಚಾರಿಣೀ ।
ತಯಾ ಸರ್ವಂ ಲಭೇದ್ಧೀಮಾಂಸ್ತಸ್ಮಾದೇತತ್ಸದಾ ಪಠೇತ್ ॥ ೨೫ ॥
ಸರ್ವಶಾಸ್ತ್ರ ಪ್ರವೀಣೇನ ವಿಜಯೀಂದ್ರಾಖ್ಯಭಿಕ್ಷುಣಾ ।
ಕೃತಂ ಸ್ತೋತ್ರಮಿದಂ ಭಕ್ತ್ಯಾ ಸರ್ವೇಷ್ಟಫಲದಂ ಶುಭಮ್ ॥

ಇತಿ ಶ್ರೀಮಚ್ಛಡ್ದರ್ಶನಾಚಾರ್ಯ ನಿಖಿಲವಿದ್ಯಾಚಕ್ರವರ್ತಿ ಶ್ರೀಸರ್ವಜ್ಞ ವಿದ್ಯಾಸಿಂಹಾಸನಾಧೀಶ್ವರಶ್ರೀಮದ್ವಿಜಯೀಂದ್ರತೀರ್ಥಶ್ರೀಪಾದವಿರಂಚಿತಂ ಶ್ರೀಮದ್ವ್ಯಾಸರಾಜಗುರುಸಾರ್ವಭೌಮ ಸ್ತೋತ್ರಂ ಸಂಪೂರ್ಣಂ.

ಶ್ರೀಮೂಲರಘುಪತಿವೇದವ್ಯಾಸದೇವಃ ಪ್ರೀಯತಾಮ್

## ✵ ಶ್ರೀ ವ್ಯಾಸರಾಜಗುರುಸಾರ್ವಭೌಮ ಚರಿತಮ್ ✵

(ಶ್ರೀ ಮದ್ವಿದ್ಯಾರತ್ನಾಕರತೀರ್ಥ ಶ್ರೀಪಾದ ವಿರಚಿತಮ್)

ಲಕ್ಷ್ಮೀಂ ವಕ್ಷಸಿ ಬಿಭ್ರತಂ ನರಹರಿಂ ದೇವಂ ಪ್ರಣಮ್ಯಾಮಿತ—
ಪ್ರಜ್ಞಾದೀನ್ ಗುರುಪುಂಗವಾನಪಿ ತಥಾ ಶ್ರೀವ್ಯಾಸಯೋಗೀಶಿತುಃ ।
ಆಸಂಭೂತಿಕೃತಾನಿ ಸಂಸ್ಕೃತಪತೋsಭೀಷ್ಟಪ್ರದಾನೀಶಿತುಃ
ವಿಷ್ಣೋಃ ಪ್ರೀತಿಕರೇ ವದಾಮಿ ಸುಜನಾಸ್ತುಷ್ಯಂತು ಬಾಲೋಕ್ತಿಭಿಃ ॥ ೧ ॥
ರಾಮಾಚಾರ್ಯಸುಧೀಮಣೇರ್ದಯಿತಯಾ ಗರ್ಭೇಧೃತಃ ಶ್ರೀಮತೋ
ಬ್ರಹ್ಮಣ್ಯಸ್ಯ ಯತೀಶಿತುಃ ಕರುಣಯಾ ಸಂಪತ್ಸರೇಷ್ವಾದಿಮೇ ।
ವೈಶಾಖಾದಿಮ ಪಕ್ಷಕೇ ದಿನಮಣೇರ್ವಾರೇ ದಿನೇ ಸಪ್ತಮೇ
ಪ್ರಹ್ಲಾದೋsವತತಾರ ಭೂಮಿವಲಯೇ ನಾಗಾಧಿಪಸ್ಯಾಂಶಭೃತ್ ॥ ೨ ॥
ಅಬ್ದೇ ಪಂಚಮತಾಯುತೇ ವಟುರಭೂತ್ತುರ್ಯಾಶ್ರಮಂ ಶ್ರೀಮುಖೇ
ಜಗ್ರಾಹಾಥ ಯತೀಶಿತುರ್ವಚನತೋ ಬ್ರಹ್ಮಣ್ಯನಾಮ್ನೋ ಗುರೋಃ ।
ವಿದ್ಯಾಪ್ರಾಪ್ತಿಕೃತೇ ಯತೀಶಮಗಮಚ್ಛ್ರೀಪಾದರಾಜಾಭಿಧಮ್
ಅಬ್ದಾನ್ ದ್ವಾದಶ ತತ್ರ ವಾಸಮಕರೋತ್ ಶೃಣ್ವನ್
ಮಹೇಕ್ಷಾಗಮಮ್ ॥ ೩ ॥
ಅಬ್ದೇ ಸರ್ವಜಿದಾಹ್ವಯೇ ಯತಿವರೋ ವೈಶಾಖಮಾಸಾಸಿತ—
ದ್ವಾದಶ್ಯಾಮಗದ್ಯದೂದ್ವಹ ಪದಾಬ್ಜಾರ್ಚಾಧಿಕಾರಂ ಮುನೇಃ ।
ಬ್ರಹ್ಮಣ್ಯಾಭಿಧಯಾ ಯುತಾದಥ ತತಾನಾಯಂ ಪರೈರ್ದುಷ್ಕರಾನ್
ಗ್ರಂಥಾನ್ ಸಾಮ್ಪ್ರತ ತರ್ಕತಾಂಡವ ಮುಖಾನಷ್ಟೌ ಹರೇಃ ಪ್ರೀತಯೇ ॥ ೪ ॥
ಮೂರ್ತೀಸ್ಸಪ್ತಶತಂ ಪ್ಲವಂಗಮಪತೇರ್ದ್ವಾತ್ರಿಂಶದಷ್ಟಂಜನಾ—
ಸೂನೋರ್ನಿರ್ಮಮ ಈಶತೋಷಣಕೃತೇ ರೌದ್ರಾಹ್ವಯಾಬ್ದೇಶಕೇ ।

ಶಾಲೀವಾಹನನಾಮ್ನಿ ಯುಗ್ಮಯುಗಳಂ ಚತ್ವಾರಿಚೈಕಂ ಲಿಖನ್
ಯಾಂ ಸಂಖ್ಯಾಂ ಮನಸಾ ದಧಾತಿ ತದಿಯಂ ಸಂಖ್ಯಾಯುತಃ
ಪೂರ್ತಯೇ || ೫ ||
ಅಬ್ದೇ ತಾದೃಶಿ ಯಾವನಾಧಿಪತಿತೋ ಲೇಭೇ ಮಹಾವೈಭವಂ
ಭೇರ್ಯ್ವಾದ್ಯನನ್ಯಲಭ್ಯಮುರುಜಾ ತುಷ್ಟಾತ್ಕೃಪಾತ್ಮನಃ ।
ಅಬ್ದೇ ವಿಕ್ರಮ ನಾಮಕೇಽಂತಿಮದಿನೇ ಮಾಘಸ್ಯ ಕೃಷ್ಣಾಭಿದಂ
ಶ್ರೀಮಂತಂ ಗಜಗಹ್ವರಾಪನಿಭೃತಂ ಸೋಽಪ್ಯಾತ್ತಪೂತ್ತಾಪದಃ || ೬ ||
ತತ್ಸಿಂಹಾಸನಮಾರುಹನ್ ಪ್ರಚುರಭೂದಾನಾದಿ ಸಂಸಾಧಯನ್
ತದ್ರಾಜ್ಯಂ ಪ್ರಸರಾರ್ಣವಾತ್ ಕ್ಷಿತಿಭೃತೇ ಕೃಷ್ಣಾಭಿಧಾನಾಯ ಸಃ ।
ತತ್ಸಂವತ್ಸರಗತಾಂತ್ಯ ಮಾಸಿಧವಳೇ ಪಕ್ಷೇ ಪರೇ ವಾಸರೇ-
ಪ್ಯಂತೇ ವ್ಯಾಸಸಮುದ್ರನಾಮಕಮದಾದ್ಗ್ರಾಮಂ ಸಚಾಸ್ತ್ರೈ ನೃಪಃ || ೭ ||
ನಿರ್ಮಾಣಯಾತ್ರ ತಟಾಕಮೇಷ ಯತಿರಾಟ್ ಪ್ರತ್ಯೂಹಸಂಘಃ ಸ್ವತಾ
ಪೂರ್ವಂ ಕಂಚನ ಶಾಲಿವಾಹನ ಬೃಹಚ್ಛೃಂಗಾಗ್ರತೋಽಭೀಭಿದತ್ ।
ಏವಂ ಸ್ವಂ ಮಹಿಮಾನಮದ್ಭುತ ಮಿಳಾದೇವೇಷು ಸಂವರ್ಧಯನ್
ಅಧ್ಯಾಸ್ತಾವನಿಪಾಳಿವಂದ್ಯ ಶರದಂ ತ್ವಷ್ಟಾದಶಾಹಂ ಸುಧೀಃ || ೮ ||
ಶ್ರೀಮದ್ವ್ಯಾಸಯತೇಃ ವಿಚಿತ್ರ ಚರಿತಂ ವಿದ್ಯಾದಿರತ್ನಾಕರ-
ಪ್ರೋಕ್ತಂ ತತ್ಪದಪದ್ಮಸದ್ಮಹೃದಯೋ ಯಃ ಸಂಪಠೇಚ್ಛುದ್ಧಧೀಃ ।
ತಸ್ಮಿನ್ನಾಮಗಿರೀಶ್ವರೋ ನರಹರಿಃ ಪ್ರೀಯೇತ ತದ್ಭಕ್ತಿತಃ
ಆಪ್ನೋತ್ಯೇಷ ಯತೀಶ್ವರೋಽಪಿ ಸುಧಿಯಂ ದದ್ಯಾದ್ದಯಾವಾರಿಧಿಃ || ೯ ||

ಇತಿ ಶ್ರೀಮದ್ವಿದ್ಯಾರತ್ನಾಕರತೀರ್ಥ ವಿರಚಿತಂ ಶ್ರೀಮದ್ವ್ಯಾಸರಾಜ ಗುರು ಸಾರ್ವಭೌಮ ಚರಿತಂ ಸಂಪೂರ್ಣಮ್

|| ಶ್ರೀಮೂಲಗೋಪಾಲಕೃಷ್ಣಾರ್ಪಣಮಸ್ತು ||

ಇಂತು ಪರಮ ಪವಿತ್ರ ಷಾಷ್ಟಿಕವಂಶದಲ್ಲಿ ಅವತರಿಸಿದ ಶ್ರೀಭಾಗವತಾಗ್ರಣಿಗಳಾದ ಶ್ರೀಪ್ರಹ್ಲಾದ-ಬಾಹ್ಲೀಕ ರಾಜಾವತಾರಿಗಳಾದ ಶ್ರೀವ್ಯಾಸರಾಜಗುರುಸಾರ್ವಭೌಮರು, ಶ್ರೀಮದಾಚಾರ್ಯರ ಮಹಾಸಂಸ್ಥಾನವಾದ ಶ್ರೀರಾಜೇಂದ್ರತೀರ್ಥರ ಪೂರ್ವಾದಿಮಠದ ವಿದ್ಯಾಸಿಂಹಾಸನದಲ್ಲಿ ಮಂಡಿಸಿ ಸುಮಾರು ೬5 ವರ್ಷಗಳಕಾಲ ಅಖಂಡ ಭರತಖಂಡವನ್ನು ಎರಡುಬಾರಿ ಸಂಚರಿಸಿ ಪ್ರಕಾಂಡಪಂಡಿತರುಗಳಾದ ನೂರಾರುಜನ ಪರವಾದಿಗಳನ್ನು ಜಯಿಸಿ ದ್ವೈತಸಿದ್ಧಾಂತ ಪ್ರತಿಷ್ಠಾಪನಪೂರ್ವಕ ಶ್ರೀಹರಿಸರ್ವೋತ್ತಮತ್ವದ ವಿಜಯದುಂದುಭಿಯನ್ನು ಮೊಳಗಿಸಿ, ಚಂದ್ರಿಕಾ, ನ್ಯಾಯಾಮೃತ, ತರ್ಕತಾಂಡವಾದಿ ಅಸಾಧಾರಣಗ್ರಂಥರಚನೆಯಿಂದ ಮಾಧ್ವಮತವನ್ನು ರಕ್ಷಿಸಿ ನಿಷ್ಕಂಟಕಗೊಳಿಸಿ, ಸಹಸ್ರಾರುಜನ ವಿದ್ವಜ್ಜನರಿಗೆ ಭೂಸುರರಿಗೆ ಗ್ರಾಮಭೂಮಿ

ಅಗ್ರಹಾರಗಳನ್ನು ದಾನಮಾಡಿ ಪಂಡಿತಪೋಷಣೆಮಾಡಿ, ಲಕ್ಷಾಂತರ ಜನರಿಗೆ ಅನ್ನದಾನಮಾಡಿ. ಕರ್ನಾಟಕ ಸಾಮ್ರಾಜ್ಯದ ಆರುಜನ ಚಕ್ರವರ್ತಿಗಳಿಗೆ ಗುರುಗಳಾಗಿದ್ದು ಸಾಮ್ರಾಜ್ಯದ ಸರ್ವತೋಮುಖ ಅಭಿವೃದ್ಧಿ ಮಾಡಿ ಸಂಸ್ಕೃತ ವಿಶ್ವವಿದ್ಯಾನಿಲಯವನ್ನು ಸ್ಥಾಪಿಸಿ ಹತ್ತಾರು ಸಹಸ್ರಜನರು ಸಕಲವಿದ್ಯೆಗಳನ್ನು ಅಧ್ಯಯನಮಾಡಿ, ಪಂಡಿತರಾಗಲು ಮುಖ್ಯಕಾರಣವಾಗಿ, 732 ಶ್ರೀಪ್ರಾಣದೇವರನ್ನು ನಾಡಿನಾದ್ಯಂತ ಸ್ಥಾಪಿಸಿ, ಶ್ರೀಮುರಳೀಲೋಲನಾದ ಶ್ರೀಕೃಷ್ಣನನ್ನು ಸಾಕ್ಷಾತ್ಕರಿಸಿಕೊಂಡು ಸರ್ವಮಾನ್ಯರಾಗಿ ಜನಸಾಮಾನ್ಯರಿಗೆ, ರೈತಾಪಿಜನರಿಗೆ ಅನುಕೂಲವಾಗಲು ನೂರಾರು ಕೆರೆ-ಕುಂಟೆಗಳನ್ನು ನಿರ್ಮಿಸಿ, ಸಕಲಜನರ ಹಿತಚಿಂತನೆಮಾಡುತ್ತಾ, ಶ್ರೀವಿಜಯೀಂದ್ರ ವಾದಿರಾಜ, ಶ್ರೀಗೋವಿಂದಒಡೆಯರ್, ಶ್ರೀನಿವಾಸತೀರ್ಥ, ಶ್ರೀನಾರಾಯಣಯತಿ ಮುಂತಾದ ಜ್ಞಾನಿನಾಯಕರು, ಶ್ರೀಪುರಂದರದಾಸರು. ಶ್ರೀಕನಕದಾಸರುಗಳಂಥ ಅಪರೋಕ್ಷ ಜ್ಞಾನಿಗಳನ್ನು ನಾಡಿಗೆ ನೀಡಿ, ಹರಿದಾಸ ವಾಙ್ಮಯ, ಕನ್ನಡಭಾಷೆಗಳ ಪ್ರಸಾರಮಾಡಿ ವಿಜಯನಗರದ ಕನ್ನಡಸಾಮ್ರಾಜ್ಯದ ಸುವರ್ಣಯುಗವನ್ನು ನಿರ್ಮಿಸಿ ದೇಶವಿದೇಶಗಳಲ್ಲಿ ಅದು ವಿಖ್ಯಾತವಾಗುವಂತೆ ಮಾಡಿ, ಸಮಸ್ತ ರಾಜಾಧಿರಾಜರಿಂದ ಸಂಸೇವಿತರಾಗಿ ನೂರಾರು ಮಹಿಮೆಗಳನ್ನು ತೋರಿ ಅಖಂಡ ಕೀರ್ತಿಗಳಿಸಿ ಭಗವಂತನ ಆದೇಶದಂತೆ ತಮ್ಮ ಅವತಾರ ಕಾರ್ಯವನ್ನು ಪರಿಸಮಾಪ್ತಿಗೊಳಿಸಿದ ಶ್ರೀವ್ಯಾಸರಾಜ ಗುರುಸಾರ್ವಭೌಮರ ಮಹಿಮೆ ಅಗಮ್ಯ, ಅದಮ್ಯ, ಅಗಾಧ, ಅಪಾರ, ಅವರ್ಣನೀಯ. ಇಂಥ ಮಹಾನುಭಾವರನ್ನು ಗುರುಗಳಾಗಿ ಪಡೆದ ಮಾಧ್ವಸಮಾಜದ ಅಖಂಡಭಾರತದ ಜನತೆಯ ಪುಣ್ಯಕ್ಕೆ ಎಣೆಯಿಲ್ಲ. ಶ್ರೀವ್ಯಾಸರಾಜಗುರುಚರಣರು ಸಕಲ ಸಜ್ಜನರಿಗೂ ಜ್ಞಾನ-ಭಕ್ತಿ-ಸನ್ಮಂಗಳಗಳನ್ನು ಕರುಣಿಸಿ ಕಾಪಾಡಲಿ ಎಂದು ಪ್ರಾರ್ಥಿಸುತ್ತಾ ವಿರಮಿಸುತ್ತೇವೆ.

॥ ಶ್ರೀಮದ್ವ್ಯಾಸಯತೀಂದ್ರ ಸದ್ಗುರುವರಃ ಕುರ್ಯಾದ್ಧ್ರುವಂ ಮಂಗಳಮ್ ॥

ಶ್ರೀ ಕೃಷ್ಣಾರ್ಪಣಮಸ್ತು

ಇಂತು ಕಲಿಯುಗ ಕಲ್ಪತರುವಿನಲ್ಲಿ ನಾಲ್ಕನೆಯ ಉಲ್ಲಾಸವಾದ
ಶ್ರೀವ್ಯಾಸರಾಜಗುರುಸಾರ್ವಭೌಮ ಚರಿತೆಯು ಮುಗಿದುದು.





"ಶ್ರೀ ರಾಘವೇಂದ್ರ ಗುರುವಂಶಭೂಷಣ-ವಿದ್ಯಾಧಿರಾಜ" ಬಿರುದಾಂಕಿತರಾದ ಶ್ರೀ ರಾಜಾ ಎಸ್. ಗುರುರಾಜಾಚಾರ್ಯರು ಶ್ರೀ ರಾಘವೇಂದ್ರ ಸ್ವಾಮಿಗಳ ಪೂರ್ವಾಶ್ರಮ ವಂಶದಲ್ಲಿ ಜನಿಸಿದ ಭಾಗ್ಯಶಾಲಿಗಳು. ಶ್ರೀ ಮಧ್ವಾಚಾರ್ಯರ ಮಹಾಸಂಸ್ಥಾನಾಧೀಶ್ವರರಾಗಿದ್ದ ಶ್ರೀ ಸುಯಮೀಂದ್ರತೀರ್ಥರ ಪೂರ್ವಾಶ್ರಮ ದ್ವಿತೀಯಪುತ್ರರು. ಆಚಾರ್ಯರು ನ್ಯಾಯ-ವೇದಾಂತ-ಸಾಹಿತ್ಯಾದಿ ಶಾಸ್ತ್ರ ಪರಿಣಿತರು, ಶ್ರೇಷ್ಠ ಕವಿಗಳು, ಗ್ರಂಥಕಾರರು ಮತ್ತು ವಾಗ್ಗೇಯಕಾರರು. ಸಂಸ್ಕೃತ ಕನ್ನಡ ಭಾಷೆಗಳಲ್ಲಿ ಇವರು 30-35 ಗ್ರಂಥಗಳನ್ನು ರಚಿಸಿದ್ದು ಅವು ಸರ್ವರ ಮನ್ನಣೆಗೆ ಪಾತ್ರವಾಗಿವೆ. 1945ರಲ್ಲಿ ಇವರು "ಶ್ರೀ ಪರಿಮಳ ಸಂಶೋಧನ ಮತ್ತು ಪ್ರಕಾಶನ ಮಂದಿರ" ಎಂಬ ವಿದ್ಯಾ ಸಂಸ್ಥೆಯನ್ನು ಪ್ರಾರಂಭಿಸಿ ಪ್ರಾಚೀನ ಶಾಸ್ತ್ರೀಯ ಗ್ರಂಥಗಳ ಸಂಶೋಧನ, ಸಂಪಾದನ, ಮುದ್ರಣ ಕಾರ್ಯಾಸಕ್ತರಾಗಿ ಈವರೆಗೆ 85-90 ಸಂಸ್ಕೃತ, ಕನ್ನಡ ಗ್ರಂಥಗಳನ್ನು ಪ್ರಕಟಿಸಿದ್ದಾರೆ. 34 ವರ್ಷಗಳಿಂದ "ಪರಿಮಳ" ಎಂಬ ಸಾಂಸ್ಕೃತಿಕ ಕನ್ನಡ ಮಾಸ ಪತ್ರಿಕೆಯನ್ನು ಪ್ರಕಟಿಸುತ್ತಾ ಭಾರತೀಯ ತತ್ವ, ಧರ್ಮ, ಸಂಸ್ಕೃತಿ, ಶ್ರೀ ಗುರುರಾಜರ ಮಹಿಮೆ, ಸಂಸ್ಕೃತ, ಕನ್ನಡಭಾಷಾ ಪ್ರಸಾರ ಮಾಡುತ್ತಿದ್ದಾರೆ.

ಆಚಾರ್ಯರ ಪಾಂಡಿತ್ಯಾದಿಗಳಿಂದ ಸಂತುಷ್ಟರಾದ ಅನೇಕ ಮಠ, ವಿದ್ಯಾ, ಧಾರ್ಮಿಕ, ಸಾಂಸ್ಕೃತಿಕ ಸಂಸ್ಥೆಗಳು ಇವರಿಗೆ ಅನೇಕ ವಿದ್ವತ್ಪ್ರಶಸ್ತಿಗಳನ್ನಿತ್ತು ಗೌರವಿಸಿವೆ. ಕೇಂದ್ರ, ಕರ್ನಾಟಕ ರಾಜ್ಯ ಸರ್ಕಾರಗಳು ಶ್ರೀ ಗುರುರಾಜಾಚಾರ್ಯರನ್ನು ಶ್ರೇಷ್ಠಪಂಡಿತರೆಂದು ಮಾನಿಸಿವೆ.

ಇವರು "ಕಮಲೇಶ"ಎಂಬ ಅಂಕಿತದಿಂದ ರಚಿಸಿರುವ ನೂರಾರು ಸಂಸ್ಕೃತ-ಕನ್ನಡ ಕೀರ್ತನೆಗಳು ಜನಪ್ರಿಯವಾಗಿದ್ದು ದಕ್ಷಿಣ ಭಾರತದ ಖ್ಯಾತ ಸಂಗೀತ ವಿದ್ವಾಂಸರು, ವಿದುಷಿಯರು ಹಾಡಿ ಸಹಸ್ರಾರು ಜನರನ್ನು ಆನಂದಗೊಳಿಸುತ್ತಿದ್ದಾರೆ. ಇವರ ಅನೇಕ ಕೃತಿಗಳು ಧ್ವನಿಮುದ್ರಿತತಟ್ಟೆಗಳು ಗಾನಸುರಳಿಗಳಾಗಿ ಸಹಸ್ರಾರು ಜನರನ್ನು ಸಂತೋಷಗೊಳಿಸುತ್ತಿವೆ.—

ಶ್ರೀ ರಾಜಾ ಎಸ್. ಗುರುರಾಜಾಚಾರ್ಯರ ಪಾಂಡಿತ್ಯ, ಗ್ರಂಥರಚನಾ ಚಾತುರ್ಯಕ್ಕೆ ಈ "ಅಜಯ್ಯ-ವಿಜಯೀಂದ್ರರು" ಮತ್ತು "ಕಲಿಯುಗ-ಕಲ್ಪತರು" ಗ್ರಂಥಗಳು ಜೀವಂತ ಸಾಕ್ಷಿಗಳಾಗಿವೆ.